ಸಂಪುಟ-೧

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯ ವಿರಚಿತ:

# ಶ್ರೀಮನ್ಮಹಾಭಾರತ

## ತಾತ್ಪರ್ಯ ನಿರ್ಣಯ:



ಪ್ರಕಾಶಕರು :
ಶ್ರೀಗುರುರಾಜ ಅಸೋಸಿಯೇಷನ್ (ರಿ.)
ಬಸವನಗುಡಿ, ಬೆಂಗಳೂರು 560 004.

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತಃ

# ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯಃ

**(ಮೊದಲನೆಯ ಅಧ್ಯಾಯದಿಂದ ಎಂಟನೆಯ ಅಧ್ಯಾಯದ ವರೆಗೆ)**

ಕನ್ನಡಾನುವಾದ (೧,೨,೩ನೇ ಅಧ್ಯಾಯಗಳು)

**ವಿದ್ವಾನ್ ಪ್ರೊ॥ ಡಿ. ಪ್ರಹ್ಲಾದಾಚಾರ್ಯರು,**
**ವಿದ್ವಾನ್ ಜಿ. ಗುರುವೆಂಕಟಾಚಾರ್ಯರು,**
**ವಿದ್ವಾನ್ ರಾಮವಿಠಲಾಚಾರ್ಯರು**

★★★

ಪ್ರತಿಪದಾರ್ಥ ಮತ್ತು ವಿವರಣೆ (೪,೫,೬,೭ನೇ ಅಧ್ಯಾಯಗಳು)

**ಡಾ॥ ಎ.ವಿ. ನಾಗಸಂಪಿಗೆ**
ನಿರ್ದೇಶಕರು, ಪೂರ್ಣಪ್ರಜ್ಞ ಸಂಶೋಧನ ಮಂದಿರ, ಬೆಂಗಳೂರು

★★★

ಪ್ರತಿಪದಾರ್ಥ ಮತ್ತು ವಿವರಣೆ (೮ನೇ ಅಧ್ಯಾಯಗಳು)

**ವಿದ್ವಾನ್ ಡಿ.ಆರ್. ಮಾಧವಾಚಾರ್ಯ** ಎಂ.ಎ.
ಸಂಶೋಧಕರು, ಗುರುಸಾರ್ವಭೌಮ ಸಂಸ್ಕೃತ ವಿದ್ಯಾಪೀಠ, ಬೆಂಗಳೂರು ಶಾಖೆ

★★★

ಪ್ರಕಾಶಕರು

**ಶ್ರೀ ಗುರುರಾಜ ಅಸೋಸಿಯೇಷನ್**

ಮಾಡೆಲ್ ಹೌಸ್ ಬೀದಿ, ಬಸವನಗುಡಿ, ಬೆಂಗಳೂರು.

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತಃ
**ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯಃ**
(ಮೊದಲನೆಯ ಅಧ್ಯಾಯದಿಂದ ಎಂಟನೆಯ ಅಧ್ಯಾಯದ ವರೆಗೆ)
ಕನ್ನಡಾನುವಾದ (೧,೨,೩ನೇ ಅಧ್ಯಾಯಗಳು)
ವಿದ್ವಾನ್ ಪ್ರೊ|| ಡಿ. ಪ್ರಹ್ಲಾದಾಚಾರ್ಯರು,
ವಿದ್ವಾನ್ ಜಿ. ಗುರುವೆಂಕಟಾಚಾರ್ಯರು,
ವಿದ್ವಾನ್ ರಾಮವಿಠಲಾಚಾರ್ಯರು
ಪ್ರತಿಪದಾರ್ಥ ಮತ್ತು ವಿವರಣೆ (೪,೫,೬,೭ನೇ ಅಧ್ಯಾಯಗಳು)
ಡಾ|| ಎ.ವಿ. ನಾಗಸಂಪಿಗೆ ನಿರ್ದೇಶಕರು, ಪೂರ್ಣಪ್ರಜ್ಞ ಸಂಶೋಧನ ಮಂದಿರ,
ಬೆಂಗಳೂರು,
ಪ್ರತಿಪದಾರ್ಥ ಮತ್ತು ವಿವರಣೆ (೮ನೇ ಅಧ್ಯಾಯಗಳು),
ವಿದ್ವಾನ್ ಡಿ.ಆರ್. ಮಾಧವಾಚಾರ್ಯ ಎಂ.ಎ.
ಸಂಶೋಧಕರು, ಗುರುಸಾರ್ವಭೌಮ ಸಂಸ್ಕೃತ ವಿದ್ಯಾಪೀಠ, ಬೆಂಗಳೂರು ಶಾಖೆ
ಪ್ರಕಾಶಕರು **ಶ್ರೀ ಗುರುರಾಜ ಅಸೋಸಿಯೇಷನ್**, ಮಾಡೆಲ್ ಹೌಸ್ ಬೀದಿ,
ಬಸವನಗುಡಿ, ಬೆಂಗಳೂರು - ೫೬೦ ೦೦೪. ದೂರವಾಣಿ : ೨೬೬೨೫೬೫೮/೯

ಹಕ್ಕುಗಳು ಕಾದಿರಿಸಲ್ಪಟ್ಟಿವೆ.

ಪ್ರತಿಗಳು : ೧೦೦೦

ಪ್ರಕಟಿತ ವರ್ಷ : ೨೦೧೩.

ಬೆಲೆ : ರೂ.೨೦೦/-

**ಅಕ್ಷರ ವಿನ್ಯಾಸ ಮತ್ತು ಮುದ್ರಣ**
**ವಾಗರ್ಥ**, ನಂ.149, 8ನೇ ಕ್ರಾಸ್, ನರಸಿಂಹರಾಜಾ ಕಾಲೋನಿ, ಬೆಂಗಳೂರು-560 019.
ದೂರವಾಣಿ : 080-22427677

# ಅನುಗ್ರಹ ಸಂದೇಶ

ಮಹಾಭಾರತತಾತ್ಪರ್ಯನಿರ್ಣಯ ಶ್ರೀಮದಾಚಾರ್ಯರು ಇತಿಹಾಸಪುರಾಣಗಳ ವಿಮರ್ಶೆಗೆ ನೀಡಿದ ಮಹೋನ್ನತ ಕೃತಿ. ಪ್ರಮಾಣಗಳ ಸ್ವರೂಪ ಮತ್ತು ಪ್ರಮಾಣಗಳಿಂದ ಸಿದ್ಧವಾಗುವ ಹರಿಸರ್ವೋತ್ತಮತ್ವ, ವಾಯುಜೀವೋತ್ತಮತ್ವ ಮೊದಲಾದ ಮಹಾಪ್ರಮೇಯಗಳು ಅಲ್ಲಿ ನವಿರಾಗಿ ನಿರೂಪಿಸಲ್ಪಟ್ಟಿವೆ.

ಶ್ರೀಮದಾಚಾರ್ಯರು, ಯಥಾವತ್ತಾದ ಕಥೆಯ ನಿರೂಪಣೆಯ ನೆಪದಿಂದ ಇಲ್ಲಿ ಅನುಸಂಧೇಯ ತತ್ತ್ವರಹಸ್ಯಗಳನ್ನು ಅನುಗ್ರಹಿಸಿರುವುದು ಈ ಕೃತಿಯ ಹಿರಿಮೆ. ಶ್ರೀಮದಾಚಾರ್ಯರೇ ಹೇಳುವಂತೆ ಈ ಕೃತಿಯ ಅಧ್ಯಯನ ನಾರಾಯಣನ ಪರಮಪ್ರೀತಿಗೆ ಕಾರಣ – 'ನಾರಾಯಣಃ ಪ್ರೀತಿಮುಪೈತಿ ತತೋಽಲಮ್'. ಇಂತಹ ಮನೋಜ್ಞ ಕೃತಿಯನ್ನು ಸಂಸ್ಕೃತ ಬಾರದ ಜಿಜ್ಞಾಸುಗಳ ಸೌಕರ್ಯಕ್ಕಾಗಿ ಬೆಂಗಳೂರಿನ ಮಾಡಲ್‌ಹೌಸ್ ಬೀದಿಯ ಶ್ರೀ ಗುರುರಾಜ ಅಸೋಸಿಯೇಷನ್ನಿನ ಪದಾಧಿಕಾರಿಗಳು ಶ್ರೀಮನ್ಮಹಾಭಾರತತಾತ್ಪರ್ಯ ನಿರ್ಣಯದ ಪದಚ್ಛೇದ, ಪ್ರತಿಪದಾರ್ಥ, ತಾತ್ಪರ್ಯಗಳ ನಿರೂಪಣೆಯೊಂದಿಗೆ ಕನ್ನಡದ ಅನುವಾದದ ಎರಡನೆಯ ಮುದ್ರಣವನ್ನು ಮಾಡಿಸಿ ಓದುಗರಿಗೆ ಶ್ರೀಮಠವು ನೀಡುತ್ತಿರುವುದು ಸಂತೋಷವನ್ನು ತಂದಿದೆ.

ಶ್ರೀ ರಾಘವೇಂದ್ರತೀರ್ಥರು ಜ್ಞಾನಮಾರ್ಗದಲ್ಲಿ ಸಾಗಿ ವಿದ್ವತ್ ಸಮಾಜಕ್ಕೆ ಉಪಯುಕ್ತವಾದ ಕೃತಿಗಳನ್ನು ರಚಿಸಿದರು. ಶ್ರೀಮಠವು ಶ್ರೀ ರಾಘವೇಂದ್ರ ತೀರ್ಥರಿಗೆ ಇಷ್ಟವಾದ ಅವರು ತೋರಿಸಿದ ಮಾರ್ಗದಲ್ಲಿಯೇ ಸಾಗುತ್ತಿರುವುದು ಸಂತೋಷವಾಗಿದೆ. ಶ್ರೀಮಠದಿಂದ ಹೀಗೆಯೇ ನಿರಂತರವಾಗಿ ಇಂತಹ ಉಪಯುಕ್ತ ಕಾರ್ಯಗಳು ನಡೆಯಲಿ ಎಂದು ಶ್ರೀ ಕೃಷ್ಣನಲ್ಲಿ ಪ್ರಾರ್ಥಿಸುತ್ತೇವೆ.

ಈ ಕೃತಿಗಳ ಉಪಯೋಗವನ್ನು ಎಲ್ಲಾ ಸಜ್ಜನರು ಪಡೆಯುವಂತೆ ಆಗಲಿ ಎಂದು ಅಪೇಕ್ಷಿಸುತ್ತೇವೆ. ಈ ಕೃತಿಯ ಅನುವಾದವನ್ನು ಮಾಡಿದ ಸಕಲ ವಿದ್ವಾಂಸರಿಗೂ ಶ್ರೀಕೃಷ್ಣನು ಅನುಗ್ರಹಿಸಿ ಇನ್ನೂ ಹೆಚ್ಚಿನ ಸೇವೆಯನ್ನು ಸ್ವೀಕರಿಸಲೆಂದು ಹಾರೈಸುತ್ತೇವೆ.

ಇತಿ ನಾರಾಯಣಸ್ಮರಣೆಗಳು

ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದರು.

# ಮುನ್ನುಡಿ

ಜಗದ್ಗುರು ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರು ಮುಖ್ಯಪ್ರಾಣನ ಮೂರನೆಯ ಅವತಾರ. ಶ್ರೀ ಹರಿಯ ಆದೇಶವನ್ನು ಮುಡಿಯಲ್ಲಿ ಹೊತ್ತು, ದೇವತೆಗಳ ಚಿನ್ನಹವನ್ನು ಹೃದಯಹಾರವಾಗಿಸಿಕೊಂಡು, ಸುಜನರುದ್ಧಾರಕ್ಕಾಗಿ ಧರೆಗಿಳಿದು ಬಂದವರು. ಜ್ಞಾನದ ಎಲ್ಲ ಶಾಖೆಗಳಿಗೂ ಅಪೂರ್ವ ಹಾಗೂ ವಿಶಿಷ್ಟ ವ್ಯಾಖ್ಯಾನವನ್ನು ಕರುಣಿಸಿರುವುದು ಶ್ರೀಮದಾಚಾರ್ಯರ ಹಿರಿಮೆ. ವೇದ - ಉಪನಿಷತ್ - ಬ್ರಹ್ಮಸೂತ್ರಗಳು - ಇತಿಹಾಸ - ಪುರಾಣ - ತಂತ್ರ - ಧರ್ಮಶಾಸ್ತ್ರ - ವೇದಾಂಗಗಳು ಮತ್ತು ಕಲಾವಿದ್ಯೆಗಳ ಬಗ್ಗೆ ಬೆಳಕು ಚೆಲ್ಲಿದ ಮೊದಲ ಆಚಾರ್ಯರು - ಶ್ರೀಮದಾಚಾರ್ಯರು. ಇತಿಹಾಸ-ಪುರಾಣಗಳಲ್ಲಿ 'ಆವಾಪೋದ್ವಾಪ' ಹೆಚ್ಚಿದೆಯೆಂಬ ಹಿನ್ನೆಲೆಯಲ್ಲಿ ಅದನ್ನು ಮುಟ್ಟಲಂಜಿದವರು ಬಹಳ ಮಂದಿ. ಆದರೆ, ಯಾವ ಆಚಾರ್ಯರ ಪುರುಷರೂ ಮಾಡಲಾಗದ ಮಹಾಭಾರತದ ಪ್ರಮೇಯನಿರ್ಣಯ, ಭಾಗವತದ ಪಾಠಶುದ್ಧಿ - ಅರ್ಥನಿರ್ಣಯದ ಬಗ್ಗೆ ಅಧಿಕೃತ ಕೊಡುಗೆ ಕೊಟ್ಟವರು ಶ್ರೀಮಧ್ವಾಚಾರ್ಯರು.

ದೊರಕಿದ ವೇದಭಾಗ ಅತ್ಯಲ್ಪ. ಕಳೆದುಕೊಂಡದ್ದು ಬಹುಭಾಗ. ವೇದ - ಉಪನಿಷತ್ತುಗಳ ವ್ಯಾಖ್ಯೆ ಬಲು ಕಠಿಣ. ಇದರಂತೆ ಇತಿಹಾಸ-ಪುರಾಣಗಳಲ್ಲಿ ಹೆಜ್ಜೆ-ಹೆಜ್ಜೆಗೆ ವಿರೋಧಗಳು, ಅಸಂಗತಿಗಳು, ಅಸ್ಪಷ್ಟತೆಗಳು ಕಣ್ಣಿಗೆ ರಾಚುತ್ತವೆ. ಇವುಗಳಲ್ಲಿನ ಏಕವಾಕ್ಯತೆ - ಅಪೂರ್ವತೆಯನ್ನು ಆವಿಷ್ಕರಿಸುವುದು ಸರ್ವಜ್ಞರಿಗೆ ಮಾತ್ರವೇ ಸಾಧ್ಯವಾದ ಕಾಯಕ. ಇದನ್ನು ಮಾಡಿಕೊಟ್ಟವರು - ಪೂರ್ಣಪ್ರಜ್ಞರು.

ಇತಿಹಾಸ-ಪುರಾಣಗಳ ಮಾರ್ಗದರ್ಶನದಲ್ಲಿ ವೇದಗಳ ಅಧ್ಯಯನ ನಡೆಸಬೇಕೆಂದು ಪ್ರಾಚೀನರು ಆದೇಶಿಸಿದರು — 'ಇತಿಹಾಸಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್' ಇತಿಹಾಸ-ಪುರಾಣಗಳು ಸಾಮಾನ್ಯ ಕೃತಿಗಳಲ್ಲ, ಸರ್ವಜ್ಞತಮರಾದ ನಾರಾಯಣಾವತಾರಿಗಳಾದ ಶ್ರೀವೇದವ್ಯಾಸರ ಕೃತಿರತ್ನಗಳು. ಇವುಗಳ ಹೃದಯವನ್ನು ಆವಿಷ್ಕರಿಸುವ ಕಾರ್ಯ, ಶ್ರೀವ್ಯಾಸರ ಆದೇಶದಂತೆ ಶ್ರೀಮಧ್ವರಿಂದ ನಡೆದಿದೆ. ಕಲಿಯುಗದಲ್ಲಿ ವೇದಾಧ್ಯಯನ ಯೋಗ್ಯತೆ ಇರುವವರು ವಿರಳ. ಬ್ರಹ್ಮಬಂಧುಗಳೇ ಎಲ್ಲೆಡೆ ಇರುವವರು. ಬ್ರಾಹ್ಮಣರು - ಸ್ತ್ರೀಯರು - ಸಂಸ್ಕಾರಹೀನವಾದ ಸುಜನವರ್ಗ ವಿಶ್ವದಲ್ಲಿ ವ್ಯಾಪಿಸಿದೆ. ಇವರ ಪಾಲಿಗೆ

ಮಹಾಭಾರತವೇ – ವೇದ. ಇದರ ಅಧ್ಯಯನವಿಲ್ಲದೆ ಅರಿವೆಲ್ಲಿ? ಅರಿವಿಲ್ಲದೆ ಮುಕ್ತಿ ಹೇಗೆ? ಈ ಹಿನ್ನೆಲೆಯಲ್ಲಿ ಮಹಾಭಾರತದ ಮೂಲಕ ವೇದೋಪನಿಷತ್ತುಗಳಲ್ಲಿ ಮುಚ್ಚಿಟ್ಟ ತತ್ತ್ವರಹಸ್ಯಗಳ, ಸೂಕ್ಷ್ಮಪ್ರಮೇಯಗಳ ಆವಿಷ್ಕರಣಕ್ಕಾಗಿ ಆಚಾರ್ಯರು ಕರುಣಿಸಿದ ಮಂಗಲಕೃತಿ – ಮಹಾಭಾರತತಾತ್ಪರ್ಯ ನಿರ್ಣಯ. ಇದು ಸಕಲಶಾಸ್ತ್ರಗಳ ಹೃದಯವನ್ನು ತೆರೆದಿಡಲೆಂದೇ ಮೈದಳೆದ ಸಂಶೋಧನಾತ್ಮಕ ಹಾಗೂ ನಿರ್ಣಯಾತ್ಮಕ ಕೃತಿ. ಇದರ ಅಧ್ಯಯನದಿಂದ ಇಹ-ಪರಗಳಲ್ಲಿ ಮಂಗಲ-ಶಾಂತಿ ನಿಶ್ಚಿತ. ಇದರ ಅಧ್ಯಯನದಿಂದ ಶ್ರೀಹರಿಯ ಒಲುಮೆ ನಿಶ್ಚಿತ – 'ನಾರಾಯಣಃ ಪ್ರೀತಿಮುಪೈತಿ ತತೋಽಲಮ್'.

ಬೆಂಗಳೂರಿನ ಪ್ರತಿಷ್ಠಿತವಾದ ಗುರುರಾಜ ಅಸೋಸಿಯೇಷನ್ ಈ ಕೃತಿಯನ್ನು ಹೊರತರುತ್ತಿರುವುದು. ನಾಡಿನ ಜನತೆಯ ಭಾಗ್ಯ. ಇಂದು ಮಹಾಭಾರತ ತಾತ್ಪರ್ಯನಿರ್ಣಯದ ಅಂತರ್ಯವನ್ನು ಆವಿಷ್ಕರಿಸಲು ಮೈದಳೆದ ಎರಡು ಅನುವಾದಗಳು ಕನ್ನಡದ ಕನ್ನಡಿಯಲ್ಲಿವೆ. ಸಕಲಶಾಸ್ತ್ರ ವಿಶಾರದರೂ ಸಂಶೋಧಕರೂ ಆದ ಪೂಜ್ಯ ಶ್ರೀ ಹಯವದನಪುರಾಣಿಕರು ನಿರ್ಮಾಣ ಮಾಡಿದ ಕೃತಿರತ್ನ ಒಂದಾದರೆ, ವ್ಯಾಸಮಧ್ವ ಸಂಶೋಧನ ಪ್ರತಿಷ್ಠಾನದ ನಿರ್ದೇಶಕರೂ ಪಾಠ-ಪ್ರವಚನ, ಅಪೂರ್ವ ಹಸ್ತಪ್ರತಿಗಳ ಸಂಗ್ರಹ ಪ್ರಕಾಶನದಿಂದ ವಿಖ್ಯಾತರೂ ಆದ ವಿದ್ವನ್ಮಣಿಗಳಾದ ಶ್ರೀ ಪ್ರಭಂಜನಾಚಾರ್ಯರು ನೀಡಿದ ಕೃತಿ ಮತ್ತೊಂದು. ಈ ಎರಡೂ ಕೃತಿಗಳು ವಿದ್ವಾಂಸರ ಹಸಿವು ನೀಗಿಸುವಂತಹ ಅಮೂಲ್ಯ ಕೃತಿಗಳು.

ಶ್ರೀ ಗುರುರಾಜ ಅಸೋಸಿಯೇಷನ್ ಪ್ರಕಾಶನಗೊಳಿಸುತ್ತಿರುವ ಈ ಕೃತಿಯು, ಶ್ರೀಸಾಮಾನ್ಯರಿಗೆ ತತ್ತ್ವಜ್ಞಾನಸುಧೆ ಹರಿಸುವ ಹಿನ್ನೆಲೆಯಿಂದ ಲೋಕಾರ್ಪಣಗೊಂಡಿದೆ.

ಶ್ರೇಷ್ಠವಿದ್ವಾಂಸರಲ್ಲಿ ಮಾನನೀಯರೂ ನಿರಂತರ ಪಾಠಪ್ರವಚನದೀಕ್ಷಿತರೂ ಆದ ಪ್ರೊ. ಡಿ. ಪ್ರಹ್ಲಾದಾಚಾರ್ಯರು ಹಾಗೂ ಸಕಲಶಾಸ್ತ್ರನಿಷ್ಣಾತರು ಸದಾ ಪಾಠಪ್ರವಚನನಿರತರೂ, ವಿದ್ವನ್ಮಾನ್ಯರೂ ಆದ ಪ್ರೊ. ಜಿ. ಗುರುವೆಂಕಟಾಚಾರ್ಯರು (ಪ್ರಸಕ್ತ ಶ್ರೀ ೧೦೦೮ ಶ್ರೀ ಸುವಿದ್ಯೇಂದ್ರ ತೀರ್ಥಶ್ರೀಪಾದರು) ಸಂಸ್ಕೃತಬಾರದ ಓದುಗರಿಗಾಗಿ ಪದಚ್ಛೇದ – ಅನ್ವಯ – ಪ್ರತಿಪದಾರ್ಥ ಹಾಗೂ ಶ್ರೀ ವಾದಿರಾಜ ಗುರುಸಾರ್ವಭೌಮರ ವ್ಯಾಖ್ಯಾನ ವಿಶೇಷಾಂಶಗಳಿಂದ ಅಲಂಕರಿಸಿ ೧, ೨ ಅಧ್ಯಾಯಗಳ ಅನುವಾದ ಮಾಡಿಕೊಟ್ಟಿದ್ದರು. ನನ್ನ ಮಿತ್ರರೂ ಶ್ರೇಷ್ಠ ವಿದ್ವಾಂಸರೂ ಆದ ಶ್ರೀ ರಾಮವಿಠಲಾಚಾರ್ಯರೂ ೩ನೇ ಅಧ್ಯಾಯದ ಅನುವಾದ ಮಾಡಿಕೊಟ್ಟಿದ್ದರು.

೩ನೇ ಅಧ್ಯಾಯಗಳನ್ನೊಳಗೊಂಡ ಮೊದಲ ಸಂಪುಟ ೧೯೯೦ರಲ್ಲಿ ಮುದ್ರಣ ಗೊಂಡಿತ್ತು. ಇದೀಗ ೧೬ ಅಧ್ಯಾಯಗಳನ್ನು ಒಳಗೊಂಡ ೨ ಸಂಪುಟಗಳು ಪ್ರತಿ ಪದಾರ್ಥ ವಿವರಣೆಯೊಂದಿಗೆ ಮುದ್ರಿತಗೊಳ್ಳುತ್ತಿರುವುದು ತುಂಬ ಸಂತಸದ ಸಂಗತಿ.

ಪ್ರಸಕ್ತ, ಗುರುರಾಜ ಅಸೋಸಿಯೇಷನ್ ಪದಾಧಿಕಾರಿಗಳೆಲ್ಲರೂ ಈ ವಾಙ್ಮಯ ಸೇವೆಯಿಂದ ಅಭಿನಂದನಾರ್ಹರಾಗಿದ್ದಾರೆ. ಇವರಿಗೆ ಉತ್ತಮ ಮಾರ್ಗದರ್ಶನ ನೀಡಿ, ಉತ್ಸಾಹ ತುಂಬಿ ಈ ಕೃತಿಯ ಪ್ರಕಾಶನಕ್ಕೆ ನಿರಂತರ ಶ್ರಮಿಸಿದ ವಿದ್ವಾನ್ ಬ್ರಹ್ಮಣ್ಯಾಚಾರ್ಯರೂ ಗಣನೀಯ ಸೇವೆ ಸಲ್ಲಿಸಿದ್ದಾರೆ. ಈ ಎಲ್ಲ ಮಹನೀಯರಿಗೆ ಶ್ರೀಹರಿವಾಯುಗಳು ಮತ್ತು ಬೃಂದಾವನದಲ್ಲಿ ಸನ್ನಿಹಿತರಾಗಿರುವ ಕರುಣಾಸಾಗರರಾದ ಶ್ರೀಗುರುರಾಜರು ಎಲ್ಲ ಬಗೆಯ ಭಾಗ್ಯಗಳನ್ನು ಕರುಣಿಸಿ ಹರಸಲೆಂದು ಭಕ್ತಿಯಿಂದ ಬಿನ್ನವಿಸುವೆ.

ಶ್ರೀ ಗುರುರಾಜ ಅಸೋಸಿಯೇಷನ್‌ನಂತಹ ಮಾಧ್ವ ಸಂಸ್ಥೆಗಳು, ಭಕ್ತರು ಶ್ರದ್ಧೆಯಿಂದ ನೀಡುವ ದೇಣಿಗೆಯನ್ನು ಕೇವಲ ಕಟ್ಟಡದ ವಿಸ್ತರಣೆ, ಬೆಳ್ಳಿ-ಬಂಗಾರಗಳ ಕವಚನಿರ್ಮಾಣಕ್ಕೆ ಮಾತ್ರವೇ ವಿನಿಯೋಗಿಸದೆಯೇ, ವಿದ್ವಾಂಸರ ಪೋಷಣೆ-ಗ್ರಂಥಪ್ರಕಾಶನ - ವಿದ್ಯಾರ್ಥಿವೇತನ ಇತ್ಯಾದಿಗಳಿಗೆ ಬಳಸುತ್ತಿರುವುದು ಹೆಮ್ಮೆ-ಅಭಿಮಾನ ತರುವ ಸಂಗತಿ. ಎಲ್ಲದಕ್ಕಿಂತ ಹೆಚ್ಚಾಗಿ ಶ್ರೀ ಗುರುರಾಜರ ಅಂತರಂಗದ ಅನುಗ್ರಹಕ್ಕೆ ಕಾರಣವಾದ ಭಾಗ್ಯೋದಯವಿದು. ಎಲ್ಲ ಸಂಘಸಂಸ್ಥೆಗಳು ಹಾಗೂ ಮಠಗಳು ತಮ್ಮ ಸಂಪನ್ಮೂಲವನ್ನು ಗ್ರಂಥಪ್ರಕಾಶನ - ಗ್ರಂಥಾನುವಾದ ವಿದ್ವಾಂಸರ-ವೈದಿಕರ ಸಂಪೋಷಣೆಗೆ ಬಳಸಿದಲ್ಲಿ ಧರ್ಮದರ್ಶಿಗಳಾದ ಸಾರ್ಥಕಸೇವೆ ಸಲ್ಲಿಸಿದಂತಾಗುವುದು. ಇಂತಹ ಭಾವ ಶುದ್ಧಿಯನ್ನು ಶ್ರೀಗುರುರಾಜರು ನೀಡಿ ಈ ಪದಾಧಿಕಾರಿಗಳಿಂದ ಇನ್ನೂ ಹೆಚ್ಚಿನ ಶಾಸ್ತ್ರಸೇವೆ ಹಾಗೂ ಶ್ರೀಗುರುರಾಜರ ಸೇವೆ ಸ್ವೀಕರಿಸುವಂತಾಗಲೆಂದು ಶ್ರೀಗುರುರಾಜರಲ್ಲಿ ಭಕ್ತಿಯಿಂದ ಬಿನ್ನವಿಸುವೆ.

ಇತಿ

ಸುಜನರ ಅನುಗ್ರಹಾಕಾಂಕ್ಷಿ

ಎ. ವಿ. ನಾಗಸಂಪಿಗೆ

# ಪ್ರಕಾಶಕರ ನುಡಿ

ಜಗದ್ಗುರುಗಳಾದ ಶ್ರೀಮನ್ ಮಧ್ವಾಚಾರ್ಯರು ಶ್ರೀ ಭಗವಾನ್ ವೇದವ್ಯಾಸರಿಂದ ರಚಿತವಾದ ಶ್ರೀಮನ್ ಮಹಾಭಾರತದ ಮೇಲೆ ಬೆಳಕು ಚೆಲ್ಲುವ ವಿಸ್ತಾರವಾದ ನಿರ್ಣಯ ಗ್ರಂಥವನ್ನು ರಚಿಸಿದ್ದಾರೆ. ಅದೇ "ಶ್ರೀಮನ್ ಮಹಾಭಾರತ ತಾತ್ಪರ್ಯ ನಿರ್ಣಯ". ಈ ಗ್ರಂಥವು ೫೦೦೦ ಶ್ಲೋಕಗಳಿಂದ ಕೂಡಿದ್ದು ಅದು ಕೇವಲ ಮಹಾಭಾರತದ ಕಥೆ ನಿರ್ಣಯವೇ ಅಲ್ಲದೆ ಉಳಿದ ಪುರಾಣಗಳ ಮೇಲೆಯೂ ಕೂಡ ಬೆಳಕು ಚೆಲ್ಲುವ ಸರ್ವ ಶಾಸ್ತ್ರಾರ್ಥ ಸಂಗ್ರಹ ರೂಪವೇ ಆಗಿದೆ. ಇಂತಹ ಗ್ರಂಥವನ್ನು ಪರಮ ಕರುಣಾಳುಗಳಿಂದ ಶ್ರೀ ರಾಘವೇಂದ್ರ ಗುರುಸಾರ್ವಭೌಮರ ಕೃಪಾಬಲದಿಂದ ನಮ್ಮ ಶ್ರೀ ಗುರುರಾಜಾ ಅಸೋಸಿಯೇಷನ್ (ರಿ.)ನ ಆಡಳಿತ ಮಂಡಳಿಯವರು ಅನೇಕ ವರ್ಷಗಳಿಂದ ಶ್ರೀಮನ್ ಮಧ್ವಾಚಾರ್ಯ ಈ ತಾತ್ಪರ್ಯ ನಿರ್ಣಯ ಗ್ರಂಥವನ್ನು ಶ್ರೀಗುರುರಾಜರ ಆರಾಧನಾ ಮಹೋತ್ಸವದ ಕಾಲದಲ್ಲಿ ಪ್ರಕಾಶನ ಮಾಡುತ್ತಿರುವುದು ಎಲ್ಲರಿಗೂ ತಿಳಿದ ಸಂಗತಿಯಾಗಿದೆ. ೩೨ ಅಧ್ಯಾಯಗಳ ಸಮಗ್ರ ಗ್ರಂಥವನ್ನು ಪ್ರಕಾಶನ ಮಾಡುವ ಉದ್ದೇಶ ನಮ್ಮದಾಗಿದೆ. ಈಗಾಗಲೇ ೧೧ ಅಧ್ಯಾಯಗಳ ಪ್ರಕಾಶನವಾಗಿದ್ದರೂ ಅವು ಒಂದೊಂದೇ ಬಿಡಿ ಬಿಡಿಯಾಗಿ ಪ್ರಕಾಶನಗೊಂಡಿದೆ ಹಾಗೂ ಅನುಪಲಬ್ಧವಾದ ಕಾರಣ ಈ ೩೪೨ನೇ ಶ್ರೀ ಗುರುರಾಜರ ಆರಾಧನಾ ಮಹೋತ್ಸವ ಸುಸಂದರ್ಭದಲ್ಲಿ ಒಟ್ಟು ೧೬ ಅಧ್ಯಾಯಗಳನ್ನು ೮+೨ ರಂತೆ ಪ್ರಕಾಶನಗೊಳಿಸಬೇಕೆಂದು ಸಂಕಲ್ಪಿಸಿ ಈ ಗ್ರಂಥ ಪ್ರಕಾಶನದ ಮೇಲ್ವಿಚಾರಣೆಯನ್ನು ಪೂರ್ಣಪ್ರಜ್ಞ ಸಂಶೋಧನ ಮಂದಿರದ ನಿರ್ದೇಶಕರಾದ ಡಾ|| ಎ.ವಿ. ನಾಗಸಂಪಿಗೆ ಯವರಿಗೆ ವಹಿಸಿಕೊಟ್ಟಾಗ ಅವರು ತಮ್ಮ ಬಿಡುವಿಲ್ಲದ ಕಾರ್ಯದ ನಡುವೆಯೂ ಕೂಡ ಬಹಳ ಉತ್ತಮವಾಗಿ ತಮ್ಮ ಕಾರ್ಯವನ್ನು ನಿರ್ವಹಿಸಿ ಈ ಗ್ರಂಥ ಹೊರಬರಲು ಸಹಕರಿಸಿರುತ್ತಾರೆ. ಈ ಗ್ರಂಥದ ಮುನ್ನುಡಿಯನ್ನು ನೀಡಿರುತ್ತಾರೆ. ಅವರಿಗೆ ನಮ್ಮ ಸಂಸ್ಥೆಯು ಚಿರಋಣಿಯಾಗಿದೆ. ಈ ಸಂದರ್ಭದಲ್ಲಿ ಕರಡುಪ್ರತಿಯನ್ನು ತಿದ್ದಿ ತಮ್ಮ ಅಮೂಲ್ಯ ಸಲಹೆಗಳನ್ನು ಕೊಟ್ಟ ವಿದ್ವಾನ್ ಸಿ.ಹೆಚ್. ಬದರೀ ಆಚಾರ್ಯರಿಗೂ ಸಂಸ್ಥೆ ಚಿರಋಣಿಯಾಗಿದೆ. ಅದೇ ರೀತಿ ಪ್ರತಿ ಅಧ್ಯಾಯವನ್ನು ಬೇರೆ ಬೇರೆ ವಿದ್ವಾಂಸರು ಕನ್ನಡೀಕರಿಸಿರುತ್ತಾರೆ. ಅವರೆಲ್ಲರಿಗೂ ಸಂಸ್ಥೆಯು ಚಿರಋಣಿಯಾಗಿದೆ. ಈ ಗ್ರಂಥಕ್ಕೆ ತಮ್ಮ ಆಶೀರ್ವಚನದ ನುಡಿಗಳನ್ನು ಇತ್ತು ಹಾರೈಸಿ ಪ್ರೋತ್ಸಾಹಿಸಿದ ಪರಮ ಪೂಜ್ಯ ಪೇಜಾವರ ಮಠದ ಹಿರಿಯ ಶ್ರೀಪಾದಂಗಳವರಿಗೂ ನಮ್ಮ ಅನಂತಾನಂತ ಶಿರಸಾಷ್ಟಾಂಗ ನಮಸ್ಕಾರಗಳು.

ಮುದ್ರಣ ಕಾರ್ಯದಲ್ಲಿ ನಮ್ಮೊಂದಿಗೆ ಸದಾ ಇದ್ದು ಸುಂದರವಾಗಿ ಮುದ್ರಿಸಿ ಸಕಾಲದಲ್ಲಿ ಕೊಟ್ಟ ವಾಗರ್ಥ ಮುದ್ರಣಾಲಯದವರಿಗೂ ನಮ್ಮ ಅಭಿನಂದನೆಗಳು.

**ಗುರುರಾಜ ಅಸೋಸಿಯೇಷನ್**
ಮಾಡೆಲ್ ಹೌಸ್ ಬೀದಿ. ಬೆಂಗಳೂರು.

# ವಿಷಯಾನುಕ್ರಮಣಿಕೆ

## ಅಧ್ಯಾಯ - 1

## ಅಧ್ಯಾಯ - 2

## ಅಧ್ಯಾಯ - 3

## ಅಧ್ಯಾಯ - 4

## ಅಧ್ಯಾಯ - 5



## ಅಧ್ಯಾಯ - 6



## ಅಧ್ಯಾಯ - 7

## ಅಧ್ಯಾಯ - ೮

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತಃ

# ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯಃ

ಶ್ರೀ ವಾದಿರಾಜ ಪೂಜ್ಯಚರಣರು ವಿರಚಿಸಿರುವ
ಭಾವ ಪ್ರಕಾಶಿಕೆಯ ಮಂಗಲಾಚರಣ ಶ್ಲೋಕಗಳು

ನಮೋಽಸ್ತು ಗುಣಪೂರ್ಣಾಯ ದೋಷಶೂನ್ಯಾಯ ವಿಷ್ಣವೇ ।
ಸಮಸ್ತ ಜಗತಾಂ ಮುಖ್ಯಹೇತವೇ ಧರ್ಮಸೇತವೇ ॥ ೧ ॥

ಹೃದಬ್ಜಸದನಂ ವಾಜಿವದನಂ ಸತ್ಪ್ರಮೋದನಮ್ ।
ನಮಾಮ್ಯನುದಿನಂ ಬುದ್ಧಿಶೋಧನಂ ಪಾಪಭೇದನಮ್ ॥ ೨ ॥

ಪ್ರಣಮ್ಯ ನೃಹರಿಂ ಮಧ್ವಂ ಗುರೂಂಶ್ಚಾನ್ಯಾನ್ ಯಥಾಮತಿ ।
ಮಹಾಭಾರತತಾತ್ಪರ್ಯನಿರ್ಣಯಾರ್ಥಃ ಪ್ರಕಾಶ್ಯತೇ ॥ ೩ ॥

ವಾದೀ ಮಧ್ವೋ ಯಸ್ಯ ರಾಜಾ ಸೋಽಹಂ ತಸ್ಯ ಕೃಪಾಬಲಾತ್ ।
ವಾದಿರಾಜೋ ನ ಸ್ವಶಕ್ತ್ಯಾ ವೀಣೇವ ರಣಯಾಮಿ ತತ್ ॥ ೪ ॥

## ಅಧ್ಯಾಯ - 1

ನಾರಾಯಣಾಯ ಪರಿಪೂರ್ಣಗುಣಾರ್ಣವಾಯ
ವಿಶ್ವೋದಯಸ್ಥಿ ತಿಲಯೋನ್ನಿಯತಿ ಪ್ರದಾಯ ।
ಜ್ಞಾನಪ್ರದಾಯ ವಿಬುಧಾಸುರ ಸೌಖ್ಯದುಃಖ-
ಸತ್ಕಾರಣಾಯ ವಿತತಾಯ ನಮೋ ನಮಸ್ತೇ ॥ ೧ ॥

ಅರ್ಥ :- ಪರಿಪೂರ್ಣಗುಣಾರ್ಣವಾಯ ಸರ್ವದೇಶಕಾಲ ವ್ಯಾಪಿಗಳಾಗಿ ನಿರವಧಿಕಗಳಾಗಿರುವ ಜ್ಞಾನಾನಂದಾದಿ ಗುಣಗಳಿಂದ ಸಾಗರ ದಂತೆ ಇರುವ ವಿಶ್ವೋದಯಸ್ಥಿತಿಲಯೋನ್ನಿಯತಿಪ್ರದಾಯ ವಿಶ್ವಕ್ಕೆ ಸೃಷ್ಟಿ ಸ್ಥಿತಿ, ಪ್ರಲಯ, ಉತ್ಕೃಷ್ಟವಾದ ಪ್ರೇರಣೆ ಇವುಗಳನ್ನು ಕೊಡುವ ಜ್ಞಾನಪ್ರದಾಯ ಅಧಿಕಾರಿಗಳಿಗೆ ಅವರವರ ಯೋಗ್ಯತಾನುಸಾರವಾಗಿ ಜ್ಞಾನವನ್ನು ನೀಡುವ

**ವಿಬುಧಾಸುರಸೌಖ್ಯದುಃಖಸತ್ಕಾರಣಾಯ** ದೇವತೆಗಳೇ ಮೊದಲಾದ ಸಜ್ಜೀವರಿಗೆ ಸ್ವಾಭಾವಿಕ ಸುಖವನ್ನೂ ಅಸುರರೇ ಮೊದಲಾದ ದುಷ್ಟಜೀವರಿಗೆ ಸ್ವಾಭಾವಿಕ ದುಃಖವನ್ನೂ ಕೊಡುವ ಸರ್ವೋತ್ತಮಕಾರಣನಾದ **ವಿತತಾಯ** ವಿಶಿಷ್ಟವೂ ವಿಲಕ್ಷಣವೂ ಆದ ರೀತಿಯಿಂದ ಸರ್ವವ್ಯಾಪಿಯಾದ **ನಾರಾಯಣಾಯ ತೇ** ನಾರಾಯಣನಾದ ನಿನಗೆ **ನಮೋ ನಮಃ** ಪುನಃ ಪುನಃ ನಮಸ್ಕಾರ.

**ವಿಶೇಷ ವಿಷಯಗಳು :-** ಶ್ರೀಮನ್ಮಹಾಭಾತತಾತ್ಪರ್ಯನಿರ್ಣಯವು ಒಟ್ಟು ಮೂವತ್ತೆರಡು ಅಧ್ಯಾಯಗಳಿಂದ ಕೂಡಿದೆ. ಮೊದಲನೆ ಮೂರು ಅಧ್ಯಾಯಗಳಲ್ಲಿ ಆಚಾರ್ಯರು ವಿಪುಲವಾಗಿ ಶ್ರುತಿಸ್ಮೃತಿ ವಚನಗಳನ್ನು ಉದಾಹರಿಸಿ ಸಕಲ ಶಾಸ್ತ್ರಾರ್ಥನಿರ್ಣಯವನ್ನು ತೋರಿಸಿದ್ದಾರೆ. ಮುಂದಿನ ಆರು ಅಧ್ಯಾಯಗಳಲ್ಲಿ ಮೂಲರಾಮಾಯಣದ ಕಥೆಯನ್ನೂ, ಅನಂತರದ ಒಂದು ಅಧ್ಯಾಯದಲ್ಲಿ ವ್ಯಾಸಾವತಾರದ ಕಥೆಯನ್ನೂ ಸಂಗ್ರಹ ಮಾಡಿದ್ದಾರೆ. ಉಳಿದ ಇಪ್ಪತ್ತೆರಡು ಅಧ್ಯಾಯಗಳಿಂದ ವಿಸ್ತಾರವಾಗಿ ಶ್ರೀಮನ್ಮಹಾಭಾರತದ ತಾತ್ಪರ್ಯನಿರ್ಣಯವನ್ನು ಮಾಡಿಕೊಟ್ಟಿದ್ದಾರೆ. ಇಂತಹ ವೈಶಿಷ್ಟ್ಯಪೂರ್ಣವಾದ ಕೃತಿಯನ್ನು ರಚಿಸಿರುವ ಭಗವತ್ಪಾದರಿಗೆ ಸ್ವಾಭಾವಿಕವಾಗಿಯೇ ಯಾವ ವಿಘ್ನಗಳೂ ಇಲ್ಲ. ಆದ್ದರಿಂದ ಅವರು ವಿಘ್ನಪರಿಹಾರಪೂರ್ವಕ ಗ್ರಂಥ ಸಮಾಪ್ತಿಯ ಉದ್ದೇಶದಿಂದ ಮಂಗಲವನ್ನು ಆಚರಿಸುವ ಆವಶ್ಯಕತೆಯೇ ಇಲ್ಲ. ಆದರೂ, ಅನವರತಪ್ರೇಮಪಾತ್ರನಾದ ಭಗವಂತನಲ್ಲಿ ತಮಗುಂಟಾಗಿರುವ ನಿಷ್ಕಾಮ ಭಕ್ತ್ಯುದ್ರೇಕದಿಂದ ಸಹಜವಾಗಿಯೇ ನಾರಾಯಣನಮಸ್ಕಾರ ರೂಪವಾದ ಮಂಗಲವನ್ನು ಆಚರಿಸುತ್ತಿದ್ದಾರೆ. ಅಲ್ಲದೆ, ಪ್ರಾರಂಭಿಸಲು ಬಯಸುವ ಗ್ರಂಥದ ನಿರ್ವಿಘ್ನಸಮಾಪ್ತಿಗೆ ಕಾರಣವೂ ಅವಿಗೀತಶಿಷ್ಟಾಚಾರ ಪರಂಪರೆಯಿಂದ ಸಿದ್ಧವೂ ಆಗಿರುವ ಮಂಗಲವನ್ನು ಅವಶ್ಯ ಮಾಡಬೇಕೆಂದು ಶಿಷ್ಯರಿಗೆ ಸೂಚಿಸುವ ಉದ್ದೇಶದಿಂದ ತಾವು ಮಾಡಿರುವ ಮಂಗಲವನ್ನು ಶ್ಲೋಕರೂಪದಿಂದ ರಚಿಸಿ ಗ್ರಂಥದಲ್ಲಿ ಸೇರಿಸಿದ್ದಾರೆ.

ಈ ಶ್ಲೋಕದ 'ನಮೋ ನಮಃ' ಎಂಬ ಪದಗಳಿಂದ ಆಚಾರ್ಯರು ನಮಸ್ಕಾರ ರೂಪವಾದ ಮಂಗಲವನ್ನು ಆಚರಿಸಿದ್ದಾರೆನ್ನುವುದು ಸ್ಪಷ್ಟ ಪರಮಾದರದಿಂದ ಕೂಡಿದ ನಮಸ್ಕಾರವೇ ಮಂಗಲರೂಪವಾದುದು ಮತ್ತು

ವಿಘ್ನಬಾಹುಲ್ಯವನ್ನು ಪರಿಹರಿಸಲು ಮಂಗಲಬಾಹುಲ್ಯವು ಆವಶ್ಯಕ ಎಂಬ ಈ ಎರಡು ಅಂಶಗಳನ್ನು ಸೂಚಿಸಲು 'ನಮೋ ನಮಃ' ಎಂಬ ದ್ವಿರುಕ್ತಿಯನ್ನು ಆಚಾರ್ಯರು ಪ್ರಯೋಗಿಸಿದ್ದಾರೆ. 'ನಮಃ' ಎಂಬ ಶಬ್ದದ ಪ್ರಯೋಗವೂ ಇಲ್ಲಿ ಗಮನಾರ್ಹವಾಗಿದೆ. ಣಮು 'ಪ್ರಹ್ವತ್ವೇ ಶಬ್ದೇ ಚ' ಎಂಬ ಧಾತುಪಾಠಕ್ಕನು ಸಾರವಾಗಿ, ಣಮು ಧಾತುವಿನಿಂದ ನಿಷ್ಪನ್ನವಾಗಿರುವ ನಮಃ ಶಬ್ದವು ಶರೀರ ಮತ್ತು ಮನಸ್ಸುಗಳ ಪ್ರಹ್ವೀಭಾವ ಅಂದರೆ ನಮ್ರತೆರೂಪವಾದ ವಾಚನಿಕವಾದ ನಮಸ್ಕಾರವನ್ನೂ ಸೂಚಿಸುವುದು. ಇಂತಹ ವಿಶಿಷ್ಟರೀತಿಯ ತ್ರಿವಿಧ ನಮಸ್ಕಾರ ವನ್ನು ಸೂಚಿಸುವ ಸಲುವಾಗಿಯೇ ಆಚಾರ್ಯರು ಬೇರೆ ಪದಗಳನ್ನು-ಪಯೋಗಿಸದೆ ನಮಃ ಪದದಿಂದ ಮಂಗಲವನ್ನು ಮಾಡಿದ್ದಾರೆ.

'ನಮೋ ನಮಸ್ತೇ' ಎಂಬಲ್ಲಿ 'ತೇ' ಪದಪ್ರಯೋಗವೂ ಔಚಿತ್ಯ ಪೂರ್ಣವಾಗಿದೆ. ತೇ ಎಂದರೆ ನಿನಗೆ ಎಂದರ್ಥ. ಪ್ರತ್ಯಕ್ಷವಾಗಿರುವ ವ್ಯಕ್ತಿಯನ್ನು ಕುರಿತೇ ಇಂತಹ ಪದ ಪ್ರಯೋಗ ಮಾಡುವುದು. ಆಚಾರ್ಯರು ತಮಗೆ ಪ್ರತ್ಯಕ್ಷ ಗೋಚರನಾದ ಭಗವಂತನನ್ನು ಕುರಿತೇ ನಮಸ್ಕರಿಸುತ್ತಿದ್ದಾರೆ ಹೊರತು ಇತರರಂತೆ ಪರೋಕ್ಷ ಜ್ಞಾನಕ್ಕೆ ಗೋಚರನಾದ ಭಗವಂತನಿಗಲ್ಲ ಎಂದು ಈ ಪದದಿಂದ ಸೂಚಿತವಾಗುವುದು. 'ನನ್ನ ಅಂತರ್ಯಾಮಿಯಾಗಿ ನನ್ನ ಹೃದಯದಲ್ಲಿ ಕಾಣಿಸುತ್ತಿರುವ ನಿನಗೆ ನಮಸ್ಕಾರ' ಎಂದು ಸಾರಾಂಶ.

ಆಚಾರ್ಯರು ತಾವು ವಂದಿಸುತ್ತಿರುವ ಭಗವಂತನನ್ನು ನಾರಾಯಣ ಶಬ್ದದಿಂದ ಹೇಳಿರುವುದೂ ಇಲ್ಲಿ ಅರ್ಥಗರ್ಭಿತವಾಗಿದೆ. 'ಆಪೊ ನಾರಾ ಇತಿ ಪ್ರೋಕ್ತಾಃ ಆಪೋ ವೈ ನರಸೂನವಃ । ಅಯನಂ ತಸ್ಯ ತಾಃ ಪೂರ್ವಂ ತೇನ ನಾರಾಯಣಃ ಸ್ಮೃತಃ ॥' ಎಂಬ ಪ್ರಮಾಣದಂತೆ ನಾರ ಎಂದರೆ ಜಲ. ಸೃಷ್ಟಿಯ ಪೂರ್ವಕಾಲದಲ್ಲಿ ಲಕ್ಷ್ಮೀ ಸಹಿತನಾಗಿ ಪ್ರಲಯಜಲದಲ್ಲಿ ಪವಡಿಸಿದ ಕಾರಣ ಭಗವಂತನಿಗೆ ನಾರಾಯಣ ಎಂದು ಹೆಸರು. ವಿಶ್ವದ ಸೃಷ್ಟಿಗೆ ಮುಂಚಿತ ವಾಗಿಯೇ ಇದ್ದ ಭಗವಂತನಿಗೆ ಸಮರೂ ಇಲ್ಲ, ಅಧಿಕರಂತೂ ಸರ್ವಥಾ ಇಲ್ಲವಾದ್ದರಿಂದ ನಮನಾರ್ಹನಾದವನು ಭಗವಂತನೇ ಎಂದು ಈ ಪದವು ಸೂಚಿಸುವುದು.

ನಮಸ್ಕರಿಸಲ್ಪಡುವ ವ್ಯಕ್ತಿಯ ಸ್ವರೂಪವೇನು ಎಂಬುದರ ನಿರ್ಧಾರವಿಲ್ಲದೆ ನಮಿಸುವುದು ಸಲ್ಲದು. ಸ್ವರೂಪ ನಿರ್ಧಾರವಾಗುವುದು ಲಕ್ಷಣ ಮತ್ತು

ಪ್ರಮಾಣಗಳ ಮೂಲಕ. ಆದ್ದರಿಂದಲೇ ಆಚಾರ್ಯರು ತಮ್ಮ ಗುರುಗಳಾದ ವ್ಯಾಸರು 'ಅಥಾತೋ ಬ್ರಹ್ಮಜಿಜ್ಞಾಸಾ' ಎಂಬ ಮೊದಲನೆ ಬ್ರಹ್ಮಸೂತ್ರದಲ್ಲಿ 'ಬ್ರಹ್ಮ' ಶಬ್ದದಿಂದ ಸೂಚಿಸಿರುವ ಭಗವಂತನ ಲಕ್ಷಣವನ್ನು ಇಲ್ಲಿ 'ಪರಿಪೂರ್ಣ ಗುಣಾರ್ಣವಾಯ' ಎಂಬ ಪದದಿಂದ ತಿಳಿಸುತ್ತಿದ್ದಾರೆ. ಬೃಹಿ ವೃದ್ಧೌ ಎಂಬ ಧಾತುವಿನಿಂದ ನಿಷ್ಪನ್ನವಾಗುವ ಬ್ರಹ್ಮಶಬ್ದವು ಭಗವಂತನು ದೇಶ, ಕಾಲ, ಗುಣಗಳಿಂದ ಪೂರ್ಣನೆಂದು ಹೇಳುವುದು. 'ಸರ್ವದೇಶ, ಸರ್ವಕಾಲಗಳಲ್ಲಿ ನಿರವಧಿಕವಾದ ಜ್ಞಾನಾನಂದಾದಿ ಗುಣಗಳಿಂದ ಸಾಗರನಂತಿರುವ' ಎಂಬ ಅರ್ಥವನ್ನು ಕೊಡುವ ಪರಿಪೂರ್ಣಗುಣಾರ್ಣವ ಶಬ್ದವೂ ಬ್ರಹ್ಮಶಬ್ದೋಕ್ತ ಲಕ್ಷಣವನ್ನೇ ವಿಶದೀಕರಿಸಿದೆ ಎನ್ನುವುದು ಸ್ಪಷ್ಟ. ಸಾಗರದ ಉಪಮೆಯನ್ನು ನೀಡುವ ಮೂಲಕ ಭಗವಂತನ ಗುಣಗಳು ಅನಂತವಾಗಿವೆ ಎಂದು ಸೂಚಿಸುತ್ತಿದ್ದಾರೆ. ಭೂಮಿಯ ಯಾವುದೋ ಒಂದು ಅಲ್ಪಭಾಗಕ್ಕೆ ಮಾತ್ರ ಅಧಿಪತಿಗಳಾದ ರಾಜರ ಬಲ, ಜ್ಞಾನ, ಆನಂದ, ಐಶ್ವರ್ಯ ಮೊದಲಾದ ಗುಣಗಳು ಆಯಾಯಾ ಅಲ್ಪ ಪ್ರದೇಶಕ್ಕೆ ಮಾತ್ರ ಸೀಮಿತವಾದವು. ಅಷ್ಟೇ ಅಲ್ಲದೆ ಯೌವನದಲ್ಲಿದ್ದಂತೆ ಮುಪ್ಪಿನಲ್ಲಿ ಈ ಗುಣಗಳಿರಲಾರವು. ಆದರೆ ಸರ್ವದೇಶ, ಸರ್ವಕಾಲಗಳಲ್ಲಿ ಜ್ಞಾನಾನಂದಾದಿಗುಣಗಳಿಂದ ನಿರವಧಿಕನಾಗಿರುವ ಭಗವಂತನಿಗೆ ಈ ಎರಡೂ ಬಗೆಯ ಮಿತಿಗಳಿಲ್ಲವೆಂದು ಆಚಾರ್ಯರು ಪರಿಪೂರ್ಣ ಗುಣಾರ್ಣವ ಎಂಬ ವಿಶೇಷಣದಿಂದ ಸೂಚಿಸುತ್ತಿದ್ದಾರೆ. ಹೀಗೆ ಸರ್ವದೇಶ ಕಾಲಗಳಲ್ಲಿ ಬಲಜ್ಞಾನಾದಿಗಳಿಂದ ಪರಿಪೂರ್ಣನಾಗಿರುವ ಭಗವಂತ ಈ ಜಗತ್ತಿಗೆ ಅಖಂಡ ಸ್ವಾಮಿಯಾಗಿರುವನೆಂದು ಸೂಚಿಸುವ ಮೂಲಕ ಸರ್ವೋತ್ತಮತ್ವವೆಂಬ ಭಗವಂತನ ಮತ್ತೊಂದು ಲಕ್ಷಣವನ್ನೂ ಆಚಾರ್ಯರು ಇಲ್ಲಿ ಸೂಚಿಸುತ್ತಿದ್ದಾರೆ.

'ಪರಿಪೂರ್ಣಗುಣಾರ್ಣವಾಯ' ಎಂಬ ವಿಶೇಷಣವು ವಾಸ್ತವಿಕವಾಗಿ ಭಗವಂತನ ಒಂದು ಲಕ್ಷಣವನ್ನು ಹೇಳುತ್ತಿಲ್ಲ. ಭಗವಂತನ ಅನಂತ ಗುಣಗಳಲ್ಲಿ ಪ್ರತಿಯೊಂದು ಗುಣವು ಪರಿಪೂರ್ಣವೆಂದು ಹೇಳುವ ಮೂಲಕ ಒಂದೊಂದು ಗುಣವೂ ಅತಿವ್ಯಾಪ್ತಿ ಮೊದಲಾದ ದೋಷವಿಲ್ಲದೆ ಭಗವಂತನ ಲಕ್ಷಣವಾಗಬಲ್ಲುದೆಂದು ಸೂಚಿಸುತ್ತ ಅನಂತ ಲಕ್ಷಣಗಳನ್ನು ಹೇಳುತ್ತಿದೆ. ಯದ್ಯಪಿ ಭಗವಂತನ ಸ್ವರೂಪ ನಿರ್ಧಾರವಾಗಲು ಒಂದೇ ಲಕ್ಷಣ ಸಾಕು. ಆದರೂ, ಭಗವಂತನು ಜೀವರಿಂದ ಅತ್ಯಂತ ಭಿನ್ನನಾಗಿದ್ದಾನೆ ಎಂಬುದನ್ನು ಸಮರ್ಥಿಸಲು

ಅನಂತ ಲಕ್ಷಣಗಳನ್ನು ಹೇಳಲಾಗಿದೆ. ಅಲ್ಲದೆ ಬೇರೆಲ್ಲೂ ಇಲ್ಲದ ಅನಂತ ಶುಭಗುಣಗಳನ್ನು ಪಡೆದಿರುವ ಭಗವಂತನು ಮಹಾಮಹಿಮನೆಂದು ತಿಳಿಸುವುದೂ ಇಲ್ಲಿ ಆಚಾರ್ಯರ ಉದ್ದೇಶವಾಗಿದೆ. ಭಗವಂತನ ಅನಂತಗುಣ ಪೂರ್ಣತೆಯ ವಿಷಯದಲ್ಲಿ ಶ್ರೀ ವಾದಿರಾಜರು ರೋಚಕವಾದ ದೃಷ್ಟಾಂತ ವೊಂದನ್ನು ವಿವೇಕಿಗಳಾದ ಧನಿಕರು ನೂರಾರು ಚೀಲ ಅಕ್ಕಿಯ ಸಂಗ್ರಹವನ್ನು ಖಂಡಿತ ಉಪೇಕ್ಷಿಸಲಾರರು. ತಾವು ಧನಿಕರಾದ್ದರಿಂದ ಬೇಕಾದಷ್ಟು ಧಾನ್ಯ ಸಂಗ್ರಹವನ್ನು ಅವರು ಮಾಡಿಯೇ ತೀರುವರು. ಅದರಂತೆ ಭಗವಂತನೂ ಗುಣಲೋಭಿಯಾಗಿದ್ದಾನೆ. ತನ್ನ ಮಹಾಮಹಿಮೆಯನ್ನು ಸ್ಥಿರೀಕರಿಸಲು ಅವನು ಅನಂತ ಗುಣಗಳನ್ನು ಸಂಗ್ರಹಿಸಿರುವನಂತೆ ತನ್ನ ಈ ಮಹಿಮೆಯನ್ನು ಬ್ರಹ್ಮಸೂತ್ರಕಾರನಾದ ಭಗವಂತನೇ ಬ್ರಹ್ಮಸೂತ್ರಾದಿಗಳಲ್ಲೂ, ತಮ್ಮ ಸ್ವಾಮಿಯ ಈ ಮಹಾಮಹಿಮೆಯನ್ನು ಭಾಷ್ಯಕಾರರಾದ ಆಚಾರ್ಯರು ಭಾಷ್ಯಾದಿ ಗಳಲ್ಲೂ ವರ್ಣಿಸಿದ್ದಾರೆ.

'ಅಥಾತೋ ಬ್ರಹ್ಮಜಿಜ್ಞಾಸಾ' ಎಂಬ ಪ್ರಥಮಸೂತ್ರದಲ್ಲಿ ಬ್ರಹ್ಮಪದದಿಂದ ಹೇಳಿದ ಅನಂತಗುಣಪರಿಪೂರ್ಣತ್ವವೆಂಬ ಭಗವಂತನ ಲಕ್ಷಣದಲ್ಲಿ ಪ್ರಮಾಣ ವನ್ನು ಹೇಳಲು ಮತ್ತು ಅನಂತಗುಣಪರಿಪೂರ್ಣತೆ ಅಸಂಭಾವಿತವೆಂಬ ಶಂಕೆಯನ್ನು ಪರಿಹರಿಸಲು ಸೂತ್ರಕಾರರು 'ಜನ್ಮಾದ್ಯಸ್ಯ ಯತಃ' ಎಂಬ ಎರಡನೆ ಸೂತ್ರದಲ್ಲಿ ಭಗವಂತನಿಗೆ ಜನ್ಮಾದಿಕರ್ತೃತ್ವರೂಪವಾದ ಮತ್ತೊಂದು ಲಕ್ಷಣವನ್ನು ಹೇಳಿದ್ದಾರೆ. ತಮ್ಮ ಗುರುಗಳಾದ ಸೂತ್ರಕಾರರನ್ನನುಸರಿಸಿ ಶ್ರೀಮದಾ-ಚಾರ್ಯರೂ ತಾವು ಮೊದಲು ಹೇಳಿದ ಅನಂತಗುಣಪರಿಪೂರ್ಣತ್ವದಲ್ಲಿ ಪ್ರಮಾಣವನ್ನು ಹೇಳಲು ಮತ್ತು ಅಸಂಭಾವನಾ ಶಂಕೆಯನ್ನು ನಿವಾರಿಸಲು ವಿಶ್ವೋದಯಸ್ಥಿತಿಲಯೋನ್ನಿಯತಿ ಪ್ರದನೆಂದು ಭಗವಂತನನ್ನು ಬಣ್ಣಿಸಿದ್ದಾರೆ. ನಿಯತಿ ಎಂದರೆ ಪ್ರೇರಣೆ. ತತ್ತ್ವಾಭಿಮಾನಿ ದೇವತೆಗಳು ತಮಗೆ ಅವರರಾದ ಜೀವರ ವಿಷಯದಲ್ಲಿ ಆಯಾಯಾ ತತ್ತ್ವಗಳಿಗೆ ಭಗವದಧೀನವಾದ ಪ್ರೇರಕತ್ವವನ್ನು ಪಡೆದಿರುವರು. ಆ ದೇವತೆಗಳಿಗೂ ಇಲ್ಲದ ಉತ್ಕೃಷ್ಟವಾದ ಪ್ರೇರಕತ್ವ ಭಗವಂತನದು ಎಂದು 'ಉನ್ನಿಯತಿ' ಎಂಬಲ್ಲಿರುವ 'ಉತ್' ಉಪಸರ್ಗವು ಹೇಳುವುದು. ಭಗವಂತನ ಈ ಉತ್ಕೃಷ್ಟ ಪ್ರೇರಕತ್ವವೆಂಬ ಮಹಾಮಹಿಮೆಯನ್ನೇ ಭಾಗವತದಲ್ಲಿ 'ಯೋಽಂ...ತಃ ಪ್ರವಿಶ್ಯ ಮಮ ವಾಚಮಿಮಾಂ ಪ್ರಸುಪ್ತಾಂ ಸಂಜೀವಯತ್ಯಖಿಲಶಕ್ತಿಧರಃ ಸ್ವಧಾಮ್ನಾ ।

ಅನ್ಯಾಂಶ್ಚ ಹಸ್ತಚರಣಶ್ರವಣತ್ವಗಾದೀನ್ ಪ್ರಾಣಾನ್ ನಮೋ ಭಗವತೇ ಪುರುಷಾಯ ತುಭ್ಯಂ ॥' ಎಂಬ ಶ್ಲೋಕದಿಂದ ಧ್ರುವನು ಸ್ತುತಿಸಿದ್ದಾನೆ. ಭಗವಂತನ ಪ್ರೇರಕತ್ವವು ಉತ್ಕೃಷ್ಟವಾಗಿರಲು ಕಾರಣ ಅದರ ಅನನ್ಯಾಧೀನತೆ. ಈ ಮೇಲಿನ ಶ್ಲೋಕದಲ್ಲಿ ಸ್ವಧಾಮ್ನಾ - ತನ್ನ ಮಹಿಮೆಯಿಂದ-ಎಂಬ ಪದದಿಂದ ಈ ಸ್ವಾತಂತ್ರ್ಯವನ್ನು ಹೇಳಲಾಗಿದೆ. ಸರ್ವಶಕ್ತನಾದ್ದರಿಂದ ಭಗವಂತನ ಪ್ರೇರಕತ್ವವು ಅನನ್ಯಾಧೀನವಾದುದು ಎಂದು ಅಖಿಲಶಕ್ತಿಧರಃ ಎಂಬ ಪದದಿಂದ ಸೂಚಿಸಲಾಗಿದೆ. ಧ್ರುವನ ಎದುರಿಗೆ ಭಗವಂತ ಬಂದು ನಿಂತಾಗ ಧ್ರುವನಿಗೆ ಮಾತೇ ಹೊರಡಲಿಲ್ಲವಂತೆ. ವಾಗಭಿಮಾನಿಯಾದ ಅಗ್ನಿ ದೇವತೆಗೆ ಸ್ವತಂತ್ರಪ್ರೇರಕತ್ವವಿದ್ದಲ್ಲಿ ಧ್ರುವ ಮಾತನಾಡುವಂತೆ ಪ್ರೇರೇಪಿಸಬಹುದಿತ್ತು. ಧ್ರುವಕಪೋಲಕ್ಕೆ ಭಗವಂತನು ತನ್ನ ಶಂಖವನ್ನು ಸ್ಪರ್ಶಿಸಿ ವಾಗಭಿಮಾನಿ ದೇವತೆಯನ್ನು ಪ್ರೇರಿಸಿದಾಗಲೇ ಧ್ರುವನು ಸ್ತೋತ್ರ ಮಾಡಿದುದು. ಈ ಶ್ಲೋಕದ ಮೂಲಕ ಭಗವಂತನ ಈ ವಿಶಿಷ್ಟ ಮಹಿಮೆಯನ್ನೇ ಧ್ರುವನು ಬಣ್ಣಿಸಿದ್ದಾನೆ.

'ವಿಶ್ವೋದಯ' ಇತ್ಯಾದಿ ಈ ವಿಶೇಷಣದ ಮೂಲಕವೂ ಆಚಾರ್ಯರು ಭಗವಂತನಿಗೆ ಸ್ವೇತರ ಜಗತ್ತಿನ ಸೃಷ್ಟಿಕರ್ತೃತ್ವ, ಸ್ಥಿತಿಕರ್ತೃತ್ವ, ಲಯಕರ್ತೃತ್ವ, ಉತ್ಕೃಷ್ಟಪ್ರೇರಕತ್ವ ಎಂಬ ಅನೇಕ ಲಕ್ಷಣಗಳನ್ನು ಹೇಳಿದ್ದಾರೆ. ಈ ವಿಶೇಷಣವು, ಹಿಂದೆ ಹೇಳಿದಂತೆ ಭಗವಂತನ ಅನಂತಗುಣಪರಿಪೂರ್ಣತ್ವ ವಿಷಯದಲ್ಲಿ ಪ್ರಮಾಣಗಳನ್ನು ಸೂಚಿಸುವುದು. ಸೂಚಿಸಿರುವ ಪ್ರಮಾಣಗಳು ಅನುಮಾನ ವಾಗಿದ್ದು ಅದನ್ನು ಹೀಗೆ ನಿರೂಪಿಸಬಹುದು — "ಶ್ರೀಮನ್ನಾರಾಯಣಃ ಪರಿಪೂರ್ಣಜ್ಞಾನಾನಂದಾದಿಗುಣವಾನ್ ಭವಿತು ಮರ್ಹತಿ, ಸ್ವೇತರಜಗ-ತ್ಸ್ರಷ್ಟೃತ್ವಾತ್, ಸ್ವೇತರಜಗತ್ಪಾಲಕತ್ವಾತ್, ಸ್ವೇತರ ಜಗತ್ಸಂಹರ್ತೃತ್ವಾತ್, ವ್ಯತಿರೇಕೇಣ ದೇವದತ್ತವತ್" । ಒಂದು ಪ್ರಮಾಣದಿಂದಲೇ ಅನಂತಗುಣ ಪರಿಪೂರ್ಣತ್ವವನ್ನು ಸಾಧಿಸಬಹುದಾದರೂ 'ಬಹುಪ್ರಮಾಣಸಂವಾದಶ್ಚ ದಾರ್ಢ್ಯಹೇತುರೇವ' ಎಂಬ ಆಚಾರ್ಯರ ಮಾತನ್ನನು ಸರಿಸಿ ದಾರ್ಢ್ಯಕ್ಕಾಗಿ ಅನೇಕ ಪ್ರಮಾಣಗಳನ್ನು ಇಲ್ಲಿ ಹೇಳಲಾಗಿದೆ. ಈ ಅನುಮಾನಗಳೂ ಶ್ರುತಿಸಿದ್ಧವಾದ ಅನುಕೂಲತರ್ಕ ಮತ್ತು ಯುಕ್ತಿಸಿದ್ಧವಾದ ಅನುಕೂಲ ತರ್ಕಗಳಿಂದ ಸಹಿತವಾಗಿದ್ದು ಅತ್ಯಂತ ಪ್ರಬಲವಾಗಿವೆ. ಈ ಅನುಮಾನಗಳಿಗೆ ಸಹಾಯಕವಾಗುವ ಶ್ರುತಿಸಿದ್ಧವಾದ ಅನುಕೂಲತರ್ಕ ಹೀಗಿದೆ — ಆಪ್ತಸಕಲ ಕಾಮನಾದ ಭಗವಂತ ಯಾವುದೋ ಪ್ರಯೋಜನದ ಉದ್ದೇಶದಿಂದ ಸಕಲ

ಜಗತ್ತಿನ ಸೃಷ್ಟ್ಯಾದಿಗಳನ್ನು ಮಾಡುವುದಂತೂ ಸಾಧ್ಯವಿಲ್ಲ. ಆದ್ದರಿಂದ ಆನಂದಪೂರ್ಣನಾಗಿರುವ ಕಾರಣದಿಂದಲೇ ಭಗವಂತನು ಜಗತ್ಸೃಷ್ಟ್ಯಾದಿ ಕ್ರಿಯೆಗಳಲ್ಲಿ ತೊಡಗಿರುವನೆಂದು ಹೇಳಬೇಕು— ಅನುಕೂಲತರ್ಕವು 'ಕೋ ಹ್ಯೇವಾನ್ಯಾತ್ ಕಃ ಪ್ರಾಣ್ಯಾತ್ ಯದೇಷ ಆಕಾಶ ಆನಂದೋ ನ ಸ್ಯಾತ್' ಎಂಬ ತೈತ್ತಿರೀಯಶ್ರುತಿಸಿದ್ಧವಾಗಿದೆ. ಯುಕ್ತಿಸಿದ್ಧವಾಗುವ ಅನುಕೂಲತರ್ಕ ಹೀಗಿದೆ— ಯಾವುದೇ ಪದಾರ್ಥವನ್ನು ಸೃಷ್ಟಿ ಮಾಡುವವನಿಗೆ ಆ ಪದಾರ್ಥದ ಉಪಾದಾನಕಾರಣದ ಅಪರೋಕ್ಷಜ್ಞಾನ, ಆ ಪದಾರ್ಥವನ್ನು ನಿರ್ಮಿಸುವ ಸಾಮರ್ಥ್ಯ ಮೊದಲಾದವುಗಳು ಇದ್ದೇ ಇರಬೇಕು. ಆದ್ದರಿಂದ ಇಂತಹ ಅನಂತ ಜಗತ್ತಿನ ಸೃಷ್ಟಿಕರ್ತನಿಗೆ ಅನಂತ ಜಗದುಪಾದಾನಗಳ ಅಪರೋಕ್ಷ ಜ್ಞಾನ, ಅವುಗಳನ್ನು ನಿರ್ಮಿಸುವ ಪರಿಪೂರ್ಣಶಕ್ತಿ ಮೊದಲಾದವುಗಳು ಇದ್ದೇ ಇರಬೇಕು. ಹೀಗೆ ಶ್ರುತಿಯುಕ್ತಿಸಿದ್ಧವಾದ ಅನುಕೂಲತರ್ಕಗಳ ಅನುಗ್ರಹ ವಿರುವುದರಿಂದಲೇ ಭಗವಂತನ ಅನಂತಗುಣಪರಿಪೂರ್ಣತ್ವಸಾಧಕ ಅನು-ಮಾನ ಪ್ರಮಾಣಗಳನ್ನು ಅಪ್ರಯೋಜಕವೆಂದು ದೂಷಿಸುವುದು ಸಾಧ್ಯವಿಲ್ಲ. ಆದ್ದರಿಂದ ಸಕಲಜಗಜ್ಜನ್ಮಾದಿಕರ್ತನಾದ ಭಗವಂತನು ಅನಂತಗುಣಪೂರ್ಣ ನೆಂದು ಸಿದ್ಧವಾಗುವುದು. ಈ ಎಲ್ಲ ವಿಷಯಗಳನ್ನು ಸೂಚಿಸುವ ಸಲುವಾಗಿಯೇ ಆಚಾರ್ಯರು 'ವಿಶ್ವ' ಎಂಬ ಪದವನ್ನುಪಯೋಗಿಸಿದ್ದಾರೆ. ಸಮಸ್ತ ಜಗತ್ತಿಗೂ ಸೃಷ್ಟ್ಯಾದಿಗಳನ್ನು ಕೊಡುವವನೆಂದು ಆ ವಿಶೇಷಣದ ಅರ್ಥ ವಾಗುವುದು. ಶ್ರುತಿ-ಯುಕ್ತಿಗಳಿಂದ ಸೂಚಿತವಾಗುವ ತರ್ಕವನ್ನು ಪರಿಶೀಲಿಸಿ ದಾಗ ಆನಂದ, ಜ್ಞಾನ, ಶಕ್ತಿ ಮೊದಲಾದ ಅನಂತ ಕಲ್ಯಾಣಗುಣಪೂರ್ಣತೆ ಯನ್ನು ಭಗವಂತನಿಗೆ ಒಪ್ಪದಿದ್ದರೆ ಸಕಲಜಗಜ್ಜನ್ಮಾದಿಕರ್ತೃತ್ವವು ಭಗವಂತನಿಗೆ ಇರುವುದು ಹೇಗೆ ಸಾಧ್ಯ ಎಂಬುದು ಆಚಾರ್ಯರ ಭಾವವಾಗಿದೆ.

ಭಗವಂತನಿಗೆ ಅನಂತಗುಣಪೂರ್ಣತೆಯು ಅಸಂಭಾವಿತವೆಂಬ ಆಶಂಕೆ ಯನ್ನೂ ಜಗಜ್ಜನ್ಮಾದಿಕರ್ತೃತ್ವರೂಪವಾದ ಲಕ್ಷಣವು ಪರಿಹರಿಸುತ್ತದೆ. ಇತರರಿಗೆ ಅನಂತಗುಣಪೂರ್ಣತ್ವವು ಅಸಂಭಾವಿತವಾಗಿರಬಹುದು. ಆದರೆ ಇಂತಹ ಅದ್ಭುತ ಜಗತ್ತಿನ ಸೃಷ್ಟಿಕರ್ತನೂ ಲಕ್ಷ್ಮೀಪತಿಯೂ ಆದ ಭಗವಂತನಿಗೆ ಅನಂತ ಗುಣಪೂರ್ಣತ್ವವು ಅತ್ಯಂತ ಸಂಭಾವಿತವೆಂದೇ ಹೇಳಬೇಕಾಗುವುದು.

'ಜ್ಞಾನಪ್ರದಾಯ' ಎಂದು ಪ್ರತ್ಯೇಕವಾಗಿ ಮತ್ತೊಂದು ವಿಶೇಷಣವನ್ನು ಆಚಾರ್ಯರು ಈ ಮಂಗಲಶ್ಲೋಕದಲ್ಲಿ ಕೊಟ್ಟಿದ್ದಾರೆ. ಸೃಷ್ಟ್ಯಾದಿಗಳಲ್ಲೇ

ಜ್ಞಾನವನ್ನೂ ಸೇರಿಸಿದ್ದರೆ ಪ್ರತ್ಯೇಕ ವಿಶೇಷಣ ಕೊಡುವ ಅಗತ್ಯವೇನಿರಲಿಲ್ಲ. ಆದರೆ ಚೇತನಾಚೇತನಾತ್ಮಕವಾದ ಸಮಸ್ತ ಜಗತ್ತಿಗೂ ಸೃಷ್ಟ್ಯಾದಿಗಳನ್ನು ಭಗವಂತ ಕೊಟ್ಟರೂ, ಜ್ಞಾನವನ್ನು ಮಾತ್ರ ಅಚೇತನಗಳಿಗೆ ಕೊಡದೆ ಚೇತನರಿಗೆ ಕೊಡುವನು. ಚೇತನರಲ್ಲೂ ಉತ್ತಮಾಧಿಕಾರಿಗಳಿಗೆ ಉತ್ತಮವಾದ ಜ್ಞಾನ, ಮಧ್ಯಮಾಧಿಕಾರಿಗಳಿಗೆ ಮಧ್ಯಮಜ್ಞಾನ, ಅಧಮಾಧಿಕಾರಿಗಳಿಗೆ ಅಧಮಜ್ಞಾನ, ಹೀಗೆ ಅಧಿಕಾರಿಗಳ ಯೋಗ್ಯತಾನುಸಾರ ಜ್ಞಾನವಿಶೇಷವನ್ನು ನೀಡುವನು. ಈ ಎಲ್ಲ ವಿಶೇಷಗಳನ್ನು ಸೂಚಿಸುವ ಉದ್ದೇಶದಿಂದ ಆಚಾರ್ಯರು 'ಜ್ಞಾನ ಪ್ರದಾಯ' ಎಂದು ಪ್ರತ್ಯೇಕ ವಿಶೇಷಣವನ್ನು ಕೊಟ್ಟಿರುವರು.

'ವಿಬುಧಾಸುರಸೌಖ್ಯದುಃಖಸತ್ಕಾರಣಾಯ' ಎಂಬ ವಿಶೇಷಣದಲ್ಲಿ ವಿಬುಧ ಪದಕ್ಕೆ ದೇವತೆಗಳು ಎಂದಿಷ್ಟೇ ಅರ್ಥವಾಗುವುದಾದರೂ ಪ್ರಕೃತ, ಈ ಪದವು ಲಕ್ಷಣಾವೃತ್ತಿಯಿಂದ ಉತ್ತಮ ಜೀವರನ್ನು ಹೇಳುವುದು. ಹಾಗೆಯೇ ಅಸುರ ಪದಕ್ಕೆ ರಾಕ್ಷಸರೆಂದಷ್ಟೇ ಅರ್ಥ ಹೇಳದೆ ಲಕ್ಷಣಯಾ ಅಧಮಜೀವರೆಂಬ ಅರ್ಥವನ್ನು ಹೇಳಬೇಕು. ಅದರಂತೆ, ಈ ಎರಡೂ ಪದಗಳಿಂದ ಎರಡೂ ಬಗೆಯ ಸ್ವಭಾವವಿರುವ ಮಧ್ಯಮಜೀವರನ್ನು ಗ್ರಹಿಸಬೇಕು. ಸೌಖ್ಯಪದಕ್ಕೆ ಸುಖಿನಃ ಭಾವಃ ಎಂದು ವಿಗ್ರಹ. ಸುಖಿಶಬ್ದದಲ್ಲಿರುವ ಮತುಪ್ ಪ್ರತ್ಯಯವು ಸುಖದ ಪ್ರಾಶಸ್ತ್ಯವನ್ನು ಹೇಳುವುದು. ಸುಖದ ಪ್ರಾಶಸ್ತ್ಯವೆಂದರೆ ಜೀವಸ್ವರೂಪ ವಾಗಿರುವಿಕೆಯೇ ಆಗಿದೆ. ಒಟ್ಟಿನಲ್ಲಿ ಸೌಖ್ಯವೆಂದರೆ ಸ್ವಾಭಾವಿಕವಾದ ಸುಖವೆಂದರ್ಥ. ಹೀಗೆ ಸುಖವು ಉತ್ತಮ ಜೀವರ ಸ್ವರೂಪವೇ ಆಗಿದ್ದರೂ ಉತ್ತಮ ಜೀವರು, ಭೇದಪ್ರತಿನಿಧಿಯಾಗಿ ವಿಶೇಷದ ಸಾಮರ್ಥ್ಯದಿಂದ ಸುಖವುಳ್ಳವರೂ ಆಗಿದ್ದಾರೆ. ಈ ವೈಶಿಷ್ಟ್ಯವನ್ನು ಸೂಚಿಸುವುದಕ್ಕಾಗಿಯೇ ಆಚಾರ್ಯರು ಸುಖಿಶಬ್ದದಿಂದ ನಿಷ್ಪನ್ನವಾಗುವ ಸೌಖ್ಯಪದವನ್ನು ಪ್ರಯೋಗಿಸಿದ್ದಾರೆ. ಉತ್ತಮ ಜೀವರಿಗೆ ಕೇವಲ ಸುಖವನ್ನೂ, ಅಧಮ ಜೀವರಿಗೆ ಕೇವಲ ದುಃಖವನ್ನೂ ಕೊಡುವಂತೆ ಮಧ್ಯಮ ಜೀವರಿಗೆ ಸುಖ-ದುಃಖ ಗಳೆರಡನ್ನೂ ಭಗವಂತನು ಕೊಡುವನೆಂದು 'ವಿಬುಧಾಸುರಸೌಖ್ಯ ದುಃಖ ಸತ್ಕಾರಣಾಯ' ಎಂಬ ಸಮಾಸಪದ ಪ್ರಯೋಗದಿಂದಲೇ ಆಚಾರ್ಯರು ಸೂಚಿಸುತ್ತಿದ್ದಾರೆ. ಜೀವರ ಸುಖ ದುಃಖಾದಿಗಳಿಗೆ ಕಾಲ, ಅದೃಷ್ಟ ಮೊದಲಾದವುಗಳೂ ಕಾರಣವಾಗಿವೆ. ಅವುಗಳನ್ನೆಲ್ಲ ವ್ಯಾವೃತ್ತಿಗೊಳಿಸಲು 'ಸತ್ಕಾರಣಾಯ' ಎಂಬಲ್ಲಿ 'ಸತ್' ಪದವನ್ನು ಪ್ರಯೋಗಿಸಲಾಗಿದೆ. 'ಸಚ್ಛಬ್ದ

ಉತ್ತಮಂ ಬ್ರೂಯಾತ್' ಎಂಬ ವಾಕ್ಯದಂತೆ 'ಸತ್' ಶಬ್ದಕ್ಕೆ ಉತ್ತಮನೆಂದರ್ಥ. ಕಾಲ, ಅದೃಷ್ಟ ಮೊದಲಾದವುಗಳೂ ಕಾರಣವಾಗಬಹುದಾದರೂ ಉತ್ತಮ ಕಾರಣ ಭಗವಂತನೊಬ್ಬನೇ ಎಂದು ಭಾವ.

ಸಮಸ್ತ ಜಗತ್ತನ್ನೂ ಸೃಜಿಸಿ ಅದರ ಪಾಲನ, ನಿಯಂತ್ರಣ ಮೊದಲಾದವು ಗಳನ್ನು ಮಾಡಬೇಕಾದರೆ ಭಗವಂತನು ಸರ್ವವ್ಯಾಪಿಯೂ ಆಗಿರಬೇಕು. ಈ ಅಂಶವನ್ನು ಸೂಚಿಸುವುದಕ್ಕಾಗಿಯೇ ಸರ್ವವ್ಯಾಪಿ ಎಂಬರ್ಥದ ವಿತತಾಯ ಎಂಬ ವಿಶೇಷಣವನ್ನು ಕೊಡಲಾಗಿದೆ. ವಿತತ ಎಂಬಲ್ಲಿ 'ವಿ' ಎಂಬ ಉಪಸರ್ಗಕ್ಕೆ ವಿಶೇಷ, ವಿಲಕ್ಷಣ ಎಂಬ ಎರಡು ಅರ್ಥಗಳಿವೆ. ಭಗವಂತನಂತೆ ಆಕಾಶಾದಿ ಗಳೂ ತತಿಯನ್ನು ಅಂದರೆ ವ್ಯಾಪ್ತಿಯನ್ನು ಪಡೆದಿವೆ. ಆದರೆ ಗಗನಾದಿಗಳ ತತಿಯು ಪರಾಧೀನವಾಗಿದ್ದು ಭಗವಂತನ ತತಿಯು ಸ್ವಾತಂತ್ರ್ಯರೂಪವಾದ ವಿಶೇಷವನ್ನು ಪಡೆದಿದೆ ಎಂದು ವಿಶೇಷಾರ್ಥಕವಾದ 'ವಿ' ಪದದಿಂದ ತಿಳಿಯುತ್ತದೆ. ಹಾಗೆಯೇ, ಅದ್ವೈತಮತದಲ್ಲಿ ಭಗವಂತನು ತತ ಅಂದರೆ ಸರ್ವವಸ್ತುಗಳಿಂದ ಅಭಿನ್ನವೆಂದು ವಿವರಿಸಲಾಗಿದೆ. ಆ ಅಭಿಪ್ರಾಯವನ್ನು ನಿರಾಕರಿಸುವುದೂ 'ವಿ' ಪದದ ಉದ್ದೇಶವಾಗಿದೆ. ವಿಲಕ್ಷಣ ಎಂಬ ಅರ್ಥದ 'ವಿ' ಸಹಿತವಾದ ವಿತತ ಪದವು ಭಗವಂತನು ಸರ್ವವಿಲಕ್ಷಣನಾಗಿದ್ದೇ ಸರ್ವ ವ್ಯಾಪಿಯಾಗಿರುವನೆಂದು ಸ್ಪಷ್ಟಪಡಿಸುತ್ತದೆ.

ಹೀಗೆ ಈ ಮಂಗಲಶ್ಲೋಕದಲ್ಲಿ ಪ್ರತಿಯೊಂದು ವಿಶೇಷಣವೂ ಅನೇಕ ವಿಷಯಗಳನ್ನು ಸೂಚಿಸುತ್ತಿವೆ ಎಂದು ಪ್ರತಿಪಾದಿಸಿರುವ ಶ್ರೀ ವಾದಿರಾಜರು ಇನ್ನೊಂದು ದೃಷ್ಟಿಯಿಂದಲೂ ಈ ಶ್ಲೋಕವನ್ನು ವ್ಯಾಖ್ಯಾನಿಸಬಹುದೆನ್ನುತ್ತಾರೆ. ಅದರಂತೆ 'ಪರಿಪೂರ್ಣಗುಣಾರ್ಣವಾಯ' ಎಂಬ ಮೊದಲನೆ ವಿಶೇಷಣವು ಭಗವಂತನ ಗುಣಗಳನ್ನು ಸಾಮಾನ್ಯವಾಗಿ ಉಲ್ಲೇಖಿಸುತ್ತದೆ. ಉಳಿದ ನಾಲ್ಕು ವಿಶೇಷಣಗಳು ಆ ಗುಣಗಳಲ್ಲಿ ಕೆಲವನ್ನು ವಿಶೇಷವಾಗಿ ಉಲ್ಲೇಖಿಸುವ ಮೂಲಕ ಮೊದಲನೆ ವಿಶೇಷಣದ ವಿವರಣರೂಪವಾಗಿವೆ ಎಂದೂ ಹೇಳಬಹುದು. ॥ ೧ ॥

ಮುಂದೆ ಭಗವಂತನು ಮಾಡುವ ನಾನಾವಿಧವಾದ ಸೃಷ್ಟಿಯನ್ನು ವಿವರಿಸಲಿರುವ ಆಚಾರ್ಯರು ಸೃಷ್ಟಿಕರ್ತನು ತಾನು ಸೃಜಿಸುವ ಪದಾರ್ಥ ಗಳಿಗಿಂತಲೂ ಮುಂಚೆ ಇರುವನು ಎಂಬ ಸಾಮಾನ್ಯ ನಿಯಮದಂತೆ

ಭಗವಂತನೂ ತಾನು ಸೃಷ್ಟಿಸುವ ಅಶೇಷ ಜಗತ್ತಿನ ಉತ್ಪತ್ತಿಗೆ ಮುಂಚೆ ಇದ್ದನೆಂಬ ಪ್ರಮೇಯವನ್ನು ಈ ಮುಂದಿನ ಶ್ಲೋಕದಲ್ಲಿ ನಿರೂಪಿಸುತ್ತಿದ್ದಾರೆ—

**ಆಸೀದುದಾರಗುಣವಾರಿಧಿರಪ್ರಮೇಯೋ**
**ನಾರಾಯಣಃ ಪರತಮಃ ಪರಮಾತ್ ಸ ಏಕಃ ।**
**ಸಂಶಾಂತಸಂವಿದಖಿಲಂ ಜಠರೇ ನಿಧಾಯ**
**ಲಕ್ಷ್ಮೀಭುಜಾಂತರಗತಃ ಸ್ವರತೋಽಪಿ ಚಾಗ್ರೇ ॥ ೨ ॥**

**ಅರ್ಥ :- ಉದಾರಗುಣವಾರಿಧಿ** ಉತ್ಕೃಷ್ಟವಾದ ಗುಣಗಳಿಂದ ಸಮುದ್ರನಂತಿರುವ **ಅಪ್ರಮೇಯಃ** ಪೂರ್ಣವಾಗಿ ಯಾರಿಂದಲೂ ತಿಳಿಯಲು ಸಾಧ್ಯವಿಲ್ಲದ **ಪರಮಾತ್ ಪರತಮಃ** ಬ್ರಹ್ಮಾದಿಗಳಿಗಿಂತ ಶ್ರೇಷ್ಠಳಾದ ಲಕ್ಷ್ಮೀದೇವಿಗಿಂತಲೂ ಶ್ರೇಷ್ಠನಾದ **ಸಃ ನಾರಾಯಣಃ ಏಕಃ** ಆ ನಾರಾಯಣನೊಬ್ಬನೆ **ಅಗ್ರೇ** ಜಗತ್ತಿನ ಉತ್ಪತ್ತಿಗೆ ಮುಂಚೆ **ಸಂಶಾಂತಸಂವಿತ್** ತನ್ನ ಬುದ್ಧಿಯಲ್ಲೇ ನಿಗೂಢವಾಗಿರುವ ಜ್ಞಾನವುಳ್ಳವನಾಗಿ **ಅಖಿಲಂ ಜಠರೇ ನಿಧಾಯ** ಸಕಲ ಜಗತ್ತನ್ನೂ ತನ್ನ ಉದರದಲ್ಲೇ ಇಟ್ಟುಕೊಂಡು **ಲಕ್ಷ್ಮೀಭುಜಾಂತರಗತಃ ಅಪಿ** ಲಕ್ಷ್ಮೀದೇವಿಯ ಭುಜಗಳ ಮಧ್ಯೆ ಇದ್ದವನಾದರೂ **ಸ್ವರತಃ** ಲಕ್ಷ್ಮೀದೇವಿಯಿಂದ ಆನಂದವನ್ನು ಪಡೆಯದೆ ತನ್ನಿಂದಲೇ ತಾನು ಆನಂದವನ್ನು ಅನುಭವಿಸುತ್ತ **ಆಸೀತ್** ಇದ್ದನು.

**ತಾತ್ಪರ್ಯ :-** ಅತ್ಯುತ್ಕೃಷ್ಟನಾದ, ಅನಂತಗುಣಪರಿಪೂರ್ಣನಾದ ನಾರಾಯಣನು ಪೂರ್ಣವಾಗಿ ಯಾರಿಂದಲೂ ತಿಳಿಯಲಸಾಧ್ಯನು. ಬ್ರಹ್ಮಾದಿ ದೇವತೆಗಳಿಗಿಂತ ಶ್ರೇಷ್ಠಳಾದ ರಮೆಗಿಂತಲೂ ಶ್ರೇಷ್ಠನು. ಅವನೊಬ್ಬನೇ ಈ ಜಗತ್ತಿನ ಉದಯಕ್ಕಿಂತ ಮೊದಲು ಪ್ರಲಯಕಾಲದಲ್ಲಿರುವವನು. ಆ ಸಮಯದಲ್ಲಿ ಉಪದೇಶ ಯೋಗ್ಯರಾದ ಜೀವರೇ ಇಲ್ಲದಿರುವುದರಿಂದ ಎಲ್ಲ ಜ್ಞಾನವನ್ನೂ ತನ್ನ ಬುದ್ಧಿಯಲ್ಲೇ ಇಟ್ಟುಕೊಂಡಿರುವನು. ಸಮಸ್ತ ಜಗತ್ತೂ ಆ ಕಾಲದಲ್ಲಿ ಅವನ ಉದರದಲ್ಲಿರುವುದು. ಲಕ್ಷ್ಮೀದೇವಿಯಿಂದ ಆಲಿಂಗಿತನಾಗಿದ್ದರೂ ಭಗವಂತನ ಆನಂದ ತನ್ನಿಮಿತ್ತವಾದುದಲ್ಲ, ಅವನು ಸ್ವರಮಣ.

**ವಿಶೇಷ ವಿಷಯ :-** ಆಸೀತ್ ಎಂಬ ಕ್ರಿಯಾಪದವು ಜಗತ್ತೆಲ್ಲವೂ ಪ್ರಲಯವಾಗಿರುವ ಕಾಲದಲ್ಲೂ ಭಗವಂತನ ಅಸ್ತಿತ್ವವನ್ನು ಹೇಳುವುದಲ್ಲದೆ,

ಪ್ರಲಯವೇ ಇಲ್ಲದಿರುವುದರಿಂದ ಜಗತ್ತಿಗಿರುವ ಪ್ರಾಗಭಾವವೂ ಭಗವಂತ ನಿಗಿಲ್ಲವೆಂದು ಸೂಚಿಸುವುದು. ಹೀಗೆ ಉತ್ಪತ್ತಿ ನಾಶಗಳೇ ಇಲ್ಲದೆ ಭಗವಂತನು ಯಾವಾಗಲೂ ಸ್ವಾಭಾವಿಕವಾಗಿಯೇ ಇರುವನೆಂದರ್ಥ ವಾಗುವುದು.

ಸ್ವರತಃ ಎಂಬ ಪದಕ್ಕೆ ಸುಷ್ಠು ಅರತಃ ಎಂದೂ, ಸ್ವಸ್ಮಿನ್ನೇವ ರತಃ ಎಂದೂ ಎರಡು ವಿವರಣೆ. ಲಕ್ಷ್ಮಿಯ ಆಲಿಂಗನದಿಂದ ಲಕ್ಷ್ಮಿಗೆ ಆನಂದಾಭಿವ್ಯಕ್ತಿಯೆಂಬ ಪ್ರಯೋಜನವಿದ್ದರೂ ಸರ್ವದಾ ಅಭಿವ್ಯಕ್ತವಾದ ಆನಂದವಿರುವ ಭಗವಂತನಿಗೆ ಅಂತಹ ಪ್ರಯೋಜನವಿಲ್ಲ. ಆದ್ದರಿಂದ ಭಗವಂತನು ಲಕ್ಷ್ಮೀದೇವಿಯಲ್ಲಿ ಸುಷ್ಠು ಅರತ ಅಂದರೆ ತನ್ನಿಮಿತ್ತಕವಾದ ಆನಂದಾಭಿವ್ಯಕ್ತಿರಹಿತನು. ಆದರೂ ಅವನು ಸ್ವಸ್ಮಿನ್ನೇವ ರತ - ಸ್ವಸ್ವರೂಪಭೂತವಾದ ನಿತ್ಯಾಭಿವ್ಯಕ್ತವಾದ ಆನಂದವುಳ್ಳವನು. ॥ ೨ ॥

ಜಗತ್ತನ್ನು ಸೃಜಿಸುವುದರಿಂದ ಭಗವಂತನಿಗೆ ಪ್ರಯೋಜನವೇನೂ ಇಲ್ಲದಿದ್ದರೂ ಇತರ ಜೀವರಿಗೆ ಪ್ರಯೋಜನವಿರುವುದೆಂದೂ, ಜ್ಞಾನಪೂರ್ವಕ ಸೃಷ್ಟಿಸುವವನೇ ಸೃಷ್ಟಿಕರ್ತನೆನಿಸುವ ಕಾರಣದಿಂದ ಸೃಷ್ಟಿಕರ್ತನಾದ ಭಗವಂತನಿಗೆ ಸೃಷ್ಟಿಕಾರಣವಾದ ಜ್ಞಾನವಿಶೇಷವು ಅಭಿವ್ಯಕ್ತವಾಯಿತೆಂದೂ ಈ ಮುಂದಿನ ಶ್ಲೋಕದಲ್ಲಿ ಹೇಳಲಾಗಿದೆ—

**ತಸ್ಯೋದರಸ್ಥಜಗತಃ ಸದಮಂದಸಾಂದ್ರ-**
**ಸ್ವಾನಂದತುಷ್ಟವಪುಷೋಽಪಿ ರಮಾರಮಸ್ಯ ।**
**ಭೂತ್ಯೈ ನಿಜಾಶ್ರಿತಜನಸ್ಯ ಹಿ ಸೃಜ್ಯಸೃಷ್ಟಾ-**
**ವೀಕ್ಷಾ ಬಭೂವ ಪರನಾಮನಿಮೇಷಕಾಂತೇ ॥ ೩ ॥**

**ಅರ್ಥ :- ಉದರಸ್ಥ ಜಗತಃ** ತನ್ನ ಉದರದಲ್ಲಿ ಸಮಸ್ತ ಜಗತ್ತನ್ನೂ ಧರಿಸಿರುವ **ಸದಮಂದಸಾಂದ್ರಸ್ವಾನಂದತುಷ್ಟವಪುಷೋಽಪಿ** ನಿರ್ದೋಷವೂ, ಪೂರ್ಣವೂ, ಗಾಢವೂ, ಸ್ವರೂಪಭೂತವೂ ಆದ ಆನಂದದಿಂದ ತೃಪ್ತವಾದ ದೇಹವುಳ್ಳವನಾದರೂ **ತಸ್ಯ ರಮಾರಮಸ್ಯ** ಆ ರಮಾರಮಣನಿಗೆ **ನಿಜಾಶ್ರಿತ ಜನಸ್ಯ** ತನ್ನನ್ನು ಆಶ್ರಯಿಸಿಕೊಂಡಿರುವ ಜೀವಸಮೂಹದ **ಭೂತ್ಯೈ** ಐಶ್ವರ್ಯ ಕ್ಕಾಗಿ **ಪರನಾಮನಿಮೇಷಕಾಂತೇ** ಪರ ಎಂಬ ಹೆಸರಿನ, ಭಗವಂತನು ಕಣ್ಣುಮುಚ್ಚಿರುವ ಕಾಲವಾದ ಪ್ರಲಯ ಕಾಲದ ಕೊನೆಯಲ್ಲಿ **ಸೃಜ್ಯಸೃಷ್ಟೌ**

ಸೃಷ್ಟಿಯೋಗ್ಯವಾದ ಪದಾರ್ಥಗಳ ಸೃಷ್ಟಿಗಾಗಿ **ಈಕ್ಷಾ** ಜ್ಞಾನ ವಿಶೇಷವು **ಬಭೂವ ಹಿ** ಅಭಿವ್ಯಕ್ತವಾಯಿತು.

**ತಾತ್ಪರ್ಯ :-** ಭಗವಂತನು ದೋಷಲೇಶವೂ ಇಲ್ಲದ, ಪರಿಪೂರ್ಣ ಮತ್ತು ಗಾಢವಾದ ಆನಂದಸ್ವರೂಪನೇ ಆಗಿದ್ದಾನೆ. ಇಂತಹ ಆನಂದದಿಂದ ಪರಮಾತ್ಮ ನಿತ್ಯತೃಪ್ತ. ಆದರೂ, ಪ್ರಲಯಕಾಲದಲ್ಲಿ ತನ್ನ ಉದರದಲ್ಲಿ ಸಮಸ್ತ ಜಗತ್ತನ್ನೂ ಧರಿಸಿರುವ ಆ ಲಕ್ಷ್ಮೀಪತಿಗೆ ತನ್ನನ್ನು ಆಶ್ರಯಿಸಿಕೊಂಡಿರುವ ರಮಾಬ್ರಹ್ಮಾದಿ ಸಕಲ ಜೀವಸಮೂಹಕ್ಕೆ ಐಶ್ವರ್ಯ ಲಭಿಸಲೆಂಬ ಉದ್ದೇಶ ದಿಂದ ಸೃಷ್ಟಿಗೆ ಆವಶ್ಯಕವಾದ ಜ್ಞಾನವಿಶೇಷವು ಅಭಿವ್ಯಕ್ತವಾಯಿತು.

**ವಿಶೇಷ ವಿಷಯ :-** ಸೃಷ್ಟಿ ಮಾಡುವುದರಿಂದ ರಮಾದೇವಿಗೆ ಲಭಿಸುವ ಐಶ್ವರ್ಯವೆಂದರೆ 'ನನ್ನ ಪತಿ ಇಂತಹ ಅದ್ಭುತ ಐಶ್ವರ್ಯವುಳ್ಳವನು' ಎಂದು ಹರ್ಷೋದ್ರೇಕ. ಉಳಿದ ಬ್ರಹ್ಮಾದಿ ಜೀವರಿಗೆ ಸತ್ಯಲೋಕ ಮೊದಲಾದ ಉತ್ತಮ ಲೋಕಪ್ರಾಪ್ತಿಯೇ ಐಶ್ವರ್ಯ.

ಪರನಾಮನಿಮೇಷಕಾಂತೇ — ಇಲ್ಲಿ ನಿಮೇಷವೆಂದರೆ ಭಗವಂತನು ಪ್ರಲಯ ಕಾಲದಲ್ಲಿ ತನ್ನ ಚಕ್ಷುಸ್ಸನ್ನು ಮುಚ್ಚಿರುವ ಕಾಲ. ನಮ್ಮಂತೆ ಭಗವಂತನ ಆಯುಸ್ಸನ್ನೂ ನಿಮೇಷಗಳ ಗಣನೆಯಿಂದ ಅಳೆಯುವುದಾದರೆ ನಮ್ಮ ಆಯುಸ್ಸಿನಂತೆ ಭಗವಂತನ ಆಯುಸ್ಸಿಗೂ ಮಿತಿ ಇದೆಯೆಂಬ ಭ್ರಾಂತಿ ಬಂದೀತು. ಆದ್ದರಿಂದ ಔಪಚಾರಿಕವಾಗಿ ನಿಮೇಷಪದವನ್ನು ಇಲ್ಲಿ ಉಪಯೋಗಿಸ ಲಾಗಿದೆ ಹೊರತು ಸ್ವಾಭಾವಿಕವಾಗಿ ಆಯುಸ್ಸನ್ನು ಗಣನೆ ಮಾಡುವ ದೃಷ್ಟಿಯಿಂದಲ್ಲ ಎಂಬುದನ್ನು ಸೂಚಿಸುವ ಸಲುವಾಗಿ ನಿಮೇಷಕ ಎಂದು ಕ ಪ್ರತ್ಯಯವನ್ನು ಪ್ರಯೋಗಿಸಲಾಗಿದೆ. ಕ ಪ್ರತ್ಯಯವು ಭಗವಂತನ ನಿಮೇಷ ಕಾಲದಲ್ಲಿ ಕುತ್ಸನ ಎಂದರೆ ತಿರಸ್ಕಾರವನ್ನು ಹೇಳುವ ಮೂಲಕ ಭಗವದ್ವಿಷಯ ದಲ್ಲಿ ಈ ಕಾಲ ಪರಿಗಣನೆ ಔಪಚಾರಿಕವಾದುದೆಂದು ಸೂಚಿಸುತ್ತದೆ. ಚತುರ್ಮುಖ ಬ್ರಹ್ಮನ ನೂರು ವರ್ಷಗಳಿಗೆ ಪರ ಎಂದು ಹೆಸರು. ಸೃಷ್ಟಿಕಾಲ ನೂರು ವರ್ಷಗಳಿರುವಂತೆ ಪ್ರಲಯಕಾಲವೂ ನೂರುವರ್ಷಗಳದ್ದಾಗಿರುವುದು. ಆದ್ದರಿಂದಲೇ ಇಲ್ಲಿ ನಿಮೇಷಕವನ್ನು ಪರನಾಮಪರ ಎಂಬ ಹೆಸರುಳ್ಳ ಎಂದು ಹೇಳಲಾಗಿದೆ. ॥ ೩ ॥

ತನ್ನ ಉದರದಲ್ಲಿರುವ ಜೀವರ ಅವಸ್ಥೆಯನ್ನು ಭಗವಂತನು ನೋಡಿದ ಬಗೆಯನ್ನು ಈ ಮುಂದಿನ ಶ್ಲೋಕದಲ್ಲಿ ವರ್ಣಿಸಲಾಗಿದೆ—

**ದೃಷ್ಟ್ವಾ ಸ ಚೇತನಗಣಾನ್ ಜಠರೇ ಶಯಾನಾನ್**
**ಆನಂದಮಾತ್ರವಪುಷಃ ಸೃತಿವಿಪ್ರಮುಕ್ತಾನ್ ।**
**ಧ್ಯಾನಂ ಗತಾನ್ ಸೃತಿಗತಾಂಶ್ಚ ಸುಷುಪ್ತಿಸಂಸ್ಥಾನ್**
**ಬ್ರಹ್ಮಾದಿಕಾನ್ ಕಲಿಪರಾನ್ ಮನುಜಾಂಸ್ತಥೈಕ್ಷತ್ ॥ ೪ ॥**

**ಅರ್ಥ** :- ಸಃ ಆ ಭಗವಂತನು **ಜಠರೇ** ತನ್ನ ಉದರದಲ್ಲಿ **ಶಯಾನಾನ್** ಮಲಗಿರುವ **ಚೇತನಗಣಾನ್** ಜೀವರ ಸಮೂಹಗಳನ್ನು **ದೃಷ್ಟ್ವಾ** ಸಾಮಾನ್ಯ-ವಾಗಿ ನೋಡಿ ಪುನಃ **ಆನಂದಮಾತ್ರವಪುಷಃ** ಕೇವಲ ಆನಂದವೇ ಶರೀರ ವಾಗುಳ್ಳ **ಸೃತಿವಿಪ್ರಮುಕ್ತಾನ್** ಸಂಸಾರದಿಂದ ವಿಶೇಷವಾಗಿ ಮತ್ತು ಸಂಪೂರ್ಣ ವಾಗಿ ಬಿಡುಗಡೆ ಪಡೆದಿರುವ **ಧ್ಯಾನಂ ಗತಾನ್** ಧ್ಯಾನವನ್ನು ಮಾಡುತ್ತಿರುವ ಉತ್ತಮ ಮುಕ್ತರನ್ನು **ಐಕ್ಷತ್** ನೋಡಿದನು **ಚ** ಮತ್ತು, **ಸೃತಿಗತಾನ್** ಸಂಸಾರದಲ್ಲಿರುವ **ಬ್ರಹ್ಮಾದಿಕಾನ್** ರುದ್ರದೇವರೇ ಮೊದಲಾದ ಸಜ್ಜೀವರನ್ನೂ **ಕಲಿಪರಾನ್** ಕಲಿಗೆ ಕೊನೆಗೊಳ್ಳುವ ಅಧಮ ಜೀವರನ್ನೂ **ಮನುಜಾನ್** ಮಧ್ಯಮ ಜೀವರನ್ನೂ **ಸುಷುಪ್ತಿಸಂಸ್ಥಾನ್** ಸುಷುಪ್ತ್ಯವಸ್ಥೆಯಲ್ಲಿ ಇರುವವರನ್ನಾಗಿ **ಐಕ್ಷತ್** ನೋಡಿದನು ಉಳಿದ ಮಧ್ಯಮ ಮತ್ತು ಅಧಮ ಮುಕ್ತರನ್ನು **ತಥಾ** ಅವರು ಹೇಗಿರುವರೋ ಹಾಗೆ **ಐಕ್ಷತ್** ನೋಡಿದನು.

**ತಾತ್ಪರ್ಯ** :- ಭಗವಂತನು ತನ್ನ ಉದರದಲ್ಲಿ ಮಲಗಿರುವ ಜೀವರ ಸಮೂಹಗಳನ್ನು ಮೊದಲು ಸಾಮಾನ್ಯ ರೀತಿಯಿಂದ ನೋಡಿದನು. ಅನಂತರ ಪುನಃ, ಸಂಸಾರದಿಂದ ನಿಃಶೇಷವಾಗಿ ಬಿಡುಗಡೆ ಪಡೆದಿರುವ, ಕೇವಲ ಆನಂದ ಶರೀರಿಗಳಾದ ಉತ್ತಮ ಮುಕ್ತರನ್ನು ಧ್ಯಾನಾವಸ್ಥೆಯಲ್ಲಿರುವಂತೆ ನೋಡಿದನು. ಅಂತೆಯೇ ಸಂಸಾರಿಗಳಾದ ರುದ್ರಾದಿ ಉತ್ತಮ ಜೀವರನ್ನೂ ಕಲಿಪರ್ಯಂತ ರಾದ ಅಧಮ ಜೀವರನ್ನೂ ಸುಷುಪ್ತ್ಯವಸ್ಥಾಯುಕ್ತರನ್ನಾಗಿ ನೋಡಿದನು. ಉಳಿದ ಅಧಮ ಮುಕ್ತರನ್ನೂ ಮಧ್ಯಮ ಮುಕ್ತರನ್ನೂ ಅವರಿರುವಂತೆ ಅಂದರೆ ಕೇವಲ ದುಃಖಿಗಳನ್ನಾಗಿಯೂ, ಸುಖದುಃಖಮಿಶ್ರರನ್ನಾಗಿಯೂ ನೋಡಿದನು.

**ವಿಶೇಷ ವಿಷಯ** :- ಭಗವಂತನು ತನ್ನ ಉದರದಲ್ಲಿ ನೋಡಿದ ಜೀವರು ಎರಡು ಬಗೆ. ಲಿಂಗದೇಹಭಂಗ ಪಡೆದ ಮುಕ್ತರು ಮತ್ತು ಸಂಸಾರಿಗಳು. ಉಭಯ ವಿಧಜೀವರೂ ಉತ್ತಮ, ಮಧ್ಯಮ ಮತ್ತು ಅಧಮರೆಂದು ಮೂರು ವಿಧ. ಮುಕ್ತರಲ್ಲಿ ಮಧ್ಯಮ ಮುಕ್ತರು ಸ್ವರೂಪಭೂತ ಸುಖ-ದುಃಖಗಳ ಮಿಶ್ರಣವುಳ್ಳವರು ಅಧಮ ಮುಕ್ತರು ಕೇವಲ ದುಃಖಸ್ವರೂಪಿಗಳು. ಇವರ ಈ ದುರವಸ್ಥೆ ಅತ್ಯಂತ ಹೀನವಾದದ್ದರಿಂದ ಭಗವಂತನೂ ಉಪೇಕ್ಷೆಯಿಂದಲೇ ನೋಡಿದನೆಂದು 'ತಥಾ ಐಕ್ಷತ್' ಎಂಮ ಪದಗಳಿಂದ ಸೂಚಿಸಲಾಗಿದೆ. ಅವರು ಹೇಗಿರುವರೋ ಹಾಗೆ ನೋಡಿದನೆಂದು ಆ ಪದಗಳ ಭಾವ. ಅವರ ದುರವಸ್ಥೆಯನ್ನು ಸ್ಪಷ್ಟವಾಗಿ ಹೇಳದಿರುವುದರಿಂದ ಉಪೇಕ್ಷೆಯು ಸೂಚಿತವಾಗಿದೆ.

ಉತ್ತಮ ಮುಕ್ತರನ್ನು ಇಲ್ಲಿ ವಿಪ್ರಮುಕ್ತರೆಂದು ಕರೆಯಲಾಗಿದೆ. ವಿಪ್ರ, ಎಂಬ ಉಪಸರ್ಗಗಳು ಅಧಮ, ಮಧ್ಯಮ ಮುಕ್ತರಿಗೂ ಉತ್ತಮ ಮುಕ್ತರಿಗೂ ಇರುವ ವೈಲಕ್ಷಣ್ಯವನ್ನು ಸೂಚಿಸುವುದು. ಲಿಂಗದೇಹದಿಂದ ಮುಕ್ತಿಯ ವಿಷಯದಲ್ಲಿ ಅಧಮ-ಮಧ್ಯಮ ಮುಕ್ತರಿಗೂ ಉತ್ತಮ ಮುಕ್ತರಿಗೂ ಸಾಮ್ಯವಿದೆ. ಆದರೆ ಅಧಮ-ಮಧ್ಯಮ ಜೀವರು ಲಿಂಗದೇಹಭಂಗಕ್ಕಿಂತ ಮುಂಚೆ ಭಗವನ್ನಿಂದೆಯಲ್ಲಿ ತೊಡಗಿದ್ದಂತೆ ಲಿಂಗದೇಹಭಂಗದ ನಂತರವೂ ಸ್ವರೂಪದುಃಖದಿಂದಾಗಿ ಭಗವಂತನ ನಿಂದೆ ಮಾಡುವುದರಿಂದ ಮುಕ್ತರಾಗಿಲ್ಲ. ಈ ದೃಷ್ಟಿಯಿಂದ ಅವರನ್ನು ವಿಪ್ರಮುಕ್ತರೆಂದು ಕರೆಯದೆ ಉತ್ತಮ ಜೀವರನ್ನು ಮಾತ್ರ ವಿಪ್ರಮುಕ್ತರೆಂದು ಹೇಳಲಾಗಿದೆ.

'ಸುಷುಪ್ತ್ಯವಸ್ಥೆಯಲ್ಲಿರುವ ಬ್ರಹ್ಮಾದಿಗಳನ್ನು ನೋಡಿದನೆಂದು' ನಿರ್ಣಯ ದಲ್ಲಿದೆ. ಬ್ರಹ್ಮನೇ ಆದಿಯಾಗುಳ್ಳ ಜೀವರು ಬ್ರಹ್ಮಾದಿಗಳು ಎಂಬ ಬಹುವ್ರೀಹಿ ಸಮಾಸವನ್ನು ಅತದ್ಗುಣಸಂವಿಜ್ಞಾನ ಬಹುವ್ರೀಹಿಯೆಂದು ಪರಿಗಣಿಸಬೇಕೆಂದು ಶ್ರೀ ವಾದಿರಾಜರ ಅಭಿಪ್ರಾಯ. ಬ್ರಹ್ಮಾದಿಕಾನ್ ಎಂಬ ಪದವನ್ನು ಅತದ್ಗುಣ ಸಂವಿಜ್ಞಾನ ಬಹುವ್ರೀಹಿಯೆಂದು ಪರಿಗಣಿಸಿದರೆ ಬ್ರಹ್ಮನನ್ನು ಬಿಟ್ಟು ಉಳಿದ ರುದ್ರಾದಿ ಜೀವರು ಆ ಪದದ ಅರ್ಥವಾಗುವರು. ಹೀಗೆ ಅತದ್ಗುಣಸಂವಿಜ್ಞಾನ ಬಹುವ್ರೀಹಿಯೆಂದು ಈ ಸಮಾಸವನ್ನು ಪರಿಗಣಿಸಲು ಶ್ರೀ ವಾದಿರಾಜರು ಕೊಡುವ ಕಾರಣ ಹೀಗಿದೆ—ಚತುರ್ಮುಖ ಬ್ರಹ್ಮನೇ ಮೊದಲಾದ ಜೀವರನ್ನು

ಸುಷುಪ್ತ್ಯವಸ್ಥೆಯಲ್ಲಿರುವಂತೆ ಭಗವಂತನು ನೋಡಿದನೆಂದೇ ಈ ವಾಕ್ಯದ ಅರ್ಥವನ್ನು ಹೇಳಿದರೆ ಸುಷುಪ್ತ್ಯವಸ್ಥೆಯಲ್ಲಿರುವ ಬ್ರಹ್ಮನು ಯಾರೆಂಬ ಪ್ರಶ್ನೆ ಉದ್ಭವಿಸುತ್ತದೆ. ಹಿಂದಿನ ಕಲ್ಪದ ಬ್ರಹ್ಮನು ಕಲ್ಪಾಂತದಲ್ಲಿ ಮುಕ್ತನಾಗಿರುವುದರಿಂದ ಸುಷುಪ್ತ್ಯವಸ್ಥೆಯಲ್ಲಿರುವ ಸಂಸಾರಿ ಬ್ರಹ್ಮನು ಅವನಾಗಿರುವ ಸಾಧ್ಯತೆಯೇ ಇಲ್ಲ. ಇನ್ನೂ ಸಂಸಾರಾವಸ್ಥೆಯಲ್ಲಿ ಭಾವಿ ಬ್ರಹ್ಮನು ಇಲ್ಲಿ ವಿವಕ್ಷಿತನೆಂದೂ ಹೇಳಲಾಗದು. ನಿತ್ಯವಾದ ಆಕಾಶಾದಿ ವಸ್ತುಗಳು ಅನೇಕವಿದ್ದರೂ 'ವಾಯುರ್ವಾವ ನಿತ್ಯಃ' ಎಂದು ವಾಯುವನ್ನು ವಿಶೇಷವಾಗಿ ನಿತ್ಯವೆಂದು ಹೇಳಿರುವುದರ ಕಾರಣವನ್ನು ವಿವರಿಸುತ್ತ ಟೀಕಾಕೃತ್ಪಾದರು ವಾಯುದೇವರ ಸ್ವರೂಪಜ್ಞಾನವಲ್ಲದೆ ಬಾಹ್ಯಜ್ಞಾನವೂ ನಿತ್ಯವಾದುದರಿಂದ ವಾಯುದೇವರನ್ನು ವಿಶೇಷವಾಗಿ ನಿತ್ಯನೆಂದು ಹೇಳಲಾಗಿದೆ ಎಂದಿರುವರು. ಸಂಸಾರಿಯಾದ ಬ್ರಹ್ಮದೇವರ ಬಾಹ್ಯಜ್ಞಾನವೂ ಹೀಗೆ ನಿತ್ಯವಾಗಿರುವುದಾದರೆ ಅವರಿಗೂ ಸುಷುಪ್ತ್ಯವಸ್ಥೆ ಇರಲು ಸಾಧ್ಯವಿಲ್ಲ. ಹೀಗೆ ಬ್ರಹ್ಮದೇವರಿಗೆ ಸುಷುಪ್ತ್ಯವಸ್ಥೆಯೇ ಅಸಂಭಾವಿತವಾದ್ದರಿಂದ ಬ್ರಹ್ಮದೇವರನ್ನು ಬಿಟ್ಟು ಉಳಿದ ರುದ್ರಾದಿ ಜೀವರನ್ನು ಮಾತ್ರ ಬ್ರಹ್ಮಾದಿಕಾನ್ ಎಂಬ ಪದವು ಹೇಳಲನುಕೂಲವಾಗುವಂತೆ ಈ ಸಮಾಸವನ್ನು ಅತದ್ಗುಣಸಂವಿಜ್ಞಾನ ಬಹುವ್ರೀಹಿಯೆಂದೇ ಪರಿಗಣಿಸುವುದು ಯುಕ್ತವೆಂದು ಶ್ರೀ ವಾದಿರಾಜಸ್ವಾಮಿಗಳ ಅಭಿಪ್ರಾಯವಾಗಿದೆ. ॥ ೪ ॥

ಸೃಷ್ಟಿಕಾರಣನಾದ ಭಗವಂತನ ಸಂಕಲ್ಪವನ್ನು ಮುಂದಿನ ಶ್ಲೋಕದಲ್ಲಿ ವಿವರಿಸಲಾಗಿದೆ—

**ಸ್ರಕ್ಷ್ಯೇ ಹಿ ಚೇತನಗಣಾನ್ ಸುಖದುಃಖಮಧ್ಯ-**
**ಸಂಪ್ರಾಪ್ತಯೇ ತನುಭೃತಾಂ ವಿಹೃತಿಂ ಮಮೇಚ್ಛನ್ ।**
**ಸೋಽಯಂ ವಿಹಾರ ಇಹ ಮೇ ತನುಭೃತ್ಸ್ವಭಾವ-**
**ಸಂಭೂತಯೇ ಭವತಿ ಭೂತಿಕೃದೇವ ಭೂತ್ಯಾಃ ॥ ೫ ॥**

**ಅರ್ಥ :- ತನುಭೃತಾಂ** ಜೀವರಿಗೆ **ಸುಖದುಃಖಮಧ್ಯಸಂಪ್ರಾಪ್ತಯೇ** ಕೇವಲಸ್ವರೂಪಭೂತ ಸುಖ ಕೇವಲ ಸ್ವರೂಪಭೂತವಾದ ದುಃಖ ಮತ್ತು ಸ್ವರೂಪಭೂತವಾದ ದುಃಖಮಿಶ್ರವಾದ ಸುಖ ಇವುಗಳ ಸರಿಯಾದ ಅನುಭವ ಉಂಟಾಗುವುದಕ್ಕಾಗಿ **ಮಮ** ನನ್ನ **ವಿಹೃತಿಂ** ವಿಹಾರವನ್ನು **ಇಚ್ಛನ್** ಇಚ್ಛಿಸುತ್ತ **ಚೇತನಗಣಾನ್** ಜೀವದ ಸಮೂಹಗಳನ್ನು **ಸ್ರಕ್ಷ್ಯೇ** ಸೃಷ್ಟಿಸುವೆನು **ಮೇ** ನನ್ನ

**ವಿಶೇಷ ವಿಷಯ** :- ಭಗವಂತನು ತನ್ನ ಉದರದಲ್ಲಿ ನೋಡಿದ ಜೀವರು ಎರಡು ಬಗೆ. ಲಿಂಗದೇಹಭಂಗ ಪಡೆದ ಮುಕ್ತರು ಮತ್ತು ಸಂಸಾರಿಗಳು. ಉಭಯ ವಿಧಜೀವರೂ ಉತ್ತಮ, ಮಧ್ಯಮ ಮತ್ತು ಅಧಮರೆಂದು ಮೂರು ವಿಧ. ಮುಕ್ತರಲ್ಲಿ ಮಧ್ಯಮ ಮುಕ್ತರು ಸ್ವರೂಪಭೂತ ಸುಖ-ದುಃಖಗಳ ಮಿಶ್ರಣವುಳ್ಳವರು ಅಧಮ ಮುಕ್ತರು ಕೇವಲ ದುಃಖಸ್ವರೂಪಿಗಳು. ಇವರ ಈ ದುರವಸ್ಥೆ ಅತ್ಯಂತ ಹೀನವಾದದ್ದರಿಂದ ಭಗವಂತನೂ ಉಪೇಕ್ಷೆಯಿಂದಲೇ ನೋಡಿದನೆಂದು 'ತಥಾ ಐಕ್ಷತ್' ಎಂಮ ಪದಗಳಿಂದ ಸೂಚಿಸಲಾಗಿದೆ. ಅವರು ಹೇಗಿರುವರೋ ಹಾಗೆ ನೋಡಿದನೆಂದು ಆ ಪದಗಳ ಭಾವ. ಅವರ ದುರವಸ್ಥೆಯನ್ನು ಸ್ಪಷ್ಟವಾಗಿ ಹೇಳದಿರುವುದರಿಂದ ಉಪೇಕ್ಷೆಯು ಸೂಚಿತವಾಗಿದೆ.

ಉತ್ತಮ ಮುಕ್ತರನ್ನು ಇಲ್ಲಿ ವಿಪ್ರಮುಕ್ತರೆಂದು ಕರೆಯಲಾಗಿದೆ. ವಿಪ್ರ, ಎಂಬ ಉಪಸರ್ಗಗಳು ಅಧಮ, ಮಧ್ಯಮ ಮುಕ್ತರಿಗೂ ಉತ್ತಮ ಮುಕ್ತರಿಗೂ ಇರುವ ವೈಲಕ್ಷಣ್ಯವನ್ನು ಸೂಚಿಸುವುದು. ಲಿಂಗದೇಹದಿಂದ ಮುಕ್ತಿಯ ವಿಷಯದಲ್ಲಿ ಅಧಮ-ಮಧ್ಯಮ ಮುಕ್ತರಿಗೂ ಉತ್ತಮ ಮುಕ್ತರಿಗೂ ಸಾಮ್ಯವಿದೆ. ಆದರೆ ಅಧಮ-ಮಧ್ಯಮ ಜೀವರು ಲಿಂಗದೇಹಭಂಗಕ್ಕಿಂತ ಮುಂಚೆ ಭಗವನ್ನಿಂದೆಯಲ್ಲಿ ತೊಡಗಿದ್ದಂತೆ ಲಿಂಗದೇಹಭಂಗದ ನಂತರವೂ ಸ್ವರೂಪದುಃಖದಿಂದಾಗಿ ಭಗವಂತನ ನಿಂದೆ ಮಾಡುವುದರಿಂದ ಮುಕ್ತರಾಗಿಲ್ಲ. ಈ ದೃಷ್ಟಿಯಿಂದ ಅವರನ್ನು ವಿಪ್ರಮುಕ್ತರೆಂದು ಕರೆಯದೆ ಉತ್ತಮ ಜೀವರನ್ನು ಮಾತ್ರ ವಿಪ್ರಮುಕ್ತರೆಂದು ಹೇಳಲಾಗಿದೆ.

'ಸುಷುಪ್ತ್ಯವಸ್ಥೆಯಲ್ಲಿರುವ ಬ್ರಹ್ಮಾದಿಗಳನ್ನು ನೋಡಿದನೆಂದು' ನಿರ್ಣಯ ದಲ್ಲಿದೆ. ಬ್ರಹ್ಮನೇ ಆದಿಯಾಗುಳ್ಳ ಜೀವರು ಬ್ರಹ್ಮಾದಿಗಳು ಎಂಬ ಬಹುವ್ರೀಹಿ ಸಮಾಸವನ್ನು ಅತದ್ಗುಣಸಂವಿಜ್ಞಾನ ಬಹುವ್ರೀಹಿಯೆಂದು ಪರಿಗಣಿಸಬೇಕೆಂದು ಶ್ರೀ ವಾದಿರಾಜರ ಅಭಿಪ್ರಾಯ. ಬ್ರಹ್ಮಾದಿಕಾನ್ ಎಂಬ ಪದವನ್ನು ಅತದ್ಗುಣ ಸಂವಿಜ್ಞಾನ ಬಹುವ್ರೀಹಿಯೆಂದು ಪರಿಗಣಿಸಿದರೆ ಬ್ರಹ್ಮನನ್ನು ಬಿಟ್ಟು ಉಳಿದ ರುದ್ರಾದಿ ಜೀವರು ಆ ಪದದ ಅರ್ಥವಾಗುವರು. ಹೀಗೆ ಅತದ್ಗುಣಸಂವಿಜ್ಞಾನ ಬಹುವ್ರೀಹಿಯೆಂದು ಈ ಸಮಾಸವನ್ನು ಪರಿಗಣಿಸಲು ಶ್ರೀ ವಾದಿರಾಜರು ಕೊಡುವ ಕಾರಣ ಹೀಗಿದೆ—ಚತುರ್ಮುಖ ಬ್ರಹ್ಮನೇ ಮೊದಲಾದ ಜೀವರನ್ನು

ಸುಷುಪ್ತ್ಯವಸ್ಥೆಯಲ್ಲಿರುವಂತೆ ಭಗವಂತನು ನೋಡಿದನೆಂದೇ ಈ ವಾಕ್ಯದ ಅರ್ಥವನ್ನು ಹೇಳಿದರೆ ಸುಷುಪ್ತ್ಯವಸ್ಥೆಯಲ್ಲಿರುವ ಬ್ರಹ್ಮನು ಯಾರೆಂಬ ಪ್ರಶ್ನೆ ಉದ್ಭವಿಸುತ್ತದೆ. ಹಿಂದಿನ ಕಲ್ಪದ ಬ್ರಹ್ಮನು ಕಲ್ಪಾಂತದಲ್ಲಿ ಮುಕ್ತನಾಗಿರುವುದ ರಿಂದ ಸುಷುಪ್ತ್ಯವಸ್ಥೆಯಲ್ಲಿರುವ ಸಂಸಾರಿ ಬ್ರಹ್ಮನು ಅವನಾಗಿರುವ ಸಾಧ್ಯತೆಯೇ ಇಲ್ಲ. ಇನ್ನೂ ಸಂಸಾರಾವಸ್ಥೆಯಲ್ಲಿ ಭಾವಿ ಬ್ರಹ್ಮನು ಇಲ್ಲಿ ವಿವಕ್ಷಿತನೆಂದೂ ಹೇಳಲಾಗದು. ನಿತ್ಯವಾದ ಆಕಾಶಾದಿ ವಸ್ತುಗಳು ಅನೇಕವಿದ್ದರೂ 'ವಾಯು ರ್ವಾವ ನಿತ್ಯಃ' ಎಂದು ವಾಯುವನ್ನು ವಿಶೇಷವಾಗಿ ನಿತ್ಯವೆಂದು ಹೇಳಿರುವುದರ ಕಾರಣವನ್ನು ವಿವರಿಸುತ್ತ ಟೀಕಾಕೃತ್ಪಾದರು ವಾಯುದೇವರ ಸ್ವರೂಪಜ್ಞಾನವಲ್ಲದೆ ಬಾಹ್ಯಜ್ಞಾನವೂ ನಿತ್ಯವಾದುದರಿಂದ ವಾಯುದೇವರನ್ನು ವಿಶೇಷವಾಗಿ ನಿತ್ಯನೆಂದು ಹೇಳಲಾಗಿದೆ ಎಂದಿರುವರು. ಸಂಸಾರಿಯಾದ ಬ್ರಹ್ಮ ದೇವರ ಬಾಹ್ಯಜ್ಞಾನವೂ ಹೀಗೆ ನಿತ್ಯವಾಗಿರುವುದಾದರೆ ಅವರಿಗೂ ಸುಷುಪ್ತ್ಯವಸ್ಥೆ ಇರಲು ಸಾಧ್ಯವಿಲ್ಲ. ಹೀಗೆ ಬ್ರಹ್ಮದೇವರಿಗೆ ಸುಷುಪ್ತ್ಯವಸ್ಥೆಯೇ ಅಸಂಭಾವಿತವಾದ್ದರಿಂದ ಬ್ರಹ್ಮದೇವರನ್ನು ಬಿಟ್ಟು ಉಳಿದ ರುದ್ರಾದಿ ಜೀವರನ್ನು ಮಾತ್ರ ಬ್ರಹ್ಮಾದಿಕಾನ್ ಎಂಬ ಪದವು ಹೇಳಲನುಕೂಲವಾಗುವಂತೆ ಈ ಸಮಾಸವನ್ನು ಅತದ್ಗುಣಸಂವಿಜ್ಞಾನ ಬಹುವ್ರೀಹಿಯೆಂದೇ ಪರಿಗಣಿಸುವುದು ಯುಕ್ತವೆಂದು ಶ್ರೀ ವಾದಿರಾಜಸ್ವಾಮಿಗಳ ಅಭಿಪ್ರಾಯವಾಗಿದೆ. ॥ ೪ ॥

ಸೃಷ್ಟಿಕಾರಣನಾದ ಭಗವಂತನ ಸಂಕಲ್ಪವನ್ನು ಮುಂದಿನ ಶ್ಲೋಕದಲ್ಲಿ ವಿವರಿಸಲಾಗಿದೆ—

**ಸ್ರಕ್ಷ್ಯೇ ಹಿ ಚೇತನಗಣಾನ್ ಸುಖದುಃಖಮಧ್ಯ-**
**ಸಂಪ್ರಾಪ್ತಯೇ ತನುಭೃತಾಂ ವಿಹೃತಿಂ ಮಮೇಚ್ಛನ್ ।**
**ಸೋಽಯಂ ವಿಹಾರ ಇಹ ಮೇ ತನುಭೃತ್ಸ್ವಭಾವ-**
**ಸಂಭೂತಯೇ ಭವತಿ ಭೂತಿಕೃದೇವ ಭೂತ್ಯಾಃ ॥ ೫ ॥**

**ಅರ್ಥ :- ತನುಭೃತಾಂ** ಜೀವರಿಗೆ **ಸುಖದುಃಖಮಧ್ಯಸಂಪ್ರಾಪ್ತಯೇ** ಕೇವಲಸ್ವರೂಪಭೂತ ಸುಖ ಕೇವಲ ಸ್ವರೂಪಭೂತವಾದ ದುಃಖ ಮತ್ತು ಸ್ವರೂಪಭೂತವಾದ ದುಃಖಮಿಶ್ರವಾದ ಸುಖ ಇವುಗಳ ಸರಿಯಾದ ಅನುಭವ ಉಂಟಾಗುವುದಕ್ಕಾಗಿ **ಮಮ** ನನ್ನ **ವಿಹೃತಿಂ** ವಿಹಾರವನ್ನು **ಇಚ್ಛನ್** ಇಚ್ಛಿಸುತ್ತ **ಚೇತನಗಣಾನ್** ಜೀವದ ಸಮೂಹಗಳನ್ನು **ಸ್ರಕ್ಷ್ಯೇ** ಸೃಷ್ಟಿಸುವೆನು **ಮೇ** ನನ್ನ

**ಸೋಽಯಂ ವಿಹಾರಃ** ಈ ಕ್ರೀಡೆಯು **ಇಹ** ಈ ಸಂಸಾರದಲ್ಲಿ **ತನುಭೃತ್ಸ್ವಭಾವ ಸಂಭೂತಯೇ** ಜೀವರ ತ್ರಿವಿಧ ಸ್ವಭಾವದ ಅನುಭವಕ್ಕಾಗಿ **ಭೂತ್ಯಾಃ** ಜಡ ಪ್ರಕೃತಿಗೆ ಮತ್ತು ಜಡಪ್ರಕೃತಿಯ ಅಭಿಮಾನಿನಿಯಾದ ಲಕ್ಷ್ಮೀದೇವಿಗೆ **ಭೂತಿ ಕೃದೇವ** ಬಹುತ್ವವನ್ನು ಉಂಟುಮಾಡತಕ್ಕದ್ದಾಗಿಯೇ **ಭವತಿ** ಇರುವುದು.

**ತಾತ್ಪರ್ಯ** :- ಸೃಷ್ಟಿಯ ಮುಂಚೆ ಭಗವಂತನ ಸಂಕಲ್ಪ ಹೀಗಿರುವುದು— 'ಉತ್ತಮ, ಮಧ್ಯಮ ಮತ್ತು ಅಧಮ ಜೀವರೆಂಬ ತ್ರಿವಿಧ ಜೀವರಲ್ಲಿ ಚತುರ್ಮುಖನೇ ಮೊದಲಾದ ಉತ್ತಮ ಜೀವರಿಗೆ ಅವರ ಸ್ವರೂಪಭೂತವಾದ ಕೇವಲ ಸುಖದ, ಅಧಮ ಜೀವರಾದ ತಮೋಯೋಗ್ಯರಿಗೆ ಅವರ ಸ್ವರೂಪ ಭೂತವಾದ ಕೇವಲ ದುಃಖದ ಹಾಗೂ ಮಧ್ಯಮ ಜೀವಿಗಳಾದ ನಿತ್ಯಸಂಸಾರಿ ಗಳಿಗೆ ಅವರ ಸ್ವರೂಪಭೂತವಾಗಿರುವ ದುಃಖಮಿಶ್ರವಾದ ಸುಖದ ಸರಿಯಾದ ಅನುಭವವುಂಟಾಗುವುದೇ ನನ್ನ ಸೃಷ್ಟಿಯ ಉದ್ದೇಶ. ಇದು ನನ್ನ ವಿಹಾರವಾಗಿದೆ. ಈ ನನ್ನ ವಿಹಾರದಿಂದ ಸಂಸಾರದಲ್ಲೇ ತ್ರಿವಿಧ ಜೀವರಿಗೆ ಅವರವರ ಸ್ವರೂಪಭೂತವಾದ ಸುಖಾದಿಗಳ ಅನುಭವ ಒದಗುವುದಲ್ಲದೇ, ಜಡಪ್ರಕೃತಿಗೆ ಮಹತ್ತತ್ತ್ವ, ಅಹಂಕಾರತತ್ತ್ವ ಮೊದಲಾದ ನಾನಾ ರೂಪಗಳೂ, ಜಡಪ್ರಕೃತಿಯ ಅಭಿಮಾನಿನಿಯಾದ ಲಕ್ಷ್ಮೀದೇವಿಗೆ ನಿಯಾಮಕವಾದ ನಾನಾ ರೂಪಗಳೂ ಉಂಟಾಗುವುವು.

**ವಿಶೇಷ ವಿಷಯ** :- ಭಗವಂತನು ಸೃಜಿಸುವ ಉತ್ತಮ ಮತ್ತು ಅಧಮ ಜೀವರಿಗೆ ಸಂಸಾರ ಸಮಯದಲ್ಲಿ ತಮ್ಮ ಸ್ವರೂಪಭೂತವಾದ ಕೇವಲ ಸುಖ ಮತ್ತು ಕೇವಲ ದುಃಖದ ಅನುಭವವಾಗುವುದುಂಟು. ಮಧ್ಯಮ ಜೀವರಿಗೆ ಈ ಕಾಲದಲ್ಲಿ ತಮ್ಮ ಸ್ವರೂಪಭೂತವಾದ ದುಃಖಮಿಶ್ರಿತಸುಖದ ಅನುಭವ ವಾಗುವುದೋ ಇಲ್ಲವೋ ಎಂದು ಸಂದೇಹ ಬರಬಹುದು. ಆದರೆ ಈ ಶ್ಲೋಕದಲ್ಲಿ ಆಚಾರ್ಯರು ಜೀವರಿಗೆ ತಮ್ಮ ಸ್ವಭಾವದ ಅನುಭವ ಬರುವುದೆಂದು ಹೇಳಿರುವುದರಿಂದ, ಸಾಂಸಾರಿಕ ದುಃಖ ಮಿಶ್ರಿತವಾದ ಸುಖ ಜೀವಸ್ವಭಾವಭೂತವಲ್ಲವಾದ್ದರಿಂದ ಸ್ವರೂಪಭೂತವಾದ ದುಃಖ ಮಿಶ್ರ ಸುಖದ ಅಭಿವ್ಯಕ್ತಿಯೂ ಮಧ್ಯಮಜೀವರಿಗೆ ಸಂಸಾರ ಕಾಲದಲ್ಲಿ ಉಂಟಾಗುವು ದೆಂದು ಹೇಳಬೇಕಾಗುವುದೆಂದು ಶ್ರೀ ವಾದಿರಾಜರು ಸೂಚಿಸಿದ್ದಾರೆ.

'ಭೂತ್ಯಾಃ ಭೂತಿಕೃದೇವ' ಎಂಬಲ್ಲಿ ಭೂತ್ಯಾಃ ಎಂಬ ಪದಕ್ಕೆ ಜಡಪ್ರಕೃತಿಗೆ ಮತ್ತು ಚಿತ್ಪ್ರಕೃತಿಗೆ ಎಂಬ ಎರಡೂ ಅರ್ಥವನ್ನು ಹೇಳಬೇಕು. ಭಗವಂತನ ಸೃಷ್ಟಿಯಿಂದ ಜಡಪ್ರಕೃತಿಗಾಗುವ ಬಹುತ್ವವೆಂದರೆ ನಾನಾರೂಪದ ವಿಕಾರ. ಚಿತ್ಪ್ರಕೃತಿಯಾದ ಲಕ್ಷ್ಮೀದೇವಿಗುಂಟಾಗುವ ಬಹುತ್ವವು ನಿಯಾಮಕ ನಾನಾರೂಪಧಾರಣೆ. ॥ ೫ ॥

ಭಗವಂತನು ಮಾಡುವ ಸೃಷ್ಟಿ ನಾಲ್ಕು ವಿಧವಾದದ್ದು. ಶುದ್ಧ ಸೃಷ್ಟಿ ಪರಾಧೀನವಿಶೇಷಾವಾಪ್ತಿರೂಪವಾದ ಸೃಷ್ಟಿ ಮಿಶ್ರಸೃಷ್ಟಿ ಮತ್ತು ಕೇವಲಸೃಷ್ಟಿ— ಇವುಗಳೆ ಆ ನಾಲ್ಕು ಸೃಷ್ಟಿಗಳು. ಶುದ್ಧಸೃಷ್ಟಿಯೆಂದರೆ ದೇಹೇಂದ್ರಿಯಾದಿಗಳಿಗೆ ಯಾವುದೇ ವಿಕಾರವಿಲ್ಲದೇ, ಜಗದುಪಕಾರದ ಉದ್ದೇಶದಿಂದ ಮೂಲರೂಪ ದಿಂದ ಭಗವಂತನು ಹೊರಬರುವುದು. ಲಕ್ಷ್ಮೀದೇವಿ ಮೊದಲಾದವರು ಭಗವಂತನ ಆದೇಶವನ್ನು ಶಿರಸಾ ವಹಿಸಿ ಸೃಷ್ಟಿಯ ಆರಂಭದಲ್ಲಿ ಪ್ರಕೃತಿ ಸ್ವಾಮಿತ್ವ ಮುಂತಾದ ವಿಶೇಷವನ್ನು ಪಡೆಯುವುದು ಎರಡನೆಯದಾದ ಪರಾಧೀನವಿಶೇಷಾವಾಪ್ತಿರೂಪವಾದ ಸೃಷ್ಟಿ ಸ್ವರೂಪತಃ ಉತ್ಪತ್ತಿ ಇಲ್ಲದಿದ್ದರೂ ಜೀವರು ಬಾಹ್ಯದೇಹಸಂಬಂಧರೂಪವಾದ ಉತ್ಪತ್ತಿಯನ್ನು ಹೊಂದುವುದು ಮಿಶ್ರಸೃಷ್ಟಿ ಮೊದಲಿಲ್ಲದ ಘಟಪಟಾದಿ ವಸ್ತುಗಳು ಸ್ವರೂಪತಃ ಉತ್ಪತ್ತಿಯನ್ನು ಪಡೆಯುವುದು ನಾಲ್ಕನೆಯದಾದ ಕೇವಲಸೃಷ್ಟಿ ಈ ಮುಂದಿನ ಶ್ಲೋಕದಲ್ಲಿ ಭಗವಂತನು ಮಾಡುವ ಶುದ್ಧಸೃಷ್ಟಿಯನ್ನು ಹೇಳಲಾಗಿದೆ—

**ಇತ್ಥಂ ವಿಚಿಂತ್ಯ ಪರಮಸ್ಸ ತು ವಾಸುದೇವ-**
**ನಾಮಾ ಬಭೂವ ನಿಜಮುಕ್ತಿಪದಪ್ರದಾತಾ ।**
**ತಸ್ಯಾಜ್ಞಯೈವ ನಿಯತಾಽಥ ರಮಾಽಪಿ ರೂಪಂ**
**ಬಭ್ರೇ ದ್ವಿತೀಯಮಪಿ ಯತ್ ಪ್ರವದಂತಿ ಮಾಯಾಂ ॥ ೬ ॥**

**ಅರ್ಥ :-** **ಇತ್ಥಂ** ಈ ರೀತಿಯಾಗಿ **ವಿಚಿಂತ್ಯ** ಆಲೋಚಿಸಿ **ಪರಮಃ** ಸರ್ವೋತ್ತಮನಾದ **ಸ** **ತು** ಆ ನಾರಾಯಣನಾದರೋ **ನಿಜಮುಕ್ತಿಪದ ಪ್ರದಾತಾ** ತನ್ನ ಭಕ್ತರಿಗೆ ಮುಕ್ತಿಪದವನ್ನು ನೀಡುವ **ವಾಸುದೇವನಾಮಾ** ವಾಸುದೇವ ಎಂಬ ಹೆಸರಿನ ರೂಪವುಳ್ಳವನು **ಬಭೂವ** ಆದನು **ಅಥ** ಅನಂತರ **ತಸ್ಯ** ಆ ನಾರಾಯಣನ **ಆಜ್ಞಯಾ ಏವ** ಆಜ್ಞೆಯಿಂದಲೇ **ನಿಯತಾ** ಭಗವಂತನಿಂದ ನಿಯಮ್ಯಳಾದ **ರಮಾ ಅಪಿ** ಲಕ್ಷ್ಮೀದೇವಿಯೂ ಕೂಡ **ಯತ್**

ಯಾವ ರೂಪವನ್ನು **ಮಾಯಾಂ** ಮಾಯೆಯೆಂದು **ಪ್ರವದಂತಿ** ಹೇಳುವರೋ ಅಂತಹ **ದ್ವಿತೀಯಂ** ಎರಡನೆ **ರೂಪಂ ಅಪಿ** ರೂಪವನ್ನೂ ಕೂಡ **ಬಭ್ರೇ** ಧರಿಸಿದಳು.

**ತಾತ್ಪರ್ಯ :-** ಸರ್ವಶ್ರೇಷ್ಠನಾದ, ನಾರಾಯಣ ಎಂಬ ಹೆಸರಿನ ಆ ಮೂಲರೂಪಿ ಭಗವಂತನು ಸೃಷ್ಟಿಗೆ ಮುಂಚೆ ಈ ಹಿಂದೆ ಹೇಳಿದಂತೆ ಆಲೋಚಿಸಿ ವಾಸುದೇವ ಎಂಬ ಹೆಸರಿನ ಇನ್ನೊಂದು ರೂಪವನ್ನು ಧರಿಸಿದನು. ಈ ವಾಸು ದೇವನೇ ಭಕ್ತರಿಗೆ ಮೋಕ್ಷವನ್ನು ದಯಪಾಲಿಸುವವನು. ಆ ನಾರಾಯಣನ ಆದೇಶವನ್ನನುಸರಿಸಿ ಅವನಿಂದ ನಿಯಮ್ಯಳಾದ ಲಕ್ಷ್ಮಿಯೂ ಮಾಯೆಯೆಂಬ ಹೆಸರಿನ ಎರಡನೆ ರೂಪವನ್ನು ಧರಿಸಿದಳು.

**ವಿಶೇಷ ವಿಷಯ :-** ಪರಮಃ - ಸರ್ವೋತ್ತಮನೆಂಬ ಅರ್ಥವಿರುವಂತೆ ಶ್ರೇಷ್ಠವಾದ ಜ್ಞಾನವುಳ್ಳವನು ಎಂಬ ಅರ್ಥವೂ ಈ ಪದಕ್ಕಿದೆ. ಪರಾ ಮಾ ಯಸ್ಯ ಸಃ ಪರಮಃ. ನಿಯತಾ - ಭಗವನ್ನಿಯಮ್ಯಳು ಎಂದು ಒಂದು ಅರ್ಥ. ಹಾಗೆಯೇ ನಿತ್ಯಳು, ಭಗವಂತನಿಂದ ನಿತ್ಯಾವಿಯುಕ್ತಳು ಎಂಬ ಅರ್ಥಗಳೂ ಇವೆ. ಭಗವಂತನು ಮಾಯಾನಾಮಕಳಾದ ಲಕ್ಷ್ಮೀದೇವಿಯಿಂದ ಆಲಿಂಗಿತ ನಾದ ಕಾರಣದಿಂದಲೇ ಶ್ರುತಿಪುರಾಣಾದಿಗಳಲ್ಲಿ ಅವನನ್ನು ಮಾಯಿ ಎಂದು ಕರೆದಿರುವುದು ಹೊರತು ಪರರು ಹೇಳುವಂತೆ ಭ್ರಾಂತಿಕಾರಣವಾದ ಮಾಯಾ ಪ್ರಯುಕ್ತವಲ್ಲವೆಂದು, ಆಚಾರ್ಯರು ವಾಸುದೇವನಾಮಕ ಭಗವಂತನ ಪತ್ನಿಯನ್ನು ಮಾಯೆಯೆಂದು ಕರೆಯುವರು ಎಂದು ಹೇಳುವ ಮೂಲಕ ಸೂಚಿಸುತ್ತಿದ್ದಾರೆಂದು ಶ್ರೀ ವಾದಿರಾಜರ ಅಭಿಪ್ರಾಯ. ॥ ೬ ॥

ಮತ್ತೊಂದು ಶುದ್ಧ ಸೃಷ್ಟಿಯನ್ನು ಈ ಮುಂದಿನ ಶ್ಲೋಕದಲ್ಲಿ ಹೇಳಲಾಗಿದೆ–

**ಸಂಕರ್ಷಣಶ್ಚ ಸ ಬಭೂವ ಪುನಸ್ಸುನಿತ್ಯಃ**
**ಸಂಹಾರಕಾರಣವಪುಸ್ತದನುಜ್ಞಯೈವ ।**
**ದೇವೀ ಜಯೇತ್ಯನು ಬಭೂವ ಸ ಸೃಷ್ಟಿಹೇತೋಃ**
**ಪ್ರದ್ಯುಮ್ನತಾಮುಪಗತಃ ಕೃತಿತಾಂ ಚ ದೇವೀ ॥ ೭ ॥**

**ಅರ್ಥ :-** **ಸಃ** ಆ ನಾರಾಯಣನು **ಪುನಃ** ಮತ್ತೆ **ಸುನಿತ್ಯಃ** ಯಾವುದೇ ರೀತಿಯ ನಾಶವಿಲ್ಲದೆ ನಿತ್ಯವಾಗಿರುವ, **ಸಂಹಾರಕಾರಣವಪುಃ** ಜಗತ್ತಿನ

ಸಂಹಾರಕ್ಕೆ ಕಾರಣವಾದ ಶರೀರವುಳ್ಳ **ಸಂಕರ್ಷಣಶ್ಚ** ಸಂಕರ್ಷಣರೂಪಿಯೂ **ಬಭೂವ** ಆದನು **ತದನುಜ್ಞಯೈವ** ಆ ಭಗವಂತನ ಆಜ್ಞೆಯಿಂದಲೇ **ದೇವೀ** ಲಕ್ಷ್ಮೀದೇವಿಯು **ಜಯೇತಿ** ಜಯಾ ಎಂಬ ಹೆಸರಿನವಳಾಗಿ **ಅನು ಬಭೂವ** ಆ ಭಗವಂತನನ್ನನು ಸರಿಸಿ ಅವತರಿಸಿದಳು **ಸಃ** ಆ ನಾರಾಯಣನು **ಸೃಷ್ಟಿಹೇತೋಃ** ಜಗತ್ತಿನ ಸೃಷ್ಟಿಯ ಕಾರಣದಿಂದ **ಪ್ರದ್ಯುಮ್ನತಾಂ** ಪ್ರದ್ಯುಮ್ನರೂಪವನ್ನು **ಉಪಗತಃ** ಪಡೆದನು **ದೇವೀ ಚ** ಲಕ್ಷ್ಮೀದೇವಿಯೂ **ಕೃತಿತಾಂ** (ಉಪಗತಾ)ಕೃತಿ ಎಂಬ ಹೆಸರಿನ ರೂಪವನ್ನು ಪಡೆದಳು.

**ತಾತ್ಪರ್ಯ** :- ವಾಸುದೇವರೂಪವನ್ನು ತಳೆದ ನಂತರ ಆ ಮೂಲರೂಪೀ ನಾರಾಯಣನು ಜಗತ್ಸಂಹಾರಕ್ಕೆ ಕಾರಣವಾದ, ಸರ್ವವಿಧ ನಾಶರಹಿತವಾದ ಸಂಕರ್ಷಣ ಎಂಬ ರೂಪದಿಂದ ಅವತರಿಸಿದನು. ಆ ಭಗವಂತನನ್ನು ಅನುಸರಿಸುತ್ತ ಅವನ ಆಜ್ಞೆಗೆ ತಲೆಬಾಗಿ ಲಕ್ಷ್ಮೀದೇವಿಯೂ ಜಯಾ ಎಂಬ ರೂಪವನ್ನು ಪಡೆದು ಅವನ ಪತ್ನಿಯಾದಳು. ಆ ನಾರಾಯಣನು ಪುನಃ ಜಗತ್ತನ್ನು ಸೃಜಿಸುವ ಪ್ರದ್ಯುಮ್ನ ರೂಪವನ್ನು ಪಡೆದನು. ಲಕ್ಷ್ಮೀದೇವಿಯೂ ಕೃತಿನಾಮಕಳಾಗಿ ಅವತರಿಸಿದಳು.

**ವಿಶೇಷ ವಿಷಯ** :- ಸುನಿತ್ಯಃ - ಎಲ್ಲ ಜೀವರೂ ಸ್ವರೂಪತಃ ನಿತ್ಯರೇ. ಆದರೂ ದೇಹಸಂಬಂಧರೂಪವಾದ ಉತ್ಪತ್ತಿಯನ್ನು ಪಡೆದು ದೇಹನಾಶ ರೂಪವಾದ ನಾಶವನ್ನೂ ಹೊಂದಿದ್ದಾರೆ. ಅಲ್ಲದೆ ದುಃಖಪ್ರಾಪ್ತಿ, ಅಪೂರ್ಣತೆ ಎಂಬ ನಾಶವೂ ಅವರಿಗಿದೆ. ಆದರೆ ಭಗವಂತನಿಗೆ, ಜೀವರಿಗಿರುವ ದೇಹನಾಶ, ದುಃಖಪ್ರಾಪ್ತಿ, ಅಪೂರ್ಣತೆ ಎಂಬ ನಾಶಗಳಾಗಲೀ, ಘಟಾದಿಗಳಿಗಿರುವ ಸ್ವರೂಪತಃ ಅನಿತ್ಯತ್ವರೂಪ ನಾಶವಾಗಲಿ ಸರ್ವಥಾ ಇಲ್ಲ. ಈ ಅಭಿಪ್ರಾಯ ದಿಂದ ಆಚಾರ್ಯರು ಕೇವಲ 'ನಿತ್ಯ' ನೆಂದು ಹೇಳದೆ ಸುನಿತ್ಯನೆಂದು ಭಗವಂತನನ್ನು ಕರೆದಿದ್ದಾರೆ. ॥ ೭ ॥

ಮತ್ತೊಂದು ಶುದ್ಧಸೃಷ್ಟಿಯನ್ನೂ, ಭಗವಂತನು ಜೀವಸೃಷ್ಟಿಯನ್ನು ಪ್ರಾರಂಭಿಸಿದುದನ್ನೂ ಈ ಶ್ಲೋಕದಲ್ಲಿ ನಿರೂಪಿಸಲಾಗಿದೆ—

**ಸ್ಥಿತ್ಯೈ ಪುನಸ್ಸ ಭಗವಾನನಿರುದ್ಧ ನಾಮಾ**
**ದೇವೀ ಚ ಶಾಂತಿರಭವತ್ ಶರದಾಂ ಸಹಸ್ರಂ ।**
**ಸ್ಥಿತ್ವಾ ಸ್ವಮೂರ್ತಿಭಿರಮೂಭಿರಚಿಂತ್ಯಶಕ್ತಿಃ**
**ಪ್ರದ್ಯುಮ್ನರೂಪಕ ಇಮಾಂಶ್ಚರಮಾತ್ಮನೇಽದಾತ್ ॥ ೮ ॥**

**ಅರ್ಥ** :- **ಸಃ ಭಗವಾನ್** ಆ ಭಗವಂತನು **ಪುನಃ** ಮತ್ತೆ **ಸ್ಥಿತ್ಯೈ** ಜಗತ್ತಿನ ಪಾಲನೆಗಾಗಿ **ಅನಿರುದ್ಧನಾಮಾ** ಅನಿರುದ್ಧ ಎಂಬ ಹೆಸರಿನ ರೂಪವುಳ್ಳವನು **ಅಭವತ್** ಆದನು **ದೇವೀ ಚ** ಲಕ್ಷ್ಮೀದೇವಿಯೂ **ಶಾಂತಿಃ** ಶಾಂತಿ ಎಂಬ ಹೆಸರಿನ ರೂಪವುಳ್ಳವಳು **ಅಭವತ್** ಆದಳು **ಅಚಿಂತ್ಯಶಕ್ತಿಃ** ಅಚಿಂತ್ಯ ಶಕ್ತಿಯುಳ್ಳ **ಪ್ರದ್ಯುಮ್ನರೂಪಕಃ** ಪ್ರದ್ಯುಮ್ನರೂಪೀ ಭಗವಂತನು **ಅಮೂಭಿಃ ಸ್ವಮೂರ್ತಿಭಿಃ** ಆ ತನ್ನ ವಾಸುದೇವಾದಿಮೂರ್ತಿಗಳೊಂದಿಗೆ **ಶರದಾಂ ಸಹಸ್ರಂ** ಸಾವಿರ ವರ್ಷಗಳಷ್ಟು ಕಾಲ **ಸ್ಥಿತ್ವಾ** ಇದ್ದು **ಇಮಾನ್** ತನ್ನ ಉದರದಲ್ಲಿದ್ದ ಜೀವರನ್ನು **ಚರಮಾತ್ಮನೇ** ಶುದ್ಧಸೃಷ್ಟಿಯಲ್ಲಿ ಕೊನೆಯವನಾದ ಅನಿರುದ್ಧರೂಪಿ ಭಗವಂತನಿಗೆ **ಅದಾತ್** ಕೊಟ್ಟನು.

**ತಾತ್ಪರ್ಯ** :- ಪ್ರದ್ಯುಮ್ನರೂಪವನ್ನು ಪಡೆದ ನಂತರ ಭಗವಂತನು ಪುನಃ ಜಗತ್ತಿನ ಪಾಲನೆಗೋಸ್ಕರ ಅನಿರುದ್ಧರೂಪದಿಂದ ಅವತರಿಸಿದನು. ರಮೆಯೂ ಶಾಂತಿನಾಮಕಳಾಗಿ ಅವತರಿಸಿ ಅವನ ಪತ್ನಿಯಾದಳು. ಇತರರ ಆಲೋಚನೆಗೆ ನಿಲುಕದ ಅದ್ಭುತ ಸಾಮರ್ಥ್ಯಶಾಲಿಯಾದ ಪ್ರದ್ಯುಮ್ನರೂಪಿ ಭಗವಂತನು ವಾಸುದೇವಾದಿ ತನ್ನ ಇತರ ರೂಪಗಳೊಂದಿಗೆ ಮನುಷ್ಯಮಾನದ ಸಹಸ್ರವರ್ಷಗಳ ಕಾಲ ಇದ್ದು ಅನಂತರ ತನ್ನ ಉದರದಲ್ಲಿದ್ದ ಜೀವರನ್ನು ಸೃಷ್ಟಿಮಾಡುವ ಸಲುವಾಗಿ ಅನಿರುದ್ಧರೂಪೀ ಭಗವಂತನಿಗೆ ಕೊಟ್ಟನು.

**ವಿಶೇಷ ವಿಷಯ** :- ಪ್ರದುಮ್ನನಾಮಕ ಭಗವಂತನು ವಾಸುದೇವಾದಿ ಮೂರ್ತಿಗಳೊಂದಿಗೆ ಇದ್ದುದು ಮನುಷ್ಯಮಾನದ ಸಹಸ್ರವರ್ಷಗಳ ಕಾಲವೆಂದು ಶ್ರೀ ವಾದಿರಾಜರು ಸ್ಪಷ್ಟಪಡಿಸಿದ್ದಾರೆ.

ಪ್ರಲಯ ಕಾಲದಲ್ಲಿ ಜೀವರೆಲ್ಲರೂ ಮೂಲರೂಪಿಯಾದ ನಾರಾಯಣನ ಉದರದಲ್ಲಿರುವರು. ಪ್ರದ್ಯುಮ್ನರೂಪಿಯಾಗಿ ಅವತರಿಸಿದ ಭಗವಂತ ಆ ಜೀವರನ್ನು ತನ್ನ ಉದರಕ್ಕೆ ತಂದಿಟ್ಟುಕೊಂಡು ಸಹಸ್ರವರ್ಷಗಳ ಅನಂತರ ಅನಿರುದ್ಧರೂಪಿಯಾದ ಭಗವಂತನಿಗೆ ಸೃಷ್ಟಿಮಾಡಲು ಕೊಟ್ಟನೆಂದೂ ಶ್ರೀ ವಾದಿರಾಜರು ಸ್ಪಷ್ಟೀಕರಣ ನೀಡಿದ್ದಾರೆ.

ಅತ್ಯಂತ ಸೂಕ್ಷ್ಮವಾದ ಮಿಶ್ರಸೃಷ್ಟಿಯನ್ನು ಈ ಶ್ಲೋಕದಲ್ಲಿ ನಿರೂಪಿಸಲಾಗಿದೆ—

ನಿರ್ದೇಹಕಾನ್ ಸ ಭಗವಾನನಿರುದ್ಧನಾಮಾ
ಜೀವಾನ್ ಸ್ವಕರ್ಮಸಹಿತಾನುದರೇ ನಿವೇಶ್ಯ ।
ಚಕ್ರೇಥ ದೇಹಸಹಿತಾನ್ ಕ್ರಮಶಃ ಸ್ವಯಂಭು-
ಪ್ರಾಣಾತ್ಮಶೇಷಗರುಡೇಶಮುಖಾನ್ ಸಮಗ್ರಾನ್ ॥ ೯ ॥

**ಅರ್ಥ** :- **ಸ ಅನಿರುದ್ಧನಾಮಾ ಭಗವಾನ್** ಅನಿರುದ್ಧನಾಮಕನಾದ ಆ ಭಗವಂತನು **ನಿರ್ದೇಹಕಾನ್** ಲಿಂಗದೇಹವ್ಯತಿರಿಕ್ತದೇಹರಹಿತರೂ **ಸ್ವಕರ್ಮ ಸಹಿತಾನ್** ತಮ್ಮ ಕರ್ಮಗಳಿಂದೊಡಗೂಡಿದವರೂ ಆದ **ಜೀವಾನ್** ಜೀವರನ್ನು **ಉದರೇ** ತನ್ನ ಜಠರದಲ್ಲಿ **ನಿವೇಶ್ಯ** ಇಟ್ಟುಕೊಂಡು **ಅಥ** ಅನಂತರ **ಕ್ರಮಶಃ** ಕ್ರಮವಾಗಿ **ಸ್ವಯಂಭುಪ್ರಾಣಾತ್ಮಶೇಷಗರುಡೇಶಮುಖಾನ್** ಚತುರ್ಮುಖ ಬ್ರಹ್ಮ, ಮುಖ್ಯಪ್ರಾಣ, ಶೇಷ, ಗರುಡ, ರುದ್ರ ಮೊದಲಾದ **ಸಮಗ್ರಾನ್** ಎಲ್ಲ ದೇವತೆಗಳನ್ನೂ **ದೇಹಸಹಿತಾನ್** ದೇಹಯುಕ್ತರನ್ನಾಗಿ **ಚಕ್ರೇ** ಮಾಡಿದನು.

**ತಾತ್ಪರ್ಯ** :- ಪ್ರದ್ಯುಮ್ನನಾಮಕ ಭಗವಂತನು ಅನಿರುದ್ಧರೂಪೀ ಭಗವಂತನಿಗೆ ಕೊಟ್ಟ ಜೀವರು ಅನಾದಿಯಾದ ಲಿಂಗದೇಹವ್ಯತಿರಿಕ್ತವಾದ ದೇಹವಿಲ್ಲದವರು. ತಮ್ಮ ತಮ್ಮ ಕರ್ಮಗಳಿಂದ ಯುಕ್ತರು. ಇಂತಹ ಜೀವರನ್ನು ಅನಿರುದ್ಧನು ತನ್ನ ಉದರದಲ್ಲಿ ಇಟ್ಟುಕೊಂಡು ಅನಂತರ ಯೋಗ್ಯಕಾಲ ಬಂದಾಗ ಅವರ ಯೋಗ್ಯತಾ ತಾರತಮ್ಯವನ್ನನುಸರಿಸಿ ಮೊದಲು ಚತುರ್ಮುಖ ಬ್ರಹ್ಮ ಅನಂತರ ಮುಖ್ಯಪ್ರಾಣ, ಗರುಡ, ಶೇಷ, ರುದ್ರ ಹೀಗೆ ಸಮಸ್ತ ದೇವತೆಗಳನ್ನೂ ಮತ್ತೊಂದು ದೇಹಕೊಟ್ಟು ಸೃಷ್ಟಿಸಿದನು.

**ವಿಶೇಷ ವಿಷಯ** :- ಅನಿರುದ್ಧರೂಪಿ ಭಗವಂತನು ಜೀವರಿಗೆ ದೇಹವನ್ನು ಕೊಟ್ಟು ಸೃಷ್ಟಿಸಿದನೆಂದು ಇಲ್ಲಿ ಹೇಳಲಾಗಿದೆ. ಆದರೆ ಅನಿರುದ್ಧನ ಕಾರ್ಯ ಜಗತ್ತಿನ ಪಾಲನೆ ಮಾಡುವುದೆಂದು ಹಿಂದೆ ಹೇಳಿದೆ. ಆದ್ದರಿಂದ ಪೂರ್ವಾಪರ ವಿರೋಧದ ಶಂಕೆಗೆ ಇಲ್ಲಿ ಅವಕಾಶವಿದೆ. ಶ್ರೀ ವಾದಿರಾಜರ ಪರಿಹಾರ ಹೀಗಿದೆ— ಬ್ರಹ್ಮಾಂಡದೊಳಗಿನ ಸೃಷ್ಟಿಯನ್ನು ಪ್ರದ್ಯುಮ್ನರೂಪೀ ಭಗವಂತನು ಮಾಡುವನು. ಕಾಮನ ಅಂತರ್ಯಾಮಿಯಾದ ಆ ಭಗವಂತನು ಸ್ತ್ರೀ ಪುರುಷರಲ್ಲಿ ಪರಸ್ಪರ ಅನುರಾಗವನ್ನು ಹುಟ್ಟಿಸಿ ಪುರುಷರಿಂದ ಸ್ತ್ರೀಯರಲ್ಲಿ ಸಂತಾನಪರಂಪರೆಯನ್ನು ಸೃಜಿಸುವನು. ಹೀಗೆ ಸೃಷ್ಟಿ ಪಡೆದ ಜೀವರನ್ನು

ಅನಿರುದ್ಧರೂಪೀ ಭಗವಂತನು ಪಾಲಿಸುವನು. ಸಂಕರ್ಷಣರೂಪೀ ಭಗವಂತನು ಕೊನೆಯಲ್ಲಿ ತನ್ನ ಮುಖಾಗ್ನಿಯಿಂದ ಎಲ್ಲರನ್ನೂ ಸಂಹರಿಸುವನು. ಹೀಗೆ ಈ ಮೂರು ಭಗವದ್ರೂಪಗಳು ಮಾಡುವ ಸೃಷ್ಟಿ ಸ್ಥಿತಿ ಸಂಹಾರಗಳನ್ನು ಹಿಂದಿನ ಶ್ಲೋಕದಲ್ಲಿ ಹೇಳಿದೆ. ಈ ಶ್ಲೋಕದಲ್ಲಿ ಹೇಳಿರುವ, ಅನಿರುದ್ಧರೂಪಿ ಭಗವಂತನು ಮಾಡುವ ಸೃಷ್ಟಿ ಬೇರೆ ರೀತಿಯದು. ಬ್ರಹ್ಮಾಂಡದ ಸೃಷ್ಟಿಗೆ ಮುಂಚಿತವಾಗಿ ತನ್ನ ದೇಹದೊಳಗೆ ಸ್ತ್ರೀನಿರಪೇಕ್ಷವಾಗಿ ಆ ಭಗವಂತನು ಮಾಡುವ ಸೃಷ್ಟಿ ಇದು. ತನ್ನ ಉದರದಲ್ಲಿರುವ ಅನಂತಾನಂತ ಜೀವರಿಗೆ ಅನಿರುದ್ಧನು ಲಿಂಗ ದೇಹಕ್ಕೆ ಮಾತ್ರ ಆವರಣವಾಗಿರುವ, ಶುದ್ಧ ಪ್ರಕೃತ್ಯಂಶ ದಿಂದ ನಿರ್ಮಿಸಿಕೊಡುವನು. ಇಂಥ ಸೂಕ್ಷ್ಮ ದೇಹವನ್ನು ಪಡೆದ ಅನಂತಾನಂತ ಜೀವರು ಪರಮಾಣುಪ್ರದೇಶದಷ್ಟು ಅಲ್ಪದೇಶದಲ್ಲಿರುವರು. ಅನಿರುದ್ಧನಾಮಕ ಭಗವಂತನು ಸೃಜಿಸಿದ ದೇಹಗಳಿಂದ ಆ ಜೀವರು ತಮಗೆ ಪೋಷಕವಾದ ವಾಯ್ವಾಹಾರಾದಿಗಳನ್ನು ಸೇವಿಸುತ್ತ ತೃಪ್ತರಾಗಿ ತಮ್ಮ ಯೋಗ್ಯ ತಾನುಗುಣ ವಾದ ಮಾನಸಿಕ ಕರ್ಮಗಳನ್ನು ತಮ್ಮ ಪೂರ್ವಕರ್ಮಗಳನ್ನನುಸರಿಸಿ ಮಾಡುತ್ತಿರುವರು. ಆ ಅನಂತಾನಂತ ಜೀವರಲ್ಲಿ ಯಾವ ಜೀವರಿಗೆ ಕರ್ಮವು ಪರಿಪಕ್ವವಾಗುವುದೋ ಆ ಜೀವರು ಆ ಕಲ್ಪದಲ್ಲೇ ಸ್ಥೂಲದೇಹವನ್ನು ಪಡೆಯುವರು. ಉಳಿದವರು ಅದೇ ರೀತಿ ಇದ್ದು ಮುಂದಿನ ಕಲ್ಪಗಳಲ್ಲಿ ಆವರವರ ಕರ್ಮಗಳು ಪಕ್ವಾವಸ್ಥೆಯನ್ನು ಪಡೆದಾಗ ಸ್ಥೂಲದೇಹವನ್ನು ಪಡೆಯುವರು. ಹೀಗೆ ಅನಾದಿ ಕಾಲದಿಂದ ಅನಂತಕಾಲದಲ್ಲಿ ಜೀವರ ಸೃಷ್ಟಿ ನಡೆಯುತ್ತಲೇ ಇರುವುದು. ಎಲ್ಲ ಜೀವರೂ ಒಂದೇ ಕಲ್ಪದಲ್ಲಿ ಸೃಷ್ಟಿಸಲ್ಪಟ್ಟು ಅದೇ ಕಲ್ಪದಲ್ಲಿ ಮುಕ್ತರಾಗುವ ಸಂಭವವೇ ಇಲ್ಲ. ಅನಿರುದ್ಧನಾಮಕ ಭಗವಂತನು ಹೀಗೆ ಮಾಡುವ ಸೃಷ್ಟಿ ಅತಿ ಸೂಕ್ಷ್ಮವಾದುದರಿಂದ ಹಿಂದೆ ಇದನ್ನು ಹೇಳದೆ ಈ ಶ್ಲೋಕದಲ್ಲಿ ಹೇಳಿದ್ದಾರೆ. ಹಿಂದಿನ ಶ್ಲೋಕದಲ್ಲಿ ಪ್ರದ್ಯುಮ್ನನಾಮಕ ಭಗವಂತನು ಅನಿರುದ್ಧರೂಪೀ ಭಗವಂತನಿಗೆ ತನ್ನ ಉದರದಲ್ಲಿದ್ದ ಜೀವರನ್ನು ಕೊಟ್ಟಾಗ ಸ್ವಕರ್ಮಯುಕ್ತರಾದ ಆ ಜೀವರನ್ನು ಅನಿರುದ್ಧನು ತನ್ನ ಉದರದಲ್ಲಿ ಇಟ್ಟುಕೊಂಡನೆಂದು ಹೇಳಿರುವುದೂ ಈ ಸೂಕ್ಷ್ಮಸೃಷ್ಟಿಯನ್ನು ಹೇಳುವ ಉದ್ದೇಶದಿಂದಲೇ. ಆದುದರಿಂದ ಪೂರ್ವೋತ್ತರ ವಿರೋಧಕ್ಕೆ ಅವಕಾಶವಿಲ್ಲ.

ಈ ಶ್ಲೋಕದಲ್ಲಿ ನಿರ್ದೇಹಕ ಎಂಬ ಪದಕ್ಕೆ ಯಾವ ದೇಹವೂ ಇಲ್ಲದ ಜೀವರು ಎಂದು ಅರ್ಥವಾಗುವುದು. ಆದರೆ ಜೀವರಿಗೆ ಅನಾದಿ ಕಾಲದಿಂದ

ಪ್ರಲಯದಲ್ಲೂ ನಾಶವಾಗದ ಲಿಂಗದೇಹವಿದ್ದೇ ಇರುವುದು. ಆದ್ದರಿಂದ ನಿರ್ದೇಹಕಾನ್ ಎಂದರೆ ಲಿಂಗ ದೇಹ ವ್ಯತಿರಿಕ್ತದೇಹರಹಿತರೆಂದೇ ಅರ್ಥಮಾಡಬೇಕು.

ಅನಿರುದ್ಧನಾಮಕ ಭಗವಂತನು ಮಾಡುವ ಅತ್ಯಂತ ಸೂಕ್ಷ್ಮವಾದ ಈ ಸೃಷ್ಟಿಯೂ ಒಂದು ಮಿಶ್ರಸೃಷ್ಟಿಯೇ ಆಗಿದೆ.

ಸ್ವಯಂಭುಪ್ರಾಣಾತ್ಮಶೇಷ ಇತ್ಯಾದಿ ಪದದಲ್ಲಿ ಪ್ರಾಣಾತ್ಮ ಎಂದರೆ ಮುಖ್ಯ ಪ್ರಾಣ. ॥ ೯ ॥

ವಿಸ್ತಾರವಾಗಿ ಶುದ್ಧ ಸೃಷ್ಟಿಯನ್ನು ಈ ಶ್ಲೋಕದಲ್ಲಿ ನಿರೂಪಿಸಲಾಗಿದೆ—

**ಪಂಚಾತ್ಮಕಸ್ಸ ಭಗವಾನ್ ದ್ವಿಷಡಾತ್ಮಕೋಽಭೂತ್**
**ಪಂಚದ್ವಯೀ ಶತಸಹಸ್ರಪರೋಽಮಿತಶ್ಚ ।**
**ಏಕಸ್ಸಮೋಽಪ್ಯಖಿಲದೋಷಸಮುಜ್ಝಿತೋಽಪಿ**
**ಸರ್ವತ್ರ ಪೂರ್ಣಗುಣಕೋಽಪಿ ಬಹೂಪಮೋಽಭೂತ್ ॥ ೧೦ ॥**

**ಅರ್ಥ :- ಪಂಚಾತ್ಮಕಃ** ನಾರಾಯಣಾದಿ ಪಂಚರೂಪಿಯಾದ ಸ **ಭಗವಾನ್** ಆ ಭಗವಂತನು **ದ್ವಿಷಡಾತ್ಮಕಃ ಅಭೂತ್** ಕೇಶವಾದಿ ದ್ವಾದಶ ರೂಪಿಯಾದನು **ಚ** ಮತ್ತು **ಪಂಚದ್ವಯೀ** ಮತ್ಸ್ಯಾದಿ ದಶರೂಪಿಯೂ **ಶತ ಸಹಸ್ರಪರಃ** ನಾರಾಯಣಾದಿ ಶತರೂಪವುಳ್ಳವನೂ ವಿಶ್ವಾದಿಸಹಸ್ರ ರೂಪಿಯೂ, ಪರ ಮೊದಲಾದ ಬಹುರೂಪಿಯೂ **ಅಮಿತಃ** ಅಜಿತಾದಿ ಅನಂತ ರೂಪಿಯೂ **ಅಭೂತ್** ಆದನು, ಆ ಭಗವಂತನು **ಏಕಃ** ಒಬ್ಬನೇ ಒಬ್ಬನೂ **ಸಮೋಽಪಿ** ತನ್ನ ಸರ್ವರೂಪಗಳಲ್ಲಿ ಸಾಮ್ಯವುಳ್ಳವನೂ ಆದರೂ **ಅಖಿಲ ದೋಷಸಮುಜ್ಝಿತೋಽಪಿ** ಸಮಸ್ತದೋಷ ರಹಿತನೂ **ಸರ್ವತ್ರ** ತನ್ನ ಎಲ್ಲ ರೂಪಗಳಲ್ಲಿ **ಪೂರ್ಣಗುಣಕಃ ಅಪಿ** ಪೂರ್ಣ ಗುಣಶಾಲಿಯೂ ಆಗಿದ್ದರೂ **ಬಹೂಪಮಃ ಅಭೂತ್** ಬಹುಜೀವರಿಗೆ ಸದೃಶನಾದನು.

**ತಾತ್ಪರ್ಯ :-** ಹೀಗೆ ನಾರಾಯಣ, ವಾಸುದೇವ, ಸಂಕರ್ಷಣ, ಪ್ರದ್ಯುಮ್ನ ಮತ್ತು ಅನಿರುದ್ಧ ಎಂದು ಪಂಚರೂಪಿಯಾದ ಭಗವಂತನು ಕೇಶವ ನಾರಾಯಣಾದಿ ದ್ವಾದಶರೂಪಧಾರಿಯೂ, ಮತ್ಸ್ಯಕೂರ್ಮಾದಿ ದಶರೂಪ ಧರನೂ ನಾರಾಯಣಾದಿ ಶತರೂಪನೂ ವಿಶ್ವಾದಿ ಸಹಸ್ರರೂಪನೂ ಪರಾದಿ

ಬಹುರೂಪನೂ ಅಜಿತಾದಿ ಅನಂತ ರೂಪನೂ ಆದನು. ಹೀಗೆ ಅನಂತಾನಂತ ರೂಪಿಯಾದರೂ ಆ ಭಗವಂತನೊಬ್ಬನೆ. ಅವನ ಎಲ್ಲ ರೂಪಗಳೂ ಸರ್ವದೇಶ ಕಾಲವ್ಯಾಪ್ತಗಳು, ನಿರ್ದೋಷಗಳು, ಗುಣ ಪೂರ್ಣಗಳೂ. ಹೀಗಿದ್ದರೂ ಆ ಭಗವಂತನ ರೂಪಗಳು ಅನಂತ ಜೀವರಿಗೆ ಸದೃಶಗಳು.

**ವಿಶೇಷ ವಿಷಯ** :- ನಾನಾ ರೂಪಗಳನ್ನು ತಳೆಯುವುದರ ಮೂಲಕ ಭಗವಂತ ಮಾಡಿರುವ ಸೃಷ್ಟಿಯನ್ನು ಶುದ್ಧ ಸೃಷ್ಟಿಯೆಂದು ಕರೆಯಲಾಗಿದೆ. ಈ ಸೃಷ್ಟಿಯ ಶುದ್ಧತೆಯನ್ನು ಆಚಾರ್ಯರು ಇಲ್ಲಿ ನಿರೂಪಿಸಿದ್ದಾರೆ. ಭಗವಂತನ ನಾನಾ ಅವತಾರ ರೂಪಗಳಲ್ಲಿ ಮೂಲ ರೂಪದಲ್ಲಿ ಯಾವುದೇ ವೈಷಮ್ಯವಿಲ್ಲ. ಎಲ್ಲವೂ ಸರ್ವ ದೇಶಕಾಲ ವ್ಯಾಪ್ತಗಳು, ನಿರ್ದೋಷಗಳು ಮತ್ತು ಗುಣ ಪೂರ್ಣ ಗಳು. ಇದೇ ಇತರ ಸೃಷ್ಟಿಯಲ್ಲಿ ಇಲ್ಲದಿರುವ ಈ ಸೃಷ್ಟಿಯಲ್ಲಿರುವ ಶುದ್ಧತೆ.

ಭಗವಂತ ಒಬ್ಬನೇ ವ್ಯಕ್ತಿಯಾದರೂ ನಾನಾ ರೂಪಗಳನ್ನು ಧರಿಸಿರುವ ಕಾರಣ ಬಹುತ್ವವೂ ಇದೆ. ಈ ಬಹುತ್ವ ಜೀವರ ಬಹುತ್ವದಂತಲ್ಲ, ಜೀವರು ಸ್ವಭಾವತಃ ಪರಸ್ಪರ ಭಿನ್ನರಾಗಿದ್ದು ಸ್ವಾಭಾವಿಕವಾಗಿ ಬಹುತ್ವವನ್ನು ಪಡೆದಿದ್ದಾರೆ. ಆದರೆ ಭಗವಂತನ ಬಹುತ್ವ ಸ್ವಾಭಾವಿಕವಾದುದಲ್ಲ. ಭೇದಪ್ರತಿನಿಧಿಯಾದ ವಿಶೇಷದ ಸಾಮರ್ಥ್ಯದಿಂದ ಉಂಟಾದ ಬಹುತ್ವ. ॥ ೧೦ ॥

ಮುಂದಿನ ಮೂರು ಶ್ಲೋಕಗಳಲ್ಲಿ ಶ್ರುತ್ಯಾದಿ ಪ್ರಮಾಣಸಿದ್ಧವಾದ ಭಗವಂತನ ಸ್ವರೂಪವನ್ನು ವಿವರಿಸಲಾಗಿದೆ :-

**ನಿರ್ದೋಷಪೂರ್ಣ ಗುಣವಿಗ್ರಹ ಆತ್ಮತಂತ್ರೋ**
**ನಿಶ್ಚೇತನಾತ್ಮಕಶರೀರಗುಣೈಶ್ಚ ಹೀನಃ ।**
**ಆನಂದಮಾತ್ರಕರಪಾದಮುಖೋದರಾದಿಃ**
**ಸರ್ವತ್ರ ಚ ಸ್ವಗತಭೇದವಿವರ್ಜಿತಾತ್ಮಾ ॥ ೧೧ ॥**

**ಅರ್ಥ** :- **ನಿರ್ದೋಷಪೂರ್ಣಗುಣವಿಗ್ರಹಃ** ದೋಷರಹಿತವೂ ಪೂರ್ಣವೂ ಆದ ಗುಣಗಳೇ ಶರೀರವಾಗುಳ್ಳವನು **ಆತ್ಮತಂತ್ರಃ** ಸ್ವತಂತ್ರನು **ನಿಶ್ಚೇತನಾತ್ಮಕ ಶರೀರಗುಣೈಶ್ಚ ಹೀನಃ** ಜಡವಾದ ಶರೀರ ಮತ್ತು ಗುಣಗಳಿಂದ ರಹಿತನು **ಆನಂದಮಾತ್ರಕರಪಾದಮುಖೋದರಾದಿಃ** ಕೇವಲ ಆನಂದ

ಸ್ವರೂಪವಾದ ಹಸ್ತ, ಪಾದ, ಮುಖ, ಉದರ ಮೊದಲಾದ ಅವಯವಗಳುಳ್ಳವನು **ಸರ್ವತ್ರ ಚ** ತನ್ನ ಎಲ್ಲ ರೂಪಗಳಲ್ಲೂ **ಸ್ವಗತಭೇದವಿವರ್ಜಿತಾತ್ಮಾ** ಪರಸ್ಪರವಾಗಿ ಮತ್ತು ಅವಯವಾದಿಗಳಿಂದ ಭೇದರಹಿತನು.

**ತಾತ್ಪರ್ಯ** :- ಭಗವಂತನ ಶರೀರ ನಿರ್ದೋಷವೂ ಪರಿಪೂರ್ಣವೂ ಆದ ಜ್ಞಾನಾನಂದಾದಿಗುಣ ಸ್ವರೂಪವಾದುದು. ಅವನು ಸ್ವತಂತ್ರ, ಜೀವರಿಗಿರುವ ಜಡ ಶರೀರವಾಗಲಿ, ಜಡಗುಣಗಳಾಗಲಿ ಭಗವಂತನಿಗೆ ಎಂದೂ ಇಲ್ಲ. ಅವನ ಕರಚರಣಾದಿ ಎಲ್ಲ ಅವಯವಗಳೂ ಆನಂದಮಾತ್ರ ರೂಪವಾದವು. ಅವನ ಅನಂತ ರೂಪಗಳಿಗೆ ಪರಸ್ಪರ ಭೇದವಿಲ್ಲ. ಅವನಿಗೂ ಅವನ ಗುಣಕ್ರಿಯಾದಿ ಧರ್ಮಗಳಿಗೂ ಅವನ ಕರಚರಣಾದ್ಯವಯವಗಳಿಗೂ ಸರ್ವಥಾ ಭೇದವಿಲ್ಲ. ॥ ೧೧ ॥

**ಕಾಲಾಚ್ಚ ದೇಶಗುಣತೋಽಸ್ಯ ನ ಚಾದಿರಂತೋ**
**ವೃದ್ಧಿಕ್ಷಯೌ ನ ತು ಪರಸ್ಯ ಸದಾತನಸ್ಯ ।**
**ನೈತಾದೃಶಃ ಕ್ವ ಚ ಬಭೂವ ನ ಚೈವ ಭಾವ್ಯೋ**
**ನಾಸ್ತ್ಯುತ್ತರಃ ಕಿಮು ಪರಾತ್ ಪರಮಸ್ಯ ವಿಷ್ಣೋಃ ॥ ೧೨ ॥**

**ಅರ್ಥ** :- **ಸದಾತನಸ್ಯ** ಸರ್ವದಾ ಒಂದೇ ತೆರನಾಗಿರುವ **ಪರಸ್ಯ** ಸರ್ವಶ್ರೇಷ್ಠನಾದ **ಅಸ್ಯ** ಈ ಭಗವಂತನಿಗೆ **ಕಾಲಾತ್** ಕಾಲದಿಂದಾಗಲಿ **ದೇಶಗುಣತಶ್ಚ** ದೇಶ ಮತ್ತು ಗುಣಗಳಿಂದಾಗಲೀ **ಆದಿಃ ಅಂತಶ್ಚ** ಆದಿಯೂ ಅಂತ್ಯವೂ ನ ಇಲ್ಲ **ವೃದ್ಧಿಕ್ಷಯೌ ತು ನ** ವೃದ್ಧಿಕ್ಷಯಗಳೂ ಇಲ್ಲ **ಏತಾದೃಶಃ** ಇಂಥವನು **ಕ್ವಚ ನ ಬಭೂವ** ಎಂದೂ ಇರಲಿಲ್ಲ **ನ ಚೈವ ಭಾವ್ಯಃ** ಮುಂದೆಂದೂ ಹುಟ್ಟುವುದೂ ಇಲ್ಲ **ಪರಾತ್** ಬ್ರಹ್ಮಾದ್ಯುತ್ತಮಳಾದ ಲಕ್ಷ್ಮೀದೇವಿಗಿಂತಲೂ **ಪರಮಸ್ಯ** ಶ್ರೇಷ್ಠನಾದ **ವಿಷ್ಣೋಃ** ವಿಷ್ಣುವಿಗೆ **ಉತ್ತರಃ ನಾಸ್ತಿ** ಶ್ರೇಷ್ಠನಿಲ್ಲವೇ ಇಲ್ಲ **ಕಿಮು** ಇದನ್ನು ಹೇಳಬೇಕೇನು?

**ತಾತ್ಪರ್ಯ** :- ಭಗವಂತ ಸರ್ವಕಾಲದಲ್ಲೂ ಒಂದೇ ವಿಧವಾಗಿರುವವನು. ಅವನಿಗೆ ಪೂರ್ವಾವಧಿಯೂ ಇಲ್ಲ, ಉತ್ತರಾವಧಿಯೂ ಇಲ್ಲ, ಹಿಗ್ಗುಕುಗ್ಗುಗಳೂ ಇಲ್ಲ. ಈ ಭಗವಂತನಿಗೆ ಸಮಾನನಾದವನೂ ಹಿಂದೂ ಎಂದೂ ಇರಲಿಲ್ಲ, ಮುಂದೂ ಎಂದೂ ಹುಟ್ಟುವುದಿಲ್ಲ. ಚತುರ್ಮುಖಾದಿಗಳಿಗಿಂತಲೂ

ಲಕ್ಷ್ಮೀದೇವಿ ಶ್ರೇಷ್ಠಳು. ಅವಳಿಗೂ ಉತ್ತಮ ಈ ಭಗವಂತ. ಇವನಿಗಿಂತ ಉತ್ತಮ ರಿಲ್ಲವೆಂದು ಹೇಳಬೇಕೇನು? ॥ ೧೨ ॥

**ಸರ್ವಜ್ಞ ಈಶ್ವರತಮಃ ಸ ಚ ಸರ್ವಶಕ್ತಿಃ**
**ಪೂರ್ಣಾವ್ಯಯಾತ್ಮಬಲಚಿತ್ಸುಖವೀರ್ಯಸಾರಃ ।**
**ಯಸ್ಯಾಜ್ಞಯಾ ರಹಿತಮಿಂದಿರಯಾ ಸಮೇತಂ**
**ಬ್ರಹ್ಮೇಶಪೂರ್ವಕಮಿದಂ ನ ತು ಕಸ್ಯ ಚೇಶಮ್ ॥ ೧೩ ॥**

**ಅರ್ಥ** :- ಸ ಚ ಆ ಭಗವಂತನಾದರೋ **ಸರ್ವಜ್ಞಃ** ಸಮಸ್ತವನ್ನೂ ತಿಳಿದವನು **ಈಶ್ವರತಮಃ** ಮುಖ್ಯನಿಯಾಮಕನು **ಸರ್ವಶಕ್ತಿಃ** ಸರ್ವಸಮರ್ಥನು **ಪೂರ್ಣಾವ್ಯಯಾತ್ಮಬಲಚಿತ್ಸುಖವೀರ್ಯಸಾರಃ** ಪರಿಪೂರ್ಣಗಳೂ ನಾಶರಹಿತ ಗಳೂ, ಸ್ವರೂಪಭೂತವೂ ಆದ ಬಲ, ಜ್ಞಾನ, ಆನಂದ **ವೀರ್ಯ** ಈ ಗುಣಗಳ ಪ್ರಯುಕ್ತ ಸರ್ವೋತ್ತಮನು **ಯಸ್ಯ** ಯಾವ ಭಗವಂತನ **ಆಜ್ಞಯಾ ರಹಿತಂ** ಆಜ್ಞೆಯಿಂದ ರಹಿತವಾದ **ಇಂದಿರಯಾ ಸಮೇತಂ** ರಮೆಯಿಂದ ಸಹಿತವಾದ **ಬ್ರಹ್ಮೇಶಪೂವಕಂ** ಬ್ರಹ್ಮರುದ್ರಾದಿಗಳಿಂದ ಕೂಡಿದ **ಇದಂ** ಈ ಜಗತ್ತು **ಕಸ್ಯ ಚ** ಯಾವುದೇ ಕಾರ್ಯಕ್ಕೆ **ಈಶಂ ನ ತು** ಸಮರ್ಥವಲ್ಲವೇ ಅಲ್ಲ.

**ತಾತ್ಪರ್ಯ** :- ಭಗವಂತ ಸರ್ವಜ್ಞ. ನಮಗೆ ನಿಯಾಮಕರೆಂದು ಪ್ರಸಿದ್ಧರಾದ ಬ್ರಹ್ಮಾದಿಗಳಿಗಿಂತಲೂ ಮುಖ್ಯ ನಿಯಾಮಕ. ಸರ್ವಶಕ್ತ. ಇವನ ಬಲ, ಜ್ಞಾನ, ಆನಂದ, ವೀರ್ಯ ಮೊದಲಾದ ಗುಣಗಳು ಪೂರ್ಣವೂ, ನಾಶರಹಿತವೂ ಭಗವತ್ಸ್ವರೂಪಭೂತವೂ ಆದವು. ಆದುದರಿಂದಲೇ ಇವನು ಸರ್ವಶ್ರೇಷ್ಠ ಲಕ್ಷ್ಮೀದೇವಿ, ಬ್ರಹ್ಮರುದ್ರಾದಿ ದೇವತೆಗಳು-ಇವರೆಲ್ಲರೂ ಸೇರಿದಂತೆ ಈ ಜಗತ್ತು ಈ ಭಗವಂತನ ಆಜ್ಞೆಯಿಲ್ಲದೆ ಏನನ್ನು ಮಾಡಲೂ ಅಸಮರ್ಥ.

ಎಲ್ಲ ದೇವತೆಗಳೂ ಭಗವಂತನಿಗೆ ಸಾಕ್ಷಾತ್ ಅಥವಾ ಪರಂಪರೆಯಾಗಿ ಪ್ರತಿಬಿಂಬರಾಗಿದ್ದಾರೆ ಎಂದು ಮುಂದಿನ ಶ್ಲೋಕದಲ್ಲಿ ವಿವರಿಸಲಾಗಿದೆ.

**ಆಭಾಸಕೋಽಸ್ಯ ಪವನಃ ಪವನಸ್ಯ ರುದ್ರಃ**
**ಶೇಷಾತ್ಮಕೋ ಗರುಡ ಏವ ಚ ಶಕ್ರಕಾಮೌ ।**
**ವೀಂದ್ರೇಶಯೋಸ್ತದಪರೇ ತ್ವನಯೋಶ್ಚ ತೇಷಾ-**
**ಮೃಷ್ಯಾದಯಃ ಕ್ರಮಶ ಊನಗುಣಾಃ ಶತಾಂಶಾತ್ ॥ ೧೪ ॥**

**ಅರ್ಥ** :- **ಅಸ್ಯ** ಈ ಭಗವಂತನಿಗೆ **ಪವನಃ** ಮುಖ್ಯಪ್ರಾಣನು **ಆಭಾಸಕಃ** ಪ್ರತಿಬಿಂಬನು **ಪವನಸ್ಯ** ಮುಖ್ಯಪ್ರಾಣನಿಗೆ **ರುದ್ರಃ** ರುದ್ರನೂ **ಶೇಷಾತ್ಮಕೋ ಗರುಡ ಏವ ಚ** ಮುಂದೆ ಶೇಷಪದವಿಗೆ ಬರುವುದರಿಂದ ಶೇಷನೇ ಆಗಿರುವ ಗರುಡನೂ **ಆಭಾಸಕಃ** ಪ್ರತಿಬಿಂಬನು **ವೀಂದ್ರೇಶಯೋಃ** ಗರುಡ ರುದ್ರರಿಗೆ **ಶಕ್ರಕಾಮೌ** ಇಂದ್ರ ಮತ್ತು ಕಾಮರು **ಆಭಾಸಕೌ** ಪ್ರತಿಬಿಂಬರು **ಅನಯೋಶ್ಚ** ಇವರಿಬ್ಬರಿಗಾದರೊ **ತದಪರೇ** ಅವರಿಬ್ಬರಿಗಿಂತ ಭಿನ್ನರಾದವರು **ಆಭಾಸಕಾಃ** ಪ್ರತಿಬಿಂಬರು **ತೇಷಾಂ** ಅವರಿಗೆ **ಋಷ್ಯಾದಯಃ** ಋಷಿಗಳೇ ಮೊದಲಾದವರು **ಆಭಾಸಕಾಃ** ಪ್ರತಿಬಿಂಬರು, ಇವರೆಲ್ಲರೂ **ಕ್ರಮಾತ್** ಕ್ರಮವಾಗಿ **ಶತಾಂಶಕಾತ್** ತಮ್ಮ ಹಿಂದಿನ ಉತ್ತಮರಿಗಿಂತ ನೂರು ಅಂಶಕ್ಕಿಂತ **ಊನಗುಣಾಃ** ಕಡಿಮೆ ಗುಣವುಳ್ಳವರು.

**ತಾತ್ಪರ್ಯ** :- ಭಗವಂತನಿಗೆ ಮುಖ್ಯಪ್ರಾಣನು ಪ್ರತಿಬಿಂಬ, ಮುಖ್ಯ ಪ್ರಾಣನಿಗೆ ರುದ್ರನೂ ಮುಂದೆ ಶೇಷಪದವಿಗೆ ಬರುವ ಗರುಡನೂ ಪ್ರತಿಬಿಂಬರು. ಗರುಡ ರುದ್ರರಿಗೆ ಇಂದ್ರ ಮತ್ತು ಕಾಮರು ಪ್ರತಿಬಿಂಬರು. ಇಂದ್ರ ಕಾಮರಿಗೆ ಆಹಂಕಾರಿಕಪ್ರಾಣ, ಅನಿರುದ್ಧ, ಚಂದ್ರ ಸೂರ್ಯಾದಿಗಳು ಪ್ರತಿಬಿಂಬರು. ಸೂರ್ಯಾದಿಗಳಿಗೆ ಋಷಿಗಳೇ ಮೊದಲಾದವರು ಪ್ರತಿಬಿಂಬರು. ಇವರಲ್ಲಿ ಎಲ್ಲರೂ ಉತ್ತಮರಿಂದ ನೂರು ಅಂಶಗಳಷ್ಟು ಕಡಿಮೆ ಗುಣಗಳುಳ್ಳವರು.

**ವಿಶೇಷ ವಿಷಯ** :- ಆಭಾಸಕ ಎಂದರೆ ಪ್ರತಿಬಿಂಬ. ಆ ಎಂದರೆ ತನ್ನಲ್ಲಿರುವ ಬಿಂಬದ ಸ್ವಲ್ಪ ಸಾದೃಶ್ಯದಿಂದ, ಭಾಸಕ – ಬಿಂಬರೂಪವನ್ನು ತಿಳಿಸಿ ಕೊಡುವುದು ಆಭಾಸಕ. ಪ್ರತಿಬಿಂಬವು ಬಿಂಬಭಾಸಕವೆನ್ನುವುದು ಕನ್ನಡಿಯಲ್ಲಿ ಪ್ರತಿಬಿಂಬವನ್ನು ನೋಡಿ ತಮ್ಮ ಮುಖವನ್ನು ತಿಳಿಯುವುದರಿಂದ ಪ್ರಸಿದ್ಧವಾಗಿದೆ.

ಪುರುಷರು ಹೇಗೆ ಭಗವಂತನಿಗೆ ಪ್ರತಿಬಿಂಬರಾಗಿ ಅವನಿಗೆ ಅಧೀನರೋ ಹಾಗೆ ಸ್ತ್ರೀಯರೂ ಭಗವಂತನಿಗೆ ಪ್ರತಿಬಿಂಬರಾಗಿ ಅವನಿಗೆ ಅಧೀನರಾಗಿರುವ ರೆಂದು ಈ ಶ್ಲೋಕದಲ್ಲಿ ಹೇಳಿದೆ —

**ಆಭಾಸಕಾ ತ್ವಥ ರಮಾऽಸ್ಯ ಮರುತ್ಸ್ವರೂಪಾತ್**
**ಶ್ರೇಷ್ಠಾऽಪ್ಯಜಾತ್ತದನು ಗೀಃ ಶಿವತೋ ವರಿಷ್ಠಾ ।**
**ತಸ್ಯಾ ಉಮಾ ವಿಪತಿನೀ ಚ ಗಿರಸ್ತಯೋಸ್ತು**
**ಶಚ್ಯಾದಿಕಾಃ ಕ್ರಮಶ ಏವ ಯಥಾ ಪುಮಾಂಸಃ ॥ ೧೫ ॥**

**ಅರ್ಥ :- ಅಥ** ಅಂತೆಯೇ **ರಮಾ** ಲಕ್ಷ್ಮೀದೇವಿಯೂ **ಮರುತ್ ಸ್ವರೂಪಾತ್** ಮುಖ್ಯಪ್ರಾಣಸ್ವರೂಪನಾದ **ಅಜಾತ್** ಚತುರ್ಮುಖ ಬ್ರಹ್ಮನಿಗಿಂತ **ಶ್ರೇಷ್ಠಾ ಅಪಿ** ಶ್ರೇಷ್ಠಳೂ **ಅಸ್ಯ** ಈ ಭಗವಂತನಿಗೆ **ಆಭಾಸಕಾ ತು** ಪ್ರತಿಬಿಂಬಳೂ ಆಗಿದ್ದಾಳೆ **ತದನು** ಅನಂತರ **ಶಿವತಃ** ರುದ್ರನಿಗಿಂತ **ವರಿಷ್ಠಾ** ಶ್ರೇಷ್ಠಳಾದ **ಗೀಃ** ಸರಸ್ವತೀ - ಭಾರತಿಯರು **ತಸ್ಯಾಃ** ಆ ಲಕ್ಷ್ಮೀದೇವಿಗೆ **ಆಭಾಸಕಾ** ಪ್ರತಿಬಿಂಬಳು **ಗಿರಃ** ಸರಸ್ವತಿ - ಭಾರತಿಯರಿಗೆ **ಉಮಾ ವಿಪತಿನೀ ಚ** ಪಾರ್ವತೀ ಮತ್ತು ಗರುಡಪತ್ನಿಯರು (ಆಭಾಸಿಕೇ - ಪ್ರತಿಬಿಂಬರು.) **ತಯೋಸ್ತು** ಅವರಿಬ್ಬರಿಗಾದರೋ **ಶಚ್ಯಾದಿಕಾಃ** ಶಚೀದೇವಿಯೇ ಮೊದಲಾದವರು (ಪ್ರತಿಬಿಂಬರು) **ಯಥಾ ಪುಮಾಂಸಃ** ಪುರುಷರು ಹೇಗೆ ತಮಗಿಂತ ಉತ್ತಮರಿಗೆ ತಾವು ಪ್ರತಿಬಿಂಬರೋ ಹಾಗೆ ಸ್ತ್ರೀಯರೂ **ಕ್ರಮಶ ಏವ** ಗುಣಕ್ರಮದಿಂದಲೇ ಸ್ವೋತ್ತಮರಿಗೆ ಪ್ರತಿಬಿಂಬರಾಗಿರುವರು.

**ತಾತ್ಪರ್ಯ :-** ಲಕ್ಷ್ಮೀದೇವಿಯು, ಮುಖ್ಯ ಪ್ರಾಣನಾಗಿದ್ದು ಬ್ರಹ್ಮಪದವಿಗೆ ಬಂದಿರುವ ಚತುರ್ಮುಖನಿಗಿಂತ ಶ್ರೇಷ್ಠಳೂ ಭಗವಂತನಿಗೆ ಪ್ರತಿಬಿಂಬಳೂ ಆಗಿರುವಳು. ಶಿವನಿಗಿಂತ ಶ್ರೇಷ್ಠರಾದ ಸರಸ್ವತೀ-ಭಾರತಿಯರು ಲಕ್ಷ್ಮೀದೇವಿಗೆ ಪ್ರತಿಬಿಂಬರು. ಸರಸ್ವತೀ ಭಾರತಿಯರಿಗೆ ಪಾರ್ವತೀ-ಗರುಡ ಪತ್ನಿಯರು ಪ್ರತಿಬಿಂಬರು. ಪುರುಷರು ಹೇಗೆ ತಮ್ಮ ತಮ್ಮ ಯೋಗ್ಯತಾನುಗುಣವಾಗಿ ಬಿಂಬ - ಪ್ರತಿಬಿಂಬ ಭಾವವನ್ನು ಪಡೆದಿರುವರೋ ಹಾಗೆಯೇ ಸ್ತ್ರೀಯರೂ ತಮ್ಮ ಯೋಗ್ಯತಾನುಸಾರ ಬಿಂಬ ಪ್ರತಿಬಿಂಬ ಭಾವವನ್ನು ಪಡೆದಿರುವರು.

**ವಿಶೇಷ ವಿಷಯ :-** 'ಪುರುಷರಂತೆ ಸ್ತ್ರೀಯರು' ಎಂದು ಪುರುಷರ ದೃಷ್ಟಾಂತ ಕೊಟ್ಟಿರುವುದು ಬಿಂಬ ಪ್ರತಿಬಿಂಬ ಭಾವಕ್ಕೆ ಮಾತ್ರ ಸೀಮಿತವೆಂದು ಶ್ರೀವಾದಿರಾಜರು ಸ್ಪಷ್ಟಪಡಿಸಿದ್ದಾರೆ. ಪುರುಷರು ಹೇಗೆ ತಮ್ಮ ಯೋಗ್ಯತಾನುಗುಣವಾಗಿ ಸ್ವೋತ್ತಮರಿಗೆ ಪ್ರತಿಬಿಂಬರೂ ಸ್ವಾವರರಿಗೆ ಬಿಂಬರೂ ಆಗುವರೋ ಹಾಗೆ ಸ್ತ್ರೀಯರೂ ತಮ್ಮ ಯೋಗ್ಯತಾನುಸಾರ ಸ್ವೋತ್ತಮರಿಗೆ ಪ್ರತಿಬಿಂಬರೂ

ಸ್ತಾವರರಿಗೆ ಬಿಂಬರೂ ಆಗುವರು. ಆದರೆ ತಾರತಮ್ಯದ ವಿಷಯದಲ್ಲಿ ಸ್ತ್ರೀಯರ ಕ್ರಮ ಪುರುಷರ ಕ್ರಮದಂತಲ್ಲ. ವಾಣಿಯ ಪ್ರತಿಬಿಂಬಳಾದ ಉಮೆಯೇನೋ ತನ್ನ ಪುರುಷನಾದ ರುದ್ರನಿಗೆ ಅಧಮನಾದ ಇಂದ್ರನಿಗಿಂತ ಉತ್ತಮಳಾಗಿದ್ದಾಳೆ. ಆದರೆ ಇದೇ ಕ್ರಮ ಶಚೀದೇವಿಗೆ ಅನ್ವಯಿಸುವುದಿಲ್ಲ. ಉಮಾ ಪ್ರತಿಬಿಂಬಳಾದ ಶಚೀದೇವಿ ತನ್ನ ಪತಿ ಇಂದ್ರನಿಗೆ ಯಾರು ಅಧಮರೋ ಅವರೆಲ್ಲರಿಗೂ ಉತ್ತಮಳೆಂದೇನಿಲ್ಲ. ಇಂದ್ರನಿಗೆ ಅವರನಾದ ಆಹಂಕಾರಿಕ ಪ್ರಾಣನಿಗಿಂತ ಶಚೀದೇವಿ ಉತ್ತಮಳಲ್ಲ, ಅಧಮಳು. ಹಾಗೆಯೇ ಮನುವಿನ ಪತ್ನಿ ಮನುವಿಗಿಂತ ಅಧಮನಾದ ಪ್ರವಹನಿಗಿಂತ ಅವರಳೇ ಆಗಿದ್ದಾಳೆ. ಬೃಹಸ್ಪತಿಯ ಪತ್ನಿ ತಾರೆ ಬೃಹಸ್ಪತಿಗೆ ಅಧಮರಾದ ಅನೇಕ ಪುರುಷರಿಗಿಂತ ಅವರಳಾಗಿದ್ದಾಳೆ. ವರುಣನ ಪತ್ನಿ ಗಂಗೆಯೂ ವರುಣನಿಗಿಂತ ಎಷ್ಟೋ ಪಾಲು ಅಧಮರಾದ ಪುರುಷರಿಗೆ ಅಧಮಳಾಗಿದ್ದಾಳೆ. ಆದ್ದರಿಂದ ಪುರುಷರು ಯಾರಿಂದ ಉತ್ತಮರೋ, ಆ ಪುರುಷರ ಸ್ತ್ರೀಯರೂ ಅವರಿಂದ ಉತ್ತಮರೆಂದು ಕ್ರಮವಿಲ್ಲ. ಆದ್ದರಿಂದಲೇ ಮನುಪತ್ನಿಗೇ ಸಮಾನಳಾದ ದಕ್ಷ ಪ್ರಜಾಪತಿಯ ಪತ್ನಿ ಪ್ರಸೂತಿ, ದಕ್ಷಪ್ರಜಾಪತಿಗಿಂತ ಅತ್ಯಂತ ಅವರಳಾಗಿರುವುದು ಯುಕ್ತವಾಗಿದೆ.

ಸ್ತ್ರೀ ಪುರುಷರ ತಾರತಮ್ಯದ ಸ್ವರೂಪವನ್ನು ಇಲ್ಲಿ ಹೇಳಲಾಗಿದೆ.

**ತಾಭ್ಯಶ್ಚ ತೇ ಶತಗುಣೈರ್ದಶತೋ ವರಿಷ್ಠಾಃ**
**ಪಂಚೋತ್ತರೈರಪಿ ಯಥಾ ಕ್ರಮಶಃ ಶ್ರುತಿಸ್ಥಾಃ ।**
**ಶಬ್ದೋ ಬಹುತ್ವವಚನಃ ಶತಮಿತ್ಯತಶ್ಚ**
**ಶ್ರುತ್ಯಂತರೇಷು ಬಹುಧೋಕ್ತಿವಿರುದ್ಧತಾ ನ ॥ ೧೬ ॥**

**ಅರ್ಥ :- ತಾಭ್ಯಶ್ಚ** ಆ ಸ್ತ್ರೀಯರಿಂದ **ತೇ** ಆ ಪುರುಷರು **ಶತಗುಣೈಃ** ನೂರು ಗುಣಗಳಿಂದ **ದಶತಃ** ಹತ್ತುಗುಣಗಳಿಂದ **ಪಂಚೋತ್ತರೈರಪಿ** ಹದಿನೈದು ಗುಣಗಳಿಂದಲೂ **ಯಥಾ** ಹೇಗೆ **ಕ್ರಮಶಃ** ಕ್ರಮದಿಂದ **ಶ್ರುತಿಸ್ಥಾಃ** ಶ್ರುತಿಯಲ್ಲಿ ಪ್ರತಿಪಾದಿಸಲ್ಪಟ್ಟಿರುವರೋ ಹಾಗೆ **ವರಿಷ್ಠಾಃ** ಶ್ರೇಷ್ಠರಾಗಿದ್ದಾರೆ **ಶತಮಿತಿ ಶಬ್ದಃ** ಶತವೆಂಬ ಶಬ್ದವು **ಬಹುತ್ವವಚನಃ** ಬಹುತ್ವವನ್ನು ಹೇಳುವುದು. **ಅತಶ್ಚ** ಆದ್ದರಿಂದಲೇ **ಶ್ರುತ್ಯಂತರೇಷು** ಇತರ ಶ್ರುತಿಗಳಲ್ಲಿ **ಬಹುಧೋಕ್ತಿವಿರುದ್ಧತಾ** ಅನೇಕ ಪ್ರಕಾರವಾಗಿ ಹೇಳಿರುವ ಪ್ರಯುಕ್ತ ವಿರೋಧವು **ನ** ಇಲ್ಲ.

**ತಾತ್ಪರ್ಯ** :- ಸ್ತ್ರೀಯರಿಂದ ಪುರುಷರಿಗೆ ಶ್ರೇಷ್ಠತೆಯು ವಿಭಿನ್ನ ರೀತಿಯಲ್ಲಿದೆ. ಕೆಲವೆಡೆ ಸ್ತ್ರೀಯರಿಗಿಂತ ಪುರುಷರು ಶತಗುಣಿತವಾದ ಶ್ರೇಷ್ಠತೆಯನ್ನು ಪಡೆದಿದ್ದಾರೆ. ಕೆಲವು ಕಡೆ ಕೇವಲ ದಶಗುಣಿತವಾದ ಶ್ರೇಷ್ಠತೆ ಪುರುಷರಿಗಿರುವುದು. ಕೆಲವೊಮ್ಮೆ ಪಂಚದಶಗುಣಿತವಾದ ಶ್ರೇಷ್ಠತೆ ಇರುವುದೂ ಉಂಟು. ಈ ಶ್ರೇಷ್ಠತೆಯ ಕ್ರಮವನ್ನು ಶ್ರುತಿಗಳಲ್ಲಿ ಹೇಗೆ ಹೇಳಿರುವರೋ ಅದನ್ನನುಸರಿಸಿ ತಿಳಿಯಬೇಕು. ವಿಭಿನ್ನಶ್ರುತಿಗಳಲ್ಲಿ ಒಬ್ಬರ ವಿಷಯದಲ್ಲೇ ಅನೇಕ ವಿಧವಾಗಿ ಶ್ರೇಷ್ಠತೆಯನ್ನು ಹೇಳಿರುವಂತೆ ಕಾಣಬಹುದು. ಆದರೆ ಶತಶಬ್ದಕ್ಕೆ ನೂರು ಎಂಬ ಅರ್ಥವನ್ನಿಟ್ಟುಕೊಳ್ಳದೆ ಬಹುತ್ವವೆಂಬ ಅರ್ಥವನ್ನಿಟ್ಟುಕೊಂಡರೆ ಯಾವ ವಿರೋಧವೂ ಇಲ್ಲ.

**ವಿಶೇಷ ವಿಷಯ** :- 'ಶತಗುಣಗಳಿಂದ ಶ್ರೇಷ್ಠ' ಎಂಬಲ್ಲಿ ಶತಗುಣವೆಂದರೆ ನೂರುಗುಣಗಳು ಎಂದರ್ಥವಲ್ಲ. ಹಾಗಾದರೆ ಎಲ್ಲರಿಗೂ ಇರುವಂತಹ ಜ್ಞಾನಾದಿ ಗುಣಗಳು ಸಮಾನವಾಗಿದ್ದು ಯಾವುದೋ ನೂರುಗುಣಗಳು ಜಾಸ್ತಿ ಇವೆ ಎಂದಾದೀತು. ವಾಸ್ತವಿಕವಾಗಿ 'ಶತಗುಣಗಳಿಂದ ಅಧಿಕ' ಎಂದರೆ ಹೀಗರ್ಥ—ರುದ್ರದೇವರಿಗೆ ಎಷ್ಟು ಜ್ಞಾನವಿದೆಯೋ ಅದನ್ನು ದ್ವಿಗುಣಿಸಬೇಕು. ಇದು ಒಂದು ಗುಣ. ಹೀಗೆ ದ್ವಿಗುಣಿಸುವುದರಿಂದ ಅಧಿಕವಾದ ಜ್ಞಾನವನ್ನು ದ್ವಿಗುಣಿಸಿದರೆ ದೊರಕುವ ಜ್ಞಾನ ಎರಡು ಗುಣವೆಂದೆನಿಸುವುದು. ಹೀಗೆ ದ್ವಿಗುಣಿಸುವುದರಿಂದ ಲಭಿಸುವ ಜ್ಞಾನದ ಮೊತ್ತವನ್ನು ದ್ವಿಗುಣಿಸಿದಾಗ ಸಿಗುವ ಜ್ಞಾನ ಮೂರು ಗುಣವಾಗುವುದು. ಈ ಮೊತ್ತವನ್ನು ದ್ವಿಗುಣಿಸಿದಾಗ ಸಿಗುವ ಜ್ಞಾನ ನಾಲ್ಕು ಗುಣ. ಹೀಗೆ ಉತ್ತರೋತ್ತರವಾಗಿ ದ್ವಿಗುಣಿಸುತ್ತ ಹೋದಾಗ ಲಭಿಸುವ ನೂರುಗುಣದ ಜ್ಞಾನವೇ ಶತಗುಣಿತವಾದ ಜ್ಞಾನ. ಸರಸ್ವತೀ ದೇವಿಯ ಜ್ಞಾನಕ್ಕಿಂತ ರುದ್ರದೇವರ ಜ್ಞಾನ ಶತಗುಣಿತವಾಗಿ ನ್ಯೂನವಾಗಿದೆ ಎಂದಾಗಲೂ ಇದೇ ಕ್ರಮದಲ್ಲಿ ನ್ಯೂನತೆಯನ್ನು ತಿಳಿಯಬೇಕು. ಹೀಗೆಯೇ ಆನಂದ, ಶಕ್ತಿ ಮೊದಲಾದ ಎಲ್ಲ ಗುಣಗಳೂ ಶತಗುಣಿತವೆಂದು ತಿಳಿಯಬೇಕು.

ಶತಶಬ್ದಕ್ಕೆ ಬಹುವೆಂದರ್ಥವನ್ನು ಗ್ರಹಿಸಿದಲ್ಲಿ ಶ್ರುತಿಗಳಲ್ಲಿ ಕಾಣುವ ವಿರೋಧದ ಪರಿಹಾರವಾಗುವುದೆಂದು ಇಲ್ಲಿ ಹೇಳಿದೆ. ಶತಶಬ್ದಕ್ಕೆ ನೂರು ಎಂದೇ ಅರ್ಥವನ್ನು ಗ್ರಹಿಸಿದಲ್ಲಿ ವಿರೋಧ ಪರಿಹಾರವಾಗಲಾರದು. ಉದಾಹರಣೆಗೆ ತೈತ್ತಿರೀಯದಲ್ಲಿ ರುದ್ರದೇವರಿಂದ ಬ್ರಹ್ಮನಿಗೆ ನೂರು ಗುಣಗಳು

ಅಧಿಕವೆಂದು ಹೇಳಿದೆ. ಆದರೆ ಛಾಂದೋಗ್ಯದಲ್ಲಿ ರುದ್ರನಿಗಿಂತ ಸರಸ್ವತಿಗೆ ನೂರು ಗುಣಗಳು ಅಧಿಕವೆಂದೂ, ಸರಸ್ವತಿಯಿಂದ ಬ್ರಹ್ಮನಿಗೆ ನೂರುಗುಣ ಅಧಿಕವೆಂದೂ ಹೇಳಿದೆ. ತೈತ್ತಿರೀಯದಲ್ಲಿ ಬರುವ ಶತಶಬ್ದ ಬಹುತ್ವವಾಚಿ ಎಂದರೆ ಮಾತ್ರ ವಿರೋಧ ಪರಿಹಾರವಾಗುವುದು, ಇಲ್ಲದಿದ್ದರೆ ಇಲ್ಲ ಎನ್ನುವುದು ಸ್ಪಷ್ಟ ॥ ೧೬ ॥

ಸಂಸಾರದಂತೆ ಮೋಕ್ಷದಲ್ಲೂ ತಾರತಮ್ಯವಿರುವುದೆಂದು ಈ ಶ್ಲೋಕದಲ್ಲಿ ಹೇಳಲಾಗಿದೆ —

**ತೇಷಾಂ ಸ್ವರೂಪಮಿದಮೇವ ಯತೋಽಥ ಮುಕ್ತಾ**
**ವಪ್ಯೇವಮೇವ ಸತತೋಚ್ಚವಿನೀಚರೂಪಾಃ ।**
**ಶಬ್ದಃ ಶತಂ ದಶಸಹಸ್ರಮಿತಿ ಸ್ಮ ಯಸ್ಮಾ**
**ತ್ತಸ್ಮಾನ್ನ ಹೀನವಚನೋಽಥ ತತೋಽಗ್ರ್ಯರೂಪಾಃ ॥ ೧೭ ॥**

**ಅರ್ಥ :-** **ಯತಃ** ಯಾವ ಕಾರಣದಿಂದ **ಇದಂ** ಈ ತಾರತಮ್ಯವು **ತೇಷಾಂ** ಆ ಜೀವರ **ಸ್ವರೂಪಮೇವ** ಸ್ವರೂಪವೇ ಆಗಿದೆಯೋ **ಅಥ** ಆದ್ದರಿಂದ **ಮುಕ್ತಾವಪಿ** ಮೋಕ್ಷದಲ್ಲೂ **ಏವಮೇವ** ಇದೇ ರೀತಿ (ಅವರು) **ಸತತೋಚ್ಚವಿನೀಚರೂಪಾಃ** ಯಾವಾಗಲೂ ಉಚ್ಚ-ನೀಚ ಸ್ವರೂಪವುಳ್ಳವ ರಾಗಿರುವರು **ಶತಂ ದಶಸಹಸ್ರಮಿತಿ** 'ಶತಂ ದಶಸಹಸ್ರಂ' ಎಂಬ **ಶಬ್ದಃ** ಶ್ರುತಿಯು **ಯಸ್ಮಾತ್** ಯಾವ ಕಾರಣದಿಂದಿರುವುದೋ **ತಸ್ಮಾತ್** ಆ ಕಾರಣದಿಂದ (ಶತಶಬ್ದವು) **ನ ಹೀನ ವಚನಃ** ಅಲ್ಪಸಂಖ್ಯೆಯೆಂಬ ಅರ್ಥವನ್ನು ಹೇಳುವುದಿಲ್ಲ **ಅಥ** ಆದ್ದರಿಂದ (ಆ ಜೀವರು) **ತತಃ** ದಶ ಶತಾದಿಗುಣ ಗಳಿಂದಲೂ **ಅಗ್ರ್ಯರೂಪಾಃ** ಶ್ರೇಷ್ಠವಾದ ಸ್ವರೂಪವುಳ್ಳವರು.

**ತಾತ್ಪರ್ಯ :-** ಸಂಸಾರ ದೆಸೆಯಲ್ಲಿರುವ ಈ ಹಿಂದೆ ಹೇಳಿದ ತಾರತಮ್ಯವು ಜೀವಸ್ವರೂಪವೇ ಆಗಿರುವುದರಿಂದ ಮುಕ್ತಿಯಲ್ಲೂ ಈ ಉಚ್ಚ ನೀಚಭಾವವು ಹಾಗೆಯೇ ಇರುವುದು. ಐತರೇಯದಲ್ಲಿ ಬರುವ 'ದಶ ಶತಂ ಸಹಸ್ರಂ' ಎಂಬ ಶ್ರುತಿಯೇ ಶತಶಬ್ದವು ನೂರು ಎಂಬ ಸಂಖ್ಯೆಯನ್ನು ಹೇಳದೆ ಬಹುತ್ವವನ್ನು ಹೇಳುವುದರಿಂದ ಶತಗುಣದಿಂದ ಶ್ರೇಷ್ಠರೆಂದು ಹೇಳಿದ್ದರೂ ಅದಕ್ಕಿಂತಲೂ ಶ್ರೇಷ್ಠ ಸ್ವರೂಪವುಳ್ಳವರೇ ಆಗಿದ್ದಾರೆ.

**ವಿಶೇಷ ವಿಷಯ** :- 'ಶಬ್ದಃ ಶತಂ ದಶಸಹಸ್ರಮಿತಿ' - 'ದಶ ಶತಂ ಸಹಸ್ರಂ' ಎಂಬ ಐತರೇಯ ವಾಕ್ಯದ ಅಭಿಪ್ರಾಯ ಹೀಗಿದೆ - ಶತ ಎಂಬ ಶಬ್ದವು ದಶವಾಚಕವೂ ಆಗಿದೆ. ಹಾಗೆಂದರೆ, ಹತ್ತನ್ನು ಹತ್ತು ಸಲ ಕೂಡಿದರೆ ಸಿಗುವ ಸಂಖ್ಯೆ ನೂರು ಆದ್ದರಿಂದ ನೂರರಲ್ಲಿ ಹತ್ತು ಹತ್ತುಗಳು ಸೇರಿವೆಯೆಂದು ಹೇಳಬಹುದು. ಈ ಕಾರಣದಿಂದಲೇ ಶತ ಎಂಬ ಶಬ್ದವು ತನ್ನಲ್ಲಿ ಸೇರಿರುವ ಒಂದು, ಎರಡು ಮೊದಲಾದ ಸಂಖ್ಯೆಗಳೂ ಶತ ಶಬ್ದದಿಂದ ವಾಚ್ಯವಾಗ ಬಹುದು. ಹೀಗೆಯೇ ಹತ್ತು ನೂರುಗಳು ಸೇರಿ ಒಂದು ಸಹಸ್ರವಾಗುವುದರಿಂದ ಶತ ಶಬ್ದವು ಸಹಸ್ರ ಸಂಖ್ಯೆಗೂ ವಾಚಕವೆಂದು ಹೇಳಬಹುದು. ಆದ್ದರಿಂದ ಯಾವ ಸಂಖ್ಯೆಯನ್ನಾದರೂ ಹೇಳುವ ಶತ ಶಬ್ದವು ಅಲ್ಪಸಂಖ್ಯಾರ್ಥಕವಲ್ಲ. ಯಾರು ಯಾರಲ್ಲಿ ಎಷ್ಟೆಷ್ಟು ಗುಣಗಳಿರುವುದೋ ಆ ಸಂಖ್ಯೆಯನ್ನು ಹೇಳುವ ಸಾಮರ್ಥ್ಯ ಶತ ಶಬ್ದಕ್ಕಿದೆ. ಹತ್ತು ಗುಣಗಳಿದ್ದರೆ ಶತ ಶಬ್ದವು ಅದೇ ಸಂಖ್ಯೆಯನ್ನು ಹೇಳುವುದು, ಹಾಗೆಯೇ ಹದಿನೈದು, ನೂರು, ಇನ್ನೂರು, ಸಾವಿರ ಹೀಗೆ ಯಾವುದೇ ಸಂಖ್ಯೆಯ ಗುಣಗಳಿದ್ದರೆ ಆ ಸಂಖ್ಯೆಯನ್ನು ಶತ ಶಬ್ದವು ಹೇಳುವುದು. 'ದಶ ಶತಂ ಸಹಸ್ರಂ' ಎಂಬ ಶ್ರುತಿಯ ಶೇಷ 'ತತ್ಸರ್ವಂ' ಎಂದಿದೆ. ಸಹಸ್ರವು ಸರ್ವವೂ ಎಂದರೆ ಅನಂತವೂ ಆಗುವುದೆಂದು ಈ ಶ್ರುತಿಯ ಅರ್ಥ. ಅನಂತದ ಮಧ್ಯೆ ಸಹಸ್ರ ಸಂಖ್ಯೆಯೂ ಸೇರಿರುವುದರಿಂದ ಸಹಸ್ರ ಶಬ್ದವು ಅನಂತ ವಾಚಕವೂ ಆಗಬಲ್ಲದೆಂದು ಭಾವ. ॥ ೧೭ ॥

ಜೀವರು ಸಂಸಾರಿಗಳಾಗಿರುವಾಗ ಮುಕ್ತರಲ್ಲ, ಅವರು ಮುಕ್ತರಾದಾಗ ಸಂಸಾರಿಗಳಲ್ಲ. ಆದ್ದರಿಂದ ಸಂಸಾರಿಗಳಲ್ಲೂ ಮುಕ್ತರಲ್ಲೂ ತಾರತಮ್ಯ ಸರ್ವದಾ ಇರುವುದೆಂಬ ಮಾತು ಸರಿಯಲ್ಲ ಎಂಬ ಶಂಕೆಗೆ ಈ ಶ್ಲೋಕದಲ್ಲಿ ಸಮಾಧಾನ ಹೇಳಿದೆ—

**ಏವಂ ನರೋತ್ತಮಪರಾಸ್ತು ವಿಮುಕ್ತಿಯೋಗ್ಯಾ**
**ಅನ್ಯೇ ಚ ಸಂಸೃತಿಪರಾ ಅಸುರಾಸ್ತಮೋಗಾಃ ।**
**ಏವಂ ಸದೈವ ನಿಯಮಃ ಕ್ವಚಿದನ್ಯಥಾ ನ**
**ಯಾವನ್ನ ಪೂರ್ತಿರುತ ಸಂಸೃತಿಗಾಃ ಸಮಸ್ತಾಃ ॥ ೧೮ ॥**

**ಅರ್ಥ** :- ಏವಂ ಹೀಗೆ ನರೋತ್ತಮಪರಾಃ ಜೀವೋತ್ತಮರಾದ ವಾಯುವೇ ಮುಖ್ಯವಾಗುಳ್ಳ ವಿಮುಕ್ತಿಯೋಗ್ಯಾಃ ಮುಕ್ತಿಯೋಗ್ಯರೂ ಸಂಸೃತಿ

**ಪರಾಃ** ಸಂಸಾರವೇ ಪರಮಫಲವಾಗಿರುವ **ಅನ್ಯೇ ಚ** ಇತರರೂ **ತಮೋಗಾಃ** ತಮೋ ಯೋಗ್ಯರಾದ **ಅಸುರಾಃ** ಅಸುರರು (ಯಾವಾಗಲೂ ಇರುವವರು.) **ಏವಂ ನಿಯಮಃ** ಈ ರೀತಿಯಾದ ನಿಯಮವು **ಸದೈವ** ಯಾವಾಗಲೂ ಇದ್ದೇ ಇರುವುದು **ಕ್ವಚಿತ್** ಎಂದೂ **ಅನ್ಯಥಾ ನ** ವ್ಯತ್ಯಾಸವಿರುವುದಿಲ್ಲ **ಯಾವತ್** ಎಲ್ಲಿಯವರೆಗೆ **ನ ಪೂರ್ತಿಃ** ಸ್ವಯೋಗ್ಯವಾದ ಸಾಧನವು ಸಂಪೂರ್ಣ ಗೊಳ್ಳುವುದಿಲ್ಲವೋ **ಉತ** ಅಲ್ಲಿಯವರೆಗೆ **ಸಮಸ್ತಾಃ** ತ್ರಿವಿಧ ಜೀವರೆಲ್ಲರೂ **ಸಂಸ್ಕೃತಿಗಾಃ** ಸಂಸಾರದಲ್ಲೇ ಇರುವರು.

**ತಾತ್ಪರ್ಯ :-** ಕೆಲವು ಜೀವರು ಮುಕ್ತರಾದರೂ ಜೀವೋತ್ತಮರಾದ ವಾಯುಪರ್ಯಂತವಾಗಿ ಇನ್ನಿತರ ಮುಕ್ತಿ ಯೋಗ್ಯರಾದ ಜೀವರು ಸಂಸಾರದಲ್ಲಿರುವರು. ನಿತ್ಯಸಂಸಾರಿಗಳಾದ ಜೀವರೂ ಹಾಗೆಯೇ ತಮೋ ಯೋಗ್ಯರೂ ಸಂಸಾರಿಗಳಾಗಿ ಇದ್ದೇ ಇರುವರು. ತ್ರಿವಿಧಜೀವರೂ ಸಂಸಾರಿಗಳಾಗಿರುವರು ಎಂಬ ನಿಯಮಕ್ಕೆ ಎಂದೂ ವ್ಯತ್ಯಾಸವಿಲ್ಲ. ಇದು ಸಾರ್ವಕಾಲಿಕವಾದುದು. ತಮ್ಮ ತಮ್ಮ ಯೋಗ್ಯತಾನುಸಾರ ಸಾಧನ ಪೂರ್ತಿಯಾದ ನಂತರವೇ ಜೀವರಿಗೆ ಮುಕ್ತಿ. ಅಲ್ಲಿಯವರೆಗೂ ಅವರು ಸಂಸಾರದಲ್ಲೇ ಇರುವರು.

**ವಿಶೇಷ ವಿಷಯ :-** ಸಂಸೃತಿಪರಾಃ ಎಂಬ ಪದಕ್ಕೆ ಸಂಸೃತಿರೇವ ಪರಾ ಯೇಷಾಂ ತೇ ಎಂದು ವಿಗ್ರಹ. ಪರಾ ಎಂದರೆ ಚರಮ ಫಲ ಎಂದರ್ಥ. ಸಂಸಾರವೇ ಚರಮಫಲವಾಗುಳ್ಳ ನಿತ್ಯಸಂಸಾರಿಗಳು ಎಂದು ಅಭಿಪ್ರಾಯ. ಅಥವಾ ಸಂಸೃತೌ ಪರಾಃ ಆಸಕ್ತಾಃ ಎಂಬ ವಿಗ್ರಹವನ್ನನುಸರಿಸಿ ಸಂಸಾರದಲ್ಲೇ ಆಸಕ್ತರಾದ ನಿತ್ಯ ಸಂಸಾರಿಗಳು ಎಂದೂ ಅರ್ಥವಾಗುವುದು. ॥ ೧೮ ॥

ಸದ್ಯಕ್ಕೆ ತ್ರಿವಿಧ ಸಂಸಾರಿ ಜೀವರಿದ್ದರೂ ಕಾಲಕ್ರಮದಲ್ಲಿ ಎಲ್ಲರೂ ಸ್ವಯೋಗ್ಯ ಮುಕ್ತಿಯನ್ನು ಪಡೆದ ಮೇಲೆ ಸಂಸಾರಿಗಳಿರಲಾರರು ಎಂಬ ಶಂಕೆಗೆ ಮುಂದಿನ ಶ್ಲೋಕದಲ್ಲಿ ಸಮಾಧಾನ ಹೇಳಲಾಗಿದೆ—

**ಪೂರ್ತಿಶ್ಚ ನೈವ ನಿಯಮಾದ್ ಭವಿತಾ ಹಿ ಯಸ್ಮಾತ್**
**ತಸ್ಮಾತ್ ಸಮಾಪ್ತಿಮಪಿ ಯಾಂತಿ ನ ಜೀವಸಂಘಾಃ ।**
**ಆನಂತ್ಯಮೇವ ಗಣಶೋಽಸ್ತಿ ಯತೋ ಹಿ ತೇಷಾಂ**
**ಇತ್ಥಂ ತತಃ ಸಕಲಕಾಲಗತಾ ಪ್ರವೃತ್ತಿಃ ॥ ೧೯ ॥**

**ಅರ್ಥ :- ಪೂರ್ತಿಃ** ಸಾಧನ ಸಂಪೂರ್ತಿಯೂ ಕೂಡ **ನಿಯಮಾದ್** ಒಬ್ಬ ಜೀವನಿಗೆ ಸಾಧನವು ಪೂರ್ಣವಾದಾಗ ಎಲ್ಲರಿಗೂ ಪೂರ್ಣವಾಗುವುದು ಎಂಬ ನಿಯಮದಿಂದ **ಯಸ್ಮಾತ್ ಹಿ** ಯಾವ ಕಾರಣದಿಂದಾಗಿ **ನೈವ ಭವಿತಾ** ಆಗುವುದಿಲ್ಲವೋ **ತಸ್ಮಾತ್** ಆ ಕಾರಣದಿಂದ **ಜೀವಸಂಘಾಃ** ಜೀವರ ಸಮೂಹಗಳು **ಸಮಾಪ್ತಿಮಪಿ** ಸಮಾಪ್ತಿಯನ್ನೂ **ನ ಯಾಂತಿ** ಹೊಂದುವುದಿಲ್ಲ **ಯತೋ ಹಿ** ಯಾವ ಕಾರಣದಿಂದಾಗಿ **ತೇಷಾಂ** ಆ ಜೀವರಿಗೆ **ಗಣಶಃ** ಗಣಗಳಿಂದ **ಆನಂತ್ಯಂ** ಅನಂತತೆಯು **ಅಸ್ತ್ಯೇವ** ಇದ್ದೇ ಇರುವುದೋ **ತತಃ** ಆ ಕಾರಣದಿಂದ **ಇತ್ಥಂ** ಈ ರೀತಿಯಾದ **ಪ್ರವೃತ್ತಿಃ** ಸೃಷ್ಟ್ಯಾದಿ ಪ್ರವೃತ್ತಿಯು **ಸಕಲಕಾಲಗತಾ** ಎಲ್ಲ ಕಾಲದಲ್ಲೂ ಇರುವುದು.

**ತಾತ್ಪರ್ಯ :-** ''ಆನಂತ್ಯಮೇವ ಗಣಶಃ'' ಎಂದರೆ ಬ್ರಹ್ಮಪದಕ್ಕೆ ಯೋಗ್ಯ ರಾದ ಜೀವಗಣಗಳು, ರುದ್ರಪದಯೋಗ್ಯರಾದ ಜೀವರ ಗಣಗಳು, ಇಂದ್ರಪದ ಯೋಗ್ಯರಾದ ಜೀವರ ಗಣಗಳು — ಹೀಗೆ ಗಣಗಳೂ ಅನಂತವಾಗಿವೆ. ಒಂದೊಂದು ಗಣದಲ್ಲಿರುವ ಜೀವರ ಸಂಖ್ಯೆಯೂ ಅನಂತವಾಗಿದೆ ಎಂದು ಭಾವ. ಎಲ್ಲ ವಿಧರಾದ ಜೀವರು ಎಲ್ಲ ಕಾಲದಲ್ಲೂ ಇರುವರು ಎಂಬ ಪ್ರಮೇಯ — ಯಥೈವ ಕಾಲ ನಿಯಮಃ ಸುರಾದಿನಿಯಮಸ್ತಥಾ । ತಸ್ಮಾನ್ನಾಸೀದೃಶಂ ಕ್ವಾಪಿ ವಿಶ್ವಮೇತದ್ ಭವಿಷ್ಯತಿ ॥ ಇತ್ಯಾದಿ ಪ್ರಮಾಣಗಳಿಂದ ಸಿದ್ಧವಾಗಿದೆ. ॥ ೧೯ ॥

'ನಿರ್ದೋಷಪೂರ್ಣಗುಣವಿಗ್ರಹ' ಎಂಬ ಶ್ಲೋಕದಿಂದ ಪ್ರಸ್ತುತವಾಗಿರುವ ಭಗವಂತನ ಸರ್ವೋತ್ತಮತ್ವವನ್ನು ಸಾಕ್ಷಾತ್ ಅಥವಾ ಪರಂಪರೆಯಿಂದ ಎಲ್ಲ ಜೀವರೂ ಭಗವಂತನ ಪ್ರತಿಬಿಂಬರು ಎಂದು ಹೇಳುವ ಮೂಲಕ ಸಾಧಿಸಿ ಈ ಮುಂದಿನ ಎರಡು ಶ್ಲೋಕಗಳಿಂದ ಉಪಸಂಹರಿಸುತ್ತಿದ್ದಾರೆ—

**ಏತೈಃ ಸುರಾದಿಭಿರತಿಪ್ರತಿಭಾದಿಯುಕ್ತೈ-**
**ಯುಕ್ತೈಃ ಸಹೈವ ಸತತಂ ಪ್ರವಿಚಿಂತಯದ್ಭಿಃ ।**
**ಪೂರ್ತೇರಚಿಂತ್ಯಮಹಿಮಃ ಪರಮಃ ಪರಾತ್ಮಾ**
**ನಾರಾಯಣೋಽಸ್ಯ ಗುಣವಿಸ್ಮೃತಿರನ್ಯಗಾ ಕ್ವ ॥ ೨೦ ॥**

**ಅರ್ಥ :- ಅತಿಪ್ರತಿಭಾದಿಯುಕ್ತೈಃ** ಅತ್ಯಂತ ಪ್ರತಿಭೆ ಮೊದಲಾದವು ಗಳಿಂದ ಕೂಡಿರುವ **ಯುಕ್ತೈಃ** ಒಟ್ಟಿಗೆ ಸೇರಿರುವ **ಸಹೈವ** ಜೊತೆಯಾಗಿಯೇ

**ಪ್ರವಿಚಿಂತಯದ್ಭಿಃ** ವಿಚಾರಮಾಡತಕ್ಕ **ಏತೈಃ** ಈ **ಸುರಾದಿಭಿಃ** ದೇವತೆಗಳೇ ಮೊದಲಾದವರಿಂದ **ಪರಮಃ** ಸರ್ವೋತ್ತಮನೂ **ಪರಾತ್ಮಾ** ಸರ್ವಸ್ವಾಮಿಯೂ ಆದ **ನಾರಾಯಣಃ** ನಾರಾಯಣನು **ಪೂರ್ತೇಃ** ಗುಣಪೂರ್ಣತೆಯ ಕಾರಣ ದಿಂದ **ಅಚಿಂತ್ಯಮಹಿಮಃ** ಚಿಂತಿಸಲಸಾಧ್ಯವಾದ ಮಹಿಮೆಯುಳ್ಳವನಾಗಿರು ವನು **ಅಸ್ಯ** ಈ ಭಗವಂತನ **ಗುಣವಿಸ್ಮೃತಿಃ** ಗುಣವಿಸ್ತಾರವು **ಅನ್ಯಗಾ ಕ್ವ** ಬೇರೆಲ್ಲಿ ತಾನೆ ಇರುವುದು?

**ತಾತ್ಪರ್ಯ** :- ದೇವಾದಿ ಮೋಕ್ಷಯೋಗ್ಯರು ಅತ್ಯಂತ ಪ್ರತಿಭಾನ್ವಿತರು. ನಿಖಿಲವೇದಶಾಸ್ತ್ರಾದಿಗಳಿಂದ ಸರ್ವದಾ ಪರ್ಯಾಲೋಚಿಸುವವರು. ಇವರೆಲ್ಲರೂ ಒಟ್ಟಿಗೆ ಸೇರಿ ಏಕಕಾಲದಲ್ಲಿ ವಿಚಾರಮಾಡಿದರೂ ಸರ್ವೋತ್ತಮನೂ, ಸರ್ವ ಸ್ವಾಮಿಯೂ ಆದ ನಾರಾಯಣನ ಮಹಿಮೆಯನ್ನು ಪೂರ್ಣವಾಗಿ ತಿಳಿಯಲು ಸಾಧ್ಯವಿಲ್ಲ. ಇದಕ್ಕೆ ಕಾರಣ ಅವನ ಅನಂತಗುಣಪರಿಪೂರ್ಣತೆ. ಇಂತಹ ಭಗವಂತನ ಗುಣವಿಸ್ತಾರ ಇನ್ನೊಬ್ಬರಿಗಿರುವುದು ಹೇಗೆ ಶಕ್ಯ?

**ಸಾಮ್ಯಂ ನ ಚಾಸ್ಯ ಪರಮೇಣ ಚ ಕೇನ ಚಾಪ್ಯಂ**
**ಮುಕ್ತೇನ ಚ ಕ್ವಚಿದತಸ್ತ್ವಭಿದಾ ಕುತೋಽಸ್ಯ ।**
**ಪ್ರಾಪ್ಯೇತ ಚೇತನಗಣೈಃ ಸತತಾಸ್ವತಂತ್ರೈ-**
**ರ್ನಿತ್ಯಸ್ವತಂತ್ರವಪುಷಃ ಪರಮಾತ್ವರಸ್ಯ ॥ ೨೧ ॥**

**ಅರ್ಥ** :- **ಅಸ್ಯ** ಈ ಭಗವಂತನ **ಸಾಮ್ಯಂ** ಸಾಮ್ಯವು **ಪರಮೇಣ ಚ** ಜೀವರಿಂದ ಉತ್ತಮನಾಗಿದ್ದರೂ **ಕೇನ ಚ** (ಅಮುಕ್ತ) ಬ್ರಹ್ಮನೇ ಮೊದಲಾದ ಯಾರಿಂದಲೂ **ಮುಕ್ತೇನ ಚ** ಮುಕ್ತಬ್ರಹ್ಮನಿಂದಲೂ **ನ ಚ ಆಪ್ಯಂ** ಹೊಂದಲು ಸಾಧ್ಯವಿಲ್ಲ **ಅತಸ್ತು** ಆದ್ದರಿಂದಲೇ **ಸತತಾಸ್ವತಂತ್ರೈಃ** ಯಾವಾಗಲೂ ಅಸ್ವತಂತ್ರರಾಗಿರುವ **ಚೇತನಗಣೈಃ** ಜೀವಸಮೂಹಗಳಿಂದ **ನಿತ್ಯಸ್ವತಂತ್ರವಪುಷಃ** ಸರ್ವದಾ ಸ್ವತಂತ್ರ ಶರೀರನಾದ **ಪರಮಾತ್** ಬ್ರಹ್ಮಾದಿಗಳಿಂದ ಉತ್ತಮಳಾದ ಲಕ್ಷ್ಮೀದೇವಿಯಿಂದಲೂ **ಪರಸ್ಯ** ಉತ್ತಮನಾದ **ಅಸ್ಯ** ಈ ಭಗವಂತನ **ಅಭಿದಾ** ಅಭೇದವು **ಕುತಃ ಪ್ರಾಪ್ಯೇತ** ಹೇಗೆ ತಾನೆ ಪಡೆಯಲಾದೀತು?

**ತಾತ್ಪರ್ಯ** :- ಅಮುಕ್ತ ಚತುರ್ಮುಖ ಬ್ರಹ್ಮನು ಜೀವೋತ್ತಮ ನಾಗಿರುವನು. ಆದರೂ ಅವನಾಗಲೀ, ಮುಕ್ತ ಚತುರ್ಮುಖನಾಗಲಿ

ಭಗವಂತನ ಸಾಮ್ಯವನ್ನು ಪಡೆಯಲಾರರು. ಹೀಗಿರುವಾಗ, ಸರ್ವಕಾಲದಲ್ಲೂ ಸ್ವತಂತ್ರಶರೀರನೂ, ಬ್ರಹ್ಮಾದ್ಯುತ್ತಮಳಾದ ಲಕ್ಷ್ಮೀದೇವಿಗಿಂತಲೂ ಉತ್ತಮನೂ ಆದ ಈ ಭಗವಂತನ ಅಭೇದವನ್ನು ಯಾವಾಗಲೂ ಅಸ್ವತಂತ್ರರಾದ ಈ ಜೀವರ ಸಮೂಹಗಳು ಹೇಗೆ ತಾನೆ ಪಡೆಯಲು ಸಾಧ್ಯ?

ಇದುವರೆಗೆ ನಿರೂಪಿಸಲಾದ ಪ್ರಮೇಯಗಳನ್ನು ಪ್ರತಿಪಾದಿಸುವ ಪ್ರಮಾಣ ಗಣಗಳನ್ನು ಇಲ್ಲಿ ಉಲ್ಲೇಖಿಸಲಾಗಿದೆ—

**ಅರ್ಥೋऽಯಮೇವ ನಿಖಿಲೈರಪಿ ವೇದವಾಕ್ಯೈ**
**ರಾಮಾಯಣೈಃ ಸಹಿತಭಾರತಪಂಚರಾತ್ರೈಃ ।**
**ಅನ್ಯೈಶ್ಚ ಶಾಸ್ತ್ರವಚನೈಃ ಸಹತತ್ತ್ವಸೂತ್ರೈಃ**
**ನಿರ್ಣೀಯತೇ ಸಹೃದಯಂ ಹರಿಣಾ ಸದೈವ ॥ ೨೨ ॥**

**ಅರ್ಥ** :- **ಅಯಮೇವ ಅರ್ಥಃ** ಇದೇ ವಿಷಯವೇ **ಸಹಿತಭಾರತ ಪಂಚರಾತ್ರೈಃ** ಮಹಾಭಾರತ, ಪಂಚರಾತ್ರಗಳಿಂದ ಕೂಡಿದ **ವೇದವಾಕ್ಯೈಃ** ವೇದವಾಕ್ಯಗಳಿಂದಲೂ **ರಾಮಾಯಣೈಃ** ರಾಮಾಯಣದ ವಾಕ್ಯಗಳಿಂದಲೂ **ಸಹತತ್ತ್ವಸೂತ್ರೈಃ** ಬ್ರಹ್ಮಸೂತ್ರಗಳಿಂದ ಸಹಿತವಾದ **ಅನ್ಯೈಃ** ಇತರ **ಶಾಸ್ತ್ರ ವಚನೈಶ್ಚ** ಶಾಸ್ತ್ರ ವಾಕ್ಯಗಳಿಂದಲೂ **ಸಹೃದಯಂ** ಸಾಭಿಪ್ರಾಯವಾಗಿ **ಸದೈವ** ಯಾವಾಗಲೂ **ಹರಿಣಾ** ಶ್ರೀಹರಿಯಿಂದ **ನಿರ್ಣೀಯತೇ** ನಿರ್ಣಯಿಸಲ್ಪಡುವುದು.

**ತಾತ್ಪರ್ಯ** :- ಇದುವರೆಗೆ ಹೇಳಿದ ಭಗವಂತನ ಮಹಾಮಹಿಮೆಯ ವಿಷಯವನ್ನೇ ಮಹಾಭಾರತ, ಪಂಚರಾತ್ರ, ರಾಮಾಯಣ, ಬ್ರಹ್ಮಸೂತ್ರಗಳು ಮತ್ತಿತರ ಶಾಸ್ತ್ರ ವಚನಗಳಿಂದ ತಾತ್ಪರ್ಯಯುಕ್ತವಾಗಿ ಶ್ರೀಹರಿ ಯಾವಾಗಲೂ ನಿರ್ಣಯಿಸುತ್ತಿದ್ದಾನೆ.

**ವಿಶೇಷ ವಿಷಯ** :- ಇಲ್ಲಿ ಶಾಸ್ತ್ರವಚನವೆಂದರೆ ಭಗವಂತನ ಸರ್ವೋತ್ತಮತ್ವವನ್ನು ಪ್ರತಿಪಾದಿಸುವ ಪುರಾಣಗಳು, ಸ್ಮೃತಿಗಳು ಮೊದಲಾದವುಗಳ ವಾಕ್ಯಗಳು.

ಮೇಲೆ ಹೇಳಿದ ಪ್ರಮಾಣಗಳ ಸಮೂಹದ ಕೆಲವು ವಾಕ್ಯಗಳನ್ನು ಇಲ್ಲಿ ಅರ್ಥತಃ ಸಂಗ್ರಹ ಮಾಡಲಾಗಿದೆ—

ನಾರಾಯಣಸ್ಯ ನ ಸಮಃ ಪುರುಷೋತ್ತಮೋऽಹಂ
ಜೀವಾಕ್ಷರೇ ಹ್ಯಧಿಗತೋऽಸ್ಮಿ ತತೋऽನ್ಯದಾರ್ತಮ್ ।
ಮುಕ್ತೋಪಸೃಪ್ಯ ಇಹ ನಾಸ್ತಿ ಕುತಶ್ಚ ಕಶ್ಚಿತ್
ನಾನೇವ ಧರ್ಮಪೃಥಗಾತ್ಮದೃಗೇತ್ಯಧೋ ಹಿ ॥ ೨೩ ॥

**ಅರ್ಥ** :- **ನಾರಾಯಣಸ್ಯ ನ ಸಮಃ** ನಾರಾಯಣನಿಗೆ ಯಾರೂ ಸಮರಲ್ಲ **ಹಿ** ಯಾವ ಕಾರಣದಿಂದ **ಜೀವಾಕ್ಷರೇ** ಜೀವರನ್ನೂ, ಮಹಾಲಕ್ಷ್ಮಿಯನ್ನೂ **ಅಧಿಗತಃ ಅಸ್ಮಿ** ಅಧಿಕನಾಗಿದ್ದು ಹೊಂದಿರುವೆನೋ ಆ ಕಾರಣದಿಂದ **ಅಹಂ ಪುರುಷೋತ್ತಮಃ** ನಾನು ಪುರುಷೋತ್ತಮನಾಗಿದ್ದೇನೆ **ತತಃ ಅನ್ಯತ್** ಆ ಪರಮಾತ್ಮನಿಂದ ಇತರವಾದ ಬ್ರಹ್ಮಾದಿ ಜೀವರ ಸಮೂಹವು **ಆರ್ತಂ** ಬಹುದುಃಖವುಳ್ಳದ್ದು **ಮುಕ್ತೋಪಸೃಪ್ಯಃ** ಪರಮಾತ್ಮನು ಮುಕ್ತರಿಂದ ಹೊಂದಲ್ಪಡುವವನು **ಇಹ** ಈ ಪರಮಾತ್ಮನಲ್ಲಿ **ಕಶ್ಚಿತ್** ಅವತಾರಭೇದ, ಗುಣಗುಣಿಭೇದ ಮೊದಲಾದ ಯಾವ ಭೇದವೂ **ಕುತಶ್ಚಿತ್** ಯಾವುದೇ ಕಾರಣದಿಂದ ಸ್ವಗತಭೇದವೂ **ನಾಸ್ತಿ** ಇಲ್ಲ **ನಾನೇವ** ಪರಮಾತ್ಮನ ಅವಯವಾದಿಗಳಲ್ಲಿ ಯಾರು ಭೇದವನ್ನಾಗಲೀ, ಭೇದಾಭೇದವನ್ನಾಗಲೀ ತಿಳಿಯುವರೋ ಅವರು ನಿತ್ಯನರಕವನ್ನು ಪಡೆಯುವರು **ಧರ್ಮಪೃಥಗಾತ್ಮದೃಕ್** ಪರಮಾತ್ಮನ ಧರ್ಮಗಳು ಪರಮಾತ್ಮನಿಂದ ಭಿನ್ನವಾದುವೆಂದು ತಿಳಿಯುವವನು **ಅಧಃ** ಅಧೋಲೋಕವನ್ನು **ಏತಿ ಹಿ** ನಿಶ್ಚಿತವಾಗಿ ಹೊಂದುವನು.

**ತಾತ್ಪರ್ಯ** :- ''ಭಗವಂತನಿಗೆ ಯಾರೂ ಸಮರಲ್ಲ''. ''ಎಲ್ಲ ಜೀವರ ಮತ್ತು ಮಹಾಲಕ್ಷ್ಮಿಯ ಹೃದಯದಲ್ಲಿ ಅವರಿಗಿಂತ ಉತ್ತಮನಾಗಿದ್ದು ನೆಲೆಸಿರುವ ಕಾರಣದಿಂದ ನಾನು ಪುರುಷೋತ್ತಮನಾಗಿದ್ದೇನೆ'', ''ಆ ಭಗವಂತನನ್ನು ಬಿಟ್ಟು ಉಳಿದೆಲ್ಲ ಜೀವರು ಬಹುದುಃಖಿಗಳು''. ''ಮುಕ್ತರಾಗುವ ಜೀವರು ಪರಮಾತ್ಮನನ್ನು ಹೊಂದುವರು'', ''ಭಗವಂತನ ಅವತಾರಗಳಿಗಾಗಲಿ, ಅವಯವಗಳಿಗಾಗಲೀ, ಗುಣಗಳಿಗಾಗಲೀ ಭಗವಂತನಿಂದ ಯಾವ ಭೇದವೂ ಇಲ್ಲ''. ''ಅವಯವ-ಅವಯವಿಗಳ ಭೇದಕ್ಕೆ ಕಾರಣವಾಗಬಹುದಾದ ಯಾವುದೂ ಭಗವಂತನಲ್ಲಿಲ್ಲ''. ''ಭಗವಂತನ ಅವಯವಾದಿಗಳಿಗೆ ಭಗವಂತನಿಂದ ಭೇದವನ್ನಾಗಲಿ ಭೇದಾಭೇದವನ್ನಾಗಲೀ ತಿಳಿಯುವವರು ನಿತ್ಯನರಕವನ್ನು ಪಡೆಯುವರು''. ''ಪರಮಾತ್ಮನ ಧರ್ಮಗಳು

ಪರಮಾತ್ಮನಿಂದ ಭಿನ್ನವಾಗಿವೆ ಎಂದು ತಿಳಿಯುವವನು ಅಧೋಗತಿಯನ್ನು ಪಡೆಯುವನು.''. — ಹೀಗೆ ಅನೇಕ ಪ್ರಮಾಣಗಳಲ್ಲಿ ಹೇಳಿದೆ.

**ವಿಶೇಷ ವಿಷಯ** :- ನಾರಾಯಣಸ್ಯ ನ ಸಮಃ — ''ನಾಸ್ತಿ ನಾರಾಯಣಸಮಂ ನ ಭೂತಂ ನ ಭವಿಷ್ಯತಿ । ಏತೇನ ಸತ್ಯವಾಕ್ಯೇನ ಸರ್ವಾರ್ಥಾನ್ ಸಾಧಯಾಮ್ಯಹಮ್'' ॥ - ನಾರಾಯಣನಿಗೆ ಸಮವಾದದ್ದು ಯಾವುದೂ ಇಲ್ಲ, ಹಿಂದೂ ಇರಲಿಲ್ಲ, ಮುಂದೆಯೂ ಇರುವುದಿಲ್ಲ, ಈ ಸತ್ಯವಾಕ್ಯದಿಂದ ನಾನು ಎಲ್ಲ ಪುರುಷಾರ್ಥಗಳನ್ನೂ ಸಾಧಿಸುವೆನು — ಎಂಬ ಮಹಾಭಾರತವಾಕ್ಯದ ಅರ್ಥವನ್ನು ಇಲ್ಲಿ ಆಚಾರ್ಯರು ಸಂಗ್ರಹಿಸಿದ್ದಾರೆ. ''ನೈತಾದೃಶಃ ಕ್ವಚ ಬಭೂವ'' ಎಂದು ಹಿಂದೆ ಹೇಳಿದ ವಿಷಯದಲ್ಲಿ ಇದು ಪ್ರಮಾಣವಾಗಿದೆ.

**ಪುರುಷೋತ್ತಮೋಽಹಂ ಜೀವಾಕ್ಷರೇ ಹ್ಯಧಿಗತೋಽಸ್ಮಿ**—''ಯಸ್ಮಾತ್ ಕ್ಷರಮತೀತೋಽಹಮಕ್ಷರಾದಪಿ ಚೋತ್ತಮಃ । ಅತೋಽಸ್ಮಿ ಲೋಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ ॥'' ಎಂಬ ಗೀತಾವಾಕ್ಯದ ಸಾರಸಂಗ್ರಹವನ್ನು ಆಚಾರ್ಯರು ಇಲ್ಲಿ ಮಾಡಿದ್ದಾರೆ. ತಾತ್ಪರ್ಯನಿರ್ಣಯದಲ್ಲಿ ಹಿಂದೆ ''ಪರತಮಃ ಪರಮಾತ್'' (ಶ್ಲೋ.೨), ''ಪರಾತ್ ಪರಸ್ಯ'' (ಶ್ಲೋ.೧೨), ''ಈಶ್ವರತಮಃ'' (ಶ್ಲೋ.೧೩.) ಎಂಬ ಮೂರು ಸ್ಥಳಗಳಲ್ಲಿ ಭಗವಂತನ ಸರ್ವೋತ್ತಮತ್ವವನ್ನು ಹೇಳಿದ್ದಾರೆ. ಈ ಪ್ರಮಾಣದಿಂದ ಆ ಪ್ರಮೇಯದ ಸಮರ್ಥನೆಯಾಗುವುದು.

**ತತೋಽನ್ಯದಾರ್ತಮ್** — ಇದು ಶ್ರುತಿವಾಕ್ಯ. ಆ - ಸಮಂತಾತ್, ಅರತಿಃ ಆರ್ತಿಃ, ತದ್ವದ್ ಆರ್ತಮ್ - ಎಂಬ ವಿವರಣೆಯಂತೆ ಎಲ್ಲ ಕಡೆಯಿಂದ ಉಂಟಾಗುವ ದುಃಖ - ಆರ್ತಿ. ಅದನ್ನುಳ್ಳದ್ದು ಆರ್ತ. ಭಗವಂತ ನಿಂದ ಇತರವಾದ ಸಮಸ್ತ ಜೀವಸಮೂಹವೂ ಆರ್ತವಾಗಿದೆ — ಎಲ್ಲೆಲ್ಲಿ ಸುತ್ತಾಡಿದರೂ ಕ್ಲೇಶಭರಿತವಾಗಿದೆ ಎಂದು ಶ್ರುತ್ಯರ್ಥ. ''ಸಂಸೃತಿಗಾಃ ಸಮಸ್ತಾಃ'' (ಶ್ಲೋ.೧೮) ಎಂದು ಹೇಳಿದ ವಿಷಯದಲ್ಲಿ ಇದು ಪ್ರಮಾಣ. ಸಂಸೃತಿ ಎಂದರೆ ಸ್ವಲ್ಪ ಸುಖವಿರುವ ದುಃಖಕ್ಕಾಗಿ ಎಲ್ಲೆಡೆ ಅಲೆಯುವುದು.

**ಮುಕ್ತೋಪಸೃಪ್ಯ** :- ಮುಕ್ತೋಪಸೃಪ್ಯವ್ಯಪದೇಶಾತ್ (ಬ್ರ.ಸೂ. ೧,೩,೨) ಎಂಬ ಬ್ರಹ್ಮಸೂತ್ರದಲ್ಲಿ ಹೇಳಿದ ಪ್ರಮೇಯವನ್ನು ಇಲ್ಲಿ ಸಂಗ್ರಹಿಸಲಾಗಿದೆ.

''ನಿಜಮುಕ್ತಿಪದಪ್ರದಾತಾ'' (ಶ್ಲೋ.೬) ಎಂದು ಹಿಂದೆ ಹೇಳಿದ ವಿಷಯದಲ್ಲಿ ಇದು ಪ್ರಮಾಣವಾಗಿದೆ.

**ಇಹ ನಾಸ್ತಿ ಕುತಶ್ಚ ಕಶ್ಚಿತ್** — 'ನೇಹ ನಾನಾಸ್ತಿ ಕಿಂಚನ' ಎಂಬ ಶ್ರುತಿಯ ಅರ್ಥಸಂಗ್ರಹವನ್ನು ಆಚಾರ್ಯರು ಇಲ್ಲಿ ಮಾಡಿದ್ದಾರೆ. ಶ್ರುತಿಯಲ್ಲಿರುವ 'ನಾನಾ' ಪದಕ್ಕೆ ಭೇದವೆಂದರ್ಥ. ಭೇದವು ನಾನಾವಿಧವಾದದ್ದು. ಪರಮಾತ್ಮನ ಅವತಾರಗಳ ಭೇದ, ಭಗವಂತನ ಗುಣಗಳಿಗೂ ಭಗವಂತನಿಗೂ ಭೇದ, ಅವನ ಅವಯವಗಳಿಗೂ ಅವನಿಗೂ ಭೇದ, ಅವನ ಅವತಾರಗಳಲ್ಲಿ ಪರಸ್ಪರ ವಿರೋಧರೂಪವಾದ ಭೇದ, ಅವನ ರೂಪಗಳಲ್ಲಿ ವೈಲಕ್ಷಣ್ಯವೆಂಬ ಭೇದ, ವಿನಾಶಸ್ವರೂಪವಾದ ಭೇದ, ಸ್ಥಾನಭೇದ ಪ್ರಯುಕ್ತವಾದ ಭೇದ—ಇಂತಹ ಯಾವುದೇ ಭೇದ ಭಗವಂತನಲ್ಲಿಲ್ಲವೆಂದು ಶ್ರುತಿಯ ಅರ್ಥ. ಇಂತಹ ನಾನಾ ವಿಧವಾದ ಭೇದಗಳನ್ನು ಸೂಚಿಸುವ ಸಲುವಾಗಿಯೇ ಶ್ರುತಿಯಲ್ಲಿ ಭೇದಪದದ ಬದಲು 'ನಾನಾ' ಪದವನ್ನು ಉಪಯೋಗಿಸಲಾಗಿದೆ.

ಒಂದು ವಸ್ತುವಿರುವಾಗಲೇ ಇನ್ನೊಂದು ನಾಶವಾದರೆ ಅವುಗಳನ್ನು ಭಿನ್ನವೆಂದೊಪ್ಪಲೇಬೇಕು. ಮೃತ್ತಿಕೆ ಇರುವಂತೆಯೇ ಘಟ ನಾಶವಾಗುವುದ ರಿಂದಲೇ ಮೃದ್ - ಘಟಗಳಿಗೆ ಭೇದವನ್ನು ಒಪ್ಪಲಾಗಿದೆ. ಭೇದಕ್ಕೆ ಕಾರಣ ವಾಗುವ ಅಂತಹ ನಾಶವೂ ಭಗವದವತಾರಗಳಲ್ಲಿಲ್ಲ. ಎಲ್ಲ ಭಗವದವತಾರ ಗಳೂ ಅನಾದಿನಿತ್ಯವಾಗಿದ್ದು ಅವುಗಳಲ್ಲಿ ಯಾವುದಕ್ಕೂ ನಾಶದ ಪ್ರಸಕ್ತಿಯೇ ಇಲ್ಲ. ಹೀಗೆ ಭೇದಕಾರಣವಾದ ಯಾವುದೂ ಇಲ್ಲದಿರುವುದರಿಂದ ಭಗವಂತನು ಸ್ವಗತಭೇದವರ್ಜಿತನೆಂದು 'ಕುತಶ್ಚಿತ್' ಎಂಬ ಪದವು ಸೂಚಿಸುತ್ತದೆ.

**ನಾನೇವ** — ''ಮೃತ್ಯೋಃ ಸ ಮೃತ್ಯುಮಾಪ್ನೋತಿ ಯ ಇಹ ನಾನೇವ ಪಶ್ಯತಿ'' — ಎಂಬ ಶ್ರುತಿಯ ಭಾಗವಾದ ಈ ಪದಗಳ ಮೂಲಕ ಆಚಾರ್ಯರು ಆ ಶ್ರುತಿಯ ಅರ್ಥವನ್ನು ಸಂಗ್ರಹಿಸಿದ್ದಾರೆ. ಯಃ - ಯಾವನು, ಇಹ - ಬ್ರಹ್ಮನಲ್ಲಿ, ನಾನಾ - ಕೇವಲ ಭೇದವನ್ನೂ, ಇವ - ಭೇದ-ಅಭೇದ ಇವೆರಡನ್ನೂ, ಪಶ್ಯತಿ - ತಿಳಿಯುವನೋ, ಸಃ - ಅವನು, ಮೃತ್ಯೋಃ - ಮಾರಕವಾದ ಸಂಸಾರಕ್ಕಿಂತಲೂ, ಮೃತ್ಯುಂ - ಮಾರಕವಾದ ನಿತ್ಯನರಕವನ್ನು, ಆಪ್ನೋತಿ - ಹೊಂದುವನು ಎಂದು ಶ್ರುತಿಯ ಪ್ರತಿಪದಾರ್ಥ. 'ಇವೋಭಯೇ ಚ ಸಾದೃಶ್ಯೇ' ಎಂಬ ವಚನಾನುಸಾರ ಇವ ಶಬ್ದಕ್ಕೆ ಸಾದೃಶ್ಯ ಎಂಬ ಅರ್ಥವಲ್ಲದೆ

ಉಭಯ ಎಂದರೆ ಎರಡು ಎಂಬ ಅರ್ಥವೂ ಇದೆ. ಆದ್ದರಿಂದ 'ನಾನಾ ಇವ' ಎಂದರೆ ಕೇವಲ ಭೇದ ಮತ್ತು ಭೇದ-ಅಭೇದ — ಈ ಉಭಯ ಎಂಬ ಅರ್ಥವಾಗುವುದು.

**ಧರ್ಮಪೃಥಗಾತ್ಮದೃಕ್** — ಈ ಪದದಿಂದ 'ಯಥೋದಕಂ ದುರ್ಗೇ ವೃಷ್ಟಂ ಪರ್ವತೇಷು ವಿಧಾವತಿ । ಏವಂ ಧರ್ಮಾನ್ ಪೃಥಕ್ ಪಶ್ಯನ್ ತಾನೇವಾನು ವಿಧಾವತಿ' ॥ ಎಂಬ ಶ್ರುತಿಯನ್ನು ಸೂಚಿಸುತ್ತಿದ್ದಾರೆ. ದುರ್ಗೇ - ದುರ್ಗಮವಾದ ಪರ್ವತದ ಉತ್ತುಂಗ ಶೃಂಗದಲ್ಲಿ, ವೃಷ್ಟಂ - ವರ್ಷಿಸಿದ, ಉದಕಂ - ಜಲವು, ಯಥಾ - ಹೇಗೆ, ಪರ್ವತೇಷು - ಪರ್ವತದ ಕೆಳಭಾಗಗಳಲ್ಲಿ, ವಿಧಾವತಿ - ವಿಶೇಷ ವೇಗದಿಂದ ಧಾವಿಸಿ ಬೀಳುವುದೋ, ಏವಂ - ಹಾಗೆಯೇ, ಧರ್ಮಾನ್ - ಭಗವಂತನ ಸರ್ವೋತ್ತಮತ್ವವೇ ಮೊದಲಾದ ಧರ್ಮಗಳನ್ನು, ಪೃಥಕ್ - ಭಗವಂತನಿಂದ ಭಿನ್ನವಾದುದೆಂದು ಮತ್ತು ಪರಸ್ಪರ ಭಿನ್ನವಾದುದೆಂದೂ, ಪಶ್ಯನ್ - ತಿಳಿಯುವವನು, ತಾನ್ ಅನು ಏವ - ಆ ಧರ್ಮಗಳನ್ನು ಹಾಗೆ ಭಿನ್ನಗಳೆಂದು ತಿಳಿದ ಕೂಡಲೇ ವಿಧಾವತಿ - ವಿಶೇಷವಾದ ಅಧಃಪಾತವನ್ನು ಭಿನ್ನಗಳೆಂದು ಗ್ರಹಿಸುವ ಅನುಭವಗಳನ್ನು ಅನುಸರಿಸಿ, ವಿಧಾವತಿ - ವಿಶೇಷವಾದ ಅಧಃಪತನವನ್ನು ಪಡೆಯುವನು. ಮಿಥ್ಯಾ - ಜ್ಞಾನದ ತಾರತಮ್ಯವನ್ನನುಸರಿಸಿ ಅಧಃಪತನದ ತಾರತಮ್ಯವೆಂದು ಭಾವ. ಧರ್ಮಪೃಥಗಾತ್ಮದೃಕ್ ಎಂದರೆ ಧರ್ಮಗಳಿಂದ ಭಿನ್ನನೆಂದು ತನ್ನನ್ನು ತಿಳಿಯುವವನೆಂದರ್ಥ. ಈ ಪದಪ್ರಯೋಗದ ಮೂಲಕ ಆಚಾರ್ಯರು ತನ್ನ ಧರ್ಮಗಳಿಗೆ ಭೇದವನ್ನು ತಿಳಿದಿದ್ದರಿಂದ ಕುಪಿತನಾದ ಭಗವಂತನು ಅಂತಹ ವರಿಗೆ ತಮಸ್ಸನ್ನು ಕೊಡುವನೆಂದು ಸೂಚಿಸುತ್ತಿರುವರು.

'ಇಹ ನಾಸ್ತಿ ಕುತಶ್ಚ ಕಶ್ಚಿತ್', 'ನಾನೇವ', 'ಧರ್ಮಪೃಥಗಾತ್ಮದೃಗೇತ್ಯಧೋ ಹಿ' ಎಂಬ ಮೂರು ಪ್ರಮಾಣಗಳಿಂದ 'ಸರ್ವತ್ರ ಚ ಸ್ವಗತಭೇದವಿವರ್ಜಿತಾತ್ಮಾ' (ಶ್ಲೋ. ೧೧) ಎಂಬಲ್ಲಿ ಹೇಳಿದ ಪ್ರಮೇಯವನ್ನು ಆಚಾರ್ಯರು ಸಮರ್ಥಿಸಿರುವರು.

**ಆಭಾಸ ಏವ ಪೃಥಗೀಶತ ಏಷ ಜೀವೋ**
**ಮುಕ್ತಸ್ಯ ನಾಸ್ತಿ ಜಗತೋ ವಿಷಯೇ ತು ಶಕ್ತಿಃ ।**
**ಮಾತ್ರಾ ಪರೋಽಪಿ ನ ತು ತೇಽಶ್ನುವತೇ ಮಹಿತ್ವಂ**
**ಷಾಡ್ಗುಣ್ಯವಿಗ್ರಹ ಸುಪೂರ್ಣಗುಣೈಕದೇಹ ॥ ೨೪ ॥**

**ಅರ್ಥ** :- **ಏಷ ಜೀವಃ** ಈ ಜೀವನು **ಆಭಾಸ ಏವ** ನಿಶ್ಚಯವಾಗಿ ಭಗವಂತನ ಪ್ರತಿಬಿಂಬನಾಗಿರರುವನು **ಈಶತಃ ಪೃಥಕ್** ಭಗವಂತನಿಂದ ಭಿನ್ನನಾಗಿದ್ದಾನೆ **ಮುಕ್ತಸ್ಯ** ಮುಕ್ತನಾದವನಿಗೆ **ಜಗತೋ ವಿಷಯೇ ತು** ಜಗತ್ತಿನ ವಿಷಯದಲ್ಲಿ **ಶಕ್ತಿಃ ನಾಸ್ತಿ** ಸೃಷ್ಟ್ಯಾದಿಸಾಮರ್ಥ್ಯವಿಲ್ಲ **ಮಾತ್ರಾ** ದೇಶ, ಕಾಲ, ಗುಣಗಳ ಮಿತಿಯಿಂದ **ಪರಃ ಅಪಿ** ದೂರನಾಗಿದ್ದೀಯೆ **ತೇ ಮಹಿತ್ವಂ** ನಿನ್ನ ಮಹಿಮೆಯನ್ನು ಆ ಜೀವರು **ನ ತು ಅಶ್ನುವತೇ** ನಿಶ್ಚಯವಾಗಿ ಹೊಂದಲಾರರು **ಷಾಡ್ಗುಣ್ಯವಿಗ್ರಹ** ಐಶ್ವರ್ಯಾದಿ ಷಡ್ಗುಣಗಳೆ ದೇಹವಾಗುಳ್ಳವನೇ **ಸುಪೂರ್ಣ ಗುಣೈಕದೇಹ** ಪರಿಪೂರ್ಣವಾದ ಗುಣಗಳು ಮಾತ್ರವೇ ದೇಹವಾಗುಳ್ಳವನೇ!

**ತಾತ್ಪರ್ಯ** :- ಪ್ರಮಾಣವಚನಗಳು ಹೀಗೆ ಹೇಳುತ್ತಿವೆ— ಜೀವನು ಭಗವಂತನ ಪ್ರತಿಬಿಂಬನಾಗಿದ್ದಾನೆ ಮತ್ತು ಅವನಿಂದ ಭಿನ್ನನಾಗಿದ್ದಾನೆ. ಮುಕ್ತ ಜೀವರಿಗೆ ಈ ಜಗತ್ತಿನ ನಿರ್ಮಾಣಾದಿಗಳನ್ನು ಮಾಡುವ ಸಾಮರ್ಥ್ಯವಿಲ್ಲ. ಹೇ ಭಗವನ್! ನೀನು ದೇಶಕಾಲಗುಣಗಳ ಮಿತಿ ಇಲ್ಲದವನು. ನಿನ್ನ ಮಹಿಮೆ ಯನ್ನು ಈ ಜೀವರು ಖಂಡಿತವಾಗಿಯೂ ಪಡೆಯಲಾರರು. ಕೆಲವು ಪ್ರಮಾಣ ವಚನಗಳು ಭಗವಂತನನ್ನು ಹೀಗೆ ಸಂಬೋಧಿಸುತ್ತವೆ—ಐಶ್ವರ್ಯ, ವೀರ್ಯ ಮೊದಲಾದ ಷಡ್ಗುಣಮಯ ಶರೀರನೇ! ಪರಿಪೂರ್ಣ ಗುಣಮಾತ್ರಶರೀರನೇ!

**ವಿಶೇಷ ವಿಷಯ** :- **ಆಭಾಸ ಏವ**—ಆಭಾಸ ಏವ ಚ (ಬ್ರ.ಸೂ. ೨,೩,೫೦) ಎಂಬ ಬ್ರಹ್ಮಸೂತ್ರದ ಸಂಗ್ರಹ ಇದಾಗಿದೆ. ಜೀವನು ಭಗವಂತನ ಪ್ರತಿಬಿಂಬನೂ ಭಿನ್ನನೂ ಆಗಿರುವನೆಂದು ಸೂತ್ರದ ಅರ್ಥ. ಸೂತ್ರದ 'ಚ' ಶಬ್ದವು ಭೇದದ ಸಮುಚ್ಚಯವನ್ನು ಹೇಳುವುದು. ಆಭಾಸಕೋऽಸ್ಯ ಪವನಃ (ಶ್ಲೋ. ೧೪) ಎಂಬ ಶ್ಲೋಕದಲ್ಲಿ ಹೇಳಿದ ಪ್ರಮೇಯವು ಈ ಪ್ರಮಾಣದಿಂದ ಸಮರ್ಥಿತವಾಗುವುದು.

**ಪೃಥಗೀಶತ ಏಷ ಜೀವಃ** — 'ಪೃಥಗೀಶತಃ' ಎಂಬ ಪದಗಳಿಂದ 'ಪೃಥಗುಪದೇಶಾತ್ (ಬ್ರ.ಸೂ. ೨,೩,೨೮) ಎಂಬ ಬ್ರಹ್ಮಸೂತ್ರವನ್ನು ಆಚಾರ್ಯರು ಸಂಗ್ರಹಿಸಿದ್ದಾರೆ. ಈಶತಃ ಏಷ ಜೀವಃ ಎಂಬ ಪದಗಳು ಆ ಸೂತ್ರದಿಂದ ವಿವಕ್ಷಿತವಾದ ಅರ್ಥ ದೊರೆಯಲು ಅವಶ್ಯಕವಾದ ಪದಗಳಾಗಿವೆ. 'ಅಭಿದಾ ಕುತೋऽಸ್ಯ' (ಶ್ಲೋ.೨೧) ಎಂದು ಹಿಂದೆ ಹೇಳಿದ ಪ್ರಮೇಯದಲ್ಲಿ ಇದು ಪ್ರಮಾಣವಾಗಿದೆ.

**ಮುಕ್ತಸ್ಯ ನಾಸ್ತಿ ಜಗತೋ ವಿಷಯೇ ತು ಶಕ್ತಿಃ** — ಜಗದ್ವ್ಯಾಪಾರ ವರ್ಜಂ (ಬ್ರ.ಸೂ. ೪,೪,೧೭) ಎಂಬ ಬ್ರಹ್ಮಸೂತ್ರವನ್ನು ಇಲ್ಲಿ ಸೂಚಿಸಲಾಗಿದೆ. ಮೋಕ್ಷದಲ್ಲಿ ತಮಗೆ ಅವರರಾದ ಮುಕ್ತರ ಪರಿಪಾಲನೆಯನ್ನು ಉತ್ತಮರಾದ ಮುಕ್ತರು ಮಾಡುವರು. 'ಸರ್ವೇಸ್ಮೈ ದೇವಾ ಬಲಿಮಾವಹಂತಿ' ಎಂಬ ತೈತ್ತಿರೀಯೋಪನಿಷತ್ತೂ ಇದೇ ವಿಷಯವನ್ನು ಹೇಳುವುದು. ಆದ್ದರಿಂದ ಜಗದ್ವ್ಯಾಪಾರವೇ ಸರ್ವಥಾ ಮುಕ್ತರಿಗಿಲ್ಲ ಎಂದು ಹೇಳಲಾಗದು. ಆದರೆ ಅವರಿಗೆ ಮುಕ್ತಜಗದ್ವ್ಯಾಪಾರವಿರುವುದೇ ಹೊರತು ಸಾಂಸಾರಿಕ ಜಗದ್ವ್ಯಾಪಾರವಿಲ್ಲ. ಜಗದ್ವ್ಯಾಪಾರವರ್ಜಂ ಎಂಬ ಸೂತ್ರದ ಅಭಿಪ್ರಾಯವೂ ಇದೇ. 'ಜಗತೋ ವಿಷಯೇ ತು' ಎಂಬಲ್ಲಿರುವ 'ತು' ಶಬ್ದವು ಮುಕ್ತರಿಗೆ ಇಲ್ಲವೆಂದು ಹೇಳಿರುವ ಜಗದ್ವ್ಯಾಪಾರವು ಇಂತಹ ವಿಶೇಷರೂಪವಾದುದೆಂದು ಸೂಚಿಸುವುದು. ಹಿಂದೆ 'ಸಾಮ್ಯಂ ನ ಚಾಸ್ಯ ಪರಮಸ್ಯ ಚ ಕೇನ ಚಾಪ್ಯಂ' (ಶ್ಲೋ.೨೧) ಎಂಬಲ್ಲಿ ಹೇಳಿದ ಪ್ರಮೇಯವನ್ನು ಈ ಪ್ರಮಾಣವು ಸಮರ್ಥಿಸುವುದು. ಭಗವಂತನು ಸೃಷ್ಟ್ಯಾದಿ ಜಗತ್ತಿನ ಕ್ರಿಯೆಯನ್ನು ಪ್ರತಿಕಲ್ಪದಲ್ಲೂ ಮಾಡುತ್ತಿರುವನು. ಆದರೆ ಮುಕ್ತರಾದವರಿಗೆ ಆ ಸಾಮರ್ಥ್ಯ ವಿಲ್ಲ. ಆದ್ದರಿಂದಲೇ ಮುಕ್ತರ ಭಾಗ್ಯ ಸಾವಧಿಕವಾದದ್ದು. ಇಂತಹ ಮುಕ್ತರು ನಿರವಧಿಕಭಾಗ್ಯಶಾಲಿಯಾದ ಪರಮಾತ್ಮನಿಗೆ ಸಮರಾಗುವುದಾದರೂ ಹೇಗೆ ಎಂದು ಭಾವ.

**ಮಾತ್ರಾಪರೋಽಪಿ ನ ತು ತೇಽಶ್ನುವತೇ ಮಹಿತ್ವಂ** — 'ಪರೋ ಮಾತ್ರಯಾ ತನ್ವಾ ವೃಧಾನ ನ ತೇ ಮಹಿತ್ವಮನ್ವಶ್ನುವಂತಿ' ಎಂಬ ಶ್ರುತ್ಯರ್ಥ ವನ್ನು ಇಲ್ಲಿ ಸಂಗ್ರಹಿಸಲಾಗಿದೆ. ಮಾತ್ರಯಾ - ಪರಿಮಿತಿಯಿಂದ ಪರಃ ಅಸಿ - ಅತಿಕ್ರಾಂತನಾಗಿದ್ದೀಯೇ, ದೂರನಾಗಿದ್ದೀಯೇ. ಇಲ್ಲಿ ಪರಿಮಿತಿಯೆಂದರೆ ದೇಶ, ಕಾಲ, ಗುಣಗಳ ಪರಿಮಿತಿ. ಸೂರ್ಯನು ಬೆಳಕಿನಿಂದ ವ್ಯಾಪಿಸಿರುವಂತೆ ಭಗವಂತನೂ ತನ್ನ ಪ್ರಕಾಶದಿಂದ ಮಾತ್ರವೇ ವ್ಯಾಪ್ತನಾಗಿರಬಹುದೆಂದು ಶಂಕೆಯನ್ನು ಪರಿಹರಿಸಲು ಶ್ರುತಿ 'ತನ್ವಾ ವೃಧಾನ' ಎಂದೆನ್ನುತ್ತಿದೆ. ತನ್ವಾ - ತನ್ನ ವಿಸ್ತಾರವಾದ ದೇಹದಿಂದ ವೃಧಾನ - ವರ್ಧಿಸಿರುವವನೇ! ತೇ ಮಹಿತ್ವಂ - ನಿನ್ನ ಮಹಿಮೆಯನ್ನು ನಾನ್ವಶ್ನುವಂತಿ - ಯಾರೂ ಹೊಂದಲಾರರು. ತನು ಶಬ್ದದ ಮೇಲೆ ಶ್ರುತಿಯಲ್ಲಿ ಸ್ವರಿತಸ್ವರವಿದೆ. ಈ ಸ್ವರದಿಂದ ಭಗವಂತನ ಶರೀರದ ನಿರವಧಿಕವಿಸ್ತಾರವನ್ನು ಸೂಚಿಸುತ್ತ ಶ್ರುತಿಯು ಭಗವಂತನ

ಶರೀರವನ್ನು ಪ್ರಶಂಸೆ ಮಾಡುತ್ತಿದೆ. ಜೀವೋತ್ತಮರಾದ ಚತುರ್ಮುಖ ಬ್ರಹ್ಮದೇವರು ಸಂಸಾರದಲ್ಲಿ ಮಹತ್ತತ್ವಪ್ರವರ್ತಕರಾಗಿದ್ದು ಮಹತ್ತತ್ವದ ವ್ಯಾಪ್ತಿ ಎಷ್ಟಿದೆಯೋ ಅಷ್ಟು ವಿಸ್ತಾರವಾದ ದೇಹವನ್ನೇನೋ ಪಡೆದಿರುವರು. ಆದರೆ ಮಹತ್ತತ್ವಕ್ಕೂ ಮಿತಿ ಇರುವುದರಿಂದ ಬ್ರಹ್ಮದೇವರ ದೇಹವು ಅಮಿತ ವಾದುದಲ್ಲ. ಮೋಕ್ಷದಲ್ಲಿ ಬ್ರಹ್ಮದೇವರಿಗೆ ಪ್ರಾಕೃತವಾದ ಬಾಹ್ಯದೇಹವಿಲ್ಲ. ಆ ಕಾಲದಲ್ಲಿ ಅಲ್ಪಗಾತ್ರದ ಸೂರ್ಯ ತನ್ನ ಪ್ರಕಾಶದಿಂದ ಸ್ಥೂಲನಾಗಿರುವಂತೆ ಬ್ರಹ್ಮದೇವರೂ ಅಣುಪರಿಮಾಣದ ಸ್ವರೂಪದೇಹವನ್ನು ಪಡೆದು ತಮ್ಮ ಪ್ರಕಾಶದಿಂದ ಸ್ಥೂಲರಾಗಿದ್ದಾರೆ. ಆದ್ದರಿಂದ ಸಂಸಾರದಲ್ಲಾಗಲೀ ಮೋಕ್ಷ ದಲ್ಲಾಗಲೀ ನಿನ್ನ ಮಹಿಮೆಯುಳ್ಳವರಾರಿದ್ದಾರೆ? ಎಂದು ಶ್ರೀ ವಾದಿರಾಜರು ಶ್ರುತಿಯ ಭಾವವನ್ನು ಬಣ್ಣಿಸಿದ್ದಾರೆ.

'ನ ತೇ ಮಹಿತ್ವಂ ಅನು ಅಶ್ನುವಂತಿ' ಎಂಬಲ್ಲಿ ಅನು ಎಂದರೆ 'ಅನುಸರಿಸಿ ದರೂ' ಎಂದರ್ಥ. ಹೇ! ಭಗವನ್! ನಿನ್ನನ್ನು ಎಷ್ಟೇ ಅನುಸರಿಸಿದರೂ ನಿನ್ನ ಮಹಿಮೆಯನ್ನು ಯಾರೂ ಪಡೆಯಲಾರರೆಂದು ಭಾವ. ನಿರ್ಣಯದಲ್ಲಿ ಈ ಶ್ರುತಿಯನ್ನು ಸಂಗ್ರಹಿಸುವಾಗ ಛಂದೋಭಂಗವಾಗುವು ದೆಂಬ ಕಾರಣದಿಂದ ಆಚಾರ್ಯರು 'ಅನು' ಎಂಬ ಪದವನ್ನೇ ಉಪಯೋಗಿಸದೆ 'ನ ತು ತೇಽಶ್ನು ವತೇ ಮಹಿತ್ವಂ' ಎಂದು ತು ಶಬ್ದದಿಂದ ಅನುಶಬ್ದದ ಅರ್ಥವನ್ನು ಸಂಗ್ರಹಿಸಿದ್ದಾರೆ. ಹಿಂದೆ ಸಾಮ್ಯಂ ನ ಚಾಸ್ಯ ಪರಮಸ್ಯ ಚ' (ಶ್ಲೋ.೨೧) ಎಂಬಲ್ಲಿ ಹೇಳಿರುವ ವಿಷಯಕ್ಕೆ ಇದು ಪ್ರಮಾಣವಾಗಿದೆ.

**ಷಾಡ್ಗುಣ್ಯ ವಿಗ್ರಹ** ಎಂಬ ಪದದಿಂದ 'ಜಿತಂ ತೇ ಪುಂಡರೀಕಾಕ್ಷ ಪೂರ್ಣಷಾಡ್ಗುಣ್ಯ ವಿಗ್ರಹ' ಎಂಬ ಪಂಚರಾತ್ರವಾಕ್ಯವನ್ನು ಸಂಗ್ರಹಿಸಲಾಗಿದೆ. **ಸುಪೂರ್ಣಗುಣೈಕದೇಹ** ಎಂಬ ಪದದಿಂದ 'ತಸ್ಯ ಪ್ರಿಯಮೇವ ಶಿರಃ । ಮೋದೋ ದಕ್ಷಿಣಃ ಪಕ್ಷಃ । ಪ್ರಮೋದ ಉತ್ತರಃ ಪಕ್ಷಃ । ಆನಂದ ಆತ್ಮಾ । ಬ್ರಹ್ಮಪುಚ್ಛಂ ಪ್ರತಿಷ್ಠಾ' ಎಂಬ ತೈತ್ತಿರೀಯದ ಬ್ರಹ್ಮವಲ್ಲಿಯ ಶ್ರುತಿಯನ್ನೂ 'ಆನಂದೋ ಬ್ರಹ್ಮೇತಿ ವ್ಯಜಾನಾತ್' ಎಂಬ ಭೃಗುವಲ್ಲಿಯ ಶ್ರುತಿಯನ್ನೂ 'ವಿದಿತೋಽಸಿ ಭವಾನ್ ಸಾಕ್ಷಾತ್ ಪುರುಷಃ ಪ್ರಕೃತೇಃ ಪರಃ । ಕೇವಲಾನುಭವಾ ನಂದಸ್ವರೂಪಃ ಸರ್ವ ಬುದ್ಧಿದೃಕ್' ಎಂಬ ಭಾಗವತದ ವಸುದೇವನ ವಾಕ್ಯ ವನ್ನೂ, ಜ್ಞಾನಿನೋ ಜ್ಞಾನಯಜ್ಞೇನ ಯಜಂತಿ ಜ್ಞಾನವಿಗ್ರಹಂ' ಎಂದು

ಭಾಗವತದ್ದೇ ಆದ ಅಕ್ರೂರನ ವಾಕ್ಯವನ್ನೂ ಮತ್ತು 'ಆನಂದಮೂರ್ತಿಮುಪ ಗುಹ್ಯ ಜಹುಸ್ತದಾಧಿಮ್ । ದೋರ್ಭ್ಯಾಂ ಸ್ತನಾಂತರಗತಂ ಪರಿರಭ್ಯ ಗಾಢಂ ಆನಂದಮೂರ್ತಿಮಜಹಾದತಿ ದೀರ್ಘ ತಾಪಂ' ಎಂಬ ಶುಕವಾಕ್ಯವನ್ನೂ ಆಚಾರ್ಯರು ಸಂಗ್ರಹಿಸಿದ್ದಾರೆ.

'ಬ್ರಹ್ಮ ಪುಚ್ಛಂ ಪ್ರತಿಷ್ಠಾ' ಎಂಬ ಶ್ರುತಿಯಲ್ಲಿ ಪುಚ್ಛ ಎಂದರೆ ಪಾದ. ಶಿರಸ್ಸಿನ ದೃಷ್ಟಿಯಿಂದ ಪಾದ ಕೊನೆಯ ಅವಯವವಾದ್ದರಿಂದ ಅದನ್ನು ಪುಚ್ಛ ಎಂದು ಕರೆಯಲಾಗಿದೆ. ಭಗವಂತನ ಪಾದವನ್ನು ಶ್ರುತಿ 'ಪ್ರತಿಷ್ಠಾ' ಎಂದೂ ಹೇಳುತ್ತಿದೆ. 'ಸುಖಂ ಪ್ರಕರ್ಷೇಣ ತಿಷ್ಠತಿ ಅನೇನ' ಎಂಬ ವ್ಯುತ್ಪತ್ತ್ಯನುಸಾರವಾಗಿ ಭಗವಂತನ ಪಾದವು ಮೋಕ್ಷದಲ್ಲಿ ಸುಖವು ಮುಕ್ತರಲ್ಲಿ ಪ್ರತಿಷ್ಠಿತವಾಗಲು ಕಾರಣವಾದ್ದರಿಂದ ಪ್ರತಿಷ್ಠಾ ಎಂದೆನಿಸುತ್ತದೆ. ''ಯತ್ರಾऽನಂದಾಶ್ಚ ಮೋದಾಶ್ಚ ಮುದಃ ಪ್ರಮುದ ಆಸತೇ । ಕಾಮಸ್ಯ ಯತ್ರಾಪ್ತಾಃ ಕಾಮಾಃ ತತ್ರ ಮಾಂ ಅಮೃತಂ ಕೃಧಿ'' ಎಂಬ ಶ್ರುತಿಯೂ ಇದೇ ವಿಷಯವನ್ನು ಹೇಳುತ್ತದೆ.

ಭಗವಂತನ ಶಿರಸ್ಸು ಪಾದ ಮೊದಲಾದ ಅವಯವಗಳಿಗೆ ಸರ್ವಥಾ ಭೇದವಿಲ್ಲದಿದ್ದರೂ ಭೇದಪ್ರತಿನಿಧಿಯಾದ ವಿಶೇಷದ ಮಹಿಮೆಯಿಂದ ಶಿರಸ್ಸೇ ಮೊದಲಾದ, ಭಿನ್ನವೆಂಬಂತೆ ವ್ಯವಹರಿಸಲ್ಪಡುವ ಭಗವಂತನ ಅವಯವಗಳು ಸುಖರೂಪವಾದವು ಮತ್ತು ಬ್ರಹ್ಮ ಎಂದರೆ ಪೂರ್ಣವಾದವು. ಆ ಕಾರಣ ದಿಂದಲೇ ಭಗವಂತನು ಆನಂದಮಯನೆಂದೆನಿಸುವನು ಎಂದು 'ತಸ್ಯ ಪ್ರಿಯಮೇವ ಶಿರಃ' ಇತ್ಯಾದಿ ತೈತ್ತರೀಯ ಶ್ರುತಿಯ ಅರ್ಥ.

ಭಗವಂತನ ಪಾದಗಳು ಎರಡಾದರೂ, ಪಾದಗಳೆರಡೂ ಅತಿ ಸಾಮೀಪ್ಯ ವನ್ನು ಪಡೆದಿರುವುದರಿಂದ ಮತ್ತು ವಾಸ್ತವಿಕವಾಗಿ ಅವುಗಳಿಗೆ ಭೇದವಿಲ್ಲ ವೆನ್ನುವುದನ್ನು ಸೂಚಿಸುವ ಸಲುವಾಗಿ 'ಪ್ರತಿಷ್ಠಾ', 'ಪುಚ್ಛಂ' ಎಂದು ಶ್ರುತಿಯಲ್ಲಿ ಏಕವಚನ ಪ್ರಯೋಗ ಮಾಡಲಾಗಿದೆ. ಉಳಿದ ಪ್ರಮಾಣ ವಚನಗಳಲ್ಲಿ ಭಗವಂತನನ್ನು ಗುಣ ಸ್ವರೂಪವಿಗ್ರಹನೆಂದು ಹೇಳಿರುವುದು ಸ್ಪಷ್ಟವಾಗಿದೆ. ನಿರ್ಣಯದಲ್ಲಿ 'ಆನಂದಮಾತ್ರ ಕರಪಾದಮುಖೋದರಾದಿಃ' (ಶ್ಲೋ.೧೧) ಎಂಬ ಶ್ಲೋಕದಲ್ಲಿ ಹೇಳಿರುವ ಪ್ರಮೇಯವನ್ನು ಈ ಶ್ರುತಿಸ್ಮೃತಿಗಳು ಸಮರ್ಥಿಸುತ್ತವೆ. ॥ ೨೪ ॥

**ಮಾಹಾತ್ಮ್ಯದೇಹ ಸೃತಿಮುಕ್ತಿಗತೇ ಶಿವಶ್ಚ**
**ಬ್ರಹ್ಮಾ ಚ ತದ್ಗುಣಗತೌ ನ ಕಥಂಚನೇಶೌ ।**
**ನ ಶ್ರೀಃ ಕುತಸ್ತದಪರೇಽಸ್ಯ ಸುಖಸ್ಯ ಮಾತ್ರಾ-**
**ಮಶ್ನಂತಿ ಮುಕ್ತಸುಗುಣಾಶ್ಚ ಶತಾವರೇಣ ॥ ೨೫ ॥**

**ಅರ್ಥ :- ಮಾಹಾತ್ಮ್ಯದೇಹ** ಮಹಿಮೆಯುಕ್ತವಾದ ಶರೀರವುಳ್ಳವನೇ **ಸೃತಿಮುಕ್ತಿಗತೇ** ಸಂಸಾರ ಮತ್ತು ಮೋಕ್ಷಗಳೆರಡರಲ್ಲೂ ಸ್ವಾಮಿಯೇ! (ನಿನ್ನ ಮಹಿಮೆಯನ್ನು ಯಾರೂ ಹೊಂದಲಾರರು) **ಶಿವಶ್ಚ ಬ್ರಹ್ಮಾಚ** ರುದ್ರನಾಗಲಿ, ಚತುರ್ಮುಖನಾಗಲಿ **ತದ್ಗುಣಗತೌ** ಆ ಭಗವಂತನ ಗುಣಗಳನ್ನು ಪೂರ್ಣವಾಗಿ ತಿಳಿಯಲು **ಕಥಂಚನ** ಎಷ್ಟು ಮಾತ್ರಕ್ಕೂ **ನ ಈಶೌ** ಸಮರ್ಥರಲ್ಲ **ಶ್ರೀಃ ನ** ಲಕ್ಷ್ಮೀದೇವಿಯೂ ಸಮರ್ಥಳಲ್ಲ **ತದಪರೇ ಕುತಃ** ಇವರನ್ನುಳಿದ ಜೀವರನ್ನು ಕುರಿತು ಹೇಳುವುದೇನು **ಮುಕ್ತಸುಗುಣಾಶ್ಚ** ಮುಕ್ತರ ಸಮೂಹ ಗಳೂ ಕೂಡ **ಅಸ್ಯ** ಈ ಭಗವಂತನ **ಸುಖಸ್ಯ** ಸುಖದ **ಮಾತ್ರಾಂ** ಒಂದಂಶವನ್ನು **ಶತಾವರೇಣ** ಶತಗುಣಿತವಾದ ಅಲ್ಪ ಆನಂದದ ಕ್ರಮದಿಂದ **ಅಶ್ನಂತಿ** ಅನುಭವಿಸುವರು.

**ತಾತ್ಪರ್ಯ :-** ಹೇ ಅತ್ಯದ್ಭುತ ಮಹಿಮಭರಿತ ಶರೀರವುಳ್ಳವನೇ! ಸಂಸಾರ ಮತ್ತು ಮೋಕ್ಷ - ಈ ಎರಡೂ ಅವಸ್ಥೆಗಳಲ್ಲೂ ಸ್ವಾಮಿಯಾಗಿರುವವನೇ! ನಿನ್ನ ಮಹಿಮೆಯನ್ನು ಯಾರೂ ಪಡೆಯಲಾರರು - ಬ್ರಹ್ಮರುದ್ರರೂ ಅಷ್ಟೇಕೆ ಲಕ್ಷ್ಮೀದೇವಿಯೂ ಆ ಭಗವಂತನ ಗುಣಗಳನ್ನು ಸಂಪೂರ್ಣವಾಗಿ ತಿಳಿಯಲು ಸಮರ್ಥರಲ್ಲ, ಇತರ ಸಾಮಾನ್ಯರ ಪಾಡೇನು. ಮುಕ್ತಸಮೂಹಗಳು ಶುದ್ಧವಾದ ಆನಂದವನ್ನು ಅನುಭವಿಸುವರಾದರೂ ಆ ಆನಂದ ಭಗವಂತನ ಅಪರಿಮಿತವಾದ ಆನಂದದ ಒಂದಂಶ ಮಾತ್ರವಾಗಿದೆ. ಅಲ್ಲದೆ, ಅವರು ಉತ್ತಮರ ಆನಂದಕ್ಕಿಂತ ಶತಗುಣಿತವಾಗಿ ಅಲ್ಪವಾಗಿರುವ ಆನಂದವನ್ನೂ, ಉತ್ತಮರು ಅವರರಿಗಿಂತ ಶತ ಗುಣಿತವಾದ ಉತ್ತಮ ಆನಂದವನ್ನು - ಹೀಗೆ ತಾರತಮ್ಯೋಪೇತವಾದ ಆನಂದವನ್ನು ಅನುಭವಿಸುವರಲ್ಲದೆ ಆ ಭಗವಂತನಂತೆ ನಿರವಧಿಕವಾದ ಆನಂದವನ್ನು ಅನುಭವಿಸಲಾರರು.

**ವಿಶೇಷ ವಿಷಯ :- ಮಾಹಾತ್ಮ್ಯದೇಹ** - ಪುರುಷಸೂಕ್ತ, ಭಾಗವತ, ಗೀತೆ ಮೊದಲಾದ ಅಸಂಖ್ಯ ಪ್ರಮಾಣ ವಚನಗಳಲ್ಲಿ ನಿರೂಪಿಸಿರುವ ಅತ್ಯದ್ಭುತ

ಮಹಿಮೆಗಳುಳ್ಳ ಶರೀರಯುಕ್ತನೇ! ಎಂದು ಆಚಾರ್ಯರು ಭಗವಂತನನ್ನು ಸಂಬೋಧಿಸಿದ್ದಾರೆ. ಸಹಸ್ರಾರು ಶಿರಸ್ಸು ಸರ್ವತ್ರ ವ್ಯಾಪ್ತಿ, ಮುಖ ಮೊದಲಾದ ತನ್ನ ಅವಯವಗಳಿಂದ ಇಂದ್ರ, ಅಗ್ನಿ ಚಂದ್ರ, ಸೂರ್ಯ, ಪ್ರಾಣ, ಭೂಮಿ, ಅಂತರಿಕ್ಷ ದ್ಯುಲೋಕ, ದಿಕ್ಕುಗಳು ಮೊದಲಾದವನ್ನು ಸೃಷ್ಟಿಸುವುದು, ಮಾತೃಗರ್ಭದಿಂದ ಹೊರಬರುವ ವೇಳೆಯಲ್ಲೇ ಶ್ರೀವತ್ಸ ಕೌಸ್ತುಭ, ಶಂಖ, ಗದೆ ಮೊದಲಾದ ತನ್ನ ಮೂಲರೂಪದ ದಿವ್ಯ ಲಕ್ಷಣಗಳನ್ನು ಧರಿಸಿರುವುದು, ಶೈಶವದಲ್ಲೇ ಜಗತ್ತನ್ನು ತನ್ನ ಉದರದಲ್ಲಿ ಧರಿಸಿರುವುದು, ಗೋಕುಲದಲ್ಲಿದ್ದ ಎಲ್ಲ ಹಗ್ಗಗಳನ್ನು ತಂದರೂ ಕಟ್ಟಲಾಗದಿರುವುದು, ಬಾಲ್ಯದಲ್ಲೇ ಗಿರಿಯನ್ನೆತ್ತಿರುವುದು, ಅರ್ಜುನನ ಸೂತಕರ್ಮವನ್ನು ನಿರ್ವಹಿಸುತ್ತಿದ್ದ ಸೂಕ್ಷ್ಮದೇಹವೇ ದಿಗಂತವ್ಯಾಪ್ತವಾದುದು, ಬ್ರಹ್ಮ ರುದ್ರ ಮೊದಲಾದ ಸಕಲದೇವತೆಗಳಿಗೂ ಆಶ್ರಯನಾಗಿರುವುದು - ಇವು ಭಗವಂತನ ಶರೀರದಲ್ಲಿರುವ ಮಹಾ ಮಹಿಮೆಗಳಲ್ಲಿ ಕೆಲವಾಗಿವೆ.

ಈ ಪದದಿಂದ ಸೂಚಿತವಾಗುವ ಪ್ರಮಾಣಗಳು ಭಗವಂತನು ಜನನ ಮರಣಾದಿ ಸಕಲ ದೋಷರಹಿತನೂ, ಅಚೇತನವಾದ ಶರೀರ ರಹಿತನೂ ಆಗಿರುವನೆಂಬ ವಿಷಯಗಳನ್ನು ಸಮರ್ಥಿಸುವವು. ಅಲ್ಲದೆ, ಹಿಂದೆ 'ನೈತಾದೃಶಃ ಕ್ವ ಚ ಬಭೂವ' (ಶ್ಲೋ. ೧೨), 'ಸ ಹಿ ಸರ್ವಶಕ್ತಿಃ' (ಶ್ಲೋ. ೧೩.), 'ಅಭಿದಾ ಕುತೋಽಸ್ಯ' (ಶ್ಲೋ. ೨೧) ಎಂಬ ಶ್ಲೋಕಗಳಲ್ಲಿ ಹೇಳಿದ ವಿಷಯಗಳನ್ನೂ ಈ ಪ್ರಮಾಣಗಳು ಸಮರ್ಥಿಸುವವು. ಅಘಟಿತಘಟನಾಶಕ್ತಿಯಿಲ್ಲದಿದ್ದಲ್ಲಿ ಭಗವಂತನು ಶಿಶುವಾಗಿರುವಾಗ ಜಗತ್ತನ್ನೇ ತನ್ನ ಉದರದಲ್ಲಿ ಧರಿಸುವುದು ಸಾಧ್ಯವಿಲ್ಲವಾದ್ದರಿಂದ ಭಗವಂತನು ಸರ್ವಶಕ್ತನೆಂದು ಸಿದ್ಧನಾಗುವನೆಂದು ಭಾವ.

**ಸೃತಿಮುಕ್ತಿಗತೇ** - ಸೃತಿ ಎಂದರೆ ಸಂಸಾರ. ಸೃತಿಮುಕ್ತಿಗಳಲ್ಲಿ ಗತಿ ಎಂದರೆ ಸ್ವಾಮಿಯಾಗಿರುವವನೇ! ಎಂದು ಭಗವಂತನನ್ನು ಆಚಾರ್ಯರು ಸಂಬೋಧಿಸಿದ್ದಾರೆ, 'ಉತಾಮೃತತ್ವಸ್ಯೇಶಾನೋ ಯದನ್ನೇನಾತಿರೋಹತಿ' ಎಂಬ ಪುರುಷ ಸೂಕ್ತದ ಮಂತ್ರವನ್ನು ಇಲ್ಲಿ ಸಂಗ್ರಹಿಸಲಾಗಿದೆ. ಯತ್ - ಯಾವ ಕಾರಣದಿಂದ, ಅನ್ನೇನ - 'ಅದ್ಯತೇಽತ್ತಿ ಚ ಭೂತಾನಿ ತಸ್ಮಾದನ್ನಂ ತದುಚ್ಯತೇ' ಎಂಬ ಶ್ರುತಿಯಲ್ಲಿ ಹೇಳಿರುವಂತೆ ಭಗವಂತನಿಂದ ಸಂಹಾರವನ್ನು ಹೊಂದುವ ಕಾರಣ ಅನ್ನವೆನಿಸುವ ಮರಣಶೀಲರಾದ ಮರ್ತ್ಯಸಮೂಹವನ್ನು ಅತಿರೋಹತಿ - ಆ

ಮರ್ತ್ಯರಂತೆ ಮರಣವನ್ನು ಪಡೆಯದಿರುವ ಕಾರಣ ಅತಿಕ್ರಮಿಸಿ ಇರುವನೋ, ಉತ, - ಆ ಕಾರಣದಿಂದ, ಅಮೃತತ್ವಸ್ಯ - ಮುಕ್ತರ ಸಮೂಹಕ್ಕೆ, ಈಶಾನಃ - ಸ್ವಾಮಿಯಾಗಿರುವಿ ಎಂದು ಈ ಮಂತ್ರದ ಅರ್ಥ.

ಸಂಸಾರಾವಸ್ಥೆಯಲ್ಲಿ ಸ್ವಾಭಾವಿಕವಾಗಿ ಅಧಮನಾಗಿರುವ ಜೀವನನ್ನು ಪ್ರಾಜ್ಞನಾದ ಭಗವಂತನು ಮೋಕ್ಷಾವಸ್ಥೆಯಲ್ಲೂ ಅಧಮನನ್ನಾಗಿಯೇ ಇಟ್ಟು ರಕ್ಷಿಸುವನು ಹೊರತು ತನಗೆ ಸಮನನ್ನಾಗಿ ಮಾಡುವುದಿಲ್ಲ ಎಂದು ಶ್ರುತಿಯ ಭಾವ.

ಜನತಾ ಎಂಬ ಪದವು ಜನರ ಸಮೂಹ ಎಂಬ ಅರ್ಥವನ್ನು ಕೊಡುವಂತೆ ಅಮೃತತ್ವ ಎಂಬ ಪದವೂ ಅಮೃತರ ಎಂದರೆ ಮುಕ್ತರ ಸಮೂಹ ಎಂಬ ಅರ್ಥವನ್ನು ಕೊಡುವುದು. ಪುರುಷಸೂಕ್ತದ ಈ ಮಂತ್ರದಲ್ಲಿರುವ ಅನ್ನೇನ ಎಂಬ ಪದ ತೃತೀಯಾ ವಿಭಕ್ತಿಯಲ್ಲಿದೆ. ಆದರೆ 'ಮರ್ತ್ಯಮನ್ನಂ ಯದತ್ಯಗಾತ್' ಎಂಬ ಭಾಗವತದ ಸಮಾನಾರ್ಥಕ ವಾಕ್ಯವನ್ನನುಸರಿಸಿ ಮತ್ತು 'ವ್ಯತ್ಯಯೋ ಬಹುಲಂ' ಎಂಬ ವ್ಯಾಕರಣಸೂತ್ರದ ಅನುಮತಿಯಾಗಿ ಇರುವುದರಿಂದ ಈ ಪದವನ್ನು ದ್ವಿತೀಯಾವಿಭಕ್ತ್ಯಂತವಾಗಿ ಪರಿಗಣಿಸಬೇಕು.

'ವರಂ ವರಯ ಭದ್ರಂ ತೇ ಋತೇ ಕೈವಲ್ಯಮಾತ್ಮನಃ । ಏಕ ಏವೇಶ್ವರಸ್ತಸ್ಯ ಭಗವಾನ್ ವಿಷ್ಣುರವ್ಯಯಃ । ಎಂಬ ಸ್ಮೃತಿಯನ್ನು ಈ ಪದದಿಂದ ಆಚಾರ್ಯರು ಸೂಚಿಸುತ್ತಿದ್ದಾರೆ.

ಅಥವಾ 'ಸೃತಿಮುಕ್ತಿಗತೇ' ಎಂಬ ಪದಕ್ಕೆ ಇನ್ನೊಂದು ವಿಧವಾಗಿಯೂ ಅರ್ಥವನ್ನು ವಿವರಿಸಬಹುದು. ಸೃತಿ ಎಂದರೆ ಸಂಸಾರ. ಮುಕ್ತಿ ಎಂದರೆ ಆ ಸಂಸಾರದ ಪ್ರಧ್ವಂಸ. ಇವೆರಡರ ಗತಿ ಎಂದರೆ ಪ್ರಾಪ್ತಿಯು ಯಾರಿಂದ ಆಗುವುದೋ ಆ ಭಗವಂತನು ಸೃತಿಮುಕ್ತಿಗತಿ ಎಂದೆನಿಸುವನು. ಅವನನ್ನು ಸಂಬೋಧಿಸುವ ಪದ 'ಸೃತಿಮುಕ್ತಿಗತೇ' ಎಂದಾಗುವುದು. ಈ ಪದದಿಂದ ಆಚಾರ್ಯರು 'ತ್ವಂ ನಿತ್ಯ ಮುಕ್ತ ಪರಿಶುದ್ಧವಿಬುದ್ಧ ಆತ್ಮಾ', 'ಗುಣಸ್ಯ ಮಾಯಾಮೂಲತ್ವಾತ್ ನ ಮೇ ಮೋಕ್ಷೋ ನ ಬಂಧನಮ್', 'ವಿದ್ಯಾಮಯೋ ಯಃ ಸ ತು ನಿತ್ಯಮುಕ್ತಃ' ಇತ್ಯಾದಿ ಭಾಗವತ ವಾಕ್ಯಗಳನ್ನು ಸಂಗ್ರಹಿಸಿರುವರು.

ಈ ಎರಡು ಸಂಬೋಧನ ಪದಗಳನ್ನು ಹಿಂದಿನ ಶ್ಲೋಕದ 'ನ ತು ತೇಽಶ್ನುವತೇ ಮಹಿತ್ವಂ' ಎಂಬ ಪದಗಳೊಡನೆ ಜೋಡಿಸಿಕೊಳ್ಳಬೇಕು. ಹಿಂದಿನ ಶ್ಲೋಕದ ಷಾಡ್ಗುಣ್ಯವಿಗ್ರಹ, ಸುಪೂರ್ಣಗುಣೈಕದೇಹ ಎಂಬ ವಿಶೇಷಣಗಳು ಮತ್ತು ಈ ಶ್ಲೋಕದ ಮಾಹಾತ್ಮ್ಯದೇಹ ಎಂಬ ವಿಶೇಷಣ — ಒಟ್ಟು ಮೂರು ವಿಶೇಷಣಗಳು ಹಿಂದೆ 'ನಿರ್ದೋಷಪೂರ್ಣವಿಗ್ರಹ' (ಶ್ಲೋ. ೧೧) ಎಂಬ ಶ್ಲೋಕದಲ್ಲಿ ಹೇಳಿರುವ ವಿಷಯದಲ್ಲಿ ಪ್ರಮಾಣವಾಗಿವೆ. 'ಸ್ವತಿಮುಕ್ತಿಗತೇ' ಎಂಬ ನಾಲ್ಕನೆ ವಿಶೇಷಣವು 'ಸಾಮ್ಯಂ ನ ಚಾಸ್ಯ ಪರಮೇಣ ಚ ಕೇನ ಚಾಪ್ಯಂ ಮುಕ್ತೇನ ಚ' (ಶ್ಲೋ. ೨೧) ಎಂಬಲ್ಲಿ ಹೇಳಿರುವ ವಿಷಯದಲ್ಲಿ ಪ್ರಮಾಣವಾಗಿದೆ.

**ಶಿವಶ್ಚ ಬ್ರಹ್ಮಾ ಚ ತದ್ಗುಣಗತೌ ನ ಕಥಂಚನೇಶೌ :-** ಈ ವಾಕ್ಯದಿಂದ ಆಚಾರ್ಯರು 'ನಾಂತಂ ಗುಣನಾಮಗುಣಸ್ಯ ಜಗ್ಮುರ್ಯೋಗೇಶ್ವರಾ ಯೇ ಭವಪಾದ ಮುಖ್ಯಾಃ' ಇತ್ಯಾದಿ ಭಾಗವತವಚನವನ್ನು ಸಂಗ್ರಹಿಸಿದ್ದಾರೆ. ಶಿವ, ಚತುರ್ಮುಖ ಬ್ರಹ್ಮ ಮೊದಲಾದ ಯೋಗಿಶ್ರೇಷ್ಠರೂ ಕೂಡ ಸತ್ತ್ವರಜಸ್ತಮೋ ಗುಣರಹಿತವಾದ ಪ್ರಯುಕ್ತ ಅಗುಣನೆಂದೆನಿಸುವ ಭಗವಂತನ ಗುಣಗಳ ಕೊನೆಯನ್ನು ಮುಟ್ಟಲಾರರು ಎಂದು ಈ ಶ್ಲೋಕದ ಭಾವ. 'ಶಿವಶ್ಚ ಬ್ರಹ್ಮಾ ಚ' ಇತ್ಯಾದಿ ವಾಕ್ಯದಲ್ಲಿ ತದ್ಗುಣಗತಿ ಎಂದರೆ ಆ ಪರಮಾತ್ಮನ ಗುಣಗಳನ್ನು ತಿಳಿಯುವ ವಿಷಯದಲ್ಲಿ ಎಂದು ಅರ್ಥ.

**ನ ಶ್ರೀ :-** ಶ್ರೀದೇವಿಯೂ ಭಗವಂತನ ಸರ್ವೋತ್ತಮತ್ವಾದಿ ಗುಣಗಳನ್ನು ಗತೌ - ಹೊಂದುವುದರಲ್ಲಿ, ನ ಈಶಾ - ಸಮರ್ಥಳಲ್ಲ — ಎಂದು ಅನ್ವಯಿಸಬೇಕು. ಈ ಪದಗಳಿಂದ ಆಚಾರ್ಯರು 'ಮಮ ಯೋನಿರಪ್ಸ್ವ ಅಂತಸ್ಸಮುದ್ರೇ । ತತೋ ವಿತಿಷ್ಠೇ ಭುವನಾನು ವಿಶ್ವೋತಾಮೂಂ ದ್ಯಾಂ ವರ್ಷ್ಮಣೋಪಸ್ಪೃಶಾಮಿ । ಪರೋ ದಿವಾ ಪರ ಏನಾ ಪೃಥಿವ್ಯೈತಾವತೀ ಮಹಿನಾ ಸಂಬಭೂವ' ಎಂಬ ಶ್ರುತಿಯನ್ನು ಸಂಗ್ರಹಿಸಿದ್ದಾರೆ. ಬ್ರಹ್ಮಾದಿಗಳ ಸೃಷ್ಟಿ ಸಂಹಾರಗಳನ್ನು ನಾನು ಮಾಡಲು ಸಮರ್ಥಳು ಎಂದು ಈ ಮುಂಚೆ ಹೇಳಿದ ಲಕ್ಷ್ಮೀದೇವಿ 'ಮಮ ಯೋನಿಃ' ಇತ್ಯಾದಿ ವಾಕ್ಯಗಳಿಂದ ತನ್ನ ಮಹಿಮೆಯೂ ಭಗವಂತನಿಗೆ ಅಧೀನವಾದುದೆಂದು ಹೇಳುತ್ತಿದ್ದಾಳೆ - ಈ ಶ್ರುತ್ಯರ್ಥ ಹೀಗಿದೆ — ಮಮ-ನನಗೆ, ಯೋನಿಃ - ಕಾರಣನಾಗಿರುವ ಒಬ್ಬ ಭಗವಂತನು,

ಸಮುದ್ರೇ ಅಂತಃ ಅಪ್ಸು - ಸಮುದ್ರದ ಜಲದಲ್ಲಿ ಇದ್ದಾನೆ (ನಾನೇ ಪರಮೇಶ್ವರಳಲ್ಲ). ತತಃ - ನನಗೆ ಕಾರಣನಾದ ಆ ನಾರಾಯಣನಿಂದ, ವಿಶ್ವಾಭುವನಾ - ನಾನೂ ಸೇರಿದಂತೆ ಸಮಸ್ತ ಜಗತ್ತು, ಅನು - ಸೃಷ್ಟಿಯ ಅನಂತರ, ವಿತಿಷ್ಠೇ - ವಿಶೇಷವಾಗಿ ಧರಿಸಲ್ಪಟ್ಟಿವೆ. ಇಲ್ಲಿ ವಿತಸ್ಥಿರೇ ಎಂದು ಬಹುವಚನ ಪ್ರಯೋಗ ಮಾಡಬೇಕಾಗಿದ್ದರೂ ಅಂಗೈಯಲ್ಲಿ ಒಂದು ನೆಲ್ಲಿಕಾಯನ್ನು ಧರಿಸಿದಂತೆ ಅನಾಯಾಸವಾಗಿ ಸಮಸ್ತ ಜಗತ್ತುಗಳೂ ಭಗವಂತನಿಂದ ಧರಿಸಲ್ಪಟ್ಟವು ಎಂದು ಸೂಚಿಸುವುದಕ್ಕಾಗಿ ವಿತಿಷ್ಠೇ ಎಂದು ಏಕವಚನಪ್ರಯೋಗ ಮಾಡಲಾಗಿದೆ. (ನಾನಾದರೋ) ಅಮೂಂ - ಈ ಪೃಥ್ವಿಯನ್ನು, ದ್ಯಾಂ - ದ್ಯುಲೋಕವನ್ನೂ ವರ್ಷ್ಮಣಾ - ನನ್ನ ದೇಹದಿಂದ, ಉಪಸ್ಪೃಶಾಮಿ - ಸಮೀಪದಲ್ಲಿ ಸ್ಪರ್ಶಿಸುತ್ತ ಇರುವೆನಷ್ಟೇ. ತಾಯಿ ಮೊಸರನ್ನು ಕಡೆಯುತ್ತಿರುವಾಗ ಕಡೆಗೋಲನ್ನು ಮಗು ಸ್ಪರ್ಶಿಸುತ್ತ ಸಮೀಪದಲ್ಲಿ ನಿಂತಿರುವಂತೆ ಇದ್ದೇನೆ. ಆ ಭಗವಂತನೇ ಈ ಜಗತ್ತಿನ ಪೋಷಣೆ ಮಾಡುವವನು. ನಾನು ಕೇವಲ ನಿಮಿತ್ತವಷ್ಟೆ ಎಂದು ಭಾವ. ಆ ಪರಮಾತ್ಮನು, ದಿವಾ - ದ್ಯುನಾಮಕ ನನ್ನ ರೂಪಕ್ಕಿಂತಲೂ ಪರಃ - ಉತ್ತಮನು. ಏನಾ ಪೃಥಿವ್ಯಾ - ಈ ಪೃಥಿವೀನಾಮಕವಾದ ನನ್ನ ರೂಪಕ್ಕಿಂತಲೂ ಪರಃ - ಉತ್ತಮನು. ನಾನಾದರೋ, ಮಹಿನಾ - ಮಹಿಮೆಯಿಂದ, ಏತಾವತೀ ಇಷ್ಟು ಮಿತಿಯುಳ್ಳವಳು, ಸಂಬಭೂವ - ಆಗಿರುವೆನು.

ಈ ಶ್ರುತಿಯಿಂದ ಭಗವಂತನ ಮಹಿಮೆ ನಿರವಧಿಕವಾದುದೆಂದೂ ಲಕ್ಷ್ಮೀದೇವಿಯ ಭಾಗ್ಯ ಸಾವಧಿಕವಾದದ್ದೆಂದೂ ಸ್ಪಷ್ಟವಾಗುವುದು. ಆದ್ದರಿಂದ ಲಕ್ಷ್ಮೀದೇವಿಯೂ ಭಗವಂತನ ಗುಣಗಳನ್ನು ಪಡೆಯಲು ಸಮರ್ಥಳಲ್ಲವೆಂದು ಹೇಳಿದುದು ಯುಕ್ತವೆಂದು ಭಾವ. 'ಶಿವಶ್ಚ ಬ್ರಹ್ಮಾಚ' ಇತ್ಯಾದಿ ವಿಶೇಷಣ ಗಳಿಂದ 'ಅಸ್ಯ ಗುಣವಿಸ್ಮೃತಿರನ್ಯಗಾಕ್ವ' (ಶ್ಲೋ. ೨೦) ಎಂಬಲ್ಲಿ ಹೇಳಿದ ಪ್ರಮೇಯದಲ್ಲಿ ಪ್ರಮಾಣವನ್ನು ಸೂಚಿಸಲಾಗಿದೆ.

**ಸುಖಸ್ಯ ಮಾತ್ರಾಮಶ್ನಂತಿ ಮುಕ್ತಗಣಾಶ್ಚ ಶತಾವರೇಣ :-** ಈ ವಾಕ್ಯ ದಿಂದ ಆಚಾರ್ಯರು 'ಏತಸ್ಯೈವಾನಂದಸ್ಯ ಅನ್ಯಾನಿ ಭೂತಾನಿ ಜೀವಂತಿ' ಎಂಬ ಶ್ರುತಿಯನ್ನೂ, 'ಸೈಷಾನಂದಸ್ಯ ಮೀಮಾಂಸಾ ಭವತಿ' ಎಂಬ ಆನಂದ ತಾರತಮ್ಯವನ್ನು ಹೇಳುವ ಶ್ರುತಿಯನ್ನೂ ಸಂಗ್ರಹಿಸಿದ್ದಾರೆ. ಮೊದಲನೆ

ಶ್ರುತಿಯಲ್ಲಿ ಭಗವದಾನಂದದ ಮಾತ್ರೆ ಎಂದರೆ ಏಕದೇಶವನ್ನು ಇತರರು ಪಡೆಯುವರು ಎಂದು ಹೇಳಿದೆ. ಆ ಏಕದೇಶವೂ ಎಲ್ಲ ಜೀವರಿಗೂ ಸಮ ವಾಗಿಲ್ಲದೆ ಉತ್ತಮರ ಆನಂದಕ್ಕಿಂತ ಶತಗುಣಿತವಾದ ಕಡಿಮೆ ಆನಂದವನ್ನು ನೀಚರು ಅನುಭವಿಸುವರೆಂದೂ, ಉತ್ತಮೋತ್ತಮರು ಶತಗುಣಿತವಾದ ಅಧಿಕಾಧಿಕ ಆನಂದವನ್ನು ಅನುಭವಿಸುವರೆಂದೂ ತಿಳಿಯಬೇಕು. ಭಗವಂತನ ಆನಂದವಾದರೋ 'ಯತೋ ವಾಚೋ ನಿವರ್ತಂತೇ । ಅಪ್ರಾಪ್ಯ ಮನಸಾ ಸಹ। ಆನಂದಂ ಬ್ರಹ್ಮಣೋ ವಿದ್ವಾನ್' ಎಂಬ ಶ್ರುತಿಯಲ್ಲಿ ಹೇಳಿರುವಂತೆ ಮನೋವಾಕ್ಕುಗಳಿಗೆ ಅತೀತವೂ ನಿರವಧಿಕವೂ ಆಗಿರುವುದು. ಆದ್ದರಿಂದ ಭಗವಂತನಿಗೂ ಇತರರಿಗೂ ಸಾಮ್ಯವೆಲ್ಲಿಯದು ಎಂದು ಭಾವ.

ಹಿಂದೆ 'ಮುಕ್ತೇನ ಚ' (ಶ್ಲೋ. ೨೧), 'ಅಭಿದಾ ಕುತೋಸ್ಯ' (ಶ್ಲೋ. ೨೧) ಎಂದು ಹೇಳಿರುವ ವಿಷಯಗಳನ್ನು ಈ ಮೇಲಿನ ಪ್ರಮಾಣಗಳೂ ಸಮರ್ಥಿಸುವವು. ॥ ೨೫ ॥

**ಆಭಾಸಕಾಭಾಸಪರಾವಭಾಸ-**
**ರೂಪಾಣ್ಯಜಸ್ರಾಣಿ ಚ ಚೇತನಾನಾಮ್ ।**
**ವಿಷ್ಣೋಃ ಸದೈವಾತಿವಶಾತ್ ಕದಾಪಿ**
**ಗಚ್ಛಂತಿ ಕೇಶಾದಿಗಣಾ ನ ಮುಕ್ತೌ ॥ ೨೬ ॥**

**ಅರ್ಥ :-** **ಚೇತನಾನಾಂ** ಜೀವರ **ಆಭಾಸಕಾಭಾಸಪರಾವಭಾಸ ರೂಪಾಣಿ** ವಿಷ್ಣುವಿನ ಆಭಾಸಕ ಎಂದರೆ ಪ್ರತಿಬಿಂಬನಾದ ಪವನ, ಅವನ ಆಭಾಸನಾದ ರುದ್ರ, ಅವನ ನಂತರ ಕೆಳಮುಖವಾಗಿ ಗಣನೆ ಮಾಡಿದಾಗ ಆಭಾಸನಾಗಿರುವ ಶಕ್ರ, ಅವನ ಆಭಾಸರಾದ ಪ್ರಾಣ, ದಕ್ಷ ಮೊದಲಾದ ರೂಪಗಳು **ಅಜಸ್ರಾಣಿ ಚ** ನಿತ್ಯಗಳೂ ಆಗಿವೆ **ಕೇಶಾದಿಗಣಾಃ** ಪ್ರಲಯ ಕಾಲದ ಜಲರೂಪಗಳಾದ ಲಕ್ಷ್ಮೀದೇವಿ, ಚತುರ್ಮುಖ, ರುದ್ರ ಮೊದಲಾದ ಜೀವರ ಸಮೂಹಗಳು **ಮುಕ್ತೌ** ಮೋಕ್ಷದಲ್ಲೂ ಸದೈವ ಯಾವಾಗಲೂ **ವಿಷ್ಣೋಃ** ವಿಷ್ಣುವಿನ **ವಶಾತ್** ವಶವಾಗಿರುವುದರಿಂದ **ಕದಾಪಿ** ಎಂದೂ **ನ ಅತಿ ಗಚ್ಛಂತಿ** ಅತಿಕ್ರಮಿಸಿ ಹೋಗುವುದಿಲ್ಲ.

**ತಾತ್ಪರ್ಯ** :- ಭಗವಂತನ ಪ್ರತಿಬಿಂಬ ಮುಖ್ಯಪ್ರಾಣ, ಅವನ ಪ್ರತಿಬಿಂಬ ರುದ್ರ. ಹೀಗೇ ಕೆಳಮುಖವಾಗಿ ಗಣನೆ ಮಾಡಿದರೆ ರುದ್ರನ ಅನಂತರ ಅವನ ಪ್ರತಿಬಿಂಬನಾದವನು ಇಂದ್ರ. ಅವನಿಗೆ ಪ್ರತಿಬಿಂಬರಾದವರು ಪ್ರಾಣ, ದಕ್ಷ ಮೊದಲಾದವರು. ಈ ಎಲ್ಲ ಜೀವರೂಪಗಳು ಅನಾದಿ ನಿತ್ಯವಾದವು. ಪ್ರಲಯ ಕಾಲದಲ್ಲಿ ಜಲರೂಪಳಾಗಿರುವ ಲಕ್ಷ್ಮೀ, ಚತುರ್ಮುಖ, ರುದ್ರ ಮೊದಲಾದ ಜೀವರ ಸಮೂಹಗಳೆಲ್ಲವೂ ಮೋಕ್ಷದಲ್ಲಾಗಲಿ, ಸಂಸಾರ ದಲ್ಲಾಗಲಿ ವಿಷ್ಣುವಿನ ಅಧೀನರು. ಆದ್ದರಿಂದ ಅವರೆಂದೂ ಭಗವಂತನನ್ನು ಅತಿಕ್ರಮಿಸಿ ಹೋಗಲಾರರು.

**ವಿಶೇಷ ವಿಷಯ :- ಚೇತನಾನಾಂ ರೂಪಾಣಿ ಅಜಸ್ರಾಣಿ** - ಕನ್ನಡಿ ಯಲ್ಲಿ ಪ್ರತಿಫಲಿತವಾಗಿರುವ ಪ್ರತಿಬಿಂಬವು ಕನ್ನಡಿ ನಶ್ವರವಾಗಿರುವ ಕಾರಣ ನಶ್ವರವಾಗಿರುವುದು. ಪರಮಾತ್ಮನ ಪ್ರತಿಬಿಂಬನಾದ ಜೀವನಿಗೆ ಜೀವಪ್ರಕಾಶವೇ ಉಪಾಧಿಯಾಗಿದೆ. ಈ ಉಪಾಧಿ ನಿತ್ಯವಾದ್ದರಿಂದ ಪ್ರತಿಬಿಂಬನಾದ ಜೀವ ಅನಿತ್ಯವಾಗಲು ಸಾಧ್ಯವಿಲ್ಲ.

ಬ್ರಹ್ಮಸೂತ್ರಗಳಲ್ಲಿ ವಿವರಿಸಿರುವಂತೆ ಜೀವರಿಗೆ ಇನ್ನೊಂದು ವಿಧವಾದ ಭಗವತ್ ಪ್ರತಿಬಿಂಬತ್ವವಿದೆ. ಸುರ, ನರ, ತಿರ್ಯಕ್ ಮೊದಲಾದ ನಾನಾ ರೂಪಗಳನ್ನು ಪಡೆದಿರುವ, ಉತ್ತಮ, ಮಧ್ಯಮ ಮತ್ತು ಅಧಮರಾದ ನಾನಾ ಜೀವರಿಗೆ ಸುಖದುಃಖಾದಿಗಳು ಒಂದೇ ಸಮನಾಗಿರುವುದಿಲ್ಲ. ಸ್ವಚ್ಛ ಮಧ್ಯಮ, ಅಥವಾ ಮಲಿನವಾದ ಉಪಾಧಿಯಿಂದಾಗಿ ಪ್ರತಿಬಿಂಬದಲ್ಲಿ ಸ್ವಚ್ಛತ್ವ, ಮಧ್ಯಮತ್ವ ಮತ್ತು ಮಲಿನತ್ವಗಳು ಉಂಟಾಗುವಂತೆ ಆಯಾಯಾ ಜೀವರ ಅದೃಷ್ಟನಿಮಿತ್ತದಿಂದಾಗಿ ಸುಖದುಃಖಾದಿಗಳಲ್ಲಿ ವೈಚಿತ್ರ್ಯವಿರುತ್ತದೆ. ಆದರೂ 'ಬ್ರಹ್ಮಣಿ ಬ್ರಹ್ಮರೂಪೋಽಸೌ ಶಿವರೂಪೀ ಶಿವೇ ಸ್ಥಿತಃ ।' 'ಅಥಾ ಸುರಾನಾವಿಶತ್ ಆಸುರೇಣ ರೂಪೇಣ ತೇಷಾಂ ಬಲವೀರ್ಯ ಮೀರಯನ್ । ಉದ್ದೀಪಯನ್ ದೇವಗಣಾಂಶ್ಚ ವಿಷ್ಣುರ್ದೈವೇನ ನಾಗೇಂದ್ರಮಥಾಪರೇಣ' ಇತ್ಯಾದಿ ಪ್ರಮಾಣನುಸಾರ ಪ್ರತಿಯೊಬ್ಬ ಜೀವನಿಗೂ ತನ್ನ ಶರೀರದೊಳಗಿರುವ ವಿಚಿತ್ರ ಭಗವದಾಕಾರಕ್ಕೆ ಸದೃಶವಾದ ಆಕಾರವಿರುವುದು. ಇಂತಹ ಆಕಾರವನ್ನು ಪಡೆದಿರುವಿಕೆಯೂ ಜೀವನಿಗೆ ಭಗವತ್ಪ್ರತಿಬಿಂಬತ್ವವಾಗಿದೆ. ಆದರೆ ಆ ಪ್ರತಿಬಿಂಬತ್ವದ ವಿಚಾರ ಇಲ್ಲಿ ಪ್ರಸ್ತುತವಾಗಿಲ್ಲ. ಬ್ರಹ್ಮನಿಂದ ಆರಂಭಿಸಿ

ನರೋತ್ತಮರವರೆಗಿರುವ ಶುಭಜೀವರಿಗೆ ಭಗವಂತನ ಜ್ಞಾನಾನಂದಾದಿ ಗುಣಸದೃಶ ಗುಣವಿರುವುದರಿಂದ ಮತ್ತು ಭಗವದಧೀನತೆ ಇರುವುದರಿಂದ ಭಗವತ್ಪ್ರತಿಬಿಂಬತ್ವವನ್ನು ಹೇಳುವರು. ಆ ಪ್ರತಿಬಿಂಬತ್ವವೇ ಇಲ್ಲಿ ಪ್ರಸ್ತುತವಾಗಿರುವುದು. ಆಕಾರಸಾಮ್ಯದಿಂದ ಉಂಟಾಗುವ ಪ್ರತಿಬಿಂಬತ್ವವೇ ಇಲ್ಲಿ ವಿವಕ್ಷಿತವಾಗಿದ್ದಲ್ಲಿ ಮುಕ್ತ ಚತುರ್ಮುಖನ ಆಕಾರಸಾಮ್ಯವಿಲ್ಲದ ಗರುಡಶೇಷರಿಗೆ ಮುಕ್ತಚತುರ್ಮುಖಪ್ರತಿಬಿಂಬತ್ವವು ಇಲ್ಲವೆನ್ನಬೇಕಾಗುವುದು. ಹಾಗೆಯೇ ಇಂದ್ರನಿಗೂ ಗರುಡ-ಶೇಷರ ಪ್ರತಿಬಿಂಬತ್ವವಿಲ್ಲವೆನ್ನಬೇಕಾಗುವುದು. ಆದರೆ ಪ್ರತಿಬಿಂಬತ್ವವಿರುವುದೆಂದು 'ಆಭಾಸಕೋಽಸ್ಯ ಪವನಃ' (ಶ್ಲೋ. ೧೪) ಇತ್ಯಾದಿ ಶ್ಲೋಕದಲ್ಲಿ ಹೇಳಲಾಗಿದೆ. ಆದ್ದರಿಂದ ಜ್ಞಾನಾನಂದಾದಿ ಗುಣಗಳಿಂದ ತತ್ಸಾದೃಶ್ಯ ಮತ್ತು ತದಧೀನತ್ವರೂಪವಾದ ಪ್ರತಿಬಿಂಬತ್ವವೇ ಇಲ್ಲಿ ವಿವಕ್ಷಿತವೆಂದು ಸಿದ್ಧವಾಗುವುದು.

ಭಗವಂತನ ಅನಂತಾನಂತ ರೂಪಗಳಲ್ಲಿ ಯಾವುದೋ ಒಂದು ರೂಪ ಮಾತ್ರ ಜೀವನಿಗೆ ಬಿಂಬರೂಪವಾಗಿರುವುದು. ಆ ಬಿಂಬರೂಪಕ್ಕೆ ಮಾತ್ರ ಜೀವನು ಅಧೀನನಾಗಿರುವನು ಹೊರತು ಇತರ ಭಗವಂತನ ರೂಪಗಳಿಗಲ್ಲ ಎಂಬ ಆಶಂಕೆಯೂ ಇಲ್ಲಿ ವಿವರಿಸಿರುವ, ಬ್ರಹ್ಮಸೂತ್ರೋಕ್ತವಾದ ಆಭಾಸತ್ವದಿಂದ ಪರಿಹಾರವಾಗುವುದು. ಆಕಾರಸಾದೃಶ್ಯದಿಂದ ಉಂಟಾಗುವ ಬಿಂಬ ಪ್ರತಿಬಿಂಬಭಾವವು ಸಾಕ್ಷಾತ್ತಾದದ್ದು. ಇಲ್ಲಿ ಹೇಳಿರುವ ಆಭಾಸತ್ವ ಅಂದರೆ ಪ್ರತಿಬಿಂಬತ್ವವು ಕ್ರಮಿಕವಾದದ್ದು ಅಥವಾ ಪಾರಂಪರಿಕವಾದದ್ದು. ಪವನನಿಗೆ ಬಿಂಬನಾದ ಭಗವಂತನಿಗೆ ರುದ್ರಾದಿಗಳೂ ಪರಂಪರಯಾ ಪ್ರತಿಬಿಂಬರಾಗಿರುವರು. ಆ ಕಾರಣ ಪವನನಿಗೆ ಬಿಂಬನಾದ ಭಗವದ್ರೂಪಕ್ಕೆ ಪವನನಲ್ಲದೆ ಇತರರೂ ಅಧೀನರಾಗಿರುವರು. ಆದ್ದರಿಂದ ಅಬಿಂಬ ಭಗವದ್ರೂಪಗಳಿಗೆ ಜೀವರು ಅಧೀನರಲ್ಲವೆಂಬ ಶಂಕೆಯ ಪರಿಹಾರವಾಗುವುದು.

'ಕೇಶಾದಿಗಣಾಃ' ಎಂಬ ಪದದಲ್ಲಿ ಕ ಎಂದರೆ ಪ್ರಲಯಜಲರೂಪಳಾದ ಲಕ್ಷ್ಮೀ ಮತ್ತು ಚತುರ್ಮುಖ. 'ಕ' ಶಬ್ದಕ್ಕೆ 'ಮಾರುತೇ ವೇಧಸಿ ಬ್ರಧ್ನೇ ಪುಂಸಿ ಕಃ ಕಂ ಶಿರೋಂ...ಬುನಿ ಎಂಬ ವಚನಾನುಸಾರವಾಗಿ ಚತುರ್ಮುಖ ಬ್ರಹ್ಮ ಮತ್ತು ಅಂಬು ಎಂದರೆ ಜಲವೆಂಬ ಎರಡೂ ಅರ್ಥಗಳಿವೆ. ಪ್ರಕೃತ, ಜಲವೆಂದರೆ ಪ್ರಲಯ ಕಾಲದ ಜಲಸ್ವರೂಪಗಳಾದ ಲಕ್ಷ್ಮೀದೇವಿ.

ಈ ಶ್ಲೋಕದ ಪೂರ್ವಾರ್ಧವು 'ಆಭಾಸಕೋಸ್ಯ ಪವನಃ ಪವನಸ್ಯ ರುದ್ರಃ' (ಶ್ಲೋ. ೧೪) ಎಂಬ ಶ್ಲೋಕದಲ್ಲಿ ಹೇಳಿರುವ ವಿಷಯದಲ್ಲೂ, ಉತ್ತರಾರ್ಧವು 'ಯಸ್ಯಾಜ್ಞಯಾ ರಹಿತಮಿಂದಿರಯಾ ಸಮೇತಂ ಬ್ರಹ್ಮೇಶಪೂರ್ವಕಮಿದಂ ನ ತು ಕಸ್ಯ ಚೇಶಂ' (ಶ್ಲೋ. ೧೩) ಎಂಬ ಶ್ಲೋಕದಲ್ಲಿ ಹೇಳಿರುವ ವಿಷಯದಲ್ಲೂ ಪ್ರಮಾಣವಾಗಿದೆ. ॥ ೨೬ ॥

**ಯಸ್ಮಿನ್ ಪರೇಽನ್ಯೇಽಪ್ಯಜಜೀವಕೋಶಾ**
**ನಾಹಂ ಪರಾಯುರ್ನ ಮರೀಚಿಮುಖ್ಯಾಃ ।**
**ಜಾನಂತಿ ಯದ್ಗುಣಗಣಾನ್ನ ರಮಾದಯೋಽಪಿ**
**ನಿತ್ಯಃ ಸ್ವತಂತ್ರ ಉತ ಕೋಽಸ್ತಿ ತದನ್ಯ ಈಶಃ ॥ ೨೭ ॥**

**ಅರ್ಥ :-** **ಯಸ್ಮಿನ್** ಯಾವ **ಪರೇ** ಸರ್ವೋತ್ತಮನಾದ ಶ್ರೀ ಹರಿಯಲ್ಲಿ, **ಅನ್ಯೇ**ನಮಗಿಂತ ಭಿನ್ನರಾದ **ಅಜಜೀವಕೋಶಾಃ** ಚತುರ್ಮುಖಬ್ರಹ್ಮನು ಸೃಷ್ಟಿಸಿದ ಜೀವರ ಕೋಶಸ್ಥಾನೀಯವಾದ ಬ್ರಹ್ಮಾಂಡಗಳು, (ಸೃಷ್ಟಿಕಾಲದಲ್ಲಿ ಉತ್ಪನ್ನವಾಗುವವೋ) **ಯದ್ಗುಣಗಣಾನ್** ಯಾವ ಭಗವಂತನ ಗುಣಸಮೂಹ ಗಳನ್ನು **ಅಹಂ ಪರಾಯುಃ ನ** ನಾನಾಗಲಿ, ಬ್ರಹ್ಮನಾಗಲಿ (ತಿಳಿಯುವು ದಿಲ್ಲವೋ) **ಮರೀಚಿ ಮುಖ್ಯಾಃ ರಮಾದಯೋಽಪಿ ನ ಜಾನಂತಿ** ಮರೀಚಿ ಮೊದಲಾದ ಮಹರ್ಷಿಗಳು ರಮಾದಿಗಳೂ ಕೂಡ ತಿಳಿಯುವದಿಲ್ಲವೋ **ತದನ್ಯಃ** ಅಂತಹ ಪರಮಾತ್ಮನಿಂದ ಭಿನ್ನನಾದ **ಈಶಃ** ಸಮರ್ಥನಾದವನು **ನಿತ್ಯಃ** ನಿತ್ಯನು **ಸ್ವತಂತ್ರಃ** ಸ್ವತಂತ್ರನು **ಕಃ ಅಸ್ತಿ** ಯಾರಿದ್ದಾರೆ.

**ತಾತ್ಪರ್ಯ :-** ಶ್ರೀಹರಿಯ ಸುದರ್ಶನ ಚಕ್ರದಿಂದ ಪಾರಾಗಲು ಧಾವಿಸಿ ಬಂದ ದೂರ್ವಾಸರನ್ನು ಕುರಿತು ರುದ್ರನು ಹೇಳುವ ಮಾತಿದು — ಯಾವ ಸರ್ವೋತ್ತಮನಾದ ಶ್ರೀಹರಿಯಿಂದ ಜೀವರ ಕೋಶಸ್ಥಾನದಂತಿರುವ ಬ್ರಹ್ಮಾಂಡ ಗಳು ಉತ್ಪನ್ನವಾಗುವವೋ ಆ ಭಗವಂತನ ಗುಣಗಳನ್ನು ನಾನಾಗಲೀ, ಚತುರ್ಮುಖನಾಗಲಿ, ಮರೀಚಿ ಮೊದಲಾದ ಮಹರ್ಷಿಗಳಾಗಲಿ ಅಷ್ಟೇಕೆ ಸಾಕ್ಷಾತ್ ರಮಾದೇವಿಯೂ ಪೂರ್ಣವಾಗಿ ತಿಳಿಯಲಾರಳು. ಅಂತಹ ಭಗವಂತನನ್ನು ಬಿಟ್ಟು ಉಳಿದವರು ಯಾರೂ ಸರ್ವಸಮರ್ಥರಲ್ಲ. ಅವನಂತೆ ನಿತ್ಯರೂ, ಸ್ವತಂತ್ರರೂ ಆಗಿಲ್ಲ.

**ವಿಶೇಷ ವಿಷಯ** :- 'ಯಸ್ಮಿನ್ ಪರೇಽನ್ಯೇಽಪ್ಯಜಜೀವಕೋಶಾಃ' ಎಂಬ ಶ್ಲೋಕಭಾಗದಿಂದ ಆಚಾರ್ಯರು "ವಯಂ ನ ತಾತ ಪ್ರಭವಾಮ ಭೂಮ್ನೋ ಭವಂತಿ ಕಾಲೇ ನ ಭವಂತಿ ಹೀದೃಶಾಃ । ಯಸ್ಮಿನ್ ಪರೇಽನ್ಯೇಽಪ್ಯಜಜೀವ ಕೋಶಾಃ ಸಹಸ್ರಶೋ ಯತ್ರ ವಯಂ ಭ್ರಮಾಮಃ ॥" ಎಂಬ ಭಾಗವತ ದಲ್ಲಿರುವ ರುದ್ರವಾಕ್ಯವನ್ನು ಸಂಗ್ರಹಿಸಿದ್ದಾರೆ.

ಈ ಶ್ಲೋಕದ ಅರ್ಥ ಹೀಗಿದೆ - ತಾತ! - ನನ್ನ ದಯೆಗೆ ಪಾತ್ರನಾದ ದೂರ್ವಾಸನೇ, ವಯಂ ನ ಪ್ರಭವಾಮ - ಶ್ರೀ ಹರಿಯ ಸುದರ್ಶನದಿಂದ ನಿನ್ನನ್ನು ರಕ್ಷಿಸಲು ನಾವು ಸಮರ್ಥರಲ್ಲ, ಹಿ - ಏಕೆಂದರೆ, ಭೂಮ್ನಃ - ಸಕಲ ಗುಣಪರಿಪೂರ್ಣನಾದ ನಾರಾಯಣನಿಂದ, ಈದೃಶಾಃ - ನನ್ನಂಥ ದೇವತೆ ಗಳು, ಕಾಲೇ ಭವಂತಿ ನ ಭವಂತಿ - ಸೃಷ್ಟಿಕಾಲದಲ್ಲಿ ಹುಟ್ಟುವರು ಮತ್ತು ಸಂಹಾರಕಾಲದಲ್ಲಿ ಇಲ್ಲದಾಗುವರು. ನಮ್ಮಂತಹ ಎಷ್ಟೋ ದೇವತೆಗಳ ಸೃಷ್ಟಿ ಸಂಹಾರಗಳನ್ನು ಮಾಡಬಲ್ಲ ಆ ಭಗವಂತನ ಆಯುಧವನ್ನು ಪ್ರತಿರೋಧಿಸಲು ನಮಗೆಲ್ಲಿಯ ಶಕ್ತಿ ಎಂದು ಭಾವ. ನಮ್ಮಂತಹವರ ಸೃಷ್ಟ್ಯಾದಿಗಳನ್ನು ಮಾಡಬಲ್ಲ ಎಂದಷ್ಟೇ ಅಲ್ಲದೆ — ಯಸ್ಮಿನ್ ಪರೇ - ಯಾವ ಪುರುಷೋತ್ತಮನಲ್ಲಿ, ಅನ್ಯೇ - ನಮ್ಮಿಂದ ಭಿನ್ನರಾದ, ಅಜಜೀವ ಕೋಶಾಃ - ಜೀವರ ಕೋಶಸ್ಥಾನೀಯ ಗಳಾದ ಬ್ರಹ್ಮಾಂಡಗಳು, ಭವಂತಿ ನ ಭವಂತಿ - ಸೃಷ್ಟಿಕಾಲದಲ್ಲಿ ಹುಟ್ಟಿ ಸಂಹಾರಕಾಲದಲ್ಲಿ ನಾಶವಾಗುತ್ತವೋ, ಯತ್ರ - ಯಾವ ಬ್ರಹ್ಮಾಂಡಗಳಲ್ಲಿ, ಸಹಸ್ರಶಃ - ಸಮಸ್ತಜೀವರ ಮನಸ್ಸೇ ಮೊದಲಾದ ಇಂದ್ರಿಯಗಳ ಪ್ರೇರಣೆಗಾಗಿ ಅಪರಿಮಿತ ರೂಪಗಳಿಂದ, ಭ್ರಮಾಮಃ - ತಿಲುಗುವೆವೋ (ಅಂತಹ ಬ್ರಹ್ಮಾಂಡಗಳ ಸೃಷ್ಟಿಕರ್ತನಾದ ಶ್ರೀಹರಿಯ ಆಯುಧವನ್ನು ತಡೆಯಲು ನಮಗೆಲ್ಲಿಯ ಸಾಮರ್ಥ್ಯ!) ಜೀವರು ಹುಟ್ಟಿದಾಗ ಅವರ ಮನಸ್ಸನ್ನು ಪ್ರೇರಿಸಲು ನಮ್ಮ ಮೂಲರೂಪದಿಂದ ಬರುತ್ತೇವೆ. ಜೀವರ ಮರಣವಾದಾಗ ಒಂದಂಶದಿಂದ ಮೂಲರೂಪಕ್ಕೆ ಹೋಗಿ ಸೇರುತ್ತೇವೆ. ಇನ್ನೊಂದಂಶದಿಂದ ಆ ಜೀವನೊಂದಿಗೆ ಹೋಗುತ್ತೇವೆ—ಹೀಗೆ ಭಗವಂತ ಸೃಷ್ಟಿಸಿದ ಅನಂತ ಬ್ರಹ್ಮಾಂಡಗಳಲ್ಲಿ ತಿರುಗುತ್ತಿರುತ್ತೇವೆಂದು ಭಾವ. ನಮ್ಮಂತಹ ನೂರಾರು ಕೋಟಿ ಜೀವರಿಗೆ ಆಧಾರವಾಗಿರುವ ಬ್ರಹ್ಮಾಂಡವನ್ನೇ ಧ್ವಂಸ ಮಾಡುವ ಭಗವಂತನಿಗೆ ನಮ್ಮನ್ನು ನಿಗ್ರಹಿಸುವುದದೆಷ್ಟರದು! ಶ್ರೀಹರಿಯೊಬ್ಬನೇ ಇಂತಹ ಮಹಾಸಾಮರ್ಥ್ಯವುಳ್ಳವನೆಂದು ರುದ್ರದೇವರ ಭಾವ.

'ನಾಹಂ ಪರಾಯುರ್ನ ಮರೀಚಿಮುಖ್ಯಾಃ' ಎಂಬ ಶ್ಲೋಕದ ಮುಂದಿನ ಭಾಗದಿಂದ ಭಾಗವತದ ಇದೇ ಸಂದರ್ಭದಲ್ಲಿ ಬರುವ "ನಾಹಂ ಪರಾಯು ರ್ಋಷಯೋ ನ ಮರೀಚಿಮುಖ್ಯಾಃ ಜಾನಂತಿ ಯದ್ವಿರಚಿತಂ ಖಲು ಸತ್ತ್ವಸಂಘಾಃ" ಎಂಬ ವಾಕ್ಯವನ್ನು ಆಚಾರ್ಯರು ಸಂಗ್ರಹಿಸಿದ್ದಾರೆ. 'ಜಾನಂತಿ ಯದ್ಗುಣಗಣಾನ್ನ ರಮಾದಯೋಽಪಿ' ಎಂಬ ಭಾಗದಿಂದ ಪ್ರಮಾಣಾಂತರದ ಅರ್ಥವನ್ನು ಸಂಗ್ರಹಿಸಿದ್ದಾರೆ. ಹಿಂದೆ ಆಚಾರ್ಯರು ವರ್ಣಿಸಿರುವ ಭಗವಂತನ ಸರ್ವೋತ್ತಮತ್ವ, ಸರ್ವಶಕ್ತತ್ವಾದಿ ಗುಣಗಳಲ್ಲಿ ಇದು ಪ್ರಮಾಣವಾಗಿದೆ.

॥ ೨೭ ॥

**ನೈವೈಕ ಏವ ಪುರುಷಃ ಪುರುಷೋತ್ತಮೋಽಸಾ-**
**ವೇಕಃ ಕುತಃ ಸ ಪುರುಷೋ ಯತ ಏವ ಜಾತ್ಯಾ ।**
**ಅರ್ಥಾತ್ ಶ್ರುತೇಶ್ಚ ಗುಣತೋ ನಿಜರೂಪತಶ್ಚ**
**ನಿತ್ಯಾನ್ಯ ಏವ ಕಥಮಸ್ಮಿ ಸ ಇತ್ಯಪಿ ಸ್ಯಾತ್ ॥ ೨೮ ॥**

**ಅರ್ಥ :-** **ಪುರುಷಃ** ಜೀವನು **ಏಕ ಏವ ನ** ಒಬ್ಬನೇ ಅಲ್ಲ **ಅಸೌ ಏವ ಪುರುಷೋತ್ತಮಃ** ಆ ಭಗವಂತನೇ ಪುರುಷೋತ್ತಮನು **ಸಃ ಪುರುಷಃ** ಅಂತಹ ಸರ್ವಶ್ರೇಷ್ಠನಾದ ಪುರುಷನು **ಏಕಃ ಕುತಃ** ಜೀವರಿಂದ ಅಭಿನ್ನನು ಹೇಗಾದಾನು? **ಯತಃ ಏವ** ಯಾವ ಕಾರಣದಿಂದ **ಜಾತ್ಯ** ಈಶ್ವರತ್ವಜಾತಿ ಯಿಂದ **ಅರ್ಥಾತ್** ಪ್ರಯೋಜನದಿಂದ **ಶ್ರುತೇಶ್ಚ** ದ್ವಾಸಾಪರ್ಣೇತ್ಯಾದಿ ಶ್ರುತಿಗಳಿಂದಲೂ **ಗುಣತಃ** ಗುಣಗಳಿಂದ **ನಿಜರೂಪತಶ್ಚ** ತನ್ನ ಸ್ವರೂಪದಿಂದ **ನಿತ್ಯಾನ್ಯ ಏವ** ನಿತ್ಯವಾಗಿ ಜೀವನಿಂದ ಭಿನ್ನನೇ ಆಗಿರುವನೋ (ಆ ಕಾರಣದಿಂದ) **ಸಃ ಅಸ್ಮಿ** ಆ ಭಗವಂತನೇ ನಾನಾಗಿದ್ದೇನೆ **ಇತ್ಯಪಿ** ಎನ್ನುವುದೂ ಕೂಡ **ಕಥಂ ಸ್ಯಾತ್** ಹೇಗೆ ತಾನೆ ಯುಕ್ತವಾದೀತು.

**ತಾತ್ಪರ್ಯ :-** ಮಹಾಭಾರತದ ವಾಕ್ಯಗಳು, ಶ್ರುತಿಗಳು ಮೊದಲಾದ ಪ್ರಮಾಣಗಳು ಹೀಗೆ ಹೇಳುತ್ತವೆ — ಆತ್ಮನು ಒಬ್ಬನೇ ಅಲ್ಲ, ಅನೇಕ ಆತ್ಮರಿರುವರು. ಶ್ರೀಹರಿ ಪುರುಷೋತ್ತಮನಾಗಿದ್ದಾನೆ. ಆ ಭಗವಂತನು ಜೀವ ರಿಂದ ಅಭಿನ್ನನಾಗಲು ಹೇಗೆ ಸಾಧ್ಯ? ಈಶ್ವರತ್ವರೂಪವಾದ ಧರ್ಮ, ಸ್ವ ಸಾಮರ್ಥ್ಯದಿಂದಲೆ ಸ್ವಾಪೇಕ್ಷಿತ ಸಕಲ ಪ್ರಯೋಜನಗಳನ್ನು ಪಡೆದಿರುವಿಕೆ, ದ್ವಾಸುಪರ್ಣೇತ್ಯಾದಿ ಶ್ರುತಿಗಳು, ಅನಂತಗುಣಗಳು, ಸರ್ವತ್ರವ್ಯಾಪ್ತವಾದ

ತನ್ನ ಸ್ವರೂಪ ಇವುಗಳ ಆಧಾರದಿಂದ ಆ ಭಗವಂತನು ಜೀವರಿಂದ ಅನಾದ್ಯನಂತಕಾಲಗಳಲ್ಲಿ ಭಿನ್ನನೇ ಆಗಿದ್ದಾನೆ. ಇಂತಹ ಭಗವಂತನು ನಾನಾಗಿದ್ದೇನೆ ಎಂದು ಹೇಳುವುದು ಹೇಗೆ ತಾನೆ ಸಾಧ್ಯ?

**ವಿಶೇಷ ವಿಷಯ** :- 'ನೈವೈಕ ಏವ ಪುರುಷಃ' ಎಂಬ ಶ್ಲೋಕ ಭಾಗದಿಂದ 'ಬಹವಃ ಪುರುಷಾ ಬ್ರಹ್ಮನ್ ಉತಾಹೋ ಏಕ ಏವ ತು । ನೈತದಿಚ್ಛಂತಿ ಪುರುಷಂ ಏಕಂ ಕುರುಕುಲೋದ್ವಹ' ಎಂಬ ಮಹಾಭಾರತವಾಕ್ಯವನ್ನು ಆಚಾರ್ಯರು ಸಂಗ್ರಹಿಸಿದ್ದಾರೆ, 'ಪುರುಷೋತ್ತಮೋಽಸೌ, ಏಕಃ ಕುತಃ ಸ ಪುರುಷಃ' ಎಂಬುದರಿಂದ - 'ಬಹೂನಾಂ ಪುರುಷಾಣಾಂ ಹಿ ಯಥೈಕಾ ಯೋನಿರುಚ್ಯತೇ । ತಥಾ ತಂ ಪುರುಷಂ ವಿಶ್ವಂ ಆಖ್ಯಾಸ್ಯಾಮಿ ಗುಣಾಧಿಕಂ' ಎಂಬ ಮಹಾಭಾರತ ವಾಕ್ಯದ ಅಭಿಪ್ರಾಯವನ್ನು ಸಂಗ್ರಹಿಸಿದ್ದಾರೆ. ಬಹವಃ ಪುರುಷಾ ಬ್ರಹ್ಮನ್ ಉತಾಹೋ ಏಕ ಏವ ತು - ಚೇತನರು ಅನೇಕರೋ ಅಥವಾ ಒಬ್ಬನೇ ಚೇತನನೋ ಎಂದು ಜನಮೇಜಯನ ಪ್ರಶ್ನೇ. ಅದಕ್ಕೆ ಸೂತಪುರಾಣಿಕರ ಉತ್ತರ ಇದು — ಕುರುಕುಲೋದ್ವಹ - ಎಲೈ ಕುರುಕುಲ ಪ್ರಸೂತನೇ । ಪುರುಷಂ ಏಕಂ (ಆಹುಃ) - ದುಃಶಾಸ್ತ್ರದ ಅನುಯಾಯಿಗಳು ಕೆಲವರು ಚೇತನನು ಒಬ್ಬನೇ ಎನ್ನುವರು. ಆದರೆ ಪಂಡಿತರು, ಏತತ್ - ಈ ಚೇತನದ ಏಕತೆಯನ್ನು ನ ಇಚ್ಛಂತಿ - ಮನಸ್ಸಿನಿಂದಲೂ ಬಯಸುವುದಿಲ್ಲ, ಮರಣಸಮಯದಲ್ಲೂ ಆ ಮಾತನ್ನಾಡಲಾರರೆಂದೂ, ನೀನು ಪ್ರಶ್ನಿಸಿದ ಚೇತನಬಹುತ್ವವನ್ನೇ ಅವರೂ ಇಚ್ಛಿಸುವರೆಂದೂ ಭಾವ.

ಈ ಅನೇಕ ಚೇತನರಿಗೆ ಸಾಮ್ಯವಿದೆಯೋ ಅಥವಾ ಅವರಲ್ಲೊಬ್ಬನಿಗೆ ಶ್ರೇಷ್ಠೆ ಇರುವುದೋ ಎಂಬ ರಾಜನ ಮನಸ್ಸಿನಲ್ಲಿರುವ ಶಂಕೆಯನ್ನು ಪರಿಹರಿಸಲು 'ಬಹೂನಾಂ ಪುರುಷಾಣಾಂ' ಇತ್ಯಾದಿ ಶ್ಲೋಕ ಬಂದಿದೆ — ಯಥಾ - ಹೇಗೆ, ಬಹೂನಾಂ ಪುರುಷಾಣಾಂ - ಅನೇಕ ಚೇತನರಿಗೆ, ಏಕಾ ಯೋನಿರುಚ್ಯತೇ - ಒಬ್ಬ ಪುರುಷವ್ಯಕ್ತಿಯು ಉತ್ಪತ್ತಿಸ್ಥಿತಿ ಮೊದಲಾದವುಗಳಿಗೆ ಕಾರಣನೆಂದು ಸೂತ್ರಕಾರರಾದ ವ್ಯಾಸರಿಂದ 'ಜನ್ಮಾದ್ಯಸ್ಯ ಯತಃ' ಇತ್ಯಾದಿ ಸೂತ್ರಗಳಲ್ಲಿ ಮತ್ತು 'ಯತೋ ವಾ ಇಮಾನಿ ಭೂತಾನಿ ಜಾಯಂತೇ' ಇತ್ಯಾದಿ ಶ್ರುತಿಗಳಿಂದಲೂ ಹೇಳಲ್ಪಟ್ಟಿದೆಯೋ, ತಥಾ - ಹಾಗೆ, (ಆ ವ್ಯಾಸರ ಶಿಷ್ಯನಾದುದರಿಂದ ನಾನೂ ಕೂಡ) ವಿಶ್ವಂ - ಸಕಲಜೀವರೊಳಗೆ ಸಾಕ್ಷಿಯಾಗಿ

ಪ್ರವೇಶಿಸಿರುವ ಆ ಭಗವಂತನನ್ನು, ಗುಣಾಧಿಕಂ – ಸಕಲಗುಣಗಳಿಂದಾಗಿ ಎಲ್ಲ ಚೇತನರಿಗಿಂತ ಉತ್ತಮನೆಂದು, ಆಖ್ಯಾಸ್ಯಾಮಿ – ಹೇಳುವೆನು — ಎಂದು ಈ ಮಹಾಭಾರತ ವಾಕ್ಯಗಳ ಪ್ರತಿಪದಾರ್ಥ.

'ಯತ ಏವ ಜಾತ್ಯಾ' ಎಂಬ ಪದಗಳಿಂದ ಆಚಾರ್ಯರು 'ಯತಃ ಸ್ವರೂಪತ ಶ್ಚಾನ್ಯೋ ಜಾತಿತಃ ಶ್ರುತಿತೋऽರ್ಥತಃ । ಕಥಮಸ್ಮಿ ಸ ಇತ್ಯೇವ ಸಂಬಂಧಃ ಸ್ಯಾದ ಸಂಹಿತಃ ॥' ಎಂಬ ಮಹಾಭಾರತ ಮೋಕ್ಷಧರ್ಮದ ವಚನವನ್ನು ಸಂಗ್ರಹಿಸಿದ್ದಾರೆ. ಈ ವಚನದ ಪ್ರತಿಪದಾರ್ಥ ಹೀಗಿದೆ — ಯತಃ – ಯಾವ ಕಾರಣದಿಂದ, ಸಃ – ಆ ಪರಮಾತ್ಮನು, ಸ್ವರೂಪತಃ – ಅಣುಗಾತ್ರದ ಜೀವರಲ್ಲಿ ಇರಡು ಶಕ್ಯವಿಲ್ಲದ, ಸರ್ವ ವ್ಯಾಪ್ತವಾದ ದೇಹವೆಂಬ ತನ್ನ ಸ್ವರೂಪದಿಂದ, ಜಾತಿತಃ – ಅಲ್ಪಶಕ್ತಿರಸಾರ್ವಜ್ಞಂ ಪಾರತಂತ್ರ್ಯಮ ಪೂರ್ಣತಾ । ಉಪಜೀವಕತ್ವಂ ಜೀವತ್ವಮೀಶತ್ವಂ ತದ್ವಿಪರ್ಯ ಯಃ ॥' ಎಂಬ ವಚನದಂತೆ ಜೀವತ್ವವಿರುದ್ಧವಾದ ಈಶ್ವರತ್ವಜಾತಿಯಿಂದಾಗಿ, ಶ್ರುತಿತಃ – ದ್ವಾಸುಪರ್ಣೇತ್ಯಾದಿ ಶ್ರುತಿಯಿಂದ, ಅರ್ಥತಃ – ಜೀವರಲ್ಲಿರಲು ಸಾಧ್ಯವಿಲ್ಲ ದಿರುವ, ತನ್ನ ಸಾಮರ್ಥ್ಯದ ಬಲದಿಂದಲೇ ಸ್ವಾಪೇಕ್ಷಿತವಾದ ಸಕಲಪ್ರಯೋಜನ ಸಮೂಹದಿಂದ, ಅನ್ಯಃ – ಜೀವರಿಂದ ಭಿನ್ನನಾಗಿರುವವನೋ ಆ ಕಾರಣದಿಂದ, ಸಃ ಅಸ್ಮೀತಿ – ಆ ಭಗವಂತನೇ ನಾನಾಗಿರುವೆಂಬ, ಅಸಂಹಿತಃ – ಅನನ್ವಿತ ವಾದ, ಸಂಬಂಧಃ – ತಾದಾತ್ಮ್ಯರೂಪವಾದ ಸಂಬಂಧವು, ಕಥಮೇವ ಸ್ಯಾತ್ – ಹೇಗೆ ತಾನೆ ಇದ್ದೀತು?

ಈ ಮೇಲಿನ ಪ್ರಮಾಣಗಳು 'ಅಭಿದಾ ಕುತೋऽಸ್ಯ' (ಶ್ಲೋ. ೨೧), 'ಪರತಮಃ ಪರಮಾತ್ ಸ ಏಕಃ' (ಶ್ಲೋ. ೨) ಎಂಬಲ್ಲಿ ಹೇಳಿರುವ ಪ್ರಮೇಯ ಗಳನ್ನು ಸಮರ್ಥಿಸುತ್ತವೆ. ॥ ೨೮ ॥

**ಸರ್ವೋತ್ತಮೋ ಹರಿರಿದಂ ತು ತದಾಜ್ಞಯೈವ**
**ಚೇತುಂ ಕ್ಷಮಂ ಸ ತು ಹರಿಃ ಪರಮಃ ಸ್ವತಂತ್ರಃ ।**
**ಪೂರ್ಣಾವ್ಯಯಾಗಣಿತನಿತ್ಯಗುಣಾರ್ಣವೋऽಸಾ**
**ವಿತ್ಯೇವ ವೇದವಚನಾನಿ ಪರೋಕ್ತಯಶ್ಚ ॥ ೨೯ ॥**

**ಅರ್ಥ :-** **ಹರಿಃ ಸರ್ವೋತ್ತಮಃ** ಶ್ರೀಹರಿಯು ಸರ್ವೋತ್ತಮನು **ಇದಂ ತು** ಈ ಜಗತ್ತಾದರೋ **ತದಾಜ್ಞಯೈವ** ಆ ಭಗವಂತನ ಆಜ್ಞೆಯಿಂದಲೇ **ಚೇತುಂ**

ತಿಳಿಯಲು **ಕ್ಷಮಂ** ಸಮರ್ಥವು **ಸ ತು ಹರಿಃ** ಆ ಶ್ರೀಹರಿಯೇ **ಪರಮಃ** ಸರ್ವಶ್ರೇಷ್ಠನು **ಸ್ವತಂತ್ರಃ** ಸ್ವತಂತ್ರನು **ಅಸೌ** ಆ ಭಗವಂತನು **ಪೂರ್ಣಾವ್ಯಯಾಗಣಿತನಿತ್ಯಗುಣಾರ್ಣವಃ** ಪರಿಪೂರ್ಣವೂ, ಹ್ರಾಸರಹಿತವೂ, ಅಸಂಖ್ಯಾತವೂ, ನಾಶರಹಿತವೂ ಆದ ಗುಣಗಳಿಂದ ಸಮುದ್ರದಂತಿರುವನು **ಇತ್ಯೇವ** ಹೀಗೆಯೇ **ವೇದವಚನಾನಿ** ವೇದವಾಕ್ಯಗಳೂ **ಪರೋಕ್ತಯಶ್ಚ** ಭಗವಂತನ ಉಕ್ತಿಗಳಾದ ಮಹಾಭಾರತಾದಿಗಳು (ವದಂತಿ-ಹೇಳುತ್ತವೆ)

**ತಾತ್ಪರ್ಯ** :- ನಿಖಿಲಶ್ರುತಿಗಳೂ, ಸಾಕ್ಷಾತ್ ಭಗವದವತಾರರಾದ ವ್ಯಾಸ ಮಹರ್ಷಿಗಳು ರಚಿಸಿರುವ ಮಹಾಭಾರತ, ಪಂಚರಾತ್ರ, ಪುರಾಣಗಳು ಮೊದಲಾದ ಪ್ರಮಾಣಗಳೂ ಹೀಗೆಯೇ ಹೇಳುತ್ತವೆ — 'ಶ್ರೀಹರಿ ಸರ್ವೋತ್ತಮನಾಗಿದ್ದಾನೆ. ಅವನ ಆದೇಶದಿಂದ ಮಾತ್ರ ಈ ಜಗತ್ತು ಜ್ಞಾನವನ್ನು ಪಡೆಯಲು ಶಕ್ತವಾಗುವುದು. ಆ ಭಗವಂತನೇ ಸರ್ವಶ್ರೇಷ್ಠ ಮತ್ತು ಸ್ವತಂತ್ರ. ಶ್ರೀಹರಿಯು ಗುಣಸಾಗರನಾಗಿದ್ದಾನೆ. ಅವನ ಗುಣಗಳು ಪರಿಪೂರ್ಣವೂ, ಹ್ರಾಸವಿಲ್ಲದವೂ ಆಗಿವೆ. ಎಣಿಸಲಾಗದ ಆ ಗುಣಗಳು ಅವಿನಾಶಿಯಾಗಿವೆ.'

**ವಿಶೇಷ ವಿಷಯ** :- 'ಚಿತೀ ಸಂಜ್ಞಾನೇ' ಎಂಬ ಧಾತುವಿನಿಂದ ನಿಷ್ಪನ್ನವಾಗಿರುವ 'ಚೇತುಂ' ಎಂಬ ಶಬ್ದಕ್ಕೆ ತಿಳಿಯಲು ಎಂದರ್ಥವಾಗುವುದು. ಹಿಂದೆ ನಿರ್ಣಯದಲ್ಲಿ ಹೇಳಿರುವ ಎಲ್ಲ ಪ್ರಮೇಯಗಳನ್ನು ಕ್ರೋಢಿಕರಿಸಿ ಆ ಸಮಸ್ತ ವಿಷಯದಲ್ಲಿ ಆಚಾರ್ಯರು ಪ್ರಮಾಣಾಂತರವನ್ನು ಈ ಶ್ಲೋಕದಲ್ಲಿ ಉದಾಹರಿಸಿದ್ದಾರೆ. ॥ ೨೯ ॥

ತಾವು ನಿರೂಪಿಸಿದ ಪ್ರಮೇಯಗಳ ಸಮರ್ಥನೆಯನ್ನು ಮಾಡುವ, ಹಿಂದೆ ಉದಾಹರಿಸಲಾದ ಮತ್ತು ಮುಂದೆ ಉದಾಹರಿಸಲಾಗುವ ವೇದ, ವೇದಾನುಸಾರಿ ಪುರಾಣಾದಿವಚನಗಳಲ್ಲಿ ಅಪ್ರಾಮಾಣ್ಯ ಸಂದೇಹವನ್ನು ಮಾಡತಕ್ಕದ್ದಲ್ಲ ಎಂದು ಹೇಳುವ ಪ್ರಮಾಣವಾಕ್ಯಗಳನ್ನು ಆಚಾರ್ಯರು ಈ ಮುಂದೆ ಉದಾಹರಿಸುತ್ತಿದ್ದಾರೆ —

**ಋಗಾದಯಶ್ಚ ಚತ್ವಾರಃ ಪಂಚರಾತ್ರಂ ಚ ಭಾರತಂ ।**
**ಮೂಲರಾಮಾಯಣಂ ಬ್ರಹ್ಮಸೂತ್ರಂ ಮಾನಂ ಸ್ವತಃ ಸ್ಮೃತಂ ॥ ೩೦ ॥**

**ಅವಿರುದ್ಧಂ ತು ಯತ್ತ್ವಸ್ಯ ಪ್ರಮಾಣಂ ತಚ್ಚ ನಾನ್ಯಥಾ ।**
**ಏತದ್ವಿರುದ್ಧಂ ಯತ್ತು ಸ್ಯಾನ್ನ ತನ್ಮಾನಂ ಕಥಂಚನ ॥ ೩೧ ॥**

**ಅರ್ಥ :- ಋಗಾದಯಶ್ಚ ಚತ್ವಾರಃ** ಋಗ್ವೇದವೇ ಮೊದಲಾದ ನಾಲ್ಕು ವೇದಗಳೂ **ಪಂಚರಾತ್ರಂ ಚ ಭಾರತಂ ಮೂಲರಾಮಾಯಣಂ ಬ್ರಹ್ಮಸೂತ್ರಂ** ಪಂಚರಾತ್ರಾಗಮ,ಮಹಾಭಾರತ, ಮೂಲರಾಮಾಯಣ, ಬ್ರಹ್ಮಸೂತ್ರ-ಇವುಗಳೂ **ಸ್ವತಃ ಮಾನಂ ಸ್ಮೃತಂ** ತಮ್ಮ ಪ್ರಾಮಾಣ್ಯಸಿದ್ಧಿಗಾಗಿ ಮತ್ತೊಂದನ್ನು ಅವಲಂಬಿಸದೇ, ತಾವಾಗಿಯೇ ಪ್ರಮಾಣಗಳೆಂದು ಸ್ಮೃತಿಸಿದ್ಧವಾಗಿದೆ.

**ಯತ್ತು ಅಸ್ಯ ಅವಿರುದ್ಧಂ** ಯಾವುದು ಈ ಪ್ರಮಾಣಸಮುದಾಯಕ್ಕೆ ವಿರುದ್ಧವಲ್ಲವೋ **ತಚ್ಚ ಪ್ರಮಾಣಂ** ಅದೂ ಪ್ರಮಾಣವೇ **ನ ಅನ್ಯಥಾ** ಬೇರೆ ರೀತಿಯಾಗಿರುವುದು ಪ್ರಮಾಣವಲ್ಲ **ಯತ್ತು ಏತದ್ವಿರುದ್ಧಂ ಸ್ಯಾತ್** ಯಾವುದು ಈ ಮೇಲಿನ ಪ್ರಮಾಣಗಳಿಗೆ ವಿರುದ್ಧವೋ **ನ ತತ್ ಕಥಂಚನ ಮಾನಂ** ಅದು ಯಾವುದೇ ರೀತಿಯಿಂದಲೂ ಪ್ರಮಾಣವಾಗಲಾರದು.

**ತಾತ್ಪರ್ಯ :-** ಭವಿಷ್ಯತ್ ಪರ್ವವೆಂಬ ಉಪಪುರಾಣವು ಹೀಗೆ ಹೇಳುವುದು-ಋಗಾದಿ ನಾಲ್ಕು ವೇದಗಳು, ಪಂಚರಾತ್ರ, ಮಹಾಭಾರತ, ಮೂಲರಾಮಾಯಣ ಮತ್ತು ಬ್ರಹ್ಮಸೂತ್ರ — ಇವುಗಳು ತಮ್ಮ ಪ್ರಾಮಾಣ್ಯ ಸಿದ್ಧಿಗಾಗಿ ಮತ್ತೊಂದನ್ನು ಅವಲಂಬಿಸದೆ ಸ್ವತಃ ಪ್ರಮಾಣಗಳಾಗಿವೆ. ಈ ಪ್ರಮಾಣಗಳಿಗೆ ವಿರುದ್ಧವಾಗಿಲ್ಲದುದೆಲ್ಲವೂ ಪ್ರಮಾಣವೇ. ಇವುಗಳಿಗೆ ವಿರುದ್ಧವಾದುದು ಮಾತ್ರ ಯಾವ ರೀತಿಯಿಂದಲೂ ಪ್ರಮಾಣವಾಗಲಾರದು.

**ವಿಶೇಷ ವಿಷಯ :-** ವೇದಗಳು ಮತ್ತು ವೇದಾನುಸಾರಿಯಾದ ಗ್ರಂಥಗಳು ಸ್ವತಃ ಪ್ರಮಾಣಗಳು ಎಂಬುದರ ಅಭಿಪ್ರಾಯ ಹೀಗೆ — ಯಾವುದೇ ಜ್ಞಾನವನ್ನು ಪ್ರಮಾಣವೆಂದು ಗ್ರಹಿಸುವುದು ಸಾಕ್ಷೀಂದ್ರಿಯವಾಗಿದೆ. ಆದರೆ ಜ್ಞಾನವು ದೋಷದಿಂದ ಹುಟ್ಟಿದ ಸಂದರ್ಭಗಳಲ್ಲಿ ಮಾತ್ರ ಸಾಕ್ಷಿಯು ಜ್ಞಾನವನ್ನು ಮಾತ್ರ ಗ್ರಹಿಸುವುದು ಹೊರತು ಅದರ ಪ್ರಾಮಾಣ್ಯವನ್ನು ಗ್ರಹಿಸ ಲಾರದು. ಹೀಗೆ ಜ್ಞಾನಗ್ರಾಹಕವಾದ ಪ್ರಮಾಣದಿಂದಲೇ ನಿಯಮೇನ ಜ್ಞಾನದ ಪ್ರಾಮಾಣ್ಯವೂ ಗ್ರಹಿಸಲ್ಪಡುವುದೇ ಪ್ರಾಮಾಣ್ಯದ ಸ್ವತಸ್ತ್ವವಾಗಿದೆ. ಲೋಕದ ಸಹಜ ನಡವಳಿಕೆಯಿಂದ ಜ್ಞಾನ ಪ್ರಾಮಾಣ್ಯಕ್ಕೆ ಇಂತಹ ಸ್ವತಸ್ತ್ವವನ್ನು

ಒಪ್ಪಬೇಕಾಗುವುದೆನ್ನುವುದನ್ನು ನಾವು ಗಮನಿಸಬೇಕು. ಪ್ರತಿಯೊಂದು ಜ್ಞಾನವನ್ನೂ ಪರೀಕ್ಷಿಸಿಯೇ ಪ್ರಮಾಣವೆಂದು ನಿರ್ಧರಿಸುತ್ತೇವೆನ್ನುವುದು ಅನುಭವ ವಿರುದ್ಧವಾದುದು. ಕುಂಬಾರನು ತಂದ ಹೊಸ ಮಡಿಕೆಗಳನ್ನು ಅಡಿಗೆ ಮಾಡಿ ಪರಿಕ್ಷಿಸುವವರೆಗೆ ಮಡಿಕೆಗಳೆಂದು ಒಪ್ಪಲು ಸಾಧ್ಯವಿಲ್ಲವೆಂದು ಯಾರೂ ಹೇಳಲಾರರಷ್ಟೆ. ಆದ್ದರಿಂದ ದೋಷದ ಪ್ರತಿರೋಧವಿಲ್ಲದಿದ್ದ ಸ್ಥಳದಲ್ಲೆಲ್ಲ ಸಾಕ್ಷಿಯೇ ಪ್ರಾಮಾಣ್ಯವನ್ನು ಗ್ರಹಿಸುವುದೆಂದು ಹೇಳಲೇಬೇಕು. ಪ್ರಕೃತ, ಅಪೌರುಷೇಯವಾದ ವೇದದ ವಿಷಯದಲ್ಲಿ ದೋಷವನ್ನು ಶಂಕಿಸಲೂ ಸಾಧ್ಯವಿಲ್ಲ. ಶಬ್ದದ ದೋಷಗಳೆಲ್ಲವೂ ಭ್ರಮ, ಪ್ರಮಾದ ಮೊದಲಾದ ವಕ್ತೃವಿನ ದೋಷದಿಂದ ಉಂಟಾಗತಕ್ಕವು. ವಕ್ತೃದೋಷದ ಪ್ರಸಕ್ತಿಯೇ ಇಲ್ಲದಿರುವಾಗಲೂ ಶಬ್ದದಲ್ಲಿ ದೋಷಗಳುಂಟಾಗಬಹುದಾದರೆ ಆಪ್ತವಾಕ್ಯದಲ್ಲೂ ದೋಷಶಂಕೆಯುಂಟಾದೀತು. ವಕ್ತೃದೋಷವಿಲ್ಲದ ಕಾರಣ ಆಪ್ತವಾಕ್ಯದಲ್ಲಿ ದೋಷಶಂಕೆಗೆ ಅವಕಾಶವಿಲ್ಲವೆನ್ನುವುದಾದರೆ ಅಪೌರುಷೇಯವಾದ, ಆದ್ದರಿಂದಲೇ ವಕ್ತೃದೋಷದ ಸಂಭಾವ್ಯತೆಯೇ ಇಲ್ಲದ ವೇದದ ವಿಷಯದಲ್ಲಿ ದೋಷದ ಸಂದೇಹ ಸುತರಾಂ ಇರಲಾರದು. ವೇದಾನುಕೂಲವಾದ ಪೌರಷೇಯ ಗ್ರಂಥಗಳಲ್ಲೂ, ಅವು ವೇದಾನುಕೂಲವಾಗಿವೆ ಎಂಬ ಕಾರಣದಿಂದಲೇ ದೋಷಶಂಕೆ ಬರಲಾರದು. ಹೀಗೆ ವೇದಗಳಲ್ಲಿ ಮತ್ತು ವೇದಾನುಕೂಲ ಗ್ರಂಥಗಳಲ್ಲಿ ಸ್ವತಃ ಪ್ರಾಮಾಣ್ಯವಿರುವುದರಿಂದ ಹಿಂದೆ ಉದಾಹರಿಸಿದ ಮತ್ತು ಮುಂದೆ ಉದಾಹರಿಸುವ ವೇದಾದಿ ಪ್ರಮಾಣವಾಕ್ಯಗಳಲ್ಲಿ ಅಪ್ರಾಮಾಣ್ಯಶಂಕೆಯನ್ನು ಮಾಡಲಾಗದು ಎಂಬುದೇ ಆಚಾರ್ಯರು ಮೇಲೆ ಉದಾಹರಿಸಿರುವ ಭವಿಷ್ಯತ್ಪರ್ವ ವಚನದ ಸಾರ.

ಯದ್ಯಪಿ ವೇದಾದಿಗಳಿಗಿರುವಂತೆ ಪ್ರತ್ಯಕ್ಷಕ್ಕೂ ಸ್ವತಃ ಪ್ರಾಮಾಣ್ಯವಿದೆ. ಆದ್ದರಿಂದ ಪ್ರತ್ಯಕ್ಷವೂ ಸ್ವತಃ ಪ್ರಮಾಣವೆಂದು ಆಚಾರ್ಯರು ಉದಾಹರಿಸಿರುವ ಈ ಮೇಲಿನ ಸ್ಮೃತಿವಾಕ್ಯದಲ್ಲಿ ಹೇಳಬೇಕಾಗಿತ್ತು. ಆದರೆ, ಅತಿದೂರತ್ವ, ಅತಿಸಾಮೀಪ್ಯ, ಮೊದಲಾದ ದೋಷಗಳಿಲ್ಲದಿದ್ದಲ್ಲಿ ಪ್ರತ್ಯಕ್ಷವೂ ತನ್ನ ವಿಷಯದಲ್ಲಿ ಪ್ರಮಾಣವೇ ಎಂಬುದನ್ನು ಹೊಸದಾದ ಮಣ್ಣು, ಚಕ್ರ, ದಂಡ ಮೊದಲಾದ ಸಾಧನಗಳನ್ನುಪಯೋಗಿಸಿ ಜಗತ್ತಿಗೆಲ್ಲ ಮಡಿಕೆಗಳನ್ನು ತಯಾರಿಸಿ ಕೊಡುವ ಕುಂಬಾರನೂ ಸಾಧಿಸಬಲ್ಲ. ಇಂತಹ ವಿಷಯದಲ್ಲಿ ನಾನೇಕೆ ಪ್ರಯತ್ನಿಸಲಿ ಎಂದು ಸ್ಮೃತಿ ಉಪೇಕ್ಷಿಸಿದೆಯೆಂದು ಶ್ರೀ ವಾದಿರಾಜರು ಸ್ವಾರಸ್ಯವಾಗಿ ನಿರೂಪಿಸಿದ್ದಾರೆ. ॥ ೩೦, ೩೧ ॥

ವೇದಾನುಕೂಲಗಳಾದ ಮಹಾಭಾರತ ಮೊದಲಾದ ಪೌರುಷೇಯ ಗ್ರಂಥಗಳನ್ನು ಸಂಗ್ರಹಿಸಿರುವ ಈ ಸ್ಮೃತಿವಚನವು ವೈಷ್ಣವ ಪುರಾಣಗಳನ್ನೂ ವೈಷ್ಣವ ಸ್ಮೃತಿಗಳನ್ನೂ ಸಂಗ್ರಹಿಸಿಲ್ಲವೇಕೆ ಎಂಬ ಪ್ರಶ್ನೆಯನ್ನು ಮುಂದಿನ ಶ್ಲೋಕದಲ್ಲಿ ಪರಿಹರಿಸಲಾಗಿದೆ —

**ವೈಷ್ಣವಾನಿ ಪುರಾಣಾನಿ ಪಂಚರಾತ್ರಾತ್ಮಕತ್ವತಃ ।**
**ಪ್ರಮಾಣಾನ್ಯೇವ ಮನ್ವಾದ್ಯಾಃ ಸ್ಮೃತಯೋऽಪ್ಯನುಕೂಲತಃ ॥ ೩೨ ॥**
**ಏತೇಷು ವಿಷ್ಣೋರಾಧಿಕ್ಯಮುಚ್ಯತೇऽನ್ಯಸ್ಯ ನ ಕ್ವಚಿತ್ ।**
**ಅತಸ್ತದೇವ ಮಂತವ್ಯಂ ನಾನ್ಯಥಾ ತು ಕಥಂಚನ ॥ ೩೩ ॥**

**ಅರ್ಥ :-** **ವೈಷ್ಣವಾನಿ ಪುರಾಣಾನಿ** ವೈಷ್ಣವ ಪುರಾಣಗಳು **ಪಂಚರಾತ್ರಾತ್ಮಕತ್ವತಃ** ಪಂಚರಾತ್ರದಲ್ಲಿ ಪ್ರತಿಪಾದಿಸಿರುವ ವಿಷಯವನ್ನೇ ಪ್ರತಿಪಾದಿಸುವುದರಿಂದ **ಪ್ರಮಾಣಾನ್ಯೇವ** ಪ್ರಮಾಣಗಳೇ ಆಗಿವೆ **ಮನ್ವಾದ್ಯಾಃ ಸ್ಮೃತಯಃ ಅಪಿ** ಮನು ಸ್ಮೃತಿಯೇ ಮೊದಲಾದ ಸ್ಮೃತಿಗಳೂ ಕೂಡ **ಅನುಕೂಲತಃ** ವೇದಾದ್ಯನುಕೂಲವಾಗಿರುವ ಕಾರಣದಿಂದಲೇ **ಪ್ರಮಾಣಾನಿ** ಪ್ರಮಾಣಗಳಾಗಿವೆ **ಏತೇಷು** ಗ್ರಂಥಗಳಲ್ಲಿ **ವಿಷ್ಣೋಃ ಆಧಿಕ್ಯಮುಚ್ಯತೇ** ವಿಷ್ಣುವಿಗೇ ಸರ್ವೋತ್ತಮತ್ವವನ್ನು ಹೇಳಿದೆ **ಕ್ವಚಿತ್ ಅನ್ಯಸ್ಯ ನ** ಎಲ್ಲೂ ಬೇರೆಯವರಿಗೆ ಉತ್ತಮತ್ವವನ್ನು ಹೇಳಿಲ್ಲ **ಅತಃ ತದೇವ ಮಂತವ್ಯಂ** ಆದ್ದರಿಂದ ವಿಷ್ಣುವಿಗೇ ಶ್ರೇಷ್ಠತೆಯೆಂದು ತಿಳಿಯಬೇಕು **ಅನ್ಯಥಾ ತು ನ ಕಥಂಚನ** ಬೇರೆ ರೀತಿಯಾಗಿ ಸರ್ವಥಾ ತಿಳಿಯತಕ್ಕುದಲ್ಲ.

**ತಾತ್ಪರ್ಯ :-** ಪಂಚರಾತ್ರದಲ್ಲಿ ಹೇಳಿರುವ ವಿಷ್ಣುಸರ್ವೋತ್ತಮತ್ವಾದಿಗಳನ್ನೇ ವೈಷ್ಣವ ಪುರಾಣಗಳಲ್ಲೂ ಹೇಳಿರುವುದರಿಂದ ಅವುಗಳೂ ಪ್ರಮಾಣಗಳೇ ಆಗಿವೆ. ವೇದಾನುಕೂಲವಾಗಿರುವುದರಿಂದಲೇ ಮನ್ವಾದಿ ಸ್ಮೃತಿಗಳೂ ಪ್ರಮಾಣವಾಗಿವೆ. ಹೀಗೆ ವೈಷ್ಣವ ಪುರಾಣಗಳೂ, ಸ್ಮೃತಿಗಳೂ ಪ್ರಮಾಣಗಳೆಂದು ಸಿದ್ಧವಾಗಿರುವ ಕಾರಣ ಪ್ರತ್ಯೇಕವಾಗಿ ಅವುಗಳನ್ನು ಸಂಗ್ರಹಿಸಿಲ್ಲ.

ಈ ಎಲ್ಲ ಪ್ರಮಾಣ ಗ್ರಂಥಗಳಲ್ಲೂ ವಿಷ್ಣುವಿಗೇ ಸರ್ವೋತ್ತಮತ್ವವನ್ನು ಹೇಳಿದೆ ಹೊರತು ಇತರರಿಗೆ ಸರ್ವಥಾ ಹೇಳಿಲ್ಲ. ಆದ್ದರಿಂದ ವಿಷ್ಣುವೇ ಸರ್ವೋತ್ತಮನೆಂದು ತಿಳಿಯಬೇಕು. ಶೈವಾದ್ಯಾಗಮಗಳಲ್ಲಿ ಹೇಳಿರುವಂತೆ ಶಿವಾದಿಗಳು ಸರ್ವೋತ್ತಮರೆಂದು ಎಂದೂ ತಿಳಿಯಬಾರದು.

**ವಿಶೇಷ ವಿಷಯ** :- ಪಂಚರಾತ್ರಾದಿ ಗ್ರಂಥಗಳೊಂದಿಗೆ ಪುರಾಣಗಳನ್ನೂ ಸ್ಮೃತಿಗಳನ್ನೂ ಸೇರಿಸದಿರಲು ಅವುಗಳೆಲ್ಲವೂ ಎಲ್ಲ ವಿಷಯಗಳಲ್ಲೂ ಪ್ರಮಾಣ ಗಳೇ ಆಗಿರುತ್ತದೆ ಎಂಬ ನಿಯಮವಿಲ್ಲದಿರುವುದು ಕಾರಣವಾಗಿದೆ.

ಪಂಚರಾತ್ರಾತ್ಮಕವೆಂದರೆ 'ಪಂಚರಾತ್ರಸ್ವರೂಪವಾಗಿರುವ' ಎಂದರ್ಥ. ವಿಷ್ಣುಸರ್ವೋತ್ತಮತ್ವ ಮೊದಲಾದ ಪ್ರತಿಪಾದ್ಯ ವಿಷಯದಲ್ಲಿ ವೈಷ್ಣವ ಪುರಾಣಾದಿಗಳಿಗೂ ಪಂಚರಾತ್ರಾಗಮಕ್ಕೂ ಏಕತೆ ಇರುವ ಕಾರಣ ಅವೆರಡನ್ನು ಶಬ್ದದಿಂದಲೂ ಒಂದೇ ಎಂದು ವ್ಯವಹರಿಸಲಾಗಿದೆ.

ಪಂಚರಾತ್ರ ಶಬ್ದದಿಂದಲೆ ವೈಷ್ಣವ ಪುರಾಣಗಳನ್ನೂ ವೈಷ್ಣವ ಸ್ಮೃತಿಗಳನ್ನೂ ಸಂಗ್ರಹಿಸಿರುವ ಕಾರಣ ಪುನಃ 'ಅವಿರುದ್ಧಂ ತು ಯತ್ತ್ವಸ್ಯ' ಎಂಬುದರಿಂದ ಸಂಗ್ರಹಿಸುವುದೇನು ಎಂದು ಶಂಕಿಸಬಹುದು. ಆದರೆ, ಅವೈಷ್ಣವ ಪುರಾಣಾದಿ ಗಳಲ್ಲೂ ವೇದಾನುಕೂಲವಾದ ಕೆಲವು ವಾಕ್ಯಗಳು ಬರುವು ದುಂಟು. ಅವುಗಳನ್ನು ಸಂಗ್ರಹಿಸಲು, ಅಂತೆಯೇ ವೇದಾನುಕೂಲವಾದ, ಶಿಷ್ಟರು ರಚಿಸಿರುವ ವೇದಭ್ಯಾಷ್ಯ, ಅನುವ್ಯಾಖ್ಯಾನಾದಿಗಳನ್ನು ಸಂಗ್ರಹಿಸಲು 'ಅವಿರುದ್ಧಂ ತು ಯತ್ತ್ವಸ್ಯ' ಎಂಬುದು ಆವಶ್ಯಕವಾಗಿದೆ. ॥ ೩೨,೩೩ ॥

ಪಾಶುಪತಾದ್ಯಾಗಮಗಳು ಸಂಪೂರ್ಣವಾಗಿ ಗ್ರಾಹ್ಯವಾಗದಿರಲು ಕಾರಣ ವನ್ನು ಈ ಮುಂದಿನ ಶ್ಲೋಕಗಳಲ್ಲಿ ಹೇಳಲಾಗಿದೆ.

**ಮೋಹಾರ್ಥಾನ್ಯನ್ಯಶಾಸ್ತ್ರಾಣಿ ಕೃತಾನ್ಯೇವಾಜ್ಞಯಾ ಹರೇಃ ।**
**ಅತಸ್ತೇಷೂಕ್ತಮಗ್ರಾಹ್ಯಮಸುರಾಣಾಂ ತಮೋಗತೇಃ ॥ ೩೪ ॥**

**ಯಸ್ಮಾತ್ ಕೃತಾನಿ ತಾನೀಹ ವಿಷ್ಣುನೋಕ್ತೈಃ ಶಿವಾದಿಭಿಃ ।**
**ಏಷಾಂ ಯನ್ನ ವಿರೋಧಿ ಸ್ಯಾತ್ ತತ್ರೋಕ್ತಂ ತನ್ನ ವಾರ್ಯತೇ ॥ ೩೫ ॥**

**ಅರ್ಥ** :- **ಅಸುರಾಣಾಂ ತಮೋಗತೇಃ** ಅಸುರರಿಗೆ ತಮಸ್ಸಿನ ಪ್ರಾಪ್ತಿ ಯಾಗುವುದಕ್ಕೋಸ್ಕರ **ಹರೇಃ ಆಜ್ಞಯಾ ಏವ** ಶ್ರೀಹರಿಯ ಆಜ್ಞೆಯಿಂದಲೇ **ಮೋಹಾರ್ಥಾನಿ ಅನ್ಯಶಾಸ್ತ್ರಾಣಿ** ಅಸುರರಿಗೆ ಮೋಹವನ್ನುಂಟುಮಾಡುವ ಉದ್ದೇಶವುಳ್ಳ ಪಾಶುಪತಾದಿ ಇತರ ಶಾಸ್ತ್ರಗಳು **ಕೃತಾನಿ** ರಚಿಸಲ್ಪಟ್ಟಿವೆ.

**ಯಸ್ಮಾತ್** ಯಾವ ಕಾರಣದಿಂದ **ತಾನಿ** ಆ ಇತರ ಶಾಸ್ತ್ರಗಳು **ಇಹ** ಈ ಭೂಲೋಕದಲ್ಲಿ **ವಿಷ್ಣು ನಾ ಉಕ್ತೈಃ ಶಿವಾದಿಭಿಃ** ವಿಷ್ಣುವಿನಿಂದ ಆದೇಶಿಸಲ್ಪಟ್ಟ ರುದ್ರಾದಿಗಳಿಂದ **ಕೃತಾನಿ** ರಚಿತವಾಗಿವೆಯೋ ಆ ಕಾರಣದಿಂದ **ತತ್ರ ಉಕ್ತಂ ಯತ್** ಅವುಗಳಲ್ಲಿ ಹೇಳಿರುವ ಯಾವ ವಿಷಯವು **ಏಷಾಂ** ಈ ವೇದಾದಿಗಳಿಗೆ **ನ ವಿರೋಧಿ** ವಿರೋಧಿಯಾಗಿಲ್ಲವೋ **ತತ್** ಆ ವಿಷಯವು **ನ ವಾರ್ಯತೇ** ನಿಷೇಧಿಸಲ್ಪಡುವುದಿಲ್ಲ.

**ತಾತ್ಪರ್ಯ :-** ಪಾಶುಪತಾದಿ ಶಾಸ್ತ್ರಗಳ ರಚನೆಯ ಉದ್ದೇಶ ಅಯೋಗ್ಯ ಜೀವರಿಗೆ ಭ್ರಾಂತಿಯನ್ನುಂಟುಮಾಡುವುದು. ಅಸುರರಿಗೆ ಭ್ರಾಂತಿಯಿಂದಾಗಿ ತಮಃ ಪ್ರಾಪ್ತಿಯಾಗಲೆಂದೇ ಭಗವಂತನ ಆದೇಶದಂತೆ ಶಿವಾದಿಗಳು ಆ ಶಾಸ್ತ್ರಗಳನ್ನು ರಚಿಸಿರುವರು. ಆದ್ದರಿಂದ ಆ ಶಾಸ್ತ್ರಗಳಲ್ಲಿ ಹೇಳಿರುವ ವಿಷಯ ಗಳು ಸಜ್ಜನರಿಗೆ ಗ್ರಾಹ್ಯವಲ್ಲ. ಆದರೆ ಪಾಶುಪತಾದಿ ಶಾಸ್ತ್ರಗಳಲ್ಲಿ ಹೇಳಿದ್ದೆಲ್ಲವೂ ಅಗ್ರಾಹ್ಯವೆಂದೇನಿಲ್ಲ. ಭಗವಂತನ ಆಜ್ಞೆಯಂತೆ ಈ ಲೋಕದಲ್ಲಿ ಶಿವಾದಿಗಳು ರಚಿಸಿರುವ ಆ ಶಾಸ್ತ್ರಗಳಲ್ಲಿ ವೇದಾದಿಗಳಿಗೆ ಅವಿರುದ್ಧವಾದ ವಿಷಯ ವೇನಿದೆಯೋ ಅದು ಗ್ರಾಹ್ಯವೇ ಆಗಿದೆ. ॥ ೩೪, ೩೫ ॥

ವಿಷ್ಣು ಸರ್ವೋತ್ತಮತ್ವಕ್ಕೆ ವಿರೋಧಿಯಂತೆ ತೋರುವ ಕೆಲವು ವೇದವಾಕ್ಯ ಗಳಿಗೆ ಸಮುಚಿತವಾದ ವ್ಯಾಖ್ಯಾನವನ್ನು ಮಾಡಬೇಕೆಂದು ಈ ಶ್ಲೋಕದಲ್ಲಿ ಹೇಳಿದೆ —

**ವಿಷ್ಣ್ವಾಧಿಕ್ಯವಿರೋಧೀನಿ ಯಾನಿ ವೇದವಚಾಂಸ್ಯಪಿ ।**
**ತಾನಿ ಯೋಜ್ಯಾನ್ಯಾನುಕೂಲ್ಯಾದ್ವಿಷ್ಣ್ವಾಧಿಕ್ಯಸ್ಯ ಸರ್ವಶಃ ॥ ೩೬ ॥**

**ಅರ್ಥ :- ಯಾನಿ ವೇದವಚಾಂಸಿ** ಯಾವ ವೇದವಾಕ್ಯಗಳು **ವಿಷ್ಣ್ವಾಧಿಕ್ಯವಿರೋಧೀನಿ** ವಿಷ್ಣುಸರ್ವೋತ್ತಮತ್ವಕ್ಕೆ ವಿರೋಧಿಗಳಾಗಿವೆಯೋ **ತಾನಿ ಅಪಿ** ಅವುಗಳನ್ನೂ **ಸರ್ವಶಃ** ಸರ್ವಪ್ರಕಾರದಿಂದ **ವಿಷ್ಣ್ವಾಧಿಕ್ಯಸ್ಯ ಆನುಕೂಲ್ಯಾತ್** ವಿಷ್ಣುಸರ್ವೋತ್ತಮತ್ವಕ್ಕೆ ಅನುಕೂಲವಾಗುವಂತೆ **ಯೋಜ್ಯಾನಿ** ಯೋಜಿಸತಕ್ಕದ್ದು.

**ತಾತ್ಪರ್ಯ** - ಸ್ಪಷ್ಟ.

**ವಿಶೇಷ ವಿಷಯ** :- ವಿಷ್ಣುವಿನ ಆಧಿಕ್ಯಕ್ಕೆ ವಿರೋಧಿಯೆಂದು ಭಾಸವಾಗುವ ವೇದವಾಕ್ಯಗಳಲ್ಲಿ 'ಜನಿತೋತ ವಿಷ್ಣೋಃ' ಎಂಬುದೂ ಒಂದು. ಪೂರ್ಣಮಂತ್ರ ಹೀಗಿದೆ— ''ಸೋಮಃ ಪವತೇ ಜನಿತಾ ಮತೀನಾಂ ಜನಿತಾ ದಿವೋ ಜನಿತಾ ಪೃಥಿವ್ಯಾಃ । ಜನಿತಾಽಗ್ನೇರ್ಜನಿತಾ ಸೂರ್ಯಸ್ಯ ಜನಿತೇಂದ್ರಸ್ಯ ಜನಿತೋತ ವಿಷ್ಣೋಃ'' ॥ ಈ ಮಂತ್ರ ಭಗವಂತನ ಜನನವನ್ನು ಹೇಳುವಂತೆ ತೋರಿದರೂ ವಿಮರ್ಶಿಸಿದಲ್ಲಿ ಈ ಮಂತ್ರಕ್ಕೆ ಆ ತಾತ್ಪರ್ಯವಿಲ್ಲವೆಂದು ಸ್ಪಷ್ಟವಾಗುವುದೆಂದು ಶ್ರೀವಾದಿರಾಜರು ಹೃದಯಂಗಮವಾಗಿ ಪ್ರತಿಪಾದಿಸಿದ್ದಾರೆ. ಈ ಮಂತ್ರದ ಹಿಂದಿನ ಮಂತ್ರದಲ್ಲಿ 'ತದಹಂ ವಚ್ಮಿ ಪವಮಾನ ಸೋಮ' ಎಂದು ಬಂದಿದೆ. ಆ ಮಂತ್ರದಲ್ಲಿ ಪವಮಾನ ಅಂದರೆ ಮುಖ್ಯಪ್ರಾಣನನ್ನು ಸೋಮ ಎಂದು ಕರೆದಿರುವುದು ಸ್ಪಷ್ಟ ಆದ್ದರಿಂದ ಅದರ ಮುಂದಿನ ಮಂತ್ರವಾದ 'ಸೋಮಃ ಪವತೇ' ಇತ್ಯಾದಿ ಪ್ರಕೃತ ಮಂತ್ರದಲ್ಲೂ ಸೋಮನೆಂದರೆ ಪವಮಾನ ಎಂದೊಪ್ಪುವುದು ಯುಕ್ತ. ಅಲ್ಲದೆ ಈ ಮಂತ್ರದಲ್ಲೂ 'ಸೋಮಃ ಪವತೇ' ಎಂಬುದಾಗಿ ಪವನ ಎಂದರೆ ಬೀಸುವಿಕೆ ಅಥವಾ ವೇಗವಾಗಿ ಚಲಿಸುವಿಕೆಯೆಂಬ ವಾಯುವಿನ ಧರ್ಮವನ್ನೇ ಸೋಮನಿಗೆ ಹೇಳಿದೆ. ಆದ್ದರಿಂದಲೂ ಈ ಮಂತ್ರದಲ್ಲಿ ಬರುವ ಸೋಮನೆಂದರೆ ಮುಖ್ಯಪ್ರಾಣನೆಂದೇ ಅರ್ಥಮಾಡಬೇಕಾಗುವುದು. ಹೀಗೆ ಈ ಮಂತ್ರವು ಮುಖ್ಯಪ್ರಾಣನನ್ನು ವಿಷ್ಣುವಿನ ಜನಕನೆಂದು ಹೇಳುತ್ತಿದೆ ಎನ್ನಬೇಕಾಗುವುದು. ಆದರೆ ಮುಖ್ಯಪ್ರಾಣನು ವಿಷ್ಣುವಿನ ಜನಕನೆನ್ನುವುದು ಶೈವರಿಗೂ ಸಮ್ಮತವಲ್ಲ, ವಿಷ್ಣು ಸರ್ವೋತ್ತಮತ್ವವಾದಿಗಳಾದ ನಮಗೂ ಸಮ್ಮತವಲ್ಲ. ಆದ್ದರಿಂದ ಶೈವರು ಈ ವೇದಮಂತ್ರ ವಿಷ್ಣುವಿಗೆ ಜನನವನ್ನು ಹೇಳುವ ಮಂತ್ರವೆಂದು ಹರ್ಷಿಸಲು ಸಾಧ್ಯವಿಲ್ಲ.

ಈ ಮಂತ್ರದ ಸರಿಯಾದ ವ್ಯಾಖ್ಯಾನ ಹೀಗಿದೆ — 'ಸೋಮಃ ಜನಿತಾ ದಿವೋ ಜನಿತಾ ಪೃಥಿವ್ಯಾಃ' ಎಂಬಲ್ಲಿ ದ್ಯುಪದವು ಅಂತರಿಕ್ಷ, ಸ್ವರ್ಗ ಮೊದಲಾದ ಮೇಲಿನ ಲೋಕಗಳನ್ನು ಹೇಳುವುದು. ಪೃಥಿವೀಪದವು ಪೃಥಿವ್ಯಾದಿ ಕೆಳಗಿನ ಏಳು ಲೋಕಗಳನ್ನು ಹೇಳುವುದು, ಮಹತ್ತತ್ತ್ವಾಭಿಮಾನಿಯಾದ ಸೋಮನು ಅಂದರೆ ಮುಖ್ಯ ಪ್ರಾಣನು ಈ ಲೋಕಗಳಿಗೆ ಜನಿತಾ ಅಂದರೆ ಸೃಷ್ಟಿಕರ್ತನಾಗಿದ್ದಾನೆ. ಈ ಮಂತ್ರ ಹೇಳುವ ಈ ವಿಷಯವನ್ನೇ ಶ್ರೀ ತ್ರಿವಿಕ್ರಮಪಂಡಿತಾಚಾರ್ಯರು ವಾಯುಸ್ತುತಿಯ 'ಸಾಭ್ರೋಷ್ಣಾಭೀಶು

ಶುಭ್ರಪ್ರಭಮಭಯನಭೋ' ಇತ್ಯಾದಿ ಶ್ಲೋಕದಲ್ಲಿ ಸಮಸ್ತ ಲೋಕಗಳ ಉತ್ಪತ್ತಿ ಸ್ಥಿತಿಲಯಗಳು ವಾಯುದೇವರ ಕೇವಲ ಭ್ರೂವಿಲಾಸದಿಂದಲೇ ಆಗುವವೆಂದು ಬಣ್ಣಿಸಿದ್ದಾರೆ.

'ಜನಿತಾ ಅಗ್ನೇಃ ಜನಿತಾ ಸೂರ್ಯಸ್ಯ ಜನಿತಾ ಇಂದ್ರಸ್ಯ' ಎಂದು ಈ ಮಂತ್ರವು ಮುಖ್ಯಪ್ರಾಣನು ಎಲ್ಲ ಲೋಕಗಳಲ್ಲೂ ಆಹಾರಪದಾರ್ಥಗಳ ಪಾಕ ಕ್ರಿಯೆಗೆ ಮುಖ್ಯ ಕರ್ತೃವಾದ ಅಗ್ನಿಯ ಜನಕನೆಂದೂ, ಸಕಲಲೋಕ ಪ್ರಕಾಶನನಾದ ಸೂರ್ಯನ ಜನಕನೆಂದೂ, ಅಂತೆಯೇ ಕಾಲಕಾಲಕ್ಕೆ ಮಳೆಯನ್ನು ಸುರಿಸಿ ಲೋಕದ ಧನ - ಧಾನ್ಯ ಸಮೃದ್ಧಿಗೆ ಕಾರಣನಾದ ಇಂದ್ರನಿಗೂ ಜನಕನೆಂದು ಹೇಳುತ್ತಿದೆ. 'ಸೋಮಃ ಪವತೇ ಜನಿತಾ ಮತೀನಾಂ' ಎಂಬಲ್ಲಿ — ಸೋಮ ಪದವಾಚ್ಯನಾದ ಮುಖ್ಯಪ್ರಾಣನು 'ತೃತೀಯಮಸ್ಯ ವೃಷಭಸ್ಯ ದೋಹಸೇ ದಶಪ್ರಮತಿಂ ಜನಯಂತ ಯೋಷಣಃ' ಎಂದು ಬಳಿತ್ಥಾ ಸೂಕ್ತದಲ್ಲಿ ಹೇಳದಿಂತೆ ಮಧ್ವನಾಮಕವಾದ ಮೂರನೇ ಅವತಾರವನ್ನೆತ್ತಿ ಸಜ್ಜನರಿಗೆ ತಮ್ಮ ಪ್ರವಚನದಿಂದ ಭಗವಂತನ ಸರ್ವಜ್ಞತ್ವ, ಆಸೇತುಹಿಮಾಚಲ ಗ್ರಾಮಗ್ರಾಮಗಳನ್ನು ಪವಿತ್ರೀಕರಿಸುತ್ತ ಸಂಚರಿಸುತ್ತಿದ್ದಾನೆಂದು ಹೇಳಿದೆ. ವಾಯುದೇವರ ಈ ಮಹಾಮಹಿಮೆಯನ್ನೇ ಶ್ರೀ ತ್ರಿವಿಕ್ರಮ ಪಂಡಿತಾಚಾರ್ಯರು 'ಆಯಮಿಹ ಸುಮತಿಂ ವಾಯುದೇವೋ ವಿದಧ್ಯಾತ್ ಅಧ್ಯಾತ್ಮ ಜ್ಞಾನನೇತಾ ಯತಿವರಮಹಿತೋ ಭೂಮಿಭೂಷಾಮಣಿರ್ಮೇ' ಎಂದು ವಾಯುಸ್ತುತಿಯಲ್ಲಿ ಕೊಂಡಾಡಿದ್ದಾರೆ.

ಇನ್ನೊಂದು ವಿಧವಾಗಿಯೂ ಶ್ರೀ ವಾದಿರಾಜರು ಈ ಮಂತ್ರದ ವ್ಯಾಖ್ಯಾನವನ್ನು ಮಾಡಿದ್ದಾರೆ. 'ಸೋಮಃ ಮತೀನಾಂ ಜನಿತಾ' ಎಂದರೆ ಮೂಲರೂಪದಲ್ಲಿ ಸೋಮಪದವಾಚ್ಯರಾದ ವಾಯುವಿನ ಮೂರನೆ ಅವತಾರರಾದ ಮಧ್ವರು ತಮ್ಮ ಬ್ರಹ್ಮಸೂತ್ರ ವ್ಯಾಖ್ಯಾನಾದಿಗಳಿಂದ ಸಜ್ಜನರಿಗೆ 'ಶ್ರೀಹರಿಯು ಸರ್ವೋತ್ತಮನು, ಸರ್ವಗುಣಪೂರ್ಣನು, ದಿವ್ಯಮಂಗಳ ವಿಗ್ರಹನೂ ಆಗಿದ್ದಾನೆ' ಎಂಬ ಶುಭಮತಿಯನ್ನು ಉಂಟುಮಾಡಿದ್ದಾರೆ. ಇಡೀ ಜಗತ್ತೇ ಮಿಥ್ಯೆಯೆಂದು ಹೇಳುವ ಇತರರ ವಾದವನ್ನು ನಿರಾಕರಿಸಿ ಸಮಸ್ತ ಲೋಕಗಳೂ ಪಾರಮಾರ್ಥಿಕ ಸತ್ಯವೆಂದು ಸಮರ್ಥಿಸುವ ಮೂಲಕ ದ್ಯು, ಪ್ರಥಿವೀ ಮೊದಲಾದ ಎಲ್ಲ ಲೋಕಗಳಿಗೆ ಜನಕರಾಗಿದ್ದಾರೆ. ಮೊದಲು ಇಲ್ಲದ್ದು

ಅನಂತರ ಅಸ್ತಿತ್ವವನ್ನು ಪಡೆಯುವುದೇ ಜನನ. ಜಗನ್ಮಿಥ್ಯಾತ್ವವನ್ನು ಖಂಡಿಸಿ, ಸತ್ಯತ್ವವನ್ನು ಸಮರ್ಥಿಸುವ ಮೂಲಕ ಅಂತಹ ಉತ್ಪತ್ತಿಯನ್ನೇ ಲೋಕಗಳಿಗೆ ಉಂಟುಮಾಡಿದ್ದಾರೆ ಎಂದು 'ಜನಿತಾ ದಿವೋ ಜನಿತಾ ಪೃಥಿವ್ಯಾಃ' ಎಂಬ ಮಂತ್ರಭಾಗದ ಅಭಿಪ್ರಾಯ. ಹಾಗೆಯೇ ಶ್ರೀಮಧ್ವರು 'ಶುದ್ಧ ಚೇತನವೊಂದೇ ಸತ್ಯ, ದೇಹೇಂದ್ರಿಯಾದಿವಿಶಿಷ್ಟವಾದ ಅಗ್ನಿ ಸೂರ್ಯ, ಇಂದ್ರ, ವಿಷ್ಣು ಮೊದಲಾದ ಚೇತನ ಮಿಥ್ಯೆ' ಎಂದು ಹೇಳುವ ಪರಮತವನ್ನು ಖಂಡಿಸಿ ಅಗ್ನ್ಯಾದಿ ದೇವತೆಗಳಿಗೆ ಹಾಗೂ ಭಗವಂತನ ದೇಹೇಂದ್ರಿಯಾದಿಗಳಿಗೆ ಅಸ್ತಿತ್ವವನ್ನು ತಂದು ಕೊಡುವ ಮೂಲಕ ಆ ದೇವತೆಗಳಿಗೆ ಮತ್ತು ಭಗವಂತನಿಗೆ ದೇಹಸಂಬಂಧರೂಪವಾದ ಉತ್ಪತ್ತಿಯನ್ನೂ ಕೊಟ್ಟಿದ್ದಾರೆ. ಅಥವಾ ಈ ದೇವತೆಗಳಾಗಲೀ, ಸರ್ವೋತ್ತಮನಾದ ಭಗವಂತನಾಗಲೀ, ಅವರ ದೇಹೇಂದ್ರಿ ಯಾದಿಗಳಾಗಲೀ ಸರ್ವಥಾ ಇಲ್ಲ ಎಂಬ ಭಯವನ್ನು ಪರಿಹರಿಸುವ ಮೂಲಕವೂ ಸತ್ಸಿದ್ಧಾಂತಪ್ರತಿಷ್ಠಾಪಕರಾದ ಶ್ರೀಮಧ್ವರು ಅಗ್ನ್ಯಾದಿಗಳಿಗೂ, ಭಗವಂತನಿಗೂ ಜನಕರಾಗಿದ್ದಾರೆ. ದೇಹವನ್ನು ಕೊಡುವವರೂ ಉಪನಯನ ಸಂಸ್ಕಾರವನ್ನು ಮಾಡುವವರು, ವಿದ್ಯಾದಾನ ಮಾಡುವವರು, ಅನ್ನ ದಾತೃಗಳು, ಭಯಪರಿಹಾರಕರು — ಈ ಐವರು ಜನಕರೆಂದೆನಿಸುವರು ಎಂದು ಹೇಳುವ 'ಜನಿತಾ ಚೋಪನೀತಾ ಚ ಯಶ್ಚ ವಿದ್ಯಾಂ ಪ್ರಯಚ್ಛತಿ । ಅನ್ನದಾತಾ ಭಯ ತ್ರಾತಾ ಪಂಚೈತೇ ಪಿತರಃ ಸ್ಮೃತಾಃ' ಎಂಬ ವಚನದ ಪ್ರಕಾರ ಶ್ರೀಮಧ್ವರೂ ಅಗ್ನ್ಯಾದಿದೇವತೆಗಳಿಗೂ ಭಗವಂತನಿಗೂ ಜನಕರಾಗುವರು. ಇದನ್ನೇ 'ಜನಿತಾऽಗ್ನೇಃ ಜನಿತಾ ಸೂರ್ಯಸ್ಯ ಜನಿತೇಂದ್ರಸ್ಯ ಜನಿತೋತ ವಿಷ್ಣೋಃ' ಎಂದು ವೇದಮಂತ್ರ ಹೇಳುತ್ತಿದೆ.

ಅದೇ ರೀತಿ, ಭಗವದ್ಗೀತೆಯಲ್ಲಿ 'ಅಸತ್ಯಮಪ್ರತಿಷ್ಠಂ ತೇ ಜಗದಾಹುರ ನೀಶ್ವರಮ್' - ಕೆಲವರು ಜಗತ್ತು ಅಸತ್ಯವೆಂದೂ, ಈಶ್ವರರಹಿತವೆಂದೂ ಹೇಳುವರೆಂದು ಹೇಳಿ ಅಂತಹವರನ್ನು ಜಗತ್ತಿನ ನಾಶಮಾಡತಕ್ಕವರೆಂದು 'ಏತಾಂ ದೃಷ್ಟಿಮವಷ್ಟಭ್ಯ ನಷ್ಟಾತ್ಮಾನೋऽಲ್ಪ ಬುದ್ಧಯಃ। ಪ್ರಭವಂತ್ಯುಗ್ರ ಕರ್ಮಾಣಃ ಕ್ಷಯಾಯ ಜಗತೋऽ ಹಿತಾಃ' ಎಂಬ ಶ್ಲೋಕದಲ್ಲಿ ಹೇಳಿದೆ. ಜಗತ್ತನ್ನು ಅಸತ್ಯವೆಂದು ಪ್ರತಿಪಾದಿಸುವವರು ಜಗತ್-ಕ್ಷಯವನ್ನು ಮಾಡತಕ್ಕವ ರೆಂದಾದರೆ ಜಗತ್ತನ್ನು ಸತ್ಯವೆಂದು ಪ್ರತಿ ಪಾದಿಸುವ ಶ್ರೀಮಧ್ವರು ನಷ್ಟವಾದ ಜಗತ್ತಿಗೆ ಪುನರ್ಜನ್ಮವನ್ನು ಕೊಟ್ಟವರೆಂದು ಹೇಳಬೇಕಷ್ಟೆ ಈ ಕಾರಣದಿಂದಲೂ

ಶ್ರೀಮಧ್ವರು ಸಕಲ ಲೋಕಗಳಿಗೆ, ಅಗ್ನ್ಯಾದಿ ದೇವತೆಗಳಿಗೆ, ಭಗವಂತನಿಗೆ ಜನಕರಾಗಿದ್ದಾರೆಂದು ಹೇಳ ಬಹುದೆಂದು ಪ್ರಕೃತಶ್ರುತಿ ಹೇಳುತ್ತಿದೆಯೆಂದೂ ವ್ಯಾಖ್ಯಾನಿಸಬಹುದು.

ಹಾಗೆಯೇ 'ಯಸ್ತಾ ವಿಜಾನಾತ್ ಸ ಪಿತುಃ ಪಿತಾಸತ್' ಎಂಬ ಶ್ರುತಿಯಲ್ಲಿ ಭಗವಂತನ ಮಹಿಮೆಯನ್ನು ಯಥಾರ್ಥವಾಗಿ ತಿಳಿದವನು ಭಗವಂತನಿಗೆ ಪಿತನೆಂದು ಹೇಳಿದೆ. ಭಗವಂತನ ಮಹಿಮೆಯನ್ನು ಯಥಾರ್ಥವಾಗಿ ತಿಳಿದ ಜೀವರಲ್ಲಿ ಶ್ರೀ ಮಧ್ವರೇ ಪ್ರಮುಖರಾದ್ದರಿಂದಲೂ ಅವರನ್ನು ಭಗವಂತನ ಜನಕರೆಂದು ಹೇಳಬಹುದು. 'ಸೋಮಃ ಮತೀನಾಂ ಜನಿತಾ' ಎಂಬ ಮಂತ್ರಭಾಗದಿಂದ ಶ್ರೀಮಧ್ವರಿಗೆ ಭಗವಂತನ ಯಥಾರ್ಥ ಜ್ಞಾನವಿರುವುದು ಸ್ಪಷ್ಟವಾಗಿದೆ. 'ಅಸದ್ಭಿರ್ಗೂಹಿತಂ ಸಂತಂ ತೃತೀಯೋಽಸುರ್ಮಥಾಯತಿ' ಎಂಬ ಪಂಚರಾತ್ರವಚನವೂ ಶ್ರೀಮಧ್ವರಿಗಿರುವ ಯಥಾರ್ಥಜ್ಞಾನವನ್ನು ಬಣ್ಣಿಸುತ್ತಿದೆ. ಈ ಕಾರಣಗಳಿಂದ ಸೋಮಪದವಾಚ್ಯನಾದ ಮುಖ್ಯಪ್ರಾಣನ ತೃತೀಯಾವತಾರರಾದ ಶ್ರೀಮಧ್ವರು ವಿಷ್ಣುವಿಗೆ ಜನಕರೆಂದು ಶ್ರುತಿ ಹೇಳಿದರೆ ವಿಷ್ಣುವಿನ ಆಧಿಕ್ಯಕ್ಕೆ ಯಾವ ಕುಂದೂ ಉಂಟಾಗುವುದಿಲ್ಲ. ಸರ್ವ ವ್ಯಾಪ್ತ ಎಂಬ ಅರ್ಥದ 'ವಿಷ್ಣು' ಪದವನ್ನು ಪ್ರಯೋಗಿಸುವ ಮೂಲಕ ಶ್ರುತಿಯು ಭಗವಂತನಿಗೆ ಬೇರೆ ಜೀವರಿಗಿರುವ ಉತ್ಪತ್ತಿ ಸರ್ವಥಾ ಇಲ್ಲವೆನ್ನುವುದನ್ನು ಸೂಚಿಸುತ್ತಿದೆ. ಹೀಗೆ ಶ್ರುತಿಗಳಿಗೆ ಸರಿಯಾದ ವ್ಯಾಖ್ಯಾನವನ್ನು ಮಾಡಬೇಕೆನ್ನುವುದೇ 'ಆನುಕೂಲ್ಯಾದ್ ಯೋಜ್ಯಾನಿ' ಎಂದು ನಿರ್ಣಯದಲ್ಲಿ ಹೇಳಿರುವುದರ ಭಾವವಾಗಿದೆ. ॥ ೩೬ ॥

ಭಗವಂತನ ಅವತಾರರೂಪಗಳಲ್ಲೂ, ಅವನ ಇತರ ರೂಪಗಳಲ್ಲೂ ಯಾವ ದೋಷವೂ ಇಲ್ಲವೆಂದು ಈ ಮುಂದಿನ ನಾಲ್ಕು ಶ್ಲೋಕಗಳಲ್ಲಿ ವಿವರಿಸಿದ್ದಾರೆ —

**ಅವತಾರೇಷು ಯತ್ಕಿಂಚಿದ್ ದರ್ಶಯೇನ್ನರವದ್ಧರಿಃ ।**
**ತಚ್ಚಾಸುರಾಣಾಂ ಮೋಹಾಯ ದೋಷಾ ವಿಷ್ಣೋರ್ನ ಹಿ ಕ್ವಚಿತ್ ॥ ೩೭ ॥**

**ಅರ್ಥ :-** **ಅವತಾರೇಷು** ಭಗವಂತನ ಅವತಾರರೂಪಗಳಲ್ಲಿ **ಯತ್ಕಿಂಚಿತ್** ಯಾವುದಾದರು ಸ್ವಲ್ಪ ದೋಷವನ್ನು **ನರವತ್** ಮನುಷ್ಯರಂತೆ **ಹರಿಃ**

ಅನಂತರ ಅಸ್ತಿತ್ವವನ್ನು ಪಡೆಯುವುದೇ ಜನನ. ಜಗನ್ಮಿಥ್ಯಾತ್ವವನ್ನು ಖಂಡಿಸಿ, ಸತ್ಯತ್ವವನ್ನು ಸಮರ್ಥಿಸುವ ಮೂಲಕ ಅಂತಹ ಉತ್ಪತ್ತಿಯನ್ನೇ ಲೋಕಗಳಿಗೆ ಉಂಟುಮಾಡಿದ್ದಾರೆ ಎಂದು 'ಜನಿತಾ ದಿವೋ ಜನಿತಾ ಪೃಥಿವ್ಯಾಃ' ಎಂಬ ಮಂತ್ರಭಾಗದ ಅಭಿಪ್ರಾಯ. ಹಾಗೆಯೇ ಶ್ರೀಮಧ್ವರು 'ಶುದ್ಧ ಚೇತನವೊಂದೇ ಸತ್ಯ, ದೇಹೇಂದ್ರಿಯಾದಿವಿಶಿಷ್ಟವಾದ ಅಗ್ನಿ ಸೂರ್ಯ, ಇಂದ್ರ, ವಿಷ್ಣು ಮೊದಲಾದ ಚೇತನ ಮಿಥ್ಯೆ' ಎಂದು ಹೇಳುವ ಪರಮತವನ್ನು ಖಂಡಿಸಿ ಅಗ್ನ್ಯಾದಿ ದೇವತೆಗಳಿಗೆ ಹಾಗೂ ಭಗವಂತನ ದೇಹೇಂದ್ರಿಯಾದಿಗಳಿಗೆ ಅಸ್ತಿತ್ವವನ್ನು ತಂದು ಕೊಡುವ ಮೂಲಕ ಆ ದೇವತೆಗಳಿಗೆ ಮತ್ತು ಭಗವಂತನಿಗೆ ದೇಹಸಂಬಂಧರೂಪವಾದ ಉತ್ಪತ್ತಿಯನ್ನೂ ಕೊಟ್ಟಿದ್ದಾರೆ. ಅಥವಾ ಈ ದೇವತೆಗಳಾಗಲೀ, ಸರ್ವೋತ್ತಮನಾದ ಭಗವಂತನಾಗಲೀ, ಅವರ ದೇಹೇಂದ್ರಿ ಯಾದಿಗಳಾಗಲೀ ಸರ್ವಥಾ ಇಲ್ಲ ಎಂಬ ಭಯವನ್ನು ಪರಿಹರಿಸುವ ಮೂಲಕವೂ ಸತ್ಸಿದ್ಧಾಂತಪ್ರತಿಷ್ಠಾಪಕರಾದ ಶ್ರೀಮಧ್ವರು ಅಗ್ನ್ಯಾದಿಗಳಿಗೂ, ಭಗವಂತನಿಗೂ ಜನಕರಾಗಿದ್ದಾರೆ. ದೇಹವನ್ನು ಕೊಡುವವರೂ ಉಪನಯನ ಸಂಸ್ಕಾರವನ್ನು ಮಾಡುವವರು, ವಿದ್ಯಾದಾನ ಮಾಡುವವರು, ಅನ್ನ ದಾತೃಗಳು, ಭಯಪರಿಹಾರಕರು — ಈ ಐವರು ಜನಕರೆಂದೆನಿಸುವರು ಎಂದು ಹೇಳುವ 'ಜನಿತಾ ಚೋಪನೀತಾ ಚ ಯಶ್ಚ ವಿದ್ಯಾಂ ಪ್ರಯಚ್ಛತಿ । ಅನ್ನದಾತಾ ಭಯ ತ್ರಾತಾ ಪಂಚೈತೇ ಪಿತರಃ ಸ್ಮೃತಾಃ' ಎಂಬ ವಚನದ ಪ್ರಕಾರ ಶ್ರೀಮಧ್ವರೂ ಅಗ್ನ್ಯಾದಿದೇವತೆಗಳಿಗೂ ಭಗವಂತನಿಗೂ ಜನಕರಾಗುವರು. ಇದನ್ನೇ 'ಜನಿತಾಽಗ್ನೇಃ ಜನಿತಾ ಸೂರ್ಯಸ್ಯ ಜನಿತೇಂದ್ರಸ್ಯ ಜನಿತೋತ ವಿಷ್ಣೋಃ' ಎಂದು ವೇದಮಂತ್ರ ಹೇಳುತ್ತಿದೆ.

ಅದೇ ರೀತಿ, ಭಗವದ್ಗೀತೆಯಲ್ಲಿ 'ಅಸತ್ಯಮಪ್ರತಿಷ್ಠಂ ತೇ ಜಗದಾಹುರ ನೀಶ್ವರಮ್' - ಕೆಲವರು ಜಗತ್ತು ಅಸತ್ಯವೆಂದೂ, ಈಶ್ವರರಹಿತವೆಂದೂ ಹೇಳುವರೆಂದು ಹೇಳಿ ಅಂತಹವರನ್ನು ಜಗತ್ತಿನ ನಾಶಮಾಡತಕ್ಕವರೆಂದು 'ಏತಾಂ ದೃಷ್ಟಿಮವಷ್ಟಭ್ಯ ನಷ್ಟಾತ್ಮಾನೋಽಲ್ಪ ಬುದ್ಧಯಃ। ಪ್ರಭವಂತ್ಯುಗ್ರ ಕರ್ಮಾಣಃ ಕ್ಷಯಾಯ ಜಗತೋಽ ಹಿತಾಃ' ಎಂಬ ಶ್ಲೋಕದಲ್ಲಿ ಹೇಳಿದೆ. ಜಗತ್ತನ್ನು ಅಸತ್ಯವೆಂದು ಪ್ರತಿಪಾದಿಸುವವರು ಜಗತ್-ಕ್ಷಯವನ್ನು ಮಾಡತಕ್ಕವ ರೆಂದಾದರೆ ಜಗತ್ತನ್ನು ಸತ್ಯವೆಂದು ಪ್ರತಿ ಪಾದಿಸುವ ಶ್ರೀಮಧ್ವರು ನಷ್ಟವಾದ ಜಗತ್ತಿಗೆ ಪುನರ್ಜನ್ಮವನ್ನು ಕೊಟ್ಟವರೆಂದು ಹೇಳಬೇಕಷ್ಟೆ ಈ ಕಾರಣದಿಂದಲೂ

ಶ್ರೀಮಧ್ವರು ಸಕಲ ಲೋಕಗಳಿಗೆ, ಅಗ್ನ್ಯಾದಿ ದೇವತೆಗಳಿಗೆ, ಭಗವಂತನಿಗೆ ಜನಕರಾಗಿದ್ದಾರೆಂದು ಹೇಳ ಬಹುದೆಂದು ಪ್ರಕೃತಶ್ರುತಿ ಹೇಳುತ್ತಿದೆಯೆಂದೂ ವ್ಯಾಖ್ಯಾನಿಸಬಹುದು.

ಹಾಗೆಯೇ 'ಯಸ್ತಾ ವಿಜಾನಾತ್ ಸ ಪಿತುಃ ಪಿತಾಸತ್' ಎಂಬ ಶ್ರುತಿಯಲ್ಲಿ ಭಗವಂತನ ಮಹಿಮೆಯನ್ನು ಯಥಾರ್ಥವಾಗಿ ತಿಳಿದವನು ಭಗವಂತನಿಗೆ ಪಿತನೆಂದು ಹೇಳಿದೆ. ಭಗವಂತನ ಮಹಿಮೆಯನ್ನು ಯಥಾರ್ಥವಾಗಿ ತಿಳಿದ ಜೀವರಲ್ಲಿ ಶ್ರೀ ಮಧ್ವರೇ ಪ್ರಮುಖರಾದ್ದರಿಂದಲೂ ಅವರನ್ನು ಭಗವಂತನ ಜನಕರೆಂದು ಹೇಳಬಹುದು. 'ಸೋಮಃ ಮತೀನಾಂ ಜನಿತಾ' ಎಂಬ ಮಂತ್ರಭಾಗದಿಂದ ಶ್ರೀಮಧ್ವರಿಗೆ ಭಗವಂತನ ಯಥಾರ್ಥ ಜ್ಞಾನವಿರುವುದು ಸ್ಪಷ್ಟವಾಗಿದೆ. 'ಅಸದ್ಭಿರ್ಗೂಹಿತಂ ಸಂತಂ ತೃತೀಯೋऽಸುರ್ಮಥಾಯತಿ' ಎಂಬ ಪಂಚರಾತ್ರವಚನವೂ ಶ್ರೀಮಧ್ವರಿಗಿರುವ ಯಥಾರ್ಥಜ್ಞಾನವನ್ನು ಬಣ್ಣಿಸುತ್ತಿದೆ. ಈ ಕಾರಣಗಳಿಂದ ಸೋಮಪದವಾಚ್ಯನಾದ ಮುಖ್ಯಪ್ರಾಣನ ತೃತೀಯಾವತಾರರಾದ ಶ್ರೀಮಧ್ವರು ವಿಷ್ಣುವಿಗೆ ಜನಕರೆಂದು ಶ್ರುತಿ ಹೇಳಿದರೆ ವಿಷ್ಣುವಿನ ಆಧಿಕ್ಯಕ್ಕೆ ಯಾವ ಕುಂದೂ ಉಂಟಾಗುವುದಿಲ್ಲ. ಸರ್ವ ವ್ಯಾಪ್ತ ಎಂಬ ಅರ್ಥದ 'ವಿಷ್ಣು' ಪದವನ್ನು ಪ್ರಯೋಗಿಸುವ ಮೂಲಕ ಶ್ರುತಿಯು ಭಗವಂತನಿಗೆ ಬೇರೆ ಜೀವರಿಗಿರುವ ಉತ್ಪತ್ತಿ ಸರ್ವಥಾ ಇಲ್ಲವೆನ್ನುವುದನ್ನು ಸೂಚಿಸುತ್ತಿದೆ. ಹೀಗೆ ಶ್ರುತಿಗಳಿಗೆ ಸರಿಯಾದ ವ್ಯಾಖ್ಯಾನವನ್ನು ಮಾಡಬೇಕೆನ್ನುವುದೇ 'ಆನುಕೂಲ್ಯಾದ್ ಯೋಜ್ಯಾನಿ' ಎಂದು ನಿರ್ಣಯದಲ್ಲಿ ಹೇಳಿರುವುದರ ಭಾವವಾಗಿದೆ. ॥ ೩೬ ॥

ಭಗವಂತನ ಅವತಾರರೂಪಗಳಲ್ಲೂ, ಅವನ ಇತರ ರೂಪಗಳಲ್ಲೂ ಯಾವ ದೋಷವೂ ಇಲ್ಲವೆಂದು ಈ ಮುಂದಿನ ನಾಲ್ಕು ಶ್ಲೋಕಗಳಲ್ಲಿ ವಿವರಿಸಿದ್ದಾರೆ —

**ಅವತಾರೇಷು ಯತ್ಕಿಂಚಿದ್ ದರ್ಶಯೇನ್ನರವದ್ಧರಿಃ ।**
**ತಚ್ಚಾಸುರಾಣಾಂ ಮೋಹಾಯ ದೋಷಾ ವಿಷ್ಣೋರ್ನ ಹಿ ಕ್ವಚಿತ್ ॥ ೩೭ ॥**

**ಅರ್ಥ :-** **ಅವತಾರೇಷು** ಭಗವಂತನ ಅವತಾರರೂಪಗಳಲ್ಲಿ **ಯತ್ಕಿಂಚಿತ್** ಯಾವುದಾದರು ಸ್ವಲ್ಪ ದೋಷವನ್ನು **ನರವತ್** ಮನುಷ್ಯರಂತೆ **ಹರಿಃ**

**ದರ್ಶಯೇತ್** ಶ್ರೀಹರಿ ತೋರಿಸಿದ್ದರೆ **ತಚ್ಚ** ಅದೂ **ಅಸುರಾಣಾಂ ಮೋಹಾಯ** ಅಸುರರಿಗೆ ಭ್ರಾಂತಿಯನ್ನುಂಟುಮಾಡುವುದಕ್ಕೋಸ್ಕರ **ವಿಷ್ಣೋಃ** ವಿಷ್ಣುವಿಗೆ **ದೋಷಾಃ ನ ಹಿ ಕ್ವಚಿತ್** ದೋಷಗಳು ಎಂದೂ ಇಲ್ಲವಷ್ಟೆ

**ಅಜ್ಞತ್ವಂ ಪಾರವಶ್ಯಂ ವಾ ಭೇದಭೇದಾದಿಕಂ ತಥಾ ।**
**ತಥಾ ಪ್ರಾಕೃತದೇಹತ್ವಂ ದೇಹತ್ಯಾಗಾದಿಕಂ ತಥಾ ॥ ೩೮ ॥**

**ಅನೀಶತ್ವಂ ಚ ದುಃಖಿತ್ವಂ ಸಾಮ್ಯಮನ್ಯೈಶ್ಚ ಹೀನತಾಂ ।**
**ಪ್ರದರ್ಶಯತಿ ಮೋಹಾಯ ದೈತ್ಯಾದೀನಾಂ ಹರೀಃ ಸ್ವಯಂ ॥೩೯॥**

**ಅರ್ಥ :- ಅಜ್ಞತ್ವಂ** ಅಜ್ಞಾನವನ್ನು **ಪಾರವಶ್ಯಂ ವಾ** ಅಥವಾ ಪರಾಧಿ ೕನತೆಯನ್ನು **ಭೇದಭೇದಾದಿಕಂ ತಥಾ** ಹಾಗೆಯೇ ಶರೀರದ ಭೇದಭೇಗಳನ್ನು **ತಥಾ ಪ್ರಾಕೃತ ದೇಹತ್ವಂ** ಪ್ರಕೃತಿವಿಕಾರರೂಪವಾದ ದೇಹ ವಿರುವಿಕೆಯನ್ನು **ತಥಾ ದೇಹ ತ್ಯಾಗಾದಿಕಂ** ಅಂತೆಯೇ ಶರೀರವಿಯೋಗ ಮೊದಲಾದವುಗಳನ್ನು **ಅನೀಶತ್ವಂ** ಅಸಾಮರ್ಥ್ಯವನ್ನು **ದುಃಖಿತ್ವಂ ಚ** ದುಃಖ ವನ್ನೂ, **ಅನ್ಯೈಃ ಸಾಮ್ಯಂ ಹೀನತಾಂ ಚ** ಇತರರಿಂದ ಸಮಾನತೆಯನ್ನೂ ಹೀನತೆಯನ್ನೂ **ದೈತ್ಯಾದೀನಾಂ ಮೋಹಾಯ** ದೈತ್ಯರೇ ಮೊದಲಾದವರಿಗೆ ಭ್ರಾಂತಿಯುಂಟಾಗುವುದಕ್ಕೋಸ್ಕರ, **ಸ್ವಯಂ ಹರಿಃ** ಸಾಕ್ಷಾತ್ ಶ್ರೀಹರಿಯೇ, **ಪ್ರದರ್ಶಯತಿ** ತೋರಿಸುತ್ತಾನೆ.

**ನ ತಸ್ಯ ಕಶ್ಚಿದ್ ದೋಷೋऽಸ್ತಿ ಪೂರ್ಣಾಖಿಲಗುಣೋ ಹ್ಯಸೌ ।**
**ಸರ್ವದೇಹಸ್ವರೂಪೇಷು ಪ್ರಾದುರ್ಭಾವೇಷು ಚೇಶ್ವರಃ ॥ ೪೦ ॥**

**ಅರ್ಥ : ತಸ್ಯ** ಆ ಭಗವಂತನಿಗೆ, **ನ ಕಶ್ಚಿದ್ ದೋಷೋऽಸ್ತಿ** ಯಾವ ದೋಷವೂ ಇಲ್ಲ, **ಹಿ** ಏಕೆಂದರೆ, **ಸರ್ವದೇಹಸ್ವರೂಪೇಷು** ಎಲ್ಲ ದೇಹ ಗಳಲ್ಲಿರುವ ರೂಪಗಳಲ್ಲೂ, **ಪ್ರಾದುರ್ಭಾವೇಷು ಚ** ಅವತಾರಗಳಲ್ಲೂ, **ಅಸೌ** ಆ ಭಗವಂತನು, **ಪೂರ್ಣಾಖಿಲಗುಣಃ** ಪರಿಪೂರ್ಣವಾದ ಸಕಲ ಗುಣಗಳನ್ನು ಪಡೆದಿದ್ದಾನೆ. **ಈಶ್ವರಃ** ಸರ್ವೇಶ್ವರನಾಗಿದ್ದಾನೆ.

ಈ ಶ್ಲೋಕಗಳ ತಾತ್ಪರ್ಯ ಸ್ಪಷ್ಟವಾಗಿದೆ. ॥ ೪೦ ॥

ಜೀವರಿಂದ ಅಭೇದವಾಗಲಿ, ಸಾಮ್ಯವಾಗಲಿ ಭಗವಂತನಿಗಿಲ್ಲ. ಹೀಗೆ ಹೇಳುವ ಶಾಸ್ತ್ರವೇ ಉತ್ತಮ ಶಾಸ್ತ್ರ —

**ಬ್ರಹ್ಮಾದ್ಯಭೇದಃ ಸಾಮ್ಯಂ ವಾ ಕುತಸ್ತಸ್ಯ ಮಹಾತ್ಮನಃ ।**
**ಯದೇವಂ ವಾಚಕಂ ಶಾಸ್ತ್ರಂ ತದ್ಧಿ ಶಾಸ್ತ್ರಂ ಪರಂ ಮತಂ ॥ ೪೧ ॥**

**ಅರ್ಥ : ತಸ್ಯ ಮಹಾತ್ಮನಃ** ಆ ಮಹಾಮಹಿಮನಿಗೆ, ಬ್ರಹ್ಮಾದ್ಯಬೇದಃ **ಸಾಮ್ಯಂ ವಾ ಕುತಃ ?** ಬ್ರಹ್ಮಾದಿಗಳಿಂದ ಅಭೇದವಾಗಲಿ, ಸಮಾನತೆ ಯಾಗಲಿ ಎಲ್ಲಿಂದ ? **ಯತ್ ಶಾಸ್ತ್ರಂ** ಯಾವ ಶಾಸ್ತ್ರವು, **ಏವಂ ವಾಚಕಂ** ಹೀಗೆ ಹೇಳುವುದೋ, **ತದ್ಧಿ ಶಾಸ್ತ್ರಂ** ಆ ಶಾಸ್ತ್ರವೇ, **ಪರಂ ಮತಂ** ಶ್ರೇಷ್ಠವೆಂದು ಅಭಿಮತವಾಗಿದೆ. ॥ ೪೧ ॥

ಬಾದರಾಯಣ ಪ್ರಣೀತವಾದ, ಸರ್ವಶಾಸ್ತ್ರಾರ್ಥನಿರ್ಣಾಯಕವಾದ ಬ್ರಹ್ಮಸೂತ್ರವು ಸ್ವೀಕಾರ್ಯವಾಗಿದೆ —

**ನಿರ್ಣಯಾಯೈವ ಯತ್ ಪ್ರೋಕ್ತಂ ಬ್ರಹ್ಮಸೂತ್ರಂ ತು ವಿಷ್ಣುನಾ ।**
**ವ್ಯಾಸರೂಪೇಣ ತದ್ ಗ್ರಾಹ್ಯಂ ತತ್ರೋಕ್ತಾಃ ಸರ್ವನಿರ್ಣಯಾಃ ॥ ೪೨ ॥**

**ಅರ್ಥ :- ನಿರ್ಣಯಾಯೈವ** ಶಾಸ್ತ್ರಾರ್ಥನಿರ್ಣಯಕ್ಕಾಗಿಯೇ, **ಯದ್ ಬ್ರಹ್ಮ ಸೂತ್ರಂ** ಯಾವ ಬ್ರಹ್ಮಸೂತ್ರವು, **ವಿಷ್ಣುನಾ ತು** ವಿಷ್ಣುವಿನಿಂದಲೇ, **ವ್ಯಾಸ ರೂಪೇಣ** ವೇದವ್ಯಾಸರ ರೂಪದಿಂದ, **ಪ್ರೋಕ್ತಂ** ಹೇಳಲ್ಪಟ್ಟಿದೆಯೋ, **ತದ್ ಗ್ರಾಹ್ಯಂ** ಆ ಬ್ರಹ್ಮಸೂತ್ರವು ಸ್ವೀಕಾರ್ಯವಾದದ್ದು. **ತತ್ರ ಸರ್ವ ನಿರ್ಣಯಾಃ ಉಕ್ತಾಃ** ಆ ಬ್ರಹ್ಮಸೂತ್ರದಲ್ಲಿ ಎಲ್ಲ ನಿರ್ಣಯಗಳೂ ಹೇಳಲ್ಪಟ್ಟಿವೆ. ॥ ೪೨ ॥

ಪರಸ್ಪರ ವಿರುದ್ಧ ಶ್ರುತಿವಚನಗಳಿಂದ ಉಂಟಾಗುವ ಸಂಶಯದ ಪರಿಹಾರ ಕ್ಕಾಗಿ ಬ್ರಹ್ಮಸೂತ್ರದ ರಚನೆಯಾಗಿದೆ—

**ಯಥಾರ್ಥವಚನಾನಾಂ ಚ ಮೋಹಾರ್ಥಾನಾಂ ಚ ಸಂಶಯಮ್ ।**
**ಅಪನೇತುಂ ಹಿ ಭಗವಾನ್ ಬ್ರಹ್ಮಸೂತ್ರಮಚೀಕ್ಲೃಪತ್ ॥ ೪೩ ॥**

**ಅರ್ಥ :- ಯಥಾರ್ಥವಚನಾನಾಂ ಚ** ಯಥಾರ್ಥವನ್ನು ಹೇಳುವ ವಾಕ್ಯಗಳಿಗೆ ಮತ್ತು **ಮೋಹಾರ್ಥಾನಾಂ ಚ** ಮೋಹಕವಾದ ವಾಕ್ಯಗಳಿಗೆ

ಸಂಬಂಧಿಸಿದ, **ಸಂಶಯಂ ಅಪನೇತುಂ ಹಿ** ಸಂಶಯವನ್ನು ಪರಿಹರಿಸುವ ಸಲು ವಾಗಿಯೇ, **ಭಗವಾನ್** ಭಗವಂತನು, **ಬ್ರಹ್ಮಸೂತ್ರಂ** ಬ್ರಹ್ಮಸೂತ್ರವನ್ನು **ಅಚೀಕ್ಲೃಪತ್** ವಿರಚಿಸಿದನು.

**ತಸ್ಮಾತ್** ಆದ್ದರಿಂದ, **ಸೂತ್ರಾರ್ಥಂ** ಬ್ರಹ್ಮಸೂತ್ರಗಳ ಅರ್ಥವನ್ನು **ಆಗೃಹ್ಯ** ಸರಿಯಾಗಿ ತಿಳಿದುಕೊಂಡು, **ಸರ್ವನಿರ್ಣಯಃ ಕರ್ತವ್ಯಃ** ಸರ್ವ ಶಾಸ್ತ್ರಾರ್ಥ ಗಳ ನಿರ್ಣಯವನ್ನು ಮಾಡತಕ್ಕದ್ದು.

**ವಿಶೇಷ ವಿಷಯ :-** ಯಥಾರ್ಥವಚನಾನಾಂ ಚ ಮೋಹಾರ್ಥಾನಾಂ ಚ ಸಂಶಯಂ - ಯಥಾರ್ಥವನ್ನು ಹೇಳುವ ಮತ್ತು ಮೋಹಕವಾದ ಶ್ರುತಿವಾಕ್ಯ ಗಳಿಗೆ ಅರ್ಥಭೇದವಿದೆ ಎಂಬ ಸಂಶಯವನ್ನು, ಅಥವಾ ಎರಡು ವಿಧವಾದ ವಾಕ್ಯಗಳನ್ನು ಕೇಳುವುದರಿಂದ ಜನಗಳಿಗೆ ಸಂಶಯವನ್ನು ಪರಿಹರಿಸಲು ಶ್ರೀಹರಿಯು ಬ್ರಹ್ಮಸೂತ್ರವನ್ನು ರಚಿಸಿದನು.

ಬ್ರಹ್ಮಸೂತ್ರಗಳಲ್ಲಿ ಈ ಕೆಳಗಿನ ಪ್ರಮೇಯಗಳನ್ನು ಹೇಳಲಾಗಿದೆ —

**ತಸ್ಮಾತ್ ಸೂತ್ರಾರ್ಥಮಾಗೃಹ್ಯ ಕರ್ತವ್ಯಃ ಸರ್ವನಿರ್ಣಯಃ ।**
**ಸರ್ವದೋಷವಿಹೀನತ್ವಂ ಗುಣೈಃ ಸರ್ವೈರುದೀರ್ಣತಾ ॥ ೪೪ ॥**

**ಅಭೇದಃ ಸರ್ವರೂಪೇಷು ಜೀವಭೇದಃ ಸದೈವ ಹಿ ।**
**ವಿಷ್ಣೋರುಕ್ತಾನಿ ಸೂತ್ರೇಷು ಸರ್ವವೇದೇಡ್ಯತಾ ತಥಾ ॥ ೪೫ ॥**

**ತಾರತಮ್ಯಂ ಚ ಮುಕ್ತಾನಾಂ ವಿಮುಕ್ತಿರ್ವಿದ್ಯಯಾ ತಥಾ ।**
**ತಸ್ಮಾದೇತದ್ವಿರುದ್ಧಂ ಯನ್ಮೋಹಾರ್ಥಂ ತದುದಾಹೃತಮ್ ॥ ೪೬ ॥**

**ತಸ್ಮಾದ್ ಯೇ ಗುಣಾ ವಿಷ್ಣೋರ್ಗ್ರಾಹ್ಯಾಸ್ತೇ ಸರ್ವ ಏವ ಹಿ ।**
**ಇತ್ಯಾದ್ಯುಕ್ತಂ ಭಗವತಾ ಭವಿಷ್ಯತ್ಪರ್ವಣಿ ಸ್ಫುಟಂ ॥ ೪೭ ॥**

**ಅರ್ಥ :- ಸರ್ವದೋಷವಿಹೀನತ್ವಂ** ಸಮಸ್ತದೋಷರಾಹಿತ್ಯ, **ಸರ್ವೈಃ ಗುಣೈಃ ಉದೀರ್ಣತಾ** ಸರ್ವಗುಣ ಪರಿಪೂರ್ಣತೆ, **ಸರ್ವರೂಪೇಷು ಅಭೇದಃ** ಎಲ್ಲ ಭಗವಂತನ ರೂಪಗಳಲ್ಲಿ ಅಭೇದ, **ಸದೈವ ಜೀವಭೇದಃ** ಸರ್ವದಾ ಜೀವರ ಪರಸ್ಪರಭೇದ ಅಥವಾ (**ವಿಷ್ಣೋಃ ಸದೈವ ಜೀವಭೇದಃ** ವಿಷ್ಣುವಿಗೆ

ಸಾರ್ವಕಾಲಿಕವಾದ ಜೀವರ ಭೇದ), **ತಥಾ ವಿಷ್ಣೋಃ ಸರ್ವವೇದೇಡ್ಯತಾ** ಹಾಗೆಯೇ ವಿಷ್ಣುವಿಗೆ ಸರ್ವವೇದ ಪ್ರತಿಪಾದ್ಯತ್ವ, **ಮುಕ್ತಾನಾಂ ತಾರತಮ್ಯಂ ಚ** ಮತ್ತು ಮುಕ್ತರ ತಾರತಮ್ಯ, **ತಥಾ ವಿದ್ಯಯಾ ವಿಮುಕ್ತಿಃ** ಹಾಗೆಯೇ ಜ್ಞಾನದಿಂದ ಮೋಕ್ಷವಾಗುವಿಕೆ ಇವುಗಳು, **ಸೂತ್ರೇಷು ಉಕ್ತಾನಿ** ಸೂತ್ರಗಳಲ್ಲಿ ಹೇಳಲ್ಪಟ್ಟಿವೆ. **ತಸ್ಮಾತ್** ಆದ್ದರಿಂದ, **ಏತದ್ವಿರುದ್ಧಂ ಯತ್ ತತ್** ಇದಕ್ಕೆ ವಿರುದ್ಧವಾದುದು ಯಾವುದೋ ಅದು, **ಮೋಹಾರ್ಥಂ ಉದಾಹೃತಮ್** ಮೋಹವನ್ನುಂಟುಮಾಡುವ ಉದ್ದೇಶದಿಂದ ಹೇಳಲ್ಪಟ್ಟಿದೆ. **ತಸ್ಮಾದ್** ಆದ್ದರಿಂದ, **ವಿಷ್ಣೋಃ ಯೇ ಗುಣಾಃ** ವಿಷ್ಣುವಿಗೆ ಯಾವ ಗುಣಗಳು ವೇದದಲ್ಲಿ ಹೇಳಲ್ಪಟ್ಟಿವೆಯೋ, **ತೇ ಸರ್ವ ಏವ** ಅವೆಲ್ಲವೂ ಕೂಡ, **ಗ್ರಾಹ್ಯಾಃ ಹಿ** ಅಂಗೀಕಾರ್ಯವೇ ಆಗಿವೆ. **ಇತ್ಯಾದಿ** ಇವೇ ಮೊದಲಾದ ವಿಷಯಗಳು, **ಭವಿಷ್ಯತ್ಪರ್ವಣಿ** ಭವಿಷ್ಯತ್ಪರ್ವದಲ್ಲಿ **ಭಗವತಾ ಸ್ಫುಟಂ ಉಕ್ತಂ** ಶ್ರೀ ವೇದವ್ಯಾಸರಿಂದ ಸ್ಪಷ್ಟವಾಗಿ ಹೇಳಲ್ಪಟ್ಟಿವೆ.

**ತಾತ್ಪರ್ಯ** :- ಶ್ರೀ ವೇದವ್ಯಾಸರೇ ತಾವು ರಚಿಸಿರುವ ಭವಿಷ್ಯತ್ಪರ್ವ ಎಂಬ ಉಪಪುರಾಣದಲ್ಲಿ ಸ್ಪಷ್ಟವಾಗಿ ಹೀಗೆ ನಿರೂಪಿಸಿದ್ದಾರೆ – ಬ್ರಹ್ಮಸೂತ್ರಗಳಲ್ಲಿ ನಿರ್ಣಯಿಸಿರುವ ಪ್ರಮೇಯಗಳು – ಭಗವಂತನು ಸರ್ವದೋಷದೂರನೂ, ಸರ್ವಗುಣ ಪೂರ್ಣನೂ ಆಗಿದ್ದಾನೆ. ಭಗವಂತನ ಅನಂತರೂಪಗಳಲ್ಲಿ ಸರ್ವಥಾ ಭೇದವಿಲ್ಲ. ಜೀವರು ಪರಸ್ಪರ ಭಿನ್ನರಾಗಿದ್ದಾರೆ. ಭಗವಂತನೂ ಜೀವರಿಂದ ಭಿನ್ನನಾಗಿದ್ದಾನೆ. ಸಮಸ್ತ ವೇದಗಳೂ ಭಗವಂತನನ್ನು ಸ್ತುತಿಸುತ್ತಿವೆ. ಮುಕ್ತರೆಲ್ಲರೂ ತರತಮ ಭಾವವನ್ನು ಪಡೆದಿದ್ದಾರೆ. ಜ್ಞಾನದಿಂದಲೇ ಮೋಕ್ಷವನ್ನು ಪಡೆಯಲು ಸಾಧ್ಯ. ಬ್ರಹ್ಮಸೂತ್ರಗಳು ನಿರ್ಣಯಿಸಿರುವ ಈ ಪ್ರಮೇಯಗಳೇ ಸರ್ವಶಾಸ್ತ್ರಾರ್ಥವಾದ್ದರಿಂದ ಇದಕ್ಕೆ ವಿರುದ್ಧವಾಗಿ ವೇದಾದಿಶಾಸ್ತ್ರದಲ್ಲಿ ಹೇಳಿದಂತೆ ಕಂಡು ಬರುವುದೆಲ್ಲವೂ ಅಯೋಗ್ಯಜೀವರಿಗೆ ಭ್ರಾಂತಿಯನ್ನು ಹುಟ್ಟಿಸಲೋಸುಗವೇ ಹೇಳಿರುವುದು. ಶ್ರುತಿಯಲ್ಲಿ ಭಗವಂತನಿಗೆ ಅಣುತ್ವ – ಮಹತ್ವ ಮೊದಲಾದ ಪರಸ್ಪರ ವಿರುದ್ಧ ಗುಣಗಳನ್ನು ಹೇಳಿರಬಹುದು. ಆದರೆ ಅವು ಭಗವಂತನಲ್ಲಿವೆಯೆಂದೇ ಒಪ್ಪಬೇಕು.

**ವಿಶೇಷ ವಿಷಯ** :- ಭಗವಂತನು ಸರ್ವದೋಷರಹಿತನೆಂಬ ಪ್ರಮೇಯವನ್ನು ಬ್ರಹ್ಮಸೂತ್ರದ ಎರಡನೆ ಅಧ್ಯಾಯವಾದ ಅವಿರೋಧಾಧ್ಯಾಯದಲ್ಲಿ

ಸಮರ್ಥಿಸಲಾಗಿದೆ. ಆದ್ದರಿಂದಲೇ ಆಚಾರ್ಯರು ಅಣುಭಾಷ್ಯದಲ್ಲಿ 'ಸರ್ವ ದೋಷೋಜ್ಝಿತಸ್ತ ಸ್ಮಾತ್ ಭಗವಾನ್ ಪುರುಷೋತ್ತಮಃ' ಎಂದು ಅವಿರೋಧಾ ಧ್ಯಾಯದ ತಾತ್ಪರ್ಯವನ್ನು ಸಂಗ್ರಹಿಸಿದ್ದಾರೆ. ಭಗವಂತನ ಸರ್ವಗುಣ ಪೂರ್ಣತ್ವವನ್ನು ಬ್ರಹ್ಮಸೂತ್ರದ ಮೊದಲನೆ ಅಧ್ಯಾಯವಾದ ಸಮನ್ವ ಯಾಧ್ಯಾಯದಲ್ಲಿ ನಿರೂಪಿಸಲಾಗಿದೆ. ಆಚಾರ್ಯರು ಅಣುಭಾಷ್ಯದಲ್ಲಿ 'ಅತೋಽನಂತಗುಣೋ ವಿಷ್ಣೋರ್ಯಚ್ಛಬ್ದಾ ಯೋಗವೃತ್ತಯಃ' ಎಂದು ಸಮನ್ವಯಾಧ್ಯಾಯಾರ್ಥ ಸಂಗ್ರಹ ಮಾಡಿದ್ದಾರೆ. ಭಗವಂತನ ಸಕಲ ರೂಪಗಳು ಪರಸ್ಪರ ಅಭಿನ್ನವೆಂಬ ಪ್ರಮೇಯವನ್ನು 'ನ ಸ್ಥಾನತೋಽಪಿ ಪರಸ್ಯೋಭಯಲಿಂಗಂ ಸರ್ವತ್ರ ಹಿ' (ಬ್ರ.ಸೂ. ೩,೨,೧೧) ಎಂಬ ಸೂತ್ರದಲ್ಲಿ ಸಮರ್ಥಿಸಿದೆ. ಜೀವರ ಪರಸ್ಪರ ಭೇದವನ್ನು ಮತ್ತು ಭಗವಂತನು ಜೀವರಿಂದ ಭಿನ್ನವಾಗಿರುವನೆಂಬ ಪ್ರಮೇಯವನ್ನು 'ಭೇದವ್ಯಪದೇಶಾಚ್ಚಾನ್ಯಃ (ಬ್ರ.ಸೂ. ೧, ೧,೨೧), 'ಶಾರೀರಶ್ಚೋಭಯೇಽಪಿ ಹಿ ಭೇದೇನೈನಮಧೀಯತೇ' (ಬ್ರ.ಸೂ. ೧,೨,೨೦), 'ವಿಶೇಷಣಭೇದವ್ಯಪದೇಶಾಭ್ಯಾಂ ಚ ನೇತರೌ' (ಬ್ರ.ಸೂ. ೧,೨,೨೨), ಸುಷುಪ್ತ್ಯುತ್ಕ್ರಾಂತ್ಯೋರ್ಭೇದೇನ' (ಬ್ರ.ಸೂ. ೧,೨,೪೨), 'ಪೃಥಗುಪದೇಶಾತ್' (ಬ್ರ.ಸೂ. ೨,೩,೨೮) ಈ ಸೂತ್ರಗಳಲ್ಲಿ ಬಾದರಾಯಣರು ಸಮರ್ಥಿಸಿದ್ದಾರೆ. ಭಗವಾನ್ ಸೂತ್ರಕಾರರೇ ಭೇದ ಪ್ರತಿಷ್ಠಾಪನಾಚಾರ್ಯ ರಾಗಿರುವುದರಿಂದ ಬ್ರಹ್ಮಸೂತ್ರಗಳ ಅನೇಕ ಅಧಿಕರಣಗಳಲ್ಲಿ ಹೀಗೆ ಭೇದವನ್ನು ಪ್ರತಿಷ್ಠಾಪಿಸಿದ್ದಾರೆ. ಭಗವಂತನ ಸರ್ವವೇದಪ್ರತಿಪಾದ್ಯತ್ವವು 'ಶಾಸ್ತ್ರಯೋ ನಿತ್ವಾತ್' (ಬ್ರ.ಸೂ. ೧,೧,೩), 'ತತ್ತು ಸಮನ್ವಯಾತ್' (ಬ್ರ.ಸೂ. ೧,೧,೪), 'ಈಕ್ಷತೇರ್ನಾಶಬ್ದಂ' (ಬ್ರ.ಸೂ. ೧,೧,೫) ಮೊದಲಾದ ಅನೇಕ ಅಧಿಕರಣಗಳಲ್ಲಿ ಪ್ರತಿಪಾದಿತವಾಗಿದೆ. ಮುಕ್ತತಾರತಮ್ಯವು 'ಇಯದಾಮನನಾತ್' (ಬ್ರ.ಸೂ. ೩,೩,೩೫), 'ತನ್ಮನಃ ಪ್ರಾಣ ಉತ್ತರಾತ್' (ಬ್ರ.ಸೂ. ೪,೨,೩), 'ಸೋಽಧ್ಯಕ್ಷೇ ತದುಪಗಮಾದಿಭ್ಯಃ' (ಬ್ರ.ಸೂ. ೪,೨,೪), ಇತ್ಯಾದಿ ಸೂತ್ರಗಳಲ್ಲಿ ನಿರೂಪಿತವಾಗಿದೆ. 'ವಿದ್ಯೈವ ತು ನಿರ್ಧಾರಣಾತ್' (ಬ್ರ.ಸೂ. ೩,೩,೪೮) ಇತ್ಯಾದಿ ಸೂತ್ರಗಳಲ್ಲಿ ಜ್ಞಾನವೇ ಮೋಕ್ಷಸಾಧನವೆಂಬ ಪ್ರಮೇಯವನ್ನು ಸಮರ್ಥಿಸಲಾಗಿದೆ. ॥ ೪೩-೪೭ ॥

ಈ ಕೆಳಗಿನ ಪ್ರಮಾಣ ವಚನಗಳಿಂದ ಹಿಂದೆ ಹೇಳಿದ ಸಚ್ಛಾಸ್ತ್ರಗಳನ್ನು ಹೊರತು ಪಡಿಸಿ ಉಳಿದ ಶಾಸ್ತ್ರಗಳು ಮೋಹಕವೆಂದೂ, ಶ್ರುತಿಸ್ಮೃತಿಗಳಲ್ಲಿ ಹೇಳಿರುವ ವಿಷ್ಣುವಿನ ಗುಣಗಳು ಯಥಾರ್ಥವೆಂದೂ ಸಿದ್ಧವಾಗುತ್ತದೆ —

ಏಷ ಮೋಹಂ ಸೃಜಾಮ್ಯಾಶು ಯೋ ಜನಾನ್ಮೋಹಯಿಷ್ಯತಿ ।
ತ್ವಂ ಚ ರುದ್ರ ಮಹಾಬಾಹೋ ಮೋಹಶಾಸ್ತ್ರಾಣಿ ಕಾರಯ ॥ ೪೮ ॥

ಅತಥ್ಯಾನಿ ವಿತಥ್ಯಾನಿ ದರ್ಶಯಸ್ವ ಮಹಾಭುಜ ।
ಪ್ರಕಾಶಂ ಕುರು ಚಾತ್ಮಾನಮಪ್ರಕಾಶಂ ಚ ಮಾಂ ಕುರು ॥ ೪೯ ॥

ಇತಿ ವಾರಾಹವಚನಂ ಬ್ರಹ್ಮಾಂಡೋಕ್ತಂ ತಥಾ ಪರಂ ।
ಅಮೋಹಾಯ ಗುಣಾ ವಿಷ್ಣೋರಾಕಾರಶ್ಚಿಚ್ಛರೀರತಾ ॥ ೫೦ ॥

ನಿರ್ದೋಷತ್ವಂ ತಾರತಮ್ಯಂ ಮುಕ್ತಾನಾಮಪಿ ಚೋಚ್ಯತೇ ।
ಏತದ್ವಿರುದ್ಧಂ ಯತ್ಸರ್ವಂ ತನ್ಮೋಹಾಯೇತಿ ನಿರ್ಣಯಃ ॥ ೫೧ ॥

**ಅರ್ಥ :- ಮಹಾಬಾಹೋ ರುದ್ರ** ಮಹಾಬಾಹುವಾದ ರುದ್ರನೇ !, **ಏಷಃ (ಅಹಂ)** ಈ ನಾನು, **ಜನಾನ್ ಯೋ ಮೋಹಯಿಷ್ಯತಿ** ಜನಗಳನ್ನು ಯಾವುದು ಮೋಹಗೊಳಿಸುವುದೋ ಅಂತಹ, **ಮೋಹಂ** ಮೋಹಕವಾದ ಶಾಸ್ತ್ರವನ್ನು (ಅಥವಾ ಮೋಹಕವಾದ ರೀತಿನೀತಿಗಳನ್ನು) **ಆಶು ಸೃಜಾಮಿ** ಕೂಡಲೆ ಸೃಜಿಸುವೆನು. **ತ್ವಂ ಚ** ನೀನೂ ಕೂಡ, **ಮೋಹಶಾಸ್ತ್ರಾಣಿ ಕಾರಯ** ಮೋಹಕವಾದ ಶಾಸ್ತ್ರಗಳನ್ನು ಮಾಡಿಸು ಮತ್ತು ಮಾಡು.

**ಮಹಾಭುಜ** ಎಲೈ ದೀರ್ಘವಾದ ಭುಜಗಳುಳ್ಳವನೇ, **ಅತಥ್ಯಾನಿ** ಎಲ್ಲೂ ಇಲ್ಲದಿರುವಂತಹವುಗಳನ್ನು, **ವಿತಥ್ಯಾನಿ** ನಿನ್ನಲ್ಲಿ ಇಲ್ಲದಿರುವಂತಹವು ಗಳನ್ನು, **ದರ್ಶಯಸ್ವ** ತೋರಿಸು. **ಆತ್ಮಾನಂ ಚ ಪ್ರಕಾಶಂ ಕುರು** ನಿನ್ನನ್ನು ನೀನೇ ಪ್ರಸಿದ್ಧನನ್ನಾಗಿ ಮಾಡಿಕೊ. **ಮಾಂ ಚ ಅಪ್ರಕಾಶಂ ಕುರು** ನನ್ನನ್ನು ಅಪ್ರಸಿದ್ಧ ನನ್ನಾಗಿ ಮಾಡು. **ಇತಿ ವಾರಾಹವಚನಂ** ಹೀಗೆ ವರಾಹಪುರಾಣದ ವಚನವಿದೆ. **ತಥಾ ಪರಂ ಬ್ರಹ್ಮಾಂಡೋಕ್ತಂ** ಹಾಗೆಯೇ ಬ್ರಹ್ಮಂಡಪುರಾಣದಲ್ಲಿ ಹೇಳಿರುವ ಶ್ರೇಷ್ಠವಾದ ವಚನವೂ ಇದೆ. **ವಿಷ್ಣೋಃ** ವಿಷ್ಣುವಿಗೆ, **ಗುಣಾಃ** ಗುಣಗಳು, **ಆಕಾರಃ** ಸಹಸ್ರಶೀರ್ಷತ್ವಾದ್ಯಾಕಾರವಿರುವಿಕೆಯು, **ಚಿಚ್ಛರೀರತಾ** ಜ್ಞಾನಾತ್ಮಕ ವಾದ ಶರೀರವಿರುವುದು, **ನಿರ್ದೋಷತ್ವಂ** ಸರ್ವಥಾ ದೋಷವಿಲ್ಲದಿರುವಿಕೆ, **ಅಪಿ ಚ ಮುಕ್ತಾನಾಂ ತಾರತಮ್ಯಂ** ಮತ್ತು ಮುಕ್ತರಿಗೆ **ತಾರತಮ್ಯ** ಇವು, **ಅಮೋಹಾಯ ಉಚ್ಯತೇ** ಭ್ರಾಂತಿಯ ನಿವಾರಣೆಗಾಗಿ, ಯಥಾರ್ಥಜ್ಞಾನಕ್ಕಾಗಿ ಹೇಳಲ್ಪಟ್ಟಿವೆ.

**ತಾತ್ಪರ್ಯ** :- ವರಾಹಪುರಾಣದಲ್ಲಿ ಮತ್ತು ಬ್ರಹ್ಮಾಂಡಪುರಾಣದಲ್ಲಿ ವಿಷ್ಣು ಶಿವನಿಗೆ ಈ ರೀತಿಯಾಗಿ ಹೇಳುವ ಮಾತುಗಳಿವೆ - 'ಎಲೈ ಮಹಾಭುಜನಾದ ರುದ್ರ! ಜನರಿಗೆ ಮೋಹವನ್ನುಂಟುಮಾಡುವ ಬೌದ್ಧಶಾಸ್ತ್ರವನ್ನು ನಾನು ರಚಿಸುವೆನು. ಕೈಲಾಸಯಾತ್ರೆಯೇ ಮೊದಲಾದ ಮೋಹಕವಾದ ನಡುವಳಿಕೆಯನ್ನು ತೋರಿಸುವೆನು. ನೀನೂ ಅಯೋಗ್ಯ ಜನರಿಗೆ ಮೋಹಕವಾದ ಪಾಶುಪತಾದಿಶಾಸ್ತ್ರಗಳನ್ನು ರಚಿಸು. ದಧೀಚಿ ಮೊದಲಾದ ಋಷಿಗಳೂ ಅಂತಹ ಶಾಸ್ತ್ರಗಳನ್ನು ರಚಿಸುವಂತೆ ಪ್ರೇರಿಸು. ಯಾವ ಪ್ರಮಾಣ ಗ್ರಂಥದಲ್ಲೂ ಇಲ್ಲದಿರುವ ಲಿಂಗಮೂಲಾನ್ವೇಷಣ, ಅನೇಕ ಬಾರಿ ಭಸ್ಮಧಾರಣದಿಂದ ಕೈಲಾಸಲೋಕ ಪ್ರಾಪ್ತಿ ಮೊದಲಾದವುಗಳನ್ನೂ, ನನ್ನಲ್ಲಿರುವ, ಆದರೆ ನಿನ್ನಲ್ಲಿ ಇಲ್ಲದಿರುವ ಸರ್ವಜ್ಞತ್ವಾದಿ ಗುಣಗಳನ್ನು ನಿನ್ನಲ್ಲಿ ಇರುವಂತೆಯೂ ಆ ಶಾಸ್ತ್ರಗಳಲ್ಲಿ ಪ್ರತಿಪಾದಿಸು. ಲೋಕದಲ್ಲಿ ನೀನೇ ಪ್ರಸಿದ್ಧನಾಗುವಂತೆಯೂ, ನಾನು ಅಪ್ರಸಿದ್ಧನಾಗುವಂತೆಯೂ ಮಾಡು.

ಪಾಶುಪತಾದಿ ಶಾಸ್ತ್ರಗಳಲ್ಲಿ ಶಿವಾದಿ ದೇವತೆಗಳ ಮಹಿಮೆಯನ್ನು ಮೋಹಕ್ಕಾಗಿ ಹೇಳಿರುವಂತೆ ವೇದಾದಿ ಶಾಸ್ತ್ರಗಳಲ್ಲೂ ಮೋಹಕ್ಕಾಗಿಯೇ ವಿಷ್ಣುವಿನ ಸರ್ವಜ್ಞತ್ವಾದಿ ಗುಣಗಳು, ಸಹಸ್ರ ಶೀರ್ಷತ್ವವೇ ಮೊದಲಾದ ಆಕಾರ, ಜ್ಞಾನಾತ್ಮಕವಾದ ಶರೀರ, ಅಂತೆಯೇ ಮುಕ್ತರಿಗೆ ತಾರತಮ್ಯ ಮೊದಲಾದವುಗಳನ್ನು ಹೇಳಿರಬಾರದೇಕೆ ಎಂದು ಶಂಕಿಸಬಹುದು. ಆದರೆ ವಸ್ತುತಃ ಭ್ರಾಂತಿಯ ಪರಿಹಾರಕ್ಕಾಗಿ ಮತ್ತು ಯಥಾರ್ಥಜ್ಞಾನಕ್ಕಾಗಿಯೇ ವೇದಾದಿಶಾಸ್ತ್ರಗಳು ಈ ಪ್ರಮೇಯಗಳನ್ನು ಪ್ರತಿಪಾದಿಸಿವೆ. ॥ ೪೮-೫೧ ॥

ಸ್ಕಾಂದಪುರಾಣವು ತಾಮಸಪುರಾಣವಾದ್ದರಿಂದ ಅಲ್ಲಿ ಹೇಳಿರುವ ವಿಷ್ಣುವಿನ ಮಹಿಮೆಯನ್ನು ಅಂಗೀಕರಿಸುವುದು ಹೇಗೆಂಬ ಆಶಂಕೆಗೆ ಮುಂದಿನ ಶ್ಲೋಕದಲ್ಲಿ ಸಮಾಧಾನವನ್ನು ಹೇಳಿದೆ —

**ಸ್ಕಾಂದೇऽಪ್ಯುಕ್ತಂ ಶಿವೇನೈವ ಷಣ್ಮುಖಾಯೈವ ಸಾದರಮ್ ।**
**ಶಿವಶಾಸ್ತ್ರೇऽಪಿ ತದ್ಗ್ರಾಹ್ಯಂ ಭಗವಚ್ಛಾಸ್ತ್ರಯೋಗಿ ಯತ್ ॥ ೫೨ ॥**

**ಅರ್ಥ** :- **ಸ್ಕಾಂದೇऽಪಿ** ಸ್ಕಾಂದಪುರಾಣದಲ್ಲೂ **ಶಿವೇನೈವ** ಶಿವನಿಂದಲೇ, **ಷಣ್ಮುಖಾಯೈವ** ಷಣ್ಮುಖನಿಗೋಸ್ಕರವಾಗಿಯೇ, **ಸಾದರಮ್**

**ಉಕ್ತಂ** ಆದರ ಪೂರ್ವಕವಾಗಿ ಹೇಳಲ್ಪಟ್ಟಿದೆ, **ಭಗವಚ್ಛಾಸ್ತ್ರಯೋಗಿ** ಭಗವಂತನ ಶಾಸ್ತ್ರಕ್ಕೆ ಸಂಬಂಧಿಸಿದ ವಿಷಯವು, **ಶಿವಶಾಸ್ತ್ರೇಪಿ ಯತ್ ತತ್** ಶಿವಶಾಸ್ತ್ರದಲ್ಲೂ ಯಾವುದಿದೆಯೋ ಅದು, **ಗ್ರಾಹ್ಯಂ** ಸ್ವೀಕರಿಸಲು ಅರ್ಹವಾದುದು.

**ತಾತ್ಪರ್ಯ** :- ಸ್ಕಾಂದಪುರಾಣವು ತಾಮಸಪುರಾಣವಾಗಿರಬಹುದು. ಆದರೂ ಶಿವನೇ ತನ್ನ ಪುತ್ರನಾದ ಷಣ್ಮುಖನಿಗೆ ಆದರ ಪೂರ್ವಕವಾಗಿ ಹೇಳಿದ ಮಾತು ಮೋಹಕವಾಗಲು ಸಾಧ್ಯವಿಲ್ಲ. ಪುತ್ರನಿಗೆ ತಂದೆ ಮಾಡುವ ಉಪದೇಶ ಮೋಹಕವಾಗಿರಲು ಶಕ್ಯವಿಲ್ಲವಷ್ಟೆ. ವೈಷ್ಣವ ಶಾಸ್ತ್ರದಲ್ಲಿ ಹೇಳಿರುವ ವಿಷಯ ಶಿವಾದಿರಚಿತವಾದ ಶಾಸ್ತ್ರಗಳಲ್ಲಿ ಬಂದಿರಬಹುದು. ಆದರೂ ಸ್ವೀಕಾರ್ಯವೇ.

**ವಿಶೇಷ ವಿಷಯ** :- ಷಣ್ಮುಖಾಯೈವ ಎಂಬಲ್ಲಿ ಏವ ಶಬ್ದ ಗಮನಾರ್ಹ ವಾಗಿದೆ. ಶಿವನು ಉಪದೇಶಿಸುವಾಗ ಷಣ್ಮುಖನಲ್ಲದೆ ಇನ್ನೊಬ್ಬ ಅಯೋಗ್ಯ ನಿದ್ದಲ್ಲಿ ಶಿವನ ಉಪದೇಶ ಅವನನ್ನು ಕುರಿತದ್ದು ಹೊರತು ಷಣ್ಮುಖನನ್ನಲ್ಲ. ಆದ್ದರಿಂದ ಶಿವನುಪದೇಶಿಸಿದ ವಿಷ್ಣುಮಹಿಮೆ ಯಥಾರ್ಥವಲ್ಲ ಎಂದು ಸಂದೇಹಿಸಬಹುದಾಗಿತ್ತು. ಆದರೆ ಷಣ್ಮುಖನ ಸಮೀಪದಲ್ಲಿ ಯಾವ ಅಯೋಗ್ಯ ಜೀವನೂ ಇರಲಿಲ್ಲವಾದ್ದರಿಂದ ಶಿವನ ಉಪದೇಶ ಯಥಾರ್ಥವೇ ಎಂದು ಸಿದ್ಧವಾಗುವುದು ॥ ೫೨ ॥

ಶಿವನು ಷಣ್ಮುಖನಿಗೆ ಮಾಡಿದ ಉಪದೇಶ ಸ್ಕಾಂದ ಪುರಾಣದಲ್ಲಿ ಹೀಗಿದೆ —

> **ಪರಮೋ ವಿಷ್ಣುರೇವೈಕಃ ತಜ್ಜ್ಞಾನಂ ಮುಕ್ತಿಸಾಧನಂ ।**
> **ಶಾಸ್ತ್ರಾಣಾಂ ನಿರ್ಣಯಸ್ತ್ವೇಷಃ ತದನ್ಯನ್ಮೋಹನಾಯ ಹಿ ॥ ೫೩ ॥**
>
> **ಜ್ಞಾನಂ ವಿನಾ ತು ಯಾ ಮುಕ್ತಿಃ ಸಾಮ್ಯಂ ಚ ಮಮ ವಿಷ್ಣುನಾ ।**
> **ತೀರ್ಥಾದಿಮಾತ್ರತೋ ಜ್ಞಾನಂ ಮಮಾಧಿಕ್ಯಂ ಚ ವಿಷ್ಣುತಃ ॥ ೫೪ ॥**
>
> **ಅಭೇದಶ್ಚಾಪ್ಯದಾದೀನಾಂ ಮುಕ್ತಾನಾಂ ಹರಿಣಾ ತಥಾ ।**
> **ಇತ್ಯಾದಿ ಸರ್ವಂ ಮೋಹಾಯ ಕಥ್ಯತೇ ಪುತ್ರ ನಾನ್ಯಥಾ ॥ ೫೫ ॥**

**ಅರ್ಥ** :- **ವಿಷ್ಣುಃ ಏಕ ಏವ ಪರಮಃ** ವಿಷ್ಣು ಒಬ್ಬನೇ ಸರ್ವೋತ್ತಮನು, **ತಜ್ಜ್ಞಾನಂ ಮುಕ್ತಿಸಾಧನಂ** ಆ ಭಗವಂತನ ಜ್ಞಾನ ಮೋಕ್ಷಸಾಧನವಾಗಿದೆ, **ಏಷಃ**

**ತು ಶಾಸ್ತ್ರಾಣಾಂ ನಿರ್ಣಯಃ** ಇದೇ ಸರ್ವಶಾಸ್ತ್ರಗಳ ನಿರ್ಣಯ ವಾಗಿದೆ, **ತದನ್ಯತ್ ಮೋಹನಾಯ ಹಿ** ಇದಕ್ಕಿಂತ ಬೇರೆಯಾದುದು ಮೋಹವನ್ನುಂಟು ಮಾಡಲೇ ಹೇಳಲ್ಪಟ್ಟಿದೆ. **ಜ್ಞಾನಂ ವಿನಾ ತು ಯಾ ಮುಕ್ತಿಃ** ಜ್ಞಾನವಿಲ್ಲದೆ ಇದ್ದರೂ ಕಾಶೀಮರಣ ಮೊದಲಾದವುಗಳಿಂದ ಮುಕ್ತಿ ಯಾಗುವಿಕೆ, **ಮಮ ಚ ವಿಷ್ಣುನಾ ಸಾಮ್ಯಂ** ನನಗೆ ವಿಷ್ಣುವಿನಿಂದ ಸಮತ್ವವು, **ತೀರ್ಥಾದಿಮಾತ್ರತಃ ಜ್ಞಾನಂ** ತೀರ್ಥಯಾತ್ರಾದಿಗಳಿಂದಲೇ ಜ್ಞಾನವುಂಟಾಗುವಿಕೆ, **ಮಮ ಚ ವಿಷ್ಣುತಃ ಆಧಿಕ್ಯಂ** ನನಗೆ ವಿಷ್ಣುವಿನಿಂದ ಶ್ರೇಷ್ಠತೆ, **ಅಸ್ಮದಾದೀನಾ ತಥಾ ಮುಕ್ತಾನಾಂ** ನಾನೇ ಮೊದಲಾದ ಸಂಸಾರಿಗಳಿಗೆ ಹಾಗೂ ಮುಕ್ತರಿಗೆ, **ಹರಿಣಾ ಅಭೇಧಶ್ಚ** ಶ್ರೀಹರಿಯಿಂದ ಅಭೇದವು, **ಪುತ್ರ** ಎಲೈ ಪುತ್ರನೇ! **ಇತ್ಯಾದಿ ಸರ್ವಂ** ಇವೇ ಮೊದಲಾದ ವಿಷಯಗಳೆಲ್ಲವೂ, **ಮೋಹಾಯ ಕಥ್ಯತೇ** ಮೋಹಕ್ಕೋಸ್ಕರ ಹೇಳಲ್ಪಟ್ಟಿದೆ, **ನ ಅನ್ಯಥಾ** ಬೇರೆ ಉದ್ದೇಶದಿಂದಲ್ಲ.

**ತಾತ್ಪರ್ಯ** - ಸ್ಪಷ್ಟ.

**ವಿಶೇಷ ವಿಷಯ :-** 'ತದನ್ಯನ್ಮೋಹನಾಯ ಹಿ', 'ಇತ್ಯಾದಿ ಸರ್ವಂ ಮೋಹಾಯ ಕಥ್ಯತೇ', 'ನ ಅನ್ಯಥಾ' ಎಂದು ಮೂರು ಬಾರಿ ವಿಷ್ಣುಮಹಿಮೆಗೆ ವಿರೋಧಿಯಾದ ಗ್ರಂಥವನ್ನು ಮೋಹಕವೆಂದು ಶಿವನು ನಿರ್ಣಯಿಸಿರುವುದರಿಂದ ಅಂತಹ ವಿರೋಧಿಶಾಸ್ತ್ರಗಳ ಖಂಡನೆಯಲ್ಲಿ ಶಿವನಿಗಿರುವ ಆದರ ಸ್ಪಷ್ಟವಾಗುತ್ತದೆ. ಹಾಗೆಯೇ, 'ಪುತ್ರ' ಎಂದು ಪ್ರೀತಿಪೂರ್ವಕವಾಗಿ ಷಣ್ಮುಖನನ್ನು ಸಂಬೋಧಿಸಿ ತತ್ತ್ವಜ್ಞಾನವನ್ನು ಉಪದೇಶಿಸುವ ಮೂಲಕ ತನಗೆ ಆ ತತ್ತ್ವಜ್ಞಾನದಲ್ಲಿರುವ ಆದರವನ್ನೂ ಶಿವನು ಸ್ಪಷ್ಟಪಡಿಸಿದ್ದಾನೆ. ಆದ್ದರಿಂದಲೇ ಆಚಾರ್ಯರು 'ಸ್ಕಾಂದೇ ಪ್ರೋಕ್ತಂ ಶಿವೇನೈವ ಷಣ್ಮುಖಾಯೈವ ಸಾದರಂ' ಎಂಬಲ್ಲಿ 'ಸಾದರಂ' ಎಂಬ ಪದವನ್ನು ಪ್ರಯೋಗಿಸಿದ್ದಾರೆ. ॥ ೫೩-೫೫ ॥

ಶೈವಪಾದ್ಮಪುರಾಣದಲ್ಲೂ ವರಾಹಪುರಾಣದಲ್ಲಿ ಹೇಳಿದ ವಿಷಯ ಬಂದಿದೆ —

> **ಉಕ್ತಂ ಪಾದ್ಮಪುರಾಣೇ ಚ ಶೈವ ಏವ ಶಿವೇನ ತು ।**
> **ಯದುಕ್ತಂ ಹರಿಣಾ ಪೂರ್ವಮುಮಾಯೈ ಪ್ರಾಹ ತದ್ಧರಃ ॥ ೫೬ ॥**

**ಅರ್ಥ :-** **ಶೈವೇ ಏವ ಪಾದ್ಮಪುರಾಣೇ ಚ** ಶೈವವೇ ಆಗಿರುವ ಪಾದ್ಮ ಪುರಾಣದಲ್ಲೂ, **ಶಿವೇನ ತು ಉಕ್ತಂ** ಶಿವನಿಂದಲೇ ಹೇಳಲ್ಪಟ್ಟಿದೆ. **ಪೂರ್ವಂ**

**ಹರಿಣಾ ಯದುಕ್ತಂ ತತ್** ಹಿಂದೆ ಶ್ರೀಹರಿಯಿಂದ ಯಾವುದು ಹೇಳಲ್ಪಟ್ಟಿತ್ತೋ ಅದನ್ನೇ, **ಹರಃ ಉಮಾಯೈ ಪ್ರಾಹ** ಶಿವನು ಉಮೆಗೆ ಹೇಳಿದ್ದಾನೆ.

**ತಾತ್ಪರ್ಯ** - ಸ್ಪಷ್ಟ.

**ವಿಶೇಷ ವಿಷಯ** :- ಪಾದ್ಮಪುರಾಣವು ಪೂರ್ವಕಾಂಡ, ಉತ್ತರಕಾಂಡ ಎಂದು ಎರಡು ವಿಧವಾಗಿದೆ. ಗಾರುಡವೇ ಮೊದಲಾದ ಐದು ಸಾತ್ತ್ವಿಕ ಪುರಾಣಗಳಿಗೆ ವಿರುದ್ಧವಾಗಿ ವಿಷಯವನ್ನು ನಿರೂಪಿಸುವ ಪಾದ್ಮಪುರಾಣದ ಪೂರ್ವಕಾಂಡವು ಪೂರ್ವಪಕ್ಷರೂಪವಾಗಿದೆ. ಆ ಐದು ಪುರಾಣಗಳಿಗೆ ಅನುಕೂಲವಾದ ವಿಷಯಗಳನ್ನು ಪ್ರತಿಪಾದಿಸುವ ಉತ್ತರಕಾಂಡವು ಸಿದ್ಧಾಂತ ರೂಪವಾಗಿದೆ. ಆದ್ದರಿಂದಲೇ ಆಚಾರ್ಯರು 'ಪಾದ್ಮಪುರಾಣೇ ಚ ಶೈವೇ' ಎಂದು ಹೇಳಿರುವುದು. ಶೈವಪಾದ್ಮಪುರಾಣವೆಂದರೆ ಶಿವಪರವಾದ ಪಾದ್ಮ ಪುರಾಣದ ಪೂರ್ವಕಾಂಡವೆಂದರ್ಥ. ॥ ೫೬ ॥

ಶೈವ - ಪಾದ್ಮಪುರಾಣದ ವಚನಗಳು ಹೀಗಿದೆ —

**ತ್ವಾಮಾರಾಧ್ಯ ತಥಾ ಶಂಭೋ ಗ್ರಹೀಷ್ಯಾಮಿ ವರಂ ಸದಾ ।**
**ದ್ವಾಪರಾದೌ ಯುಗೇ ಭೂತ್ವಾ ಕಲಯಾ ಮಾನುಷಾದಿಷು ॥ ೫೭ ॥**

**ಸ್ವಾಗಮೈಃ ಕಲ್ಪಿತೈಸ್ತ್ವಂ ಚ ಜನಾನ್ ಮದ್ವಿಮುಖಾನ್ ಕುರು ।**
**ಮಾಂ ಚ ಗೋಪಯ ಯೇನ ಸ್ಯಾತ್ ಸೃಷ್ಟಿರೇಷೋತ್ತರಾಧರಾ ॥ ೫೮ ॥**

**ಅರ್ಥ** :- **ಶಂಭೋ** ಎಲೈ ಶಂಭುವೇ!, **ದ್ವಾಪರಾದೌ ಯುಗೇ** ದ್ವಾಪರ, ತ್ರೇತಾ, ಕೃತ ಈ ಯುಗಗಳಲ್ಲಿ, **ಮಾನುಷಾದಿಷು** ಮನುಷ್ಯರೇ ಮೊದಲಾದವರ ಮಧ್ಯೆ, **ಕಲಯಾ ಭೂತ್ವಾ** ಒಂದು ಅಂಶದಿಂದ ಅವತರಿಸಿ, **ತಥಾ ತ್ವಾಂ** ಸದಾ ಆರಾಧ್ಯ, ಹಾಗೆಯೇ ನಿನ್ನನ್ನು ಅವಿಚ್ಛಿನ್ನವಾಗಿ ಆರಾಧಿಸಿ, **ವರಂ ಗ್ರಹೀಷ್ಯಾಮಿ** ವರವನ್ನು ಸ್ವೀಕರಿಸುವೆನು.

**ತ್ವಂ ಚ** ನೀನಾದರೂ, **ಯೇನ** ಯಾವ ನನ್ನ ಮತ್ತು ನಿನ್ನ ವಿಪರೀತ ನಡುವಳಿಕೆಯಿಂದ, **ಏಷಾ ಸೃಷ್ಟಿಃ** ಈ ಸೃಷ್ಟಿಯು, **ಉತ್ತರಾಧರಾ ಸ್ಯಾತ್** ಕೃತ ಯುಗಾದಿಗಳಲ್ಲಿ ಉತ್ತಮಮಾರ್ಗದಲ್ಲಿದ್ದ ದೈತ್ಯರು ಅಧಮಮಾರ್ಗದಲ್ಲಿರುವಂತೆ ಹೇಗೆ ಆಗುವುದೋ ಹಾಗೆ, **ಕಲ್ಪಿತೈಃ ಸ್ವಾಗಮೈಃ** ಅಪ್ರಾಮಾಣಿಕವಾದ ನಿನ್ನ

ಆಗಮಗಳಿಂದ, **ಜನಾನ್** ಜನರನ್ನು **ಮದ್ವಿಮುಖಾನ್ ಕುರು** ನನಗೆ ವಿಮುಖರನ್ನಾಗಿ ಮಾಡು. **ಮಾಂ ಚ** ನನ್ನನ್ನೂ **ಗೋಪಯ** ಮರೆಮಾಚು.

**ತಾತ್ಪರ್ಯ** :- ವಿಷ್ಣುವು ತನ್ನನ್ನು ಕುರಿತು ಹೇಳಿದ ಮಾತುಗಳನ್ನು ಶಿವನು ಉಮೆಗೆ ಹೀಗೆ ತಿಳಿಸುತ್ತಿದ್ದಾನೆ, 'ಎಲೈ ಶಂಭುವೇ! ಕೃತತ್ರೇತಾದ್ವಾಪರ ಯುಗಗಳಲ್ಲಿ ನಾನು ನನ್ನ ಸ್ವರೂಪಾಂಶದಿಂದ ಮನುಷ್ಯಾದಿಗಳ ಮಧ್ಯೆ ಅವತರಿಸುವೆನು. ಆಗ ಅವಿರತವಾಗಿ ಅನೇಕ ವರ್ಷಗಳ ಕಾಲ ನಿನ್ನನ್ನು ಕುರಿತು ತಪಸ್ಸು ಮಾಡಿದಂತೆ ಮತ್ತು ನಿನ್ನಿಂದ ವರಗಳನ್ನು ಸ್ವೀಕರಿಸಿದಂತೆ ನಡೆದುಕೊಳ್ಳುವೆನು. ನೀನೂ ಅಪ್ರಾಮಾಣಿಕವಾದ ಆಗಮಗಳನ್ನು ರಚಿಸು. ಆ ಆಗಮಗಳಲ್ಲಿ ನಿನ್ನ ಮಹಿಮೆಯನ್ನೇ ನಿರೂಪಿಸುವ ಮೂಲಕ ಜನರು ನನ್ನಲ್ಲಿ ವಿಮುಖರಾಗುವಂತೆ, ನನ್ನನ್ನು ಮರೆಯುವಂತೆ ಮಾಡು. ನನ್ನ ಮತ್ತು ನಿನ್ನ ಈ ವಿಪರೀತವಾದ ನಡವಳಿಕೆಗಳಿಂದ, ಕೃತಯುಗಾದಿಗಳಲ್ಲಿ ಉತ್ತಮಮಾರ್ಗದಲ್ಲಿರುವ ದುರ್ಜನರು ತಮಗೆ ಯೋಗ್ಯವಾದ ಅಧಮಮಾರ್ಗದಲ್ಲಿರುವಂತೆ ನನ್ನ ಈ ಸೃಷ್ಟಿಯು ಪರಿವರ್ತಿತವಾಗಲಿ'.

**ವಿಶೇಷ ವಿಷಯ** :- 'ದ್ವಾಪರಾದೌ ಯುಗೇ ಭೂತ್ವಾ' ಎಂಬಲ್ಲಿ ದ್ವಾಪರಾದಿ ಯುಗವೆಂದರೆ ದ್ವಾಪರ, ತ್ರೇತಾ, ಕೃತ ಎಂಬ ಕ್ರಮವನ್ನು ಪರಿಗಣಿಸಿದಾಗ ದೊರಕುವ ದ್ವಾಪರವೇ ಮೊದಲಾದ ಮೂರು ಯುಗಗಳು. ಕಲಿಯುಗದಲ್ಲಿ ಭಗವಂತನ ಅವತಾರವಿಲ್ಲವಾದ್ದರಿಂದ ದ್ವಾಪರಾದಿ ಶಬ್ದದಿಂದ ಕಲಿಯುಗವನ್ನು ಇಲ್ಲಿ ಸಂಗ್ರಹಿಸಬಾರದು.

**ಉತ್ತರಾರ್ಧ** :- ಉತ್ತರಾಃ ಅಧರಾಃ ಯಸ್ಯಾಂ ಸಾ ಉತ್ತರಾಧರಾ ಎಂದು ವಿಗ್ರಹ. ಕೃತಯುಗಾದಿಗಳಲ್ಲಿ ಉತ್ತಮಮಾರ್ಗವನ್ನವಲಂಬಿಸಿದ್ದ ದೈತ್ಯರು ಉತ್ತಮರು. ಅಂತಹವರು ಯಾವ ಸೃಷ್ಟಿಯಲ್ಲಿ ಅಧಮರು ಅಂದರೆ ಸ್ವಯೋಗ್ಯ ಅಧಮ ಮಾರ್ಗಾವಲಂಬಿಗಳು ಆಗುವರೋ ಆ ಸೃಷ್ಟಿ ಉತ್ತರಾಧರವಾದ ಸೃಷ್ಟಿ ಎಂದು ಭಾವ. ॥ ೫೭-೫೮ ॥

ವೈಷ್ಣವ ಶಾಸ್ತ್ರಗಳಲ್ಲೂ ವಿಪರೀತವಾಗಿ ಹೇಳಿದ್ದಲ್ಲಿ ನಿರ್ಣಯ ಹೇಗೆ ಸಾಧ್ಯ ? ಎಂಬ ಶಂಕೆಗೆ ಮುಂದಿನ ಶ್ಲೋಕಗಳಲ್ಲಿ ಸಮಾಧಾನವನ್ನು ಹೇಳಿದೆ —

ನ ಚ ವೈಷ್ಣವಶಾಸ್ತ್ರೇಷು ವೇದೇಷ್ವಪಿ ಹರೇಃ ಪರಃ ।
ಕ್ವಚಿದುಕ್ತೋಽನ್ಯಶಾಸ್ತ್ರೇಷು ಪರಮೋ ವಿಷ್ಣುರೀರಿತಃ ॥ ೫೯ ॥

ನಿರ್ದೋಷತ್ವಾಚ್ಚ ವೇದಾನಾಂ ವೇದೋಕ್ತಂ ಗ್ರಾಹ್ಯಮೇವ ಹಿ ।
ವೇದೇಷ್ವಪಿ ಪರೋ ವಿಷ್ಣುಃ ಸರ್ವಸ್ಮಾದುಚ್ಯತೇ ಸದಾ ॥ ೬೦ ॥

**ಅರ್ಥ :- ವೈಷ್ಣವಶಾಸ್ತ್ರೇಷು** ವೈಷ್ಣವ ಶಾಸ್ತ್ರಗಳಲ್ಲಿ, **ವೇದೇಷ್ವಪಿ** ವೇದಗಳಲ್ಲೂ, **ಕ್ವಚಿತ್** ಎಲ್ಲೂ ಕೂಡ, **ಹರೇಃ ಪರಃ ನಚ ಉಕ್ತಃ** ಶ್ರೀಹರಿಗಿಂತ ಶ್ರೇಷ್ಠನಾದವನು ಹೇಳಲ್ಪಟ್ಟಿಲ್ಲ. **ಅನ್ಯಶಾಸ್ತ್ರೇಷು** ಅವೈಷ್ಣವ ಶಾಸ್ತ್ರಗಳಲ್ಲಿ, **ವಿಷ್ಣುಃ ಪರಮಃ ಕ್ವಚಿತ್ ಈರಿತಃ** ವಿಷ್ಣುವು ಸರ್ವೋತ್ತಮನೆಂದು ಕೆಲವೆಡೆ ಹೇಳಲ್ಪಟ್ಟಿದ್ದಾನೆ.

**ವೇದಾನಾಂ ನಿರ್ದೋಷತ್ವಾಚ್ಚ** ವೇದಗಳು ದೋಷರಹಿತಗಳಾದ್ದರಿಂದಲೂ, **ವೇದೋಕ್ತಂ ಗ್ರಾಹ್ಯಮೇವ ಹಿ** ವೇದದಲ್ಲಿ ಹೇಳಲ್ಪಟ್ಟಿರುವುದು ಸರ್ವಥಾ ಸ್ವೀಕಾರ್ಯವಾಗಿದೆ. **ವೇದೇಷ್ವಪಿ** ವೇದಗಳಲ್ಲೂ, **ವಿಷ್ಣುಃ** ವಿಷ್ಣುವು, **ಸರ್ವಸ್ಮಾತ್ ಸದಾ ಪರಃ** ಎಲ್ಲರಿಗಿಂತಲೂ ಯಾವಾಗಲೂ ಶ್ರೇಷ್ಠನೆಂದು, **ಉಚ್ಯತೇ** ಹೇಳಲ್ಪಟ್ಟಿದ್ದಾನೆ.

**ತಾತ್ಪರ್ಯ :-** ವೇದವನ್ನೊಳಗೊಂಡಂತೆ ಯಾವುದೇ ವೈಷ್ಣವ ಶಾಸ್ತ್ರದಲ್ಲಿ ಎಲ್ಲೂ ಶ್ರೀಹರಿಗಿಂತ ಸರ್ವೋತ್ತಮನೊಬ್ಬನಿರುವನೆಂದು ಹೇಳಿಲ್ಲ. ಆದರೆ ಅವೈಷ್ಣವ ಶಾಸ್ತ್ರಗಳಲ್ಲಿ ವಿಷ್ಣುವನ್ನು ಸರ್ವೋತ್ತಮನೆಂದು ಕೆಲವು ಕಡೆ ಹೇಳಿದೆ ಹೀಗೆ ಪರಸ್ಪರ ವಿರುದ್ಧವಾಗಿ ಹೇಳುವ ಅವೈಷ್ಣವ ಶಾಸ್ತ್ರಗಳು ವೈಷ್ಣವ ಶಾಸ್ತ್ರಗಳಂತೆ ವಿಶ್ವಾಸಾರ್ಹಗಳಾಗಿಲ್ಲ.

ವೇದಗಳಲ್ಲಂತೂ ಅಪೌರುಷೇಯವಾದ್ದರಿಂದ ವಕ್ತೃದೋಷಪ್ರಯುಕ್ತ ಉಂಟಾಗಬಹುದಾದ ದೋಷಗಳೇ ಇಲ್ಲ. ಆದ್ದರಿಂದ ವೇದೋಕ್ತವಾದದ್ದು ಸರ್ವಥಾ ಅಂಗೀಕಾರಾರ್ಹವಾಗಿದೆ. ಇಂತಹ ವೇದಗಳಲ್ಲಿ ಯಾವಾಗಲೂ ಎಲ್ಲರಿಗಿಂತಲೂ ಶ್ರೀಹರಿ ಶ್ರೇಷ್ಠನಾಗಿರುವನೆಂದು ಹೇಳಿದೆ. ॥ ೫೯-೬೦ ॥

ವಿಷ್ಣು ಸರ್ವೋತ್ತಮತ್ವವನ್ನು ಹೇಳುವ ಕೆಲವು ವೇದವಾಕ್ಯಗಳನ್ನು ಈ ಮುಂದಿನ ಶ್ಲೋಕಗಳಲ್ಲಿ ಆಚಾರ್ಯರು ಸಂಗ್ರಹಿಸಿದ್ದಾರೆ —

**ಅಸ್ಯ ದೇವಸ್ಯ ಮೀಳ್ಹುಷೋ ವಯಾ ವಿಷ್ಣೋರೇಷಸ್ಯ ಪ್ರಭೃಥೇ ಹವಿರ್ಭಿಃ।**
**ವಿದೇಹಿ ರುದ್ರೋ ರುದ್ರಿಯಂ ಮಹಿತ್ವಂ ಯಾಸಿಷ್ಟಂ ವರ್ತಿರಶ್ವಿನಾವಿರಾವತ್ ॥ ೬೧ ॥**

**ಅರ್ಥ** :- **ಮೀಳ್ಹುಷ** ಭಕ್ತರಿಗೆ ಅಭೀಪ್ಸಿತವಾದ ಸಮಸ್ತ ಪುರುಷಾರ್ಥಗಳನ್ನೂ ದಯಪಾಲಿಸುವ, **ಏಷಸ್ಯ** ಅಪ್ರತಿಹತವಾದ ಇಚ್ಛೆಯುಳ್ಳ, **ದೇವಸ್ಯ** ಕ್ರೀಡಾದಿ ಗುಣವಿಶಿಷ್ಟನಾದ. **ಅಸ್ಯ** ಸಕಲ ಜಗತ್ತಿನಿಂದ ಭಿನ್ನನಾದ ಕಾರಣ ಅಕಾರ ಶಬ್ದ ವಾಚ್ಯನಾದ ವಿಷ್ಣುವಿಗೆ, **ಹವಿರ್ಭಿಃ** ಯಜ್ಞಸಂಬಂಧಿಯಾದ ಹವಿಸ್ಸುಗಳಿಂದ, **ಪ್ರಭೃಥೇ** ಸಂಪೂರ್ಣ ಪೂಜೆಯನ್ನು ಮಾಡಿದ್ದರಿಂದ, **ವಯಾಃ** ಅಹಂಕಾರ ರೂಪದಿಂದ ಬಂಧಕನಾದ ರುದ್ರನು, **ರುದ್ರಿಯಂ** ರುದ್ರ ಸಂಬಂಧಿಯಾದ, **ಮಹಿತ್ವಂ** ಮಹಿಮೆಯನ್ನು **ವಿದೇ ಹಿ** ಪಡೆದಿರುವನಷ್ಟೆ ಆದ್ದರಿಂದ, **ಅಶ್ವಿನಾ** ಎಲೈ ಅಶ್ವಿನೀ ದೇವತೆಗಳೇ! (ನೀವೂ ಕೂಡ ವಿಷ್ಣುವಿಗೆ ಹವಿಸ್ಸುಗಳಿಂದ ಪೂಜೆಯನ್ನು ಮಾಡುವುದರಿಂದಲೇ) **ಇರಾವತ್** ಯಜ್ಞದ ಆಹುತಿ ರೂಪವಾದ ಅನ್ನವುಳ್ಳ, **ವರ್ತಿಃ** ಇರುವಿಕೆಯನ್ನು **ಯಾಸಿಷ್ಟಂ** ಪಡೆದಿರುವಿರಿ.

**ತಾತ್ಪರ್ಯ** :- 'ಅಸ್ಯ ದೇವಸ್ಯ ಮೀಳ್ಹುಷೋ' ಎಂಬ ಶ್ರುತಿಯಲ್ಲಿ ಅಶ್ವಿನಿ ದೇವತೆಗಳನ್ನು ಉದ್ದೇಶಿಸಿ ಹೀಗೆ ಹೇಳುತ್ತಿದೆ—'ಭಕ್ತರು ಬಯಸಿದ ಸಕಲ ಪುರುಷಾರ್ಥಗಳನ್ನೂ ದಯಪಾಲಿಸುವ ಭಗವಂತನ ಇಚ್ಛೆ ಅಪ್ರತಿಹತವಾದದ್ದು. ಕ್ರೀಡಾದಿ ಗುಣವಿಶಿಷ್ಟನಾದ ಆ ಭಗವಂತನು ಸಮಸ್ತ ಜಗತ್ತಿನಿಂದ ಭಿನ್ನನಾಗಿರುವ ಕಾರಣ ಅಕಾರವಾಚ್ಯನಾಗಿದ್ದಾನೆ. ಇಂತಹ ಮಹಾಮಹಿಮನಾದ ವಿಷ್ಣುವಿಗೆ ಯಜ್ಞದಲ್ಲಿ ಹವಿಸ್ಸುಗಳನ್ನು ಅರ್ಪಿಸಿ ಅರ್ಚಿಸಿದ್ದರಿಂದಲೇ ಅಹಂಕಾರತತ್ತ್ವಾಭಿಮಾನಿಯಾಗಿ ಬಂಧ ಕಾರಣನಾಗಿರುವ ರುದ್ರನು ತನ್ನ ರುದ್ರಪದವಿಯ ಮಹಿಮೆಗಳನ್ನು ಪಡೆದಿದ್ದಾನೆ. ಹೇ ಅಶ್ವಿನಿ ದೇವತೆಗಳೇ! ನೀವೂ ವಿಷ್ಣುವನ್ನು ಹವಿಸ್ಸುಗಳಿಂದ ಅರ್ಚಿಸಿಯೇ ಯಜ್ಞಗಳಲ್ಲಿ ಆಹುತಿ ರೂಪವಾದ ನಿಮ್ಮ ಅನ್ನವನ್ನು ಪಡೆದಿರುವಿರಿ'.

**ವಿಶೇಷ ವಿಷಯ** :- ಮೀಳ್ಹುಷಃ - ಷ ಪದವು ಮಿಹ ಸೇಚನೇ ಎಂಬ ಧಾತುವಿನಿಂದ ನಿಷ್ಪನ್ನವಾದ ಮೀಳ್ಹುಟ್ ಶಬ್ದದ ಷಷ್ಠೀ ವಿಭಕ್ತಿ ಏಕವಚನದ ರೂಪವಾಗಿದೆ. ಸೇಚನ ಮಾಡತಕ್ಕವನು ಎಂದು ಅರ್ಥ. ಪ್ರಕೃತ, ಭಕ್ತರ ಸಕಲಾಭೀಷ್ಟಪ್ರದಾಯಕ ಎಂದು ಭಾವ. ಏಷಸ್ಯ - 'ಆ' ಎಂಬ ಉಪಸರ್ಗ

ಪೂರ್ವಕವಾದ 'ಇಷು ಇಚ್ಛಾಯಾಂ' ಎಂಬ ಧಾತುವಿನಿಂದ ನಿಷ್ಪನ್ನವಾಗಿರುವ ಏಷ ಪದಕ್ಕೆ ಯಾವ ವಿಷಯದಲ್ಲೂ ಪ್ರತಿರೋಧವೇ ಇಲ್ಲದ ಇಚ್ಛೆಯುಳ್ಳವ ನೆಂದು ಅರ್ಥ. ಅಸ್ಯ – 'ನ' ಶಬ್ದ ಸಮಾನಾರ್ಥಕವಾದ ಅಕಾರಕ್ಕೆ ಭೇದವೆಂಬ ಅರ್ಥವೂ ಇದೆ. ಪ್ರಕೃತ, ಸಕಲ ಜಗದ್ಭಿನ್ನನೆಂದು ಅರ್ಥ. ಪ್ರಭೃಥೇ – ಪ್ರಕೃಷ್ಟವಾದ ಭರಣ ಎಂಬ ಅರ್ಥದಲ್ಲಿ ಪ್ರಭೃತ ಎಂದು ರೂಪವಾಗುವುದು. 'ತೃತೀಯೋಽತಿಶಯೇ' ಎಂಬ ಸೂತ್ರದಿಂದ ತಕಾರದ ಸ್ಥಾನದಲ್ಲಿ ಥಕಾರ ಬಂದು ಪ್ರಭೃಥ ಎಂದಾಗುವುದು. ಹವಿಸ್ಸುಗಳಿಂದ ಭರಣವೆಂದರೆ ಭಗವಂತನ ಉದರಭರಣವೆಂದು ಅರ್ಥ. 'ಸಂಪೂರ್ಣವಾದ ಪೂಜೆ' ಎಂದು ಪ್ರಭೃಥ ಶಬ್ದದ ಭಾವಾರ್ಥ. ಇರಾವತ್ – 'ಇರೇತ್ಯನ್ನನಾಮ' ಎಂಬ ಬ್ರಾಹ್ಮಣ ವಚನದಂತೆ ಇರಾ ಎಂದರೆ ಅನ್ನ ಪ್ರಕೃತ, ಯಜ್ಞದಲ್ಲಿ ಆಹುತಿರೂಪವಾದ ಅನ್ನ ಎಂದು ಅರ್ಥ.

ಮಹಾಸಮರ್ಥನಾದ ರುದ್ರನೂ ವಿಷ್ಣುವಿನ ಅರ್ಚನೆಯನ್ನು ಮಾಡಿದ್ದ ರಿಂದಲೇ ಮಹಿಮೆಯನ್ನು ಪಡೆದಿರುವನು. ಹೀಗಿರುವಾಗ ರುದ್ರನಿಗಿಂತ ಅತ್ಯಂತ ಅಧಮರಾದ ನೀವು ವಿಷ್ಣುವಿನ ಅರ್ಚನೆಯಿಂದಲೇ ಯಜ್ಞಭೋಕ್ತೃತ್ವ ವನ್ನು ಪಡೆದಿರುವಿರೆಂದು ಹೇಳಬೇಕೇನು ಎಂದು ಭಾವ. ಅರ್ಚಕನಿಗಿಂತ ಅರ್ಚ್ಯನಾದವನು ಶ್ರೇಷ್ಠ ಎಂಬುದು ಸರ್ವಸಮ್ಮತವಾದ ವಿಷಯ. ಪ್ರಕೃತ ಶ್ರುತಿಯಲ್ಲಿ ಕೊಟ್ಟಿರುವ ದೃಷ್ಟಾಂತದಿಂದ ರುದ್ರನು ಅರ್ಚಕನೆಂದೂ, ವಿಷ್ಣುವು ಅರ್ಚ್ಯನೂ ಹಾಗೂ ರುದ್ರಪದದಾತೃವೂ ಆಗಿದ್ದಾನೆಂದು ತಿಳಿದುಬರುವುದ ರಿಂದ ವಿಷ್ಣುವು ರುದ್ರನಿಗಿಂತ ಶ್ರೇಷ್ಠನೆಂದು ಸಿದ್ಧವಾಗುವುದು. ॥ ೬೧ ॥

**'ಸ್ತುಹಿ ಶ್ರುತಂ ಗರ್ತಸದಂ ಯುವಾನಂ**
**ಮೃಗನ್ನ ಭೀಮಮುಪ ಹತ್ತುಮುಗ್ರಮ್ ।'**
**'ಯಂ ಕಾಮಯೇ ತಂ ತಮುಗ್ರಂ ಕೃಣೋಮಿ**
**ತಂ ಬ್ರಹ್ಮಾಣಂ ತಮೃಷಿಂ ತಂ ಸುಮೇಧಾಮ್' ॥ ೬೨ ॥**

**ಅರ್ಥ** :- (ಎಲೈ ರುದ್ರನೇ!) **ಗರ್ತಸದಂ** ಹೃದಯ ಗುಹೆಯಲ್ಲಿ ನಿವಾಸವನ್ನು ಪಡೆದಿರುವ, **ಯುವಾನಂ** ನಿತ್ಯಯೌವನವನ್ನು ಹೊಂದಿರುವ, **ಮೃಗಂ ನ** ಸಿಂಹದಂತೆ, **ಭೀಮಂ** ಭಯಂಕರನಾದ, **ಉಪಹತ್ನುಂ** ಶತ್ರುಗಳ ಸಮೀಪಕ್ಕೆ ಹೋಗಿ ಕೊಲ್ಲುವ ಸ್ವಭಾವವುಳ್ಳ, **ಉಗ್ರಂ** ಶತ್ರು ಭಯಂಕರನಾದ,

**ಶ್ರುತಂ** ಶ್ರುತಿಪ್ರತಿಪಾದ್ಯನಾದ ನರಸಿಂಹನನ್ನು, **ಸ್ತುಹಿ** ಸ್ತೋತ್ರಮಾಡು. **ಯಂ ಉಗ್ರಂ ಕಾಮಯೇ** ಯಾರನ್ನು ರುದ್ರನನ್ನು ಮಾಡಲು ಬಯಸುವೆನೋ, **ತಂ ಉಗ್ರಂ ಕೃಣೋಮಿ** ಅವನನ್ನು ರುದ್ರನನ್ನು ಮಾಡುವೆನು **ಯಂ ಬ್ರಹ್ಮಾಣಂ ಋಷಿಂ ಸುಮೇಧಾಂ ಕಾಮಯೇ** ಯಾರನ್ನು ಬ್ರಹ್ಮನನ್ನಾಗಿ, ಋಷಿಯನ್ನಾಗಿ, ಶ್ರೇಷ್ಠ ಮೇಧಾವಿಯನ್ನಾಗಿ ಮಾಡಲು ಬಯಸುವೆನೋ, **ತಂ ಬ್ರಹ್ಮಾಣಂ** ಅವನನ್ನು ಬ್ರಹ್ಮನನ್ನಾಗಿ, **ತಂ ಋಷಿಂ** ಅವನನ್ನು ಋಷಿಯನ್ನಾಗಿ, **ತಂ ಸುಮೇಧಾಂ** ಅವನನ್ನು ಶ್ರೇಷ್ಠ ಮೇಧಾವಿಯನ್ನಾಗಿ, **ಕೃಣೋಮಿ** ಮಾಡುವೆನು.

**ತಾತ್ಪರ್ಯ** :- 'ಸ್ತುಹಿ ಶ್ರುತಂ' ಇತ್ಯಾದಿ ವೇದವಾಕ್ಯವು ರುದ್ರನನ್ನು ಸಂಬೋಧಿಸಿ — 'ಎಲೈ ರುದ್ರನೇ! ಹೃದಯ ಗುಹಾನಿವಾಸಿಯೂ, ನಿತ್ಯಯೌವನ ಶಾಲಿಯೂ, ಸಿಂಹದಂತೆ ಭಯಂಕರನೂ, ಶತ್ರುಗಳು ಇದ್ದೆಡೆ ಹೋಗಿ ವಧಿಸುವ ಸ್ವಭಾವವುಳ್ಳವನೂ, ಶತ್ರು ಭಯಂಕರನೂ, ವೇದ ಪ್ರತಿಪಾದ್ಯನೂ ಆದ ನರಸಿಂಹನನ್ನು ಸ್ತೋತ್ರಮಾಡು' ಎಂದು ಹೇಳುತ್ತಿದೆ. ಅಂಭ್ರಣೀಸೂಕ್ತದಲ್ಲಿ ವಿಷ್ಣು ಭಾರ್ಯೆಯಾದ, ಆದ್ದರಿಂದಲೇ ವಿಷ್ಣುವಿಗೆ ಅಧೀನಳಾದ ಲಕ್ಷ್ಮೀದೇವಿಯು ತಾನು ಬಯಸಿದವರನ್ನು ರುದ್ರನನ್ನಾಗಿ, ಬ್ರಹ್ಮನನ್ನಾಗಿ, ಋಷಿಯನ್ನಾಗಿ, ಅತ್ಯಂತ ಶ್ರೇಷ್ಠ ಬುದ್ಧಿಶಾಲಿಯನ್ನಾಗಿ ಮಾಡಬಲ್ಲೆನೆಂದು ಹೇಳುತ್ತಿದ್ದಾಳೆ. ಈ ಎರಡು ಶ್ರುತಿಗಳಿಂದ ವಿಷ್ಣುವು ಬ್ರಹ್ಮಾರುದ್ರಾದಿ ಸಕಲ ದೇವತೆಗಳಿಗಿಂತಲೂ ಶ್ರೇಷ್ಠನೆಂದು ಸಿದ್ಧವಾಗುವುದು.

**ವಿಶೇಷ ವಿಷಯ** :- 'ಮೃಡಾ ಜರಿತ್ರೇ ರುದ್ರ ಸ್ತುವಾನೋ ಅನ್ಯಂ ತೇ ಅಸ್ಮನ್ನಿವಪಂತು ಸೇನಾಃ' ಎಂಬುದು 'ಸ್ತುಹಿ ಶ್ರುತಿಂ' ಇತ್ಯಾದಿ ವೇದವಾಕ್ಯದ ಉತ್ತರಾರ್ಧ. ಈ ಶ್ರುತಿ ಭಾಗದ ಅರ್ಥ ಹೀಗಿದೆ—ಸ್ತವಾನಃ - ನರಸಿಂಹ ಸ್ತುತಿಯನ್ನು ಮಾಡುವ ನೀನು, ಜರಿತ್ರೇ-ಸ್ತುತ್ಯನಾದ ನರಸಿಂಹನ ಸ್ತೋತ್ರವನ್ನು ಮಾಡುತ್ತಿರುವ ನಿನ್ನ ಸ್ತುತಿಯನ್ನು ಮಾಡುವ ನನಗೆ, ಮೃಡಾ - ರಕ್ಷಕನಾಗು, ತೇ ಸೇನಾಃ - ಭೂತಪ್ರೇತ ಪಿಶಾಚಾದಿ ನಿನ್ನ ಸೇನೆಗಳು, ಅಸ್ಮತ್ ಅನ್ಯಂ - ನಮ್ಮಿಂದ ಭಿನ್ನಸ್ವಭಾವದ ಅರ್ಥಾತ್ ಅವೈಷ್ಣವ ಜನರನ್ನು, ನಿವಪಂತು - ನಾಶಮಾಡಲಿ. ಈ ವೇದಮಂತ್ರದಿಂದ ನರಸಿಂಹ ರೂಪಿಯಾದ ವಿಷ್ಣುವು ಶಿವನ ಅಂತರ್ಯಾಮಿಯೂ, ಶಿವನಿಂದ ಸ್ತುತ್ಯನೂ, ಶಿವಾದಿಗಳಿಗೂ ಅವಧ್ಯರಾದ

ದೈತ್ಯರ ವಧೆಯನ್ನು ಮಾಡುವವನೆಂದೂ ತಿಳಿದು ಬರುವುದು. ಈ ಕಾರಣಗಳಿಂದ ವಿಷ್ಣುವು ಶಿವನಿಂದ ಅತ್ಯಂತ ಭಿನ್ನನೂ, ಅವನಿಂದ ಉತ್ತಮನೂ, ಸರ್ವೋತ್ತಮನೂ ಎಂದು ಸಿದ್ಧವಾಗುವುದು.

ಮೃಗಂ ನ - ನ ಶಬ್ದಕ್ಕೆ ನಿಷೇಧಾರ್ಥವಿರುವಂತೆ ಸಾದೃಶ್ಯಾರ್ಥವೂ ಇರುವುದು. ಪ್ರಕೃತ, ನ ಶಬ್ದವು ಸಾದೃಶ್ಯಾರ್ಥಕವಾಗಿದೆ. ಮೃಗದಂತೆ ಭಯಂಕರನೆಂದು ಭಯಂಕರವಾಗಿರುವ ವಿಷಯದಲ್ಲಿ ಮೃಗದ ದೃಷ್ಟಾಂತ ಕೊಟ್ಟಿರುವುದರಿಂದ ಇಲ್ಲಿ ಮೃಗವೆಂದರೆ ಸಿಂಹವೆಂದರ್ಥವಾಗುವುದು. ಉಪಹತ್ನುಂ - ಉಪ - ಸಮೀಪಕ್ಕೆ ಹೋಗಿ ಕೊಲ್ಲುವ ಸ್ವಭಾವವುಳ್ಳವನು, ಹಾರಿ, ಹಾರಿ ಹಿರಣ್ಯಕಶಿಪುವಿನ ಸೇನೆಯನ್ನು ಕೊಲ್ಲುವವನೆಂದು ಭಾವ. ಅಥವಾ ತನ್ನ ತೊಡೆಯಲ್ಲೇ ಹಿರಣ್ಯಕಶಿಪುವನ್ನು ವಧಿಸಿದ್ದರಿಂದ ನರಸಿಂಹನು ಉಪಹತ್ನು ಎಂದರೆ ಸಮೀಪದಲ್ಲೇ ಕೊಲ್ಲುವವನೆಂದು ಅರ್ಥ. ಅಥವಾ, ಉಪ ಎಂದರೆ ಉಪಪನ್ನರಾದವರು ಎಂದು ಅರ್ಥ. ಸಮೀಪದಲ್ಲೇ ಇದ್ದರೂ ಪ್ರಹ್ಲಾದನನ್ನು ಕೊಲ್ಲದಿರುವುದರಿಂದ ಕೊಲ್ಲಲು ಉಪಪನ್ನರಾದವರನ್ನು ಮಾತ್ರ ಕೊಲ್ಲುವವನೆಂದು ಭಾವ. ॥ ೬೨ ॥

**ಏಕೋ ನಾರಾಯಣ ಆಸೀನ್ನ ಬ್ರಹ್ಮಾ ನ ಚ ಶಂಕರಃ ।**
**ವಾಸುದೇವೋ ವಾ ಇದಮಗ್ರ ಆಸೀನ್ನ ಬ್ರಹ್ಮಾ ನ ಚ ಶಂಕರಃ ॥ ೬೩ ॥**

**ಅರ್ಥ :- ನಾರಾಯಣಃ ಏಕಃ ಆಸೀತ್** ನಾರಾಯಣನೊಬ್ಬನೆ ಇದ್ದನು. **ನ ಬ್ರಹ್ಮಾ ನ ಚ ಶಂಕರಃ** ಚತುರ್ಮುಖ ಬ್ರಹ್ಮನಾಗಲಿ, ಶಂಕರನಾಗಲಿ ಇರಲಿಲ್ಲ. **ಇದಮಗ್ರೇ** ಈ ಜಗತ್ತಿನ ಸೃಷ್ಟಿಗೆ ಮುಂಚೆ ಪ್ರಲಯ ಕಾಲದಲ್ಲಿ, **ವಾಸುದೇವೋ ವಾ ಆಸೀತ್** ವಾಸುದೇವನೊಬ್ಬನೆ ಇದ್ದನು. **ನ ಬ್ರಹ್ಮಾ ನ ಚ ಶಂಕರಃ** ಬ್ರಹ್ಮನಾಗಲೀ ರುದ್ರನಾಗಲೀ ಇರಲಿಲ್ಲ.

**ತಾತ್ಪರ್ಯ :-** ಸ್ಪಷ್ಟ.

**ಯದಾ ಪಶ್ಯಃ ಪಶ್ಯತೇ ರುಗ್ಮವರ್ಣಂ**
**ಕರ್ತಾರಮೀಶಂ ಪುರುಷಂ ಬ್ರಹ್ಮಯೋನಿಮ್ ।**
**ತದಾ ವಿದ್ವಾನ್ ಪುಣ್ಯಪಾಪೇ ವಿಧೂಯ**
**ನಿರಂಜನಃ ಪರಮಂ ಸಾಮ್ಯಮುಪೈತಿ ॥ ೬೪ ॥**

**ಶ್ರುತಂ** ಶ್ರುತಿಪ್ರತಿಪಾದ್ಯನಾದ ನರಸಿಂಹನನ್ನು **ಸ್ತುಹಿ** ಸ್ತೋತ್ರಮಾಡು. **ಯಂ ಉಗ್ರಂ ಕಾಮಯೇ** ಯಾರನ್ನು ರುದ್ರನನ್ನು ಮಾಡಲು ಬಯಸುವೆನೋ, **ತಂ ಉಗ್ರಂ ಕೃಣೋಮಿ** ಅವನನ್ನು ರುದ್ರನನ್ನು ಮಾಡುವೆನು **ಯಂ ಬ್ರಹ್ಮಾಣಂ ಋಷಿಂ ಸುಮೇಧಾಂ ಕಾಮಯೇ** ಯಾರನ್ನು ಬ್ರಹ್ಮನನ್ನಾಗಿ, ಋಷಿಯ ನ್ನಾಗಿ, ಶ್ರೇಷ್ಠ ಮೇಧಾವಿಯನ್ನಾಗಿ ಮಾಡಲು ಬಯಸುವೆನೋ, **ತಂ ಬ್ರಹ್ಮಾಣಂ** ಅವನನ್ನು ಬ್ರಹ್ಮನನ್ನಾಗಿ, **ತಂ ಋಷಿಂ** ಅವನನ್ನು ಋಷಿಯನ್ನಾಗಿ, **ತಂ ಸುಮೇಧಾಂ** ಅವನನ್ನು ಶ್ರೇಷ್ಠ ಮೇಧಾವಿಯನ್ನಾಗಿ, **ಕೃಣೋಮಿ** ಮಾಡುವೆನು.

**ತಾತ್ಪರ್ಯ :-** 'ಸ್ತುಹಿ ಶ್ರುತಂ' ಇತ್ಯಾದಿ ವೇದವಾಕ್ಯವು ರುದ್ರನನ್ನು ಸಂಬೋಧಿಸಿ — 'ಎಲೈ ರುದ್ರನೇ! ಹೃದಯ ಗುಹಾನಿವಾಸಿಯೂ, ನಿತ್ಯಯೌವನ ಶಾಲಿಯೂ, ಸಿಂಹದಂತೆ ಭಯಂಕರನೂ, ಶತ್ರುಗಳು ಇದ್ದೆಡೆ ಹೋಗಿ ವಧಿಸುವ ಸ್ವಭಾವವುಳ್ಳವನೂ, ಶತ್ರು ಭಯಂಕರನೂ, ವೇದ ಪ್ರತಿಪಾದ್ಯನೂ ಆದ ನರಸಿಂಹನನ್ನು ಸ್ತೋತ್ರಮಾಡು' ಎಂದು ಹೇಳುತ್ತಿದೆ. ಅಂಭ್ರಣೀಸೂಕ್ತದಲ್ಲಿ ವಿಷ್ಣು ಭಾರ್ಯೆಯಾದ, ಆದ್ದರಿಂದಲೇ ವಿಷ್ಣುವಿಗೆ ಅಧೀನಳಾದ ಲಕ್ಷ್ಮೀದೇವಿಯು ತಾನು ಬಯಸಿದವರನ್ನು ರುದ್ರನನ್ನಾಗಿ, ಬ್ರಹ್ಮನನ್ನಾಗಿ, ಋಷಿಯನ್ನಾಗಿ, ಅತ್ಯಂತ ಶ್ರೇಷ್ಠ ಬುದ್ಧಿಶಾಲಿಯನ್ನಾಗಿ ಮಾಡಬಲ್ಲೆನೆಂದು ಹೇಳುತ್ತಿದ್ದಾಳೆ. ಈ ಎರಡು ಶ್ರುತಿಗಳಿಂದ ವಿಷ್ಣುವು ಬ್ರಹ್ಮರುದ್ರಾದಿ ಸಕಲ ದೇವತೆಗಳಿಗಿಂತಲೂ ಶ್ರೇಷ್ಠನೆಂದು ಸಿದ್ಧವಾಗುವುದು.

**ವಿಶೇಷ ವಿಷಯ :-** 'ಮೃಡಾ ಜರಿತ್ರೇ ರುದ್ರ ಸ್ತುವಾನೋ ಅನ್ಯಂ ತೇ ಅಸ್ಮನ್ನಿವಪಂತು ಸೇನಾಃ' ಎಂಬುದು 'ಸ್ತುಹಿ ಶ್ರುತಿಂ' ಇತ್ಯಾದಿ ವೇದವಾಕ್ಯದ ಉತ್ತರಾರ್ಧ. ಈ ಶ್ರುತಿ ಭಾಗದ ಅರ್ಥ ಹೀಗಿದೆ—ಸ್ತವಾನಃ - ನರಸಿಂಹ ಸ್ತುತಿಯನ್ನು ಮಾಡುವ ನೀನು, ಜರಿತ್ರೇ–ಸ್ತುತ್ಯನಾದ ನರಸಿಂಹನ ಸ್ತೋತ್ರವನ್ನು ಮಾಡುತ್ತಿರುವ ನಿನ್ನ ಸ್ತುತಿಯನ್ನು ಮಾಡುವ ನನಗೆ, ಮೃಡಾ – ರಕ್ಷಕನಾಗು, ತೇ ಸೇನಾಃ – ಭೂತಪ್ರೇತ ಪಿಶಾಚಾದಿ ನಿನ್ನ ಸೇನೆಗಳು, ಅಸ್ಮತ್ ಅನ್ಯಂ – ನಮ್ಮಿಂದ ಭಿನ್ನಸ್ವಭಾವದ ಅರ್ಥಾತ್ ಅವೈಷ್ಣವ ಜನರನ್ನು ನಿವಪಂತು – ನಾಶಮಾಡಲಿ. ಈ ವೇದಮಂತ್ರದಿಂದ ನರಸಿಂಹ ರೂಪಿಯಾದ ವಿಷ್ಣುವು ಶಿವನ ಅಂತರ್ಯಾಮಿಯೂ, ಶಿವನಿಂದ ಸ್ತುತ್ಯನೂ, ಶಿವಾದಿಗಳಿಗೂ ಅವಧ್ಯರಾದ

ದೈತ್ಯರ ವಧೆಯನ್ನು ಮಾಡುವವನೆಂದೂ ತಿಳಿದು ಬರುವುದು. ಈ ಕಾರಣ ಗಳಿಂದ ವಿಷ್ಣುವು ಶಿವನಿಂದ ಅತ್ಯಂತ ಭಿನ್ನನೂ, ಅವನಿಂದ ಉತ್ತಮನೂ, ಸರ್ವೋತ್ತಮನೂ ಎಂದು ಸಿದ್ಧವಾಗುವುದು.

ಮೃಗಂ ನ - ನ ಶಬ್ದಕ್ಕೆ ನಿಷೇಧಾರ್ಥವಿರುವಂತೆ ಸಾದೃಶ್ಯಾರ್ಥವೂ ಇರುವುದು. ಪ್ರಕೃತ, ನ ಶಬ್ದವು ಸಾದೃಶ್ಯಾರ್ಥಕವಾಗಿದೆ. ಮೃಗದಂತೆ ಭಯಂಕರನೆಂದು ಭಯಂಕರವಾಗಿರುವ ವಿಷಯದಲ್ಲಿ ಮೃಗದ ದೃಷ್ಟಾಂತ ಕೊಟ್ಟಿರುವುದರಿಂದ ಇಲ್ಲಿ ಮೃಗವೆಂದರೆ ಸಿಂಹವೆಂದರ್ಥವಾಗುವುದು. ಉಪಹತ್ನುಂ - ಉಪ - ಸಮೀಪಕ್ಕೆ ಹೋಗಿ ಕೊಲ್ಲುವ ಸ್ವಭಾವವುಳ್ಳವನು, ಹಾರಿ, ಹಾರಿ ಹಿರಣ್ಯಕಶಿಪುವಿನ ಸೇನೆಯನ್ನು ಕೊಲ್ಲುವವನೆಂದು ಭಾವ. ಅಥವಾ ತನ್ನ ತೊಡೆಯಲ್ಲೇ ಹಿರಣ್ಯಕಶಿಪುವನ್ನು ವಧಿಸಿದ್ದರಿಂದ ನರಸಿಂಹನು ಉಪಹತ್ನು ಎಂದರೆ ಸಮೀಪದಲ್ಲೇ ಕೊಲ್ಲುವವನೆಂದು ಅರ್ಥ. ಅಥವಾ, ಉಪ ಎಂದರೆ ಉಪಪನ್ನರಾದವರು ಎಂದು ಅರ್ಥ. ಸಮೀಪದಲ್ಲೇ ಇದ್ದರೂ ಪ್ರಹ್ಲಾದನನ್ನು ಕೊಲ್ಲದಿರುವುದರಿಂದ ಕೊಲ್ಲಲು ಉಪಪನ್ನರಾದವರನ್ನು ಮಾತ್ರ ಕೊಲ್ಲುವವನೆಂದು ಭಾವ. ॥ ೬೨ ॥

**ಏಕೋ ನಾರಾಯಣ ಆಸೀನ್ನ ಬ್ರಹ್ಮಾ ನ ಚ ಶಂಕರಃ ।**
**ವಾಸುದೇವೋ ವಾ ಇದಮಗ್ರ ಆಸೀನ್ನ ಬ್ರಹ್ಮಾ ನ ಚ ಶಂಕರಃ ॥ ೬೩ ॥**

**ಅರ್ಥ :- ನಾರಾಯಣಃ ಏಕಃ ಆಸೀತ್** ನಾರಾಯಣನೊಬ್ಬನೆ ಇದ್ದನು. **ನ ಬ್ರಹ್ಮಾ ನ ಚ ಶಂಕರಃ** ಚತುರ್ಮುಖ ಬ್ರಹ್ಮನಾಗಲಿ, ಶಂಕರನಾಗಲಿ ಇರಲಿಲ್ಲ, **ಇದಮಗ್ರೇ** ಈ ಜಗತ್ತಿನ ಸೃಷ್ಟಿಗೆ ಮುಂಚೆ ಪ್ರಲಯ ಕಾಲದಲ್ಲಿ, **ವಾಸುದೇವೋ ವಾ ಆಸೀತ್** ವಾಸುದೇವನೊಬ್ಬನೆ ಇದ್ದನು. **ನ ಬ್ರಹ್ಮಾ ನ ಚ ಶಂಕರಃ** ಬ್ರಹ್ಮನಾಗಲೀ ರುದ್ರನಾಗಲೀ ಇರಲಿಲ್ಲ.

**ತಾತ್ಪರ್ಯ :-** ಸ್ಪಷ್ಟ.

**ಯದಾ ಪಶ್ಯಃ ಪಶ್ಯತೇ ರುಗ್ಮವರ್ಣಂ**
**ಕರ್ತಾರಮೀಶಂ ಪುರುಷಂ ಬ್ರಹ್ಮಯೋನಿಮ್ ।**
**ತದಾ ವಿದ್ವಾನ್ ಪುಣ್ಯಪಾಪೇ ವಿಧೂಯ**
**ನಿರಂಜನಃ ಪರಮಂ ಸಾಮ್ಯಮುಪೈತಿ ॥ ೬೪ ॥**

**ಅರ್ಥ :- ಯದಾ** ಯಾವಾಗ, **ಪಶ್ಯಃ** ಜೀವನು, **ರುಗ್ಮವರ್ಣಂ** ಬಂಗಾರದ ಬಣ್ಣವುಳ್ಳ, **ಕರ್ತಾರಂ** ಜಗತ್ತಿನ ಸೃಷ್ಟಿಕರ್ತನಾದ, **ಈಶಂ** ಸರ್ವೇಶನಾದ, **ಪುರುಷಂ** ಪೂರ್ಣವಾದ ಷಡ್ಗುಣಗಳುಳ್ಳ, **ಬ್ರಹ್ಮಯೋನಿಂ** ಚತುರ್ಮುಖನಿಗೆ ಜನಕನಾದ, **ಪರಮಂ** ಬ್ರಹ್ಮಾದಿಗಳಿಗಿಂತಲೂ ಉತ್ತಮಳಾದ ಲಕ್ಷ್ಮೀಯೇ ಪತ್ನಿಯಾಗುಳ್ಳ ನಾರಾಯಣನನ್ನು **ಪಶ್ಯತೇ** ಅಪರೋಕ್ಷದಿಂದ ತಿಳಿಯುವನೋ, **ತದಾ** ಆಗ, **ವಿದ್ವಾನ್** ಆ ಜ್ಞಾನಿಯು, **ಪುಣ್ಯಪಾಪೇ ವಿಧೂಯ** ಅಪ್ರಾರಬ್ಧವಾದ ಪುಣ್ಯ ಪಾಪಗಳನ್ನು ಕಳೆದುಕೊಂಡು, **ನಿರಂಜನಃ** ಅಜ್ಞಾನ ರಹಿತನಾಗಿ, **ಪರಮಂ ಸಾಮ್ಯಂ** ದುಃಖರಾಹಿತ್ಯವೇ ಮೊದಲಾದ ವಿಷಯಗಳಲ್ಲಿ ಅತ್ಯಂತ ಸಾಮ್ಯವನ್ನು **ಉಪೈತಿ** ಪಡೆಯುವನು.

**ತಾತ್ಪರ್ಯ :-** ಕಠೋಪನಿಷತ್ತಿನ ಈ ಮಂತ್ರ ಹೀಗೆ ಹೇಳುತ್ತಿದೆ — ಬಂಗಾರದ ಬಣ್ಣದ ಪರಮಾತ್ಮನು ಈ ಜಗತ್ತಿನ ಸೃಷ್ಟಿಕರ್ತನೂ, ಸರ್ವ ಸ್ವಾಮಿಯೂ ಆಗಿದ್ದಾನೆ. ಜ್ಞಾನಾನಂದಾದಿ ಪರಿಪೂರ್ಣ ಷಡ್ಗುಣಭರಿತನಾದ ಅವನು ಚತುರ್ಮುಖನಿಗೂ ಜನಕನು. ಬ್ರಹ್ಮಾದ್ಯುತ್ತಮಳಾದ ಲಕ್ಷ್ಮೀದೇವಿ ಅವನ ಪತ್ನಿ. ಇಂತಹ ಶ್ರೀಹರಿಯ ಸಾಕ್ಷಾತ್ಕಾರವನ್ನು ಪಡೆದ ಜೀವನು ಮುಕ್ತಿಗೆ ಪ್ರತಿಬಂಧಕವಾದ ಅಪ್ರಾರಬ್ಧ ಪುಣ್ಯಪಾಪಗಳನ್ನೆಲ್ಲ ಕಳೆದುಕೊಳ್ಳುವನು. ಸಂಸಾರಕ್ಕೆ ಕಾರಣವಾದ ಅವನ ಅವಿದ್ಯೆಯು ನಿರ್ಮೂಲವಾಗುವುದು. ನಿರ್ದುಃಖತ್ವ, ನಿಃಸಂಸಾರಿತ್ವ, ನಿತ್ಯಾನಂದತ್ವ, ನಿರಂಜನತ್ವ ಮೊದಲಾದ ವಿಷಯಗಳಲ್ಲಿ ಭಗವಂತನ ಸಾಮ್ಯವನ್ನು ಅವನು ಪಡೆಯುವನು.

**ವಿಶೇಷ ವಿಷಯ :-** ಪಶ್ಯಃ - ಪಶ್ಯತೀತಿ ಪಶ್ಯಃ ಎಂಬ ವಿವರಣೆಯಂತೆ ಪಶ್ಯನೆಂದರೆ ಸಾಕ್ಷಾತ್ಕಾರವನ್ನು ಪಡೆಯುವ ಜೀವನು. ಪುರುಷಂ - ಪುರವಃ ಷಾಃ ಯಸ್ಯ ಸಃ ಪುರುಷಃ ಎಂದು ವಿಗ್ರಹ ವಾಕ್ಯ. ಪುರು - ಪೂರ್ಣಗಳಾದ, ಷ - ಷಡ್ಗುಣಗಳುಳ್ಳವನು ಪುರುಷ. ಪರಮಂ - ಈ ಶಬ್ದದ ಆವೃತ್ತಿಯನ್ನು ಮಾಡಿಕೊಂಡು ಒಂದನ್ನು ಬ್ರಹ್ಮಯೋನಿಂ ಎಂಬ ಪದದ ಜೊತೆಗೂ ಮತ್ತೊಂದನ್ನು ಸಾಮ್ಯಪದದ ಜೊತೆಗೂ ಅನ್ವಯಿಸಿಕೊಳ್ಳಬೇಕು. ಬ್ರಹ್ಮಯೋನಿ ಪದದ ಜೊತೆಗೆ ಅನ್ವಯವನ್ನು ಪಡೆದಿರುವ ಪರಮ ಶಬ್ದಕ್ಕೆ ಪರಾ ಮಾ ಯಸ್ಯ ಸಃ ಎಂದು ವಿಗ್ರಹ. ಪರಾ - ಬ್ರಹ್ಮಾದ್ಯುತ್ತಮಳಾದ, ಮಾ - ಲಕ್ಷ್ಮೀದೇವಿಯೇ ಪತ್ನಿಯಾಗುಳ್ಳವನು ಎಂದು ಅರ್ಥ. ಸಾಮ್ಯಪದದೊಂದಿಗೆ ಅನ್ವಿತವಾದ

ಪರಮ ಶಬ್ದಕ್ಕೆ ಅತ್ಯಂತ ಎಂದು ಅರ್ಥ. ಚೇತನತ್ವಾದಿನಾ ಸ್ವಲ್ಪ ಸಾಮ್ಯವು ಸಂಸಾರಿಗಳಿಗೆ, ಅವರಲ್ಲೂ ತಮೋಯೋಗ್ಯರಿಗೂ ಇರುವುದು. ಆದ್ದರಿಂದಲೇ ಪರಮ ಎಂದು ಸಾಮ್ಯಕ್ಕೆ ವಿಶೇಷಣವನ್ನು ಕೊಟ್ಟಿದೆ. ನಾರಾಯಣನಿಗೆ ಸರ್ವೋತ್ತಮತ್ವವಿರುವಂತೆ ಜೀವರಿಗೆ ಸರ್ವೋತ್ತಮತ್ವವಿಲ್ಲ. ಆದ್ದರಿಂದಲೇ ಜೀವರಿಗೆ ನಾರಾಯಣನ ಪರಮಸಾಮ್ಯವು ಇರಬಹುದಷ್ಟೇ ಹೊರತು ಸರ್ವಥಾ ಸಾಮ್ಯವು ಅತ್ಯಂತ ಅಸಂಭಾವಿತವಾಗಿದೆ.

ಈ ಶ್ರುತಿಯಿಂದ ಆಚಾರ್ಯರು ಪ್ರತಿಪಾದಿಸುವ ಈ ನಾಲ್ಕು ಪ್ರಮೇಯಗಳು ಸಿದ್ಧವಾಗುತ್ತವೆ — ೧. ಮುಕ್ತಿಸಾಧನವಾದ ಭಗವದ ಪರೋಕ್ಷಜ್ಞಾನವು ಇತರರು ಹೇಳುವಂತೆ ನಿರ್ವಿಕಲ್ಪಕಜ್ಞಾನವಲ್ಲ, ಭಗವಂತನಲ್ಲಿ ಅನೇಕ ಧರ್ಮಗಳನ್ನು ಗ್ರಹಿಸುವ ಸವಿಕಲ್ಪಕಜ್ಞಾನವಾಗಿದೆ. ೨. ವಿಷ್ಣುವು ಜಗತ್ಕರ್ತೃತ್ವಾದಿ ಗುಣಭರಿತನಾಗಿದ್ದಾನೆ, ನಿರ್ಗುಣನಲ್ಲ. ೩. ಭಗವಂತನು ಸರ್ವೋತ್ತಮನಾಗಿದ್ದಾನೆ. ೪. ಮೋಕ್ಷದಲ್ಲೂ ಜೀವರಿಗೆ ಪರಮಾತ್ಮನ ಸಾಮ್ಯವೇ ಹೊರತು ಅಭೇದವಿಲ್ಲ.
|| ೬೪ ||

**ಯೋ ವೇದ ನಿಹಿತಂ ಗುಹಾಯಾಂ ಪರಮೇ ವ್ಯೋಮನ್ ।**
**ಸೋऽಶ್ನುತೆ ಸರ್ವಾನ್ ಕಾಮಾನ್ ಸಹ ಬ್ರಹ್ಮಣಾ ವಿಪಶ್ಚಿತಾ ॥ ೬೫ ॥**

**ಅರ್ಥ :- ಯಃ** ಯಾವನು, **ಗುಹಾಯಾಂ** ಹೃದಯ ಗುಹೆಯಲ್ಲಿ, **ಪರಮೇ ವ್ಯೋಮನ್** ಹೃತ್ಪದ್ಮಾಕಾಶದಲ್ಲಿ, **ನಿಹಿತಂ** ನೆಲೆಸಿರುವ ನಾರಾಯಣನನ್ನು, **ವೇದ** ತಿಳಿಯುವನೋ, **ಸಃ** ಆ ಜ್ಞಾನಿಯು ಮೋಕ್ಷಾನಂತರದಲ್ಲಿ, **ವಿಪಶ್ಚಿತಾ** ಸರ್ವಜ್ಞಾನಾದ, **ಬ್ರಹ್ಮಣಾ ಸಹ** ಪರಬ್ರಹ್ಮನೊಂದಿಗೆ, **ಸರ್ವಾನ್ ಕಾಮಾನ್** ತನಗೆ ಯೋಗ್ಯವಾದ, ತಾನು ಬಯಸಿದ ಎಲ್ಲ ವಿಷಯಗಳನ್ನೂ **ಅಶ್ನುತೇ** ಅನುಭವಿಸುವನು.

**ತಾತ್ಪರ್ಯ :-** ಸ್ಪಷ್ಟ.

**ವಿಶೇಷ ವಿಷಯ :-** ತೈತ್ತಿರೀಯೋಪನಿಷತ್ತಿನ ಈ ಶ್ರುತಿಯ ಹಿಂದಿನ ಶ್ರುತಿ—'ಬ್ರಹ್ಮವಿದಾಪ್ನೋತಿ ಪರಮ್ । ತದೇಷಾಭ್ಯುಕ್ತಾ । ಸತ್ಯಂ ಜ್ಞಾನಮನಂತಂ ಬ್ರಹ್ಮ ।' ಎಂದಿದೆ. ಈ ವಾಕ್ಯಗಳಲ್ಲಿ ಪ್ರಸ್ತುತನಾಗಿರುವವನು ಪರಬ್ರಹ್ಮನೇ ಆದುದರಿಂದ 'ಸಹ ಬ್ರಹ್ಮಣಾ ವಿಪಶ್ಚಿತಾ' ಎಂಬ ಮುಂದಿನ ಶ್ರುತಿಯಲ್ಲೂ

ಬ್ರಹ್ಮ ಪದವು ಪರಬ್ರಹ್ಮನನ್ನೇ ಹೇಳುವುದೇ ಹೊರತು ಅಪರಬ್ರಹ್ಮನನ್ನಲ್ಲ ಎಂದು ಸ್ಪಷ್ಟವಾಗುವುದು.

ಈ ಶ್ರುತಿಯಲ್ಲಿ ಬ್ರಹ್ಮಜ್ಞಾನಿಗೆ ಮೋಕ್ಷಾನಂತರ ಸಹಭೋಗವನ್ನು ಹೇಳಿದೆ. ಸಾಯುಜ್ಯರೂಪಮೋಕ್ಷದಲ್ಲಿ ಉಂಟಾಗುವ ಭೋಗಕ್ಕೆ ಸಹಭೋಗವೆಂದು ಹೆಸರು. ಈ ಮೋಕ್ಷವನ್ನು ಪಡೆದ ಜೀವನು, ಮನುಷ್ಯಶರೀರವನ್ನು ಪ್ರವೇಶಿಸಿದ ಗ್ರಹದಂತೆ, ವಿಷ್ಣುದೇಹವನ್ನು ಪ್ರವೇಶಿಸಿ ವಿಷ್ಣುವಿನ ಪಾದಗಳಿಂದಲೇ ನಡೆಯುವನು. ವಿಷ್ಣುವಿನ ಕಣ್ಣುಗಳಿಂದ ನೋಡುವನು, ವಿಷ್ಣುವಿನ ನಾಸಿಕ ದಿಂದ ಆಘ್ರಾಣಿಸುವನು, ವಿಷ್ಣುವಿನ ಜಿಹ್ವೆಯಿಂದ ರಸವನ್ನು ಆಸ್ವಾದಿಸುವನು. ಆದ್ದರಿಂದಲೇ ಈ ಬಗೆಯ ಭೋಗವನ್ನು ಸಹಭೋಗವೆನ್ನುವರು. ಇಂತಹ ಭೋಗವನ್ನು ಪಡೆಯುವ ಮುಕ್ತರು ಎಂದೂ ಲಕ್ಷ್ಮಿಯು ಅನುಭವಿಸುವ ಭೋಗವನ್ನು ಪಡೆಯಲಾರರು. ಪರಮಾತ್ಮನ ನಿರವಧಿಕವಾದ ಪರಾನಂದದ ಭೋಗವಂತೂ ಅತ್ಯಂತಾಸಂಭಾವಿತವಾದದ್ದು. ಆದ್ದರಿಂದ ಮುಕ್ತಜೀವರು ತಮಗೆ ಯೋಗ್ಯವಾದ, ಮೋಕ್ಷದ ವಿಷಯಗಳ ಭೋಗವನ್ನು ಮಾತ್ರ ಪಡೆಯುವರೆಂದು ಹೇಳಬೇಕಾಗುವುದು. ಕಾಮ್ಯಂತೇ ಇತಿ ಕಾಮಾಃ ಎಂಬ ವ್ಯುತ್ಪತ್ತಿಯನ್ನನುಸರಿಸಿ ಕಾಮಪದವೂ ಮುಕ್ತಜೀವರ ಕಾಮನೆಗೆ ಯೋಗ್ಯವಾದ ವಿಷಯಗಳನ್ನೇ ಹೇಳುವುದು. ಈ ಶ್ರುತಿಯಲ್ಲಿ 'ಬ್ರಹ್ಮಣಾ ಸಹ' - ಪರಬ್ರಹ್ಮ ನೊಂದಿಗೆ ಎಂದು ಹೇಳಿರುವುದರಿಂದ ಮೋಕ್ಷದಲ್ಲಿ ಅಭೇದವಿಲ್ಲವೆನ್ನುವುದು ಸ್ಪಷ್ಟವಾಗುವುದು.

ಜೀವರ ಯೋಗ್ಯತಾತಾರತಮ್ಯವನ್ನನುಸರಿಸಿ ಅಪರೋಕ್ಷಜ್ಞಾನದಲ್ಲಿ ವೈಷಮ್ಯ ವಿರುವುವೆಂದು — 'ವಿದ್ಯುದ್ವನ್ಮಾನುಷಾ ವಿದ್ಯುಃ ಸೂರ್ಯಮಂಡಲ ವತ್ಸುರಾಃ । ಪ್ರತಿಬಿಂಬವಚ್ಚ ಗಿರಿಶೋ ಬ್ರಹ್ಮೈನಂ ಪಶ್ಯತಿ ಸ್ಫುಟಂ ॥ ಎಂದು ಹರಿವಂಶದ ವಚನದಿಂದ ತಿಳಿಯುವುದು. ಅದರಂತೆ, ಮನುಷ್ಯರು ಅಪರೋಕ್ಷಜ್ಞಾನವಾದಾಗ ಭಗವಂತನನ್ನು ಮಿಂಚನ್ನು ನೋಡುವಂತೆ ನೋಡುವರು. ದೇವತೆಗಳು ಸೂರ್ಯಮಂಡಲದಂತೆ ನೋಡುವರು. ರುದ್ರನು ಪ್ರತಿಬಿಂಬದಂತೆ ಭಗವಂತನನ್ನು ನೋಡುವನು. ಚತುರ್ಮುಖನು ಸ್ಫುಟವಾಗಿ ನೋಡುವನು. ॥ ೬೫ ॥

ಭಗವಂತನ ಜಗತ್ಸ್ರಷ್ಟೃತ್ವ, ಜಗತ್ಪಾಲಕತ್ವ ಮೊದಲಾದ ಕರ್ಮಗಳು, ಅವನ ಕರಚರಣಾದ್ಯಾಕಾರವು ಮತ್ತು ಸರ್ವಜ್ಞತ್ವಾದಿಗುಣಗಳು ಮತ್ತು ಪ್ರಮಾಣ-ಪ್ರಮೇಯ ರೂಪವಾದ ಈ ಜಗತ್ತು — ಇವೆಲ್ಲವೂ ಭಗವತ್ಸ್ವರೂಪದಷ್ಟೇ ಪಾರಮಾರ್ಥಿಕ ಸತ್ಯವೆಂದು ಪ್ರತಿಪಾದಿಸುವ ಶ್ರುತಿಗಳನ್ನು ಮುಂದಿನ ಶ್ಲೋಕಗಳಲ್ಲಿ ಸಂಗ್ರಹಿಸಲಾಗಿದೆ —

**ಪ್ರಘಾನ್ವಸ್ಯ ಮಹತೋ ಮಹಾನಿ ಸತ್ಯಾಸತ್ಯಸ್ಯ ಕರಣಾನಿ ವೋಚಂ ।**
**ಸತ್ಯಮೇನಮನು ವಿಶ್ವೇ ಮದಂತಿ ರಾತಿಂ ದೇವಸ್ಯ ಗೃಣತೋ ಮಘೋನಃ**
**॥ ೬೬ ॥**

**ಅರ್ಥ** :- ಸತ್ಯಸ್ಯ ಪಾರಮಾರ್ಥಿಕಸತ್ಯನಾದ, **ಮಹತಃ** ಸರ್ವೋತ್ತಮನಾದ ಶ್ರೀಹರಿಯ, **ಮಹಾನಿ** ಮಹತ್ತಾಗಿರುವ, **ಕರಣಾನಿ** ಜಗತ್ಸ್ರಷ್ಟೃತ್ವ, ಪಾಲಕತ್ವ ಮೊದಲಾದ ಕರ್ಮಗಳು, (ಅಥವಾ ಜಗತ್ತಿನ ಸೃಷ್ಟಿಗೆ ಉಪಯುಕ್ತವಾದ ಚಕ್ಷುಸ್ಸು, ಹಸ್ತ ಮೊದಲಾದ ದಶೇಂದ್ರಿಯಗಳು, ಅಥವಾ ಸರ್ವಜ್ಞತ್ವ, ಸರ್ವೇಶ್ವರತ್ವಾದಿ ಭಗವಲ್ಲಕ್ಷಣಗಳು, ಅಥವಾ ಈ ಜಗತ್ತಿನ ಸೃಷ್ಟಿಗೆ ಆವಶ್ಯಕಗಳಾದ ಮೃತ್, ಜಲ ಮೊದಲಾದ ಉಪಾದಾನ ಕಾರಣಗಳು), **ಸತ್ಯಾ ಘಾ** ಪಾರಮಾರ್ಥಿಕಸತ್ಯಗಳೇ ಆಗಿವೆಯೆಂದು, **ಪ್ರ ವೋಚಂ ನು** ನಿಶ್ಚಿತವಾಗಿ ಹೇಳಿರುವೆನು. **ಗೃಣತಃ** ಸ್ತೋತ್ರವನ್ನು ಮಾಡುವ, **ದೇವಸ್ಯ** ದೇವನಾದ, **ಮಘೋನಃ** ಇಂದ್ರನಿಗೆ, **ರಾತಿಂ** ಬಲಿಯನ್ನು ಸೋಲಿಸಿ ಕೊಟ್ಟ ತ್ರೈಲೋಕ್ಯದಾನವನ್ನು, **ವಿಶ್ವೇ** ಎಲ್ಲ ದೇವತೆಗಳು, **ಏನಂ ಅನು** ದಾನವನ್ನು ಮಾಡಿರುವ ಭಗವಂತನನ್ನು ಅನುಸರಿಸಿ, **ಸತ್ಯಂ** ಪಾರಮಾರ್ಥಿಕಸತ್ಯವೆಂದು, **ಮದಂತಿ** ಸಂತೋಷಿಸುತ್ತಾರೆ.

**ತಾತ್ಪರ್ಯ** :- ಪಾರಮಾರ್ಥಿಕಸತ್ಯನಾದ ಭಗವಂತನು ಸರ್ವೋತ್ತಮನಾಗಿದ್ದಾನೆ. ಇಂತಹ ಭಗವಂತನು ಮಾಡುವ ಜಗತ್ತಿನ ಸೃಷ್ಟಿ ಪಾಲನೆ, ಸಂಹಾರ ಮೊದಲಾದ ಕಾರ್ಯಗಳು ಮಹಾಕಾರ್ಯಗಳಾಗಿವೆ. ಇವೆಲ್ಲವೂ ಪಾರಮಾರ್ಥಿಕ ಸತ್ಯಗಳೇ ಆಗಿವೆಯೆಂದು ನಿಶ್ಚಯವಾಗಿ ಹೇಳಿದ್ದೇನೆ. ಹಾಗೆಯೇ ಈ ಜಗತ್ತನ್ನು ಸೃಷ್ಟಿಸಲು ಆವಶ್ಯಕವಾದ ಭಗವಂತನ ಚಕ್ಷುರಾದಿ ದಶೇಂದ್ರಿಯಗಳು, ಸರ್ವಜ್ಞತ್ವಾದಿ ಧರ್ಮಗಳು, ಮೃದಾದಿ ಉಪಾದಾನ ಕಾರಣಗಳು — ಇವೆಲ್ಲವೂ ಪಾರಮಾರ್ಥಿಕಸತ್ಯವೆಂದು ನಿಶ್ಚಯವಾಗಿ ಹೇಳಿರುವೆನು.

ಬಲಿಯಿಂದ ಪರಾಜಿತನಾಗಿ ಶರಣಾಗತನಾದ, ಭಗವಂತನನ್ನು ಸ್ತುತಿಸುವ ಇಂದ್ರದೇವನಿಗೆ ಭಗವಂತನು ಬಲಿಯನ್ನು ಜಯಿಸಿ ತ್ರೈಲೋಕ್ಯವನ್ನು ದಾನ ಮಾಡಿದ್ದಾನೆ. ಭಗವಂತನು ಮಾಡಿರುವ ಈ ತ್ರೈಲೋಕ್ಯದಾನವನ್ನು ಭಗವಂತನಂತೆ ಎಲ್ಲ ದೇವತೆಗಳೂ ಪಾರಮಾರ್ಥಿಕಸತ್ಯವೆಂದೇ ಗ್ರಹಿಸಿ ಸಂತೋಷಪಟ್ಟಿದ್ದಾರೆ.

**ವಿಶೇಷ ವಿಷಯ :-** ಅದ್ವೈತಮತದಲ್ಲಿ ಬ್ರಹ್ಮನನ್ನು ಅಂಗೀಕರಿಸಿದ್ದರೂ, ಆ ಬ್ರಹ್ಮನು ಮಾಡುವ ಜಗತ್ತಿನ ಸೃಷ್ಟಿ ಪಾಲನೆ ಮೊದಲಾದ ಯಾವ ಕರ್ಮಗಳನ್ನೂ ಸತ್ಯವೆಂದೊಪ್ಪಿಲ್ಲ. ಅವನು ಸೃಷ್ಟಿಸಿದ ಜಗತ್ತೆಲ್ಲವೂ ಮಿಥ್ಯೆಯೆಂದೇ ಹೇಳುವರು. ಪ್ರತ್ಯಕ್ಷಾದಿ ಪ್ರಮಾಣಸಿದ್ಧವಾದ ಜಗತ್ಸತ್ಯತ್ವವನ್ನು ವ್ಯಾವಹಾರಿಕವೇ ಹೊರತು ಪಾರಮಾರ್ಥಿಕವಲ್ಲವೆನ್ನುವರು. ಹೀಗೆ ಸ್ವಕಪೋಲಕಲ್ಪಿತವಾದ ವ್ಯಾವಹಾರಿಕ ಸತ್ಯತ್ವದಿಂದ ಜಗತ್ತಿನ ಎಲ್ಲ ವ್ಯವಹಾರಗಳ ನಿರ್ವಾಹವಾಗುವುದೆಂದು ಹೇಳುವ ಮೂಲಕ ಎಲ್ಲರನ್ನೂ ವಂಚಿಸುವ ಅದ್ವೈತಮತವನ್ನು ಖಂಡಿಸಲು ಆಚಾರ್ಯರು ಈ ಕೆಲವು ಶ್ಲೋಕಗಳಲ್ಲಿ, ಭಗವಂತನ ಗುಣ, ಕ್ರಿಯೆ ಮೊದಲಾದವುಗಳನ್ನು ಭಗವಂತನಷ್ಟೇ ಪಾರಮಾರ್ಥಿಕಸತ್ಯವೆಂದು ಪ್ರತಿಪಾದಿಸುವ ಶ್ರುತಿಗಳನ್ನು ಸಂಗ್ರಹಿಸಿದ್ದಾರೆ.

ಕರಣಾನಿ — ಕೃಧಾತುವಿಗೆ ಭಾವಾರ್ಥದಲ್ಲಿ ಲ್ಯುಟ್ ಪ್ರತ್ಯಯವನ್ನು ಸೇರಿಸಿದಾಗ ನಿಷ್ಪನ್ನವಾಗುವ ಕರಣಶಬ್ದಕ್ಕೆ ಕ್ರಿಯೆಗಳೆಂದು ಅರ್ಥ. ಪ್ರಕೃತ, ಭಗವಂತನ ಜಗತ್ಸೃಷ್ಟ್ಯಾದಿ ಕ್ರಿಯೆಗಳು ವಿವಕ್ಷಿತವಾಗಿವೆ. ಭಾವವೆಂದರೆ ಕರ್ಮ, ಕರಣ ಮೊದಲಾದವುಗಳಿಂದ ಭಿನ್ನವಾದ, ಧಾತುಸ್ವಭಾವದಿಂದಲೇ ಲಭಿಸುವ ಅರ್ಥ. ಹೀಗೆ ಪರನಿರಪೇಕ್ಷವಾಗಿ, ಧಾತುಸ್ವಭಾವದಿಂದಲೇ ಸಿದ್ಧಿಸುವ ಅರ್ಥವನ್ನು ಹೇಳುವ 'ಕರಣ' ಶಬ್ದವನ್ನು ಉಪಯೋಗಿಸುವ ಮೂಲಕ ಶ್ರುತಿಯು ಭಗವಂತನ ಕರ್ಮಗಳೂ ಸ್ವಾಭಾವಿಕವಾಗಿ ಸರ್ವಕಾಲದಲ್ಲೂ ಇರುವವು. ಅವುಗಳ ಅಭಾವವೆಂದೂ ಇಲ್ಲ. ಅರ್ಥಾತ್ ಭಗವಂತನ ಕರ್ಮಗಳು ತ್ರೈಕಾಲಿಕನಿಷೇಧಕ್ಕೆ ಪ್ರತಿಯೋಗಿಯಾಗದಿರುವ ಕಾರಣ ತ್ರೈಕಾಲಿಕ ನಿಷೇಧಾಪ್ರತಿಯೋಗಿತ್ವರೂಪವಾದ ಪಾರಮಾರ್ಥಿಕಸತ್ಯತ್ವವನ್ನು ಪಡೆದಿವೆಯೆಂದು ಶ್ರುತಿಯು ಸೂಚಿಸುತ್ತಿದೆ. 'ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ' ಎಂಬ ಮತ್ತೊಂದು ಶ್ರುತಿಯೂ ಇದೇ ಭಾವವನ್ನು ವ್ಯಕ್ತಗೊಳಿಸುತ್ತಿದೆ. ಆದ್ದರಿಂದ ಅದ್ವೈತಮತವು ಪ್ರತಿಪಾದಿಸುವ ಮಿಥ್ಯಾತ್ವವಾಗಲಿ, ವ್ಯಾವಹಾರಿಕ ಸತ್ಯತೆಯಾಗಲಿ ಸರ್ವಥಾ ಅಪ್ರಮಾಣಿಕವೆಂದು ಭಾವ.

ಕರಣಶಬ್ದಕ್ಕೆ ಇಂದ್ರಿಯಗಳೆಂಬ ಅರ್ಥವೂ ಇದೆ. ಪ್ರಕೃತ ಶ್ರುತಿಯು ಜಗತ್ತಿನ ಸೃಷ್ಟ್ಯಾದಿಗಳಿಗೆ ಉಪಯುಕ್ತವಾದ ಭಗವಂತನ ಚಕ್ಷುರಾದಿ ದಶೇಂದ್ರಿಯಗಳು ಪಾರಮಾರ್ಥಿಕಸತ್ಯವೆಂದು ಹೇಳುತ್ತದೆ. ಕೈಯಿಲ್ಲದ, ಕಾಲಿಲ್ಲದ, ಕುರುಡನಾದ ಆ ಬ್ರಹ್ಮ ಇಂತಹ ಬೃಹತ್ತಾದ ಭೂಮಿ, ಪರ್ವತ ಮೊದಲಾದವುಗಳನ್ನು ಹೇಗೆ ತಾನೆ ಸೃಷ್ಟಿಸಬಲ್ಲ? ಆದ್ದರಿಂದ ಸಾರ್ವಕಾಲಿಕ ವಾದ ಭಗವಂತನ ಸೃಷ್ಟ್ಯಾದಿಕರ್ಮಗಳಿಗೆ ಉಪಯುಕ್ತವಾದ ಅವನ ಇಂದ್ರಿಯ ಗಳೂ ಸಾರ್ವಕಾಲಿಕವೆಂದು ಸಿದ್ಧವಾಗುವುದು. ಹೀಗೆ ಸಾರ್ವಕಾಲಿಕವಾಗಿ ಇರುವುದೇ ಪಾರಮಾರ್ಥಿಕಸತ್ಯತ್ವವಾದ್ದರಿಂದ ಭಗವಂತನ ಇಂದ್ರಿಯಗಳು ಪಾರಮಾರ್ಥಿಕಸತ್ಯವೆಂದೇ ಸಿದ್ಧವಾಗುತ್ತವೆ.

ಅಲ್ಲದೆ, 'ಬ್ರಾಹ್ಮಣೋಽಸ್ಯ ಮುಖಮಾಸೀತ್ ಬಾಹೂ ರಾಜನ್ಯಃ ಕೃತಃ । ಊರೂ ತದಸ್ಯ ಯದ್ವೈಶ್ಯಃ । ಪದ್ಭ್ಯಾಂ ಶೂದ್ರೋ ಅಜಾಯತ, ಚಂದ್ರಮಾ ಮನಸೋ ಜಾತಶ್ಚಕ್ಷೋಃ ಸೂರ್ಯೋ ಅಜಾಯತ । ಮುಖಾದಿಂದ್ರಶ್ಚಾಗ್ನಿಶ್ಚ ಪ್ರಾಣಾದ್ವಾಯುರಜಾಯತ । ನಾಭ್ಯಾ ಆಸೀದಂತರಿಕ್ಷಂ ಶೀರ್ಷ್ಣೋ ದ್ಯೌಃ ಸಮ ವರ್ತತ । ಪದ್ಭ್ಯಾಂ ಭೂಮಿರ್ದಿಶಃ ಶ್ರೋತ್ರಾತ್ತಥಾ ಲೋಕಾನ್ । ಎಂಬ ಪುರುಷ ಸೂಕ್ತದ ಮಂತ್ರವು ಪರಮಾತ್ಮನಿಗೆ ಸಾರ್ವಕಾಲಿಕವಾದ ಬ್ರಾಹ್ಮಣಾದಿಸೃಷ್ಟಿಕರ್ತೃತ್ವವನ್ನು ಹೇಳುತ್ತಿದೆ. ಭಗವಂತನಿಗೆ ಸಾರ್ವಕಾಲಿಕವಾದ ಮುಖಾದಿ ಅವಯವಗಳು, ಚಕ್ಷುರಾದಿ ಇಂದ್ರಿಯಗಳು ಇಲ್ಲದಿರುವುದಾದಲ್ಲಿ ಇಂತಹ ಸೃಷ್ಟಿಕರ್ತೃತ್ವವನ್ನು ಅಂಗೀಕರಿಸಲು ಹೇಗೆ ಸಾಧ್ಯ? ಆದ್ದರಿಂದ, ಬ್ರಾಹ್ಮಣ, ಕ್ಷತ್ರಿಯ ಮೊದಲಾದವರಿಗೆ ಅಸಾಧಾರಣ ಕಾರಣವಾಗುವ ಮೂಲಕ ಕರಣವೆಂದೆನಿಸುವ ಮುಖಾದಿ ಅವಯವಗಳು ಮತ್ತು ಸೂರ್ಯ, ಚಂದ್ರ ಮೊದಲಾದವರಿಗೆ ಅಸಾಧಾರಣ ಕಾರಣವಾದ್ದರಿಂದ ಕರಣವೆಂದೆನಿಸುವ ಭಗವಂತನ ಚಕ್ಷುರಾದಿ ಇಂದ್ರಿಗಳು ಪಾರಮಾರ್ಥಿಕಸತ್ಯವೆಂದು ಸಿದ್ಧವಾಗುತ್ತದೆ.

ಅಥವಾ 'ಪ್ರಘಾ ನ್ವಸ್ಯ' ಇತ್ಯಾದಿ ಶ್ರುತಿಯಲ್ಲಿರುವ ಕರಣ ಪದಕ್ಕೆ ಭಗವಂತನ ಸರ್ವಜ್ಞತ್ವ, ಸರ್ವೇಶ್ವರತ್ವ, ಸರ್ವಶಕ್ತತ್ವಾದಿ ಲಕ್ಷಣಗಳೆಂದು ಅರ್ಥ. ಪೃಥಿವೀ, ಜಲ, ತೇಜಸ್ಸು ವಾಯು ಮೊದಲಾದ ಮಹತ್ತರವೂ ವಿಜಾತೀಯಗಳೂ ಆದ ನಾನಾ ವಿಧವಾದ ಕಾರ್ಯಗಳ ಕರ್ತೃತ್ವವೇ ಜಗತ್ಕರ್ತೃತ್ವವಾಗಿದೆ. ಇಂತಹ ಜಗತ್ಕರ್ತೃತ್ವ ಜೀವದಲ್ಲಂತೂ ಸರ್ವಥಾ

ಅಸಂಭಾವಿತವಾದದ್ದು. ಇಂತಹ ಜಗತ್ಕರ್ತೃತ್ವಕ್ಕೆ ಅಸಾಧಾರಣಕಾರಣವಾದದ್ದು ಸರ್ವಜ್ಞತ್ವ, ಸರ್ವೇಶ್ವರತ್ವಾದಿಗಳು. ಆದ್ದರಿಂದಲೇ ಆ ಭಗವದ್ಧರ್ಮಗಳು ಕರಣವೆಂದೆನಿಸುತ್ತದೆ. ಸರ್ವಜ್ಞತ್ವಾದಿ ಈ ಭಗವದ್ಗುಣಗಳು ಜಗತ್ಕರ್ತೃತ್ವಕ್ಕೆ ಅಸಾಧಾರಣಕಾರಣವೆಂದು ಅಂಗೀಕರಿಸುವುದು ಅತ್ಯಾವಶ್ಯಕವಾಗಿದೆ. ಪೃಥಿವೀ, ಜಲ ಮೊದಲಾದ ವಿಜಾತೀಯವಾದ ಕಾರ್ಯಗಳಿಗೆ ಉಪಾದಾನಕಾರಣವಾದ ವಿಜಾತೀಯಗಳಾದ ಅನಂತ ಪರಮಾಣುಗಳ ಅಪರೋಕ್ಷಜ್ಞಾನವಿಲ್ಲದೆ ಇಂತಹ ಜಗತ್ಕರ್ತೃತ್ವವಿರಲು ಸಾಧ್ಯವೇ ಇಲ್ಲ. ಅನಂತ ಪರಮಾಣುಗಳ ಅಪರೋಕ್ಷ ಜ್ಞಾನವಾದರೂ ಸರ್ವಜ್ಞತ್ವವಿಲ್ಲದಿದ್ದರೆ ಇರಲಾರದ. ಆದ್ದರಿಂದ ಭಗವಂತನಿಗೆ ಸರ್ವಜ್ಞತ್ವವು ಸಿದ್ಧವಾಗುವುದು. ಈಶ್ವರರಲ್ಲದ ಜೀವರಲ್ಲಿ ಇಲ್ಲದಿರುವ ಜಗತ್ಕರ್ತೃತ್ವ ಭಗವಂತನಲ್ಲಿ ಇರುವುದರಿಂದಲೇ ಭಗವಂತನು ಸರ್ವೇಶ್ವರನೆಂದು ಸಿದ್ಧವಾಗುವುದು. ಈ ಕಾರಣದಿಂದಲೇ ಭಗವಂತನು ಸರ್ವಶಕ್ತನೆಂದೂ ಒಪ್ಪಬೇಕಾಗುವುದು. ಪೃಥಿವ್ಯಾದಿ ನಾನಾ ಕಾರ್ಯಗಳ ಉಪಾದಾನಕಾರಣವಾದ ಅನಂತಪರಮಾಣುಗಳ ಅಪರೋಕ್ಷ ಜ್ಞಾನವಿಲ್ಲದಿದ್ದರೂ ಭಗವಂತ ಜಗತ್ತನ್ನು ಸೃಷ್ಟಿಸಬಾರದೇಕೆ ಎಂಬ ಶಂಕೆಯಂತೂ ಅತ್ಯಂತ ಅಸಂಬದ್ಧವಾಗಿದೆ. ಘಟಕ್ಕೆ ಉಪಾದಾನಕಾರಣವಾದ ಮೃತ್ತಿಕೆಯ ಅಪರೋಕ್ಷ ಜ್ಞಾನವಿಲ್ಲದೆ ಕುಂಬಾರನು ಘಟಾದಿಗಳನ್ನು ನಿರ್ಮಿಸಲು ಸಾಧ್ಯವಿಲ್ಲವಷ್ಟೆ ಹಾಗೆಯೇ, ಜಗತ್ಕರ್ತೃತ್ವದಿಂದ ಭಗವಂತನ ಸರ್ವೋತ್ತಮತ್ವವೂ ಸಿದ್ಧವಾಗುವುದು. ಲೋಕದಲ್ಲಿ ಪ್ರಾಸಾದ ನಿರ್ಮಾತೃಗಳಲ್ಲಿ ಉತ್ತಮನಾದವನು ಮಾತ್ರ ಭವ್ಯ ಪ್ರಾಸಾದ ನಿರ್ಮಾತೃ ವಾಗಬಲ್ಲನೆಂದು ಸ್ಪಷ್ಟವಾಗಿದೆ. ಆದ್ದರಿಂದ ಕರ್ತೃಗಳಲ್ಲಿ ಉತ್ತಮನೆಂದು ಒಪ್ಪಿದರೆ ಮಾತ್ರ ಭಗವಂತನಿಗೆ ಜಗತ್ಕರ್ತೃತ್ವವಿರಲು ಸಾಧ್ಯ. ಹೀಗೆ ಸಾರ್ವಕಾಲಿಕವಾದ ಜಗತ್ಸೃಷ್ಟ್ಯಾದಿಗಳಿಗೆ ಕಾರಣವಾಗಿರುವ ಸರ್ವಜ್ಞತ್ವಾದಿಗಳೂ ಸಾರ್ವಕಾಲಿಕವಾದ್ದರಿಂದ ತ್ರಿಕಾಲಾಬಾಧ್ಯವೆಂದೂ ಅರ್ಥಾತ್ ಪಾರಮಾರ್ಥಿಕಸತ್ಯವೆಂದು ಸಿದ್ಧವಾಗುತ್ತದೆ.

ಅಂತೆಯೇ, ಭಗವಂತನು ಮಾಡುವ ಈ ಭೂಮಿ, ಪರ್ವತ, ಮಹಾಸಾಗರ ಮೊದಲಾದವುಗಳ ಸೃಷ್ಟಿಗೆ ಮೃದಾದಿ ಉಪಾದಾನ ಕಾರಣಗಳು ಅತ್ಯಾವಶ್ಯಕವಾಗಿದೆ. ಆದ್ದರಿಂದಲೇ, ಆ ಉಪಾದಾನಕಾರಣಗಳು ಸೃಷ್ಟಿಗೆ ಕರಣವೆಂದೆನಿಸುತ್ತವೆ. ಅನಾದ್ಯ ನಂತಂಜಗದೇತದೀದೃಕ್ ಎಂಬ ಶ್ರುತಿಯಲ್ಲಿ ಹೇಳಿರುವಂತೆ ಅನಾದ್ಯನಂತಕಾಲಗಳಲ್ಲಿ ಈ ಜಗತ್ತಿನ ಸೃಷ್ಟಿ ನಡೆಯುತ್ತಿರುವುದರಿಂದ, ಈ

ಸೃಷ್ಟಿಗೆ ಕರಣವಾಗಿರುವ ಮೃದಾದ್ಯು ಪಾದಾನಕಾರಣಗಳೂ ಅನಾದ್ಯನಂತ ಕಾಲದಲ್ಲಿದ್ದು ಪಾರಮಾರ್ಥಿಕ ಸತ್ಯವಾಗಿವೆ ಎಂದು ಸಿದ್ಧವಾಗುತ್ತದೆ.

ಘಾ-ಘ ಎಂಬ ಹ್ರಸ್ವಘಕಾರಕ್ಕೆ ಏವ ಎಂಬ ಅರ್ಥವಿದೆ. ಭಗವಂತನ ಕರ್ಮಾದಿಗಳ ಸತ್ಯತ್ವನಿಶ್ಚಯವು ಬಹು ದೀರ್ಘಕಾಲೀನವಾದದ್ದು ಎಂದು ಸೂಚಿಸಲು ಶ್ರುತಿಯು 'ಘಾ' ಎಂಬ ದೀರ್ಘವನ್ನು ಪ್ರಯೋಗಿಸಿದೆ ಎಂದು ಶ್ರೀ ವಾದಿರಾಜರು ನಿರೂಪಿಸಿದ್ದಾರೆ. ಅಲ್ಲದೆ, ಏವಕಾರವು ವಿಶೇಷಣವಾಚಕಪದ ದೊಂದಿಗೆ ಸೇರಿದಾಗ ಅಯೋಗವ್ಯವಚ್ಛೇದವನ್ನು ಸೂಚಿಸುವುದು. 'ಶಂಖಃ ಪಾಂಡುರ ಏವ' ಎಂಬ ವಾಕ್ಯ ಇದಕ್ಕೆ ಉದಾಹರಣೆ. 'ಪಾಂಡುರ' ಎಂಬ ವಿಶೇಷಣಪದದ ಅನ್ವಯವನ್ನು ಪಡೆದಿರುವ ಏವಕಾರವು ಶಂಖವು ಬಿಳಿ ಬಣ್ಣದ ಸಂಬಂಧವಿಲ್ಲದೆ ಎಂದೂ ಇರಲಾರದು ಎಂಬ ಅರ್ಥವನ್ನು ತಿಳಿಸುವುದು. ಪ್ರಕೃತ ಶ್ರುತಿಯಲ್ಲಿ ಏವಾರ್ಥಕವಾದ ಘಶಬ್ದವು 'ಸತ್ಯಾ' ಎಂಬ ವಿಶೇಷಣಪದದ ಜೊತೆಗೆ ಅನ್ವಯವನ್ನು ಪಡೆದಿರುವುದರಿಂದ ಭಗವಂತನ ಕರ್ಮಾದಿಗಳು ಎಂದೂ ಅಸತ್ಯವಲ್ಲ ಎಂಬ ಅರ್ಥವನ್ನು ತಿಳಿಸುವುದರಿಂದ ಈ ಶ್ರುತಿಯು ಪಾರಮಾರ್ಥಿಕಸತ್ಯತ್ವವನ್ನೇ ತಿಳಿಸುವುದೆಂದು ಸಿದ್ಧವಾಗುತ್ತದೆ.

**ಸತ್ಯಾ** :- 'ಸತ್ಯಾನಿ' ಎಂದು ಈ ಪದದ ರೂಪವಿರಬೇಕಾಗಿತ್ತು. ಆದರೆ 'ಸುಪಾಂ ಸುಲುಕ್' ಇತ್ಯಾದಿ ಪಾಣಿನಿಸೂತ್ರದ ಪ್ರಕಾರ ವಿಭಕ್ತಿಪ್ರತ್ಯಯ ಲೋಪವಾದಾಗ ಸತ್ಯಾ ಎಂಬ ರೂಪವುಂಟಾಗುವುದು. ವಿಭಕ್ತಿ ಲೋಪ ವಾಗಿರುವ ಸತ್ಯಪದವನ್ನು ಪ್ರಯೋಗಿಸುವ ಮೂಲಕ ಶ್ರುತಿಯು ಸತ್ಯತ್ವದ ವಿಭಕ್ತಿ ಎಂದರೆ ವಿಭಾಗವು ಭಗವಂತನ ಕರ್ಮಾದಿಗಳಿಗೆ ಎಂದೂ ಇಲ್ಲವೆಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಿದೆ ಎಂದು ಶ್ರೀವಾದಿರಾಜರು ಸ್ವಾರಸ್ಯವಾಗಿ ಶ್ರುತಿಭಾವವನ್ನು ವರ್ಣಿಸಿದ್ದಾರೆ.

ಪ್ರವೋಚಂ — ಪ್ರಾವೋಚಂ ಎಂಬ ಕ್ರಿಯಾಪದದ ವೈದಿಕರೂಪ 'ಪ್ರವೋಚಂ' ಎಂದಾಗಿದೆ. 'ಅವೋಚಂ' ಎಂಬ ಕ್ರಿಯಾಪದದಿಂದಲೇ 'ನುಡಿದಿ ದ್ದೇನೆ' ಎಂಬ ಅರ್ಥವು ದೊರಕುವುದು. ಆದರೆ 'ಪ್ರ' ಎಂಬ ಉಪಸರ್ಗದ ಬಲದಿಂದ ಆ ನುಡಿಯು ಪ್ರಕೃಷ್ಟವಾದುದೆಂದು ತಿಳಿಯುವುದು. ನುಡಿಯಲ್ಲಿ ಪ್ರಕರ್ಷವೆಂದರೆ ತತ್ತ್ವಾವೇದಕತ್ವರೂಪವಾದ ಪ್ರಾಮಾಣ್ಯವನ್ನು ಹೊಂದಿರುವಿಕೆ. ತತ್ತ್ವಾವೇದಕತ್ವವೆಂದರೆ ಯಥಾರ್ಥವನ್ನು ತಿಳಿಸುವಿಕೆ. ತತ್ತ್ವಾವೇದಕವಾದ

ವೇದವಾಕ್ಯಗಳನ್ನು ಮಹಾವಾಕ್ಯಗಳೆಂದು ಪರಿಗಣಿಸುವ ಪರಮತವೂ ಕೂಡ ವಾಕ್ಯದಲ್ಲಿ ಪ್ರಕರ್ಷವೆಂದರೆ ತತ್ತ್ವಾವೇದಕತ್ವವೆಂದು ಒಪ್ಪಿದೆ. ಪ್ರಕೃತ ಭಗವಂತನ ಕರ್ಮಾದಿಗಳ ಸತ್ಯತೆಯನ್ನು ಹೇಳುವ ವಚನವು ತತ್ತ್ವಾವೇದಕತ್ವ ರೂಪವಾದ ಪ್ರಕರ್ಷವನ್ನು ಪಡೆದಿದೆ ಎಂದು ಸೂಚಿಸುವ ಮೂಲಕ 'ಪ್ರ' ಎಂಬ ಉಪಸರ್ಗವು ಆ ಸತ್ಯತ್ವವು ಪಾರಮಾರ್ಥಿಕಸತ್ಯವೆಂದು ತಿಳಿಸುತ್ತಿದೆ.

ಅಲ್ಲದೆ, ಕುತ್ಸಿತವಾದಿಗಳು 'ನೇಹ ನಾನಾಸ್ತಿ ಕಿಂಚನ' ಮೊದಲಾದ ನೂರಾರು ವಾಕ್ಯಗಳನ್ನು ಉದಾಹರಿಸಿ ಜಗತ್ತು ಸತ್ಯವಲ್ಲ ಎಂದು ವಾದಿಸಿದರೂ 'ಪ್ರಾವೂ ಚ ಮೇವ' ಅಂದರೆ 'ಜಗತ್ತು ಸತ್ಯವೆಂದು ನಾನು ನಿಶ್ಚಯವಾಗಿ ಹೇಳುವೆನು' ಎಂದು ಘೋಷಿಸುವ ಶ್ರುತಿಯು, ಜಗತ್ತು ಮಿಥ್ಯೆಯೆಂದು ಹೇಳಲು ಪರರು ಉದಾಹರಿಸುವ ಶ್ರುತಿಗಳೆಲ್ಲವೂ ಸಾವಕಾಶವೆಂದೂ, ಆದ್ದರಿಂದಲೇ ಆ ವಾಕ್ಯಗಳೆಲ್ಲವೂ ದುರ್ಬಲವೆಂದೂ, ತಾನು ನಿರವಕಾಶ ವಾದ್ದರಿಂದ ಪ್ರಬಲವೆಂದೂ ಸೂಚಿಸುತ್ತದೆ. ಹೀಗೆ ಸೂಚಿಸುವ ಮೂಲಕ ತಾನು ಪ್ರತಿಪಾದಿಸುವ ಜಗತ್ತಿನ ಸತ್ಯತ್ವವು ಪಾರಮಾರ್ಥಿಕ ಸತ್ಯತ್ವವೆಂದು ದೃಢಪಡಿಸುತ್ತಿದೆ.

ಅಥವಾ, 'ಪ್ರಘಾ ನು ಅಸ್ಯ ಮಹತೋ' ಎಂಬ ಶ್ರುತಿಯಲ್ಲಿರುವ 'ನು' ಶಬ್ದವು 'ಪ್ರಸಿದ್ಧಿ' ಎಂಬ ಅರ್ಥವನ್ನು ಪಡೆದಿದೆ. ಭಗವಂತನ ಗುಣ - ಕರ್ಮಾದಿಗಳು, ಈ ಜಗತ್ತು - ಇದೆಲ್ಲವೂ ಸತ್ಯವೆಂದು ಸಮಸ್ತ ಲೋಕಗಳ ಪ್ರಸಿದ್ಧಿಯನ್ನನುಸರಿಸಿ ಹೇಳುತ್ತಿದ್ದೇನೆ ಹೊರತು ಕುಶಾಸ್ತ್ರಗಳನ್ನನುಸರಿಸುವವರು ಕೇವಲ ತಮ್ಮ ಕಲ್ಪನೆಯ ಬಲದಿಂದ ಹೇಳುವಂತೆ ಅಲ್ಲ ಎಂದು 'ನು' ಶಬ್ದದ ಮೂಲಕ ಶ್ರುತಿ ಸೂಚಿಸುತ್ತಿದೆ. ಆದ್ದರಿಂದಲೂ, ಈ ಶ್ರುತಿ ಹೇಳುವ ಸತ್ಯತ್ವ ಪಾರಮಾರ್ಥಿಕ ಸತ್ಯತ್ವವೆಂದೇ ಸಿದ್ಧವಾಗುವುದು.

ಅಥವಾ 'ನು' ಶಬ್ದವು 'ನನು' ಶಬ್ದದ ಅರ್ಥವನ್ನೂ ಹೇಳಬಲ್ಲದು. ಪದಗಳಲ್ಲಿ ಅಕ್ಷರಸಾಮ್ಯವಿದ್ದರೂ ಸಾಕು, ಅವುಗಳು ಸಮಾನಾರ್ಥಕವೆಂದು ಹೇಳಬಹುದೆಂದು 'ಅಪ್ಯಕ್ಷರಸಾಮ್ಯಾತ್ ನಿರ್ಬ್ರೂಯಾತ್' ಎಂಬ ಶ್ರುತಿಯು ಹೇಳುವುದು. ಆದ್ದರಿಂದ ಅಕ್ಷರಸಾಮ್ಯವಿರುವ 'ನು' ಮತ್ತು 'ನನು' ಶಬ್ದಗಳು ಸಮಾನಾರ್ಥಕವೆಂದು ಹೇಳಲಡ್ಡಿಯಿಲ್ಲ. 'ನನು' ಶಬ್ದವು ಆಶ್ಚರ್ಯಬೋಧಕ- ವೆನ್ನುವುದು 'ವಿಸ್ಮಯಾಮಂತ್ರಣೇ ನನು' ಎಂಬ ಅನುಶಾಸನದಿಂದ

ಸಿದ್ಧವಾಗಿದೆ. ಆ ಕಾರಣ 'ನು' ಶಬ್ದವೂ ಆಶ್ಚರ್ಯಬೋಧಕವೆಂದು ಒಪ್ಪಬೇಕು. ಪ್ರಕೃತ ಶ್ರುತಿಯಲ್ಲಿ 'ನು' ಶಬ್ದವು ಭಗವಂತನ ಮಹಿಮೆಗಳ ಮಹಿಮೆಯನ್ನು ಕುರಿತು ವಿಸ್ಮಯವನ್ನು ವ್ಯಕ್ತಪಡಿಸುತ್ತಿದೆ - ಭಗವಂತನ ಮಹಿಮೆಗಳ ಮಹಿಮೆ ಹೀಗಿದೆ — ಭಗವಂತನ ಸರ್ವಜ್ಞತ್ವ, ಸರ್ವೇಶ್ವರತ್ವಾದಿ ಮಹಿಮೆಗಳು ಭಗವಂತನಲ್ಲಿ ಇಲ್ಲವೆಂದಾದಲ್ಲಿ ಅದು ಭಗವಂತನ ಅಕೀರ್ತಿಯೇ ಆಗುವುದು. 'ಸಂಭಾವಿತಸ್ಯ ಚಾಕೀರ್ತಿಃ ಮರಣಾದತಿರಿಚ್ಯತೇ' ಎಂದು ಭಗವದ್ಗೀತೆಯಲ್ಲಿ ಅಕೀರ್ತಿಯು ಮರಣಕ್ಕಿಂತಲೂ ಹೆಚ್ಚಿನದೆಂದು ಹೇಳಿದೆ. ಒಟ್ಟಿನಲ್ಲಿ ಭಗವಂತನ ಮಹಿಮೆಗಳು ಅಸತ್ಯವಾದಲ್ಲಿ ಭಗವಂತನಿಗೂ ಮರಣವನ್ನು ಅರ್ಥಾತ್ ಅಸತ್ಯತ್ವವನ್ನು ಹೇಳಿದಂತಾಯಿತು. ತಮ್ಮನ್ನು ಇಲ್ಲವೆಂದು ಹೇಳಿದರೆ ಆ ಮಹಿಮೆಗಳು ಭಗವಂತನನ್ನೇ ಇಲ್ಲವೆಂದು ಸಾಧಿಸುವುದಾದಲ್ಲಿ - ಅದು ಭಗವನ್ಮಹಿಮೆಗಳ ಅದ್ಭುತಸಾಮರ್ಥ್ಯವಲ್ಲವೇ ಎಂದು ವಿಸ್ಮಯವನ್ನು ಇಲ್ಲಿ 'ನು' ಶಬ್ದವು ಸೂಚಿಸುತ್ತಿದೆ. ಆದ್ದರಿಂದ ಭಗವಂತನ ಪಾರಮಾರ್ಥಿಕ ಸತ್ಯತೆಯನ್ನು ಬಯಸುವವರು ಅವನ ಮಹಿಮೆಗಳನ್ನೂ ನಡುಬಗ್ಗಿ ಸ್ವಾಗತಿಸಬೇಕು. 'ಸತ್ಯಾ ಸತ್ಯಸ್ಯ ಕರಣಾನಿ' ಎಂಬ ಈ ಶ್ರುತಿವಾಕ್ಯದ ವಿನ್ಯಾಸವನ್ನು ನೋಡಿದರೂ ಶ್ರುತಿಗೆ ಈ ಭಾವವಿರುವುದು ಸ್ಪಷ್ಟವಾಗುತ್ತದೆ. ಈ ಶ್ರುತಿಯು ಮೊದಲು 'ಸತ್ಯಾ' ಎಂದು ಭಗವನ್ಮಹಿಮೆಗಳ ಸತ್ಯತೆಯನ್ನು ಹೇಳಿ ಅನಂತರ 'ಸತ್ಯಸ್ಯ' ಎಂಬ ಪದದಿಂದ ಭಗವಂತನ ಸತ್ಯತೆಯನ್ನು ಹೇಳುತ್ತಿದೆ. ಅನ್ನವನ್ನು ಬಯಸುವ ಮನುಷ್ಯನು ಮೊದಲು ಅಕ್ಕಿಯನ್ನು ಸಂಪಾದಿಸುವುದು ಹೇಗೆ ಆವಶ್ಯಕವೋ ಹಾಗೆ ಭಗವತ್ಸ್ವರೂಪದ ಸತ್ಯತೆಯನ್ನು ಇಚ್ಛಿಸುವವನು ಮೊದಲು ಅವನ ಮಹಿಮೆಗಳ ಸತ್ಯತ್ವವನ್ನು ಒಪ್ಪಬೇಕಾಗುವುದು ಎನ್ನುವುದೇ ಈ ಶ್ರುತಿವಾಕ್ಯ ವಿನ್ಯಾಸದಿಂದ ಧ್ವನಿತವಾಗುವ ಭಾವ.

ಅಲ್ಲದೆ, ಈ ಶ್ರುತಿಯು 'ಮಹತೋ ಮಹಾನಿ ಸತ್ಯಾ ಸತ್ಯಸ್ಯ ಕರಣಾನಿ' ಎಂಬುದಾಗಿ ಒಂದೇ ಪಂಕ್ತಿಯಲ್ಲಿ ಬ್ರಹ್ಮನ ಮತ್ತು ಅವನ ಮಹಿಮೆಗಳ ಸತ್ಯತೆಯನ್ನು ಹೇಳುತ್ತಿದೆ. ಒಂದೇ ಪಂಕ್ತಿಯಲ್ಲಿ ಉಕ್ತವಾಗಿರುವ ಈ ಸತ್ಯತ್ವ ಗಳಲ್ಲಿ ಭಗವಂತನ ಸತ್ಯತ್ವವೊಂದೇ ಪಾರಮಾರ್ಥಿಕ, ಮಹಿಮೆಗಳ ಸತ್ಯತ್ವ ವ್ಯಾವಹಾರಿಕವಾದದ್ದು ಎಂದು ದ್ವೈವಿಧ್ಯವನ್ನು ಕಲ್ಪಿಸುವವರ ಬಾಯಿ ಮುಚ್ಚಿಸ ಲೆಂದೇ ಶ್ರುತಿಯು 'ಮಹತೋ ಮಹಾನಿ' ಎಂಬ ಪದಗಳಿಂದ ಭಗವಂತನಿಗೂ ಅವನ ಮಹಿಮೆಗಳಿಗೂ ಮಹತ್ತ್ವವನ್ನು ಹೇಳಿ ಪ್ರತಿಬಂದಿಯನ್ನು ಒಡ್ಡುತ್ತಿದೆ.

ಭಗವಂತನ ಮತ್ತು ಅವನ ಮಹಿಮೆಗಳ ಮಹತ್ತ್ವದಲ್ಲಿ ಹೇಗೆ ವೈಚಿತ್ರ್ಯವಿಲ್ಲವೋ ಹಾಗೆ ಸತ್ಯತ್ವದಲ್ಲೂ ವೈಚಿತ್ರ್ಯವಿರಲು ಸಾಧ್ಯವಿಲ್ಲ ಎಂದೇ ಶ್ರುತಿಯ ಇಂಗಿತವಾಗಿದೆ. ಸಾರ್ವಭೌಮನಾದ ಭಗವಂತನ ಧರ್ಮಪತ್ನಿಯಾದ ಶ್ರುತಿಯು ಒಂದೇ ಪಂಕ್ತಿಯಲ್ಲಿ ಕುಳಿತವರಿಗೆ ಪಂಕ್ತಿ ಭೇದ ಮಾಡಿ ಹೇಗೆ ತಾನೆ ಬಡಿಸಿಯಾಳು! ಮಹತ್ತ್ವ ಒಂದೇ ಬಗೆಯದಾಗಿರುವುದಾದರೆ ಸತ್ಯತೆಯೂ ಒಂದೇ ಬಗೆಯದಾಗಿರಬೇಕು. ಭಗವಂತನು ಪಾರಮಾರ್ಥಿಕ ಸತ್ಯನಾಗಿರುವುದಾದರೆ ಅವನ ಮಹಿಮೆಗಳೂ ಪಾರಮಾರ್ಥಿಕ ಸತ್ಯವಾಗಿರಬೇಕು ಎಂದು ಶ್ರೀ ವಾದಿರಾಜರು ಅತ್ಯಂತ ಸ್ವಾರಸ್ಯಪೂರ್ಣವಾಗಿ ಶ್ರುತಿಭಾವವನ್ನು ಹೊರಗೆಡಹಿದ್ದಾರೆ.

ಇಷ್ಟೇ ಅಲ್ಲದೆ, ಈ ಶ್ರುತಿವಾಕ್ಯಕ್ಕೆ 'ಮಹತಃ ಸತ್ಯಸ್ಯ ಮಹಾನಿ ಕರಣಾನಿ ಸತ್ಯಾ ಪ್ರಾವೋಚಂ – 'ಮಹತಿಯನ್ನು ಪಡೆದಿರುವ, ಪಾರಮಾರ್ಥಿಕ ಸತ್ಯನಾದ ಭಗವಂತನ ಮಹತ್ತರ ಕರ್ಮಗಳೂ ಸತ್ಯವೆಂದು ಹೇಳಿದ್ದೇನೆ' ಎಂದು ಅನ್ವಯವನ್ನು ತೋರಿಸಬೇಕು. ಈ ಅನ್ವಯವನ್ನು ಹೊಂದಿದ ವಾಕ್ಯದಲ್ಲಿ ಕೊನೆಗೆ ಬರುವ, ಮಹಿಮೆಗಳ ಸತ್ಯತೆಯನ್ನು ಹೇಳುವ ಸತ್ಯಪದಕ್ಕೆ ಇತರರು ಯಾರ ಅನುಭವಕ್ಕೂ ಬಂದಿಲ್ಲದ 'ವ್ಯಾವಹಾರಿಕ ಸತ್ಯತ್ವ'ವೆಂಬ ವಿಚಿತ್ರವಾದ ಅರ್ಥವನ್ನು ಹೇಳುವರು. ಆದರೆ ಅದರ ಮೊದಲು, ಉಪಕ್ರಮದಲ್ಲಿ ಬಂದಿರುವ 'ಸತ್ಯಸ್ಯ' ಎಂದು ಪದವು ಪಾರಮಾರ್ಥಿಕ ಸತ್ಯತ್ವವನ್ನು ಹೇಳುವುದೆಂದು ಹೇಳುವರು. ಹೀಗೆ ಎರಡನೇ ಸತ್ಯ ಪದಕ್ಕೆ ವ್ಯಾವಹಾರಿಕಸತ್ಯತ್ವವೆಂಬ ಅರ್ಥವನ್ನು ಹೇಳಿದರೆ ಉಪಕ್ರಮವಿರೋಧವಿರುವುದು ಸ್ಪಷ್ಟ ಅನ್ವಯ ವಾಕ್ಯವನ್ನು ಗಮನಿಸಿದಾಗ ಪರಮತದ ಈ ಶ್ರುತಿ ವ್ಯಾಖ್ಯಾನ ಉಪಕ್ರಮ ವಿರೋಧವೆಂಬ ದೋಷವನ್ನು ಒಳಗೊಂಡಿದ್ದಂತೆ 'ಸತ್ಯಾ ಸತ್ಯಸ್ಯ' ಎಂಬ ಸಂಹಿತಾವಾಕ್ಯದಲ್ಲಿ ಅವರ ವ್ಯಾಖ್ಯಾನ ಉಪಸಂಹಾರವಿರೋಧವೆಂಬ ದೋಷ ಗ್ರಸ್ತವಾಗಿರುವುದು ಸ್ಪಷ್ಟವಾಗಿದೆ. ಮೊದಲು ಬರುವ 'ಸತ್ಯಾ' ಎಂಬ ಪದಕ್ಕೆ, ಅನಂತರವಿರುವ 'ಸತ್ಯಸ್ಯ' ಎಂಬ ಪದಕ್ಕೆ ಮಾಡುವ ವ್ಯಾಖ್ಯಾನಕ್ಕೆ ವಿರುದ್ಧವಾಗಿ ವ್ಯಾಖ್ಯಾನ ಮಾಡುವುದರಿಂದ ಈ ದೋಷ ಉಂಟಾಗುವುದು. ಈ ರೀತಿಯಾಗಿ ಇತರರ ಶ್ರುತಿವ್ಯಾಖ್ಯಾನವು ಉಪಕ್ರಮವಿರೋಧ ಮತ್ತು ಉಪಸಂಹಾರ ವಿರೋಧಗಳೆಂಬ ಎರಡು ಬದಿಯ ಪಾಶಗಳ ಹಿಡಿತಕ್ಕೆ ಸಿಲುಕಿ ನರಳುತ್ತಿದೆ.

ಇನ್ನೊಂದು ಗಮನಾರ್ಹವಾದ ಅಂಶವೆಂದರೆ ಈ ಶ್ರುತಿಯು ಪ್ರಾರಂಭದಲ್ಲೇ 'ಪ್ರ'. 'ಘ' ಮತ್ತು 'ನು' ಎಂಬ ಮೂರು ಅವ್ಯಯಗಳನ್ನು ಪ್ರಯೋಗಿಸಿರುವುದು. ಈ ಮೂರು ಅವ್ಯಯಗಳ ಸಹಪ್ರಯೋಗದಿಂದ ಭಗವಂತನಿಗಾಗಲಿ ಅವನ ಮಹಿಮೆಗಳಿಗಾಗಲಿ ಮೂರು ಕಾಲದಲ್ಲೂ ವ್ಯಯ ಅಂದರೆ ಚ್ಯುತಿಯು ಸರ್ವಥಾ ಇಲ್ಲವೆಂದು ಶ್ರುತಿಯು ಸೂಚಿಸುತ್ತಿದೆ.

ಹೀಗೆ, ಭಗವಂತನ, ಅವನ ಮಹಿಮೆಗಳ ಮತ್ತು ಜಗತ್ತಿನ ಪಾರಮಾರ್ಥಿಕ ಸತ್ಯತ್ವವನ್ನು ಪ್ರಬಲವಾಗಿ ಸಮರ್ಥಿಸುವ ಬಹುಯುಕ್ತಿಗಳೆಂಬ ದಂತ, ನಖಗಳಿಂದ ತುಂಬಿರುವ ಈ ಶ್ರುತಿರೂಪವಾದ ಸಿಂಹಿಣಿಯು ಪರವಾದಿಗಳು ಹೇಳುವ ವ್ಯಾವಹಾರಿಕ ಸತ್ಯತ್ವವೆಂಬ ಗಜವನ್ನು ನಿರ್ನಾಮಗೊಳಿಸಿದೆಯೆಂದು ಹೃದಯಂಗಮವಾಗಿ ಶ್ರೀ ವಾದಿರಾಜರು ಈ ಶ್ರುತಿಯ ವ್ಯಾಖ್ಯಾನವನ್ನು ಮಾಡಿ ಅನುಗ್ರಹಿಸಿದ್ದಾರೆ. ॥ ೬೬ ॥

**ಯಚ್ಚಿಕೇತ ಸತ್ಯಮಿತ್ತನ್ನ ಮೋಘಂ**
**ವಸು ಸ್ಪಾರ್ಹಮುತ ಜೇತೋತ ದಾತಾ ।**
**ಸತ್ಯಸ್ಸೋ ಅಸ್ಯ ಮಹಿಮಾ ಗೃಣೇ ಶವೋ**
**ಯಜ್ಞೇಷು ವಿಪ್ರರಾಜ್ಯೇ ॥ ೬೭ ॥**

**ಅರ್ಥ** :- **ಸ್ಪಾರ್ಹಂ** ಅಭಿಲಾಷೆಪಡಲು ಯೋಗ್ಯವಾದ, **ವಸು** ತ್ರೈಲೋಕ್ಯವೇ ಮೊದಲಾದ ವಸ್ತುವನ್ನು, **ಜೇತಾ** ಬಲಿಚಕ್ರವರ್ತಿಯಿಂದ ಗೆದ್ದ **ಉತ ದಾತಾ** ಮತ್ತು ಇಂದ್ರನಿಗೆ ದಾನಮಾಡಿದ ಆ ಭಗವಂತನು, **ಯತ್ ಚಿಕೇತ** ಯಾವ ಜಗತ್ತನ್ನು ಸೃಷ್ಟಿಸಿರುವನೋ, **ತತ್ ಸತ್ಯಮಿತ್** ಆ ಜಗತ್ತು ಸತ್ಯವೇ ಆಗಿದೆ, **ನ ಮೋಘಂ** ವ್ಯರ್ಥವಲ್ಲ, **ವಿಪ್ರರಾಜ್ಯೇ** ವಿಪ್ರರು ಪ್ರಧಾನರಾಗಿರುವ, **ಯಜ್ಞೇಷು** ಯಜ್ಞಗಳಲ್ಲಿ, **ಶವಃ** ಸುಖದ ಉದ್ದೇಶದಿಂದ **ಗೃಣೇ** (ಯಾವ ಮಹಿಮೆಯನ್ನು) ಸ್ತೋತ್ರಮಾಡಿರುವೆನೋ, **ಅಸ್ಯ ಸಃ ಮಹಿಮಾ** ಭಗವಂತನ ಆ ಮಹಿಮೆಯು, **ಸತ್ಯಃ** ಸತ್ಯವಾದುದು.

**ತಾತ್ಪರ್ಯ** :- ಭಗವಂತನು ಸೃಷ್ಟಿಸಿರುವ ಜಗತ್ತು ಸತ್ಯವೆಂದು 'ಯಚ್ಚಿಕೇತ' ಎಂಬ ಶ್ರುತಿ ಹೀಗೆ ನಿರೂಪಿಸುತ್ತಿದೆ—ಎಲ್ಲರೂ ಬಯಸುವಂತಹ ತ್ರೈಲೋಕ್ಯವೇ ಮೊದಲಾದ ಸಂಪತ್ತನ್ನು ಶ್ರೀಹರಿ ಬಲಿಚಕ್ರವರ್ತಿಯಿಂದ ಗೆದ್ದು

ತಂದ. ಅವೆಲ್ಲವನ್ನು ಇಂದ್ರನಿಗೆ ದಾನಮಾಡಿದ. ಹೀಗೆ ದಾನ ಮಾಡಿದ ಮೂರು ಲೋಕಗಳು ರಜ್ಜುಸರ್ಪಾದಿಗಳಂತೆ ನಿರರ್ಥಕವಲ್ಲ. ಆದ್ದರಿಂದ, ಭಗವಂತ ಸೃಷ್ಟಿಸಿರುವ ಈ ಲೋಕಗಳು ಪಾರಮಾರ್ಥಿಕ ಸತ್ಯವೇ ಆಗಿವೆ.

ಭಗವನ್ಮಹಿಮೆಯ ಸತ್ಯತ್ವವನ್ನು 'ಸತ್ಯಸ್ಸೋ ಅಸ್ಯ' ಇತ್ಯಾದಿ ಶ್ರುತಿ ಹೀಗೆ ಹೇಳುತ್ತಿದೆ – ಸುಖವನ್ನು ಪಡೆಯುವ ಉದ್ದೇಶದಿಂದ ಬ್ರಾಹ್ಮಣರಿಗೆ ಪ್ರಾಧಾನ್ಯ ವಿರುವ ಯಜ್ಞಗಳಲ್ಲಿ 'ಇದಂ ವಿಷ್ಣುರ್ವಿಚಕ್ರಮೇ' ಇತ್ಯಾದಿ ವೇದಮಂತ್ರಗಳಿಂದ ಭಗವಂತನ ಯಾವ ಮಹಿಮೆಯನ್ನು ಸ್ತೋತ್ರ ಮಾಡುತ್ತೇನೋ ಆ ಮಹಿಮೆ ಸತ್ಯವೇ ಆಗಿದೆ.

**ವಿಶೇಷ ವಿಷಯ** :- ಸತ್ಯಮಿತ್ ತನ್ನ ಮೋಘಂ – ತಾನು ಮಾಡಿದ ಕೃಷಿಯೆಲ್ಲವೂ ನಿಷ್ಪ್ರಯೋಜನವಾದರೆ ಕೃಷಿಕನು ದುಃಖಿಯಾಗುವಂತೆ, ತಾನು ಸೃಷ್ಟಿಸಿದ ಜಗತ್ತು ಅಸತ್ಯವಾಗಿದ್ದು ನಿಷ್ಫಲವಾಗುವುದಾದರೆ ಅಂತಹ ವ್ಯರ್ಥ ಕಾರ್ಯವನ್ನು ಮಾಡಿದ ಭಗವಂತನು ನೈಪುಣ್ಯವಿಲ್ಲದವನೆಂದೇ ಹೇಳ ಬೇಕಾಗುವುದು. ಬಲಿಯನ್ನು ಜಯಿಸುವುದಕ್ಕೋಸ್ಕರ, ಜಯಿಸಿದ್ದನ್ನು ಇಂದ್ರ ನಿಗೆ ದಾನ ಮಾಡುವುದಕ್ಕೋಸ್ಕರ ಅವನು ಮಾಡಿದ ಅವತಾರವೂ ವ್ಯರ್ಥವೇ ಆಯಿತು. ಆದ್ದರಿಂದ ಜಗತ್ತನ್ನು ಅಸತ್ಯವೆಂದು ಒಪತಕ್ಕದ್ದಲ್ಲವೆಂದು ಶ್ರುತಿಯ ಭಾವ. 'ಸತ್ಯಮಿತ್' ಎಂಬ ಪದಗಳಿಂದ ಶ್ರುತಿ ತನ್ನ ಈ ಭಾವವನ್ನು ವ್ಯಕ್ತಗೊಳಿಸುತ್ತಿದೆ.

ಗೃಣೇ ಶವೋಯಜ್ಞೇಷು ವಿಪ್ರರಾಜ್ಯೇ – 'ಯಜ್ಞಭುಗ್ ಯಜ್ಞಫಲದೋ ಯಜ್ಞೇಶೋ ಯಜ್ಞಭಾವನಃ । ಯಜ್ಞತ್ರಾತಾ ಯಜ್ಞಪುಮಾನ್ ವನಮಾಲೀ ದ್ವಿಜಪ್ರಿಯಃ' ಎಂದು ವಾಸುದೇವಸಹಸ್ರನಾಮದಲ್ಲಿ ಭಗವಂತನ ಅನೇಕ ನಾಮಗಳನ್ನು ಹೇಳಿದೆ. ಅದರಂತೆ ಯಜ್ಞಭೋಕ್ತೃವೂ, ಯಜ್ಞಫಲವನ್ನು ಕೊಡ ತಕ್ಕವನೂ, ಯಜ್ಞಸ್ವಾಮಿಯೂ, ಯಜ್ಞರಕ್ಷಕನೂ ಭಗವಂತನೇ ಆಗಿದ್ದಾನೆ. ಭಗವಂತನ ಈ ಎಲ್ಲ ಮಹಿಮೆಯೂ ಸತ್ಯವೇ ಆಗಿದೆಯೆಂದು ಶ್ರುತಿಯ ಭಾವ. ॥ ೬೭ ॥

**ಸತ್ಯಾ ವಿಷ್ಣೋರ್ಗುಣಾಃ ಸರ್ವೇ ಸತ್ಯಾ ಜೀವೇಶಯೋರ್ಭಿದಾ ।**
**ಸತ್ಯೋ ಮಿಥೋ ಜೀವಭೇದಃ ಸತ್ಯಂ ಚ ಜಗದೀದೃಶಂ ॥ ೬೮ ॥**

**ಅರ್ಥ :- ಸರ್ವೇ ವಿಷ್ಣೋಃ ಗುಣಾಃ** ವಿಷ್ಣುವಿನ ಎಲ್ಲಾ ಗುಣಗಳೂ, **ಸತ್ಯಾಃ** ಸತ್ಯವಾಗಿದೆ. **ಜೀವೇಶಯೋಃ ಭಿದಾ ಸತ್ಯಾ** ಜೀವ ಮತ್ತು ಈಶರ ಭೇದವು ಸತ್ಯವಾಗಿದೆ, **ಮಿಥೋ ಜೀವಭೇದಃ ಸತ್ಯಃ** ಜೀವರ ಪರಸ್ಪರ ಭೇದವು ಸತ್ಯವಾಗಿದೆ. **ಈದೃಶಂ ಜಗತ್ ಚ ಸತ್ಯಂ** ಇಂತಹ ಜಗತ್ತೂ ಸತ್ಯವಾಗಿದೆ.

**ತಾತ್ಪರ್ಯ :-** ಸ್ಪಷ್ಟ.

**ವಿಶೇಷ ವಿಷಯ :-** ಜಗತ್ತೇ ಮಿಥ್ಯೆಯಾಗಿರುವುದಾದಲ್ಲಿ ಭಗವಂತನಿಗೆ ಜಗತ್ಕರ್ತೃತ್ವವೇ ಮೊದಲಾದ ಗುಣಗಳೂ ಮಿಥ್ಯೆಯೆಂದು ಹೇಳಬೇಕಾಗುವುದಾದ್ದರಿಂದ ಈ ಮೇಲಿನ ಪ್ರಮಾಣವು ಭಗವಂತನ ಗುಣಗಳ ಸತ್ಯತೆಯನ್ನೂ, ಜೀವಭೇದದ ಸತ್ಯತೆಯನ್ನೂ ದೃಢಪಡಿಸುವುದರ ಜೊತೆಗೆ, ಜಗತ್ತಿನ ಸತ್ಯತೆಯನ್ನೂ ಸಮರ್ಥಿಸುತ್ತಿದೆ. ಸತ್ಯಂ ಚ ಜಗದೀದೃಶಮ್ - ಈ ದೃಶಮ್ ಎಂದರೆ ಯಾವ ಜಗತ್ತಿನ ವಿಷಯದಲ್ಲಿ ನಮ್ಮೆಲ್ಲ ಪ್ರವೃತ್ತಿಗಳು ಸಫಲ ವಾಗುವವೊ ಅಂತಹ ಸಫಲಪ್ರವೃತ್ತಿಜನಕವಾದ ಎಂದು ಅರ್ಥ. ॥ ೬೮ ॥

ಜೀವಭೇದ ಸತ್ಯವಾಗಿರುವಂತೆ ಭಗವದವತಾರಗಳಲ್ಲೂ ಪರಸ್ಪರ ಭೇದವು ಸತ್ಯವಾಗಿದೆ ಎಂಬ ಶಂಕೆಯನ್ನು ಈ ಪ್ರಮಾಣವು ಪರಿಹರಿಸುವುದು-

**ಅಸತ್ಯಃ ಸ್ವಗತೋ ಭೇದಃ ವಿಷ್ಣೋರ್ನಾನ್ಯದಸತ್ಯಕಮ್ ।**
**ಜಗತ್ಪ್ರವಾಹಃ ಸತ್ಯೋऽಯಂ ಪಂಚಭೇದಸಮನ್ವಿತಃ ॥ ೬೯ ॥**

**ಅರ್ಥ :- ವಿಷ್ಣೋಃ ಸ್ವಗತೋ ಭೇದಃ** ವಿಷ್ಣುವಿನ ಅವತಾರಗಳಲ್ಲಿ ಅವಯವಗಳಲ್ಲಿ ಗುಣಕ್ರಿಯಾದಿಗಳಲ್ಲಿ ಪರಸ್ಪರಭೇದವು, **ಅಸತ್ಯಃ** ಮಿಥ್ಯೆ ಯಾಗಿದೆ. **ವಿಷ್ಣೋಃ ಅನ್ಯತ್ ನ ಅಸತ್ಯಕಮ್** ವಿಷ್ಣುವಿಗೆ ಸಂಬಂಧಿಸಿದ ಬೇರೆ ಯಾವುದೂ ಅಸತ್ಯವಲ್ಲ. **ಪಂಚಭೇದಸಮನ್ವಿತಃ ಅಯಂ ಜಗತ್ಪ್ರವಾಹಃ** ಪಂಚಭೇದಗಳಿಂದ ಯುಕ್ತವಾದ ಈ ಜಗತ್ತಿನ ಪ್ರವಾಹವು, **ಸತ್ಯಃ** ಸತ್ಯವಾದದ್ದು.

**ತಾತ್ಪರ್ಯ :-** ಸ್ಪಷ್ಟ.

**ವಿಶೇಷ ವಿಷಯ :-** ವರ್ತಮಾನಕಾಲದ ಜಗತ್ತು ಹೇಗೆ ಸತ್ಯವೋ ಹಾಗೆ ಅನಾದಿಕಾಲದಿಂದ ಅನಂತಕಾಲದವರೆಗೆ ಎಷ್ಟು ಜಗತ್ತುಗಳು ಸೃಜಿಸಲ್ಪಡು ವವೋ ಅವೆಲ್ಲವೂ ಸತ್ಯವಾಗಿದೆ ಎಂದು 'ಜಗತ್ಪ್ರವಾಹಃ ಸತ್ಯೋऽಯಂ' ಎಂಬುದರ ಭಾವ. ॥ ೬೯ ॥

ಪಂಚಭೇದಗಳನ್ನು ಈ ಮುಂದಿನ ಪ್ರಮಾಣದಲ್ಲಿ ವಿವರಿಸಿದೆ –

**ಜೀವೇಶಯೋರ್ಭಿದಾ ಚೈವ ಜೀವಭೇದಃ ಪರಸ್ಪರಮ್ ।**
**ಜಡೇಶಯೋರ್ಜಡಾನಾಂ ಚ ಜಡಜೀವಭಿದಾ ತಥಾ ॥ ೭೦ ॥**

**ಪಂಚಭೇದಾ ಇಮೇ ನಿತ್ಯಾಃ ಸರ್ವಾವಸ್ಥಾಸು ಸರ್ವಶಃ ।**
**ಮುಕ್ತಾನಾಂ ಚ ನ ಹೀಯಂತೇ ತಾರತಮ್ಯಂ ಚ ಸರ್ವದಾ ॥ ೭೧ ॥**

**ಅರ್ಥ :- ಜೀವೇಶಯೋಃ ಭಿದಾ** ಜೀವ ಮತ್ತು ಪರಮಾತ್ಮನಿಗೆ ಭೇದ, **ಪರಸ್ಪರಂ ಚೈವ ಜೀವಭೇದಃ** ಹಾಗೆಯೇ ಜೀವರ ಪರಸ್ಪರವಾದ ಭೇದ, **ಜಡೇಶಯೋಃ ಜಡಾನಾಂ ಚ** ಜಡ ಮತ್ತು ಪರಮಾತ್ಮರ ಭೇದ ಮತ್ತು ಜಡ ಪದಾರ್ಥಗಳ ಪರಸ್ಪರ ಭೇದ, **ತಥಾ ಜಡಜೀವಭಿದಾ** ಅಂತೆಯೇ ಜಡ ಮತ್ತು ಜೀವರ ಭೇದ, **ಇಮೇ ಸರ್ವಶಃ ಪಂಚಭೇದಾಃ** ಈ ಎಲ್ಲ ಪಂಚಭೇದಗಳು, **ಸರ್ವಾವಸ್ಥಾಸು ನಿತ್ಯಾಃ** ಎಲ್ಲ ಅವಸ್ಥೆಗಳಲ್ಲೂ ನಿತ್ಯವಾಗಿದೆ, **ಮುಕ್ತಾನಾಂ ತಾರತಮ್ಯಂ ಚ** ಮುಕ್ತರ ತಾರತಮ್ಯವೂ, **ಸರ್ವದಾ ನ ಹೀಯತೇ** ಎಂದೂ ಇಲ್ಲದಾಗುವುದಿಲ್ಲ.

**ತಾತ್ಪರ್ಯ :-** ಜೀವಪರಮಾತ್ಮಭೇದ, ಪರಸ್ಪರಜೀವಭೇದ, ಜಡೇಶ್ವರ ಭೇದ, ಪರಸ್ಪರ ಜಡಭೇದ, ಜಡಪರಮಾತ್ಮಭೇದ ಎಂಬ ಈ ಪಂಚಭೇದಗಳು ಸಂಸಾರಾವಸ್ಥೆ ಮೋಕ್ಷಾವಸ್ಥೆ ಮೊದಲಾದ ಎಲ್ಲ ಅವಸ್ಥೆಗಳಲ್ಲೂ ಒಂದೇ ತೆರನಾಗಿರತಕ್ಕವು. ಯಾವ ಭೇದಕ್ಕೂ ಎಂದೂ ನಾಶವಿಲ್ಲ. ಮೋಕ್ಷಾವಸ್ಥೆಯಲ್ಲಿ ಭೇದದಂತೆ ತಾರತಮ್ಯವೂ ಕೂಡ ನಿತ್ಯವಾದದ್ದು. ॥ ೭೦ ॥ ೭೧ ॥

ಯಾರನ್ನಾರಂಭಿಸಿ ಎಲ್ಲಿಯವರೆಗೆ ತಾರತಮ್ಯವೆಂಬ ವಿವರವನ್ನು ಮುಂದಿನ ಶ್ಲೋಕಗಳು ನಿರೂಪಿಸುತ್ತವೆ –

**ಕ್ಷಿತಿಪಾ ಮನುಷ್ಯಗಂಧರ್ವಾ ದೇವಾಶ್ಚ ಪಿತರಶ್ಚಿರಾಃ ।**
**ಆಜಾನಜಾಃ ಕರ್ಮಜಾಶ್ಚ ದೇವಾ ಇಂದ್ರಃ ಪುರಂದರಃ ॥ ೭೨ ॥**

**ರುದ್ರಃ ಸರಸ್ವತೀ ವಾಯುರ್ಮುಕ್ತಾಃ ಶತಗುಣೋತ್ತರಾಃ ।**
**ಏಕೋ ಬ್ರಹ್ಮಾ ಚ ವಾಯುಶ್ಚ ವೀಂದ್ರೋ ರುದ್ರಸಮಸ್ತಥಾ ॥ ೭೩ ॥**

ಏಕೋ ರುದ್ರಸ್ತಥಾ ಶೇಷೋ ನ ಕಶ್ಚಿದ್ ವಾಯುನಾ ಸಮಃ ।
ಮುಕ್ತೇಷು ಶ್ರೀಸ್ತಥಾ ವಾಯೋಃ ಸಹಸ್ರಗುಣಿತಾ ಗುಣೈಃ ॥ ೭೪ ॥

ತತೋಽನಂತಗುಣೋ ವಿಷ್ಣುಃ ನ ಕಶ್ಚಿತ್ ತತ್ಸಮಃ ಸದಾ ।
ಇತ್ಯಾದಿ ವೇದವಾಕ್ಯಂ ವಿಷ್ಣೋರುತ್ಕರ್ಷಮೇವ ವಕ್ತ್ಯುಚ್ಚೈಃ ॥ ೭೫ ॥

**ಅರ್ಥ :- ಕ್ಷಿತಿಪಾಃ** ಮನುಷ್ಯೋತ್ತಮರು ಮತ್ತು ಚಕ್ರವರ್ತಿಗಳು, **ಮನುಷ್ಯ ಗಂಧರ್ವಾಃ** ಮನುಷ್ಯಗಂಧರ್ವರು, **ದೇವಾಶ್ಚ** ಮತ್ತು ದೇವಗಂಧರ್ವರು, **ಪಿತರಃ** ಪಿತೃಗಣಗಳು, **ಚಿರಾಃ** ಪಿತೃಗಣಗಳಲ್ಲಿ ಉತ್ತಮ ರಾದ ಪಿತೃಗಳು, **ಆಜಾನಜಾಃ ದೇವಾಃ** ಜನ್ಮದಿಂದಲೇ ದೇವತೆಗಳಾಗಿರು ವವರು, **ಕರ್ಮಜಾಶ್ಚ ದೇವಾಃ** ಕರ್ಮದಿಂದ ದೇವತ್ವವನ್ನು ಪಡೆದಿರುವವರು, **ದೇವಾಃ** ಉತ್ಪತ್ತಿ ಅಥವಾ ಕರ್ಮಪ್ರಯುಕ್ತವಲ್ಲದೆ ಸ್ವಭಾವತಃ ದೇವತೆಗಳಾಗಿರು ವವರು, **ಇಂದ್ರಃ** ದೇವಗುರುವಾದ ಬೃಹಸ್ಪತಿಯು, **ಪುರಂದರಃ** ಸ್ವರ್ಗಾಧಿಪತಿ ಯಾದ ಇಂದ್ರನು, **ರುದ್ರಃ ಸರಸ್ವತೀ ವಾಯುಃ** ರುದ್ರ, ಸರಸ್ವತೀ ಮತ್ತು ವಾಯುದೇವರು, **ಮುಕ್ತಾಃ ಶತಗುಣೋತ್ತರಾಃ** ಇದೇ ರೀತಿ ಮುಕ್ತಜೀವರೂ ಶತಗುಣೋತ್ತರ ಕ್ರಮದಿಂದ ತಾರತಮ್ಯವನ್ನು ಪಡೆದಿರುವರು. **ಬ್ರಹ್ಮಾ ವಾಯುಶ್ಚ ಏಕಃ** ಚತುರ್ಮುಖಬ್ರಹ್ಮ ಮತ್ತು ವಾಯು ಸಮಾನರಾಗಿದ್ದಾರೆ, **ತಥಾ ವೀಂದ್ರಃ ರುದ್ರ ಸಮಃ** ಹಾಗೆಯೇ ಗರುಡನು ರುದ್ರನಿಗೆ ಸಮಾನನು, **ತಥಾ ರುದ್ರಃ ಶೇಷಃ ಏಕಃ** ಹಾಗೆಯೇ ರುದ್ರ ಮತ್ತು ಶೇಷರು ಸಮಾನರು. **ಮುಕ್ತೇಷು ನ ಕಶ್ಚಿದ್ ವಾಯುನಾ ಸಮಃ** ಮುಕ್ತಜೀವರಲ್ಲಿ ವಾಯುವಿಗೆ ಸಮರಾದ ಬೇರೆ ಜೀವರು ಯಾರೂ ಇಲ್ಲ. **ತಥಾ ಶ್ರೀಃ ವಾಯೋಃ ಗುಣೈಃ ಸಹಸ್ರಗುಣಿತಾ** ಹಾಗೆಯೇ ಲಕ್ಷ್ಮೀದೇವಿ ವಾಯುವಿನ ಒಂದೊಂದು ಗುಣದಿಂದಲೂ ಸಹಸ್ರಗುಣಿತವಾದ ಆಧಿಕ್ಯವನ್ನು ಪಡೆದ ಗುಣಗಳನ್ನು ಪಡೆದಿದ್ದಾಳೆ. **ವಿಷ್ಣುಃ ತತಃ ಅನಂತಗುಣಃ** ಆ ಲಕ್ಷ್ಮಿಗಿಂತಲೂ ವಿಷ್ಣುವು ಅನಂತ ಗುಣಾಧಿಕನಾಗಿದ್ದಾನೆ. **ಸದಾ ನ ಕಶ್ಚಿತ್ ತತ್ಸಮಃ** ಎಂದೂ ಅವನ ಸಮಾನರು ಇಲ್ಲವೇ ಇಲ್ಲ. **ಇತ್ಯಾದಿ ವೇದವಾಕ್ಯಂ** ಇದೇ ಮೊದಲಾದ ವೇದವಾಕ್ಯವು, **ವಿಷ್ಣೋಃ ಉತ್ಕರ್ಷಮೇವ** ವಿಷ್ಣುವಿನ ಶ್ರೇಷ್ಠತೆಯನ್ನೇ, **ಉಚ್ಚೈಃ ವಕ್ತಿ** ದೃಢವಾಗಿ ಹೇಳುತ್ತಿದೆ.

**ತಾತ್ಪರ್ಯ** :- ಮನುಷ್ಯೋತ್ತಮರಿಂದ ಆರಂಭಿಸಿ ಶ್ರೀಹರಿಯವರೆಗೆ ತಾರತಮ್ಯ ಹೀಗಿದೆ - ಮನುಷ್ಯೋತ್ತಮರು - ಚಕ್ರವರ್ತಿಗಳು, ಮನುಷ್ಯ ಗಂಧರ್ವರು, ದೇವಗಂಧರ್ವರು, ಪಿತೃಗಳು, ಚಿರಪಿತೃಗಳು, ಆಜಾನಜ ದೇವತೆಗಳು, ಕರ್ಮಜದೇವತೆಗಳು, ಶತಸ್ಥದೇವತೆಗಳು, ಬೃಹಸ್ಪತಿ, ಇಂದ್ರ, ರುದ್ರ, ಸರಸ್ವತೀ, ವಾಯು, ಮಹಾಲಕ್ಷ್ಮೀ ಮತ್ತು ಶ್ರೀಹರಿ. ಸಂಸಾರಿಜೀವರಲ್ಲಿ ವಾಯುಪರ್ಯಂತವಾಗಿ ಇಲ್ಲಿ ಹೇಳಿರುವ ತಾರತಮ್ಯ ಮೋಕ್ಷದಲ್ಲೂ ಇದ್ದು ಅವರು ಉತ್ತರೋತ್ತರ ಶತಗುಣಾಧಿಕರಾಗಿರುವರು. ವಾಯು ಮತ್ತು ಚತುರ್ಮುಖರು ಸಮಾನರಾದ್ದರಿಂದ ಈ ತಾರತಮ್ಯ ಕ್ರಮದಲ್ಲಿ ಪ್ರತ್ಯೇಕವಾಗಿ ಚತುರ್ಮುಖಬ್ರಹ್ಮನನ್ನು ಸೇರಿಸಿಲ್ಲ. ಹಾಗೆಯೇ ರುದ್ರ ಗರುಡರೂ ಸಮಾನ ರಾದ್ದರಿಂದ ಗರುಡನನ್ನೂ ಪ್ರತ್ಯೇಕವಾಗಿ ಸೇರಿಸಿಲ್ಲ, ರುದ್ರದೇವರೇ ಶೇಷ ಪದವಿಗೆ ಬರುವ ಕಾರಣ ರುದ್ರ-ಶೇಷರು ಒಬ್ಬರೇ ಆಗಿರುವರು. ಆದ್ದರಿಂದಲೇ ಶೇಷನನ್ನೂ ಇಲ್ಲಿ ಪ್ರತ್ಯೇಕವಾಗಿ ಹೇಳಿಲ್ಲ. ಇಂದ್ರಪದವಿಗೆ ಬರುವ ಯೋಗ್ಯತೆ ಇಲ್ಲದ ಕಾಮ ಮೊದಲಾದ ದೇವತೆಗಳು ಇಂದ್ರನಿಗೆ ಸಮಾನರಾದವರು ಇದ್ದಾರೆ. ಆದರೆ ವಾಯುಪದವಿಗೆ ಬರುವ ಯೋಗ್ಯತೆ ಇಲ್ಲದ, ಆದರೆ ವಾಯು ದೇವರಿಗೆ ಸಮಾನರಾದಂತಹ ಯಾವ ಜೀವರೂ ಇಲ್ಲ. ವಾಯು ದೇವರ ಒಂದೊಂದು ಗುಣವೂ ಸಹಸ್ರಗುಣಿತವಾಗಿ ಮಹಾಲಕ್ಷ್ಮಿಯಲ್ಲಿ ರುವುದು. ಮಹಾಲಕ್ಷ್ಮಿಗಿಂತ ಅನಂತಾನಂತಗುಣಗಳುಳ್ಳವನು ಶ್ರೀಹರಿ. ಅವನಿಗೆ ಸಮಾನರಾದವರು ಯಾರೂ ಯಾವ ಕಾಲದಲ್ಲೂ ಇಲ್ಲ - ಹೀಗೆ ವೇದವಾಕ್ಯವು ವಿಷ್ಣು ಸರ್ವೋತ್ತಮತ್ವವನ್ನು ದೃಢವಾಗಿ ಘೋಷಿಸುತ್ತಿದೆ.

**ವಿಶೇಷ ವಿಷಯ** :- ಕ್ಷಿತಿಪ ಶಬ್ದದಿಂದ ಇಲ್ಲಿ ಚಕ್ರವರ್ತಿಗಳನ್ನು ಮಾತ್ರ ವಲ್ಲದೆ ಮುಕ್ತಿಯೋಗ್ಯರಾದ ಇತರ ಮನುಷ್ಯೋತ್ತಮರನ್ನೂ ಸಂಗ್ರಹಿಸಬೇಕು. ಚಕ್ರವರ್ತಿಗಳಿಗೂ ಇತರ ಮನುಷ್ಯೋತ್ತಮರಿಗೂ ತಾರತಮ್ಯವಿರುವುದಾದರೂ ಅದು ಅತ್ಯಲ್ಪವಾದ್ದರಿಂದ, ಗ್ರಂಥಬಾಹುಳ್ಯವಾದೀತೆಂಬ ಶಂಕೆಯಿಂದ ಇಬ್ಬರನ್ನು ಪ್ರತ್ಯೇಕವಾಗಿ ಇಲ್ಲಿ ಹೇಳಿಲ್ಲ.

**ಮನುಷ್ಯಗಂಧರ್ವರು** - ಇವರು ದೇವತೆಗಳ ದೂತರು. ಆದರೆ ದೇವತೆ ಗಳು ಇವರಿಗೆ ಸಾಕ್ಷಾತ್ತಾಗಿ ಆದೇಶ ಕೊಡುವುದಿಲ್ಲ, ಇನ್ನೊಬ್ಬರ ಮುಖಾಂತರ ಇವರು ದೇವತೆಗಳ ಆದೇಶವನ್ನು ತಿಳಿದು ದೇವತಾ ಕಾರ್ಯವನ್ನು ನಿರ್ವಹಿಸುವರು.

**ದೇವಗಂಧರ್ವರು** - ಇವರೂ ದೇವತಗಳ ದೂತರೇ. ಇವರು ದೇವತೆಗಳಿಂದ ಸಾಕ್ಷಾತ್ ಆದೇಶವನ್ನು ಸ್ವೀಕರಿಸುವರು.

**ಪಿತರಶ್ಚಿರಾಃ** - ಗಂಧರ್ವರಲ್ಲಿ ದ್ವೈವಿಧ್ಯವಿರುವಂತೆ ಪಿತೃಗಳಲ್ಲೂ ದ್ವೈವಿಧ್ಯವಿದೆ. ಸಾಮಾನ್ಯಪಿತೃದೇವತೆಗಳನ್ನು ಪಿತರಃ ಎಂದಿಷ್ಟೇ ಕರೆಯುವರು. ಆದರೆ ಸಾಮಾನ್ಯಪಿತೃಗಳಿಗಿಂತ ಮುಂಚೆಯೇ ಸೃಷ್ಟಿಗೆ ಬಂದಿರುವ ಉತ್ತಮರಾದ ಪಿತೃ ದೇವತೆಗಳನ್ನು ಚಿರಪಿತೃಗಳು ಎಂದು ಕರೆಯುವರು.

**ಅಜಾನಜದೇವತೆಗಳು** - ದೇವತೆಗಳಿಗೆ ಜನಿಸಿದ ಕಾರಣ ಹುಟ್ಟಿನಿಂದಲೇ ದೇವತೆಗಳಾದವರು ಆಜಾನಜದೇವತೆಗಳು. ಇಂದ್ರಪುತ್ರನಾದ ಜಯಂತನೇ ಮೊದಲಾದವರು ಉದಾಹರಣೆ.

**ಕರ್ಮಜದೇವತೆಗಳು** - ಕರ್ಮದಿಂದ ದೇವತ್ವವನ್ನು ಪಡೆದವರು. ಪೃಥು, ಬಲಿಚಕ್ರವರ್ತಿ ಮೊದಲಾದವರು ಕರ್ಮಜದೇವತೆಗಳಾಗಿದ್ದಾರೆ.

**ದೇವಾಃ** - ಹುಟ್ಟಿನಿಂದಾಗಲಿ, ಕರ್ಮದಿಂದಾಗಲಿ ದೇವತ್ವವನ್ನು ಪಡೆಯದಿದ್ದರೂ ಸ್ವಭಾವದಿಂದಲೇ ದೇವತೆಗಳಾಗಿರುವವರು. ತಾರತಮ್ಯಗಣನೆಯಲ್ಲಿ ನಿರ್ದಿಷ್ಟವಾಗಿ ಹೇಳಲಾದ ದೇವತೆಗಳಿಗಿಂತ ಭಿನ್ನರಾದ ಶತಸ್ಥದೇವತೆಗಳು.

**ಏಕೋ ಬ್ರಹ್ಮಾಚ ವಾಯುಶ್ಚ** - ವಾಯುದೇವರೇ ಮುಂದೆ ಬ್ರಹ್ಮಪದವಿಗೆ ಬರುವುದರಿಂದ ಬ್ರಹ್ಮವಾಯುಗಳನ್ನು ಅಭಿನ್ನವೆಂದು ಇಲ್ಲಿ ವ್ಯವಹರಿಸಲಾಗಿದೆ. ಏಕಕಾಲದಲ್ಲಿರುವ ವಾಯು ಮತ್ತು ಚತುರ್ಮುಖರು ಸ್ವರೂಪತಃ ಭಿನ್ನರಾದರೂ ಯೋಗ್ಯತೆಯಲ್ಲಿ ಸಮಾನರೆಂದಷ್ಟೇ ಇಲ್ಲಿ ವಿವಕ್ಷಿತವಾಗಿದೆ. 'ಏಕೋ ರುದ್ರಸ್ತಥಾಶೇಷೋ' ಎಂಬಲ್ಲೂ ಇದೇ ಅಭಿಪ್ರಾಯವಾಗಿದೆ.

॥ ೭೨-೭೫ ॥

ಈ ಹಿಂದೆ ಉದಾಹರಿಸಲಾದ ವಾಕ್ಯಗಳಿಗೆ ತಾವು ಹೇಳುವ ವಿಷಯದಲ್ಲಿ ತಾತ್ಪರ್ಯವಿದೆ ಎಂಬಲ್ಲಿ ಪ್ರಮಾಣಗಳನ್ನು ಮುಂದಿನ ಶ್ಲೋಕದಲ್ಲಿ ಸೂಚಿಸಲಾಗಿದೆ -

**ತಾತ್ಪರ್ಯಂ ಮಹದತ್ರೇತ್ಯುಕ್ತಂ ಯೋ ಮಾಮಿತಿ ಸ್ವಯಂ ತೇನ ।**
**ಭೂಮ್ನೋ ಜ್ಯಾಯಸ್ತ್ವಮಿತ್ಯುಕ್ತಂ ಸೂತ್ರೇಷು ನಿರ್ಣಯಾತ್ತೇನ ॥ ೭೬ ॥**

**ಅರ್ಥ** :- **ಅತ್ರ** ಭಗವಂತನ ಸರ್ವೋತ್ತಮತ್ವವಿಷಯದಲ್ಲಿ **ಮಹತ್ ತಾತ್ಪರ್ಯಂ ಇತಿ** ಮಹಾತಾತ್ಪರ್ಯವಿದೆ ಎಂಬುದನ್ನು **ಸ್ವಯಂ ತೇನ** ಕೃಷ್ಣಾವತಾರಿಯಾದ ಸ್ವಯಂ ಭಗವಂತನಿಂದಲೇ, **ಯೋ ಮಾಮಿತಿ ಉಕ್ತಂ** 'ಯೋ ಮಾಮೇವಮಸಂಮೂಢಃ' ಇತ್ಯಾದಿಯಾಗಿ ಹೇಳಲ್ಪಟ್ಟಿದೆ. **ತೇನ** ವೇದವ್ಯಾಸರೂಪಿಯಾದ ಆ ಭಗವಂತನಿಂದ, **ಸೂತ್ರೇಷು** ಬ್ರಹ್ಮಸೂತ್ರಗಳಲ್ಲಿ, **ಭೂಮ್ನಃ ಜ್ಯಾಯಸ್ತ್ವಮಿತಿ** ಭಗವಂತನ ಪೂರ್ಣತ್ವವೆಂಬ ಗುಣಕ್ಕೇ ಶ್ರೇಷ್ಠತೆಯೆಂದು, **ನಿರ್ಣಯಾತ್ ಉಕ್ತಂ** ನಿರ್ಣಯಿಸಿ ಹೇಳಲ್ಪಟ್ಟಿದೆ.

**ತಾತ್ಪರ್ಯ** :- ಸಾಕ್ಷಾತ್ ಭಗವಂತನ ಅವತಾರನಾದ ಶ್ರೀಕೃಷ್ಣನು 'ಯೋ ಮಾಮೇವಮಸಂಮೂಢೋ ಜಾನಾತಿ ಪುರುಷೋತ್ತಮಂ । ಸ ಸರ್ವವಿದ್ ಭಜತಿ ಮಾಂ ಸರ್ವಭಾವೇನ ಭಾರತ ॥' ಇತಿ ಗುಹ್ಯತಮಂ ಶಾಸ್ತ್ರಮಿದಮುಕ್ತಂ ಮಾಯಾಽನಘ । ಏತದ್ಬುದ್ಧ್ವಾ ಬುದ್ಧಿಮಾನ್ ಸ್ಯಾತ್ಕೃತಕೃತ್ಯಶ್ಚ ಭಾರತ ॥ ಎಂಬ ಗೀತಾಶ್ಲೋಕಗಳಲ್ಲಿ ವಿಷ್ಣುಸರ್ವೋತ್ತಮತ್ವವಿಷಯದಲ್ಲಿ ತನಗೆ ಮಹಾ ತಾತ್ಪರ್ಯವಿರುವುದೆಂದು ಸ್ಪಷ್ಟವಾಗಿ ಸೂಚಿಸಿರುವನು. ಅದರಂತೆಯೇ, ವೇದವ್ಯಾಸರೂಪಿಯಾದ ಆ ಭಗವಂತನು ಬ್ರಹ್ಮಸೂತ್ರಗಳಲ್ಲಿ ಭಗವಂತನ ಪೂರ್ಣತ್ವವೆಂಬ ಗುಣವು ಶ್ರೇಷ್ಠವಾದುದೆಂದು ನಿರ್ಣಯಿಸಿದ್ದಾನೆ. ಭಗವಂತನಿಗೂ ಅವನ ಗುಣಗಳಿಗೂ ಅಭೇದವಿರುವುದರಿಂದ ಭಗವಂತನು ಶ್ರೇಷ್ಠನೆಂದೇ ಬ್ರಹ್ಮಸೂತ್ರಗಳಿಂದ ನಿರ್ಣಯಿಸಿದಂತಾಯಿತು. ಹೀಗೆ ಭಗವಂತನಿಗೆ ತನ್ನ ಪುರುಷೋತ್ತಮತ್ವವಿಷಯದಲ್ಲಿ ತಾತ್ಪರ್ಯವಿರುವಂತೆ ಅದೇ ವಿಷಯವನ್ನು ಪ್ರತಿಪಾದಿಸುವ ವೇದವಚನಗಳಿಗೂ ತಾವು ಹೇಳುವ ವಿಷಯದಲ್ಲಿ ತಾತ್ಪರ್ಯವಿರುವುದೆಂದು ಸಿದ್ಧವಾಗುತ್ತದೆ.

**ವಿಶೇಷ ವಿಷಯ** :- 'ಯೋ ಮಾಮೇವ' ಎಂಬ ಗೀತಾಶ್ಲೋಕದಲ್ಲಿ ಶ್ರೀಕೃಷ್ಣನು ತನ್ನನ್ನು ಪುರುಷೋತ್ತಮನೆಂದು ತಿಳಿದವನನ್ನು ಸರ್ವಜ್ಞನೆಂದು 'ಸ ಸರ್ವವಿತ್' ಎಂಬ ಪದಗಳಿಂದ ಪ್ರಶಂಸಿಸಿದ್ದಾನೆ. ಅವನ ಸರ್ವೋತ್ತಮತ್ವವನ್ನು ಪ್ರತಿಪಾದಿಸುವ ಶಾಸ್ತ್ರವನ್ನು ಗುಹ್ಯತಮವೆಂದು ಸ್ತುತಿಸಿದ್ದಾನೆ. ತನ್ನ ಸರ್ವೋತ್ತಮತ್ವವನ್ನು ತಿಳಿದವನು ಅಪರೋಕ್ಷಜ್ಞಾನಿಯೂ, ಮುಕ್ತನೂ ಆಗುವನೆಂದು ಎರಡು ವಿಧವಾದ ಫಲಗಳನ್ನು ಬುದ್ಧಿಮಾನ್, ಕೃತ್ಯಕೃತ್ಯಃ ಎಂಬ ಪದಗಳಿಂದ ಹೇಳಿದ್ದಾನೆ. ಇವುಗಳಿಂದ ಶ್ರೀಕೃಷ್ಣನಿಗೆ ತಾನು ಹೇಳಿದ ತನ್ನ

ಪುರುಷೋತ್ತಮತ್ವದಲ್ಲಿ ತಾತ್ಪರ್ಯವಿದೆಯೆಂದು ತಿಳಿದುಬರುವುದು. ಇದೇ ಪುರುಷೋತ್ತಮತ್ವವನ್ನು ಮತ್ತು 'ದ್ವಾವಿಮೌ ಪುರುಷೌ ಲೋಕೇ' ಇತ್ಯಾದಿ ಗೀತಾವಾಕ್ಯದಲ್ಲಿ ಹೇಳಿದ ಭೇದವನ್ನು ಅನೇಕ ವೇದವಚನಗಳೂ ಹೇಳುತ್ತಿವೆ. ಆದ್ದರಿಂದ ವೇದವಚನಗಳಿಗೂ ತಾವು ಹೇಳುವ ವಿಷಯದಲ್ಲಿ ತಾತ್ಪರ್ಯವಿದೆಯೆಂದು ಸಿದ್ಧವಾಗುವುದು. ಒಂದೆಡೆ ಒಂದು ಪ್ರಮಾಣದ ತಾತ್ಪರ್ಯ ವಿಷಯವಾದದ್ದು ಬೇರೆಡೆಯಲ್ಲೂ ತಾತ್ಪರ್ಯ ವಿಷಯವಾಗಿದೆಯೆಂದು ಒಪ್ಪಲೇಬೇಕು. ಒಂದೆಡೆ ಗೋವೆಂದು ಸಮ್ಮತವಾದದ್ದು ಮತ್ತೊಂದು ಕಡೆ ಗೋವಲ್ಲವೆಂದು ಆಗಲಾರದಷ್ಟೆ ಎಂದು ಆಚಾರ್ಯರ ಭಾವವೆಂದು ಶ್ರೀ ವಾದಿರಾಜರು ನಿರೂಪಿಸಿದ್ದಾರೆ.

ಭೂಮ್ನೋ ಜ್ಯಾಯಸ್ತ್ವಮಿತ್ಯುಕ್ತಂ - 'ಭೂಮ್ನಃ ಕ್ರತುವತ್ ಜ್ಯಾಯಸ್ತ್ವಂ ತಥಾಚ ದರ್ಶಯತಿ' (ಬ್ರ.ಸೂ. ೩,೩,೫೯) ಎಂಬ ಬ್ರಹ್ಮಸೂತ್ರದಲ್ಲಿ ಎಲ್ಲ ಕ್ರಿಯೆಗಳಲ್ಲಿ ಜ್ಯೋತಿಷ್ಟೋಮಯಾಗ ಹೇಗೆ ಶ್ರೇಷ್ಠವೊ ಹಾಗೆ ಗುಣಗಳಲ್ಲಿ ಭಗವಂತನ ಪೂರ್ಣತ್ವವೆಂಮ ಗುಣ ಶ್ರೇಷ್ಠವಾದುದು ಎಂದು ಹೇಳಿದೆ. ಗುಣಗುಣಿಗಳಿಗೆ ಅಭೇದವಿರುವುದರಿಂದ ಭಗವಂತನಿಗೆ ಇಲ್ಲಿ ಶ್ರೇಷ್ಠತ್ವವನ್ನು ಹೇಳಿದಂತಾಯಿತು ಎಂದು ಭಾವ. ಭಗವಂತನ ಶ್ರೇಷ್ಠತ್ವವನ್ನು 'ಭೂಮ್ನಃ' ಇತ್ಯಾದಿ ಸೂತ್ರದಲ್ಲಿ ಮಾತ್ರವಲ್ಲದೆ 'ಜನ್ಮಾದ್ಯಸ್ಯಯತಃ' (೧,೧,೨), 'ದ್ಯುಭ್ವಾದ್ಯಾಯತನಂ ಸ್ವಶಬ್ದಾತ್' (೧,೩,೧), 'ಅಕ್ಷರಮಂಬರಾಂತಧೃತೇಃ' (೧,೩,೧೦), 'ಸರ್ವೋಪೇತಾ ಚ ತದ್ದರ್ಶನಾತ್ (೨,೧,೩೧) ಇತ್ಯಾದಿ ಅನೇಕ ಬ್ರಹ್ಮಸೂತ್ರಗಳಲ್ಲಿ ಹೇಳಿದೆ ಎಂದು ಭಾವ. ಆದ್ದರಿಂದಲೇ 'ಸೂತ್ರೇಷು' ಎಂದು ಬಹುವಚನಪ್ರಯೋಗವನ್ನು ಆಚಾರ್ಯರು ಮಾಡಿದ್ದಾರೆ. ॥ ೭೬ ॥

ಶ್ರೀಹರಿಯ ಪ್ರಸಾದದಿಂದಲೇ ಮೋಕ್ಷವು ಲಭ್ಯ. ಈ ವಿಷಯವು ಪ್ರಮಾಣ ಸಿದ್ಧವಾಗಿದೆ ಎಂದು ಮುಂದಿನ ಶ್ಲೋಕಗಳಲ್ಲಿ ಹೇಳಿದೆ -

**ತತ್ಪ್ರೀತ್ಯೈವ ಚ ಮೋಕ್ಷಃ ಪ್ರಾಪ್ಯಸ್ತೇನೈವ ನಾನ್ಯೇನ ।**
**ನಾಯಮಾತ್ಮಾ ಪ್ರವಚನೇನ ಲಭ್ಯೋ**
**ನ ಮೇಧಯಾ ನ ಬಹುನಾ ಶ್ರುತೇನ ॥ ೭೭ ॥**

**ಯಮೇವೈಷ ವೃಣುತೇ ತೇನ ಲಭ್ಯಸ್ತಸ್ಯೈಷ**
**ಆತ್ಮಾ ವಿವೃಣುತೇ ತನೂಂ ಸ್ವಾಂ ।**

**ಅರ್ಥ :- ತತ್ಪ್ರೀತ್ಯೈವ ಚ** ಶ್ರೀಹರಿಯ ಅನುಗ್ರಹದಿಂದಲೇ, **ತೇನೈವ** ಯಾರಲ್ಲಿ ಶ್ರೀಹರಿಯು ಪ್ರೀತನಾಗಿರುವನೋ ಅವನಿಂದಲೇ, **ಮೋಕ್ಷಃ ಪ್ರಾಪ್ಯಃ** ಮೋಕ್ಷವು ಹೊಂದಲು ಸಾಧ್ಯವಾದುದು, **ನ ಅನ್ಯೇನ** ಬೇರೆಯವರಿಂದ ಮೋಕ್ಷವು ಹೊಂದಲು ಸಾಧ್ಯವಾಗದು. **ಅಯಂ ಆತ್ಮಾ** ಈ ಭಗವಂತನು, **ಪ್ರವಚನೇನ ನ ಲಭ್ಯಃ** ಪ್ರವಚನದಿಂದ ಲಭಿಸಲಾರನು, **ನ ಮೇಧಯಾ** ತೀಕ್ಷ್ಣಬುದ್ಧಿಯಿಂದಲೂ ಲಭಿಸಲಾರನು, **ನ ಬಹುನಾ ಶ್ರುತೇನ** ಅನೇಕ ಶಾಸ್ತ್ರಗಳ ಶ್ರವಣದಿಂದಲೂ ದೊರಕಲಾರನು, **ಯಂ ಏಷಃ ವೃಣುತೇ** ಯಾರನ್ನು ಈ ಭಗವಂತನು ತನ್ನವನೆಂದು ಸ್ವೀಕರಿಸುವನೋ, **ತೇನೈವ ಲಭ್ಯಃ** ಅವನಿಂದಲೇ ಅವನು ಹೊಂದಲ್ಪಡುವನು, **ತಸ್ಯ** ಆ ಪುರುಷನಿಗೆ, **ಏಷಃ ಆತ್ಮಾ ಸ್ವಾಂ ತನೂಂ** ಈ ಭಗವಂತನು ತನ್ನ ಶರೀರವನ್ನು **ವಿವೃಣುತೇ** ಪ್ರಕಟಿಸುವನು.

**ತಾತ್ಪರ್ಯ :-** ಭಗವಂತನ ಅನುಗ್ರಹದಿಂದ ಮಾತ್ರ ಭಗವಂತನ ಅನುಗ್ರಹ ಪಾತ್ರನಾದ ಪುರುಷನು ಮೋಕ್ಷವನ್ನು ಪಡೆಯಬಲ್ಲ, ಬೇರೆ ಯಾವ ಸಾಧನದಿಂದಲೂ ಮೋಕ್ಷವನ್ನು ಪಡೆಯಲಾಗದು ಎಂಬ ವಿಷಯವನ್ನು ಕಠೋಪನಿಷತ್ತಿನ 'ಯಮೇವೈಷ' ಎಂಬ ಶ್ರುತಿಯು ಹೀಗೆ ಹೇಳುತ್ತಿದೆ – ಆ ಭಗವಂತನನ್ನು ಪ್ರವಚನದಿಂದಾಗಲಿ, ಬುದ್ಧಿ ಸಾಮರ್ಥ್ಯದಿಂದಾಗಲಿ ಅನೇಕ ಶಾಸ್ತ್ರಶ್ರವಣದ ಬಲದಿಂದಾಗಲಿ ಪಡೆಯಲು ಸಾಧ್ಯವಿಲ್ಲ. ಭಗವಂತನ ಸರ್ವೋತ್ತಮತ್ವವನ್ನು ತಿಳಿದ ಯಾವನನ್ನು ಆ ಭಗವಂತನು ತನ್ನವನೆಂದು ಸ್ವೀಕರಿಸುವನೋ ಅವನಿಗೆ ಮಾತ್ರ ಭಗವಂತನು ಆ ಜೀವನ ಜ್ಞಾನಾನಂದಾತ್ಮಕವಾದ ಸ್ವರೂಪವನ್ನೂ, ತನ್ನ ಪೂರ್ಣಜ್ಞಾನಾನಂದಾದಿಸ್ವರೂಪವಾದ ಶರೀರವನ್ನು ಪ್ರಕಟಿಸುವನು. ॥ ೭೭ ॥

ಶ್ರೀಹರಿಯೇ ಮೋಕ್ಷದಾತೃವೆನ್ನುವುದನ್ನು ಆಚಾರ್ಯರು ಮುಂದಿನ ಪ್ರಮಾಣ ವಚನಗಳಿಂದಲೂ ಸಮರ್ಥಿಸುತ್ತಿದ್ದಾರೆ –

**ವಿಷ್ಣುರ್ಹಿ ದಾತಾ ಮೋಕ್ಷಸ್ಯ ವಾಯುಶ್ಚ ತದನುಜ್ಞಯಾ ॥ ೭೮ ॥**

**ಮೋಕ್ಷೋ ಜ್ಞಾನಂ ಚ ಕ್ರಮಶೋ ಮುಕ್ತಿಗೋ ಭೋಗ ಏವ ಚ ।**
**ಉತ್ತರೇಷಾಂ ಪ್ರಸಾದೇನ ನೀಚಾನಾಂ ನಾನ್ಯಥಾ ಭವೇತ್ ॥ ೭೯ ॥**

**ಅರ್ಥ :- ಮೋಕ್ಷಸ್ಯ** ಮೋಕ್ಷಕ್ಕೆ, **ವಿಷ್ಣುರ್ಹಿ ದಾತಾ** ವಿಷ್ಣುವೇ ದಾತೃವಾಗಿದ್ದಾನೆ, **ವಾಯುಶ್ಚ** ವಾಯುವು ಕೂಡ, **ತದನುಜ್ಞಯಾ** ವಿಷ್ಣುವಿನ ಅನುಜ್ಞೆಯಿಂದ ದಾತೃವಾಗಿದ್ದಾನೆ, **ನೀಚಾನಾಂ ಜ್ಞಾನಂ ಮೋಕ್ಷಶ್ಚ ಮುಕ್ತಿಗೋ ಭೋಗ ಏವ ಚ** ಅಧಮರಿಗೆ ಜ್ಞಾನ, ಮೋಕ್ಷ ಮತ್ತು ಮೋಕ್ಷದಲ್ಲಿ ಭೋಗ ಇವುಗಳು, **ಕ್ರಮಶಃ** ಕ್ರಮವಾಗಿ, **ಉತ್ತರೇಷಾಂ ಪ್ರಸಾದೇನ ಭವೇತ್** ತಮಗಿಂತಲೂ ಉತ್ತಮರಾದವರ ಅನುಗ್ರಹದಿಂದಲೇ ಆಗುವುದು, **ನಾನ್ಯಥಾ** ಬೇರೆ ಯಾವ ಸಾಧನದಿಂದಲೂ ಆಗಲಾರದು.

**ತಾತ್ಪರ್ಯ :-** ಸ್ಪಷ್ಟ.

**ವಿಶೇಷ ವಿಷಯ :-** ವಾಯುದೇವರು ಮಾತ್ರವಲ್ಲದೆ ಲಕ್ಷ್ಮೀದೇವಿಯೂ ಭಗವದನುಜ್ಞೆಯಿಂದ ಮೋಕ್ಷವನ್ನು ದಯಪಾಲಿಸಬಲ್ಲಳೆಂದೂ ಇಲ್ಲಿ ಗ್ರಹಿಸಬೇಕು. ॥ ೭೮, ೭೯ ॥

ಮೋಕ್ಷವನ್ನು ಪಡೆಯಲು ಅವಶ್ಯ ತಿಳಿಯಬೇಕಾದ ಪ್ರಮೇಯಗಳನ್ನು ಮುಂದಿನ ಶ್ಲೋಕಗಳಲ್ಲಿ ನಿರೂಪಿಸಲಾಗಿದೆ-

**ಸರ್ವೇಷಾಂ ಚ ಹರಿರ್ನಿತ್ಯಂ ನಿಯಂತಾ ತದ್ವಶಾಃ ಪರೇ ।**
**ತಾರತಮ್ಯಂ ತತೋ ಜ್ಞೇಯಂ ಸರ್ವೋಚ್ಚತ್ವಂ ಹರೇಸ್ತಥಾ ॥ ೮೦ ॥**

**ಏತದ್ವಿನಾ ನ ಕಸ್ಯಾಪಿ ವಿಮುಕ್ತಿಃ ಸ್ಯಾತ್ ಕಥಂಚನ ।**

**ಅರ್ಥ :- ಸರ್ವೇಷಾಂ ಚ** ಎಲ್ಲರಿಗೂ, **ಹರಿಃ ನಿತ್ಯಂ ನಿಯಂತಾ** ಶ್ರೀಹರಿಯು ಸರ್ವದಾ ನಿಯಾಮಕನಾಗಿದ್ದಾನೆ, **ಪರೇ ತದ್ವಶಾಃ** ಇತರರು ಅವನಿಗೆ ಅಧೀನರಾಗಿದ್ದಾರೆ, **ತತಃ** ಆ ಮೋಕ್ಷಕ್ಕಾಗಿ, **ತಾರತಮ್ಯಂ ಜ್ಞೇಯಂ** ತಾರತಮ್ಯವನ್ನು ತಿಳಯತಕ್ಕದ್ದು, **ತಥಾ ಹರೇಃ ಸರ್ವೋಚ್ಚತ್ವಂ ಜ್ಞೇಯಂ** ಹಾಗೆಯೇ ಶ್ರೀಹರಿಯ ಸರ್ವೋತ್ತಮತ್ವವನ್ನೂ ತಿಳಿಯಬೇಕು. **ಏತದ್ವಿನಾ** ಈ ಜ್ಞಾನವಿಲ್ಲದೆ, **ಕಸ್ಯಾಪಿ ಕಥಂಚನ** ಯಾರಿಗೂ, ಯಾವ ರೀತಿಯಿಂದಲೂ, **ನ ವಿಮುಕ್ತಿಃ ಸ್ಯಾತ್** ಮೋಕ್ಷವಾಗಲಾರದು.

**ಪಂಚಭೇದಾಂಶ್ಚ ವಿಜ್ಞಾಯ ವಿಷ್ಣೋಃ ಸ್ವಾಭೇದಮೇವ ಚ ॥ ೮೧ ॥**

**ನಿರ್ದೋಷತ್ವಂ ಗುಣೋದ್ರೇಕಂ ಜ್ಞಾತ್ವಾ ಮುಕ್ತಿರ್ನ ಚಾನ್ಯಥಾ ।**

**ಅರ್ಥ :- ಪಂಚಭೇದಾಂಶ್ಚ ವಿಜ್ಞಾಯ** ಪಂಚಭೇದಗಳನ್ನು ತಿಳಿದು, **ವಿಷ್ಣೋಃ ಸ್ವಾಭೇದಂ, ನಿರ್ದೋಷತ್ವಂ ಗುಣೋದ್ರೇಕಂ ಚ ಜ್ಞಾತ್ವಾ** ವಿಷ್ಣುವಿಗೆ ತನ್ನ ಅವಯವ, ಗುಣ ಕ್ರಿಯಾದಿಗಳಿಂದ ಅಭೇದವಿದೆ, ದೋಷರಾಹಿತ್ಯವಿದೆ ಮತ್ತು ಗುಣಪೂರ್ಣತ್ವವಿದೆ ಎಂಬುದನ್ನು ತಿಳಿದು, **ಮುಕ್ತಿಃ** ಮೋಕ್ಷವನ್ನು ಪಡೆಯಬಹುದು, ನಾನ್ಯಥಾ ಬೇರೆ ಸಾಧನಗಳಿಂದ ಮೋಕ್ಷವು ದೊರೆಯಲಾರದು.

**ಅವತಾರಾನ್ ಹರೇರ್ಜ್ಞಾತ್ವಾ ನಾವತಾರಾ ಹರೇಶ್ಚ ಯೇ ॥ ೮೨ ॥**

**ತದಾವೇಶಾಂಸ್ತಥಾ ಸಮ್ಯಗ್ ಜ್ಞಾತ್ವಾ ಮುಕ್ತಿರ್ನ ಚಾನ್ಯಥಾ ।**

**ಅರ್ಥ :- ಹರೇಃ ಅವತಾರನ್ ಜ್ಞಾತ್ವಾ** ಶ್ರೀಹರಿಯ ಅವತಾರಗಳನ್ನು ತಿಳಿದು, **ಯೇ ಹರೇಃ ನ ಅವತಾರಾಃ (ತಾಂಶ್ಚ ಜ್ಞಾತ್ವಾ)** ಯಾವುವು ಶ್ರೀಹರಿಯ ಅವತಾರಗಳಲ್ಲವೊ ಅವುಗಳನ್ನೂ ತಿಳಿದು, **ತಥಾ ತದಾವೇಶಾನ್ ಸಮ್ಯಗ್ ಜ್ಞಾತ್ವಾ** ಹಾಗೆಯೇ ಶ್ರೀಹರಿಯ ಆವೇಶಗಳನ್ನೂ ಸರಿಯಾಗಿ ತಿಳಿದು, **ಮುಕ್ತಿಃ ನ ಚಾನ್ಯಥಾ** ಮೋಕ್ಷವನ್ನು ಪಡೆಯಬಹುದು, ಬೇರೆ ಸಾಧನಗಳಿಂದ ಮೋಕ್ಷವನ್ನು ಪಡೆಯಲಾಗದು.

**ಸೃಷ್ಟಿರಕ್ಷಾಹೃತಿಜ್ಞಾನನಿಯತ್ಯಜ್ಞಾನಬಂಧನಾನ್ ॥ ೮೩ ॥**

**ಮೋಕ್ಷಂ ಚ ವಿಷ್ಣುತಸ್ತ್ವೆವ ಜ್ಞಾತ್ವಾ ಮುಕ್ತಿರ್ನ ಚಾನ್ಯಥಾ ।**

**ಅರ್ಥ :- ವಿಷ್ಣುತಸ್ತು** ವಿಷ್ಣುವಿನಿಂದಲೇ, **ಸೃಷ್ಟಿರಕ್ಷಾಹೃತಿಜ್ಞಾನನಿಯತ್ಯಜ್ಞಾನ ಬಂಧನಾನ್ ಮೋಕ್ಷಂ ಚ** ಜಗತ್ತಿಗೆ ಯಥಾಯೋಗ್ಯವಾಗಿ ಉಂಟಾಗುವ ಸೃಷ್ಟಿ, ಸ್ಥಿತಿ, ಸಂಹಾರ, ಜ್ಞಾನ, ನಿಯಮನ, ಅಜ್ಞಾನ, ಸಂಸಾರ ಬಂಧನಕ್ಕೆ ಕಾರಣಗಳಾದ ಕಾಮ, ಕರ್ಮಾದಿಗಳು, **ಮೋಕ್ಷ** ಇವೆಲ್ಲವೂ ಉಂಟಾಗುವುದೆಂದು, **ಜ್ಞಾತ್ವೈವ ಮುಕ್ತಿಃ** ತಿಳಿಯುವುದರಿಂದಲೇ ಮೋಕ್ಷವು, **ನ ಚಾನ್ಯಥಾ** ಬೇರೆ ಯಾವುದರಿಂದಲೂ ಮೋಕ್ಷು ದೊರಕಲಾರದು.

**ವೇದಾಂಶ್ಚ ಪಂಚರಾತ್ರಾಣಿ ಸೇತಿಹಾಸಪುರಾಣಕಾನ್ ॥ ೮೪ ॥**

**ಜ್ಞಾತ್ವಾ ವಿಷ್ಣುಪರಾನೇವ ಮುಚ್ಯತೇ ನಾನ್ಯಥಾ ಕ್ವಚಿತ್ ।**

**ಅರ್ಥ :- ಪಂಚರಾತ್ರಾಣಿ** ಪಂಚರಾತ್ರಗಳನ್ನು, **ಸೇತಿಹಾಸಪುರಾಣ ಕಾನ್** ಇತಿಹಾಸ, ಪುರಾಣಗಳಿಂದ ಸಹಿತವಾದ, **ವೇದಾಂಶ್ಚ** ವೇದಗಳನ್ನೂ, **ವಿಷ್ಣುಪರಾನ್ ಜ್ಞಾತ್ವೈವ ಮುಚ್ಯತೇ** ಮುಖ್ಯವಾಗಿ ವಿಷ್ಣು ಪ್ರತಿಪಾದಕಗಳೆಂದು ತಿಳಿಯುವುದರಿಂದಲೇ ಮುಕ್ತನಾಗುತ್ತಾನೆ, **ನಾನ್ಯಥಾ ಕ್ವಚಿತ್** ಎಂದೂ ಬೇರೆ ಸಾಧನಗಳಿಂದ ಮುಕ್ತನಾಗಲಾರನು.

**ತಾತ್ಪರ್ಯ :-** ಹಿಂದೆ ವಿವರಿಸಿದ ತಾರತಮ್ಯ, ವಿಷ್ಣು ಸರ್ವೋತ್ತಮತ್ವ, ಪಂಚಭೇದಗಳು ಇವುಗಳನ್ನು ತಿಳಿದವನು ಮಾತ್ರವೇ ಮುಕ್ತನಾಗಬಲ್ಲನು ಹೊರತು ಇತರರಾರೂ ಬೇರೆ ಯಾವ ಸಾಧನದ ಸಹಾಯದಿಂದಲೂ ಮುಕ್ತರಾಗಲಾರರು. ಇವಿಷ್ಟೇ ಅಲ್ಲದೆ, ಮುಮುಕ್ಷುವು ಭಗವಂತನಿಗೆ ಅವನ ಅವಯವಗಳು, ಅವತಾರಗಳು ಗುಣಕ್ರಿಯಾದಿಗಳು ಇವೆಲ್ಲದರಿಂದಲೂ ಅಭೇದವಿದೆ, ಅವನು ನಿರ್ದೋಷನೂ, ಗುಣ ಪೂರ್ಣನೂ ಆಗಿದ್ದಾನೆ ಎನ್ನುವುದನ್ನೂ ತಿಳಿದಿರಬೇಕು. ಹಾಗೆಯೇ ಯಾವುವು ಭಗವದಾವತಾರಗಳು, ಯಾವುವಲ್ಲ, ಭಗವಂತನ ಆವೇಶವೆಲ್ಲಿದೆ ಇವುಗಳೆಲ್ಲವನ್ನು ಆ ಪುರುಷನು ಅವಶ್ಯವಾಗಿ ತಿಳಿದಿರಬೇಕು. ಆ ಭಗವಂತನೇ ಚೇತನಾಚೇತನಾತ್ಮಕವಾದ ಈ ಜಗತ್ತಿನ ಸೃಷ್ಟಿ, ಸ್ಥಿತಿ, ಲಯ, ನಿಯಮನ, ಜ್ಞಾನ, ಅಜ್ಞಾನ, ಬಂಧ, ಮೋಕ್ಷಗಳಿಗೆ ಕಾರಣನಾಗಿದ್ದಾನೆ ಎಂಬ ಜ್ಞಾನವೂ ಅವನಿಗಿರಬೇಕು, ಪಂಚರಾತ್ರಗಳು, ರಾಮಾಯಣ, ಮಹಾಭಾರತ, ಪುರಾಣಗಳು, ವೇದಗಳು - ಇವೆಲ್ಲವೂ ಮುಖ್ಯವಾಗಿ ಭಗವಂತನನ್ನೇ ಪ್ರತಿಪಾದಿಸುವುವು ಎಂಬ ಜ್ಞಾನವೂ ಮುಮುಕ್ಷುವಿಗೆ ಇರಬೇಕು. ಈ ಜ್ಞಾನವನ್ನು ಬಿಟ್ಟು ಬೇರೆ ಯಾವ ಸಾಧನಗಳಿಂದಲೂ ಮೋಕ್ಷ ದೊರೆಯಲಾರದು. ॥ ೮೦ - ೮೪ ॥

ಮೋಕ್ಷಸಾಧನವಾದ ಜ್ಞಾನದ ಸ್ವರೂಪವನ್ನು ವಿವರಿಸಿದ ನಂತರ ಮೋಕ್ಷ ಸಾಧನವಾದ ಭಕ್ತಿಯ ಸ್ವರೂಪವನ್ನು ಈ ಮುಂದಿನ ಶ್ಲೋಕದಲ್ಲಿ ವಿವರಿಸಿದೆ.

**ಮಾಹಾತ್ಮ್ಯಜ್ಞಾನಪೂರ್ವಸ್ತು ಸುದೃಢಃ ಸರ್ವತೋಽಧಿಕಃ ॥ ೮೫ ॥**

**ಸ್ನೇಹೋ ಭಕ್ತಿರಿತಿ ಪ್ರೋಕ್ತಸ್ತಯಾ ಮುಕ್ತಿರ್ನ ಚಾನ್ಯಥಾ ।**

**ಅರ್ಥ :- ಮಹಾತ್ಮ್ಯಜ್ಞಾನಪೂರ್ವಸ್ತು** ಭಗವನ್ಮಾಹಾತ್ಮ್ಯ ಜ್ಞಾನಪೂರ್ವಕವಾದ, **ಸುದೃಢಃ** ಯಾವುದೇ ಅವಸ್ಥೆಯಲ್ಲೂ ಕದಲದಿರುವ, **ಸರ್ವತೋಽಧಿಕಃ**

ಇತರ ವಿಷಯ ಪದಾರ್ಥಗಳಲ್ಲಿರುವ ಸ್ನೇಹಕ್ಕಿಂತಲೂ ಅಧಿಕವಾದ, **ಸ್ನೇಹಃ** ಸ್ನೇಹವು, **ಭಕ್ತಿರಿತಿ ಪ್ರೋಕ್ತಃ** ಭಕ್ತಿಯೆಂದ ಹೇಳಲ್ಪಡುವುದು, **ತಯಾ ಮುಕ್ತಿಃ** ಅಂತಹ ಭಕ್ತಿಯಿಂದಲೇ ಮೋಕ್ಷವಾಗುವುದು, **ನ ಚ ಅನ್ಯಥಾ** ಬೇರೆ ಯಾವ ರೀತಿಯಿಂದಲೂ ಮೋಕ್ಷವಾಗಲಾರದು.

**ತಾತ್ಪರ್ಯ** :- ಸ್ಪಷ್ಟ.

**ವಿಶೇಷ ವಿಷಯ** :- ಮಹಾತ್ಮ್ಯಜ್ಞಾನ - ಬ್ರಹ್ಮಸೂತ್ರಗಳ ಮೂರನೆ ಅಧ್ಯಾಯವಾದ ಸಾಧನಾಧ್ಯಾಯದ ಭಕ್ತಿಪಾದದಲ್ಲಿ 'ಸಂಧ್ಯೇ ಸೃಷ್ಟಿರಾಹ ಹಿ' ಇತ್ಯಾದಿ ಸೂತ್ರಗಳಲ್ಲಿ, ಸರ್ವರೂ ಅಪೇಕ್ಷಿಸುವ, ಸುಖಕರವಾದ ಸ್ವಪ್ನಪದಾರ್ಥಗಳ ಸೃಷ್ಟಿಕರ್ತೃತ್ವ, ಸುಷುಪ್ತಿದಾತೃತ್ವ, ಜಾಗ್ರದವಸ್ಥಾಪ್ರವರ್ತಕತ್ವ ಮೊದಲಾದ ಅನೇಕ ಭಗವನ್ಮಹಿಮೆಗಳನ್ನು ಹೇಳಿದೆ. ತನಗೆ ಉಪಕಾರ ಮಾಡಿದ ತಂದೆ-ತಾಯಿಗಳ ಉಪಕಾರವನ್ನು ನೆನೆದಾಗ ಅವರಲ್ಲಿ ಭಕ್ತಿಯು ವರ್ಧಿಸುವಂತೆ, ಭಗವಂತನು ಮಾಡಿರುವ ಇಂತಹ ಅನೇಕ ಉಪಕಾರಗಳ ಜ್ಞಾನದಿಂದ ಅವನಲ್ಲಿ ಸ್ನೇಹವು ವರ್ಧಿಸಲು ಅವಕಾಶವಾಗುವುದು. ಆದ್ದರಿಂದ ಇಂತಹ ಭಗವನ್ಮಹಿಮೆಯ ಜ್ಞಾನವು ಅತ್ಯಾವಶ್ಯಕವೆಂದು ಭಾವ. ॥ ೮೫ ॥

ಮೋಕ್ಷಪ್ರದನಾದ ಭಗವಂತನು ಮುಕ್ತಿಯೋಗ್ಯರಿಗೆ ಮಾತ್ರ ಮೋಕ್ಷವನ್ನು ಕೊಡುವನೇ ಹೊರತು ಎಲ್ಲ ಜೀವರಿಗೂ ಅಲ್ಲ ಎಂಬ ಅಭಿಪ್ರಾಯದಿಂದ ಪ್ರಮಾಣ ವಚನಗಳಿಂದ ಜೀವತ್ರೈವಿಧ್ಯವನ್ನು ಮುಂದೆ ನಿರೂಪಿಸಲಾಗಿದೆ-

**ತ್ರಿವಿಧಾ ಜೀವಸಂಘಾಸ್ತು ದೇವಮಾನುಷದಾನವಾಃ ॥ ೮೬ ॥**

**ತತ್ರ ದೇವಾ ಮುಕ್ತಿಯೋಗ್ಯಾ ಮಾನುಷೇಷೂತ್ತಮಾಸ್ತಥಾ ।**
**ಮಧ್ಯಮಾ ಮಾನುಷಾ ಯೇ ತು ಸೃತಿಯೋಗ್ಯಾಃ ಸದೈವ ಹಿ ॥ ೮೭ ॥**

**ಅಧಮಾ ನಿರಯಾಯೈವ ದಾನವಾಸ್ತು ತಮೋಲಯಾಃ ।**
**ಮುಕ್ತಿರ್ನಿತ್ಯಾ ತಮಶ್ಚೈವ ನಾವೃತ್ತಿಃ ಪುನರೇತಯೋಃ ॥ ೮೮ ॥**

**ಅರ್ಥ** :- **ಜೀವಸಂಘಾಸ್ತು** ಜೀವಸಮೂಹಗಳಾದರೋ, **ದೇವಮಾನುಷದಾನವಾಃ** ದೇವತೆಗಳು, ಮನುಷ್ಯರು ಮತ್ತು ದಾನವರೆಂದು, **ತ್ರಿವಿಧಾಃ** ಮೂರು ವಿಧವಾಗಿವೆ **ತತ್ರ** ಅವರಲ್ಲಿ, **ದೇವಾಃ ಮುಕ್ತಿಯೋಗ್ಯಾಃ**

ದೇವತೆಗಳು ಮುಕ್ತಿಯೋಗ್ಯರು, **ಮಾನುಷೇಷು ಉತ್ತಮಾಃ** ಮನುಷ್ಯರಲ್ಲಿ ಉತ್ತಮರೂ, **ತಥಾ** ಹಾಗೆಯೇ ಮುಕ್ತಿಯೋಗ್ಯರು. **ಯೇ ತು ಮಧ್ಯಮಾಃ ಮಾನುಷಾಃ** ಯಾರು ಮಧ್ಯಮ ಮನುಷ್ಯರೋ ಅವರು, **ಸದೈವ ಹಿ ಸೃತಿ ಯೋಗ್ಯಾಃ** ಯಾವಾಗಲೂ ಸಂಸಾರ ಯೋಗ್ಯರೇ ಆಗಿರುವರು, **ಅಧಮಾಃ ನಿರಯಾಯ ಏವ** ಅಧಮ ಮನುಷ್ಯರು ತಮಸ್ಸಿಗೇ ಹೋಗುವರು. **ದಾನವಾಸ್ತು ತಮೋಲಯಾಃ** ದಾನವರಾದರೋ ಅಂಧತಾಮಿಸ್ರವೆಂಬ ನರಕವನ್ನು ಹೊಂದುವರು, **ಮುಕ್ತಿಃ ನಿತ್ಯಾ** ಮೋಕ್ಷವು ಶಾಶ್ವತವಾದದು, **ತಮಶ್ಚೈವ (ನಿತ್ಯಂ)** ತಮಸ್ಸೂ ಶಾಶ್ವತವಾದುದು, **ಏತಯೋಃ ಪುನಃ ನ ಆವೃತ್ತಿಃ** ಮೋಕ್ಷ ತಪಸ್ಸು ಇವುಗಳಿಂದ ಪುನರಾವೃತ್ತಿ ಇಲ್ಲ.

**ತಾತ್ಪರ್ಯ :-** ದೇವತೆಗಳು, ಮನುಷ್ಯರು ಮತ್ತು ದಾನವರೆಂದು ಜೀವಸಮೂಹ ಮೂರು ವಿಧವಾಗಿದೆ. ಇವರಲ್ಲಿ ದೇವತೆಗಳು ಮೋಕ್ಷವನ್ನೇ ಪಡೆಯತಕ್ಕವರು. ಮನುಷ್ಯರೂ ಉತ್ತಮರು, ಮಧ್ಯಮರು ಮತ್ತು ಅಧಮರೆಂದು ತ್ರಿವಿಧರಾಗಿದ್ದಾರೆ. ಇವರಲ್ಲಿ ಮನುಷ್ಯೋತ್ತಮರು ಮುಕ್ತಿಯೋಗ್ಯರು, ಮಧ್ಯಮರು ನಿತ್ಯ ಸಂಸಾರಿಗಳು. ಅಧಮ ಮನುಷ್ಯರು ತಾಮಿಸ್ರವೆಂಬ ನಿತ್ಯ ನರಕ ಯೋಗ್ಯರು. ದಾನವರಾದರೋ ಅಂಧತಾಮಿಸ್ರವೆಂಬ ನಿತ್ಯ ನರಕವನ್ನು ಪಡೆಯತಕ್ಕವರು. ಸ್ವರ್ಗಾದಿಲೋಕವನ್ನು ಪಡೆದ ಜೀವರು ಆ ಲೋಕದಿಂದ ಹಿಂದಿರುಗುವರು. ಆದರೆ ಮೋಕ್ಷವನ್ನಾಗಲೀ ತಮಸ್ಸನ್ನಾಗಲಿ ಪಡೆದ ಜೀವರು ಹಿಂದಿರುಗಲಾರರು. ಆ ಲೋಕಗಳು ಅವರಿಗೆ ಶಾಶ್ವತವಾದದ್ದು.

**ವಿಶೇಷ ವಿಷಯ :-** ನಿರಯ - ತಮೋಲೋಕವು ತಾಮಿಸ್ರ ಮತ್ತು ಅಂಧ ತಾಮಿಸ್ರವೆಂದು ಎರಡು ವಿಧವಾಗಿದೆ. ಇವುಗಳಲ್ಲಿ ತಾಮಿಸ್ರ ಲೋಕದಲ್ಲಿ ಅಲ್ಪ ತಮಸ್ಸೂ ಅಂಧ ತಾಮಿಸ್ರದಲ್ಲಿ ಅತಿನಿಬಿಡವಾದ ತಮಸ್ಸೂ ಇರುವುದು. 'ನಿರ್ಗತಂ ಅಯನಂ ಯಸ್ಮಾತ್ - ಯಾವುದರಿಂದ ಮೇಲೆ ಬರುವ ಮಾರ್ಗ ವಿಲ್ಲವೋ ಅದು' ಎಂಬ ವ್ಯುತ್ಪತ್ತಿಯನ್ನನುಸರಿಸಿ ಪುನರುತ್ಥಾನವಿಲ್ಲದ ಈ ಎರಡೂ ಲೋಕಗಳಿಗೆ ನಿರಯವೆಂದು ಹೆಸರು. ಜೀವಸಮೂಹದಲ್ಲಿ ಮನುಷ್ಯಾಧಮರು ಮತ್ತು ಅವರಿಗಿಂತಲೂ ಅಧಮರಾದ ಕೆಲವು ದಾನವರು ತಾಮಿಸ್ರ ಲೋಕವನ್ನು ಪಡೆಯುವರು. ಅಧಮಾಧಮರಾದ ಕಲಿ ಮೊದಲಾದ ದಾನವರು ಅಂಧತಾಮಿಸ್ರವನ್ನು ಹೊಂದುವರು. ಇದೇ ವಿಷಯವನ್ನು

ಶ್ರೀ ತ್ರಿವಿಕ್ರಮಪಂಡಿತಾಚಾರ್ಯರು ವಾಯುಸ್ತುತಿಯಲ್ಲಿ 'ತಾಮಿಸ್ರಾಂಧಾದಿ ಕಾಖ್ಯೇ ತಮಸಿ ಸುಬಹುಲಂ ದುಃಖಯಸ್ಯನ್ಯಥಾಜ್ಞಾನ್' ಎಂಬ ಶ್ಲೋಕದಲ್ಲಿ ನಿರೂಪಿಸಿರುವರು.

ನಿರ್ಣಯದ ಶ್ಲೋಕದಲ್ಲಿರುವ ನಿರಯಪದಕ್ಕೆ ಮೇಲೆ ವಿವರಿಸಿದಂತೆ ಅರ್ಥ ಮಾಡುವುದೇ ಯುಕ್ತವಾಗಿದೆ. ಹಾಗಲ್ಲದೆ ನಿರಯವೆಂದರೆ ಸಾಮಾನ್ಯ ನರಕಲೋಕವೆಂದು ಅರ್ಥಮಾಡಿದಲ್ಲಿ ಮನುಷ್ಯೋತ್ತಮರೂ, ಮನುಷ್ಯ ಮಧ್ಯಮರೂ ಸಂಸಾರ ದೆಸೆಯಲ್ಲಿ ತಾವು ಮಾಡಿದ ಪಾಪಕರ್ಮದ ಫಲವಾಗಿ ನರಕಲೋಕಕ್ಕೆ ಹೋಗುವುದರಿಂದ, ಮನುಷ್ಯಾಧಮರೇ ನರಕಕ್ಕೆ ಹೋಗುವರೆಂಬ ಅಭಿಪ್ರಾಯದ 'ಅಧಮಾ ನಿರಯಾಯ್ಯೈವ' ಎಂಬ ಮಾತು ಸಮಂಜಸವಾಗಲಾರದು.

ಉತ್ತಮಜೀವರ ಸ್ವರೂಪಸುಖಾನುಭವದಂತೆ, ಅಧಮಜೀವರ ಸ್ವರೂಪ ದುಃಖಾನುಭವದಂತೆ, ಮಧ್ಯಮ ಜೀವರ ಸ್ವರೂಪಭೂತವಾದ ಸುಖ-ದುಃಖ ಗಳ ಅನುಭವವೂ ನಿತ್ಯವಾದದ್ದೇ. ಆದರೆ, ಮೋಕ್ಷ ಮತ್ತು ತಮಸ್ಸುಗಳು ನಿತ್ಯಲೋಕಗಳಾಗಿರುವಂತೆ ಮಧ್ಯಮ ಜೀವರು ತಮ್ಮ ಸ್ವರೂಪಭೂತ ಸುಖ ದುಃಖಗಳನ್ನು ಅನುಭವಿಸುವ ಲೋಕಗಳು ನಿತ್ಯವಲ್ಲ. ಅವರು ಅನಿತ್ಯವಾದ ಸ್ವರ್ಗ, ನರಕ, ಭೂಲೋಕಗಳಲ್ಲಿ ಸಂಚರಿಸುತ್ತಿರುವರು. ಆದ್ದರಿಂದಲೇ ನಿರ್ಣಯದಲ್ಲಿ 'ಮುಕ್ತಿರ್ನಿತ್ಯಾ ತಮಶ್ಚೈವ' ಎಂದು ಎರಡು ಲೋಕಗಳನ್ನು ಮಾತ್ರ ನಿತ್ಯವೆಂದು ಹೇಳಲಾಗಿದೆ. ನಿತ್ಯಸಂಸಾರಿಗಳು ಅನಿತ್ಯಲೋಕಗಳಲ್ಲೇ ಸಂಚರಿಸುವವರೆನ್ನುವುದನ್ನು ಶ್ರೀತ್ರಿವಿಕ್ರಮ ಪಂಡಿತಾಚಾರ್ಯರು 'ತ್ರಿದಿವನಿರ ಯಭೂಗೋಚರಾನ್ ನಿತ್ಯಬದ್ಧಾನ್' ಎಂಬ ವಾಯುಸ್ತುತಿಯ ಶ್ಲೋಕದಲ್ಲಿ ಹೇಳಿದ್ದಾರೆ. ॥ ೮೬ - ೮೮ ॥

**ದೇವಾನಾಂ ನಿರಯೋ ನಾಸ್ತಿ ತಮಶ್ಚಾಪಿ ಕಥಂಚನ ।**
**ಅಸುರಾಣಾಂ ತಥಾ ಮುಕ್ತಿಃ ಕದಾಚಿತ್ ಕೇನಚಿತ್ ಕ್ವಚಿತ್ ॥ ೮೯ ॥**

**ಮಾನುಷಾಣಾಂ ಮಧ್ಯಮಾನಾಂ ನ ಚೈತದ್ ದ್ವಯಮಾಪ್ಯತೇ ।**

**ಅರ್ಥ** :- **ದೇವಾನಾಂ** ದೇವತೆಗಳಿಗೆ, **ಕಥಂಚನ** ಯಾವ ಕಾರಣ ದಿಂದಲೂ, **ನಿರಯಃ ತಮಶ್ಚಾಪಿ ನಾಸ್ತಿ** ನರಕವಾಗಲಿ, ತಮಸ್ಸಾಗಲಿ ಇಲ್ಲ.

**ತಥಾ ಅಸುರಾಣಾಂ** ಹಾಗೆಯೇ ಅಸುರರಿಗೆ, **ಕದಾಚಿತ್ ಕೇನಚಿತ್ ಕ್ವಚಿತ್** ಯಾವ ಕಾಲದಲ್ಲೂ, ಯಾವ ಕಾರಣದಿಂದಲೂ, ಯಾವ ದೇಶದಲ್ಲೂ, **ಮುಕ್ತಿಃ (ನಾಸ್ತಿ)** ಮೋಕ್ಷವಾಗುವುದಿಲ್ಲ. **ಮಧ್ಯಮಾನಾಂ ಮಾನುಷಾಣಾಂ** ಮಧ್ಯಮ ಮನುಷ್ಯರಿಗೆ, **ಏತದ್ ದ್ವಯಂ** ಮೋಕ್ಷ ಮತ್ತು ತಮಸ್ಸು ಇವೆರಡು, **ನ ಚ ಆಪ್ಯತೇ** ಲಭ್ಯವಾಗುವುದಿಲ್ಲ.

**ತಾತ್ಪರ್ಯ :-** ಮುಕ್ತಿಯೋಗ್ಯರಾದ ದೇವತೆಗಳಿಗೆ ಯಾವುದೇ ಪಾಪ ಕರ್ಮದಿಂದಲೂ ನರಕವಾಗಲಾರದು. ಎಂತಹ ಮಹಾಪಾತಕವನ್ನಾಚರಿಸಿ ದರೂ ತಮಸ್ಸೂ ಆಗದು. ದಾನವರಿಗೆ ಪುಣ್ಯಕರ್ಮದಿಂದ ಸ್ವರ್ಗಲೋಕ ಪ್ರಾಪ್ತಿಯಾಗುವುದಾದರೂ ಎಂದೂ, ಎಲ್ಲೂ, ಯಾವ ಸಾಧನದ ಬಲ ದಿಂದಲೂ ಮೋಕ್ಷವಾಗಲು ಸಾಧ್ಯವಿಲ್ಲ. ಮಧ್ಯಮ ಮನುಷ್ಯರಿಗೆ ಸ್ವರ್ಗನರಕ ಭೂಲೋಕಗಳಲ್ಲಿ ಸಂಚಾರವಿರುವುದೇ ಹೊರತು ಎಂದೂ ಮೋಕ್ಷವಾಗಲಿ ತಮಸ್ಸಾಗಲಿ ಲಭಿಸಲಾರದು. ॥ ೮೯ ॥

ಅನಂತಾನಂತ ಜೀವರಲ್ಲಿ ಇವರು ಅಸುರರು, ಇವರಿಗೆ ತಮಸ್ಸಾಗುವು ದೆಂದೂ, ಇವರು ದೇವತೆಗಳು ಇವರಿಗೆ ಮೋಕ್ಷವಾಗುವುದೆಂದೂ ನಿರ್ಣಯಿ ಸಲು ಹೇಗೆ ಸಾಧ್ಯವೆಂಬ ಶಂಕೆಗೆ ಮುಂದೆ ಸಮಾಧಾನವನ್ನು ಹೇಳಿದೆ -

**ಅಸುರಾಣಾಂ ತಮಃಪ್ರಾಪ್ತಿಸ್ತದಾ ನಿಯಮತೋ ಭವೇತ್ ॥ ೯೦ ॥**

**ಯದಾ ತಾ ಜ್ಞಾನಿಸದ್ಭಾವೇ ನೈವ ಗೃಹ್ಣಂತಿ ತತ್ಪರಂ ।**
**ತದಾ ಮುಕ್ತಿರ್ಹಿ ದೇವಾನಾಂ ಯದಾ ಪ್ರತ್ಯಕ್ಷಗೋ ಹರಿಃ ॥ ೯೧ ॥**

**ಸ್ವಯೋಗ್ಯಯೋಪಾಸನಯಾ ತನ್ವಾ ತದ್ಯೋಗ್ಯಯಾ ತಥಾ ।**

**ಅರ್ಥ :- ಯದಾ ಜ್ಞಾನಿಸದ್ಭಾವೇ ತು** ಯಾವಾಗ ಜ್ಞಾನಿಗಳಿದ್ದರೂ, **ತತ್ ಪರಮ್** ಆ ಸರ್ವೋತ್ತಮವಾದ ನಾರಾಯಣರೂಪವಾದ ವಸ್ತುವನ್ನು **ನೈವ ಗೃಹ್ಣಂತಿ** ಸ್ವೀಕರಿಸುವುದಿಲ್ಲವೋ, **ತದಾ** ಆಗ, **ಅಸುರಾಣಾಂ ತಮಃ ಪ್ರಾಪ್ತಿಃ** ಅಸುರರಿಗೆ ತಮಸ್ಸಿನ ಪ್ರಾಪ್ತಿಯು, **ನಿಯಮತೋ ಭವೇತ್** ತಪ್ಪದೇ ಆಗುವುದು. **ತಥಾ** ಹಾಗೆಯೇ, **ಯದಾ** ಯಾವಾಗ, **ಸ್ವಯೋಗ್ಯಯೋಪಾಸ ನಯಾ** ತಮಗೆ ಯೋಗ್ಯವಾದ ಉಪಾಸನೆಯಿಂದ, **ತದ್ಯೋಗ್ಯಯಾ** ಅವರ

ಅಪರೋಕ್ಷಜ್ಞಾನಕ್ಕೆ ಯೋಗ್ಯವಾದ, ತನ್ವಾ ಬಿಂಬಮೂರ್ತಿಯಿಂದ, **ಹರಿಃ ಪ್ರತ್ಯಕ್ಷಗಃ** ಶ್ರೀಹರಿಯು ಪ್ರತ್ಯಕ್ಷಗೋಚರನಾಗುವನೋ, **ತದಾ** ಆಗ, **ದೇವಾನಾಂ** ದೇವತೆಗಳು ಮೊದಲಾದ ಉತ್ತಮ ಜೀವರಿಗೆ, **ಮುಕ್ತಿಃ ಹಿ** ಮುಕ್ತಿಯಾಗವುದೆಂದು ನಿರ್ಣಯವು.

**ತಾತ್ಪರ್ಯ** :- ಯಾವ ಜೀವರು, ಉಪದೇಶ ಮಾಡಬಲ್ಲ ಜ್ಞಾನಿಗಳಿದ್ದರೂ ಅವರಲ್ಲಿರುವ ದ್ವೇಷದಿಂದಾಗಿ, ಜ್ಞಾನದಲ್ಲಿರುವ ಅವಿಶ್ವಾಸದಿಂದಾಗಿ, ಶ್ರೀಹರಿಯಲ್ಲಿರುವ ದ್ವೇಷಪ್ರಕರ್ಷದಿಂದಾಗಿ, ಜ್ಞಾನಿಗಳ ಮುಖದಿಂದ ಭಗವಂತನ ಮಹಿಮೆಯನ್ನು ಶ್ರವಣ ಮಾಡಿ ತಮ್ಮ ಹೃದಯದಲ್ಲಿ ಭಗವಂತನನ್ನು ಸ್ವೀಕರಿಸುವುದಿಲ್ಲವೋ ಅವರು ಅಸುರರು. ಅವರಿಗೆ ತಮಃಪ್ರಾಪ್ತಿಯಾಗುವುದು ಖಚಿತ. ಅಂತೆಯೇ ಉತ್ತಮ ಜೀವರು ತಮಗೆ ಯೋಗ್ಯವಾದ ಉಪಾಸನೆಯನ್ನು ಮಾಡಿ, ತಾವು ಅಪರೋಕ್ಷೀ ಕರಿಸಲು ಯೋಗ್ಯವಾದ, ಬಿಂಬನಾದ ಭಗವಂತನ ಮೂರ್ತಿಯನ್ನು ನೋಡುವರೋ ಆಗ ಅವರಿಗೆ ಮೋಕ್ಷವಾಗುವುದೆಂದು ಶ್ರುತ್ಯಾದಿಗಳ ನಿರ್ಣಯವಾಗಿದೆ.

**ವಿಶೇಷ ವಿಷಯ** :- ಶ್ರೀಹರಿಯ ಯಥಾರ್ಥಜ್ಞಾನವಿಲ್ಲದಿರುವುದೇ ಅಸುರರ ಲಕ್ಷಣವಲ್ಲ. ಸಜ್ಜನರ ಸಮಾಗಮವಿಲ್ಲದಾಗ ಉತ್ತಮ ಜೀವರಿಗೂ ಕೆಲವೊಮ್ಮೆ ಭಗವಂತನ ಜ್ಞಾನ ಇಲ್ಲದಿರುವುದುಂಟು. ಸತ್ಸಮಾಗಮವಿದ್ದರೂ ಭಗವಂತನಲ್ಲಿ ಆದರ ಹುಟ್ಟದಿದ್ದರೆ ಮಾತ್ರ ಅವರು ಅಸುರರೆಂದೂ ಅವರಿಗೆ ತಮಸ್ಸಾಗುವುದೆಂದೂ ನಿರ್ಣಯಿಸಬಹುದು. ಆದ್ದರಿಂದಲೇ ನಿರ್ಣಯದಲ್ಲಿ 'ಜ್ಞಾನಿಸದ್ಭಾವೇ' ಎಂಬ ಪದವಿದೆ.

ಉತ್ತಮ ಜೀವರಿಗಾಗಲಿ ಅಧಮ ಜೀವರಿಗಾಗಲಿ ಅವರವರ ಸಾಧನ ಸಂಪೂರ್ತಿಯಾಗಿದ್ದರೂ ಬ್ರಹ್ಮದೇವರ, ಪರನಾಮಕವಾದ ನೂರು ವರ್ಷ ಕಾಲದ ನಂತರವೇ ಮೋಕ್ಷವೂ ತಮಸ್ಸೂ ಆಗುವುದೆನ್ನುವುದು ಸಿದ್ಧಾಂತದ ರಹಸ್ಯ ಪ್ರಮೇಯವಾಗಿದೆ. ॥ ೯೦ - ೯೧ ॥

ಉತ್ತಮ ಜೀವರ ಉಪಾಸನೆಯಲ್ಲಿ ವೈವಿಧ್ಯವಿರುವುದೆಂದು ಸ್ವಯೋಗ್ಯೋ ಪಾಸನಯಾ' ಎಂಬ ಪದದಿಂದ ಸೂಚಿತವಾಗಿದೆ. ಅದರ ವಿವರವನ್ನು ಮುಂದೆ ನಿರೂಪಿಸಲಾಗಿದೆ-

**ಸರ್ವೈರ್ಗುಣೈರ್ಬ್ರಹ್ಮಣಾ ತು ಸಮುಪಾಸ್ಯೋ ಹರಿಸ್ಸದಾ ॥ ೯೨ ॥**

**ಆನಂದೋ ಜ್ಞಃ ಸದಾತ್ಮೇತಿ ಹ್ಯುಪಾಸ್ಯೋಮಾನುಷೈರ್ಹರಿಃ ।**
**ಯಥಾಕ್ರಮಂ ಗುಣೋದ್ರೇಕಾತ್ ತದನ್ಯೈರಾವಿರಿಂಚತಃ ॥ ೯೩ ॥**

**ಅರ್ಥ :- ಬ್ರಹ್ಮಣಾ ತು** ಚತುರ್ಮುಖನಿಂದಾದರೋ, **ಸರ್ವೈಃ ಗುಣೈಃ** ಅನಂತ ವೇದೋಕ್ತವಾದ ಗುಣಗಳಿಂದ, **ಹರಿಃ ಸದಾ ಸಮುಪಾಸ್ಯಃ** ಶ್ರೀಹರಿಯು ಸರ್ವದಾ ಭಕ್ತಿಪೂರ್ವಕ ಉಪಾಸ್ಯನಾಗಿದ್ದಾನೆ. **ಮಾನುಷೈಃ** ಮನುಷ್ಯೋತ್ತಮರಿಂದ, **ಹರಿಃ** ಶ್ರೀಹರಿಯು, **ಆನಂದಃ ಜ್ಞಃ ಸತ್ ಆತ್ಮಾ ಇತಿ** ಆನಂದಸ್ವರೂಪನು, ಜ್ಞಾನಸ್ವರೂಪನು, ನಿರ್ದೋಷನು ಮತ್ತು ಸ್ವಾಮಿ ಯೆಂದು, **ಉಪಸ್ಯೋ ಹಿ** ಉಪಾಸಿಸಲ್ಪಡಲು ಯೋಗ್ಯನೆಂದು ಪ್ರಸಿದ್ಧವಾಗಿದೆ. **ಆವಿರಿಂಚತಃ** ಬ್ರಹ್ಮದೇವರವರೆಗಿರುವ, **ತದನ್ಯೈಃ** ಮನುಷ್ಯೋತ್ತಮರಿಂದ ಭಿನ್ನ ರಾದ ಮುಕ್ತಿಯೋಗ್ಯರಿಂದ, ಯಥಾಕ್ರಮಂ ಕ್ರಮವನ್ನನುಸರಿಸಿ, **ಗುಣೋದ್ರೇ ಕಾತ್ (ಹರಿಃ ಉಪಾಸ್ಯಃ)** ತಮಗೆ ಯೋಗ್ಯವಾದ ಅಧಿಕಗುಣಗಳಿಂದ ಶ್ರೀಹರಿಯು ಉಪಾಸ್ಯನಾಗಿದ್ದಾನೆ.

**ತಾತ್ಪರ್ಯ :-** ಚತುರ್ಮುಖ ಬ್ರಹ್ಮನಿಗೆ ಅನಂತವೇದೋಕ್ತವಾದ ಸರ್ವ ಗುಣಗಳಿಂದಲೂ ಭಗವಂತನ ಉಪಾಸನೆ ಮಾಡುವ ಅಧಿಕಾರವಿದೆ. ಮಾನುಷೋತ್ತಮರು ಆನಂದ, ಜ್ಞಾನ, ನಿರ್ದೋಷ, ಸ್ವಾಮಿ ಎಂದು ನಾಲ್ಕು ಗುಣಗಳಿಂದ ಮಾತ್ರ ಭಗವದುಪಾಸನೆ ಮಾಡಲು ಅರ್ಹರು. ಮನುಷ್ಯೋತ್ತಮ ಭಿನ್ನರಾದ ಋಷಿಗಳು ಗಂಧರ್ವರೇ ಮೊದಲಾದ ಬ್ರಹ್ಮದೇವರವರೆಗಿರುವ ಮುಕ್ತಿಯೋಗ್ಯರು ತಮ್ಮ ತಮ್ಮ ಯೋಗ್ಯತೆಗನುಗುಣವಾಗಿ ಅಧಿಕಾಧಿಕ ಗುಣ ಗಳಿಂದ ಭಗವದುಪಾಸನೆ ಮಾಡಲು ಅರ್ಹರಾಗಿದ್ದಾರೆ. ॥ ೯೨ - ೯೩ ॥

ಮನುಷ್ಯೋತ್ತಮರೇ ಮೊದಲಾದವರು ತಪಸ್ಸು ಮೊದಲಾದ ಸಾಧನೆ ಗಳಿಂದ ಬ್ರಹ್ಮಪದವಿಯನ್ನು ಪಡೆಯಬಲ್ಲವರಾದಲ್ಲಿ ಉಪಾಸನೆಯ ವಿಭಾಗ ವನ್ನು ಹೇಳಿದ್ದು ವ್ಯರ್ಥವಾಗುವುದು ಎಂಬ ಶಂಕೆಯನ್ನು ಮುಂದಿನ ಶ್ಲೋಕದಲ್ಲಿ ಪರಿಹರಿಸಲಾಗಿದೆ-

**ಬ್ರಹ್ಮತ್ವಯೋಗ್ಯಾ ಋಜವೋ ನಾಮ ದೇವಾಃ ಪೃಥಗ್ಗಣಾಃ ।**
**ತೈರವಾಪ್ಯಂ ಪದಂ ತತ್ತು ನೈವಾನ್ಯೈಃ ಸಾಧನೈರಪಿ ॥ ೯೪ ॥**

**ಅರ್ಥ :- ಋಜವೋ ನಾಮ** ಋಜುಗಳೆಂಬ ಹೆಸರಿನ, **ಬ್ರಹ್ಮತ್ವ ಯೋಗ್ಯಾಃ** ಬ್ರಹ್ಮ ಪದವಿಗೆ ಬರಲು ಯೋಗ್ಯವಾದ, **ದೇವಾಃ ಪೃಥಗ್ಗಣಾಃ** ದೇವತೆಗಳು ಪ್ರತ್ಯೇಕವಾದ ಒಂದು ಗುಂಪಾಗಿರುವರು. **ತತ್ತು ಪದಂ** ಆ ಬ್ರಹ್ಮಪದವಿಯಾದರೋ, **ತೈಃ ಅವಾಪ್ಯಂ** ಅವರಿಂದ ಹೊಂದಲು ಯೋಗ್ಯವಾದದ್ದು. **ಅನ್ಯೈಃ** ಇತರ ಜೀವರಿಂದ, **ಸಾಧನೈರಪಿ** ಯಾವುದೇ ಸಾಧನಗಳಿಂದಲೂ, **ನೈವ (ಆಪ್ಯಂ)** ಹೊಂದಲ ಸಾಧ್ಯವಾದುದು. ॥ ೯೪ ॥

**ತಾತ್ಪರ್ಯ :-** ಸ್ಪಷ್ಟ.

ತಾರತಮ್ಯವು ಅನಾದಿನಿತ್ಯವಾಗಿದೆ. ಅದನ್ನು ವ್ಯತ್ಯಸ್ತಗೊಳಿಸುವುದು ಅಶಕ್ಯ -

**ಏವಂ ಸರ್ವಪದಾನಾಂ ಚ ಯೋಗ್ಯಾಃ ಸಂತಿ ಪೃಥಗ್ಗಣಾಃ ।**
**ತಸ್ಮಾದನಾದ್ಯನಂತಂ ಹಿ ತಾರತಮ್ಯಂ ಚಿದಾತ್ಮನಾಮ್ ॥ ೯೫ ॥**

**ತಚ್ಚ ನೈವಾನ್ಯಥಾ ಕರ್ತುಂ ಶಕ್ಯಂ ಕೇನಾಪಿ ಕುತ್ರಚಿತ್ ।**
**ಅಯೋಗ್ಯಮಿಚ್ಛನ್ ಪುರುಷಃ ಪತತ್ಯೇವ ನ ಸಂಶಯಃ ॥ ೯೬ ॥**

**ಅರ್ಥ :- ಏವಂ** ಇದೇ ರೀತಿಯಾಗಿ, **ಸರ್ವಪದಾನಾಂ ಚ** ರುದ್ರಾದಿ ಸರ್ವಪದವಿಗಳಿಗೂ, **ಯೋಗ್ಯಾಃ ಪೃಥಗ್ಗಣಾಃ ಸಂತಿ** ಯೋಗ್ಯರಾದ ಪ್ರತ್ಯೇಕ ಜೀವರಾಶಿಗಳಿರುವರು. **ತಸ್ಮಾತ್ ಚಿದಾತ್ಮನಾಂ ತಾರತಮ್ಯಂ** ಆ ಕಾರಣದಿಂದ ಚೇತನರ ತಾರತಮ್ಯವು, **ಅನಾದ್ಯನಂತಂ ಹಿ** ಅನಾದಿ ನಿತ್ಯವಾದುದೆಂದು ಪ್ರಮಾಣಸಿದ್ಧವಾಗಿದೆ. **ತಚ್ಚ** ಆ ತಾರತಮ್ಯವಾದರೋ, **ಕೇನಾಪಿ ಕುತ್ರಚಿತ್** ಯಾರಿಂದಲೂ, ಎಲ್ಲೂ, **ಅನ್ಯಥಾ ಕರ್ತುಂ** ಬದಲಾಯಿಸಲು, **ನೈವ ಶಕ್ಯಂ** ಸರ್ವಥಾ ಸಾಧ್ಯವಿಲ್ಲ. **ಅಯೋಗ್ಯಮಿಚ್ಛನ್ ಪುರುಷಃ** ಅಯೋಗ್ಯವಾದುದನ್ನು ಬಯಸುವ ಪುರುಷನು, **ಪತತ್ಯೇವ, ನ ಸಂಶಯಃ** ಖಂಡಿತವಾಗಿಯೂ ಅಧಃಪತನವನ್ನು ಹೊಂದುವನು ಸಂಶಯವಿಲ್ಲ.

**ತಾತ್ಪರ್ಯ :-** ಬ್ರಹ್ಮಪದವಿಗೆ ಯೋಗ್ಯವಾದ ಜೀವರಾಶಿಗಳಿರುವಂತೆ ರುದ್ರಾದಿ ಎಲ್ಲ ಪದವಿಗಳಿಗೂ ಯೋಗ್ಯವಾದ ಜೀವರ ರಾಶಿಗಳು ಪ್ರತ್ಯೇಕವಾಗಿ ಇರುತ್ತವೆ. ಆದ್ದರಿಂದ ಚೇತನರ ತಾರತಮ್ಯವು ಅನಾದಿನಿತ್ಯವಾದದ್ದು ಬದಲಾಯಿಸಲು ಅಶಕ್ಯವಾದದ್ದು. ಸ್ವೋತ್ತಮಪದವಿಯನ್ನು ಹೊಂದುವುದು

ಅಶಕ್ಯವಷ್ಟೇ ಅಲ್ಲ ಅದನ್ನು ಬಯಸುವುದೂ ಕೂಡ ನಿಃಸಂಶಯವಾಗಿ ಅಧಃಪತನಕ್ಕೆ ಕಾರಣವಾಗುವುದು. ॥ ೯೫ - ೯೬ ॥

ಭಗವದಪರೋಕ್ಷಕ್ಕೆ ಮುಖ್ಯಸಾಧನದ ಉಪಾಸನೆಯ ಸ್ವರೂಪ ಮತ್ತು ಇತರ ಸಹಕಾರಿ ಕಾರಣಗಳನ್ನು ಇಲ್ಲಿ ಹೇಳಲಾಗಿದೆ-

**ತಸ್ಮಾದ್ ಯೋಗ್ಯಾನುಸಾರೇಣ ಸೇವ್ಯೋ ವಿಷ್ಣುಃ ಸದೈವ ಹಿ ।**
**ಅಚ್ಛಿದ್ರಸೇವನಾಚ್ಚೈವ ನಿಷ್ಕಾಮತ್ವಾಚ್ಚ ಯೋಗ್ಯತಃ ॥ ೯೭ ॥**

**ದ್ರಷ್ಟುಂ ಶಕ್ಯೋ ಹರಿಸ್ಸರ್ವೈರ್ನಾನ್ಯಥಾ ತು ಕಥಂಚನ ।**
**ನಿಯಮೋಽಯಂ ಹರೇರ್ಯಸ್ಮಾನ್ನೋಲ್ಲಂಘ್ಯಃ ಸರ್ವಚೇತನೈಃ ॥ ೯೮ ॥**

**ಅರ್ಥ** :- **ತಸ್ಮಾತ್** ಆದ್ದರಿಂದ, **ಯೋಗ್ಯಾನುಸಾರೇಣ**, ತಮ್ಮ ಯೋಗ್ಯತಾನುಗುಣವಾಗಿ, **ವಿಷ್ಣುಃ ಸದೈವ ಸೇವ್ಯೋ ಹಿ** ವಿಷ್ಣುವು ಯಾವಾಗಲೂ ಧ್ಯೇಯನಾಗಿದ್ದಾನೆ. **ಅಚ್ಛಿದ್ರಸೇವನಾಚ್ಚೈವ** ಮಧ್ಯೇ ಮಧ್ಯೇ ವಿಚ್ಛೇದವಿಲ್ಲದೆ ಧ್ಯಾನದಿಂದ, **ನಿಷ್ಕಾಮ ತ್ವಾಚ್ಚ** ಕಾಮನಾರಹಿತನಾಗಿರುವುದರಿಂದ ಮತ್ತು, **ಯೋಗ್ಯತಃ** ಯೋಗ್ಯತೆಯಿಂದ, **ಸರ್ವೈಃ ಹರಿಃ ದ್ರಷ್ಟುಂ ಶಕ್ಯಃ** ಎಲ್ಲರಿಂದಲೂ ಶ್ರೀಹರಿಯು ನೋಡಲು ಶಕ್ಯನಾಗಿದ್ದಾನೆ, **ಅನ್ಯಥಾ ತು ನ ಕಥಂಚನ** ಬೇರೆ ಯಾವುದೇ ಮಾರ್ಗದಿಂದ ಶ್ರೀಹರಿಯನ್ನು ನೋಡಲು ಶಕ್ಯವಿಲ್ಲ, **ಯಸ್ಮಾತ್ ಅಯಂ ಹರೇಃ ನಿಯಮಃ** ಇದು ಶ್ರೀಹರಿಯ ಆಜ್ಞೆಯಾಗಿರುವುದರಿಂದ, **ಸರ್ವಚೇತನೈಃ ನ ಉಲ್ಲಂಘ್ಯಃ** ಎಲ್ಲ ಚೇತನರಿಂದ ಉಲ್ಲಂಘಿಸಲು ಅಸಾಧ್ಯವಾದುದು.

**ತಾತ್ಪರ್ಯ** :- ಹಿಂದೆ ಹೇಳಿದಂತೆ, ಚೇತನರು ತಮ್ಮ ತಮ್ಮ ಯೋಗ್ಯತೆಯನ್ನನುಸರಿಸಿ ಭಗವಂತನನ್ನು ಧ್ಯಾನಿಸತಕ್ಕದ್ದು. ಭಗವಂತನ ದರ್ಶನವಾಗಲು ತೈಲಧಾರೆಯಂತೆ ಮಧ್ಯೆ ವಿಚ್ಛೇದವಿಲ್ಲದ ಧ್ಯಾನವು ಮುಖ್ಯಸಾಧನವಾಗಿದ್ದು ನಿಷ್ಕಾಮಕರ್ಮ ಮತ್ತು ಯೋಗ್ಯತೆಗಳು ಸಹಕಾರಿ ಸಾಧನಗಳಾಗಿವೆ. ಈ ಸಾಧನಗಳ ಸಹಾಯದಿಂದ ಮಾತ್ರ ಭಗವಂತನ ದರ್ಶನವನ್ನು ಪಡೆಯಬಹುದು ಹೊರತು ಬೇರಾವ ಸಾಧನವೂ ಉಪಯೋಗಿಯಾಗಲಾರದು. ಈ ಸಾಧನಗಳಿಂದಲೆ ಭಗವಂತನ ದರ್ಶನವಾಗುವುದೆನ್ನುವುದು ಭಗವಂತನ ಆದೇಶವೇ ಆಗಿರುವುದರಿಂದ ಅದನ್ನು ಪ್ರಬಲರಾದ ಯಾರೂ, ರಾಕ್ಷಸರೂ ಉಲ್ಲಂಘಿಸಲಾರರು.

**ವಿಶೇಷ ವಿಷಯ** :- ನಿಷ್ಕಾಮತ್ವಾಚ್ಚ – ನಿರ್ಗತಃ ಕಾಮಃ ಯಸ್ಯ ಸಃ ನಿಷ್ಕಾಮಃ । ತಸ್ಯ ಭಾವಃ ನಿಷ್ಕಾಮತ್ವಂ, ತಸ್ಮಾತ್ ಎಂದು ವಿಗ್ರಹ. ಕಾಮ ಎಂದರೆ ಫಲೇಚ್ಛೆ. ತಾವು ಮಾಡುವ ಸಂಧ್ಯಾವಂದನೆ, ಯಜ್ಞ, ದಾನ ಮೊದಲಾದ ನಿತ್ಯನೈಮಿತ್ತಿಕ ಕರ್ಮಗಳೆಲ್ಲವನ್ನೂ ವಿಷ್ಣುಪ್ರೀತ್ಯರ್ಥವಾಗಿಯೇ ಮಾಡತಕ್ಕದ್ದು ಹೊರತು ಸ್ವರ್ಗಕಾಮಃ, ಪಶುಕಾಮಃ ಇತ್ಯಾದಿಯಾಗಿ ಹೇಳಿದಂತೆ ಸ್ವರ್ಗಾದಿ ಫಲೇಚ್ಛೆಯಿಂದಲ್ಲ. ಹೀಗೆ ಮಾಡಿದ ಕರ್ಮವು ಜ್ಞಾನ ಸಾಧನವಾಗುವ ಮೂಲಕ ಮೋಕ್ಷೋಪಯೋಗಿಯಾಗುವುದು. ನಿಷ್ಕಾಮಕರ್ಮವು ಜ್ಞಾನಕ್ಕೆ ಸಹಕಾರಿಯಾಗುವುದೆನ್ನುವುದು 'ವಿವಿದಿಷಂತಿ ಯಜ್ಞೇನ ದಾನೇನ ತಪಸಾಽನಾಶಕೇನ' ಎಂಬ ಶ್ರುತಿಯಿಂದ ತಿಳಿದುಬರುವುದು. ಯಜ್ಞ, ದಾನ, ತಪಸ್ಸು, ಉಪವಾಸ – ಇವುಗಳಿಂದ ಬ್ರಾಹ್ಮಣರು ಭಗವಂತನನ್ನು ತಿಳಿಯಲು ಇಚ್ಛಿಸುತ್ತಾರೆ ಎಂದು ಶ್ರುತಿಯ ಭಾವ. ॥ ೯೮ ॥

ತನ್ನ ಆಜ್ಞೆಯನ್ನು ಶ್ರೀಹರಿಯೂ ಉಲ್ಲಂಘಿಸುವುದಿಲ್ಲ. ದಾನ, ತೀರ್ಥಸ್ನಾನ ಮೊದಲಾದುವುಗಳೂ ಮುಕ್ತಿಗೆ ಮುಖ್ಯಸಾಧನವಲ್ಲ, ಭಕ್ತಿಯೇ ಮುಖ್ಯ ಸಾಧನವಾಗಿದೆ–

**ಸತ್ಯಸಂಕಲ್ಪತೋ ವಿಷ್ಣುರ್ನಾನ್ಯಥಾ ತು ಕರಿಷ್ಯತಿ ।**
**ದಾನತೀರ್ಥತಪೋಯಜ್ಞಪೂರ್ವಾಃ ಸರ್ವೇಽಪಿ ಸರ್ವದಾ ॥ ೯೯ ॥**

**ಅಂಗಾನಿ ಹರಿಸೇವಾಯಾಂ ಭಕ್ತಿಸ್ತ್ವೇಕಾ ವಿಮುಕ್ತಯೇ ।**
**ಭವಿಷ್ಯತ್ಪರ್ವವಚನಮಿತ್ಯೇತದಖಿಲಂ ಪರಂ ॥ ೧೦೦ ॥**

**ಅರ್ಥ** :- **ಸತ್ಯಸಂಕಲ್ಪತಃ** ಸತ್ಯಸಂಕಲ್ಪನಾದ್ದರಿಂದ, **ವಿಷ್ಣುಃ ಅನ್ಯಥಾ ತು ನ ಕರಿಷ್ಯತಿ** ವಿಷ್ಣುವು ತನ್ನ ಆಜ್ಞೆಗೆ ವ್ಯತಿರಿಕ್ತವಾಗಿ ಎಂದೂ ಮಾಡುವುದಿಲ್ಲ, **ದಾನತೀರ್ಥತಪೋಯಜ್ಞ ಪೂರ್ವಾಃ** ದಾನಗಳು, ತೀರ್ಥಸ್ನಾನ, ತಪಸ್ಸು ಯಜ್ಞ ಮೊದಲಾದ, **ಸರ್ವೇಽಪಿ** ಎಲ್ಲವೂ, **ಹರಿಸೇವಾಯಾಂ ಅಂಗಾನಿ** ಶ್ರೀಹರಿಯ ಧ್ಯಾನಕ್ಕೆ ಅಂಗಗಳಾಗಿವೆ. **ಭಕ್ತಿಸ್ತು ಏಕಾ ವಿಮುಕ್ತಯೇ** ಭಕ್ತಿಯೊಂದೇ ಮುಕ್ತಿಗೆ ಮುಖ್ಯಸಾಧನವಾಗಿದೆ, **ಇತ್ಯೇತದಖಿಲಂ ಪರಂ** ಇವೇ ಮೊದಲಾದ ಸಮಸ್ತ ಶ್ರೇಷ್ಠವಚನವು, **ಭವಿಷ್ಯತ್ಪರ್ವವಚನಂ** ಭವಿಷ್ಯತ್ಪರ್ವದ ವಚನವಾಗಿದೆ.

**ತಾತ್ಪರ್ಯ** :- ಭಗವಂತನು ಸತ್ಯಸಂಕಲ್ಪನಾದ್ದರಿಂದ ಭಕ್ತಿಜ್ಞಾನಗಳಿಂದಲೇ ಮೋಕ್ಷವನ್ನು ಕೊಡುವೆನೆಂಬ ಅವನ ಸಂಕಲ್ಪವನ್ನು ಅವನೇ ಎಂದೂ ಉಲ್ಲಂಘಿಸಲಾರನು. ಆದ್ದರಿಂದ ಭಕ್ತಿ-ಜ್ಞಾನಗಳೇ ಮುಕ್ತಿಗೆ ಮುಖ್ಯಸಾಧನ ವಾಗಿದೆ. ದಾನ, ತೀರ್ಥಸ್ನಾನ, ಮಹಾತಪಸ್ಸು, ಯಜ್ಞಗಳು ಇವುಗಳಿಂದಲೂ ಮೋಕ್ಷವಾಗುವುದೆಂದು ಕೆಲವೆಡೆ ಹೇಳಿರುವುದುಂಟು. ಆದರೆ ಅವೆಲ್ಲವೂ ಶ್ರೀಹರಿಯ ಧ್ಯಾನಕ್ಕೆ ಅಂಗಗಳಾಗುವವೇ ಹೊರತು ಎಂದೂ ಮುಕ್ತಿಗೆ ಮುಖ್ಯ ಸಾಧನವಾಗಲಾರವು.

ಇದುವರೆಗೆ ಉದಾಹರಿಸಿದ ಉತ್ತಮವಾದ ವಚನಗಳೆಲ್ಲವೂ ಭವಿಷ್ಯತ್ ಪರ್ವ ಎಂಬ ಪುರಾಣದ ವಚನಗಳಾಗಿವೆ.

**ವಿಶೇಷ ವಿಷಯ** :- ಅಂಗಾನಿ ಹರಿಸೇವಾಯಾಂ - ಶ್ರೀಹರಿಯ ನಿರಂತರವಾದ ಧ್ಯಾನ ಮತ್ತು ಭಕ್ತಿಗಳೇ ಇಲ್ಲಿ 'ಶ್ರೀಹರಿಸೇವಾ' ಎಂಬ ಪದದಿಂದ ವಿವಕ್ಷಿತವಾಗಿವೆ. 'ಕರ್ಮಣಾ ಜ್ಞಾನಮಾತನೋತಿ' ಎಂಬ ಶ್ರುತಿಯನ್ನನುಸರಿಸಿ ದಾನ, ತೀರ್ಥಸ್ನಾನ ಮೊದಲಾದವುಗಳು ಅಂತಃಕರಣಶುದ್ಧಿಯನ್ನುಂಟು ಮಾಡುವ ಮೂಲಕ ಜ್ಞಾನಕ್ಕೆ ಅಂಗಗಳಾಗಿವೆ ಎಂದು ಭಾವ. ಭಕ್ತಿಸ್ತ್ವೇಕಾ ವಿಮುಕ್ತಯೇ - ಏಕಾ ಎಂದರೆ ಮುಖ್ಯವಾದುದು ಎಂದು ಅರ್ಥ. ಮುಕ್ತಿಗೆ ಜ್ಞಾನ, ವೈರಾಗ್ಯಗಳೂ ಆವಶ್ಯಕವಾಗಿವೆ. ಆದರೆ ಮುಖ್ಯಸಾಧನವಾದದ್ದು ಭಕ್ತಿಯೊಂದೇ ಆದ್ದರಿಂದ ಏಕಾ ಎಂದು ಹೇಳಲಾಗಿದೆ. ॥ ೧೦೦ ॥

'ತತ್ರ ದೇವಾ ಮುಕ್ತಿಯೋಗ್ಯಾಃ' ಇತ್ಯಾದಿ ಶ್ಲೋಕಗಳಿಂದ ನಿರೂಪಿಸಿದ ಪ್ರಮೇಯವನ್ನು ಶ್ರುತಿಯಿಂದಲೂ ಮುಂದಿನ ಶ್ಲೋಕಗಳಲ್ಲಿ ಸಮರ್ಥಿಸಲಾಗಿದೆ

**ಶೃಣ್ವೇ ವೀರ ಉಗ್ರಮುಗ್ರಂ**
**ದಮಾಯನ್ನನ್ಯಮನ್ಯಮತಿ ನೇನೀಯಮಾನಃ ।**
**ಏಧಮಾನದ್ವಿಳುಭಯಸ್ಯ ರಾಜಾ**
**ಚೋಷ್ಕೂಯತೇ ವಿಶ ಇಂದ್ರೋ ಮನುಷ್ಯಾನ್ ॥ ೧೦೧ ॥**

**ಅರ್ಥ** :- ವೀರಃ ನಿಶ್ಚಯಿಸಿದ್ದನ್ನು ಪೂರ್ಣಗೊಳಿಸುವ ಶ್ರೀಹರಿಯು, **ಉಗ್ರಮುಗ್ರಂ** ಲೋಕೋಪದ್ರವ ಮಾಡುವುದರಿಂದ ಅತ್ಯಂತ ಕ್ರೂರರಾದ ದೈತ್ಯರನ್ನು, **ದಮಾಯನ್** ಅಂಧಂತಮಸ್ಸಿನಲ್ಲಿ ದಂಡಿಸುವವನೆಂದು,

**ಅನ್ಯಮಸ್ಮಂ** ಕ್ರೂರರಲ್ಲದ, ಶಾಂತರಾದ ಬ್ರಹ್ಮನೇ ಮೊದಲಾದ ಸಜ್ಜನರ ಸಮೂಹವನ್ನು **ಅತಿ** ಅತಿಶಯಿತವಾದ ಸ್ಥಾನಕ್ಕೆ, **ನೇನೀಯಮಾನಃ ಶೃಣ್ವೇ** ಕೊಂಡೊಯ್ಯುವವನೆಂದು ಕೇಳಲ್ಪಟ್ಟಿದ್ದಾನೆ. **ಉಭಯಸ್ಯ** ದೇವವರ್ಗ ಮತ್ತು ಅಸುರವರ್ಗ ಇವೆರಡಕ್ಕೂ, **ರಾಜಾ** ನಿಯಾಮಕನಾದ, **ಇಂದ್ರಃ** ಪರಮೈಶ್ವರ್ಯ ಭರಿತನಾದ, **ಏಧಮಾನದ್ವಿಟ್** ತಮ್ಮ ಯೋಗ್ಯತೆಯನ್ನು ಮೀರಿ ವರ್ಧಿಸುವವ ರನ್ನು ಸಹಿಸದಿರುವ ನಾರಾಯಣನು, **ವಿಶಃ** ಕೃಷಿಕರಂತಿರುವ, **ಮನುಷ್ಯಾನ್** ಮಧ್ಯಮಜೀವಿಗಳಾದ ಮನುಷ್ಯರನ್ನು, **ಚೋಷ್ಕೂಯತೇ** ನಿತ್ಯಸಂಸಾರದಲ್ಲೇ ಪ್ರವರ್ತಿಸುವಂತೆ ಮಾಡುತ್ತಾನೆ.

**ತಾತ್ಪರ್ಯ** :- ಕರ್ತವ್ಯವೆಂದು ನಿರ್ಣಯಿಸಿದ್ದನ್ನು ಪೂರ್ಣಗೊಳಿಸುವ ಮಹಾವೀರನಾದ ನಾರಾಯಣನು ಸಮಸ್ತ ಲೋಕಕ್ಕೆ ಉಪದ್ರವಕಾರಕರಾದ, ಅತ್ಯಂತ ಕ್ರೂರರಾದ ದಾನವರನ್ನು ಅಂಧಂತಮಸ್ಸಿನಲ್ಲಿ ಶಿಕ್ಷಿಸುವನೆಂದೂ, ದಾನವರಂತೆ ಕ್ರೂರರಲ್ಲದ ಶಾಂತಸ್ವಭಾವದ ಬ್ರಹ್ಮಾದಿ ಸಜ್ಜನರನ್ನು ಅತಿಶ್ರೇಷ್ಠವಾದ ಸ್ಥಾನವನ್ನು ಕೊಟ್ಟು ಅನುಗ್ರಹಿಸುವವನೆಂದೂ ಶ್ರುತಿಪುರಾಣಾದಿ ಗಳಲ್ಲಿ ವರ್ಣಿತನಾಗಿದ್ದಾನೆ. ಪರಮೈಶ್ವರ್ಯಶಾಲಿಯಾದ ಆ ಭಗವಂತನು ದೇವತೆಗಳಿಗೂ ದಾನವರಿಗೂ ನಿಯಾಮಕನಾದ ಕಾರಣ ಅವರು ತಮ್ಮ ಇಚ್ಛೆಯಂತೆ ವ್ಯತ್ಯಾಸವನ್ನು ಹೊಂದಲು ಶಕ್ಯವಿಲ್ಲ. ಉಗ್ರತಪಸ್ಸು ಮೊದಲಾದವು ಗಳ ಬಲದಿಂದ ತಮ್ಮ ಯೋಗ್ಯತೆಯನ್ನು ಮೀರಿ ಬೆಳೆಯುವವರನ್ನು ಅವನು ಸಹಿಸನು. ಕೃಷಿಕರಂತೆ ಪ್ರಾಯಶಃ ತಮ್ಮ ಉದರನಿರ್ವಹಣೆಗೆ ಅಗತ್ಯವಾದ ಮಧ್ಯಮಮಾರ್ಗವನ್ನು ಅವಲಂಬಿಸುವ ಮಧ್ಯಮ ಜೀವರಾದ ಮನುಷ್ಯರನ್ನು ಅವರ ಯೋಗ್ಯತೆಗನುಗುಣವಾಗಿ ನಿತ್ಯಸಂಸಾರದಲ್ಲಿ ಪ್ರವರ್ತಿಸುವಂತೆ ಆ ಭಗವಂತನು ಪ್ರೇರಿಸುವನು.

**ವಿಶೇಷ ವಿಷಯ** :- ದಮಾಯನ್ - ದಮಯನ್ ಎಂದು ರೂಪ ವಿರಬೇಕಾಗಿತ್ತು ಆದರೆ ಭಗವಂತನು ತನ್ನ ದ್ವೇಷಿಗಳನ್ನು ಅಂಧತಮಸ್ಸಿನಲ್ಲಿ ದಮನ ಮಾಡುವುದು ಅತಿ ದೀರ್ಘಕಾಲದ್ದೆಂದು ಸೂಚಿಸಲು ಶ್ರುತಿಯು ದಮಾಯನ್ ಎಂದು ದೀರ್ಘವನ್ನು ಪ್ರಯೋಗಿಸಿದೆ.

**ಏಧಮಾನದ್ವಿಟ್** - ಭಕ್ತನಾದ ಬಲಿಯನ್ನು ಅಧೋಲೋಕಕ್ಕೆ ತುಳಿದಿದ್ದಕ್ಕೆ ಬಲಿಯು ತನ್ನ ಯೋಗ್ಯತೆಯನ್ನು ಮೀರಿ ವರ್ಧಿಸಿದ್ದೇ ಕಾರಣ. ಹಾಗೆಯೇ,

ತನಗಿಂತಲೂ ಉತ್ತಮನಾದ ಗರುಡನಿಗೆ ದ್ರೋಹಮಾಡಿದ ಕಾಲಿಯನನ್ನು ಮರ್ದಿಸಲೂ ಇದೇ ಕಾರಣವಾಗಿದೆ. ಗರುಡ - ಕಾಲಿಯರಲ್ಲಿರುವ ದ್ವೇಷ ತಾತ್ಕಾಲಿಕವೇ ಹೊರತು ದೈತ್ಯರಲ್ಲಿರುವಂತೆ ಸಾರ್ವಕಾಲಿಕವಾದುದಲ್ಲ. ಆದ್ದರಿಂದಲೇ ಭಗವಂತನು ಇಬ್ಬರಿಗೂ ಮಹದೈಶ್ವರ್ಯವನ್ನು ಕೊನೆಯಲ್ಲಿ ಅನುಗ್ರಹಿಸಿದ್ದಾನೆ.

**ವಿಶಃ** - ದೈತ್ಯರಂತೆ ಅತ್ಯುಗ್ರರೂ ಆಗದೆ, ದೇವತೆಗಳಂತೆ ಅತಿಶಾಂತರೂ ಆಗದೆ ತಮ್ಮ ಉದರಪೂರಣಕ್ಕಾಗಿ ಮಧ್ಯಮ ಮಾರ್ಗವನ್ನು ಪ್ರವೇಶಿಸುವ ಮನುಷ್ಯರನ್ನು ಶ್ರುತಿಯು ಅದೇ ಸ್ವಭಾವದ ಕೃಷೀವಲರಿಗೆ ಹೋಲಿಸುತ್ತಿದೆ. ಅಥವಾ, ಕೆಲವೊಮ್ಮೆ ಅಧಮರ ಗುಂಪಿಗೆ ಕೆಲವೊಮ್ಮೆ ಉತ್ತಮರ ಗುಂಪಿಗೆ ಪ್ರವೇಶಿಸುವುದರಿಂದ ಮನುಷ್ಯರನ್ನು 'ವಿಶಃ' ಎಂದೆನ್ನುತ್ತಿದೆ. ॥ ೧೦೧ ॥

**ಪರಾ ಪೂರ್ವೇಷಾಂ ಸಖ್ಯಾ ವೃಣಕ್ತಿ ವಿತರ್ತುರಾಣೋ ಅಪರೇಭಿರೇತಿ ।**
**ಅನಾನುಭೂತೀರವಧೂನ್ವಾನಃ ಪೂರ್ವೀರಿಂದ್ರಃ ಶರದಸ್ತರ್ತರೀತಿ ॥೧೦೨॥**

**ಅರ್ಥ** :- ಇಂದ್ರಃ ಪರಮೈಶ್ವರ್ಯಸಂಪನ್ನನಾದ ಭಗವಂತನು, ಪೂರ್ವೇಷಾಂ ಹಿಂದೆ ಹೇಳಿದ ದೇವದ್ವೇಷಿಗಳಾದ ದಾನವರ, ಸಖ್ಯಾ ಸ್ನೇಹ ವನ್ನು, ಪರಾ ವೃಣಕ್ತಿ ದೂರದಿಂದಲೇ ಕತ್ತರಿಸುವನು, ವಿತರ್ತುರಾಣಃ ವಿಶೇಷವಾಗಿ ತ್ವರೆಮಾಡುವವನಾಗಿ, ಅಪರೇಭಿಃ ಮುಂದೆ ಹೇಳಲ್ಪಟ್ಟಿರುವ ದೇವತೆಗಳಿಂದ, ಸಖ್ಯಾ ಸ್ನೇಹವನ್ನು, ಏತಿ ಹೊಂದುವನು, ಅನಾನುಭೂತೀಃ ಕ್ರೂರರಷ್ಟೇ ಅಲ್ಲದೆ ಭಗವಂತನ ಅನುಭವವಿಲ್ಲದವರೂ ಆದ ದಾನವರನ್ನು, ಅವಧೂನ್ವಾನಃ ಅಧೋಲೋಕವಾದ ತಮಸ್ಸಿಗಲ್ಲಿ ತಳ್ಳುವವನಾಗಿ ಭಗವಂತನು, ಪೂರ್ವೀಃ ಶರದಃ ಹಿಂದಿನ ಸಂವತ್ಸರಗಳನ್ನು (ಹೀಗೆಯೇ ಕಳೆದನು.) (ಈಗಿನ ಸಂವತ್ಸರಗಳನ್ನೂ) ತರ್ತರೀತಿ ಹೀಗೆಯೇ ಅತಿಶಯವಾಗಿ ಕಳೆಯುತ್ತಿದ್ದಾನೆ (ಮುಂದೆಯೂ ಇದೇ ರೀತಿ ಸಂವತ್ಸರಗಳನ್ನು ಕಳೆಯುವನು).

**ತಾತ್ಪರ್ಯ** :- ಭಗವಂತನು, ದೈತ್ಯರು ಎಷ್ಟೇ ಸೇವೆಯನ್ನು ಮಾಡಿದರೂ ಅದನ್ನು ಸ್ವೀಕರಿಸದೆ ಯಾವುದಾದರೊಂದು ಉಪಾಯದಿಂದ ಅವರ ಸೇವೆಗೆ ಭಂಗವನ್ನುಂಟುಮಾಡುವನು. ಅವರ ಸ್ನೇಹವನ್ನು ದೂರದಿಂದಲೇ ವಿಚ್ಛಿನ್ನ ಗೊಳಿಸುವನು. ಆದರೆ ದೇವತೆಗಳ ಸ್ನೇಹವನ್ನು ವಿಶೇಷ ತ್ವರೆಯಿಂದ

**ಅನ್ಯಮನ್ಯಂ** ಕ್ರೂರರಲ್ಲದ, ಶಾಂತರಾದ ಬ್ರಹ್ಮನೇ ಮೊದಲಾದ ಸಜ್ಜನರ ಸಮೂಹವನ್ನು **ಅತಿ** ಅತಿಶಯಿತವಾದ ಸ್ಥಾನಕ್ಕೆ, **ನೇನೀಯಮಾನಃ ಶೃಣ್ವೇ** ಕೊಂಡೊಯ್ಯುವವನೆಂದು ಕೇಳಲ್ಪಟ್ಟಿದ್ದಾನೆ. **ಉಭಯಸ್ಯ** ದೇವವರ್ಗ ಮತ್ತು ಅಸುರವರ್ಗ ಇವೆರಡಕ್ಕೂ, **ರಾಜಾ** ನಿಯಾಮಕನಾದ, **ಇಂದ್ರಃ** ಪರಮೈಶ್ವರ್ಯ ಭರಿತನಾದ, **ಏಧಮಾನದ್ವಿಟ್** ತಮ್ಮ ಯೋಗ್ಯತೆಯನ್ನು ಮೀರಿ ವರ್ಧಿಸುವವರನ್ನು ಸಹಿಸದಿರುವ ನಾರಾಯಣನು, **ವಿಶಃ** ಕೃಷಿಕರಂತಿರುವ, **ಮನುಷ್ಯಾನ್** ಮಧ್ಯಮಜೀವಿಗಳಾದ ಮನುಷ್ಯರನ್ನು, **ಚೋಷ್ಕೂಯತೇ** ನಿತ್ಯಸಂಸಾರದಲ್ಲೇ ಪ್ರವರ್ತಿಸುವಂತೆ ಮಾಡುತ್ತಾನೆ.

**ತಾತ್ಪರ್ಯ** :- ಕರ್ತವ್ಯವೆಂದು ನಿರ್ಣಯಿಸಿದ್ದನ್ನು ಪೂರ್ಣಗೊಳಿಸುವ ಮಹಾವೀರನಾದ ನಾರಾಯಣನು ಸಮಸ್ತ ಲೋಕಕ್ಕೆ ಉಪದ್ರವಕಾರಕರಾದ, ಅತ್ಯಂತ ಕ್ರೂರರಾದ ದಾನವರನ್ನು ಅಂಧಂತಮಸ್ಸಿನಲ್ಲಿ ಶಿಕ್ಷಿಸುವನೆಂದೂ, ದಾನವರಂತೆ ಕ್ರೂರರಲ್ಲದ ಶಾಂತಸ್ವಭಾವದ ಬ್ರಹ್ಮಾದಿ ಸಜ್ಜನರನ್ನು ಅತಿಶ್ರೇಷ್ಠವಾದ ಸ್ಥಾನವನ್ನು ಕೊಟ್ಟು ಅನುಗ್ರಹಿಸುವವನೆಂದೂ ಶ್ರುತಿಪುರಾಣಾದಿಗಳಲ್ಲಿ ವರ್ಣಿತನಾಗಿದ್ದಾನೆ. ಪರಮೈಶ್ವರ್ಯಶಾಲಿಯಾದ ಆ ಭಗವಂತನು ದೇವತೆಗಳಿಗೂ ದಾನವರಿಗೂ ನಿಯಾಮಕನಾದ ಕಾರಣ ಅವರು ತಮ್ಮ ಇಚ್ಛೆಯಂತೆ ವ್ಯತ್ಯಾಸವನ್ನು ಹೊಂದಲು ಶಕ್ಯವಿಲ್ಲ. ಉಗ್ರತಪಸ್ಸು ಮೊದಲಾದವುಗಳ ಬಲದಿಂದ ತಮ್ಮ ಯೋಗ್ಯತೆಯನ್ನು ಮೀರಿ ಬೆಳೆಯುವವರನ್ನು ಅವನು ಸಹಿಸನು. ಕೃಷಿಕರಂತೆ ಪ್ರಾಯಶಃ ತಮ್ಮ ಉದರನಿರ್ವಹಣೆಗೆ ಅಗತ್ಯವಾದ ಮಧ್ಯಮಮಾರ್ಗವನ್ನು ಅವಲಂಬಿಸುವ ಮಧ್ಯಮ ಜೀವರಾದ ಮನುಷ್ಯರನ್ನು ಅವರ ಯೋಗ್ಯತೆಗನುಗುಣವಾಗಿ ನಿತ್ಯಸಂಸಾರದಲ್ಲಿ ಪ್ರವರ್ತಿಸುವಂತೆ ಆ ಭಗವಂತನು ಪ್ರೇರಿಸುವನು.

**ವಿಶೇಷ ವಿಷಯ** :- ದಮಾಯನ್ - ದಮಯನ್ ಎಂದು ರೂಪವಿರಬೇಕಾಗಿತ್ತು ಆದರೆ ಭಗವಂತನು ತನ್ನ ದ್ವೇಷಿಗಳನ್ನು ಅಂಧತಮಸ್ಸಿನಲ್ಲಿ ದಮನ ಮಾಡುವುದು ಅತಿ ದೀರ್ಘಕಾಲದ್ದೆಂದು ಸೂಚಿಸಲು ಶ್ರುತಿಯು ದಮಾಯನ್ ಎಂದು ದೀರ್ಘವನ್ನು ಪ್ರಯೋಗಿಸಿದೆ.

**ಏಧಮಾನದ್ವಿಟ್** - ಭಕ್ತನಾದ ಬಲಿಯನ್ನು ಅಧೋಲೋಕಕ್ಕೆ ತುಳಿದಿದ್ದಕ್ಕೆ ಬಲಿಯು ತನ್ನ ಯೋಗ್ಯತೆಯನ್ನು ಮೀರಿ ವರ್ಧಿಸಿದ್ದೇ ಕಾರಣ. ಹಾಗೆಯೇ,

ತನಗಿಂತಲೂ ಉತ್ತಮನಾದ ಗರುಡನಿಗೆ ದ್ರೋಹಮಾಡಿದ ಕಾಲಿಯನನ್ನು ಮರ್ದಿಸಲೂ ಇದೇ ಕಾರಣವಾಗಿದೆ. ಗರುಡ - ಕಾಲಿಯರಲ್ಲಿರುವ ದ್ವೇಷ ತಾತ್ಕಾಲಿಕವೇ ಹೊರತು ದೈತ್ಯರಲ್ಲಿರುವಂತೆ ಸಾರ್ವಕಾಲಿಕವಾದುದಲ್ಲ. ಆದ್ದರಿಂದಲೇ ಭಗವಂತನು ಇಬ್ಬರಿಗೂ ಮಹದೈಶ್ವರ್ಯವನ್ನು ಕೊನೆಯಲ್ಲಿ ಅನುಗ್ರಹಿಸಿದ್ದಾನೆ.

**ವಿಶಃ** - ದೈತ್ಯರಂತೆ ಅತ್ಯುಗ್ರರೂ ಆಗದೆ, ದೇವತೆಗಳಂತೆ ಅತಿಶಾಂತರೂ ಆಗದೆ ತಮ್ಮ ಉದರಪೂರಣಕ್ಕಾಗಿ ಮಧ್ಯಮ ಮಾರ್ಗವನ್ನು ಪ್ರವೇಶಿಸುವ ಮನುಷ್ಯರನ್ನು ಶ್ರುತಿಯು ಅದೇ ಸ್ವಭಾವದ ಕೃಷೀವಲರಿಗೆ ಹೋಲಿಸುತ್ತಿದೆ. ಅಥವಾ, ಕೆಲವೊಮ್ಮೆ ಅಧಮರ ಗುಂಪಿಗೆ ಕೆಲವೊಮ್ಮೆ ಉತ್ತಮರ ಗುಂಪಿಗೆ ಪ್ರವೇಶಿಸುವುದರಿಂದ ಮನುಷ್ಯರನ್ನು 'ವಿಶಃ' ಎಂದೆನ್ನುತ್ತಿದೆ. ॥ ೧೦೧ ॥

**ಪರಾ ಪೂರ್ವೇಷಾಂ ಸಖ್ಯಾ ವೃಣಕ್ತಿ ವಿತರ್ತುರಾಣೋ ಅಪರೇಭಿರೇತಿ ।**
**ಅನಾನುಭೂತೀರವಧೂನ್ವಾನಃ ಪೂರ್ವೀರಿಂದ್ರಃ ಶರದಸ್ತರ್ತರೀತಿ ॥೧೦೨॥**

**ಅರ್ಥ** :- ಇಂದ್ರಃ ಪರಮೈಶ್ವರ್ಯಸಂಪನ್ನನಾದ ಭಗವಂತನು, ಪೂರ್ವೇಷಾಂ ಹಿಂದೆ ಹೇಳಿದ ದೇವದ್ವೇಷಿಗಳಾದ ದಾನವರ, ಸಖ್ಯಾ ಸ್ನೇಹ ವನ್ನು ಪರಾ ವೃಣಕ್ತಿ ದೂರದಿಂದಲೇ ಕತ್ತರಿಸುವನು, ವಿತರ್ತುರಾಣಃ ವಿಶೇಷವಾಗಿ ತ್ವರೆಮಾಡುವವನಾಗಿ, ಅಪರೇಭಿಃ ಮುಂದೆ ಹೇಳಲ್ಪಟ್ಟಿರುವ ದೇವತೆಗಳಿಂದ, ಸಖ್ಯಾ ಸ್ನೇಹವನ್ನು, ಏತಿ ಹೊಂದುವನು, ಅನಾನುಭೂತೀಃ ಕ್ರೂರರಷ್ಟೇ ಅಲ್ಲದೆ ಭಗವಂತನ ಅನುಭವವಿಲ್ಲದವರೂ ಆದ ದಾನವರನ್ನು, ಅವಧೂನ್ವಾನಃ ಅಧೋಲೋಕವಾದ ತಮಸ್ಸಿಗಲ್ಲಿ ತಳ್ಳುವವನಾಗಿ ಭಗವಂತನು, ಪೂರ್ವೀಃ ಶರದಃ ಹಿಂದಿನ ಸಂವತ್ಸರಗಳನ್ನು (ಹೀಗೆಯೇ ಕಳೆದನು.) (ಈಗಿನ ಸಂವತ್ಸರಗಳನ್ನೂ) ತರ್ತರೀತಿ ಹೀಗೆಯೇ ಅತಿಶಯವಾಗಿ ಕಳೆಯುತ್ತಿದ್ದಾನೆ (ಮುಂದೆಯೂ ಇದೇ ರೀತಿ ಸಂವತ್ಸರಗಳನ್ನು ಕಳೆಯುವನು).

**ತಾತ್ಪರ್ಯ** :- ಭಗವಂತನು, ದೈತ್ಯರು ಎಷ್ಟೇ ಸೇವೆಯನ್ನು ಮಾಡಿದರೂ ಅದನ್ನು ಸ್ವೀಕರಿಸದೆ ಯಾವುದಾದರೊಂದು ಉಪಾಯದಿಂದ ಅವರ ಸೇವೆಗೆ ಭಂಗವನ್ನುಂಟುಮಾಡುವನು. ಅವರ ಸ್ನೇಹವನ್ನು ದೂರದಿಂದಲೇ ವಿಚ್ಛಿನ್ನ ಗೊಳಿಸುವನು. ಆದರೆ ದೇವತೆಗಳ ಸ್ನೇಹವನ್ನು ವಿಶೇಷ ತ್ವರೆಯಿಂದ

ಸ್ವೀಕರಿಸುವನು. ಕ್ರೂರರು ಮಾತ್ರವಲ್ಲದೆ ಭಗವದ್ದರ್ಶನರಹಿತರೂ ಆದ ದೈತ್ಯರನ್ನು ಅಂಧಂತಮಸ್ಸಿಗೆ ತಳ್ಳುವನು. ಹಿಂದಿನ, ಈಗಿನ, ಮುಂದಿನ - ಎಲ್ಲ ಕಾಲಗಳಲ್ಲೂ ಭಗವಂತನ ರೀತಿ ಹೀಗೆಯೇ ಇರುವುದು.

**ವಿಶೇಷ ವಿಷಯ :-** ಅನಾನುಭೂತೀಃ - ಅನನುಭೂತೀಃ ಎಂಬುದರ ಬದಲು ಅನಾನುಭೂತೀಃ ಎಂದು ದೀರ್ಘಸಹಿತವಾದ ಪದದ ಪ್ರಯೋಗ ದಿಂದ ಶ್ರುತಿಯು ದೈತ್ಯರಿಗೆ ಭಗವದನುಭವವಿಲ್ಲದಿರುವುದು ಸಾರ್ವಕಾಲಿಕ ವಾದುದೆಂದು ಸೂಚಿಸುತ್ತಿದೆ.

ಅವಧೂನ್ವಾನಃ - ಈ ಪದವು, ಭಗವಂತನು ಮಾಡುವ ದೈತ್ಯರ ದಮನವು ಈ ಲೋಕಕ್ಕೆ ಸಂಬಂಧಿಸಿದ್ದಲ್ಲವೆಂದೂ ಅಧೋಲೋಕವನ್ನು ಹೊಂದಿದ ನಂತರ ಅವರು ಅನುಭವಿಸಬೇಕಾದ ಯಾತನಾರೂಪವಾದದ್ದೆಂದೂ ಸ್ಪಷ್ಟಪಡಿಸುವುದು.

ಪೂರ್ವೀಃ ತರ್ತರೀತಿ - ಪೂರ್ವೀಃ ಎಂಬ ಪದವು ಅತೀತಕಾಲವನ್ನು ನಿರ್ದೇಶಿಸುವ ಪದವಾಗಿದೆ. ದಾಟುತ್ತಿದ್ದಾನೆ ಅಥವಾ ಕಳೆಯುತ್ತಿದ್ದಾನೆ ಎಂಬ ಅರ್ಥದ 'ತರ್ತರೀತಿ' ಪದವು ವರ್ತಮಾನ ಕಾಲವನ್ನು ಸೂಚಿಸುವ ಪದವಾಗಿದೆ. ಇವೆರಡು ಪದಗಳನ್ನು ಒಟ್ಟಿಗೆ ಪ್ರಯೋಗ ಮಾಡುತ್ತಿರುವ ಶ್ರುತಿಯು ಭವಿಷ್ಯತ್ಕಾಲವೂ ಸೇರಿದಂತೆ ಕಾಲಸಾಮಾನ್ಯದ ವಿವಕ್ಷೆಯನ್ನು ಹೊಂದಿದೆ. ಕಾಲತ್ರಯದಲ್ಲೂ ಭಗವಂತನು ಒಂದೇ ಸ್ವಭಾವವನ್ನು ಪಡೆದಿರುವನು. ಹಾಗಿಲ್ಲದಿದ್ದಲ್ಲಿ ಇಂದ್ರಶಬ್ದವು ಸೂಚಿಸುವ ಪರಮೇಶ್ವರತ್ವವು ಕಾಲಾಂತರದಲ್ಲಿ ಭಗವಂತನಲ್ಲಿಲ್ಲವೆಂದಾದೀತು ಎಂದು ಭಾವ. ॥ ೧೦೨ ॥

ಜ್ಞಾನವನ್ನು ಹೊರತು ಬೇರಾವುದೂ ಮೋಕ್ಷಸಾಧನವಲ್ಲವೆಂದು ಹೇಳುವ ಶ್ರುತಿಯನ್ನು ಈ ಶ್ಲೋಕದಲ್ಲಿ ಉದಾಹರಿಸಲಾಗಿದೆ-

**ತಮೇವಂ ವಿದ್ವಾನಮೃತ ಇಹ ಭವತಿ ನಾನ್ಯಃ**
**ಪಂಥಾ ಅಯನಾಯ ವಿದ್ಯತೇ ।**
**ತಮೇವಂ ವಿದ್ವಾನತಿಮೃತ್ಯುಮೇತಿ ನಾನ್ಯಃ**
**ಪಂಥಾ ವಿದ್ಯತೇಽಯನಾಯ ॥ ೧೦೩ ॥**

**ಅರ್ಥ** :- **ತಂ** ಆ ಭಗವಂತನನ್ನು **ಏವಂ ಇಹ ವಿದ್ವಾನ್** ಸಹಸ್ರಶೀರ್ಷ, ಸಹಸಾಕ್ಷ ಇತ್ಯಾದಿ ಪ್ರಕಾರದಿಂದ ಇಲ್ಲಿ ತಿಳಿದವನು, **ಅಮೃತಃ ಭವತಿ** ಕೊನೆಯಲ್ಲಿ ಅಮೃತತ್ವವನ್ನು ಪಡೆಯುತ್ತಾನೆ. **ಅಯನಾಯ** ಮೋಕ್ಷಕ್ಕಾಗಿ, **ನ ಅನ್ಯಃ ಪಂಥಾ ವಿದ್ಯತೆ** ಬೇರೆ ಮಾರ್ಗವಿಲ್ಲ, **ತಂ** ಆ ಭಗವಂತನನ್ನು, **ಏವಂ ವಿದ್ವಾನ್** ಸಹಸ್ರಶೀರ್ಷ ಇತ್ಯಾದಿಯಾಗಿ ತಿಳಿದವನು, **ಅತಿಮೃತ್ಯುಮೇತಿ** ಮೃತ್ಯುವನ್ನೂ ಅತಿಕ್ರಮಿಸಿರುವ ಮೋಕ್ಷವನ್ನು ಪಡೆಯುವನು, **ಅಯನಾಯ** ಮೋಕ್ಷಕ್ಕೆ, **ಅನ್ಯಃ ಪಂಥಾ ನ ವಿದ್ಯತೆ** ಬೇರೆ ಮಾರ್ಗವಿಲ್ಲ.

**ತಾತ್ಪರ್ಯ** :- ಸ್ಪಷ್ಟ.॥ ೧೦೩ ॥

ಮುಮುಕ್ಷುವಿಗೆ ಹರಿಭಕ್ತಿಯಂತೆ ಗುರುಭಕ್ತಿಯೂ ಆವಶ್ಯಕವೆಂದು ದೃಢೀಕರಿಸುವ ಪ್ರಮಾಣವನ್ನು ಆಚಾರ್ಯರು ಉದಾಹರಿಸುತ್ತಿದ್ದಾರೆ-

**ಯಸ್ಯ ದೇವೆ ಪರಾ ಭಕ್ತಿರ್ಯಥಾ ದೇವೇ ತಥಾ ಗುರೌ ।**
**ತಸ್ಯೈತೇ ಕಥಿತಾ ಹ್ಯರ್ಥಾಃ ಪ್ರಕಾಶಂತೇ ಮಹಾತ್ಮನಃ ॥ ೧೦೪ ॥**

**ಅರ್ಥ** :- **ಯಸ್ಯ** ಯಾರಿಗೆ, **ದೇವೇ** ಶ್ರೀಹರಿಯಲ್ಲಿ, **ಯಥಾ ಪರಾ ಭಕ್ತಿಃ** ಹೇಗೆ ಉತ್ಕೃಷ್ಟವಾದ ಭಕ್ತಿ ಇರುವುದೋ, **ಯಥಾ ದೇವೆ** ಬ್ರಹ್ಮಾದಿ ದೇವತೆಗಳಲ್ಲಿ ಹೇಗೆ ಯೋಗ್ಯತಾನುಸಾರವಾದ ಭಕ್ತಿ ಇರುವುದೋ, **ತಥಾ ಗುರೌ** ಹಾಗೆಯೇ ಗುರುಗಳಲ್ಲೂ ಯೋಗ್ಯತಾನುಸಾರ ಭಕ್ತಿ ಇರುವುದೋ, **ತಸ್ಯ ಮಹಾತ್ಮನಃ** ಆ ಮಹಾಪುರುಷನಿಗೆ, **ಕಥಿತಾ ಏತೇ ಅರ್ಥಾಃ** ಹೇಳಿರುವ ಈ ಅರ್ಥಗಳು, **ಪ್ರಕಾಶಂತೇ ಹಿ** ನಿಶ್ಚಯವಾಗಿಯೂ ಪ್ರಕಾಶವಾಗುತ್ತವೆ.

**ತಾತ್ಪರ್ಯ** :- ಸ್ಪಷ್ಟ.

**ವಿಶೇಷ ವಿಷಯ** :- ಶ್ರೀಹರಿಯಲ್ಲಿರಬೇಕಾದ ಭಕ್ತಿ ಉತ್ಕೃಷ್ಟವಾದ ಭಕ್ತಿ ಎಂದು ಹೇಳಿದ್ದರಿಂದ ಗುರುಗಳಲ್ಲಿರಬೇಕಾದ ಭಕ್ತಿ ಆ ರೀತಿಯಾದುದಲ್ಲ. ಶ್ರೀಹರಿಯಲ್ಲಿ ಹೇಗೆ ದೃಢವಾದ ಭಕ್ತಿ ಇರುವುದೋ ಹಾಗೆ ಗುರುಗಳಲ್ಲೂ ದೃಢವಾದ ಭಕ್ತಿ ಇರಬೇಕೆಂದು ದಾರ್ಢ್ಯದ ವಿಷಯದಲ್ಲಿ ಮಾತ್ರ ಯಥಾ ತಥಾ ಎಂದು ದೃಷ್ಟಾಂತವನ್ನು ಹೇಳಿದೆ ಎಂದು ಸೂಚಿತವಾಗಿದೆ. ॥ ೧೦೪ ॥

ಭಕ್ತಿಯೇ ಮೋಕ್ಷಸಾಧನ, ಉಳಿದ ಸಾಧನಗಳು ಭಕ್ತಿಗಾಗಿ, ಮೋಕ್ಷಸಾಧನವಾದ ಭಕ್ತಿಯು ಮೋಕ್ಷದಲ್ಲೂ ಇರುವುದೆಂದು ಮುಂದಿನ ಶ್ಲೋಕಗಳಲ್ಲಿ ಹೇಳಿದೆ–

**ಭಕ್ತ್ಯರ್ಥಾನ್ಯಖಿಲಾನ್ಯೇವ ಭಕ್ತಿರ್ಮೋಕ್ಷಾಯ ಕೇವಲಾ ।**
**ಮುಕ್ತಾನಾಮಪಿ ಭಕ್ತಿರ್ಹಿ ನಿತ್ಯಾನಂದಸ್ವರೂಪಿಣೀ ॥ ೧೦೫ ॥**

**ಜ್ಞಾನಪೂರ್ವಃ ಪರಸ್ನೇಹೋ ನಿತ್ಯೋ ಭಕ್ತಿರಿತೀರ್ಯತೇ ।**
**ಇತ್ಯಾದಿ ವೇದವಚನಂ ಸಾಧನಪ್ರವಿಧಾಯಕಮ್ ॥ ೧೦೬ ॥**

**ಅರ್ಥ** :- **ಅಖಿಲಾನ್ಯೇವ** ಯಜ್ಞ, ದಾನ ಮೊದಲಾದ ಎಲ್ಲ ಸಾಧನಗಳೂ, **ಭಕ್ತ್ಯರ್ಥಾನಿ** ಭಕ್ತಿಯೇ ಪ್ರಯೋಜನವಾಗಿ ಉಳ್ಳವು, **ಕೇವಲಾ ಭಕ್ತಿಃ** ಭಕ್ತಿಯೊಂದೇ, **ಮೋಕ್ಷಾಯ** ಮೋಕ್ಷಸಾಧನವಾಗಿರುವುದು. **ಮುಕ್ತಾನಾಮಪಿ** ಮುಕ್ತರಿಗೂ, **ನಿತ್ಯಾನಂದಸ್ವರೂಪಿಣೀ** ನಿತ್ಯವಾದ ಆನಂದಸ್ವರೂಪವಾದ, **ಭಕ್ತಿಃ ಹಿ** ಭಕ್ತಿ ಇರುವುದೆಂದು ಪ್ರಮಾಣಸಿದ್ಧವಾಗಿದೆ. **ನಿತ್ಯಃ** ನಿತ್ಯವಾದ, **ಜ್ಞಾನಪೂರ್ವಃ** ಮಹಾತ್ಮ್ಯಜ್ಞಾನಪೂರ್ವಕವಾದ, **ಪರಸ್ನೇಹಃ** ಶ್ರೇಷ್ಠವಾದ ಸ್ನೇಹವು **ಭಕ್ತಿರಿತಿ ಈರ್ಯತೇ** ಭಕ್ತಿಯೆಂದು ಹೇಳಲ್ಪಟ್ಟಿದೆ. **ಇತ್ಯಾದಿ ವೇದವಚನಂ** ಇದೇ ಮೊದಲಾದ ವೇದವಾಕ್ಯವು, **ಸಾಧನಪ್ರವಿಧಾಯಕಮ್** ಮೋಕ್ಷ ಸಾಧನವನ್ನು ವಿಧಿಸುತ್ತಿದೆ.

**ತಾತ್ಪರ್ಯ** :- ತಪಸ್ಸು, ಯಜ್ಞ, ದಾನ ಮೊದಲಾದ ಎಲ್ಲ ಸಾಧನಗಳಿಗೂ ಭಗವದ್ಭಕ್ತಿಯೇ ಫಲ. ಭಕ್ತಿಯೊಂದೇ ಮೋಕ್ಷಕ್ಕೆ ಸಾಧನ. ಹೀಗೆ ಭಕ್ತಿಯೂ ಮೋಕ್ಷಸಾಧನವಾಗಿದ್ದರೂ, ಮೋಕ್ಷ ಲಭಿಸಿದ ನಂತರ ಮುಕ್ತರೂ ಭಕ್ತಿಯನ್ನು ಪಡೆದಿರುವರು. ಮೋಕ್ಷಕಾಲದ ಭಗವದ್ಭಕ್ತಿಯು ನಿತ್ಯಾನಂದಸ್ವರೂಪವಾಗಿರುವುದು. ಮಾಹಾತ್ಮ್ಯ ಜ್ಞಾನಪೂರ್ವಕವಾದ ನಿತ್ಯವೂ, ಉತ್ಕೃಷ್ಟವೂ ಆದ ಸ್ನೇಹವೇ ಭಕ್ತಿಯಾದುದರಿಂದ ಮುಕ್ತಿಯಲ್ಲೂ ಭಕ್ತಿಗೆ ಚ್ಯುತಿಯಿಲ್ಲ. ಈ ಮೇಲೆ ಹೇಳಿದ ವೇದವಚನಗಳು ಮೋಕ್ಷಕ್ಕೆ ಭಕ್ತಿರೂಪವಾದ ಸಾಧನವನ್ನು ವಿಧಿಸುತ್ತಿದೆ.

॥ ೧೦೫, ೧೦೬ ॥

ಮೋಕ್ಷಸಾಧನಗಳಲ್ಲಿ ಭಕ್ತಿಯೇ ಶ್ರೇಷ್ಠವಾದುದೆಂಬ ವಿಷಯದಲ್ಲಿ ಸ್ಮೃತಿಗಳನ್ನು ಉದಾಹರಿಸಲಾಗಿದೆ.

**ನಿಃಶೇಷಧರ್ಮಕರ್ತಾSಪಿ ಕೃತೋ ಭಕ್ತ್ಯೈಸ್ತವಾಚ್ಯುತ ।**
**ಪಾಪಂ ಭವತಿ ಧರ್ಮೋಽಪಿ ಯೋ ನ ಭಕ್ತ್ಯೈಃ ಕೃತೋ ಹರೇ ॥ ೧೦೮ ॥**

**ಅರ್ಥ** :- **ನಿಃಶೇಷಧರ್ಮಕರ್ತಾ ಅಪಿ** ಸಮಸ್ತ ಧರ್ಮಗಳನ್ನು ಆಚರಿಸುವವನಾದರೂ, **ಹರೇಃ ಅಭಕ್ತಶ್ಚೇತ್** ಹರಿಯ ಭಕ್ತನಲ್ಲದಿದ್ದಲ್ಲಿ, **ನರಕೇ ಸದಾ ತಿಷ್ಠತಿ** ಸರ್ವದಾ ನರಕಭಾಗಿಯಾಗುವನು, **ಭಕ್ತಶ್ಚೇತ್** ಭಕ್ತನಾಗಿದ್ದಲ್ಲಿ, **ಬ್ರಹ್ಮಹಾ ಅಪಿ** ಬ್ರಹ್ಮ ಹತ್ಯೆಯನ್ನು ಮಾಡಿದವನಾದರೂ, **ವಿಮುಚ್ಯತೇ** ಮುಕ್ತನಾಗುವನು. ॥ ೧೦೭ ॥

**ಧರ್ಮೋ ಭವತ್ಯಧರ್ಮೋSಪಿ ಕೃತೋ ಭಕ್ತ್ಯೈಸ್ತವಾಚ್ಯುತ ।**
**ಪಾಪಂ ಭವತಿ ಧರ್ಮೋಽಪಿ ಯೋ ನ ಭಕ್ತ್ಯೈಃ ಕೃತೋ ಹರೇ ॥ ೧೦೮ ॥**

**ಅರ್ಥ** :- **ಅಚ್ಯುತ** ಎಲೈ ಅಚ್ಯುತನೇ, **ತವ ಭಕ್ತ್ಯೈಃ ಕೃತಃ** ನಿನ್ನ ಭಕ್ತರಿಂದ ಮಾಡಲ್ಪಟ್ಟ **ಅಧರ್ಮೋಽಪಿ** ಅಧರ್ಮವೂ, **ಧರ್ಮೋ ಭವತಿ** ಧರ್ಮವಾಗುವುದು, **ಹರೇ** ಎಲೈ ಹರಿಯೇ, **ಯಃ ಧರ್ಮೋಽಪಿ** ಯಾವುದು ಧರ್ಮವಾಗಿದ್ದರೂ, **ಭಕ್ತ್ಯೈಃ ನ ಕೃತಃ** ಭಕ್ತರಿಂದ ಮಾಡಲ್ಪಟ್ಟಿಲ್ಲವೋ ಅದು, **ಪಾಪಂ ಭವತಿ** ಪಾಪವಾಗುತ್ತದೆ. ॥ ೧೦೮ ॥

**ಭಕ್ತ್ಯಾ ತ್ವನನ್ಯಯಾ ಶಕ್ಯ ಅಹಮೇವಂವಿಧೋSರ್ಜುನ ।**
**ಜ್ಞಾತುಂ ದ್ರಷ್ಟುಂ ತತ್ತ್ವೇನ ಪ್ರವೇಷ್ಟುಂ ಚ ಪರಂತಪ ॥ ೧೦೯ ॥**

**ಅರ್ಥ** :-**ಪರಂತಪ ಅರ್ಜುನ** ಶತ್ರುಗಳಿಗೆ ತಾಪಕಾರನಾದ ಅರ್ಜುನನೇ, **ಏವಂವಿಧಃ ಅಹಂ** ವಿಶ್ವರೂಪವನ್ನು ಧರಿಸಿರುವ ನಾನು, **ತತ್ತ್ವೇನ ಜ್ಞಾತುಂ, ದ್ರಷ್ಟುಂ ಚ** ಯಥಾರ್ಥವಾಗಿ ಪರೋಕ್ಷಜ್ಞಾನದಿಂದ ಮತ್ತು ಅಪರೋಕ್ಷ ಜ್ಞಾನದಿಂದ ತಿಳಿಯಲ್ಪಡಲು, **ಪ್ರವೇಷ್ಟುಂ ಚ** ಮತ್ತು ಮೋಕ್ಷದಲ್ಲಿ ಪ್ರವೇಶಿಸಲ್ಪಡಲು, **ಅನನ್ಯಯಾ ಭಕ್ತ್ಯಾ ತು** ಇತರ ಯಾವ ದೇವತೆಗಳಲ್ಲೂ ಮಾಡದಿರುವ ಭಕ್ತಿಯಿಂದಲೇ, **ಶಕ್ಯಃ** ಸಾಧ್ಯನಾಗಿರುವೆನು. ॥ ೧೦೯ ॥

ತಮಸ್ಸಿಗೆ ಸಾಧನವನ್ನು ಈ ಶ್ಲೋಕದಲ್ಲಿ ಹೇಳಿದೆ.

**ಅನಾದಿದ್ವೇಷಿಣೋ ದೈತ್ಯಾ ವಿಷ್ಣೌ ದ್ವೇಷೋ ವಿವರ್ಧಿತಃ ।**
**ತಮಸ್ಯಂಧೇ ಪಾತಯತಿ ದೈತ್ಯಾನಂತೇ ವಿನಿಶ್ಚಯಾತ್ ॥ ೧೧೦ ॥**

**ಅರ್ಥ** :- **ದೈತ್ಯಾಃ** ದೈತ್ಯರು, **ಅನಾದಿದ್ವೇಷಿಣಃ** ಅನಾದಿಕಾಲದಿಂದಲೂ ಭಗವದ್‌ದ್ವೇಷಿಗಳು. **ವಿಷ್ಣೌ ವಿವರ್ಧಿತಃ ದ್ವೇಷಃ** ವಿಷ್ಣುವಿನಲ್ಲಿ ವಿಶೇಷವಾಗಿ ವರ್ಧಿಸಿದ ದ್ವೇಷವು, **ಅಂತೇ** ಕೊನೆಯಲ್ಲಿ, **ವಿನಿಶ್ಚಯಾತ್** ನಿಶ್ಚಿತವಾಗಿಯೂ, **ದೈತ್ಯಾನ್** ದೈತ್ಯರನ್ನು **ಅಂಧೇ ತಮಸಿ ಪಾತಯತಿ** ಅಂಧಂತಮಸ್ಸಿನಲ್ಲಿ ಬೀಳಿಸುವುದು. ॥ ೧೧೦ ॥

ತಮೋಯೋಗ್ಯರ ದ್ವೇಷವು ಶಾಶ್ವತವಾದುದು-

**ಪೂರ್ಣದುಃಖಾತ್ಮಕೋ ದ್ವೇಷಃ ಸೋಽನಂತೋ ಹ್ಯವತಿಷ್ಠತೇ ।**
**ಪತಿತಾನಾಂ ತಮಸ್ಯಂಧೇ ನಿಃಶೇಷಸುಖವರ್ಜಿತೇ ॥ ೧೧೧ ॥**

**ಅರ್ಥ** :- **ದ್ವೇಷಃ** ಭಗವದ್ದ್ವೇಷವು, **ಪೂರ್ಣದುಃಖಾತ್ಮಕಃ** ಪೂರ್ಣ ದುಃಖಸ್ವರೂಪವಾದುದು, **ಸಃ** ಆ ದ್ವೇಷವು, **ನಿಃಶೇಷಸುಖವರ್ಜಿತೇ** ಕಿಂಚಿತ್ತೂ ಸುಖವಿಲ್ಲದ, **ಅಂದೇ ತಮಸಿ ಪತಿತಾನಾಂ** ಅಂಧಂತಮಸ್ಸಿನಲ್ಲಿ ಬಿದ್ದವರಿಗೆ, **ಅನಂತಃ ಅವತಿಷ್ಠತೇ ಹಿ** ಅನಂತಕಾಲದಲ್ಲಿ ಇರುವುದೆಂದು ಪ್ರಮಾಣಸಿದ್ಧವಾಗಿದೆ. ॥ ೧೧೧ ॥

ದ್ವೇಷದ ವೈವಿಧ್ಯವನ್ನು ಇಲ್ಲಿ ನಿರೂಪಿಸಲಾಗಿದೆ-

**ಜೀವಾಭೇದೋ ನಿರ್ಗುಣತ್ವಮಪೂರ್ಣಗುಣತಾ ತಥಾ ।**
**ಸಾಮ್ಯಾಧಿಕ್ಯೇ ತದನ್ಯೇಷಾಂ ಭೇದಸ್ತದ್ಗತ ಏವ ಚ ॥ ೧೧೨ ॥**

**ಪ್ರಾದುರ್ಭಾವವಿಪರ್ಯಾಸಸ್ತದ್ಭಕ್ತದ್ವೇಷ ಏವ ಚ ।**
**ತತ್ಪ್ರಮಾಣಸ್ಯ ನಿಂದಾ ಚ ದ್ವೇಷಾ ಏತೇಽಖಿಲಾ ಮತಾಃ ॥ ೧೧೩ ॥**

**ಅರ್ಥ** :- **ಜೀವಾಭೇದಃ** ಭಗವಂತನಿಗೆ ಜೀವರಿಂದ ಅಭೇದಜ್ಞಾನವು, **ನಿರ್ಗುಣತ್ವಂ** ಭಗವಂತನು ನಿರ್ಗುಣವಲ್ಲವೆಂಬ ಜ್ಞಾನ, **ತಥಾ ಅಪೂರ್ಣ ಗುಣತಾ** ಹಾಗೆಯೇ ಭಗವಂತನು ಗುಣಗಳು ಪೂರ್ಣವಲ್ಲವೆಂಬ ಜ್ಞಾನ, **ತದನ್ಯೇಷಾಂ ಸಾಮ್ಯಾಧಿಕ್ಯೇ** ಭಗವಂತನಿಂದ ಭಿನ್ನರಾದವರು ಭಗವಂತನಿಗೆ ಸಮಾನರು ಅಥವಾ ಅಧಿಕರು ಎಂಬ ಜ್ಞಾನ, **ತದ್ಗತಃ ಭೇದ ಏವ ಚ** ಭಗವಂತನಿಗೆ ಅವನ ಅವಯವ, ಗುಣ, ಕ್ರಿಯಾದಿಗಳಿಂದ, ಅವತಾರಗಳಿಂದ ಭೇದಜ್ಞಾನ, **ಪ್ರಾದುರ್ಭಾವವಿಪರ್ಯಾಸಃ** ಭಗವದವತಾರಗಳು ಜನನ,

ಮರಣ, ಪ್ರಾಕೃತತ್ವ ಮೊದಲಾದ ದೋಷಗಳನ್ನು ಪಡೆದಿವೆ ಎಂಬ ಭ್ರಾಂತಿ, **ತದ್ಭಕ್ತದ್ವೇಷ ಏವ ಚ** ಮತ್ತು ಭಗವದ್ಭಕ್ತರ ದ್ವೇಷ, **ತತ್ಪ್ರಮಾಣಸ್ಯ ನಿಂದಾ ಚ** ಭಗವದ್ವಿಷಯವಾದ ಪ್ರಮಾಣಗಳ ನಿಂದೆ, **ಏತೇ ಅಖಿಲಾಃ** ಇವೆಲ್ಲವೂ, **ದ್ವೇಷಾಃ ಮತಾಃ** ದ್ವೇಷಗಳೆಂದು ಪ್ರಮಾಣಸಮ್ಮತವಾಗಿವೆ.

**ವಿಶೇಷ ವಿಷಯ** :- ಈ ಶ್ಲೋಕದಲ್ಲಿ'ಜೀವಾಭೇದೋ' ಎಂಬ ಪದವ ನ್ನಾರಂಭಿಸಿ 'ಪ್ರಾದುರ್ಭಾವವಿಪರ್ಯಾಸಃ' ಎಂಬಲ್ಲಿಯವರೆಗೆ ಅಭೇದಾದಿ ಪದಗಳನ್ನು ಅಭೇದಾದಿ ಜ್ಞಾನ ಎಂಬ ಅರ್ಥದಲ್ಲಿ ಉಪಯೋಗಿಸಲಾಗಿದೆ.

॥ ೧೧೨, ೧೧೩ ॥

ದೇವತೆಗಳಿಗೆ ಈ ನವವಿಧದ್ವೇಷರಹಿತವಾದ ಭಕ್ತಿಯು ಅನಾದಿಯಾಗಿದೆ. ಭಗವದಪರೋಕ್ಷಜ್ಞಾನಕ್ಕೆ, ಅನಂತರ ಮೋಕ್ಷಕ್ಕೆ ಸಾಧನವಾದ ಭಕ್ತಿಯು ಮುಕ್ತ ರಲ್ಲಿ ಆನಂದರೂಪವಾಗಿರುವುದು-

**ಏತೈರ್ವಿಹೀನಾ ಯಾ ಭಕ್ತಿಃ ಸಾ ಭಕ್ತಿರಿತಿ ನಿಶ್ಚಿತಾ ।**
**ಅನಾದಿಭಕ್ತಿರ್ದೇವಾನಾಂ ಕ್ರಮಾದ್ ವೃದ್ಧಿಂ ಗತೈವ ಸಾ ॥ ೧೧೪ ॥**

**ಅಪರೋಕ್ಷದೃಶೇರ್ಹೇತುಃ ಮುಕ್ತಿಹೇತುಶ್ಚ ಸಾ ಪುನಃ ।**
**ಸೈವಾऽನಂದಸ್ವರೂಪೇಣ ನಿತ್ಯಾ ಮುಕ್ತೇಷು ತಿಷ್ಠತಿ ॥ ೧೧೫ ॥**

**ಯಥಾ ಶೌಕ್ಲ್ಯಾದಿಕಂ ರೂಪಂ ಗೋರ್ಭವತ್ಯೇವ ಸರ್ವದಾ ।**
**ಸುಖಜ್ಞಾನಾದಿಕಂ ರೂಪಮೇವಂ ಭಕ್ತೇರ್ನ ಚಾನ್ಯಥಾ ॥ ೧೧೬ ॥**

**ಅರ್ಥ** :- **ಏತೈಃ** ಈ ನವವಿಧ ದ್ವೇಷಗಳಿಂದ, **ವಿಹೀನಾ ಯಾ ಭಕ್ತಿಃ** ರಹಿತವಾದ ಯಾವ ಭಕ್ತಿ ಇರುವುದೋ, **ಸಾ ಭಕ್ತಿರಿತಿ ನಿಶ್ಚಿತಾ** ಅದೇ ಭಕ್ತಿಯೆಂದು ನಿಶ್ಚಿತವಾಗಿದೆ. **ದೇವಾನಾಂ ಅನಾದಿಭಕ್ತಿಃ** ದೇವತೆಗಳಿಗೆ ಅನಾದಿ ಯಾದ ಭಕ್ತಿ ಇರುವುದು. **ಕ್ರಮಾದ್ ವೃದ್ಧಿಂ ಸಾ ಏವ** ಕ್ರಮವಾಗಿ ವೃದ್ಧಿಯನ್ನು ಪಡೆದ ಆ ಭಕ್ತಿಯೇ, **ಅಪರೋಕ್ಷದೃಶೇಃ ಹೇತುಃ** ಭಗವಂತನ ಅಪರೋಕ್ಷ ಜ್ಞಾನಕ್ಕೆ ಕಾರಣವಾದುದು. **ಪುನಃ ಮುಕ್ತಿಹೇತುಶ್ಚ** ಅನಂತರ ಮೋಕ್ಷಕ್ಕೂ ಕಾರಣ ವಾಗುವುದು. **ಸೈವ** ಆ ಭಕ್ತಿಯೇ, **ಆನಂದಸ್ವರೂಪೇಣ** ಆನಂದಸ್ವರೂಪದಿಂದ, **ನಿತ್ಯಾ** ನಿತ್ಯವಾಗಿ, **ಮುಕ್ತೇಷು ತಿಷ್ಠತಿ** ಮುಕ್ತರಲ್ಲಿರುವುದು. **ಯಥಾ ಸರ್ವದಾ ಶೌಕ್ಲ್ಯಾದಿಕಂ** ಹೇಗೆ ಸರ್ವದಾ ಇರುವ ಶುಕ್ಲರೂಪವೇ ಮೊದಲಾದವು, **ಗೋಃ**

**ಅರ್ಥ :- ದೈತ್ಯಾಃ** ದೈತ್ಯರು, **ಅನಾದಿದ್ವೇಷಿಣಃ** ಅನಾದಿಕಾಲದಿಂದಲೂ ಭಗವದ್‌ದ್ವೇಷಿಗಳು. **ವಿಷ್ಣೌ ವಿವರ್ಧಿತಃ ದ್ವೇಷಃ** ವಿಷ್ಣುವಿನಲ್ಲಿ ವಿಶೇಷವಾಗಿ ವರ್ಧಿಸಿದ ದ್ವೇಷವು, **ಅಂತೇ** ಕೊನೆಯಲ್ಲಿ **ವಿನಿಶ್ಚಯಾತ್** ನಿಶ್ಚಿತವಾಗಿಯೂ, **ದೈತ್ಯಾನ್** ದೈತ್ಯರನ್ನು **ಅಂಧೇ ತಮಸಿ ಪಾತಯತಿ** ಅಂಧಂತಮಸ್ಸಿನಲ್ಲಿ ಬೀಳಿಸುವುದು. ॥ ೧೧೦ ॥

ತಮೋಯೋಗ್ಯರ ದ್ವೇಷವು ಶಾಶ್ವತವಾದುದು-

**ಪೂರ್ಣದುಃಖಾತ್ಮಕೋ ದ್ವೇಷಃ ಸೋಽನಂತೋ ಹ್ಯವತಿಷ್ಠತೇ ।**
**ಪತಿತಾನಾಂ ತಮಸ್ಯಂಧೇ ನಿಃಶೇಷಸುಖವರ್ಜಿತೇ ॥ ೧೧೧ ॥**

**ಅರ್ಥ :- ದ್ವೇಷಃ** ಭಗವದ್ದ್ವೇಷವು, **ಪೂರ್ಣದುಃಖಾತ್ಮಕಃ** ಪೂರ್ಣ ದುಃಖಸ್ವರೂಪವಾದುದು, **ಸಃ** ಆ ದ್ವೇಷವು, **ನಿಃಶೇಷಸುಖವರ್ಜಿತೇ** ಕಿಂಚಿತ್ತೂ ಸುಖವಿಲ್ಲದ, **ಅಂದೇ ತಮಸಿ ಪತಿತಾನಾಂ** ಅಂಧಂತಮಸ್ಸಿನಲ್ಲಿ ಬಿದ್ದವರಿಗೆ, **ಅನಂತಃ ಅವತಿಷ್ಠತೇ ಹಿ** ಅನಂತಕಾಲದಲ್ಲಿ ಇರುವುದೆಂದು ಪ್ರಮಾಣಸಿದ್ಧವಾಗಿದೆ. ॥ ೧೧೧ ॥

ದ್ವೇಷದ ವೈವಿಧ್ಯವನ್ನು ಇಲ್ಲಿ ನಿರೂಪಿಸಲಾಗಿದೆ-

**ಜೀವಾಭೇದೋ ನಿರ್ಗುಣತ್ವಮಪೂರ್ಣಗುಣತಾ ತಥಾ ।**
**ಸಾಮ್ಯಾಧಿಕ್ಯೇ ತದನ್ಯೇಷಾಂ ಭೇದಸ್ತದ್ಗತ ಏವ ಚ ॥ ೧೧೨ ॥**

**ಪ್ರಾದುರ್ಭಾವವಿಪರ್ಯಾಸಸ್ತದ್ಭಕ್ತದ್ವೇಷ ಏವ ಚ ।**
**ತತ್ಪ್ರಮಾಣಸ್ಯ ನಿಂದಾ ಚ ದ್ವೇಷಾ ಏತೇಽಖಿಲಾ ಮತಾಃ ॥ ೧೧೩ ॥**

**ಅರ್ಥ :- ಜೀವಾಭೇದಃ** ಭಗವಂತನಿಗೆ ಜೀವರಿಂದ ಅಭೇದಜ್ಞಾನವು, **ನಿರ್ಗುಣತ್ವಂ** ಭಗವಂತನು ನಿರ್ಗುಣವಲ್ಲವೆಂಬ ಜ್ಞಾನ, **ತಥಾ ಅಪೂರ್ಣ ಗುಣತಾ** ಹಾಗೆಯೇ ಭಗವಂತನು ಗುಣಗಳು ಪೂರ್ಣವಲ್ಲವೆಂಬ ಜ್ಞಾನ, **ತದನ್ಯೇಷಾಂ ಸಾಮ್ಯಾಧಿಕ್ಯೇ** ಭಗವಂತನಿಂದ ಭಿನ್ನರಾದವರು ಭಗವಂತನಿಗೆ ಸಮಾನರು ಅಥವಾ ಅಧಿಕರು ಎಂಬ ಜ್ಞಾನ, **ತದ್ಗತಃ ಭೇದ ಏವ ಚ** ಭಗವಂತನಿಗೆ ಅವನ ಅವಯವ, ಗುಣ, ಕ್ರಿಯಾದಿಗಳಿಂದ, ಅವತಾರಗಳಿಂದ ಭೇದಜ್ಞಾನ, **ಪ್ರಾದುರ್ಭಾವವಿಪರ್ಯಾಸಃ** ಭಗವದವತಾರಗಳು ಜನನ,

ಮರಣ, ಪ್ರಾಕೃತತ್ವ ಮೊದಲಾದ ದೋಷಗಳನ್ನು ಪಡೆದಿವೆ ಎಂಬ ಭ್ರಾಂತಿ, **ತದ್ಭಕ್ತದ್ವೇಷ ಏವ ಚ** ಮತ್ತು ಭಗವದ್ಭಕ್ತರ ದ್ವೇಷ, **ತತ್ಪ್ರಮಾಣಸ್ಯ ನಿಂದಾ ಚ** ಭಗವದ್ವಿಷಯವಾದ ಪ್ರಮಾಣಗಳ ನಿಂದೆ, **ಏತೇ ಅಖಿಲಾಃ** ಇವೆಲ್ಲವೂ, **ದ್ವೇಷಾಃ ಮತಾಃ** ದ್ವೇಷಗಳೆಂದು ಪ್ರಮಾಣಸಮ್ಮತವಾಗಿವೆ.

**ವಿಶೇಷ ವಿಷಯ** :- ಈ ಶ್ಲೋಕದಲ್ಲಿ'ಜೀವಾಭೇದೋ' ಎಂಬ ಪದವ ನ್ನಾರಂಭಿಸಿ 'ಪ್ರಾದುರ್ಭಾವವಿಪರ್ಯಾಸಃ' ಎಂಬಲ್ಲಿಯವರೆಗೆ ಅಭೇದಾದಿ ಪದಗಳನ್ನು ಅಭೇದಾದಿ ಜ್ಞಾನ ಎಂಬ ಅರ್ಥದಲ್ಲಿ ಉಪಯೋಗಿಸಲಾಗಿದೆ.

॥ ೧೧೨, ೧೧೩ ॥

ದೇವತೆಗಳಿಗೆ ಈ ನವವಿಧದ್ವೇಷರಹಿತವಾದ ಭಕ್ತಿಯು ಅನಾದಿಯಾಗಿದೆ. ಭಗವದಪರೋಕ್ಷಜ್ಞಾನಕ್ಕೆ, ಅನಂತರ ಮೋಕ್ಷಕ್ಕೆ ಸಾಧನವಾದ ಭಕ್ತಿಯು ಮುಕ್ತ ರಲ್ಲಿ ಆನಂದರೂಪವಾಗಿರುವುದು-

**ಏತೈರ್ವಿಹೀನಾ ಯಾ ಭಕ್ತಿಃ ಸಾ ಭಕ್ತಿರಿತಿ ನಿಶ್ಚಿತಾ ।**
**ಅನಾದಿಭಕ್ತಿರ್ದೇವಾನಾಂ ಕ್ರಮಾದ್ ವೃದ್ಧಿಂ ಗತೈವ ಸಾ ॥ ೧೧೪ ॥**

**ಅಪರೋಕ್ಷದೃಶೇರ್ಹೇತುಃ ಮುಕ್ತಿಹೇತುಶ್ಚ ಸಾ ಪುನಃ ।**
**ಸೈವಾಽನಂದಸ್ವರೂಪೇಣ ನಿತ್ಯಾ ಮುಕ್ತೇಷು ತಿಷ್ಠತಿ ॥ ೧೧೫ ॥**

**ಯಥಾ ಶೌಕ್ಲ್ಯಾದಿಕಂ ರೂಪಂ ಗೋರ್ಭವತ್ಯೇವ ಸರ್ವದಾ ।**
**ಸುಖಜ್ಞಾನಾದಿಕಂ ರೂಪಮೇವಂ ಭಕ್ತೇರ್ನ ಚಾನ್ಯಥಾ ॥ ೧೧೬ ॥**

**ಅರ್ಥ** :- **ಏತೈಃ** ಈ ನವವಿಧ ದ್ವೇಷಗಳಿಂದ, **ವಿಹೀನಾ ಯಾ ಭಕ್ತಿಃ** ರಹಿತವಾದ ಯಾವ ಭಕ್ತಿ ಇರುವುದೋ, **ಸಾ ಭಕ್ತಿರಿತಿ ನಿಶ್ಚಿತಾ** ಅದೇ ಭಕ್ತಿಯೆಂದು ನಿಶ್ಚಿತವಾಗಿದೆ. **ದೇವಾನಾಂ ಅನಾದಿಭಕ್ತಿಃ** ದೇವತೆಗಳಿಗೆ ಅನಾದಿ ಯಾದ ಭಕ್ತಿ ಇರುವುದು. **ಕ್ರಮಾದ್ ವೃದ್ಧಿಂ ಸಾ ಏವ** ಕ್ರಮವಾಗಿ ವೃದ್ಧಿಯನ್ನು ಪಡೆದ ಆ ಭಕ್ತಿಯೇ, **ಅಪರೋಕ್ಷದೃಶೇಃ ಹೇತುಃ** ಭಗವಂತನ ಅಪರೋಕ್ಷ ಜ್ಞಾನಕ್ಕೆ ಕಾರಣವಾದುದು. **ಪುನಃ ಮುಕ್ತಿಹೇತುಶ್ಚ** ಅನಂತರ ಮೋಕ್ಷಕ್ಕೂ ಕಾರಣ ವಾಗುವುದು. **ಸೈವ** ಆ ಭಕ್ತಿಯೇ, **ಆನಂದಸ್ವರೂಪೇಣ** ಆನಂದಸ್ವರೂಪದಿಂದ, **ನಿತ್ಯಾ** ನಿತ್ಯವಾಗಿ, **ಮುಕ್ತೇಷು ತಿಷ್ಠತಿ** ಮುಕ್ತರಲ್ಲಿರುವುದು. **ಯಥಾ ಸರ್ವದಾ ಶೌಕ್ಲ್ಯಾದಿಕಂ** ಹೇಗೆ ಸರ್ವದಾ ಇರುವ ಶುಕ್ಲರೂಪವೇ ಮೊದಲಾದವು, **ಗೋಃ**

**ರೂಪಂ ಭವತ್ಯೇವ** ಗೋಶರೀರದ ಸ್ವರೂಪವಾಗಿಯೇ ಇರುವುದೋ, **ಏವಂ** ಅದೇ ರೀತಿ, **ಸುಖಜ್ಞಾನಾದಿಕಂ** ಮುಕ್ತರ ಆನಂದ, ಜ್ಞಾನ ಮೊದಲಾದವು **ಭಕ್ತೇಃ ರೂಪಂ** ಭಕ್ತಿಯಿಂದ ಸವಿಶೇಷಾಭಿನ್ನವಾಗಿರುವುದು. **ನ ಚ ಅನ್ಯಥಾ** ಬೇರೆ ರೀತಿಯಾಗಿ ಅಂದರೆ ನಿರ್ವಿಶೇಷಾಭಿನ್ನವಾಗಿ ಇರುವುದಿಲ್ಲ.

**ತಾತ್ಪರ್ಯ :-** ನವವಿಧದ್ವೇಷರಹಿತವಾದ ಭಕ್ತಿಯೇ ನಿಜವಾದ ಭಕ್ತಿಯಾಗಿದ್ದು ಅದು ದೇವತೆಗಳಿಗೆ ಅನಾದಿಯಾಗಿರುವುದು. ಕ್ರಮವಾಗಿ ವರ್ಧಿಸುವ ಈ ಭಕ್ತಿಯು ಮೊದಲು ಭಗವಂತನ ಅಪರೋಕ್ಷಜ್ಞಾನಕ್ಕೆ ಕಾರಣವಾಗಿ ಅನಂತರ ಮುಕ್ತಿಗೂ ಕಾರಣವಾಗುವುದು. ಮುಕ್ತರಾದ ಜೀವರಲ್ಲಿ ಭಕ್ತಿಯು ಆನಂದಸ್ವರೂಪವಾಗಿ ನೆಲೆಸಿರುವುದು. ಗೋವಿನ ದೇಹದಲ್ಲಿ ಕೊನೆಯವರೆಗೆ ಇರುವ ಶುಕ್ಲವರ್ಣವು ಗೋದೇಹದ ಸ್ವರೂಪವೇ ಆಗಿರುತ್ತದೆ. ಹಾಗೆಯೇ ಭಕ್ತಿಸ್ವರೂಪನಾದ ಮುಕ್ತಜೀವನಿಂದ ಅಭಿನ್ನವಾದ ಅವನ ಆನಂದ ಜ್ಞಾನ ಮೊದಲಾದವು ಭಕ್ತಿ ಸ್ವರೂಪವೇ ಆಗಿರುವುದು.

**ವಿಶೇಷ ವಿಷಯ :-** ಮುಕ್ತಜೀವರಲ್ಲಿರುವ ಭಕ್ತಿಯು ಮುಕ್ತಜೀವರ ಸ್ವರೂಪವೇ ಆಗಿದೆ. ಅವರಲ್ಲಿರುವ ಆನಂದಜ್ಞಾನಾದಿಗಳೂ ಅವರ ಸ್ವರೂಪವೇ ಆಗಿದೆ. ಆದ್ದರಿಂದ ಮುಕ್ತಜೀವರ ಜ್ಞಾನಾನಂದಾದಿ ಗುಣಗಳು ಅವರ ಭಕ್ತಿ ಸ್ವರೂಪವೇ ಆಗಿರುವುದು.

ಒಂದು ವಸ್ತುವು ಇರುವವರೆಗೆ ಇರತಕ್ಕ ಅದರ ಗುಣಗಳು ಆ ವಸ್ತುವಿನಿಂದ ಸವಿಶೇಷಾಭಿನ್ನವಾಗಿರುವುದು. ಆದ್ದರಿಂದ ಗೋಶರೀರವಿರುವವರೆಗೆ ಇರುವ ಅದರ ಶುಕ್ಲವರ್ಣವು ಆ ಗೋಶರೀರದಿಂದ ಸವಿಶೇಷಾಭಿನ್ನವಾಗಿರುವುದು. ಹಾಗೆಯೇ ಮುಕ್ತಜೀವನಲ್ಲಿರುವ ಆನಂದ, ಜ್ಞಾನ, ಭಕ್ತಿ ಮೊದಲಾದ ಗುಣಗಳು ಪರಸ್ಪರವಾಗಿ ಮತ್ತು ಮುಕ್ತಜೀವರಿಂದ ಸವಿಶೇಷಾಭಿನ್ನವಾಗಿರುವವು. ಈ ಕಾರಣದಿಂದಲೇ ಮುಕ್ತಜೀವರಲ್ಲಿ ಜ್ಞಾನಾನಂದಾದಿ ಗುಣಗಳು ಭಕ್ತಿಸ್ವರೂಪವಾಗಿರುವುದೆಂದು ಹೇಳಲಾಗಿದೆ.

ವಿಶೇಷವೆಂದರೆ ಭೇದವಿಲ್ಲದಿರುವ ಪದಾರ್ಥಗಳಲ್ಲಿ ಭೇದದ ಕಾರ್ಯವನ್ನು ನಿರ್ವಹಿಸುವ ಭೇದಪ್ರತಿನಿಧಿಯಾಗಿರುವ, ಪದಾರ್ಥದ ಶಕ್ತಿವಿಶೇಷ. ಬಟ್ಟೆಯ ಬಿಳಿ ಬಣ್ಣವು ಬಟ್ಟೆ ಇರುವವರೆಗೆ ಇರುವ ಕಾರಣ ಬಟ್ಟೆಯಿಂದ

ಅಭಿನ್ನವಾಗಿದೆ. ಹೀಗೆ ಅಭೇದವಿದ್ದರೂ 'ಬಟ್ಟೆಯ ಬಿಳಿಬಣ್ಣ' ಇತ್ಯಾದಿಯಾದ ಭೇದ ವ್ಯವಹಾರವನ್ನು ಆ ಬಟ್ಟೆಯ ಶಕ್ತಿವಿಶೇಷವಾಗಿರುವ ವಿಶೇಷವು ನಿರ್ವಹಿಸುವುದು. ಪ್ರಕೃತ, ಮುಕ್ತಜೀವರ ಜ್ಞಾನಾನಂದಾದಿ ಗುಣಗಳು ಮುಕ್ತಜೀವರಿಂದ ಅಭಿನ್ನವಾಗಿದ್ದು 'ಮುಕ್ತಜೀವರ ಜ್ಞಾನಾನಂದಾದಿಗಳು' ಇತ್ಯಾದಿಯಾದ ಭೇದವ್ಯವಹಾರವೂ ಇರುವುದರಿಂದ ವಿಶೇಷ ಸಹಿತವಾಗಿವೆ ಎಂದೊಪ್ಪಬೇಕಾಗುವುದು. ಹೀಗೆ ಮುಕ್ತಜೀವರ ಜ್ಞಾನಾನಂದಾದಿ ಗುಣಗಳು ಮುಕ್ತಜೀವರಿಂದ ಸವಿಶೇಷಾಭಿನ್ನವೇ ಹೊರತು ನಿರ್ವಿಶೇಷಾಭಿನ್ನವಲ್ಲ. ಪದಾರ್ಥಗಳಿಗೆ ನಿರ್ವಿಶೇಷಾಭೇದವಿದ್ದಲ್ಲಿ ಪದಾರ್ಥಗಳ ವಾಚಕಗಳಾದ ಆ ಶಬ್ದಗಳು ಪರ್ಯಾಯಶಬ್ದಗಳಾಗಿರುತ್ತವೆ. ಘಟವೆಂಬ ಪದಾರ್ಥವು ತನ್ನಿಂದ ನಿರ್ವಿಶೇಷಾ ಭೇದವನ್ನು ಪಡೆದಿರುವ ಕಾರಣ, ಘಟವೆಂಬ ವಸ್ತುವಾಚಕಗಳಾದ 'ಘಟ' 'ಕಲಶ', 'ಕರೀರ' ಮೊದಲಾದ ಪದಗಳು ಪರ್ಯಾಯ ಶಬ್ದಗಳಾಗಿವೆ. ಪ್ರಕೃತ, ಮುಕ್ತ ಜೀವರ ಭಕ್ತಿ, ಜ್ಞಾನಾದಿಗಳು ಮುಕ್ತಜೀವರಿಂದ ಮತ್ತು ಪರಸ್ಪರವಾಗಿ ನಿರ್ವಿಶೇಷಾ ಭೇದವನ್ನು ಹೊಂದಿರುವುದಾದಲ್ಲಿ, 'ಮುಕ್ತ', 'ಭಕ್ತಿ', 'ಜ್ಞಾನ' ಮೊದಲಾದ ಪದಗಳೆಲ್ಲ ಪರ್ಯಾಯ ಪದಗಳಾಗಿರ ಬೇಕಾಗಿತ್ತು. ಅವು ಪರ್ಯಾಯ ಪದಗಳಾಗಿದ್ದಲ್ಲಿ ಅವುಗಳನ್ನು ಒಟ್ಟಿಗೆ ಪ್ರಯೋಗಮಾಡುವುದು ಪುನರುಕ್ತಿಯ ಕಾರಣ ತಪ್ಪಾದೀತು. ಭಕ್ತಿಜ್ಞಾನಾ ನಂದಾದಿ ಪದಗಳನ್ನು ಒಂದೇ ವಾಕ್ಯದಲ್ಲಿ ಒಟ್ಟಿಗೆ ಪ್ರಯೋಗಿಸುವುದರಿಂದ ಅವುಗಳು ಪರ್ಯಾಯ ಪದಗಳಲ್ಲವೆನ್ನುವುದು ಸ್ಪಷ್ಟ ಇಂಥ ಅಪರ್ಯಾಯ ಶಬ್ದವಾಚ್ಯತ್ವವು ಅತ್ಯಂತ ಭಿನ್ನವಾದ ಪದಾರ್ಥಗಳಿಗೂ, ಭೇದಾಭೇದವನ್ನು ಪಡೆದಿರುವ ಪದಾರ್ಥಗಳಿಗೂ ಇರುವುದು. ಘಟ, ಪಟ ಮೊದಲಾದ ಪದಾರ್ಥಗಳು ಅತ್ಯಂತ ಭಿನ್ನವಾದ ಪದಾರ್ಥಗಳಾಗಿದ್ದು 'ಘಟ' 'ಪಟ' ಮೊದಲಾದ ಅಪರ್ಯಾಯ ಶಬ್ದವಾಚ್ಯಗಳಾಗಿವೆ. 'ಘಟ', ಮೃತ್ತಿಕೆ ಎಂಬ ಅಪರ್ಯಾಯ ಶಬ್ದವಾಚ್ಯಗಳಾಗಿವೆ. ಇವೆರಡೂ ನಿದರ್ಶನಗಳಲ್ಲಿ ಪದಾರ್ಥ ಗಳಿಗೆ ಭೇದವಿರುವುದರಿಂದ ಆ ಭೇದವೇ ಅಪರ್ಯಾಯ ಶಬ್ದವಾಚ್ಯತ್ವವನ್ನು ನಿರ್ವಹಿಸುವುದು. ಆದರೆ ಭೇದವೇ ಇಲ್ಲದೇ ಅಭೇದವಿರುವ ಜೀವರ ಸ್ವರೂಪ ಭೂತವಾದ ಜ್ಞಾನಾನಂದಾದಿಗಳಿಗೆ, ಭಗವಂತನ ಗುಣ - ಕ್ರಿಯಾದಿಗಳಿಗೆ, ಮತ್ಸ್ಯಕೂರ್ಮಾದ್ಯವತಾರಗಳಿಗೆ, ಅವನ ಹಸ್ತಪಾದಾದ್ಯವಯವಗಳಿಗೆ ಅಪರ್ಯಾಯಶಬ್ದ ವಾಚ್ಯತ್ವವನ್ನು ನಿರ್ವಹಿಸಲು ಭೇದಪ್ರತಿನಿಧಿಯಾದ

ವಿಶೇಷವನ್ನು ಒಪ್ಪಬೇಕಾಗುವುದು. ಈ ವಿಶೇಷವು, 'ಒಂದಿರುವಾಗಲೇ ಮತ್ತೊಂದರ ನಾಶ' ಎಂಬ ಭೇದದ ಅಸಾಧಾರಣ ಕಾರ್ಯವೊಂದನ್ನು ಬಿಟ್ಟು ಉಳಿದ ಎಲ್ಲ ಭೇದಕಾರ್ಯಗಳನ್ನೂ ನಿರ್ವಹಿಸುವುದು. ॥ ೧೧೪ - ೧೧೫ ॥

ಭಗವತ್ಪ್ರಸಾದವೇ ಮೋಕ್ಷಸಾಧನವಾಗಿರುವಾಗ ಭಕ್ತಿಯು ಮೋಕ್ಷಸಾಧನ ವಾಗುವುದು ಹೇಗೆ ಸಾಧ್ಯ ಎಂಬ ಆಶಂಕೆಗೆ ಇಲ್ಲಿ ಸಮಾಧಾನವನ್ನು ಹೇಳಲಾಗಿದೆ-

**ಭಕ್ತ್ಯೈವ ತುಷ್ಟಿಮಭ್ಯೇತಿ ವಿಷ್ಣುರ್ನಾನ್ಯೇವ ಕೇನಚಿತ್ ।**
**ಸ ಏವ ಮುಕ್ತಿದಾತಾ ಚ ಭಕ್ತಿಸ್ತತ್ರೈಕಕಾರಣಮ್ ॥ ೧೧೭ ॥**

**ಬ್ರಹ್ಮಾದೀನಾಂ ಚ ಮುಕ್ತಾನಾಂ ತಾರತಮ್ಯೇ ತು ಕಾರಣಮ್ ।**
**ತಾರತಮ್ಯಸ್ಥಿತಾಽನಾದಿರ್ನಿತ್ಯಾ ಭಕ್ತಿರ್ನ ಚೇತರಾತ್ ॥ ೧೧೮ ॥**

**ಅರ್ಥ :- ವಿಷ್ಣುಃ** ವಿಷ್ಣುವು, **ಭಕ್ತ್ಯೈವ ತುಷ್ಟಿಮಭ್ಯೇತಿ** ಭಕ್ತಿಯಿಂದಲೇ ಸಂತೋಷವನ್ನು ಹೊಂದುವನು. **ನ ಅನ್ಯೇನ ಕೇನಚಿತ್** ಬೇರೆ ಯಾವುದ ರಿಂದಲೂ ಭಗವಂತನು ಸಂತುಷ್ಟನಾಗಲಾರನು. **ಸ ಏವ** ಸಂತುಷ್ಟನಾದ ಭಗವಂತನೇ, **ಮುಕ್ತಿದಾತಾ ಚ** ಮುಕ್ತಿಯನ್ನು ಮುಖ್ಯಕಾರಣವಾಗಿದೆ. **ಬ್ರಹ್ಮಾ ದೀನಾಂ ಮುಕ್ತಾನಾಂ ಚ ತಾರತಮ್ಯೇ** ಬ್ರಹ್ಮನೇ ಮೊದಲಾದ ಮುಕ್ತರಿಗಿರುವ ತಾರತಮ್ಯಕ್ಕೆ, **ತಾರತಮ್ಯ ಸ್ಥಿತಾ** ಅವರಲ್ಲಿ ತಾರತಮ್ಯದಿಂದ ಇರುವ **ಅನಾದಿ ನಿತ್ಯಾ ಭಕ್ತಿಃ ಕಾರಣಮ್** ಅನಾದಿನಿತ್ಯವಾದ ಭಕ್ತಿಯು ಕಾರಣವಾಗಿ. **ನ ಚ ಇತರಾತ್** ಬ್ರಹ್ಮಾದಿ ಮುಕ್ತರಲ್ಲಿರುವ ತಾರತಮ್ಯವು ಬೇರೆ ಯಾವ ಕಾರಣ ದಿಂದಲೂ ಉಂಟಾದುದಲ್ಲ.

**ತಾತ್ಪರ್ಯ** :- ಭಗವತ್ಪ್ರೀತಿಗೆ ಭಗವದ್ಭಕ್ತಿಯೇ ಮುಖ್ಯಸಾಧನವಾಗಿದೆ. ಬೇರೆ ಯಾವ ಸಾಧನದಿಂದಲೂ ಭಗವಂತನನ್ನು ಸಂತೋಷಗೊಳಿಸಲಾಗದು. ಪ್ರೀತನಾದ ಭಗವಂತನು ಮೋಕ್ಷವನ್ನು ಕೊಡುವನು. ಹೀಗೆ ಭಗವತ್ಪ್ರಸಾದದ ಮೂಲಕ ಭಕ್ತಿಯು ಮೋಕ್ಷಕ್ಕೆ ಏಕೈಕಸಾಧನವಾಗಿದೆ. ಅನಾದಿನಿತ್ಯವಾದ ಈ ಭಕ್ತಿಯು ಬ್ರಹ್ಮಾದಿ ಮುಕ್ತಜೀವರಲ್ಲಿ ಒಂದೇ ರೀತಿಯಾಗಿರದೆ ತಾರತಮ್ಯದಿಂದ ಕೂಡಿರುವುದು. ಈ ಭಕ್ತಿಯ ತಾರತಮ್ಯವೇ ಬ್ರಹ್ಮಾದಿ ಮುಕ್ತರ ತಾರತಮ್ಯಕ್ಕೆ ಹೇತುವಾಗಿದೆ. ಅವರ ತಾರತಮ್ಯಕ್ಕೆ ಬೇರಾವುದೂ ಕಾರಣವಲ್ಲ.

॥ ೧೧೭, ೧೧೮ ॥

ಮಾನುಷಾಧಮರಿಗೆ ತಮಸ್ಸು, ಮಾನುಷಮಧ್ಯಮರಿಗೆ ಸುಖದುಃಖಮಿಶ್ರವಾದ ಫಲ, ಮನುಷ್ಯೋತ್ತಮರಿಗೆ ಮುಕ್ತಿ ಎಂದು ಹಿಂದೆ ಹೇಳಿರುವ ವಿಷಯದಲ್ಲಿ ಕಾರಣವನ್ನು ಇಲ್ಲಿ ಹೇಳಲಾಗಿದೆ-

**ಮಾನುಷೇಷ್ವಧಮಾಃ ಕಿಂಚಿದ್ದ್ವೇಷಯುಕ್ತಾಃ ಸದಾ ಹರೌ ।**
**ದುಃಖನಿಷ್ಠಾಸ್ತತಸ್ತೇಽಪಿ ನಿತ್ಯಮೇವ ನ ಸಂಶಯಃ ॥ ೧೧೯ ॥**

**ಮಧ್ಯಮಾ ಮಿಶ್ರಭೂತತ್ವಾನ್ನಿತ್ಯಂ ಮಿಶ್ರಫಲಾಃ ಸ್ಮೃತಾಃ ।**
**ಕಿಂಚಿದ್ಭಕ್ತಿಯುತಾ ನಿತ್ಯಮುತ್ತಮಾಸ್ತೇನ ಮೋಕ್ಷಿಭಿಃ ॥ ೧೨೦ ॥**

**ಅರ್ಥ :- ಮಾನುಷೇಷು ಅಧಮಾಃ** ಮನುಷ್ಯರಲ್ಲಿ ಅಧಮರು, **ಹರೌ ಸದಾ ಕಿಂಚಿದ್ದ್ವೇಷಯುತಾಃ** ಶ್ರೀಹರಿಯಲ್ಲಿ ಸರ್ವದಾ ಕಲ್ಯಾದಿಗಳು ಮಾಡುವ ದ್ವೇಷಕ್ಕಿಂತ ಸ್ವಲ್ಪ ನ್ಯೂನವಾದ ದ್ವೇಷವುಳ್ಳವರು. **ತತಃ** ಆ ಕಾರಣದಿಂದ, **ತೇಽಪಿ** ಆ ಮನುಷ್ಯಾಧಮರೂ **ನಿತ್ಯಮೇವ ದುಃಖನಿಷ್ಠಾಃ** ನಿತ್ಯದುಃಖರೂಪವಾದ ತಪಸ್ಸನ್ನು ಹೊಂದುವರು. **ನ ಸಂಶಯಃ** ಇದರಲ್ಲಿ ಸಂಶಯವಿಲ್ಲ. **ಮಧ್ಯಮಾಃ** ಮಧ್ಯಮ ಮನುಷ್ಯರು, **ನಿತ್ಯಂ ಮಿಶ್ರಭೂತತ್ವಾತ್** ಭಗವಂತನ ಸರ್ವೋತ್ತಮತ್ವಾದಿ ವಿಷಯದಲ್ಲಿ ಯಾವಾಗಲೂ ಸಂಶಯಯುಕ್ತರಾಗಿರುವುದರಿಂದ, **ಮಿಶ್ರಫಲಾಃ ಸ್ಮೃತಾಃ** ಸುಖದುಃಖಮಿಶ್ರವಾದ ಫಲವುಳ್ಳವರೆಂದು ಪ್ರಮಾಣಸಿದ್ಧವಾಗಿದೆ. **ಉತ್ತಮಾಃ** ಮನುಷ್ಯೋತ್ತಮರು, **ನಿತ್ಯಂ ಕಿಂಚಿದ್ಭಕ್ತಿಯುತಾಃ** ಬ್ರಹ್ಮಾದಿಗಳು ಶ್ರೀಹರಿಯಲ್ಲಿ ಮಾಡುವ ಭಕ್ತಿಗಿಂತ ಸ್ವಲ್ಪ ಕಡಿಮೆಯಾದ ಭಕ್ತಿಯಿಂದ ಯಾವಾಗಲೂ ಸಹಿತರಾಗಿರುವರು. **ತೇನ ಮೋಕ್ಷಿಣಃ** ಆ ಕಾರಣದಿಂದ ಅವರು ಮುಕ್ತಿಯನ್ನು ಪಡೆಯುವರು.

**ತಾತ್ಪರ್ಯ :-** ಮನುಷ್ಯಾಧಮರು ಶ್ರೀಹರಿಯಲ್ಲಿ ಮಾಡುವ ದ್ವೇಷವು ಕಲ್ಯಾದಿ ಮಹಾದೈತ್ಯರು ಮಾಡುವ ದ್ವೇಷಕ್ಕಿಂತ ಸ್ವಲ್ಪ ಕಡಿಮೆಯದಾಗಿದ್ದು ಸಾರ್ವಕಾಲಿಕವಾಗಿದೆ. ಆದ್ದರಿಂದ ಅವರು ನಿತ್ಯದುಃಖರೂಪವಾದ ತಮಸ್ಸನ್ನು ನಿಶ್ಚಯವಾಗಿ ಪಡೆಯುವರು. ಮಧ್ಯಮಮನುಷ್ಯರಿಗೆ ಯಾವಾಗಲೂ ಭಗವಂತನ ಮಹಿಮೆಯಲ್ಲಿ ಸಂಶಯವೇ. ಆದ್ದರಿಂದ ಅವರ ಭಕ್ತಿಯೂ ಮಿಶ್ರಭೂತವಾದುದು. ಈ ಕಾರಣದಿಂದಲೇ ಅವರಿಗೆ ಸುಖದುಃಖಮಿಶ್ರವಾದ ನಿತ್ಯಸಂಸಾರರೂಪವಾದ ಫಲ. ಮನುಷ್ಯೋತ್ತಮರು ಬ್ರಹ್ಮಾದಿಗಳ ಭಕ್ತಿಗಿಂತ

ಅಲ್ಪವಾದ, ಆದರೆ ನಿತ್ಯವಾದ ಭಕ್ತಿಯನ್ನು ಭಗವಂತನಲ್ಲಿ ಮಾಡುವರು. ಆದ್ದರಿಂದ ಅವರು ಮೋಕ್ಷ ಫಲವನ್ನು ಪಡೆಯುವರು.

**ವಿಶೇಷ ವಿಷಯ :-** ಮನುಷ್ಯಾಧಮರಿಗೆ ಸದಾ ಶ್ರೀಹರಿಯಲ್ಲಿ ದ್ವೇಷವೆಂದು ಹೇಳಿದ್ದರಿಂದ ಅವರಲ್ಲಿ ಎಂದೂ ಭಕ್ತಿಗೆ ಅವಕಾಶವಿಲ್ಲವೆಂದು ಸೂಚಿತವಾಗಿದೆ. ಹೀಗೆ ಅವಿಚ್ಛಿನ್ನವಾದ ದ್ವೇಷವೇ ಮನುಷ್ಯಾಧಮರಿಗೂ ಮನುಷ್ಯಮಧ್ಯಮರಿಗೂ ಇರುವ ವೈಲಕ್ಷಣ್ಯವಾಗಿದೆ. ॥ ೧೨೦ ॥

**ಬ್ರಹ್ಮಣಃ ಪರಮಾ ಭಕ್ತಿಃ ಸರ್ವೇಭ್ಯಃ ಪರಮಸ್ತತಃ ।**
**ಇತ್ಯಾದೀನಿ ಚ ವಾಕ್ಯಾನಿ ಪುರಾಣೇಷು ಪೃಥಕ್ ಪೃಥಕ್ ॥ ೧೨೧ ॥**

**ಅರ್ಥ :-** ಬ್ರಹ್ಮಣಃ ಚತುರ್ಮುಖನಿಗೆ, ಪರಮಾ ಭಕ್ತಿಃ ಇತರ ಎಲ್ಲ ಜೀವರ ಭಕ್ತಿಗಿಂತಲೂ ಉತ್ಕೃಷ್ಟವಾದ ಭಕ್ತಿ ಇರುವುದು. ತತಃ ಆದ್ದರಿಂದಲೇ ಚತುರ್ಮುಖನು, ಸರ್ವೇಭ್ಯಃ ಪರಮಃ ಎಲ್ಲ ಜೀವರಿಗಿಂತ ಶ್ರೇಷ್ಠನಾಗಿರುವನು. ಇತ್ಯಾದೀನಿ ಚ ವಾಕ್ಯಾನಿ ಇವೇ ಮೊದಲಾದ ವಾಕ್ಯಗಳು, ಪುರಾಣೇಷು ಪೃಥಕ್ ಪೃಥಕ್ ಪುರಾಣಗಳಲ್ಲಿ ಪ್ರತ್ಯೇಕ ಪ್ರತ್ಯೇಕವಾಗಿ ಇರುವವು. ॥ ೧೨೧ ॥

'ಯಥಾ ದೇವೇ ತಥಾ ಗುರೌ' ಎಂಬಲ್ಲಿ ಪ್ರಸ್ತಾಪಿಸಲ್ಪಟ್ಟಿರುವ ಗುರುಗಳ ಲಕ್ಷಣವನ್ನು ಇಲ್ಲಿ ಹೇಳಿದೆ -

**ಷಣ್ಣವತ್ಯಂಗುಲೋ ಯಸ್ತು ನ್ಯಗ್ರೋಧಪರಿಮಂಡಲಃ ।**
**ಸಪ್ತಪಾದಶ್ಚತುರ್ಹಸ್ತೋ ದ್ವಾತ್ರಿಂಶಲ್ಲಕ್ಷಣೈರ್ಯುತಃ ॥ ೧೨೨ ॥**

**ಅಸಂಶಯಃ ಸಂಶಯಚ್ಛಿತ್ ಗುರುರುಕ್ತೋ ಮನೀಷಿಭಿಃ ।**
**ತಸ್ಮಾದ್ ಬ್ರಹ್ಮಾ ಗುರುರ್ಮುಖ್ಯಃ ಸರ್ವೇಷಾಮೇವ ಸರ್ವದಾ ॥ ೧೨೩ ॥**

**ಅರ್ಥ :- ಯಸ್ತು** ಯಾವನು, **ಷಣ್ಣವತ್ಯಂಗುಲಃ** ಪಾದದಿಂದ ಕೇಶದವರೆಗೆ ಎತ್ತರವನ್ನಳೆದಾಗ ತೊಂಬತ್ತಾರು ಅಂಗುಲಗಳಿರುವನೋ, **ನ್ಯಗ್ರೋಧಪರಿಮಂಡಲಃ** ನ್ಯಗ್ರೋಧಸಂಖ್ಯೆಯ ಅಂಗುಲಗಳ ಅಂದರೆ ನಲವತ್ತೆಂಟು ಅಂಗುಲಗಳ ಸುತ್ತಳತೆಯನ್ನು ಉದರದಲ್ಲಿ ಹೊಂದಿರುವನೋ, **ಸಪ್ತಪಾದಃ** ಎತ್ತರವನ್ನು ಹೆಜ್ಜೆಗಳಿಂದ ಅಳೆದಾಗ ನಾಲ್ಕು ಮೊಳಗಳಷ್ಟು ಎತ್ತರವಿರುವನೋ, **ದ್ವಾತ್ರಿಂಶಲ್ಲಕ್ಷಣೈಃ ಯುತಃ** ಮೂವತ್ತೆರಡು ಲಕ್ಷಣಗಳಿಂದ ಕೂಡಿರುವನೋ

ಅಂತಹ, **ಅಸಂಶಯಃ** ಸ್ವಯಂ ಸಂಶಯರಹಿತನಾದ, **ಸಂಶಯಚ್ಛಿದ್** ಇತರರ ಸಂಶಯವನ್ನು ನಿರ್ಮೂಲಗೊಳಿಸುವ ಪುರುಷನು, **ಮನೀಷಿಭಿಃ** ಜ್ಞಾನಿಗಳಿಂದ, **ಗುರುಃ ಉಕ್ತಃ** ಗುರುವೆಂದು ಹೇಳಲ್ಪಟ್ಟಿದ್ದಾನೆ.

**ತಾತ್ಪರ್ಯ :-** ಸ್ಪಷ್ಟ.

**ವಿಶೇಷ ವಿಷಯ :-** ಷಣ್ಣವತ್ಯಂಗುಲಃ - ಪಾದದಿಂದ ಕೇಶದವರೆಗಿನ ಎತ್ತರ ತೊಂಬತ್ತಾರು ಅಂಗುಲ ಅಥವಾ ಎಂಟು ವಿತಸ್ತಿ ಎಂದರೆ ಗೇಣುಗಳಿಷ್ಟಿರಬೇಕು.

**ನ್ಯಗ್ರೋಧಪರಿಮಂಡಲಃ** ನಲವತ್ತೆಂಟು ಅಂಗುಲಿಗಳಿಗೆ ನ್ಯಗ್ರೋಧವೆಂದು ಹೆಸರು. ತ್ತೊಂಬತ್ತಾರು ಅಂಗುಲಿ ಎತ್ತರವಿದ್ದು ಅದರರ್ಧಪ್ರಮಾಣ ಎಂದರೆ ನಲವತ್ತೆಂಟು ಅಂಗುಲಿ ಉದರಭಾಗದಲ್ಲಿ ಶರೀರದ ಸುತ್ತಳತೆ ಇರಬೇಕೆಂದು ಭಾವ. ನ್ಯಗ್ರೋಧವೆಂಬ ಅಳತೆಯನ್ನು ಕೋಶದಲ್ಲಿ ಹೀಗೆ ವಿವರಿಸಿದೆ — 'ವ್ಯಾಮೋ ಬಾಹ್ವೋಃ ಸಕರಯೋಸ್ತತಯೋಸ್ತಿರ್ಯಗಂತರಂ । ವ್ಯಾಮೋ ವಟಶ್ಚ ನ್ಯಗ್ರೋಧೌ' । ಒಂದು ಹಸ್ತದ ಮೇಲೆ ಮತ್ತೊಂದು ಹಸ್ತವನ್ನು ಅಡ್ಡವಾಗಿ ಇಟ್ಟಾಗ ಎರಡು ಬಾಹುಗಳ ಮಧ್ಯೆ ಇರುವ ಅಳತೆಗೆ ವ್ಯಾಮವೆಂದು ಹೆಸರು. ಈ ವ್ಯಾಮವೇ ನ್ಯಗ್ರೋಧವೆಂದೂ ವಟವೆಂದೂ ಕರೆಯಲ್ಪಡುವುದು.

**ಚತುರ್ಹಸ್ತಃ** - ಹಸ್ತವೆಂದರೆ ಮೊಳ. ಮೊಳಗಳಿಂದ ಅಳೆದಾಗ ಶರೀರದ ಎತ್ತರ ನಾಲ್ಕು ಮೊಳಗಳಷ್ಟಿರಬೇಕು. ಒಂದು ಮೊಳ ಎರಡು ವಿತಸ್ತಿ ಅಂದರೆ ಗೇಣಿನ ಅಳತೆಯನ್ನು ಹೊಂದಿರುವುದು. ಒಟ್ಟಿನಲ್ಲಿ ಎಂಟು ವಿತಸ್ತಿಗಳಷ್ಟು ಶರೀರದ ಎತ್ತರವಿರಬೇಕು. ಒಂದೊಂದು ಹಸ್ತವೂ ಎರಡು ವಿತಸ್ತಿಗಳಷ್ಟು ದೀರ್ಘವಾಗಿರಬೇಕು.

**ಸಪ್ತಪಾದಃ** - ಇದೇ ಅಳತೆಯನ್ನು ಪಾದದಿಂದ ಅಳೆದಾಗ ಏಳು ಪಾದಗಳ ಅಳತೆ ಇರಬೇಕು. ಏಳು ಪಾದಗಳಲ್ಲಿ ತೊಂಬತ್ತಾರು ಅಂಗುಲಗಳು ಸಿಗುವಂತೆ ಪಾದಗಳೂ ಯಥೋಚಿತವಾಗಿ ದೀರ್ಘವಾಗಿರಬೇಕು. ಶರೀರದ ಎತ್ತರ ಅತಿಹ್ರಸ್ವವಾಗಿದ್ದರೆ, ಪಾದಗಳು ಅತಿ ಚಿಕ್ಕವಾಗಿದ್ದರೆ, ಹಸ್ತಗಳೂ ಚಿಕ್ಕವಾಗಿದ್ದರೆ ಪುರುಷನು ಲಕ್ಷಣಶೂನ್ಯನು.

**ದ್ವಾತ್ರಿಂಶಲ್ಲಕ್ಷಣೈರ್ಯುತಃ** - ಲಕ್ಷಣಗ್ರಂಥದಲ್ಲಿ ಮೂವತ್ತೆರಡು ಲಕ್ಷಣಗಳನ್ನು ಸಂಗ್ರಹವಾಗಿ ಹೀಗೆ ಹೇಳಿದೆ - ಪಂಚದೀರ್ಘಃ ಪಂಚಸೂಕ್ಷ್ಮಃ ಸಪ್ತರಕ್ತಃ ಷಡುನ್ನತಃ । ತ್ರಿಪೃಥುಸ್ತ್ರಿಷು ಗಂಭೀರೋ ದ್ವಾತ್ರಿಂಶಲ್ಲಕ್ಷಣಸ್ಥಿತಿಃ ॥ ಅದರಂತೆ ಶರೀರದ ಐದು ಸ್ಥಾನಗಳಲ್ಲಿ ದೀರ್ಘತೆ, ಐದು ಸ್ಥಾನಗಳಲ್ಲಿ ಸೂಕ್ಷ್ಮತೇ, ಏಳು ಸ್ಥಾನಗಳಲ್ಲಿ ರಕ್ತವರ್ಣ, ಆರು ಸ್ಥಾನಗಳಲ್ಲಿ ಔನ್ನತ್ಯ, ಮೂರು ಸ್ಥಾನಗಳಲ್ಲಿ ವಿಸ್ತಾರ, ಮೂರು ಸ್ಥಳಗಳಲ್ಲಿ ಗಾಂಭೀರ್ಯ - ಹೀಗೆ ಒಟ್ಟು ಮೂವತ್ತೆರಡು ಲಕ್ಷಣಗಳು. ಇದರ ವಿವರ ಹೀಗೆ - ಪಂಚದೀರ್ಘಃ - ಭುಗಳು, ಕಣ್ಣುಗಳು, ದವಡೆ, ಮೋಣಕಾಲು, ಉಗುರಿನ ಸ್ಥಾನ - ಈ ಅವಯವಗಳು ಉದ್ದವಾಗಿರಬೇಕು.

**ಸಪ್ತರಕ್ತಃ** - ಅಂಗೈಗಳು, ಅಂಗಾಲುಗಳು, ಕಣ್ಣುಗಳ ತುದಿ, ತಾಲು ಎಂದು ಕರೆಯಲ್ಪಡುವ, ಬಾಯಿಯ ಒಳಗಿನ, ಮೇಲಿನ ಸಾಲಿನ ಹಲ್ಲುಗಳಿಗೆ ಸಮೀಪದ ಮೇಲ್ಭಾಗ, ನಾಲಿಗೆ, ಕೆಳತುಟಿ, ಉಗುರು - ಈ ಏಳು ಕೆಂಪಾಗಿರಬೇಕು.

**ಷಡುನ್ನತಃ** - ಕಕ್ಷ, ಉದರ, ವಕ್ಷಸ್ಸು ಮೂಗು, ಭುಜ ಮತ್ತು ಹಣೆ - ಈ ಆರು ಉನ್ನತವಾಗಿರಬೇಕು.

**ತ್ರಿಪೃಥುಃ** - ಹಣೆ, ಕಟಿ, ಎದೆ - ಈ ಮೂರು ವಿಶಾಲವಾಗಿರಬೇಕು.

***ತ್ರಿಷು ಹ್ರಸ್ವತ್ವಾನಿ** - ಮೊಣಕಾಲು, ಕುತ್ತಿಗೆ, ಗುಹ್ಯಸ್ಥಾನ - ಈ ಮೂರರಲ್ಲಿ ಹ್ರಸ್ವತ್ವವಿರಬೇಕು.

**ತ್ರಿಷು ಗಂಭೀರಃ** - ಧ್ವನಿ, ಮನಸ್ಸು ಮತ್ತು ನಾಭಿ - ಈ ಮೂರು ಗಂಭೀರವಾಗಿರಬೇಕು.

ಈ ದ್ವಾತ್ರಿಂಶಲ್ಲಕ್ಷಣಗಳನ್ನು 'ಇಹ ಭವತಿ ಸಪ್ತರಕ್ತಃ ಷಡುನ್ನತಃ ಪಂಚಸೂಕ್ಷ್ಮದೀರ್ಘೋಽ ಯಃ । ತ್ರಿವಿಪುಲಲಘುಗಂಭೀರೋ ದ್ವಾತ್ರಿಂಶಲ್ಲಕ್ಷಣಃ ಸ ಪುಮಾನ್ ॥' ಎಂದೂ ಸಾಮುದ್ರಿಕಶಾಸ್ತ್ರದಲ್ಲಿ ಹೇಳಿದೆ. ॥ ೧೨೨-೧೨೩ ॥

---

* 'ಪಂಚದೀರ್ಘಃ' ಇತ್ಯಾದಿ ಶ್ಲೋಕದಲ್ಲಿ ತ್ರಿಷು ಹ್ರಸ್ವತ್ವದ ಪ್ರಸ್ತಾಪವಿಲ್ಲ. ಶ್ರೀ ವಾದಿರಾಜರ ಟಿಪ್ಪಣಿಯನ್ನನುಸರಿಸಿ ಇಲ್ಲಿ ಈ ವಿವರಣೆಯನ್ನು ಕೊಡಲಾಗಿದೆ. ತ್ರಿಷು ಹ್ರಸ್ವತ್ವವನ್ನು ಗಣನೆಗೆ ತೆಗೆದುಕೊಂಡರೆ ಮಾತ್ರ ಲಕ್ಷಣಗಳು ಮೂವತ್ತೆರಡಾಗುವವು.

ಚತುರ್ಮುಖನಿಂದ ಇತರರಾದ ಸ್ವೋತ್ತಮರೂ ಕ್ರಮದಿಂದ ಗುರುಗಳು –

**ಅನ್ಯೇಽಪಿ ಸ್ವಾತ್ಮನೋ ಮುಖ್ಯಾಃ ಕ್ರಮಾದ್ ಗುರವ ಈರಿತಾಃ ।**
**ಕ್ರಮಾಲ್ಲಕ್ಷಣಹೀನಾಶ್ಚ ಲಕ್ಷಣಾಲಕ್ಷಣೈಃ ಸಮಾಃ ॥ ೧೨೪ ॥**

**ಮಾನುಷಾ ಮಧ್ಯಮಾಸ್ಸಮ್ಯಕ್ ದುರ್ಲಕ್ಷಣಯುತಃ ಕಲಿಃ ।**

**ಅರ್ಥ** :- **ಅನ್ಯೇಽಪಿ** ಚತುರ್ಮುಖನಿಗಿಂತ ಇತರರೂ ಕೂಡ, **ಸ್ವಾತ್ಮನೋ ಮುಖ್ಯಾಃ** ತನಗಿಂತ ಉತ್ತಮರಾದವರು, **ಕ್ರಮಾದ್ ಗುರವ ಈರಿತಾಃ** ಕ್ರಮವಾಗಿ ಗುರುಗಳೆಂದು ಹೇಳಲ್ಪಟ್ಟಿರುವರು. **ಕ್ರಮಾತ್ ಲಕ್ಷಣ ಹೀನಾಶ್ಚ** (ಅವರು) ಕ್ರಮವಾಗಿ ಲಕ್ಷಣಹೀನರೂ ಆಗಿರುವರು. **ಮಧ್ಯಮಾ ಮಾನುಷಾಃ** ಮಧ್ಯಮ ಮನುಷ್ಯರು, **ಲಕ್ಷಣಾಲಕ್ಷಣೈಃ ಸಮಾಃ** ಸಮಾನವಾದ, ಲಕ್ಷಣ ಮತ್ತು ದುರ್ಲಕ್ಷಣಗಳನ್ನು ಹೊಂದಿರುವರು, **ಕಲಿಃ ಸಮ್ಯಕ್ ದುರ್ಲಕ್ಷಣ ಯುತಃ** ಕಲಿಯು ಪೂರ್ಣವಾಗಿ ದುರ್ಲಕ್ಷಣಗಳುಳ್ಳವನು.

**ತಾತ್ಪರ್ಯ** :- ಚತುರ್ಮುಖಭಿನ್ನರಾದ ಸ್ವೋತ್ತಮರೆಲ್ಲರೂ ಗುರುಗಳೇ. ಆದರೆ ಅವರು ಸಮಾನರಲ್ಲ. ಅವರು ಅಲ್ಪ ಅಲಕ್ಷಣಗಳನ್ನೂ ಬಹು ಸಲ್ಲಕ್ಷಣಗಳನ್ನೂ ಪಡೆದಿದ್ದು, ಹೆಚ್ಚು ಸಲ್ಲಕ್ಷಣಗಳನ್ನು ಪಡೆದವರು ಹೆಚ್ಚು ಶ್ರೇಷ್ಠ ಗುರುಗಳಾಗಿರುವರು. ಹೀಗೆ ಅವರ ಲಕ್ಷಣಕ್ರಮವನ್ನನುಸರಿಸಿ ಅವರ ಗುರುತ್ವದ ಕ್ರಮವಿರುವುದು. ಮಧ್ಯಮ ಮನುಷ್ಯರಲ್ಲಿ ಲಕ್ಷಣಗಳು ಮತ್ತು ಅಲಕ್ಷಣಗಳು ಸಮಾನವಾಗಿದ್ದು ಅವರಿಗೆ ಗುರುಗಳಾಗುವ ಯೋಗ್ಯತೆಯೇ ಇಲ್ಲ. ಕಲಿಯಲ್ಲಿ ಎಲ್ಲ ದುರ್ಲಕ್ಷಣಗಳೂ ಪೂರ್ಣವಾಗಿರುವವು.

**ವಿಶೇಷ ವಿಷಯ** :- ಚತುರ್ಮುಖಾದಿಗಳ ಸಲ್ಲಕ್ಷಣಗಳ ಕ್ರಮವನ್ನು ಹೇಳುವ ಪ್ರಮಾಣವಚನವಿದು — ದ್ವಾತ್ರಿಂಶಲ್ಲಕ್ಷಣೈಃ ಸಮ್ಯಕ್ ಯುಕ್ತಾ ವಾಯುತ್ವಯೋಗ್ಯಕಾಃ । ಅಷ್ಟಾವಿಂಶಲ್ಲಕ್ಷಣೈಶ್ಚ ಗಿರೀಶಪದಯೋಗಿನಃ ॥ ಚತುರ್ವಿಂಶತಿಮಾರಭ್ಯಷೋಡಶಾದಾ ಸುರಾ ಮತಾಃ । ಅಷ್ಟಕಾದ್ ಋಷಯಃ ಪ್ರೋಕ್ತಾಸ್ತದೂನಾಶ್ಚಕ್ರವರ್ತಿನಃ ॥ ಮೂವತ್ತೆರಡು ಸಲ್ಲಕ್ಷಣಭರಿತರು ವಾಯು ಪದವಿಗೆ ಅರ್ಹರು. ಇಪ್ಪತ್ತೆಂಟು ಸಲ್ಲಕ್ಷಣಯುಕ್ತರು ರುದ್ರಪದಯೋಗ್ಯರು. ಇಪ್ಪತ್ನಾಲ್ಕರಿಂದ ಆರಂಭಿಸಿ ಹದಿನಾರರವರೆಗೆ ಸಲ್ಲಕ್ಷಣಯುಕ್ತರೆಲ್ಲರೂ ದೇವತ್ವ

ಯೋಗ್ಯರು. ಹದಿನಾರರಿಂದ ಎಂಟರವರೆಗೆ ಸಲ್ಲಕ್ಷಣಯುಕ್ತರು ಋಷಿಗಳು. ಎಂಟಕ್ಕೂ ಕಡಿಮೆ ಸಲ್ಲಕ್ಷಣಯುಕ್ತರು ಚಕ್ರವರ್ತಿಗಳು - ಎಂದು ಈ ಪ್ರಮಾಣವಚನದ ಅರ್ಥವಾಗಿದೆ. ॥ ೧೨೪ ॥

ಸುಪ್ರಸನ್ನರಾದ ಗುರುಗಳು ಅನುಗ್ರಹಿಸಿದ್ದೆಲ್ಲವೂ ಶಿಷ್ಯನಿಗೆ ಸಿದ್ಧಿಸುವುದು -

**ಸಮ್ಯಗ್ ಲಕ್ಷಣಸಂಪನ್ನೋ ಯದ್ದದ್ಯಾತ್ ಸುಪ್ರಸನ್ನಧೀಃ ॥ ೧೨೫ ॥**

**ಶಿಷ್ಯಾಯ ಸತ್ಯಂ ಭವತಿ ತತ್ಸರ್ವಂ ನಾತ್ರ ಸಂಶಯಃ ।**
**ಅಗಮ್ಯತ್ವಾದ್ ಹರಿಸ್ತಸ್ಮಿನ್ ಆವಿಷ್ಟೋ ಮುಕ್ತಿದೋ ಭವೇತ್ ॥ ೧೨೬ ॥**

**ಅರ್ಥ :- ಸಮ್ಯಗ್ ಲಕ್ಷಣಸಂಪನ್ನಃ** ಸಲ್ಲಕ್ಷಣಸಂಪನ್ನನಾದ ಗುರುವು, **ಸುಪ್ರಸನ್ನದೀಃ** ಸುಪ್ರಸನ್ನಮನಸ್ಕನಾಗಿ, **ಶಿಷ್ಯಾಯ ಯದ್ ದದ್ಯಾತ್** ಶಿಷ್ಯನಿಗೆ ಏನನ್ನು ಅನುಗ್ರಹಿಸುವನೋ, **ತತ್ ಸರ್ವಂ ಸತ್ಯಂ ಭವತಿ** ಅದೆಲ್ಲವೂ ಸತ್ಯವಾಗುವುದು. **ನಾತ್ರ ಸಂಶಯಃ** ಇದರಲ್ಲಿ ಸಂಶಯವಿಲ್ಲ, **ಅಗಮ್ಯತ್ವಾದ್** ಪ್ರತ್ಯಕ್ಷವಿಷಯನಾಗದಿರುವುದರಿಂದ, **ಹರಿಃ** ಶ್ರೀ ಹರಿಯು, **ತಸ್ಮಿನ್ ಆವಿಷ್ಟಃ** ಆ ಗುರುವಿನಲ್ಲಿ ಆವೇಶವನ್ನು ಪಡೆದು, **ಮುಕ್ತಿದೋ ಭವೇತ್** ಮುಕ್ತಿಯನ್ನು ಕೊಡುವನು.

**ತಾತ್ಪರ್ಯ :-** ಸುಲಕ್ಷಣಭರಿತನಾದ ಗುರುವು ಸುಪ್ರಸನ್ನನಾಗಿ ಶಿಷ್ಯನಿಗೆ ಹೇಳಿದ್ದೆಲ್ಲವೂ ನಿಶ್ಚಿತವಾಗಿ ಸತ್ಯವಾಗುವುದು. ಸ್ವಯಂ ಪ್ರತ್ಯಕ್ಷನಾಗದಿರುವ ಕಾರಣ ಶ್ರೀಹರಿಯು ಗುರುಗಳಲ್ಲಿ ಸನ್ನಿಹಿತನಾಗಿದ್ದು ಶಿಷ್ಯನಿಗೆ ಮೋಕ್ಷವನ್ನು ದಯಪಾಲಿಸುವನು.

**ವಿಶೇಷ ವಿಷಯ :-** ಸುಪ್ರಸನ್ನನಾದ ಗುರು ಶಿಷ್ಯನಿಗೆ ಅನುಗ್ರಹಿಸಿದ್ದೆಲ್ಲವೂ ಸತ್ಯವಾಗುವುದಾದರೆ, 'ಮಸ್ತಕೇ ಹಸ್ತಪಂಕಜಂ । ನಿಧಾಯೋತ್ತೀರ್ಯ ಸಂಸಾರಾತ್ ಸುಖೀ ಭವ ಹರೇಃ ಪ್ರಿಯಃ' - ಗುರುಗಳು ತಮ್ಮ ಕರಕಮಲವನ್ನು ಶಿಷ್ಯನ ಮಸ್ತಕದಲ್ಲಿಟ್ಟು 'ಹರಿಯ ಪ್ರೀತಿಪಾತ್ರನಾಗಿ ಸಂಸಾರದಿಂದ ಮುಕ್ತನಾಗಿ ಸುಖಿಯಾಗು' ಎಂದು ಆಶೀರ್ವಾದವನ್ನು ಪಡೆದ ಶಿಷ್ಯನು ಮುಕ್ತನಾಗಬೇಕು. ಹಾಗೆ ಮುಕ್ತನಾಗುವುದಾದರೆ ಮುಕ್ತಿಪ್ರದತ್ವವೆಂಬ ಭಗವಂತನ ಲಕ್ಷಣ ಗುರುಗಳಲ್ಲೂ ಬರುವುದರಿಂದ ಅತಿವ್ಯಾಪ್ತಿದೋಷ ಬರುವುದು -

ಎಂಬ ಆಶಂಕೆಗೆ ಆಚಾರ್ಯರು ಇಲ್ಲಿ ಸಮಾಧಾನ ಹೇಳಿದ್ದಾರೆ. ಗುರುಗಳ ಅನುಗ್ರಹಪಾತ್ರರಾದ ಶಿಷ್ಯರಿಗೆ ಮೋಕ್ಷವನ್ನು ಕೊಡುವವನು ಶ್ರೀಹರಿಯೇ. ಆದರೆ ಅಂತಹ ಶಿಷ್ಯರಿಗೆ ಪ್ರತ್ಯಕ್ಷಗೋಚರನಾಗದ ಕಾರಣ ಶ್ರೀಹರಿಯು ಗುರುಗಳಲ್ಲಿ ಸನ್ನಿಹಿತನಾಗಿದ್ದು ಅವರಿಗೆ ಮೋಕ್ಷಪ್ರದನಾಗುವನು. ಆದ್ದರಿಂದ ಗುರುಗಳು ಅನುಗ್ರಹಿಸಿದ್ದು ಸತ್ಯವಾಗುವುದೆಂದು ಹೇಳಿದ್ದು ಸಮಂಜಸವಾಗಿದೆ ಎಂದು ಭಾವ. ॥ ೧೨೬ ॥

ಗುರುಪ್ರಸಾದವನ್ನು ಸಂಪಾದಿಸುವುದು ಅತ್ಯವಶ್ಯವೆಂದು ಇಲ್ಲಿ ಹೇಳಿದೆ -

**ನಾತಿಪ್ರಸನ್ನಹೃದಯೋ ಯದ್ದದ್ಯಾತ್ ಗುರುರಪ್ಯಸೌ ।**
**ನ ತತ್ಸತ್ಯಂ ಭವೇತ್ತಸ್ಮಾದರ್ಚನೀಯೋ ಗುರುಸ್ಸದಾ ॥ ೧೨೭ ॥**

**ಅರ್ಥ :- ಅಸೌ ಗುರುರಪಿ** ಅವನು ಗುರುವಾಗಿದ್ದರೂ, **ನಾತಿಪ್ರಸನ್ನ ಹೃದಯಃ** ಅತ್ಯಂತ ಪ್ರಸನ್ನ ಮನಸ್ಕನಾಗದೆ, **ದದ್ಯಾತ್** ಯಾವುದನ್ನು ಅನುಗ್ರಹಿಸುವನೋ, **ತತ್ ಸತ್ಯಂ ನ ಭವೇತ್** ಅದು ಸತ್ಯವಾಗಲಾರದು. **ತಸ್ಮಾತ್** ಆದ್ದರಿಂದ, **ಗುರುಃ ಸದಾ ಅರ್ಚನೀಯಃ** ಗುರುವು ಸರ್ವದಾ ಪೂಜಾರ್ಹನಾಗಿರುವನು.

**ತಾತ್ಪರ್ಯ :-** ಸ್ಪಷ್ಟ.

**ವಿಶೇಷ ವಿಷಯ :-** ಸುಪ್ರಸನ್ನನಾಗದ ಗುರುವು ಅನುಗ್ರಹಿಸಿದ್ದು ಸತ್ಯವಾಗಲಾರದೆನ್ನುವುದಕ್ಕೆ ಉಪನಿಷತ್ತಿನಲ್ಲಿ ಬರುವ ಇಂದ್ರ - ವಿರೋಚನರ ವೃತ್ತಾಂತವು ನಿದರ್ಶನವಾಗಿದೆ. ಇಂದ್ರವಿರೋಚನರಿಬ್ಬರೂ ಏಕಕಾಲಕ್ಕೆ ಚತುರ್ಮುಖನ ಬಳಿ ಉಪದೇಶವನ್ನು ಪಡೆಯಲು ಹೋದಾಗ, ಚತುರ್ಮುಖನು 'ಯ ಏಷೋಽತರಕ್ಷಿಣಿ ಪುರುಷೋ ದೃಶ್ಯತೇ ಏಷ ಆತ್ಮಾ' ಎಂಬ ಒಂದೇ ವಾಕ್ಯದಿಂದ ಇಬ್ಬರಿಗೂ ಉಪದೇಶಿಸುವನು. ವಿರೋಚನನ ವಿಷಯದಲ್ಲಿ ಸುಪ್ರಸನ್ನನಾಗಿರದ ಚತುರ್ಮುಖನು ಉಪದೇಶಿಸಿದ ಈ ವಾಕ್ಯದಿಂದ ವಿರೋಚನನಿಗೆ — ಕಣ್ಣಿನ ಪಾಪೆಯಲ್ಲಿ ಕಾಣುವ ತನ್ನ ಪ್ರತಿಬಿಂಬವೇ ಬ್ರಹ್ಮನೆಂದು ಉಪದೇಶವಾಕ್ಯದ ಅರ್ಥವೆಂದೂ, ಬಿಂಬ-ಪ್ರತಿ ಬಿಂಬಗಳು ಅಭಿನ್ನವಾದ್ದರಿಂದ ಆ ಪ್ರತಿಬಿಂಬಕ್ಕೆ ಬಿಂಬನಾದ ತಾನೇ ಬ್ರಹ್ಮನೆಂದೂ ದೃಢವಾದ ಮಿಥ್ಯಾಜ್ಞಾನವುಂಟಾಯಿತು. ಇಂದ್ರನ ವಿಷಯದಲ್ಲಿ

ಬ್ರಹ್ಮನು ಅತ್ಯಂತ ಪ್ರಸನ್ನನಾಗಿದ್ದ ಕಾರಣ ಇಂದ್ರನಿಗೆ 'ಸರ್ಪಿರ್ವೋದಕಂ ವಾ ಸಿಂಚತಿ ವರ್ತ್ಮನೀ ಏವ ಗಚ್ಛತಿ' ಎಂಬ ಶ್ರುತಿಯಲ್ಲಿ 'ಅಸಂಗನಾದ ಭಗವಂತನ ಸನ್ನಿಧಾನದಿಂದ ಚಕ್ಷುಸ್ಸೂ ಅಸಂಗವಾಗುವುದು. ಆದ್ದರಿಂದಲೇ ಚಕ್ಷುವಿನಲ್ಲಿ ಹಾಕಿದ ಘೃತವಾಗಲಿ, ನೀರಾಗಲಿ ಚಕ್ಷುಸ್ಸಿಗೆ ಅಂಟದೆ ಹರಿದುಹೋಗುವುದು ಎಂದು ಹೇಳಿದಂತೆ ಚಕ್ಷುಃಸ್ಥಿತನಾದ ಆತ್ಮನು ಭಗವಂತನೇ ಎಂಬ ದೃಢವಾದ ತತ್ವಜ್ಞಾನವುಂಟಾಯಿತು. ॥ ೧೨೭ ॥

ಇಂದ್ರನಿಗೆ ಯೋಗ್ಯತೆಯಲ್ಲಿ ಅವನಿಗಿಂತಲೂ ಅಧಮನಾದ ಬೃಹಸ್ಪತಿಯು ಗುರುವಾಗಿದ್ದಂತೆ ಅಧಮರು ಉತ್ತಮರಿಗೆ ಗುರುಗಳಾದ ಸಂದರ್ಭದಲ್ಲಿ ಅವರ ಪೂಜೆಯನ್ನು ಹೇಗೆ ಮಾಡಬೇಕೆಂಬ ಶಂಕೆಗೆ ಇಲ್ಲಿ ಸಮಾಧಾನ ಹೇಳಲಾಗಿದೆ-

**ಸ್ವಾವರಾಣಾಂ ಗುರುತ್ವಂ ತು ಭವೇತ್ ಕಾರಣತಃ ಕ್ವಚಿತ್ ।**
**ಮರ್ಯಾದಾರ್ಥಂ ತೇಽಪಿ ಪೂಜ್ಯಾಃ ನ ತು ಯದ್ವತ್ಪರೋ ಗುರುಃ ॥೧೨೮॥**

**ಇತ್ಯೇತತ್ ಪಂಚರಾತ್ರೋಕ್ತಂ ಪುರಾಣೇಷ್ವನುಮೋದಿತಂ ।**

**ಅರ್ಥ :-** **ಸ್ವಾವರಾಣಾಂ** ತನಗಿಂತಲೂ ನೀಚರಾದವರಿಗೆ, **ಗುರುತ್ವಂ ತು** ಗುರುತ್ವವಾದರೋ, **ಕ್ವಚಿತ್** ಕೆಲವೊಮ್ಮೆ, **ಕಾರಣತಃ ಭವೇತ್** ಕಾರಣ ವಿಶೇಷ ದಿಂದ ಉಂಟಾಗುವುದು, **ತೇಽಪಿ** ಆ ಅವರರೂ ಕೂಡ, **ಮರ್ಯಾದಾರ್ಥಂ** ಲೋಕ ಮರ್ಯಾದೆಗೋಸ್ಕರ, **ಪೂಜ್ಯಾಃ** ಪೂಜ್ಯರೇ ಆಗಿರುವರು. **ನ ತು ಯದ್ವತ್ ಪರೋ ಗುರುಃ** ಆದರೆ ಉತ್ತಮ ಗುರು ಹೇಗೆ ಪೂಜ್ಯನೋ ಹಾಗಲ್ಲ, **ಇತ್ಯೇತತ್** ಇವೆಲ್ಲ ವಿಷಯಗಳು, **ಪಂಚರಾತ್ರೋಕ್ತಂ** ಪಂಚರಾತ್ರದಲ್ಲಿ ಹೇಳಿದೆ. **ಪುರಾಣೈಶ್ಚ ಅನುಮೋದಿತಂ** ಪುರಾಣಗಳಿಂದಲೂ ಅನುಮೋದಿಸಲ್ಪಟ್ಟಿದೆ.

**ತಾತ್ಪರ್ಯ :-** ಸ್ಪಷ್ಟ ॥ ೧೨೮ ॥

ಭಗವದಪರೋಕ್ಷಜ್ಞಾನದಿಂದ ಮೋಕ್ಷವಾಗುವುದಾದರೆ ರಾಮಕೃಷ್ಣಾದ್ಯವತಾರ ಗಳನ್ನು ಪ್ರತ್ಯಕ್ಷವಾಗಿ ನೋಡಿದ ಅಸುರರಿಗೆ ಮೋಕ್ಷವೇಕಿಲ್ಲ? ಭಜಿಸಬೇಕಾದ ಪಾದಗಳು ಅನಂತವಾಗಿರುವಾಗ ಮೋಕ್ಷವಾಗುವುದು ಹೇಗೆ ಸಾಧ್ಯ? ಎಂಬ ಶಂಕೆಗಳಿಗೆ ಇಲ್ಲಿ ಸಮಾಧಾನ ಹೇಳಿದೆ –

ಯದಾ ಮುಕ್ತಿಪ್ರದಾನಾಯ ಸ್ವಯೋಗ್ಯಂ ಪಶ್ಯತಿ ಧ್ರುವಮ್ ॥ ೧೨೯ ॥

ರೂಪಂ ಹರೇಸ್ತದಾ ತಸ್ಯ ಸರ್ವಪಾಪಾನಿ ಭಸ್ಮಸಾತ್ ॥ ೧೩೦ ॥

ಯಾಂತಿ ಪೂರ್ವಾಣ್ಯುತ್ತರಾಣಿ ನ ಶ್ಲೇಷಂ ಯಾಂತಿ ಕಾನಿಚಿತ್ ।

**ಅರ್ಥ :- ಯದಾ ಮುಕ್ತಿಪ್ರದಾನಾಯ ಸ್ವಯೋಗ್ಯಂ** ಯಾವಾಗ ತನಗೆ ಮುಕ್ತಿಯನ್ನು ಕೊಡಲು ಯೋಗ್ಯವಾದ, **ಹರೇಃ ರೂಪಂ ಪಶ್ಯತಿ** ಶ್ರೀಹರಿಯ ಮೂರ್ತಿಯನ್ನು ನೋಡುವನೋ, **ತದಾ ತಸ್ಯ ಪೂರ್ವಾಣಿ ಸರ್ವ ಪಾಪಾನಿ** ಆಗ ಅವನ ಹಿಂದಿನ ಎಲ್ಲ ಪಾಪಗಳೂ, **ಧ್ರುವಂ ಭಸ್ಮಸಾತ್ ಯಾಂತಿ** ನಿಶ್ಚಿತವಾಗಿಯೂ ಭಸ್ಮೀಭೂತವಾಗುವವು, **ಉತ್ತರಾಣಿ ಕಾನಿಚಿತ್** ತನ್ನ ಬಿಂಬ ಮೂರ್ತಿಯನ್ನು ನೋಡಿದ ನಂತರ ಉಂಟಾಗುವ ಕೆಲವು ಪಾಪಗಳು, **ಶ್ಲೇಷಂ ನ ಯಾಂತಿ** ಸಂಬಂಧವನ್ನು ಪಡೆಯುವುದಿಲ್ಲ.

**ತಾತ್ಪರ್ಯ :-** ಅನಂತ ಭಗವದ್ರೂಪಗಳಲ್ಲಿ ಯಾವುದೋ ಒಂದು ಭಗವದ್ರೂಪದ ದರ್ಶನದಿಂದ ಮುಕ್ತಿಯಾಗಲಾರದು. ಆ ಜೀವನಿಗೆ ಮುಕ್ತಿಪ್ರದನಾದ ಬಿಂಬರೂಪೀ ಭಗವಂತನ ದರ್ಶನದಿಂದಲೇ ಆ ಜೀವನಿಗೆ ಮುಕ್ತಿಯಾಗುವುದು. ಅಪ್ರಾರಬ್ಧವಾಗಿರುವ ಅವನ ಪೂರ್ವಕರ್ಮಗಳೆಲ್ಲ ಬಿಂಬರೂಪಿ ಭಗವಂತನ ದರ್ಶನದಿಂದ ಭಸ್ಮವಾಗುವವು. ಜ್ಞಾನೋತ್ತರದಲ್ಲಿ ಮಾಡಿದ ಪಾಪಗಳಲ್ಲಿ ಉತ್ತಮ ದ್ರೋಹಾದಿ ಪಾಪಗಳನ್ನು ಬಿಟ್ಟು ಉಳಿದ ಪಾಪಗಳ ಸಂಬಂಧ ಆ ಜ್ಞಾನಿಗಿರುವುದಿಲ್ಲ.

**ವಿಶೇಷ ವಿಷಯ :-** ಹಿಂದೆ ಮಾಡಿದ ಶಂಕೆಗಳಲ್ಲಿ ಮೊದಲನೆಯದಕ್ಕೆ ಅಸುರರು ರಾಮಕೃಷ್ಣಾದ್ಯವತಾರಗಳನ್ನು ನೋಡಿದರೂ ತಮಗೆ ಮುಕ್ತಿಪ್ರದನಾದ ಬಿಂಬರೂಪಿ ಭಗವಂತನನ್ನು ನೋಡಲಿಲ್ಲವಾದ್ದರಿಂದ ಮೋಕ್ಷವನ್ನು ಪಡೆಯಲಿಲ್ಲವೆಂದು ಸಮಾಧಾನ. ಎರಡನೆ ಶಂಕೆಗೆ – ಪಾಪಗಳು ಅನಂತವಾದರೂ, ಬಿಂಬಭಗವದ್ದರ್ಶನದಿಂದ ಹಿಂದೆ ಮಾಡಿದ್ದ ಅಪ್ರಾರಬ್ಧ ಪಾಪಗಳೆಲ್ಲವೂ ಭಸ್ಮವಾಗುವುದರಿಂದ ಮತ್ತು ಜ್ಞಾನೋತ್ತರಕಾಲದಲ್ಲಿ ಮಾಡಿದ ಪಾಪಗಳ ಸಂಬಂಧವೇ ಆ ಜ್ಞಾನಿಗಿಲ್ಲವಾದ್ದರಿಂದ ಮುಕ್ತಿಯಾಗಲು ಅಡ್ಡಿಯೇನಿಲ್ಲ. ಯದ್ಯಪಿ ಜ್ಞಾನೋತ್ತರಕಾಲದಲ್ಲಿ ಮಾಡಿದ ಉತ್ತಮ ದ್ರೋಹಾದಿ ಪಾಪಗಳ ಸಂಬಂಧ ಆ ಜ್ಞಾನಿಗಾಗುವುದು. ಆದ್ದರಿಂದಲೇ ಆಚಾರ್ಯರು

ನಿರ್ಣಯದಲ್ಲಿ ಉದಾಹರಿಸಿರುವ ಪ್ರಮಾಣದಲ್ಲಿ 'ಕಾನಿಚಿತ್' ಎಂಬ ಪದವಿದೆ. ಆದರೂ ಅವುಗಳ ಸಂಬಂಧದಿಂದ ಅವನಿಗೆ ನರಕಾದ್ಯನರ್ಥವಾಗುವುದಿಲ್ಲ, ಮೋಕ್ಷದಲ್ಲಿ ಅಭಿವ್ಯಕ್ತವಾಗುವ ಆನಂದದಲ್ಲಿ ಹ್ರಾಸವಾಗುವುದೇ ಹೊರತು ಮೋಕ್ಷವೇ ಇಲ್ಲದಂತಾಗುವುದಿಲ್ಲ.

ಜ್ಞಾನಿಗಳಿಗಿರುವ ಪುಣ್ಯವೂ ಕೂಡ ಕಾಮ್ಯ ಮತ್ತು ಅಕಾಮ್ಯ ಎಂದು ಎರಡು ವಿಧವಾಗಿದೆ. ಕಾಮ್ಯಕರ್ಮಗಳ ಅನುಷ್ಠಾನದಿಂದ ಜನಿಸಿದ, ಅಪ್ರಾರಬ್ಧ ವಾದ ಪುಣ್ಯವನ್ನು ಅಪರೋಕ್ಷಜ್ಞಾನಿಯ ಪುತ್ರರೇ ಮೊದಲಾದವರು ಪಡೆಯು ವರು. ಪಾಪದಂತೆ ಈ ಪುಣ್ಯವೂ ಭಸ್ಮವಾಗುವುದಿಲ್ಲ. ಪ್ರಾರಬ್ಧವಾಗಿರುವ ಪುಣ್ಯವು ಭೋಗದಿಂದಲೇ ನಷ್ಟವಾಗುವುದು. ಸ್ವಲ್ಪ ಭುಜಿಸಲಾದ ಕೆಲವು ಪ್ರಾರಬ್ಧ ಪುಣ್ಯಗಳಿಗೆ ಅಪರೋಕ್ಷಜ್ಞಾನದಿಂದ ಹ್ರಾಸವಾಗುವುದು. ನಿಷ್ಕಾಮ ಕರ್ಮದಿಂದ ಜನಿಸಿದ ಪುಣ್ಯವು ಅಪರೋಕ್ಷಜ್ಞಾನಕ್ಕೆ ಸಾಧನ ವಾಗುವುದು. ಜ್ಞಾನೋತ್ತರದಲ್ಲಿ ಮಾಡಿದ ಅಕಾಮ್ಯ ಪುಣ್ಯಗಳು ಮೋಕ್ಷದಲ್ಲಿ ಆನಂದವೃದ್ಧಿಗೆ ಕಾರಣವಾಗುವವು.

ಭಗವಂತನ ವಿಷಯದಲ್ಲಿ ಮಿಥ್ಯಾಜ್ಞಾನವನ್ನು ಪಡೆದ ದೈತ್ಯರಿಗೆ ಅವರ ಸಾಧನ ಪೂರ್ತಿಯಾದಾಗ ಪೂರ್ವಪುಣ್ಯಗಳೆಲ್ಲ ನಾಶವಾಗುತ್ತವೆ. ಉತ್ತರ ಪುಣ್ಯದ ಸಂಬಂಧ ಉಂಟಾಗದೆ ಅವರು ಅಂಧಂತಮಸ್ಸನ್ನು ಪಡೆಯುವರು.

॥ ೧೩೧ ॥

**ಮೋಕ್ಷಶ್ಚ ನಿಯತಸ್ತಸ್ಮಾತ್ ಸ್ವಯೋಗ್ಯಹರಿದರ್ಶನೇ ।**
**ಭವಿಷ್ಯತ್ಪರ್ವವಚನಮಿತ್ಯೇತತ್ಸೂತ್ರಗಂ ತಥಾ ॥ ೧೩೧ ॥**

**ಅರ್ಥ** :- **ತಸ್ಮಾತ್** ಆದ್ದರಿಂದ, **ಸ್ವಯೋಗ್ಯಹರಿದರ್ಶನೇ** ತನಗೆ ಮೋಕ್ಷವನ್ನು ಕೊಡಬಲ್ಲ ಬಿಂಬರೂಪಿಯಾದ ಶ್ರೀಹರಿಯ ದರ್ಶನವಾಗಲು, **ಮೋಕ್ಷಶ್ಚ ನಿಯತಃ** ಮೋಕ್ಷವು ಆಗಿಯೇ ತೀರುವುದು. **ಇತ್ಯೇತತ್ ಭವಿಷ್ಯತ್ಪರ್ವವಚನಂ** ಹೀಗೆ ಭವಿಷ್ಯತ್ಪರ್ವದ ವಚನವಿದೆ, **ತಥಾ ಸೂತ್ರಗಂ 'ತದಧಿಗಮೇ' ಉತ್ತರಪೂರ್ವಾಘಯೋರಶ್ಲೇಷವಿನಾಶೌ ತದ್ವ್ಯಪದೇಶಾತ್'** (ಬ್ರ.ಸೂ. ೪,೧,೧೧೩.) ಎಂಬ ಬ್ರಹ್ಮ ಸೂತ್ರದಲ್ಲೂ ಈ ವಿಷಯ ಪ್ರತಿಪಾದಿತ ವಾಗಿದೆ. ॥ ೧೩೧ ॥

ಜ್ಞಾನಿಗಳಿಗೆ ಪಾಪಗಳ ಸಂಬಂಧವಿಲ್ಲ ಎಂಬ ವಿಷಯದಲ್ಲಿ ಶ್ರುತಿಯನ್ನೂ ಮೋಕ್ಷವಾಗುವ ಪ್ರಕಾರವನ್ನೂ ಮುಂದಿನ ಶ್ಲೋಕಗಳಲ್ಲಿ ಹೇಳಿದೆ –

**ಶ್ರುತಿಶ್ಚ ತತ್ಪರಾ ತದ್ವತ್ ತದ್ಯಥೇತ್ಯವದತ್ ಸ್ಫುಟಂ ।**
**ಮುಕ್ತಾಸ್ತು ಮಾನುಷಾ ದೇವಾನ್ ದೇವಾ ಇಂದ್ರಂ ಸ ಶಂಕರಂ ॥೧೩೨॥**

**ಸ ಬ್ರಹ್ಮಾಣಂ ಕ್ರಮೇಣೈವ ತೇನ ಯಾಂತ್ಯಖಿಲಾ ಹರಿಂ ।**
**ಉತ್ತರೋತ್ತರವಶ್ಯಾಶ್ಚ ಮುಕ್ತಾ ರುದ್ರಪುರಸ್ಸರಾಃ ॥ ೧೩೩ ॥**

**ಅರ್ಥ :- ತದ್ವತ್** ಆ ಬ್ರಹ್ಮಸೂತ್ರದಂತೆ, **ತತ್ಪರಾ** ಇದೇ ವಿಷಯದಲ್ಲಿ ತಾತ್ಪರ್ಯವಿರುವ, **ತದ್ಯಥಾ ಇತಿ ಶ್ರುತಿಶ್ಚ** 'ತದ್ಯಥಾ' ಎಂಬ ಶ್ರುತಿಯೂ (ಈ ಪ್ರಮೇಯವನ್ನು) **ಸ್ಫುಟಂ ಅವದತ್** ಸ್ಪಷ್ಟವಾಗಿ ಹೇಳಿದೆ.

**ಮುಕ್ತಾಃ ಮಾನುಷಾಸ್ತು** ಮುಕ್ತರಾದ ಮನುಷ್ಯರಾದರೋ, **ದೇವಾನ್ ಯಾಂತಿ** ದೇವತೆಗಳನ್ನು ಹೊಂದುವರು, **ದೇವಾಃ ಇಂದ್ರಂ ಯಾಂತಿ** ದೇವತೆಗಳು ಇಂದ್ರನನ್ನು ಹೊಂದುವರು, **ಸಃ ಶಂಕರಂ ಯಾತಿ** ಆ ಇಂದ್ರನು ರುದ್ರನನ್ನು ಹೊಂದುವನು, **ಸ ಬ್ರಹ್ಮಾಣಂ** ಆ ಶಂಕರನು ಚತುರ್ಮುಖನನ್ನು ಪಡೆಯುವನು, **ತೇನ** ಆ ಚತುರ್ಮುಖನಿಂದ, **ಕ್ರಮೇಣೈವ** ಕ್ರಮವಾಗಿಯೇ, **ಅಖಿಲಾಃ ಹರಿಂ ಯಾಂತಿ** ಎಲ್ಲರೂ ಶ್ರೀಹರಿಯನ್ನು ಹೊಂದುವರು. **ರುದ್ರಪುರಸ್ಸರಾಃ ಮುಕ್ತಾಃ** ಶೇಷನೇ ಮೊದಲಾದ ಮುಕ್ತರು, **ಉತ್ತರೋತ್ತರವಶ್ಯಾಶ್ಚ** ತಮಗೆ ಶ್ರೇಷ್ಠರಾದವರಿಗೂ ಯಾರು ಶ್ರೇಷ್ಠರೋ ಅವರಿಗೂ ಅಧೀನರಾಗಿರುವರು.

**ತಾತ್ಪರ್ಯ :-** 'ತದಧಿಗಮೇ' ಇತ್ಯಾದಿ ಬ್ರಹ್ಮಸೂತ್ರದಲ್ಲಿ ಹೇಳಿದ ವಿಷಯವನ್ನೇ, ಕಮಲ ಪತ್ರದಲ್ಲಿ ಜಲದ ಸಂಬಂಧವಾಗದಿರುವಂತೆ ಜ್ಞಾನಿಗೆ ಪಾಪಕರ್ಮದ ಸಂಬಂಧವಾಗುವುದಿಲ್ಲ, ಹತ್ತಿಯ ರಾಶಿಗೆ ಅಗ್ನಿಯ ಸಂಬಂಧವಾದರೆ ಭಸ್ಮವಾಗುವಂತೆ ಅವನ ಸಮಸ್ತ ಪಾಪಗಳೂ ಜ್ಞಾನದಿಂದ ಭಸ್ಮವಾಗುತ್ತವೆ, ಎಂಬ ಅರ್ಥದ 'ತದ್ಯಥಾ ಪುಷ್ಕರಪಲಾಶೇ ಆಪೋ ನ ಶ್ಲಿಷ್ಯಂತೇ ಏವ ಮೇವಂವಿದಿ ಪಾಪಂ ಕರ್ಮ ನ ಶ್ಲಿಷ್ಯತೇ । ತದ್ಯಥೇಷಿಕಾತೂಲಮಗ್ನೌ ಪ್ರೋತಂ ಪ್ರದೂಯೇತೈವಂ ಹೈವಾಸ್ಯ ಸರ್ವೇ ಪಾಪ್ಮಾನಃ ಪ್ರದೂಯಂತೇ' ಎಂಬ ಶ್ರುತಿಯೂ ತಾತ್ಪರ್ಯಪೂರ್ವಕವಾಗಿ ಪ್ರತಿಪಾದಿಸುತ್ತಿದೆ.

ಜೀವರಿಗೆ ಮುಕ್ತಿಯಾಗುವ ಕ್ರಮ ಹೀಗಿದೆ - ಮುಕ್ತ ಮನುಷ್ಯರು ದೇವತೆಗಳನ್ನೂ, ದೇವತೆಗಳು ಇಂದ್ರನನ್ನೂ, ಇಂದ್ರನು ಶಂಕರನನ್ನೂ, ಶಂಕರನು ಚತುರ್ಮುಖನನ್ನೂ ಹೊಂದುವರು. ಅನಂತರ ಆ ಮುಕ್ತರೆಲ್ಲರೂ ಚತುರ್ಮುಖ ನಿಂದ ಕ್ರಮವಾಗಿ ಶ್ರೀಹರಿಯನ್ನು ಪಡೆಯುವರು. ಶೇಷನೇ ಮೊದಲಾದ ಮುಕ್ತರೆಲ್ಲರೂ ತಮಗೆ ಶ್ರೇಷ್ಠರಾದವರಿಗೆ ಮಾತ್ರವಲ್ಲದೆ, ಅವರಿಗೂ ಶ್ರೇಷ್ಠರಾದವರಿಗೂ ಅಧೀನರಾಗಿರುವರು.

**ವಿಶೇಷ ವಿಷಯ :-** 'ರುದ್ರಪುರಃಸರಾಃ' ಎಂಬಲ್ಲಿ ರುದ್ರಪದದಿಂದ ರುದ್ರನನ್ನು ಗ್ರಹಿಸಿದರೆ ಶೇಷವನ್ನು ಸಂಗ್ರಹಿಸಿದಂತಾಗುವುದಿಲ್ಲ. ಆದ್ದರಿಂದ ಇಲ್ಲಿ 'ರುದ್ರ' ಎಂಬ ಪದಕ್ಕೆ ಶೇಷನೆಂದು ಅರ್ಥಮಾಡಿದೆ. ರುದ್ರನೇ ಶೇಷನಾಗುವ ಕಾರಣ ರುದ್ರ ಪದಕ್ಕೆ ಈ ಅರ್ಥವನ್ನು ಹೇಳಲು ಸಾಧ್ಯ. ॥ ೧೩೨ - ೧೩೩ ॥

**ನಿರ್ದೋಷಾ ನಿತ್ಯಸುಖಿನಃ ಪುನರಾವೃತ್ತಿವರ್ಜಿತಾಃ ।**
**ಸ್ವೇಚ್ಛಯೈವ ರಮಂತೇಽತ್ರ ನಾನಿಷ್ಟಂ ತೇಷು ಕಿಂಚನ ॥ ೧೩೪ ॥**

**ಅರ್ಥ :- ಅತ್ರ** ಈ ಮುಕ್ತಿಯಲ್ಲಿ ಮುಕ್ತರು, **ನಿರ್ದೋಷಾಃ** ದೋಷ ರಹಿತರೂ, **ನಿತ್ಯಸುಖಿನಃ** ನಿತ್ಯಸುಖಶಾಲಿಗಳೂ, **ಪುನರಾವೃತ್ತಿವರ್ಜಿತಾಃ** ಪುನಃ ಹಿಂದಿರುಗುವಿಕೆ ಇಲ್ಲದವರೂ ಆಗಿ, **ಸ್ವೇಚ್ಛಯೈವ** ತಮ್ಮ ಇಚ್ಛೆಯಂತೇ, **ರಮಂತೇ** ಕ್ರೀಡಿಸುವರು, **ತೇಷು ಕಿಂಚನ ಅನಿಷ್ಟಂ ನ** ಅವರಿಗೆ ಯಾವ ದುಃಖವೂ ಇರುವುದಿಲ್ಲ. ॥ ೧೩೪ ॥

ದೈತ್ಯರು ತಮಸ್ಸನ್ನು ಪಡೆಯುವ ಕ್ರಮವನ್ನು ಇಲ್ಲಿ ಹೇಳಲಾಗಿದೆ-

**ಅಸುರಾಃ ಕಲಿಪರ್ಯಂತಾ ಏವಂ ದುಃಖೋತ್ತರೋತ್ತರಾಃ ।**
**ಕಲಿರ್ದುಃಖಾಧಿಕಸ್ತೇಷು ತೇಽಪ್ಯೇವಂ ಬ್ರಹ್ಮವದ್ಗಣಾಃ ॥ ೧೩೫ ॥**

**ಅರ್ಥ :- ಕಲಿಪರ್ಯಂತಾಃ ಅಸುರಾಃ** ಕಲಿಯವರೆಗಿರುವ ಅಸುರರೂ, **ಏವಂ** ಹೀಗೆಯೇ, **ದುಃಖೋತ್ತರೋತ್ತರಾಃ** ಕ್ರಮವಾಗಿ ಅಧಿಕಾಧಿಕ ದುಃಖ ವುಳ್ಳವರು, **ತೇಷು ಕಲಿಃ ದುಃಖಾಧಿಕಃ** ಆ ಅಸುರರಲ್ಲಿ ಕಲಿ ಅತ್ಯಧಿಕ ದುಃಖ ವುಳ್ಳವನು, **ತೇಽಪಿ**ಕಲಿ ಪದಕ್ಕೆ ಯೋಗ್ಯರಾದವರೂ ಕೂಡ, **ಏವಂ ಬ್ರಹ್ಮವದ್ ಗಣಾಃ** ಬ್ರಹ್ಮಪದವಿಗೆ ಯೋಗ್ಯರಾದ ಋಜುಗಳ ಗಣಗಳಂತೆ ಗಣ ಗಳಾಗಿರುವರು. ॥ ೧೩೫ ॥

ತಥಾನ್ಯೇಽಪ್ಯಸುರಾಸ್ಸರ್ವೇ ಗಣಾ ಯೋಗ್ಯತಯಾ ಸದಾ ।
ಬ್ರಹ್ಮೈವ ಸರ್ವಜೀವೇಭ್ಯಃ ಸದಾ ಸರ್ವಗುಣಾಧಿಕಃ ॥ ೧೩೬ ॥

ಮುಕ್ತೋಽಪಿ ಸರ್ವಮುಕ್ತಾನಾಮಾಧಿಪತ್ಯೇ ಸ್ಥಿತಸ್ಸದಾ ।
ಆಶ್ರಯಸ್ತಸ್ಯ ಭಗವಾನ್ ಸದಾ ನಾರಾಯಣಃ ಪ್ರಭುಃ ॥ ೧೩೭ ॥

**ಅರ್ಥ :- ತಥಾ ಅನ್ಯೇಽಪ್ಯಸುರಾಃ** ಹಾಗೆಯೇ ಕಲಿಭಿನ್ನರಾದ ದ್ವಾಪರ ಮೊದಲಾದ ಅಸುರರೂ, **ಸದಾ ಯೋಗ್ಯತಯಾ ಗಣಾಃ** ಸರ್ವದಾ ಅವರವರ ಯೋಗ್ಯತಾನುಗುಣವಾದ ಗಣಗಳಾಗಿಯೇ ಇರುವರು. **ಬ್ರಹ್ಮೈವ** ಚತುರ್ಮುಖನೊಬ್ಬನೇ, **ಸರ್ವಜೀವೇಭ್ಯಃ ಸದಾ ಸರ್ವಗುಣಾಧಿಕಃ** ಎಲ್ಲ ಜೀವರಿಗಿಂತ ಯಾವಾಗಲೂ ಸರ್ವ ಗುಣಗಳಿಂದ ಅಧಿಕನಾಗಿರುವನು. **ಮುಕ್ತೋಪಿ** ಮುಕ್ತಜೀವನೂ, ಸದಾ **ಸರ್ವ ಮುಕ್ತಾನಾಮಾಧಿಪತ್ಯೇ ಸ್ಥಿತಃ** ಸರ್ವದಾ, ತನಗಿಂತ ಉತ್ತಮರಾದ ಎಲ್ಲ ಮುಕ್ತರ ಅಧೀನನಾಗಿಯೇ ಇರುವನು, **ತಸ್ಯ** ಆ ಚತುರ್ಮುಖನಿಗೆ, **ಭಗವಾನ್ ನಾರಾಯಣಃ ಪ್ರಭುಃ** ಷಡ್ಗುಣೈಶ್ವರ್ಯಭರಿತನೂ, ಸರ್ವಸಮರ್ಥನೂ ಆದ ನಾರಾಯಣನು, **ಸದಾ ಆಶ್ರಯಃ** ಯಾವಾಗಲೂ ಆಶ್ರಯನಾಗಿರುವನು.

**ತಾತ್ಪರ್ಯ :-** ಕಲಿಪದಕ್ಕೆ ಯೋಗ್ಯರಾದ ಅಸುರರ ಗಣಗಳಿರುವಂತೆ, ಆಯಾಯಾ ಅಸುರರ ಯೋಗ್ಯತಾನುಗುಣವಾಗಿ ದ್ವಾಪರ ಮೊದಲಾದ ಅಸುರಪದದ ಅನೇಕ ಗಣಗಳಿರುವುವು. ಆದ್ದರಿಂದ ಒಬ್ಬ ಅಸುರನು ತಮಸ್ಸಿಗೆ ಹೋದರೂ ಆ ಸ್ಥಾನದಲ್ಲಿ ಮತ್ತೊಬ್ಬ ಅಸುರನಿದ್ದೇ ಇರುವನು.

ಜೀವೋತ್ತಮರಾದ ಬ್ರಹ್ಮದೇವರು ಎಲ್ಲ ಜೀವರಿಗಿಂತ ಎಲ್ಲ ಗುಣಗಳಿಂದ ಶ್ರೇಷ್ಠರಾಗಿರುವರು. ಮುಕ್ತಜೀವರು ಮುಕ್ತಿಯಲ್ಲಿ ಸ್ವತಂತ್ರರಲ್ಲ, ತಮಗಿಂತ ಉತ್ತಮರಾದ ಎಲ್ಲ ಮುಕ್ತರ ನಿಯಮನಕ್ಕೆ ಅವರು ಒಳಪಟ್ಟಿರುವರು. ಎಲ್ಲ ಮುಕ್ತ ಜೀವರಿಗೂ ಹೀಗೆ ಬ್ರಹ್ಮನು ಅಧಿಪತಿಯಾಗಿರುವನು. ಅವನೂ ಸ್ವತಂತ್ರನಲ್ಲ, ಸರ್ವಸಮರ್ಥನಾದ ಭಗವಾನ್ ನಾರಾಯಣನು ಅವನಿಗೂ ಅಧಿಪತಿಯಾಗಿರುವನು. ॥ ೧೩೬ - ೧೩೭ ॥

ಇದುವರೆಗೆ ಮಾಡಿದ ಸರ್ವಶಾಸ್ತ್ರಾರ್ಥನಿರ್ಣಯದ ಉಪಸಂಹಾರವನ್ನು ಈ ಶ್ಲೋಕಗಳಲ್ಲಿ ಮಾಡಲಾಗಿದೆ-

**ಇತ್ಯೃಗ್ಯಜುಃಸಾಮಾಥರ್ವಪಂಚರಾತ್ರೇತಿಹಾಸತಃ ।**
**ಪುರಾಣೇಭ್ಯಸ್ತಥ್ಯಾಽನ್ಯೇಭ್ಯಃ ಶಾಸ್ತ್ರೇಭ್ಯೋ ನಿರ್ಣಯಃ ಕೃತಃ ॥ ೧೩೮ ॥**

**ವಿಷ್ಣ್ವಾಜ್ಞಯೈವ ವಿದುಷಾ ತತ್ಪ್ರಸಾದಬಲೋನ್ನತೇಃ ।**
**ಆನಂದತೀರ್ಥಮುನಿನಾ ಪೂರ್ಣಪ್ರಜ್ಞಾಭಿಧಾಯು ಜಾ ॥ ೧೩೯ ॥**

**ಅರ್ಥ :- ಇತಿ ಋಗ್ಯಜುಃಸಾಮಾಥರ್ವಪಂಚರಾತ್ರೇತಿಹಾಸತಃ** ಹೀಗೆ ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದ, ಪಂಚರಾತ್ರ, ಇತಿಹಾಸ ಇವುಗಳಿಂದ, **ಪುರಾಣೇಭ್ಯಃ** ಪುರಾಣಗಳಿಂದ, **ತಥಾ ಅನ್ಯೇಭ್ಯಃ ಶಾಸ್ತ್ರೇಭ್ಯಃ** ಹಾಗೆಯೇ ಇತರ ಶಾಸ್ತ್ರಗಳಿಂದ, **ನಿರ್ಣಯಃ** ನಿರ್ಣಯವು, **ವಿಷ್ಣ್ವಾಜ್ಞಯೈವ** ವಿಷ್ಣುವಿನ ಆಜ್ಞೆಯಿಂದಲೇ, **ತತ್ಪ್ರಸಾದಬಲೋನ್ನತೇಃ** ಭಗವಂತನ ಪ್ರಸಾದವೆಂಬ ಬಲದ ಅಧಿಕ್ಯದಿಂದಾಗಿ, **ಪೂರ್ಣಪ್ರಜ್ಞಾಭಿಧಾಯುಜಾ** ಪೂರ್ಣಪ್ರಜ್ಞರೆಂಬ ಹೆಸರನ್ನು ಹೊಂದಿರುವ, **ವಿದುಷಾ** ಜ್ಞಾನಿಗಳಾದ, **ಆನಂದತೀರ್ಥಮುನಿನಾ** ಆನಂದತೀರ್ಥ ಮುನಿಗಳಿಂದ, **ಕೃತಃ** ಮಾಡಲ್ಪಟ್ಟಿದೆ.

**ತಾತ್ಪರ್ಯ :-** ಇದುವರೆಗೆ ಪ್ರತಿಪಾದಿಸಿದ ಪ್ರಮೇಯಗಳ ನಿರ್ಣಯವು ಋಗ್ವೇದಾದಿ ಚತುರ್ವೇದಗಳು, ಪಂಚರಾತ್ರಾಗಮ, ಮಹಾಭಾರತ, ಪುರಾಣಗಳು ಮತ್ತಿತರ ಶಾಸ್ತ್ರಗಳ ಆಧಾರದಿಂದ ಮಾಡಲಾಗಿದೆ. ಭಗವಂತನ ಅನುಗ್ರಹವೆಂಬ ಬಲದಿಂದಾಗಿ ಉನ್ನತಿಯನ್ನು ಪಡೆದಿರುವ, ಪರಿಪೂರ್ಣ ಪ್ರಜ್ಞೆಯನ್ನು ಪಡೆದಿರುವ ಕಾರಣ ಪೂರ್ಣಪ್ರಜ್ಞರೆಂಬ ಅನ್ವರ್ಥ ಹೆಸರಿನಿಂದ ಪ್ರಸಿದ್ಧರಾದ, ಜ್ಞಾನಿಗಳಾದ, ಆನಂದತೀರ್ಥಮುನಿಗಳೆಂದು ಕರೆಯಲ್ಪಡುವ ನಾವು ವಿಷ್ಣುವಿನ ಆದೇಶಕ್ಕನುಸಾರವಾಗಿಯೇ ಈ ನಿರ್ಣಯವನ್ನು ಮಾಡಿರುವೆವು.

॥ ೧೩೮, ೧೩೯ ॥

**ತಾತ್ಪರ್ಯಂ ಶಾಸ್ತ್ರಾಣಾಂ ಸರ್ವೇಷಾಮುತ್ತಮಂ ಮಯಾ ಪ್ರೋಕ್ತಂ ।**
**ಪ್ರಾಪ್ಯಾನುಜ್ಞಾಂ ವಿಷ್ಣೋರೇತತ್ ಜ್ಞಾತ್ವೈವ ವಿಷ್ಣುರಾಪ್ಯೋಽಸೌ ॥ ೧೪೦ ॥**

**ಅರ್ಥ :- ವಿಷ್ಣೋಃ ಅನುಜ್ಞಾಂ ಪ್ರಾಪ್ಯ** ವಿಷ್ಣುವಿನ ಆಜ್ಞೆಯನ್ನು ಪಡೆದು, **ಸರ್ವೇಷಾಂ ಶಾಸ್ತ್ರಾಣಾಂ** ಎಲ್ಲ ಶಾಸ್ತ್ರಗಳ, **ಉತ್ತಮಂ ತಾತ್ಪರ್ಯಂ** ಶ್ರೇಷ್ಠ

ವಾದ ತಾತ್ಪರ್ಯವು, **ಪ್ರೋಕ್ತಂ** ಹೇಳಲ್ಪಟ್ಟಿದೆ. **ಏತತ್ ಜ್ಞಾತ್ವೈವ** ಇದನ್ನು ತಿಳಿದ ನಂತರವೇ, **ಅಸೌ ವಿಷ್ಣುಃ ಆಪ್ಯಃ** ಆ ವಿಷ್ಣುವು ಹೊಂದಲರ್ಹನಾಗುವನು.

**ತಾತ್ಪರ್ಯ :-** ಶ್ರೀ ವೇದವ್ಯಾಸರೂಪಿಯಾದ ವಿಷ್ಣುವಿನ ಆಜ್ಞೆಗನುಗುಣ ವಾಗಿಯೇ ನಾನು ಸರ್ವಶಾಸ್ತ್ರಗಳ ಈ ಶ್ರೇಷ್ಠವಾದ ತಾತ್ಪರ್ಯವನ್ನು ನಿರೂಪಿಸಿರುವೆನು. ಈ ಸಮಸ್ತಶಾಸ್ತ್ರ ತಾತ್ಪರ್ಯವನ್ನು ತಿಳಿದವನೇ ಭಗವಂತ ನನ್ನು ಹೊಂದಬಲ್ಲನು. ॥ ೧೪೦ ॥

**ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯ ವಿರಚಿತವಾದ**
**ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯದಲ್ಲಿ ಸರ್ವಶಾಸ್ತ್ರತಾತ್ಪರ್ಯ**
**ನಿರ್ಣಯವೆಂಬ ಪ್ರಥಮಾಧ್ಯಾಯವು ಸಮಾಪ್ತವಾಯಿತು.**

# ಅಧ್ಯಾಯ - 2

**ಪೀಠಿಕೆ** :- ಶ್ರೀಮದಾಚಾರ್ಯರು ಪ್ರಥಮಾಧ್ಯಾಯದ ಆರಂಭದಲ್ಲಿ ಮಂಗಲಪದ್ಯದಲ್ಲಿ 'ನಮೋ ನಮಸ್ತೇ' ಎಂದು ಎರಡು ಬಾರಿ 'ನಮಃ' ಶಬ್ದ ಪ್ರಯೋಗವನ್ನು ಮಾಡಿ ಇದರ ಮೂಲಕ ಮಂಗಲವು ಬಹಳವಾಗಿರ ಬೇಕೆಂಬುದನ್ನು ಸೂಚಿಸಿದ್ದಾರೆ. ಇದು ಅನುಭವಕ್ಕೆ ಬರುವಂತೆ ಮಾಡಲು ದ್ವಿತೀಯಾಧ್ಯಾಯದ ಆರಂಭದಲ್ಲಿಯೂ ಜಯತಿ ಇತ್ಯಾದಿ ಪದ್ಯದಿಂದ ಮಂಗಲವನ್ನಾಚರಿಸಿದ್ದಾರೆ -

> **ಜಯತಿ ಹರಿರಚಿಂತ್ಯಃ ಸರ್ವದೇವೈಕವಂದ್ಯಃ**
> **ಪರಮಗುರುರಭೀಷ್ಟಾವಾಪ್ತಿದಃ ಸಜ್ಜನಾನಾಮ್ ।**
> **ನಿಖಿಲಗುಣಗಣಾರ್ಣೋ ನಿತ್ಯನಿರ್ಮುಕ್ತದೋಷಃ**
> **ಸರಸಿಜನಯನೋಽಸೌ ಶ್ರೀಪತಿರ್ಮಾನದೋ ನಃ ॥ ೧ ॥**

**ಅರ್ಥ** :- **ಹರಿಃ** ಸಕಲದುರ್ಜನ ಸಂಹಾರಿಯಾದ, **ಅಚಿಂತ್ಯಃ** ಅನಂತ ಮಹಿಮೆ ಉಳ್ಳವನಾದ್ದರಿಂದ ಸಂಪೂರ್ಣವಾಗಿ ಚಿಂತಿಸಲು ಅಶಕ್ಯನಾದ, **ಸರ್ವ ದೇವೈಕವಂದ್ಯಃ** ಎಲ್ಲ ದೇವತೆಗಳಿಂದಲೂ ಮುಖ್ಯವಾಗಿ ವಂದ್ಯನಾದ, **ಪರಮ ಗುರುಃ** ಉತ್ತಮರಾದ ದೇವತೆಗಳಿಗೆ ಗುರುವಾದ ಅಥವಾ ಉತ್ತಮರಾದ ಬ್ರಹ್ಮದೇವರಿಗೆ ಗುರುವಾದ, **ಸಜ್ಜನಾನಾಂ** ಸಜ್ಜನರಿಗೆ, **ಅಭೀಷ್ಟಾವಾಪ್ತಿದಃ** ಅಭೀಷ್ಟಪ್ರಾಪ್ತಿಯನ್ನುಂಟುಮಾಡುವ, **ನಿಖಿಲಗುಣಗಣಾರ್ಣಃ** ಎಲ್ಲ ಗುಣ ಗಳೆಂಬ ಪುಣ್ಯಜಲಗಳಿಗೆ ಆಶ್ರಯನಾದ, **ನಿತ್ಯನಿರ್ಮುಕ್ತದೋಷಃ** ಸರ್ವಕಾಲ ದಲ್ಲಿಯೂ ದೋಷರಹಿತನಾದ, **ಸರಿಸಿಜನಯನಃ** ಕಮಲದಂತೆ ಕಣ್ಣುಳ್ಳ, **ನಃ** ನಮಗೆ, **ಮಾನದಃ** ಸಚ್ಛಾಸ್ತ್ರವನ್ನುಪದೇಶ ಮಾಡುವ, **ಅಸೌ ಶ್ರೀಪತಿಃ** ಆ ಲಕ್ಷ್ಮೀಪತಿಯಾದ ನಾರಾಯಣನು, **ಜಯತಿ** ಉತ್ಕೃಷ್ಟನಾಗಿದ್ದಾನೆ.

**ತಾತ್ಪರ್ಯ** :- ಪುಣ್ಯಜಲಕ್ಕೆ ಸಾಗರವು ಆಶ್ರಯವಾದಂತೆ ಲಕ್ಷ್ಮೀಪತಿ ಯಾದ ಶ್ರೀಹರಿಯು ಅನಂತಕಲ್ಯಾಣ ಗುಣಗಳೆಂಬ ಪುಣ್ಯಜಲಗಳಿಗೆ ಆಶ್ರಯ ನಾಗಿದ್ದಾನೆ. ಶ್ರೀಹರಿಯ ಮಹಿಮೆಯನ್ನು ಯಾರೂ ಪೂರ್ತಿಯಾಗಿ ಆಲೋಚಿಸಿ ತಿಳಿದುಕೊಳ್ಳಲಾರರು. ಎಲ್ಲ ದೇವತೆಗಳಿಂದಲೂ ಆತನು ವಂದ್ಯ ನಾಗಿರುವನು. ಅವನು ಬ್ರಹ್ಮಾದಿದೇವತೆಗಳಿಗೆ ಗುರು ಮತ್ತು ಸಜ್ಜನರಿಗೆ

ಅಭೀಷ್ಟವನ್ನು ಪೂರೈಸುವವನು. ದೋಷಗಳ ಲೇಶವೂ ಅವನ್ನಲ್ಲಿಲ್ಲ. ಅವನ ಕಣ್ಣುಗಳು ಕಮಲದಂತೆ ಸುಂದರ. ಆತನೇ ಶ್ರೀಮದಾಚಾರ್ಯರಿಗೆ ಸಚ್ಛಾಸ್ತ್ರ ವನ್ನುಪದೇಶಿಸಿದವನು. ಇಂತಹ ಕಲ್ಯಾಣ ಗುಣಪೂರ್ಣನಾದ ಶ್ರೀಹರಿಯು ಸರ್ವೋತ್ಕೃಷ್ಟನಾಗಿರುವನು.

**ವಿಶೇಷ ವಿಷಯ** :- ಅರಂ ನಯಂತೀತಿ ಅರ್ಣಾನಿ 'ನಿಖಿಲ ಗುಣಗಣಾರ್ಣಃ' ಎಂಬಲ್ಲಿ 'ಅರ್ಣ' ಪದವು (ಈ ಮಂಗಲ ಪದ್ಯವು ಮಹಾಭಾರತದ 'ನಾರಾಯಣಂ ಸುರಗುರುಂ' ಎಂಬ ಮಂಗಲ ಪದ್ಯದ ವಿವರಣ ರೂಪವಾಗಿದೆ.) (ದೋಷವನ್ನು ನಾಶಪಡಿಸುವುದು) ಎಂಬ ವಿಶ್ಲೇಷಣೆಯಿಂದ ಪುಣ್ಯಜಲ ಎಂಬ ಅರ್ಥ ಉಳ್ಳದ್ದಾಗಿದೆ. ಈ ಅರ್ಣಪದವು ವರ್ಣಪದದಂತೆ ಅಕಾರಾಂತ ಶಬ್ದವಾಗಿದೆ.

ಭಗವಂತನ ಗುಣಗಳನ್ನೇ 'ಹರಿಃ' 'ಅಚಿಂತ್ಯಃ' ಇತ್ಯಾದಿ ಪದಗಳಿಂದ ಸ್ವಲ್ಪ ಮಟ್ಟಿಗೆ ಇಲ್ಲಿ ವಿವರಿಸಿದ್ದಾರೆ. ॥ ೧ ॥

**ಉಕ್ತಃ ಪೂರ್ವಾಧ್ಯಾಯೇ ಶಾಸ್ತ್ರಾರ್ಥಾನಾಂ ನಿರ್ಣಯಃ ಪರೋ ದಿವ್ಯಃ ।**
**ಅಥ ಖಲು ಭಾರತವಾಕ್ಯಾನಿ ಏತೈರೇವಾಧ್ಯವಸ್ಯಂತೇ ॥ ೨ ॥**

**ಅರ್ಥ** :- **ದಿವ್ಯಃ** ನಾರಾಯಣನಿಗೆ ಸಂಬಂಧಿಸಿದ, ಆದ್ದರಿಂದ, **ಪರಃ** ಉತ್ತಮವಾದ, **ಶಾಸ್ತ್ರಾರ್ಥಾನಾಂ ನಿರ್ಣಯಃ** ವೇದಾದಿ ಶಾಸ್ತ್ರಗಳ ನಿರ್ಣಯವು, **ಪೂರ್ವಾಧ್ಯಾಯೇ** ಮೊದಲಿನ ಅಧ್ಯಾಯದಲ್ಲಿ **ಉಕ್ತಃ** ಹೇಳಲ್ಪಟ್ಟಿದೆ. **ಅಥ** ಅನಂತರ ಈ ಅಧ್ಯಾಯದಲ್ಲಿ **ಭಾರತವಾಕ್ಯಾನಿ** ಕಠಿಣವಾದ ಭಾರತ ವಾಕ್ಯಗಳು, **ಏತೈರೇವ** ಕೆಲವು ಭಾರತವಾಕ್ಯಗಳಿಂದಲೇ ಮತ್ತು ಅದಕ್ಕೆ ಅನುಕೂಲವಾದ ಬ್ರಹ್ಮಾಂಡ, ಮಾರ್ಕಂಡೇಯ ಮೊದಲಾದ ಪುರಾಣ ವಾಕ್ಯಗಳಿಂದಲೇ, **ಅಧ್ಯವಸ್ಯಂತೇ** ನಿರ್ಣಯಿಸಲ್ಪಡುತ್ತವೆ.

**ತಾತ್ಪರ್ಯ** :- ಹಿಂದಿನ ಅಧ್ಯಾಯದಲ್ಲಿ ವೇದಾದಿ ಶಾಸ್ತ್ರಗಳಲ್ಲಿರುವ ಭಗವತ್ತತ್ವದ ನಿರ್ಣಯವನ್ನು ಮಾಡಲಾಗಿದೆ. ಈ ಅಧ್ಯಾಯದಲ್ಲಿ ಶ್ರೀಮನ್ಮಹಾಭಾರತದಲ್ಲಿ ಅಲ್ಲಲ್ಲಿ ಉಪಲಬ್ಧವಾಗುವ ಕಠಿಣ ವಾಕ್ಯಗಳ ಅರ್ಥವನ್ನು ಭಾರತದ್ದೇ ಆದ ಇತರ ವಾಕ್ಯಗಳ ಆಧಾರದಿಂದ ಮತ್ತು ಬ್ರಹ್ಮಾಂಡ ಮಾರ್ಕಂಡೇಯಾದಿ ಪುರಾಣಗಳಲ್ಲಿರುವ ಪ್ರಮಾಣ ವಚನಗಳ ಆಧಾರದಿಂದ ನಿರ್ಣಯಿಸಲಾಗುವುದು. ॥ ೨ ॥

**ಪೀಠಿಕೆ** :- ಮಹಾಭಾರತದ ಕಠಿಣ ವಾಕ್ಯಗಳ ಅರ್ಥವನ್ನು ಈ ಅಧ್ಯಾಯದಲ್ಲಿ ನಿರ್ಣಯಿಸಲಾಗುವುದು ಎಂದು ಶ್ರೀಮದಾಚಾರ್ಯರು ಪ್ರತಿಜ್ಞೆ ಮಾಡಿದ್ದಾರೆ. ಆದರೆ ಜ್ಞಾನಿಗಳು ತಾವೇ ಬೇರೆ ಬೇರೆ ಗ್ರಂಥಗಳನ್ನು ನೋಡಿ ನಿರ್ಣಯಿಸಿಕೊಳ್ಳುವುದರಿಂದ ಆಚಾರ್ಯರೇಕೆ ನಿರ್ಣಯಿಸಬೇಕು? ಎಂಬ ಪ್ರಶ್ನೆ ಬರುವುದು. ಅದನ್ನು ಈ ಮುಂದಿನ ಶ್ಲೋಕದಲ್ಲಿ ಪರಿಹರಿಸುತ್ತಿದ್ದಾರೆ-

**ಕ್ವಚಿತ್ ಗ್ರಂಥಾನ್ ಪ್ರಕ್ಷಿಪಂತಿ ಕ್ವಚಿದಂತರಿತಾನಪಿ ।**
**ಕುರ್ಯುಃ ಕ್ವಚಿಚ್ಚ ವ್ಯತ್ಯಾಸಂ ಪ್ರಮಾದಾತ್ ಕ್ವಚಿದನ್ಯಥಾ ॥ ೩ ॥**

**ಅರ್ಥ** :- **ಕ್ವಚಿತ್** ಮೂಲ ಗ್ರಂಥದ ಕೆಲವು ಭಾಗದಲ್ಲಿ, **ಗ್ರಂಥಾನ್** ತಮ್ಮ ತಮ್ಮ ಮತಗಳಿಗೆ ಅನುಕೂಲವಾದ ತಾವೇ ರಚಿಸಿದ ಶ್ಲೋಕಗಳನ್ನು **ಪ್ರಕ್ಷಿಪಂತಿ** ಸೇರಿಸುತ್ತಾರೆ. **ಕ್ವಚಿತ್** ಕೆಲವು ಭಾಗದಲ್ಲಿ, **ಗ್ರಂಥಾನ್** ತಮಗೆ ಪ್ರತಿಕೂಲವಾಗಿ ಇರುವ ಶ್ಲೋಕಗಳನ್ನು ಅಂತರಿತಾನಪಿ ಮರೆಯಾದದ್ದನ್ನಾಗಿಯೂ, **ಕುರ್ವಂತಿ** ಮಾಡುತ್ತಾರೆ. **ಕ್ವಚಿತ್** ಕೆಲವು ಭಾಗದಲ್ಲಿ, **ವ್ಯತ್ಯಾಸಂ ಚ** ಸ್ಥಾನಪಲ್ಲಟ ರೂಪವಾದ ವ್ಯತ್ಯಾಸವನ್ನು **ಕುರ್ಯುಃ** ಮಾಡುತ್ತಾರೆ. **ಕ್ವಚಿತ್** ಕೆಲವು ಭಾಗದಲ್ಲಿ, (ಸಜ್ಜನರಾದರೂ ಕೂಡ) **ಪ್ರಮಾದಾತ್** ಅನವಧಾನದಿಂದ ಅಥವಾ ಅಜ್ಞಾನದಿಂದ, **ಗ್ರಂಥಾನ್** ಶ್ಲೋಕಗಳನ್ನು, **ಅನ್ಯಥಾ** ವ್ಯತ್ಯಾಸವಾಗಿ, **ಕುರ್ಯುಃ** ವ್ಯಾಖ್ಯಾನ ಮಾಡುತ್ತಾರೆ.

**ತಾತ್ಪರ್ಯ** :- ದುರಹಂಕಾರಿಗಳಾದ ಕೆಲವು ದುಷ್ಟ ವಿದ್ವಾಂಸರು ಭಾರತಾದಿ ಮೂಲ ಗ್ರಂಥದ ಕೆಲವು ಕಡೆಯಲ್ಲಿ ತಮ್ಮ ಮತಕ್ಕೆ ಅನುಕೂಲವಾದ ಶ್ಲೋಕಗಳನ್ನು ತಾವೇ ರಚಿಸಿ ಸೇರಿಸುತ್ತಾರೆ. ಕೆಲವೆಡೆ ತಮಗೆ ಪ್ರತಿಕೂಲವಾದ ಶ್ಲೋಕಗಳನ್ನು ತೆಗೆದುಬಿಡುತ್ತಾರೆ. ಕೆಲವು ಕಡೆ ಶ್ರೀಹರಿ ಮಹಿಮೆಯನ್ನು ಬಣ್ಣಿಸುವ ಶ್ಲೋಕಗಳನ್ನು ತೆಗೆದು ಬೇರೆಡೆ ಸೇರಿಸಿ ಕಥಾವಿಚ್ಛೇದವನ್ನುಂಟು ಮಾಡಿ ತಮಗೆ ಅಭಿಪ್ರೇತವಾದ ಕಥೆಗೆ ಅನುಕೂಲವಾದ ಅಥವಾ ಅಜ್ಞಾನದಿಂದ ವ್ಯತ್ಯಾಸವಾಗಿ ವ್ಯಾಖ್ಯಾನ ಮಾಡಿರುವುದೂ ಉಂಟು.

**ವಿಶೇಷ ವಿಷಯ** :- ಕಲಿಯುಗದಲ್ಲಿ ಜನರು ಅಲ್ಪಮತಿಗಳು ಮತ್ತು ಅಲಸರು. ಅಷ್ಟೇ ಅಲ್ಲದೆ ಶತಕೋಟಿ ಸಂಖ್ಯಾಕವಾದ ಮೂಲ ರಾಮಾಯಣವೇ

ಮೊದಲಾದ ಗ್ರಂಥಗಳು ಪ್ರಾಯಃ ನಷ್ಟವಾಗಿ ಉಪಲಬ್ಧವಿಲ್ಲ. ಪಾಠಕ್ರಮದಲ್ಲಿ ಪ್ರಚಲಿತವಿರುವ ಭಾರತಾದಿ ಗ್ರಂಥಗಳೂ ಕೂಡ ದುಷ್ಟ ವಿದ್ವಾಂಸರ ಕಪಟದಿಂದ ಲುಪ್ತವಾದಂತೆಯೇ ಆಗಿವೆ. ಆದ್ದರಿಂದ ಶ್ರೀಹರಿಸೇವಾಧುರಂಧರ ರಾದ ನಾವು ಈ ಪ್ರಯತ್ನವನ್ನು ಕೈಗೊಂಡಿದ್ದೇವೆಂದು ಶ್ರೀಮದಾಚಾರ್ಯರ ಅಭಿಪ್ರಾಯವಾಗಿದೆ. ॥ ೩ ॥

**ಅನುತ್ಸನ್ನಾ ಅಪಿ ಗ್ರಂಥಾಃ ವ್ಯಾಕುಲಾ ಇತಿ ಸರ್ವಶಃ ।**
**ಉತ್ಸನ್ನಾಃ ಪ್ರಾಯಶಃ ಸರ್ವೇ ಕೋಟ್ಯಂಶೋऽಪಿ ನ ವರ್ತತೇ ॥ ೪ ॥**

**ಅನ್ವಯಾರ್ಥ** :- **ಅನುತ್ಸನ್ನಾ ಅಪಿ** ನಷ್ಟವಾಗದೇ ಇದ್ದರೂ, **ಸರ್ವಶಃ** ಎಲ್ಲಾ, **ಗ್ರಂಥಾಃ** ಗ್ರಂಥಗಳು, **ಇತಿ** ಹಿಂದೆ ಹೇಳಿದ ಪ್ರಕಾರ, **ವ್ಯಾಕುಲಾಃ** ಅಸ್ತವ್ಯಸ್ತವಾಗಿವೆ. **ಪ್ರಾಯಶಃ** ಹೆಚ್ಚಾಗಿ, **ಸರ್ವೇ** ಮೂಲರಾಮಾಯಣಾದಿ ಎಲ್ಲ ಗ್ರಂಥಗಳೂ, **ಉತ್ಸನ್ನಾಃ** ನಷ್ಟವಾಗಿವೆ, **ಕೋಟ್ಯಂಶೋऽಪಿ** ಕೋಟಿಯ ಅಂಶವೂ, **ನ ವರ್ತತೇ** ಉಪಲಬ್ಧವಿಲ್ಲ.

**ತಾತ್ಪರ್ಯ** :- ಕೆಲವು ಗ್ರಂಥಗಳು ಉಪಲಬ್ಧವಾಗಿದ್ದರೂ ಅವೆಲ್ಲವೂ ಹಿಂದಿನ ಪದ್ಯದಲ್ಲಿ ನಿರೂಪಿಸಿದಂತೆ ಅಸ್ತವ್ಯಸ್ತವಾಗಿವೆ. ಹೆಚ್ಚಾಗಿ ಮೂಲ ರಾಮಾಯಣ ಮೊದಲಾದ ಎಲ್ಲ ಗ್ರಂಥಗಳೂ ನಷ್ಟವಾಗಿ ಹೋಗಿವೆ. ಸಹಸ್ರ ಗ್ರಂಥಗಳಲ್ಲಿ ಒಂದುನೂರೂ, ಲಕ್ಷ ಗ್ರಂಥಗಳಲ್ಲಿ ಸಾವಿರವೂ, ಕೋಟಿಯಲ್ಲಿ ಒಂದು ಲಕ್ಷವೂ ಉಪಲಬ್ಧವಿಲ್ಲ.

**ವಿಶೇಷ ವಿಷಯ** :- ಮೂಲರಾಮಾಯಣವು ಶತಕೋಟಿ ಗ್ರಂಥ ವಿಸ್ತಾರ ಉಳ್ಳದ್ದು. ಪಂಚರಾತ್ರಾಗಮವು ಐವತ್ತು ಕೋಟಿಗ್ರಂಥವಿಸ್ತಾರ ಉಳ್ಳದ್ದು. ಭಾರತವು ಅರವತ್ತು ಲಕ್ಷಗ್ರಂಥವಿಸ್ತಾರ ಉಳ್ಳುದ್ದು. ಅದರಲ್ಲಿ ಮೂವತ್ತು ಲಕ್ಷ ಗ್ರಂಥವು ದೇವಲೋಕದಲ್ಲಿಯೂ ಹದಿನೈದು ಲಕ್ಷ ಪಿತೃಲೋಕದಲ್ಲಿಯೂ, ಹದಿನಾಲ್ಕುಲಕ್ಷ ರಕ್ಷೋಲೋಕದಲ್ಲಿಯೂ, ಒಂದುಲಕ್ಷ ಗ್ರಂಥವು ಮನುಷ್ಯಲೋಕದಲ್ಲಿಯೂ ಇರುವುದು. ನಾಲ್ಕು ಲಕ್ಷ ಗ್ರಂಥಗಳು ಉಳ್ಳದ್ದು ಪುರಾಣಾದಿ. ಒಂದು ಗ್ರಂಥ ಎಂದರೆ ಮೂವತ್ತೆರಡು ಅಕ್ಷರಗಳು. ॥ ೪ ॥

**ಗ್ರಂಥೋಪ್ಯೇऽವಂ ವಿಲುಲಿತಃ ಕಿಮರ್ಥೋ ದೇವದುರ್ಗಮಃ ।**
**ಕಲಾವೇವಂ ವ್ಯಾಕುಲಿತೇ ನಿರ್ಣಯಾಯ ಪ್ರಚೋದಿತಃ ॥ ೫ ॥**

**ಹರಿಣಾ ನಿರ್ಣಯಾನ್ ವಚ್ಮಿ ವಿಜಾನನ್ ತತ್ಪ್ರಸಾದತಃ -**
**ಶಾಸ್ತ್ರಾಂತರಾಣಿ ಸಂಜಾನನ್ ವೇದಾಂಶ್ಚಾಸ್ಯ ಪ್ರಸಾದತಃ ॥ ೬ ॥**

**ದೇಶೇ ದೇಶೇ ತಥಾ ಗ್ರಂಥಾನ್ ದೃಷ್ಟ್ವಾ ಚೈವ ಪೃಥಗ್ವಿಧಾನ್ ।**

**ಅನ್ವಯಾರ್ಥ** :- **ಗ್ರಂಥೋಽಪಿ** ಗ್ರಂಥವೇ, **ಏವಂ** ಈ ರೀತಿಯಾಗಿ, **ವಿಲುಲಿತಃ** ನಷ್ಟವಾಗಿದೆ, **ದೇವದುರ್ಗಮಃ** ದೇವತೆಗಳಿಗೂ ಅರ್ಥವಾಗದ, **ಅರ್ಥಃ** ಅರ್ಥವು, **ಕಿಮು** ಮಂದಮತಿಗಳಿಗೆ ಅರ್ಥವಾಗದೆಂದು ಏನು ಹೇಳುವುದು. **ಗ್ರಂಥೇ** ಗ್ರಂಥವು, **ಏವಂ** ಈ ರೀತಿಯಾಗಿ, **ವ್ಯಾಕುಲಿತೇ** ವ್ಯತ್ಯಸ್ತವಾಗುತ್ತಿರಲು, **ಹರಿಣಾ** ಶ್ರೀಹರಿಯಿಂದ, **ನಿರ್ಣಯಾಯ** ನಿರ್ಣಯ ಮಾಡಲು, **ಪ್ರಚೋದಿತಃ** ಪ್ರೇರಿತರಾಗಿ, **ತತ್ಪ್ರಸಾದತಃ** ಶ್ರೀಹರಿಯ ಅನುಗ್ರಹ ದಿಂದ, **ನಿರ್ಣಯಾನ್** ನಿರ್ಣಯಗಳನ್ನು **ವಿಜಾನನ್** ತಿಳಿದವರಾಗಿ, **ಅಸ್ಯ ಪ್ರಸಾದತಃ** ಶ್ರೀಹರಿಯ ಅನುಗ್ರಹದಿಂದ, **ಶಾಸ್ತ್ರಾಂತರಾಣಿ** ಪಂಚರಾತ್ರ, ಬ್ರಹ್ಮಸೂತ್ರ ಮೊದಲಾದ ಇತರ ಶಾಸ್ತ್ರಗಳನ್ನು **ವೇದಾಂಶ್ಚ** ವೇದಗಳನ್ನು ಕೂಡ, **ಸಂಜಾನನ್** ತಿಳಿದವರಾಗಿ, **ತಥಾ** ಹಾಗೆಯೇ, **ದೇಶೇ ದೇಶೇ** ಪ್ರತಿ ದೇಶದಲ್ಲಿ, **ಪೃಥಗ್ವಿಧಾನ್** ಬೇರೆ ಬೇರೆಯಾದ, **ಗ್ರಂಥಾಂಶ್ಚ** ಗ್ರಂಥಗಳನ್ನೂ ಕೂಡ, **ದೃಷ್ಟ್ವೈವ** ನೋಡಿಯೇ, **ನಿರ್ಣಯಾನ್** ನಿರ್ಣಯಗಳನ್ನು, **ವಚ್ಮಿ** ಹೇಳುತ್ತೇವೆ.

**ತಾತ್ಪರ್ಯ** :- ಹಿಂದೇ ಹೇಳಿದ ಪ್ರಕಾರ ಗ್ರಂಥವೇ ಅಸ್ತವ್ಯಸ್ತವಾಗಿದೆ. ಹೀಗಿರುವಾಗ ದೇವದುರ್ಜ್ಞೇಯವಾದ ಅರ್ಥವಂತೂ ಕಲಿಯುಗದಲ್ಲಿ ಮಂದಮತಿಗಳಿಗೆ ಸುತರಾಂ ತಿಳಿಯಲಾರದು. ಆದ್ದರಿಂದ ಶ್ರೀಹರಿಯ ಅನುಗ್ರಹದಿಂದ ಎಲ್ಲ ನಿರ್ಣಯಗಳನ್ನು ಪಂಚರಾತ್ರ ಬ್ರಹ್ಮಸೂತ್ರಾದಿ ಸದ್ಗ್ರಂಥ ಗಳನ್ನು ವೇದಗಳನ್ನು ತಿಳಿದು ಮತ್ತು ದೇಶ ದೇಶಗಳಲ್ಲಿ ಸಂಚರಿಸಿ ನಾನಾವಿಧ ವಾದ ಗ್ರಂಥಗಳನ್ನು ಅವಲೋಕಿಸಿ ಆ ಶ್ರೀಹರಿಯ ಪ್ರೇರಣೆಯಿಂದಲೇ ನಿರ್ಣಯಗಳನ್ನು ತಿಳಿಸುವೆನು. ॥ ೫-೬ ॥

**ಪೀಠಿಕೆ** :- ಆಚಾರ್ಯರು, ತಾವು ಮಾಡುವ ನಿರ್ಣಯವಾದರೂ ಕೇವಲ ಉತ್ಪ್ರೇಕ್ಷೆಯ ಮೂಲಕವಲ್ಲ, ಶ್ರೀವ್ಯಾಸರ ಉಪದೇಶಮೂಲಕವೇ ಆಗಿದೆ ಎಂದು ತಿಳಿಸುತ್ತಾರೆ-

ಯಥಾ ಸ ಭಗವಾನ್ ವ್ಯಾಸಃ ಸಾಕ್ಷಾನ್ನಾರಾಯಣಃ ಪ್ರಭುಃ ॥ ೭ ॥

ಜಗಾದ ಭಾರತಾದ್ಯೇಷು ತಥಾ ವಕ್ಷ್ಯೇ ತದೀಕ್ಷಯಾ ।
ಸಂಕ್ಷೇಪಾತ್ ಸರ್ವಶಾಸ್ತ್ರಾರ್ಥಂ ಭಾರತಾರ್ಥಾನುಸಾರತಃ ॥ ೮ ॥

**ಅರ್ಥ** :- **ಪ್ರಭುಃ** ಸರ್ವಸಮರ್ಥರಾದ, **ಸಾಕ್ಷಾನ್ನಾರಾಯಣಃ** ಸಾಕ್ಷಾತ್ ನಾರಾಯಣನ ಅವತಾರ ಭೂತರಾದ, **ವ್ಯಾಸಃ** ಶ್ರೀ ವೇದವ್ಯಾಸ ದೇವರು, **ಭಾರತದ್ಯೇಷು** ಭಾರತಾದಿ ಗ್ರಂಥಗಳಲ್ಲಿ **ಯಥಾ** ಹೇಗೆ **ಜಗಾದ** ಹೇಳಿದ್ದಾರೋ, **ತಥಾ** ಹಾಗೆಯೇ, **ತದೀಕ್ಷಯಾ** ಅದರ ಜ್ಞಾನದಿಂದ, **ಭಾರತಾರ್ಥಾನುಸಾರತಃ** ಭಾರತಾರ್ಥಕ್ಕೆ ಅನುಗುಣವಾಗಿ, **ಸರ್ವಶಾಸ್ತ್ರಾರ್ಥಂ** ಎಲ್ಲಾ ಶಾಸ್ತ್ರಗಳ ಅರ್ಥವನ್ನು, **ಸಂಕ್ಷೇಪಾತ್** ಸಂಕ್ಷೇಪದಿಂದ, **ವಕ್ಷ್ಯೇ** ಹೇಳುವೆನು.

**ತಾತ್ಪರ್ಯ** :- ನಾವಾದರೂ ಕೇವಲ ಉತ್ಪ್ರೇಕ್ಷೆಯಿಂದ ಈ ನಿರ್ಣಯವನ್ನು ಹೇಳುವುದಿಲ್ಲ. ಗ್ರಂಥಗಳು ಲುಪ್ತವಾಗಿದ್ದರೂ ವೇದವ್ಯಾಸರು ಭಾರತಾದಿಗ್ರಂಥ ಗಳಲ್ಲಿ ಏನು ಹೇಳಿದ್ದಾರೋ ಅದನ್ನು ಅವರ ಉಪದೇಶದಿಂದ ತಿಳಿದುಕೊಂಡು ಭಾರತದ ಅರ್ಥಕ್ಕೆ ಅನುಸಾರವಾಗಿಯೇ ಇತರ ಎಲ್ಲಾ ಶಾಸ್ತ್ರಗಳ ನಿರ್ಣಯ ವನ್ನು ಹೇಳುವೆವು.

**ಪೀಠಿಕೆ** :- ಭಾರತಾರ್ಥವನ್ನನುಸರಿಸಿ ಸರ್ವಶಾಸ್ತ್ರಾರ್ಥವನ್ನು ಹೇಳುವು ದಾಗಿ ಪ್ರತಿಜ್ಞೆ ಮಾಡಿದ್ದಾರೆ. ಅದಕ್ಕೆ ಕಾರಣವನ್ನು ಹೇಳುತ್ತಾರೆ. ಮತ್ತು ಭಾರತಕ್ಕೆ ಉತ್ತಮತ್ವವನ್ನು ಬ್ರಹ್ಮಾಂಡ ಪುರಾಣ ವಾಕ್ಯಗಳಿಂದ ತೋರಿಸುತ್ತಾರೆ-

ನಿರ್ಣಯಃ ಸರ್ವಶಾಸ್ತ್ರಾಣಾಂ ಭಾರತಂ ಪರಿಕೀರ್ತಿತಮ್ ।
ಭಾರತಂ ಸರ್ವವೇದಾಶ್ಚ ತುಲಾಮಾರೋಪಿತಾಃ ಪುರಾ ॥ ೯ ॥

ದೇವೈರ್ಬ್ರಹ್ಮಾದಿಭಿಃ ಸರ್ವೈಃ ಋಷಿಭಿಶ್ಚ ಸಮನ್ವಿತೈಃ ।
ವ್ಯಾಸಸ್ಯೈವಾಜ್ಞಯಾ ತತ್ರ ತ್ವತ್ಯರಿಚ್ಯತ ಭಾರತಮ್ ॥ ೧೦ ॥

**ಅರ್ಥ** :- **ಭಾರತಂ** ಭಾರತವು, **ಸರ್ವಶಾಸ್ತ್ರಾಣಾಂ** ಎಲ್ಲ ಶಾಸ್ತ್ರಗಳ, **ನಿರ್ಣಯಃ** ನಿರ್ಣಯಕ್ಕೆ ಸಾಧನವೆಂದು, **ಪರಿಕೀರ್ತಿತಮ್** ಹೇಳಲ್ಪಟ್ಟಿದೆ.

**ವ್ಯಾಸಸ್ಯ** ವೇದವ್ಯಾಸರ, **ಆಜ್ಞಯಾ ಏವ** ಅಪ್ಪಣೆಯಿಂದಲೇ, **ಪುರಾ** ಪೂರ್ವಕಾಲದಲ್ಲಿ, **ಬ್ರಹ್ಮಾದಿಭಿಃ** ಬ್ರಹ್ಮನೇ ಮೊದಲಾದ, **ಸರ್ವೈಃ** ಎಲ್ಲಾ **ದೇವೈಃ**

ದೇವತೆಗಳಿಂದ, **ಚ** ಮತ್ತು, **ಸಮನ್ವಿತೈಃ** ಒಂದೆಡೆ ಸೇರಿದ, **ಋಷಿಭಿಃ** ಋಷಿಗಳಿಂದಲೂ, **ಭಾರತಂ** ಭಾರತವು, **ಸರ್ವವೇದಾಶ್ಚ** ಎಲ್ಲ ವೇದಗಳೂ ಕೂಡ, **ತುಲಾಂ** ತಕ್ಕಡಿಯಲ್ಲಿ, **ಆರೋಪಿತಾಃ** ಹಾಕಲ್ಪಟ್ಟವು. **ತತ್ರ ತು** ಅವೆರಡರಲ್ಲಿ ಯಾವದೂ, **ಭಾರತಂ** ಭಾರತವು, **ಅತ್ಯರಿಚ್ಯತ** ಹೆಚ್ಚು ತೂಕವುಳ್ಳದ್ದಾಯಿತು.

**ತಾತ್ಪರ್ಯ** :- ಭಾರತಾರ್ಥಕ್ಕೆ ಅನುಗುಣವಾಗಿಯೇ ಎಲ್ಲ ಶಾಸ್ತ್ರಗಳ ಅರ್ಥವನ್ನು ನಿರ್ಣಯಿಸಬೇಕು. ಏಕೆಂದರೆ ಭಾರತವು, ಸಕಲ ಶಾಸ್ತ್ರಾರ್ಥ ನಿರ್ಣಯಕ್ಕೆ ಸಾಧನ. ಆದುವೇ ಸಕಲಶಾಸ್ತ್ರಗಳಲ್ಲಿ ಉತ್ತಮ. ಹಿಂದೆ ದೇವತೆಗಳು ಋಷಿಗಳು ಎಲ್ಲರೂ ಸೇರಿ ತಕ್ಕಡಿಯಲ್ಲಿ ಒಂದು ಕಡೆ ಭಾರತವನ್ನು ಮತ್ತೊಂದು ಕಡೆ ಸಕಲ ವೇದಗಳನ್ನು ಹಾಕಿ ವ್ಯಾಸರ ಆಜ್ಞೆಯಿಂದಲೇ ತೂಗಿದರು. ಆಗ ಭಾರತವೇ ಭಾರದಲ್ಲಿ ಹೆಚ್ಚಿನದೆಂದು ಸಿದ್ಧವಾಗಿದೆ.

**ವಿಶೇಷ ವಿಷಯ** :- ಭಾರತ ಮತ್ತು ವೇದಗಳನ್ನು ತಕ್ಕಡಿಯಲ್ಲಿ ತೂಗಿದ್ದು ಹೇಗೆಂದರೆ, ಮಣಿ ಅಥವಾ ಬೇರೆ ಯಾವುದಾದರೂ ವಸ್ತುವನ್ನು ಆ ಗ್ರಂಥಗಳ ಪ್ರತಿನಿಧಿಯಾಗಿ ಮಾಡಿಕೊಂಡು ಅದರಲ್ಲಿ ಆ ಗ್ರಂಥಗಳ ಅಭಿಮಾನಿ ದೇವತೆಗಳನ್ನಾವಾಹಿಸಿ ತೂಗಿದರೆಂದು ಇಟ್ಟುಕೊಳ್ಳಬೇಕು. ॥ ೯-೧೦ ॥

**ಮಹತ್ತ್ವಾದ್ ಭಾರವತ್ತ್ವಾಚ್ಚ ಮಹಾಭಾರತಮುಚ್ಯತೇ ।**
**ನಿರುಕ್ತಮಸ್ಯ ಯೋ ವೇದ ಸರ್ವಪಾಪೈಃ ಪ್ರಮುಚ್ಯತೇ ॥ ೧೧ ॥**

**ಅರ್ಥ** :- **ಮಹತ್ತ್ವಾತ್** ಮಹತ್ತರವಾದ ಅರ್ಥಪ್ರತಿಪಾದಕವಾದ್ದರಿಂದ, **ಭಾರವತ್ತ್ವಾಚ್ಚ** ತೂಗಿದಾಗ ಅಧಿಕಭಾರ ಉಳ್ಳದ್ದಾದ್ದರಿಂದಲೂ, ಈ ಗ್ರಂಥವು, **ಮಹಾಭಾರತಂ** ಮಹಾಭಾರತ ಎಂದು, **ಉಚ್ಯತೇ** ಹೇಳಲ್ಪಟ್ಟಿದೆ, **ಅಸ್ಯ** ಈ ನಾಮದ, **ನಿರುಕ್ತಂ** ನಿರ್ವಚನವನ್ನು, **ಯಃ** ಯಾರು, **ವೇದ** ತಿಳಿಯುವನೋ, **ಸಃ** ಆತನು, **ಸರ್ವಪಾಪೈಃ** ಎಲ್ಲ ಪಾಪಗಳಿಂದ, **ಪ್ರಮುಚ್ಯತೇ** ಮುಕ್ತನಾಗುವನು.

**ತಾತ್ಪರ್ಯ** :- ಈ ಮಹಾಭಾರತವು ಮಹತ್ತರವಾದ ಪ್ರಮೇಯವನ್ನು ಪ್ರತಿಪಾದಿಸುತ್ತದೆ. ಆದ್ದರಿಂದ 'ಮಹಾ' ಎಂದೆನಿಸಿದೆ. ಮತ್ತು ಭಾರ ಉಳ್ಳದ್ದಾದ್ದರಿಂದ 'ಭಾರತ' ಎನಿಸಿ ಮಹಾಭಾರತವಾಗಿದೆ. ಹೀಗೆ ಈ 'ಮಹಾಭಾರತ' ಎಂಬ ನಾಮದ ನಿರ್ವಚನವನ್ನು ತಿಳಿದರೆ ಎಲ್ಲ ಪಾಪಗಳ ಪರಿಹಾರವಾಗುತ್ತದೆ. ॥ ೧೧ ॥

**ಪೀಠಿಕೆ** :- ಭಾರತವು ಸರ್ವಶಾಸ್ತ್ರಾರ್ಥನಿರ್ಣಯ ರೂಪವಾದುದೆಂಬುದನ್ನು ಬ್ರಹ್ಮಾಂಡ ಪುರಾಣದ ವಾಕ್ಯಗಳಿಂದಲೇ ತೋರಿಸುತ್ತಾರೆ -

**ನಿರ್ಣಯಃ ಸರ್ವಶಾಸ್ತ್ರಾಣಾಂ ಸದೃಷ್ಟಾಂತೋ ಹಿ ಭಾರತೇ ।**
**ಕೃತೋ ವಿಷ್ಣುವಶತ್ವಂ ಹಿ ಬ್ರಹ್ಮಾದೀನಾಂ ಪ್ರಕಾಶಿತಮ್ ॥ ೧೨ ॥**

**ಯತಃ ಕೃಷ್ಣವಶೇ ಸರ್ವೇ ಭೀಮಾದ್ಯಾಃ ಸಮ್ಯಗೀರಿತಾಃ ।**

**ಅರ್ಥ** :- **ಭಾರತೇ** ಭಾರತದಲ್ಲಿ **ಸರ್ವಶಾಸ್ತ್ರಾಣಾಂ** ಎಲ್ಲ ಶಾಸ್ತ್ರಗಳ, **ನಿರ್ಣಯಃ** ನಿರ್ಣಯವು, **ಸದೃಷ್ಟಾಂತಃ** ದೃಷ್ಟಾಂತಸಹಿತವಾಗಿ, **ಕೃತಃ** ಮಾಡಲ್ಪಟ್ಟಿದೆ. **ಯತಃ** ಯಾವ ಕಾರಣದಿಂದ, **ಭೀಮಾದ್ಯಾಃ** ಭೀಮನೇ ಮೊದಲಾದ, **ಸರ್ವೇ** ಎಲ್ಲರೂ, **ಕೃಷ್ಣವಶೇ** ಕೃಷ್ಣನ ಅಧೀನದಲ್ಲಿ ಎಂದು, **ಸಮ್ಯಕ್** ಚೆನ್ನಾಗಿ, **ಈರಿತಾಃ** ವರ್ಣಿಸಲ್ಪಟ್ಟಿದ್ದಾರೋ, **ಅತಃ** ಆ ಕಾರಣದಿಂದ, **ಬ್ರಹ್ಮಾದೀನಾಂ** ಬ್ರಹ್ಮಾದಿಗಳಿಗೆ, **ವಿಷ್ಣುವಶತ್ವಂ** ಭಗವದಧೀನತ್ವವು, **ಪ್ರಕಾಶಿತಂ ಹಿ** ಪ್ರಕಟಮಾಡಲ್ಪಟ್ಟಿತಷ್ಟೆ

**ತಾತ್ಪರ್ಯ** :- ಭಾರತದಲ್ಲಿ ಎಲ್ಲ ಶಾಸ್ತ್ರಗಳ ಪ್ರಮೇಯವನ್ನು ದೃಷ್ಟಾಂತ ಪುರಸ್ಸರವಾಗಿ ನಿರ್ಣಯಿಸಲಾಗಿದೆ. ಹೇಗೆಂದರೆ ಬ್ರಹ್ಮಾದಿಗಳೆಲ್ಲರೂ ಭಗವದಧೀನರು ಎಂಬುದು ಸಕಲ ಶಾಸ್ತ್ರಗಳ ಪ್ರಮೇಯ. ಭೀಮ ಮೊದಲಾದವರೇ ಬ್ರಹ್ಮಾದಿದೇವತೆಗಳೆಂಬುದೂ ಸುಪ್ರಸಿದ್ಧ. ಇಂತಹ ಭೀಮಾದಿಗಳು ಶ್ರೀಕೃಷ್ಣವಶರೆಂದು ಭಾರತದಲ್ಲಿ ತೋರಿಸಲಾಗಿದೆ. ಈ ದೃಷ್ಟಾಂತದಿಂದ ಬ್ರಹ್ಮಾದಿಗಳು ಭಗವದಧೀನರೆಂಬ ಪ್ರಮೇಯವನ್ನು ನಿರ್ಣಯಿಸಿದಂತಾಯಿತು.

**ವಿಶೇಷ ವಿಷಯ** :- ಈ ಶ್ಲೋಕದಲ್ಲಿ ಹಾಗೂ ಮುಂದಿನ ಶ್ಲೋಕಗಳಲ್ಲಿ ಶ್ರೀವ್ಯಾಸರು ಭಾರತಾಭಿಮತ ರಹಸ್ಯ ಪ್ರಮೇಯಗಳನ್ನು ಪ್ರತ್ಯೇಕ ಪ್ರತ್ಯೇಕವಾಗಿ ತೋರಿಸಿ ಅವುಗಳಿಗೆ ಉಚಿತವಾದ ದೃಷ್ಟಾಂತಗಳನ್ನು ತೋರಿಸಿದ್ದಾರೆ. ಬ್ರಹ್ಮಾದಿಗಳು ಭಗವದಧೀನರೆಂಬುದಕ್ಕೆ ಕೃಷ್ಣನಿಗೆ ಅಧೀನರಾಗಿರುವ ಭೀಮಾದಿಗಳೇ ದೃಷ್ಟಾಂತವಾಗಿದ್ದಾರೆ ಎಂದು ಅಭಿಪ್ರಾಯ. ಹೀಗೆಯೇ ಎಷ್ಟೋ ಪ್ರಮೇಯಗಳಿಗೆ ಭಾರತದಲ್ಲಿರುವ ದೃಷ್ಟಾಂತವನ್ನು ವಿದ್ವಾಂಸರು ಕಂಡುಕೊಳ್ಳಬಹುದು. ಉದಾಹರಣೆಗೆ :

೧) ಹರಿಸರ್ವೋತ್ತಮತ್ವಕ್ಕೆ, ಬ್ರಹ್ಮಾದಿದೇವತೆಗಳೂ, ಋಷಿಗಳೂ ರಾಜರೂ ಉಪಸ್ಥಿತರಿದ್ದ ರಾಜಸೂಯ ಯಾಗದಲ್ಲಿ ಶ್ರೀಕೃಷ್ಣನಿಗೇ ಸಲ್ಲಿಸಿದ ಅಗ್ರಪೂಜೆ ದೃಷ್ಟಾಂತವಾಗುವುದು.

೨) ವಾಯುಜೀವೋತ್ತಮತ್ವಕ್ಕೆ, ಭೀಮನಿಗೆ ಹೆಚ್ಚು ಬಲವಿರುವುದು ದೃಷ್ಟಾಂತ.

೩.) ದ್ರೌಪದೀದೇವಿಯರು ಲಕ್ಷ್ಮೀವ್ಯತಿರಿಕ್ತ ನಾರಿಯರಲ್ಲಿ ಉತ್ತಮರೆನ್ನುವುದಕ್ಕೆ, ದ್ರೌಪದಿಯಲ್ಲಿ ಸೌಂದರ್ಯಾಧಿಕ್ಯವೇ ದೃಷ್ಟಾಂತ.

೪) ವಿಷ್ಣು ಭಕ್ತರಿಗೆ ಸೌಭಾಗ್ಯಲಾಭವೆಂಬ ಪ್ರಮೇಯಕ್ಕೆ, ಧರ್ಮರಾಜನಿಗೆ ಸಾಮ್ರಾಜ್ಯ ಲಾಭವೇ ದೃಷ್ಟಾಂತ.

೫) ವಿಷ್ಣುವಿರೋಧಿಗಳಿಗೆ ದೌರ್ಭಾಗ್ಯವೆನ್ನುವುದಕ್ಕೆ ತಮ್ಮಂದಿರಿಂದ ಕೂಡಿದ ದುರ್ಯೋಧನನ ನಿಧನವೇ ದೃಷ್ಟಾಂತ. ಇವುಗಳನ್ನೆಲ್ಲ ಭಾರತದಲ್ಲಿ ನಿರೂಪಿಸಿದ್ದಾರೆ. ॥ ೧೨ ॥

**ಸರ್ವೇಷಾಂ ಜ್ಞಾನದೋ ವಿಷ್ಣುಃ ಯಶೋದಾತೇತಿ ಚೋದಿತಃ ॥ ೧೩ ॥**

**ಯಸ್ಮಾದ್ ವ್ಯಾಸಾತ್ಮನಾ ತೇಷಾಂ ಭಾರತೇ ಯಶ ಊಚಿವಾನ್**
**ಜ್ಞಾನದಶ್ಚ ಶುಕಾದೀನಾಂ ಬ್ರಹ್ಮರುದ್ರಾದಿ ರೂಪಿಣಾಮ್ ॥ ೧೪ ॥**

**ಅರ್ಥ** :- **ಯಸ್ಮಾತ್** ಯಾವ ಕಾರಣದಿಂದ, **ವಿಷ್ಣುಃ** ವಿಷ್ಣುವು, **ವ್ಯಾಸಾತ್ಮನಾ** ವೇದವ್ಯಾಸರೂಪದಿಂದ, **ತೇಷಾಂ** ಭೀಮಾರ್ಜುನಾದಿಗಳ, **ಯಶಃ** ಕೀರ್ತಿಯನ್ನು **ಭಾರತೇ** ಭಾರತ ಗ್ರಂಥದಲ್ಲಿ **ಊಚಿವಾನ್** ಹೇಳಿದ್ದಾನೋ, **ಚ** ಮತ್ತು **ಬ್ರಹ್ಮರುದ್ರಾದಿರೂಪಿಣಾಂ** ಬ್ರಹ್ಮರುದ್ರಾದಿರೂಪರಾದ, **ಶುಕಾದೀನಾಂ** ಶುಕರೇ ಮೊದಲಾದ ಋಷಿಗಳಿಗೆ, **ಜ್ಞಾನದಃ** ಜ್ಞಾನೋಪದೇಶಕನಾಗಿದ್ದಾನೋ, ತಸ್ಮಾತ್ ಆ ಕಾರಣದಿಂದ, **ವಿಷ್ಣುಃ** ವಿಷ್ಣುವು, **ಸರ್ವೇಷಾಂ** ಬ್ರಹ್ಮಾದಿ ಎಲ್ಲರಿಗೂ, **ಜ್ಞಾನದಃ** ಜ್ಞಾನಪ್ರದನು, **ಚ** ಮತ್ತು, **ಯಶೋದಾತಾ** ಕೀರ್ತಿಯನ್ನು ಕೊಡುವವನು, **ಇತಿ** ಎಂದು, **ಉದಿತಃ** ಹೇಳಲ್ಪಟ್ಟಿದ್ದಾನೆ.

**ತಾತ್ಪರ್ಯ** :- ಶ್ರೀಹರಿಯೇ ಬ್ರಹ್ಮಾದಿಗಳಿಗೆಲ್ಲ ಜ್ಞಾನದಾತ ಮತ್ತು ಕೀರ್ತಿದಾತನೆಂಬುದೂ ಒಂದು ಪ್ರಮೇಯ. ಇದಕ್ಕೂ ಭಾರತದಲ್ಲಿ ದೃಷ್ಟಾಂತವಿದೆ.

ಶ್ರೀಹರಿಯೇ ಸ್ವಯಂ ವೇದವ್ಯಾಸ ರೂಪದಿಂದ ಭಾರತವನ್ನು ರಚಿಸಿ ಅದರ ಮೂಲಕ ಭೀಮಾರ್ಜುನಾದಿಗಳ ಗುಣಗಳನ್ನು ವರ್ಣಿಸಿ ಕೀರ್ತಿಯನ್ನು ಪ್ರಕಟಿಸಿದ್ದಾನೆ. ಮತ್ತು ವೇದವ್ಯಾಸ ರೂಪದಿಂದ ಶುಕಾದಿಗಳಿಗೆ ಜ್ಞಾನೋಪ ದೇಶವನ್ನೂ ಮಾಡಿದ್ದಾನೆ. ಶುಕರು ರುದ್ರದೇವರ ಅವತಾರ ಮತ್ತು ಅವರಲ್ಲಿ ವಾಯುದೇವರ ಸನ್ನಿಧಾನವಿದೆ. ವೈಶಂಪಾಯನರಲ್ಲಿ ಬ್ರಹ್ಮದೇವರ ಆವೇಶ, ಪೈಲರಲ್ಲಿ ಶೇಷ, ಸುಮಂತುಗಳಲ್ಲಿ ಗರುಡ, ಜೈಮಿನಿಗಳಲ್ಲಿ ಇಂದ್ರ, ಇವರ ಆವೇಶವಿದೆ. ಹೀಗೆ ಭೀಮಾದಿಗಳ ಕೀರ್ತಿಯನ್ನು ವರ್ಣಿಸಿದ್ದರಿಂದ ಬ್ರಹ್ಮಾದಿ ಗಳಿಗೆ ಯಶೋದಾತನೆಂದೂ, ಶುಕಾದಿಗಳಿಗೆ ಜ್ಞಾನಪ್ರದನಾದ್ದರಿಂದ ಬ್ರಹ್ಮಾದಿ ಗಳಿಗೆ ಜ್ಞಾನಪ್ರದನೆಂದೂ ನಿರ್ಣೀತವಾಯಿತು.

**ವಿಶೇಷ ವಿಷಯ :-** ಇಲ್ಲಿ ಶ್ರೀಹರಿಯು ಜ್ಞಾನದಾತ ಎಂಬ ಪ್ರಮೇಯ ವನ್ನು ಮೊದಲು ಹೇಳಿ ಅನಂತರ ಯಶೋದಾತ ಎಂಬ ಪ್ರಮೇಯವನ್ನು ನಿರೂಪಿಸಿದ್ದಾರೆ. ಆದರೂ ಜ್ಞಾನದಾನಕ್ಕಿಂತಲೂ ಯಶೋದಾನದಲ್ಲಿಯೇ ಶ್ರೀಹರಿಗೆ ಮಹಾ ತಾತ್ಪರ್ಯವೆಂಬುದನ್ನು ಸೂಚಿಸಲು ಯಶೋದಾತೃತ್ವಕ್ಕೇ ಮೊದಲು ದೃಷ್ಟಾಂತವನ್ನು ತೋರಿಸಿದ್ದಾರೆ.

ಶ್ರೀಹರಿಯು ವ್ಯಾಸರೂಪದಿಂದ ಗ್ರಂಥದ ಮೂಲಕ ಕೀರ್ತಿಯನ್ನು ಪ್ರಕಟಪಡಿಸಿದ್ದಷ್ಟೇ ಅಲ್ಲದೇ ಶ್ರೀಕೃಷ್ಣ ರೂಪದಿಂದ ಅರ್ಜುನನಿಗೆ ಸಾರಥ್ಯವನ್ನೂ ಮಾಡಿ ಕೀರ್ತಿಯನ್ನು ಸಾಧಿಸಿಕೊಟ್ಟಿದ್ದಾನೆಂಬುದನ್ನೂ ದೃಷ್ಟಾಂತವಾಗಿ ಇಟ್ಟುಕೊಳ್ಳಬೇಕು. ಶ್ರೀಮದಾಚಾರ್ಯರು ಇದನ್ನೇ ಏಕೆ ಮುಖತಃ ಹೇಳಲಿಲ್ಲವೆಂದರೆ ಯಶಸ್ಸನ್ನು ಸಾಧಿಸಿ ಕೊಡುವುದಕ್ಕಿಂತಲೂ ಗ್ರಂಥರೂಪೇಣ ಮಾಡಿದ ಯಶಸ್ಸಿನ ಪ್ರಶಂಸೆಯು ಆಚಂದ್ರಾರ್ಕ ಯಶೋವಿಸ್ತಾರಕ್ಕೆ ಕಾರಣವಾಗುವುದರಿಂದ 'ಭಾರತೇ ಯಶ ಊಚಿವಾನ್' ಎಂದು ಪ್ರಶಂಸೆಯನ್ನೇ ಮುಖತಃ ಹೇಳಿದ್ದಾರೆ.

ಭಾವಿಬ್ರಹ್ಮರಾದ ಶ್ರೀಮದಾಚಾರ್ಯರಿಗೆ ಶ್ರೀಹರಿಯು ವ್ಯಾಸರೂಪದಿಂದ ಸಾಕ್ಷಾತ್ ಜ್ಞಾನೋಪದೇಶ ಮಾಡಿದ್ದಾನೆ. ಇದನ್ನು ಗಮನದಲ್ಲಿಟ್ಟುಕೊಂಡು 'ಬ್ರಹ್ಮರುದ್ರಾದಿ ರೂಪಿಣಾಂ ಶುಕಾದೀನಾಂ ಜ್ಞಾನದಃ' ಎಂದಿದ್ದಾರೆ. ಅಂದರೆ ರುದ್ರರೂಪರಾದ ಶುಕರಿಗೂ ಬ್ರಹ್ಮರೂಪರಾದ ಮಧ್ವರಿಗೂ ಜ್ಞಾನದಾನ ಮಾಡಿದ್ದು ನಿದರ್ಶನ ಎಂದು ಅಭಿಪ್ರಾಯ. ॥ ೧೩, ೧೪ ॥

**ಬ್ರಹ್ಮಾऽಧಿಕಶ್ಚ ದೇವೇಭ್ಯಃ ಶೇಷಾದ್ರುದ್ರಾದಪೀರಿತಃ ।**
**ಪ್ರಿಯಶ್ಚ ವಿಷ್ಣೋಃ ಸರ್ವೇಭ್ಯಃ ಇತಿ ಭೀಮ ನಿದರ್ಶನಾತ್ ॥ ೧೫ ॥**

**ಅರ್ಥ** :- **ಬ್ರಹ್ಮಾ** ಬ್ರಹ್ಮದೇವರು, **ದೇವೇಭ್ಯಃ** ಇಂದ್ರಾದಿ ದೇವತೆಗಳಿಗಿಂತ, **ಶೇಷಾತ್** ಶೇಷದೇವರಿಗಿಂತ, **ರುದ್ರಾದಪಿ** ರುದ್ರ ದೇವರಿಗಿಂತಲೂ **ಅಧಿಕಶ್ಚ** ಉತ್ತಮರಾಗಿಯೂ, **ಚ** ಮತ್ತು, **ವಿಷ್ಣೋಃ** ವಿಷ್ಣುವಿಗೆ, **ಸರ್ವೇಭ್ಯಃ** ಎಲ್ಲರಿಗಿಂತಲೂ, **ಪ್ರಿಯಃ ಇತಿ** ಪ್ರಿಯರೆಂದೂ, **ಭೀಮನಿದರ್ಶನಾತ್** ಭೀಮನ ದೃಷ್ಟಾಂತದಿಂದ, **ಈರಿತಃ** ಹೇಳಲ್ಪಟ್ಟಿದ್ದಾರೆ.

**ತಾತ್ಪರ್ಯ** :- ಬ್ರಹ್ಮದೇವರು ಇಂದ್ರಾದಿ ದೇವತೆಗಳಿಗಿಂತ ಮತ್ತು ಶೇಷ ರುದ್ರರಿಗಿಂತಲೂ ಉತ್ತಮರು ಮತ್ತು ಬ್ರಹ್ಮದೇವರೇ ಎಲ್ಲರಿಗಿಂತಲೂ ಹೆಚ್ಚು ಭಗವಂತನಿಗೆ ಪ್ರಿಯರಾಗಿದ್ದಾರೆ. ಈ ಪ್ರಮೇಯಕ್ಕೂ ಭಾರತದಲ್ಲಿ ಭಾವಿ ಬ್ರಹ್ಮನಾದ ಭೀಮನೇ ನಿದರ್ಶನ.

**ವಿಶೇಷ ವಿಷಯ** :- ಭೀಮಸೇನದೇವರು ರುದ್ರಸ್ವರೂಪರಾದ ಅಶ್ವತ್ಥಾಮಾಚಾರ್ಯರ ಮುಖಭಂಗ ಮಾಡಿದ್ದಾರೆ ಮತ್ತು ಶೇಷರೂಪರಾದ ಬಲರಾಮದೇವರಿಗೆ ಅಸಾಧ್ಯವಾದ ಜರಾಸಂಧ ವಧೆಯನ್ನೂ ಮಾಡಿದ್ದಾರೆಂದು ಭಾರತದಲ್ಲಿದೆ. ಇದರಿಂದ ಶೇಷ ರುದ್ರರಿಗಿಂತ ಬ್ರಹ್ಮದೇವರಿಗೆ ಉತ್ತಮತ್ವ ಸಿದ್ಧವಾಯಿತು. ಭೀಮನು ಇಂದ್ರರೂಪನಾದ ಅರ್ಜುನನಿಗಿಂತ ಜ್ಯೇಷ್ಠನಾದುದರಿಂದ ಬ್ರಹ್ಮದೇವರು ಇಂದ್ರಾದಿಗಳಿಗಿಂತ ಉತ್ತಮರೆಂಬುದಕ್ಕೂ ನಿದರ್ಶನವಿದ್ದಂತಾಯಿತು.

ಶ್ರೀಹರಿಯು ರಾಮಾವತಾರದಲ್ಲಿ ಹನುಮಂತನಿಗೋಸ್ಕರವಾಗಿ ಅವನ ಮಿತ್ರನಾದ ಸುಗ್ರೀವನ ಸಖ್ಯವನ್ನು ಮಾಡಿದ. ಕೃಷ್ಣಾವತಾರಕಾಲದಲ್ಲಿ ಆ ಸುಗ್ರೀವನೇ ಕರ್ಣನಾದಾಗ ಭೀಮನಿಗೋಸ್ಕರ ಅವನ ವಧೆಯನ್ನು ಮಾಡಿಸಿದ. ಮತ್ತು ರಾಮಾವತಾರದಲ್ಲಿ ವಾಲಿಯನ್ನು ಸಂಹರಿಸಿದ್ದ, ಕೃಷ್ಣಾವತಾರಕಾಲದಲ್ಲಿ ಆ ವಾಲಿಯೇ ಅರ್ಜುನನಾದಾಗ ಭೀಮನಿಗೋಸ್ಕರ ಅವನ ಸಖ್ಯವನ್ನು ಮಾಡಿದ. ಈ ನಿದರ್ಶನದಿಂದಲೂ ಬ್ರಹ್ಮದೇವರು ಎಲ್ಲರಿಗಿಂತಲೂ ಹೆಚ್ಚು ಭಗವಂತನಿಗೆ ಪ್ರಿಯರೆಂದು ತಿಳಿಯುವುದು.

**ಜನಾರ್ದನೀಯ ಟಿಪ್ಪಣಿಯ ವಿಶೇಷ ವಿಚಾರ :-** ಗರುಡನಿಗೆ ಮನುಷ್ಯರಲ್ಲಿ ಅವತಾರವಿಲ್ಲ. ಆದ್ದರಿಂದ ದೃಷ್ಟಾಂತ ತೋರಿಸಲು ಹೊರಟ ಈ ಪದ್ಯದಲ್ಲಿ ಶೇಷಾತ್ ರುದ್ರಾದಪಿ ಅಧಿಕಃ ಎಂದು ಮಾತ್ರ ಹೇಳಿದ್ದಾರೆ. ಆದ್ದರಿಂದ ಬ್ರಹ್ಮದೇವರು ಗರುಡನಿಗಿಂತ ಉತ್ತಮರಲ್ಲ ಎಂಬ ಭ್ರಾಂತಿಗೆ ಅವಕಾಶವಿಲ್ಲ.
॥ ೧೫ ॥

**ಭೂಭಾರಹರಣೇ ವಿಷ್ಣೋಃ ಪ್ರಧಾನಾಂಗಂ ಹಿ ಮಾರುತಿಃ ।**
**ಮಾಗಧಾದಿವಧಾದೇವ ದುರ್ಯೋಧನವಧಾದಪಿ ॥ ೧೬ ॥**

**ಅರ್ಥ :- ಮಾಗಧಾದಿವಧಾದೇವ** ಜರಾಸಂಧ ಕೀಚಕಾದಿಗಳ ಸಂಹಾರ ದಿಂದಲೂ, **ದುರ್ಯೋಧನವಧಾದಪಿ** ದುರ್ಯೋಧನವಧೆ ಮಾಡಿದ್ದ ರಿಂದಲೂ, **ಭೂಭಾರಹರಣೇ** ಭೂಭಾರ ಹರಣ ರೂಪ ಕಾರ್ಯದಲ್ಲಿ **ಮಾರುತಿಃ** ವಾಯುಕುಮಾರನಾದ ಭೀಮನು, **ವಿಷ್ಣೋಃ** ಶ್ರೀಹರಿಗೆ, **ಪ್ರಧಾನಾಂಗಂ ಹಿ** ಮುಖ್ಯ ಸಾಧನೀಭೂತನಷ್ಟೆ

**ತಾತ್ಪರ್ಯ :-** ವಾಯುಕುಮಾರನಾದ ಭೀಮನು ಶ್ರೀಹರಿಯು ಮಾಡುವ ಭೂಭಾರ ಭೂತರಾದ ದೈತ್ಯರ ವಧೆಯಲ್ಲಿ ಪ್ರಧಾನ ಸಾಧನ ನಾಗಿದ್ದಾನೆ ಎಂಬುದೂ ಒಂದು ಪ್ರಮೇಯ. ಇದಕ್ಕೆ ಭಾರತದಲ್ಲಿ ನಿದರ್ಶನ ವಿದೆ. ಜರಾಸಂಧ ಕೀಚಕ ದುರ್ಯೋಧನ ಮೊದಲಾದ ಭೂಭಾರವಾದ ದೈತ್ಯರನ್ನು ಭೀಮನು ಸಂಹರಿಸಿದ್ದಾನೆ. ಈ ನಿದರ್ಶನದಿಂದ ಮಾರುತಿಯು ಪ್ರಧಾನಾಂಗ ಎಂಬ ಪ್ರಮೇಯ ಸಿದ್ಧವಾಗುವುದು. ॥ ೧೬ ॥

**ಪೀಠಿಕೆ :-** ಬ್ರಹ್ಮಾಽಧಿಕಶ್ಚ ದೇವೇಭ್ಯಃ ಎಂಬಲ್ಲಿ ಬ್ರಹ್ಮದೇವರು ಇಂದ್ರಾದಿ ದೇವತೆಗಳಿಗಿಂತ ಉತ್ತಮರೆಂದು ಹೇಳಲಾಗಿದೆ. ಇದರಿಂದಲೇ ಕೈಮುತ್ಯನ್ಯಾಯ ದಿಂದ ಇತರರಿಗಿಂತಲೂ ಉತ್ತಮತ್ವವು ಬ್ರಹ್ಮದೇವರಲ್ಲಿ ಹೇಳಿದಂತಾಯಿತು. ಬ್ರಹ್ಮ ದೇವರಲ್ಲಿರುವ ಈ ಜೀವೋತ್ತಮತ್ವ ಪ್ರಮೇಯವನ್ನೇ ಯುಕ್ತಿಯಿಂದ ಇನ್ನು ಮುಂದೆ ಸಮರ್ಥಿಸುತ್ತಾರೆ.

**ಯೋ ಯ ಏವ ಬಲಜ್ಯೇಷ್ಠಃ ಕ್ಷತ್ರಿಯೇಷು ಸ ಉತ್ತಮಃ ।**
**ಅಂಗಂ ಚೇತ್ ವಿಷ್ಣುಕಾರ್ಯೇಷು ತದಭ್ಯೈವ ನ ಚಾನ್ಯಥಾ ॥ ೧೭ ॥**

**ಅರ್ಥ** :- **ಕ್ಷತ್ರಿಯೇಷು** ಕ್ಷತ್ರಿಯರಲ್ಲಿ **ಯೋ ಯಃ** ಯಾರು ಯಾರು, **ಬಲ ಜ್ಯೇಷ್ಠಃ** ಬಲದಲ್ಲಿ ಅಧಿಕರೋ, **ಸಃ** ಏವ ಅವರೇ, **ವಿಷ್ಣುಕಾರ್ಯೇಷು** ಭಗವತ್ ಕಾರ್ಯಗಳಲ್ಲಿ **ತದ್‌ಭಕ್ತ್ಯಾ** ಏವ ವಿಷ್ಣುಭಕ್ತಿ ಮೂಲಕವಾಗಿಯೇ, **ಅಂಗಂ ಚೇತ್** ಸಾಧನೀಭೂತರಾದರೆ, **ಉತ್ತಮಃ** ಉತ್ತಮರು, **ಅನ್ಯಥಾ** ವಿಷ್ಣುಭಕ್ತಿ ಇಲ್ಲದಿದ್ದರೆ, **ನ ಚ** ಉತ್ತಮರಲ್ಲ ಮತ್ತು ಫಲಭಾಗಿಗಳೂ ಅಲ್ಲ.

**ತಾತ್ಪರ್ಯ** :- ಕ್ಷತ್ರಿಯರಲ್ಲಿ ಯಾರಿಗೆ ಹೆಚ್ಚು ಬಲವೋ ಅವರು ಭಗವತ್ ಕಾರ್ಯಗಳಲ್ಲಿ ಭಗವದ್‌ಭಕ್ತಿಯಿಂದಲೇ ಪಾಲ್ಗೊಳ್ಳುವುದಾದರೆ ಉತ್ತಮ ರೆನಿಸುವರು. ಇಲ್ಲದಿದ್ದರೆ ಇಲ್ಲ. ಅಷ್ಟೇ ಅಲ್ಲ, ಭಕ್ತಿ ಇಲ್ಲದಿದ್ದರೆ ಭಗವತ್ ಕಾರ್ಯದಲ್ಲಿ ಪಾಲ್ಗೊಂಡುದರ ಫಲವೂ ಅವರಿಗೆ ದೊರೆಯುವುದಿಲ್ಲ. ಈ ನಿಯಮದಿಂದ ಭಾವಿಬ್ರಹ್ಮನಾದ ಭೀಮನು ಭಕ್ತಿಯಿಂದ ಭಗವತ್‌ಕಾರ್ಯ ದಲ್ಲಿ ಭಾಗವಹಿಸುವುದರಿಂದ ಉತ್ತಮನೆಂದು ಸಿದ್ಧವಾಗುವುದು.

**ವಿಶೇಷ ವಿಷಯ** :- ಅಮೃತಮಥನ ರೂಪವಾದ ಭಗವತ್ ಕಾರ್ಯ ದಲ್ಲಿ ದೇವತೆಗಳಂತೆ ಅಸುರರೂ ಭಾಗವಹಿಸಿದ್ದರು. ಆದರೆ ವಿಷ್ಣು ಭಕ್ತಿ ಯಿಂದಲ್ಲ, ಕೇವಲ ತಮ್ಮ ಉದರ ಪೂರಣಾರ್ಥ. ಆದ್ದರಿಂದಲೇ ಅವರು ಅಮೃತಕ್ಕೆ ಭಾಗಿಗಳಾಗಲಿಲ್ಲ. ॥ ೧೭ ॥

**ಬಲಂ ನೈಸರ್ಗಿಕಂ ತಚ್ಚೇದ್ ವರಾಸ್ತ್ರಾದೇಸ್ತದನ್ಯಥಾ ।**
**ಅನ್ಯಾವೇಶನಿಮಿತ್ತಂ ಚೇದ್ ಬಲಮನ್ಯಾತ್ಮಕಂ ಹಿ ತತ್ ॥ ೧೮ ॥**

**ಅರ್ಥ** :- **ತತ್ ಬಲಂ** ಆ ಬಲವು **ನೈಸರ್ಗಿಕಂ,. ಚೇತ್** ಸ್ವಾಭಾವಿಕ ವಾಗಿದ್ದರೆ, (ಉತ್ತಮತ್ವಕ್ಕೆ ಪ್ರಯೋಜಕ.) **ತತ್** ಆ ಬಲವು **ವರಾಸ್ತ್ರಾದೇಃ ಚೇತ್** ಬೇರೊಬ್ಬರ ವರ, ಅಸ್ತ್ರ ಅಥವಾ ಸಹಾಯದಿಂದ ಉಂಟಾಗಿದ್ದರೆ, **ಅನ್ಯಥಾ** ಉತ್ತಮತ್ವಕ್ಕೆ ಪ್ರಯೋಜಕವಾಗಲಾರದು. **ತತ್** ಆ ಬಲವು ಅನ್ಯಾ ವೇಶನಿಮಿತ್ತಂ **ಚೇತ್** ಇನ್ನೊಬ್ಬರ ಆವೇಶನಿಮಿತ್ತಕವಾಗಿದ್ದರೂ **ಅನ್ಯಥಾ** ಉತ್ತಮತ್ವಕ್ಕೆ ಪ್ರಯೋಜಕವಲ್ಲ. **ತತ್ ಬಲಂ** ಅಂತಹ ಬಲವು **ಅನ್ಯಾತ್ಮಕಂ ಹಿ** ಬೇರೆಯವರ ಸ್ವಭಾವ ಭೂತವಾದದ್ದಷ್ಟೆ

**ತಾತ್ಪರ್ಯ** :- ಕ್ಷತ್ರಿಯರಲ್ಲಿ ಬಲವು ಅಧಿಕವಾಗಿದ್ದರೆ ಅವರು ಉತ್ತಮ ರೆಂದು ನಿಯಮವಿದೆ. ಆದರೆ ಆ ಬಲವು ಸ್ವಾಭಾವಿಕವಾಗಿದ್ದರೆ ಮಾತ್ರ ಈ

ನಿಯಮ ಅನ್ವಯಿಸುತ್ತದೆ. ರುದ್ರಾದಿ ದೇವತೆಗಳು ಕೊಟ್ಟ ವರದಿಂದಾಗಲೀ ಅವರು ಕೊಟ್ಟ ಅಸ್ತ್ರದಿಂದ ಅಥವಾ ಪಿಶಾಚಾದಿಗಳ ಸಹಾಯದಿಂದಾಗಲೀ ಬಲ ಉಂಟಾಗಿದ್ದರೆ ಅದು ಉತ್ತಮತ್ವಕ್ಕೆ ಪ್ರಯೋಜಕವಲ್ಲ. ಅಂತಹ ಬಲದಿಂದ ಉತ್ತಮತ್ವವನ್ನು ನಿರ್ಧರಿಸಲಾಗದು. ಮತ್ತು ಅನ್ಯಾವೇಶನಿಮಿತ್ತದಿಂದ ಬಲ ಉಂಟಾಗಿದ್ದರೆ ಅದೂ ಪ್ರಯೋಜಕವಲ್ಲ. ಉದಾಹರಣೆಗೆ ಅರ್ಜುನನಿಗೆ ನರಾವೇಶದಿಂದ ಅಧಿಕಬಲ ಬಂದಿದೆ. ಇದು ಉತ್ತಮತ್ವಕ್ಕೆ ನಿರ್ಧಾರಕವಲ್ಲ. ಏಕೆಂದರೆ ಅಂತಹ ಬಲವು ಅರ್ಜುನನ ಸ್ವಭಾವವಲ್ಲ. ಆವೇಶಗೊಂಡ ಶೇಷನದ್ದೇ ಆಗಿದೆ. ॥ ೧೮ ॥

**ಪೀಠಿಕೆ :-** ಉತ್ತಮತ್ವವನ್ನು ಅಧಿಕಜ್ಞಾನ, ಅಧಿಕಭಕ್ತಿ ಮತ್ತು ಅಧಿಕವಾಗಿ ವಿಷ್ಣುಪ್ರೀತಿಗೆ ಪಾತ್ರನಾಗುವಿಕೆ, ಇವುಗಳಿಂದ ನಿರ್ಧರಿಸುವುದು ಬಿಟ್ಟು ಕೇವಲ ಬಲಾಧಿಕ್ಯ ಮಾತ್ರದಿಂದ ನಿರ್ಧರಿಸಿದರೆ ಜ್ಞಾನೋಪದೇಶಕನಾದ ಗುರುವಿಗಿಂತಲೂ ದೃಢಕಾಯನಾಗಿ ಹೆಚ್ಚು ಬಲವುಳ್ಳ ಶಿಷ್ಯನೇ ಉತ್ತಮನಾಗಬೇಕಾಗುತ್ತದೆ ಎಂಬ ಸಂದೇಹವನ್ನು ಮುಂದಿನ ಶ್ಲೋಕದಲ್ಲಿ ಪರಿಹರಿಸುತ್ತಾರೆ–

**ದೇವೇಷು ಬಲಿನಾಮೇವ ಭಕ್ತಿಜ್ಞಾನೇ ನ ಚಾನ್ಯಥಾ ।**
**ಸ ಏವ ಚ ಪ್ರಿಯೋ ವಿಷ್ಣೋಃ ನಾನ್ಯಥಾ ತು ಕಥಂಚನ ॥ ೧೯ ॥**

**ಅರ್ಥ :-** **ದೇವೇಷು** ದೇವತೆಗಳಲ್ಲಿ, **ಬಲಿನಾಮೇವ** ಬಲವಂತರಿಗೇನೇ; **ಭಕ್ತಿಜ್ಞಾನೇ** ಅಧಿಕವಾದ ಭಕ್ತಿ ಮತ್ತು ಜ್ಞಾನಗಳು ಇರುತ್ತವೆ. **ಅನ್ಯಥಾ** ಬಲವಿರದಿದ್ದರೆ, **ನಚ** ಅಧಿಕವಾದ ಭಕ್ತಿ ಜ್ಞಾನಗಳಿರುವುದಿಲ್ಲ. **ಸ ಏವ ಚ** ಅಂತಹ ಭಕ್ತಿ ಜ್ಞಾನಗಳುಳ್ಳವನೇ, **ವಿಷ್ಣೋಃ** ಭಗವಂತನಿಗೆ, **ಪ್ರಿಯಃ** ಪ್ರೀತ್ಯಾಸ್ಪದನು. **ಅನ್ಯಥಾ ತು** ಭಕ್ತಿಜ್ಞಾನಗಳಿಲ್ಲದಿದ್ದರೆ ಮಾತ್ರ, **ಕಥಂಚನ** ಯಾವ ಪ್ರಕಾರದಿಂದಲೂ ನ ಪ್ರೀತ್ಯಾಸ್ಪದನಲ್ಲ.

**ತಾತ್ಪರ್ಯ :-** ಉತ್ತಮತ್ವವನ್ನು ನಿರ್ಧರಿಸಲು ಅಧಿಕಬಲವು ಪ್ರಯೋಜಕವಾಗುವುದು. ಏಕೆಂದರೆ ಬಲವು ಅಧಿಕವಾಗಿದ್ದಲ್ಲಿ ಜ್ಞಾನಭಕ್ತಿಗೂ ಹೆಚ್ಚಾಗಿಯೇ ಇರುತ್ತವೆ. ಈ ನಿಯಮವಾದರೂ ದೇವತೆಗಳಿಗೆ ಮಾತ್ರ ಅನ್ವಯಿಸತಕ್ಕದ್ದು. ಮನುಷ್ಯರಲ್ಲಾಗಲೀ ಆನೆ ಮೊದಲಾದ ಪಶುಗಳಲ್ಲಾಗಲೀ ಹೀಗೆ ಕಂಡು ಬರುವುದಿಲ್ಲ. ಆದ್ದರಿಂದ ದೇವತೆಗಳಲ್ಲಿ ಮತ್ತು ದೇವತೆಗಳ ಅವತಾರಭೂತರಲ್ಲಿ

ಹೆಚ್ಚುಬಲವುಳ್ಳವರು ಹೆಚ್ಚು ಜ್ಞಾನಭಕ್ತಿ ಉಳ್ಳವರಾಗಿರುತ್ತಾರೆ. ಅಂಥವರೇ ಭಗವಂತನಿಗೆ ಪ್ರೀತ್ಯಾಸ್ಪದರೂ ಆಗಿರುತ್ತಾರೆಂದು ನಿಯಮ. ಇದರಿಂದ ಗುರುವಿಗಿಂತ ದೃಢಕಾಯನಾದ ಶಿಷ್ಯನಿಗೆ ಉತ್ತಮತ್ವ ಬರಲಿ ಎಂಬ ಆಕ್ಷೇಪಕ್ಕೆ ಅವಕಾಶವಿಲ್ಲ.

**ವಿಶೇಷ ವಿಷಯ** :- ದೇವತೆಗಳಲ್ಲಿ ಬಲವಿದ್ದಲ್ಲಿ ಜ್ಞಾನಭಕ್ತಿಗಳೂ ಇರುವುವು. ಆದರೆ ಅವುಗಳಿಂದಲೇ ಉತ್ತಮತ್ವವನ್ನು ಏಕೆ ನಿರ್ಧರಿಸಬಾರದು ಎಂದರೆ ಅಂತಃಕರಣದಲ್ಲಿರುವ ಜ್ಞಾನ ಭಕ್ತಿಗಳು ಸಾಕ್ಷಾತ್ತಾಗಿ ಗೋಚರವಾಗುವುದಿಲ್ಲ, ಬಲವಾದರೆ ಇತರರಿಗೆ ಗೋಚರವಾಗುವುದು. ಇದರಿಂದ ಜ್ಞಾನಭಕ್ತಿಗಳನ್ನು ಊಹಿಸಬೇಕು. ಆದ್ದರಿಂದ ದೇವತೆಗಳಲ್ಲಿ ಬಲವನ್ನೇ ಉತ್ತಮತ್ವಕ್ಕೆ ನಿರ್ಧಾರಕವೆಂದು ಸ್ವೀಕರಿಸಿದ್ದಾರೆ.

'ದೇವೇಷು' ಎಂಬುದು ಉಪಲಕ್ಷಣ. ದೇವಾವತಾರಭೂತ ಕ್ಷತ್ರಿಯರಿಗೂ ಈ ನಿಯಮವನ್ನು ಅನ್ವಯಿಸಿಕೊಳ್ಳಬೇಕು. ಏಕೆಂದರೆ ಭಾರತದಲ್ಲಿ ದೇವಾವತಾರನಾದ ಭೀಮನಲ್ಲಿಯೂ ಮತ್ತು ರಾಮಾಯಣದಲ್ಲಿ ದೇವಾವತಾರನಾದ ಹನುಮಂತನಲ್ಲಿಯೂ ಬಲಾಧಿಕ್ಯ, ಜ್ಞಾನಾದಿಗುಣಾಧಿಕ್ಯವು ಕಂಡಿದೆ. ಒಟ್ಟಿನಲ್ಲಿ ದೇವತೆಗಳಲ್ಲಿ ಮತ್ತು ದೇವಾವತಾರ ಭೂತರಾದ ಕ್ಷತ್ರಿಯರಲ್ಲಿ ಮಾತ್ರ ಬಲಾಧಿಕ್ಯವಿದ್ದಲ್ಲಿ ಜ್ಞಾನಾದಿಗುಣಾಧಿಕ್ಯವೆಂಬ ನಿಯಮವನ್ನಿಟ್ಟುಕೊಳ್ಳಬೇಕೆಂದು ಆಚಾರ್ಯರ ಭಾವ. ॥ ೧೯ ॥

**ತಸ್ಮಾತ್ ಯೋ ಯೋ ಬಲಜ್ಯೇಷ್ಠಃ ಸ ಗುಣಜ್ಯೇಷ್ಠ ಏವ ಚ ।**
**ಬಲಂ ಹಿ ಕ್ಷತ್ರಿಯೇ ವ್ಯಕ್ತಂ ಜ್ಞಾಯತೇ ಸ್ಥೂಲದೃಷ್ಟಿಭಿಃ ॥ ೨೦ ॥**

**ಅರ್ಥ** :- **ತಸ್ಮಾತ್** ಆ ಕಾರಣದಿಂದ **ಕ್ಷತ್ರಿಯೇ** ಕ್ಷತ್ರಿಯರಲ್ಲಿ, **ಯಃ ಯಃ** ಯಾರು **ಬಲಜ್ಯೇಷ್ಠಃ** ಬಲದಲ್ಲಿ ಅಧಿಕರೋ, **ಸಃ** ಅವರು, **ಗುಣಜ್ಯೇಷ್ಠಃ ಏವ ಚ** ಗುಣಗಳಲ್ಲಿಯೂ ಅಧಿಕರೇ ಆಗಿರುವರು, **ಕ್ಷತ್ರಿಯೇ** ಕ್ಷತ್ರಿಯರಲ್ಲಿ, **ಬಲಂ** ಬಲವು **ಸ್ಥೂಲದೃಷ್ಟಿಭಿಃ** ಸ್ಥೂಲದೃಷ್ಟಿಯುಳ್ಳವರಿಂದ, **ವ್ಯಕ್ತಂ** ಸ್ಪಷ್ಟವಾಗಿ **ಜ್ಞಾಯತೇ ಹಿ** ತಿಳಿಯಲ್ಪಡುತ್ತದಷ್ಟೆ

**ತಾತ್ಪರ್ಯ** :- ದೇವತೆಗಳಲ್ಲಿ ಮತ್ತು ದೇವಾವತಾರ ಭೂತರಾದ ಕ್ಷತ್ರಿಯರಲ್ಲಿ ಬಲವಿದ್ದಲ್ಲಿ ಜ್ಞಾನಭಕ್ತಿಗಳೂ ಇರುವುದರಿಂದ ಯಾರು

ಬಲಜ್ಯೇಷ್ಠರೋ ಅವರೇ ಗುಣಜ್ಯೇಷ್ಠರೂ ಆಗಿರುವರೆಂದು ನಿಯಮವಿದೆ. ಆದ್ದರಿಂದ ಬಲವು ಉತ್ತಮತ್ವಕ್ಕೆ ನಿರ್ಧಾರಕ. ಬಲವಿದ್ದಲ್ಲಿ ಇತರ ಗುಣಗಳಿರುವುದಾದರೆ ಬಲವೇ ಏಕೆ ನಿರ್ಧಾರಕ? ಎಂದರೆ, ಆ ಗುಣಗಳ ಮಧ್ಯದಲ್ಲಿ ಬಲವೇ ಸ್ಥೂಲದೃಷ್ಟಿಯವರಿಗೆ ಗೋಚರವಾಗುತ್ತದೆಂಬ ಕಾರಣ ದಿಂದ ಬಲವೇ ನಿರ್ಧಾರಕವೆನ್ನಲಾಗಿದೆ. ಈ ನಿಯಮ ಕ್ಷತ್ರಿಯರಿಗೆ ಮಾತ್ರ ಅನ್ವಯಿಸುವುದು. ಏಕೆಂದರೆ ಸಾಮಾನ್ಯವಾಗಿ ಕ್ಷತ್ರಿಯರಲ್ಲಿ ಮಾತ್ರ ಬಲವು ಸ್ಪಷ್ಟವಾಗಿಗೋಚರಿಸುವುದು. ॥ ೨೦ ॥

**ಪೀಠಿಕೆ :-** ಬಲವಿದ್ದಲ್ಲಿ ಜ್ಞಾನಾದಿಗುಣಗಳಿರುತ್ತವೆ ಎಂಬ ನಿಯಮಕ್ಕೆ ಪ್ರಮಾಣವನ್ನು ಹೇಳುತ್ತಾರೆ-

**ಜ್ಞಾನಾದಯೋ ಗುಣಾ ಯಸ್ಮಾದ್ ಜ್ಞಾಯಂತೇ ಸೂಕ್ಷ್ಮದೃಷ್ಟಿಭಿಃ ।**
**ತಸ್ಮಾದ್ ಯತ್ರ ಬಲಂ ತತ್ರ ವಿಜ್ಞಾತವ್ಯಾಃ ಗುಣಾಃ ಪರೇ ॥ ೨೧ ॥**

**ದೇವೇಷ್ವೇವ ನ ಚಾನ್ಯೇಷು ವಾಸುದೇವಪ್ರತೀಪತಃ ।**

**ಅರ್ಥ :- ಯಸ್ಮಾತ್** ಯಾವ ಕಾರಣದಿಂದ, **ಜ್ಞಾನಾದಯೋ ಗುಣಾಃ** ಜ್ಞಾನವೇ ಮೊದಲಾದ ಗುಣಗಳು, **ಸೂಕ್ಷ್ಮದೃಷ್ಟಿಭಿಃ** ಸೂಕ್ಷ್ಮ ದೃಷ್ಟಿಯುಳ್ಳವರಿಂದ **ಜ್ಞಾಯಂತೇ** ತಿಳಿಯಲ್ಪಡುತ್ತವೋ, **ತಸ್ಮಾತ್** ಆ ಕಾರಣದಿಂದ **ದೇವೇಷ್ವೇವ** ದೇವತೆಗಳಲ್ಲಿ ಮತ್ತು ದೇವಾಂಶರಾದ ಕ್ಷತ್ರಿಯರಲ್ಲಿ ಮಾತ್ರವೇ, **ಯತ್ರ** ಯಾರಲ್ಲಿ, **ಬಲಂ** ಬಲವಿದೆಯೋ, **ತತ್ರ** ಅವರಲ್ಲಿ **ಪರೇ ಗುಣಾಃ** ಇತರ ಗುಣಗಳು, **ವಿಜ್ಞಾತವ್ಯಾಃ** ತಿಳಿಯಲ್ಪಡಬೇಕು. **ಅನ್ಯೇಷು** ದಾನವರಲ್ಲಿ **ವಾಸುದೇವಪ್ರತೀಪತಃ** ಭಗವದ್ವಿರೋಧ ಇರುವದರಿಂದ, **ನ** ಬಲವಿದ್ದರೂ ಜ್ಞಾನಾದಿಗುಣಗಳಿವೆ ಎಂದು ತಿಳಿಯಕೂಡದು.

**ತಾತ್ಪರ್ಯ :-** ದೇವತೆಗಳು ಮತ್ತು ದೇವಾಂಶ ಕ್ಷತ್ರಿಯರಲ್ಲಿ ಬಲವಿದ್ದಲ್ಲಿ ಜ್ಞಾನಾದಿಗಳು ಇದ್ದೇ ಇರುತ್ತವೆ ಎಂದು ತಿಳಿಯಬೇಕು. ಹೀಗೆ ಜ್ಞಾನಾದಿ ಗುಣಗಳಿರುವುದು ಸೂಕ್ಷ್ಮ ದರ್ಶಿಗಳಿಗೆ ಕಂಡುಬಂದಿದೆ. ಆದ್ದರಿಂದ ಈ ನಿಯಮವು ಪ್ರಮಾಣಸಿದ್ಧವೇ ಆಗಿದೆ. ದೈತ್ಯರಿಗೆ ಭಗವದ್‌ದ್ವೇಷ ಇರುವುದು ಎಲ್ಲರಿಗೂ ಅನುಭವ ಸಿದ್ಧವಾದ್ದರಿಂದ ಈ ನಿಯಮ ಅನ್ವಯಿಸುವುದಿಲ್ಲ, ಅನ್ವಯಿಸಿದರೆ ಬಾಧಿತವಾಗುತ್ತದೆ. ॥ ೨೧ ॥

**ಪೀಠಿಕೆ** :- ಬಲಾಧಿಕ್ಯವಿದ್ದಲ್ಲಿ ಜ್ಞಾನಾದಿಗುಣಾಧಿಕ್ಯದ ನಿಯಮವು ದೇವತೆಗಳು ಮತ್ತು ದೇವಾಂಶ ಕ್ಷತ್ರಿಯರಲ್ಲಿ ಮಾತ್ರ ಎಂಬ ನಿಯಮಕ್ಕೆ ಅಪವಾದವನ್ನು ಈಗ ತೋರಿಸುತ್ತಾರೆ-

**ಕ್ಷತ್ರಾದನ್ಯೇಷ್ವಪಿ ಬಲಂ ಪ್ರಮಾಣಂ ಯತ್ರ ಕೇಶವಃ ॥ ೨೨ ॥**

**ಪ್ರವೃತ್ತೋ ದುಷ್ಟನಿಧನೇ ಜ್ಞಾನಕಾರ್ಯೇ ತದೈವ ಚ ।**
**ಅನ್ಯತ್ರ ಬ್ರಾಹ್ಮಣಾನಾಂ ತು ಪ್ರಮಾಣಂ ಜ್ಞಾನಮೇವ ಹಿ ॥ ೨೩ ॥**

**ಕ್ಷತ್ರಿಯಾಣಾಂ ಬಲಂ ಚೈವ ಸರ್ವೇಷಾಂ ವಿಷ್ಣುಕಾರ್ಯತಾ ।**

**ಅರ್ಥ** :- **ಯತ್ರ** ಯಾವಾಗ, **ಕೇಶವಃ** ಭಗವಂತನು, **ದುಷ್ಟ ನಿಧನೇ** ದುಷ್ಟಸಂಹಾರ ಕಾರ್ಯದಲ್ಲಿ, **ಚ** ಮತ್ತು, **ತದೈವ** ದುಷ್ಟಸಂಹಾರ ಕಾಲ ದಲ್ಲಿಯೇ **ಜ್ಞಾನಕಾರ್ಯೇ** ದುಷ್ಟಸಂಹಾರೋಪಯುಕ್ತವಾದ ಶಸ್ತ್ರಾಸ್ತ್ರ ಜ್ಞಾನ ಕಾರ್ಯದಲ್ಲಿಯೂ, **ಪ್ರವೃತ್ತಃ** ತೊಡಗುವನೋ, **ತತ್ರ** ಆವಾಗ ಮಾತ್ರ, **ಕ್ಷತ್ರಾತ್** ದೇವಾಂಶ ಕ್ಷತ್ರಿಯರಿಗಿಂತ **ಅನ್ಯೇಷು ಅಪಿ** ದೇವಾಂಶರಾದ ದ್ರೋಣಾದಿ ಬ್ರಾಹ್ಮಣರಲ್ಲಿಯೂ ಕೂಡ, **ಬಲಂ** ಅಧಿಕ ಬಲವು, **ಪ್ರಮಾಣಂ** ಜ್ಞಾನಾದಿಗಳನ್ನೂಹಿಸಲು ಪ್ರಮಾಣವಾಗುವುದು, **ಅನ್ಯತ್ರ** ದುಷ್ಟಸಂಹಾರ ಮತ್ತು ಜ್ಞಾನ ಕಾರ್ಯಗಳನ್ನು ಏಕಕಾಲದಲ್ಲಿ ಏಕತ್ರ ಸೇರಿಸುವ ಆವಶ್ಯಕತೆ ಇಲ್ಲ ದಿರುವಾಗ, **ಬ್ರಾಹ್ಮಣಾನಾಂ** ಬ್ರಾಹ್ಮಣರಿಗೆ, **ಜ್ಞಾನಮೇವ** ಜ್ಞಾನವೇ, **ಪ್ರಮಾಣಂ** ಆಧಿಕ್ಯವನ್ನು ತಿಳಿಯಲು ಉಪಾಯವಾಗುವುದು. **ಸರ್ವೇಷಾಂ** ಎಲ್ಲ **ಕ್ಷತ್ರಿಯಾಣಾಂ** ಕ್ಷತ್ರಿಯರಿಗೆ, **ಬಲಂ** ಬಲವು, **ವಿಷ್ಣುಕಾರ್ಯತಾ ಚೈವ** ಭಗವತ್ಕಾರ್ಯದಲ್ಲಿ ಅನುಕೂಲವಾಗಿರುವಿಕೆಯೂ ಕೂಡ, **ಪ್ರಮಾಣಂ** ಜ್ಞಾನಾದಿ ಗುಣಾಧಿಕ್ಯಕ್ಕೆ ಜ್ಞಾಪಕವು.

**ತಾತ್ಪರ್ಯ** :- ಯಾವಾಗ ಭಗವಂತನು ದುಷ್ಟಸಂಹಾರ ಮತ್ತು ಅದಕ್ಕೆ ಬೇಕಾದ ಶಸ್ತ್ರಾಸ್ತ್ರಗಳ ಜ್ಞಾನಕಾರ್ಯದಲ್ಲಿ ತೊಡಗುವನೋ ಆಗ ಹಿಂದಿನ ನಿಯಮವನ್ನು ದೇವಾಂಶ ಬ್ರಾಹ್ಮಣರಿಗೂ ಅನ್ವಯಿಸಬಹುದು. ಶ್ರೀಹರಿಯು ದುಷ್ಟಸಂಹಾರ ಕಾರ್ಯದಲ್ಲಿ ಮತ್ತು ಜ್ಞಾನಕಾರ್ಯದಲ್ಲಿ ಪ್ರವರ್ತಿಸುವುದೆಂದರೆ ದುಷ್ಟ ಸಂಹಾರ ಶಕ್ತಿಯನ್ನೂ ಮತ್ತು ಶಸ್ತ್ರಾಸ್ತ್ರಜ್ಞಾನದಾನದ ಯೋಗ್ಯತೆಯನ್ನೂ ಲಾಘವಾತ್ ಒಬ್ಬರಲ್ಲಿಯೇ ಉಂಟುಮಾಡಬೇಕೆಂದು ಸಂಕಲ್ಪಿಸುವುದು. ಹೀಗೆ

ಸಂಕಲ್ಪ ಮಾಡಿಯೇ ಭಗವಂತನು ದೇವತೆಗಳಾದ ಬೃಹಸ್ಪತ್ಯಾಚಾರ್ಯರನ್ನು ದ್ರೋಣರೆಂಬ ಬ್ರಾಹ್ಮಣರನ್ನಾಗಿ ಅವತಾರಮಾಡಿಸಿದ್ದಾನೆ. ಅವರ ಮುಖಾಂತರ ಅರ್ಜುನಾದಿಗಳಿಗೆ ಶಸ್ತ್ರಜ್ಞಾನೋಪದೇಶ ಮಾಡಿಸಿದ್ದಾನೆ. ಮತ್ತು ದುಷ್ಟನಿಧನ ಕ್ಕೋಸ್ಕರ ಅವರಲ್ಲಿ ಮೂಲರೂಪದ ಬಲವನ್ನು ಅಭಿವ್ಯಕ್ತಿಗೊಳಿಸಿದ್ದಾನೆ. ಇಂತಹ ಸಂದರ್ಭದಲ್ಲಿ ಬ್ರಾಹ್ಮಣರಾದ ದ್ರೋಣರಲ್ಲಿ ಬಲವಿದ್ದದ್ದರಿಂದ ಜ್ಞಾನಾದಿಗಳೂ ಇವೆ ಎಂದು ಊಹಿಸಿದರೆ ತಪ್ಪಾಗಲಾರದು. ಬೇರೆ ಸಂದರ್ಭದಲ್ಲಿ ಅಂದರೆ ಒಬ್ಬರಲ್ಲಿಯೆ ದುಷ್ಟ ಸಂಹಾರಕ್ಕೆ ಬೇಕಾದ ಜ್ಞಾನ ಮತ್ತು ಶಕ್ತಿಗಳನ್ನು ಸೇರಿಸುವ ಅವಶ್ಯಕತೆ ಇಲ್ಲದಿರುವಾಗ ಬ್ರಾಹ್ಮಣರಲ್ಲಿ ಜ್ಞಾನದಿಂದಲೇ ಉತ್ತಮತ್ವವನ್ನು ನಿರ್ಧರಿಸಬೇಕು. ಕ್ಷತ್ರಿಯರಲ್ಲಿ ಬಲ ಮತ್ತು ಭಗವತ್ಕಾರ್ಯದಲ್ಲಿ ಅನುಕೂಲ ವಾಗಿ ವರ್ತಿಸುವುದು ಇವುಗಳ ಆಧಿಕ್ಯದಿಂದ ಜ್ಞಾನಾದಿಗುಣಾಧಿಕ್ಯವನ್ನು ತಿಳಿಯಬೇಕು. ॥ ೨೩ ॥

**ಪೀಠಿಕೆ :-** ಅವತಾರಗಳಲ್ಲಿಯೂ ನಿರವಧಿಕವಾದ ಬಲವಾಗಲೀ ಅಥವಾ ಜ್ಞಾನವಾಗಲೀ ಕಂಡರೆ ಅದು ಆ ಅವತಾರವು ಭಗವದವತಾರವೆನ್ನಲು ಪ್ರಮಾಣವಾಗುವುದೆಂದು ಈಗ ನಿರೂಪಿಸುತ್ತಾರೆ-

**ಕೃಷ್ಣರಾಮಾದಿರೂಪೇಷು ಬಲಕಾರ್ಯೋ ಜನಾರ್ದನಃ ॥ ೨೪ ॥**

**ದತ್ತವ್ಯಾಸಾದಿರೂಪೇಷು ಜ್ಞಾನಕಾರ್ಯಸ್ತಥಾ ಪ್ರಭುಃ ।**

**ಅರ್ಥ :- ಪ್ರಭುಃ** ಸರ್ವ ಸಮರ್ಥನಾದ,. **ಜನಾರ್ದನಃ** ಭಗವಂತನು, **ಕೃಷ್ಣರಾಮಾದಿರೂಪೇಷು** ಕೃಷ್ಣರಾಮ ಮೊದಲಾದ ರೂಪಗಳಲ್ಲಿ, **ಬಲಕಾರ್ಯಃ** ಬಲದ ಕಾರ್ಯ ಉಳ್ಳವನು. **ದತ್ತವ್ಯಾಸಾದಿರೂಪೇಷು** ದತ್ತ, ವೇದವ್ಯಾಸ ಮೊದಲಾದ ರೂಪಗಳಲ್ಲಿ, **ಜ್ಞಾನಕಾರ್ಯಃ** ಜ್ಞಾನದ ಕಾರ್ಯ ಉಳ್ಳವನು.

**ತಾತ್ಪರ್ಯ :-** ಶ್ರೀಹರಿಯು ರಾಮಕೃಷ್ಣಾದಿ ಅವತಾರಗಳಲ್ಲಿ ಬಲ ಕಾರ್ಯವನ್ನು ಮಾಡಿದ್ದಾನೆ. ಅಂದರೆ ದೈತ್ಯಸಂಹಾರ, ಭೂಭಾರಹರಣವನ್ನೇ ಅವತಾರ ಪ್ರಯೋಜನವನ್ನಾಗಿಟ್ಟುಕೊಂಡಿದ್ದಾನೆ. ಈ ರಾಮಕೃಷ್ಣಾದಿರೂಪಗಳಲ್ಲಿ ನಿರವಧಿಕ ಬಲವು ಕಂಡಿರುವುದರಿಂದ ಭಗವದವತಾರವೆಂದು ನಿರ್ಧರಿಸ ಬಹುದು. ದತ್ತ ವ್ಯಾಸ ಮೊದಲಾದ ಅವತಾರಗಳಲ್ಲಿ ಜ್ಞಾನಕಾರ್ಯವಾದ ವೇದೋಪದೇಶ, ವೇದ ವಿಭಾಗ, ತದುಪಯುಕ್ತ ಶಾಸ್ತ್ರ ರಚನೆ

ಮೊದಲಾದವುಗಳನ್ನೇ ಮುಖ್ಯ ಉದ್ದೇಶ್ಯವಾಗಿಟ್ಟುಕೊಂಡಿದ್ದರಿಂದ ಮತ್ತು ಆ ರೂಪಗಳಲ್ಲಿ ಬ್ರಹ್ಮಾದಿಗಳಲ್ಲಿ ಅಸಂಭಾವಿತವಾದ ಜ್ಞಾನವು ಕಂಡಿರುವುದರಿಂದ ಆ ರೂಪಗಳನ್ನು ಭಗವದವತಾರವೆಂದು ನಿರ್ಧರಿಸಬಹುದು. ॥ ೨೪ ॥

**ಪೀಠಿಕೆ** :- ಪೃಥು, ನಾರದ, ಬಲರಾಮ ಮೊದಲಾದವರೂ ಭಗವದವತಾರವೆಂದು ಪುರಾಣಗಳಲ್ಲಿ ವರ್ಣಿಸಿರುವುದರಿಂದ ಅವರೂ ಮತ್ಸ್ಯಾದಿಗಳಂತೆ ಸ್ವರೂಪಾವತಾರಭೂತರೆಂಬ ಭ್ರಾಂತಿಯನ್ನು ಈಗ ಪರಿಹರಿಸುತ್ತಾ ಎರಡು ವಿಧವಾದ ಅವತಾರವನ್ನು ನಿರೂಪಿಸುತ್ತಾರೆ —

**ಮತ್ಸ್ಯಕೂರ್ಮವರಾಹಾಶ್ಚ ಸಿಂಹವಾಮನಭಾರ್ಗವಾಃ ॥ ೨೫ ॥**

**ರಾಘವಃ ಕೃಷ್ಣಬುದ್ಧೌ ಚ ಕೃಷ್ಣದ್ವೈಪಾಯನಸ್ತಥಾ**
**ಕಪಿಲೋ ದತ್ತಋಷಭೌ ಶಿಂಶುಮಾರೋ ರುಚೇಃ ಸುತಃ ॥ ೨೬ ॥**

**ನಾರಾಯಣೋ ಹರಿಃ ಕೃಷ್ಣಃ ತಾಪಸೋ ಮನುರೇವ ಚ**
**ಮಹಿದಾಸಸ್ತಥಾ ಹಂಸಃ ಸ್ತ್ರೀರೂಪೋ ಹಯಶೀರ್ಷವಾನ್ ॥ ೨೭ ॥**

**ತಥೈವ ವಡವಾವಕ್ತ್ರ ಕಲ್ಕೀ ಧನ್ವಂತರಿಃ ಪ್ರಭುಃ**
**ಇತ್ಯಾದ್ಯಾಃ ಕೇವಲೋ ವಿಷ್ಣುಃ ನೈಷಾಂ ಭೇದಃ ಕಥಂಚನ ॥ ೨೮ ॥**

**ನ ವಿಶೇಷೋ ಗುಣೈಃ ಸರ್ವೈಃ ಬಲಜ್ಞಾನಾದಿಭಿಃ ಕ್ವಚಿತ್**

**ಅರ್ಥ** :- **ಮತ್ಸ್ಯಕೂರ್ಮವರಾಹಾಃ** ಮತ್ಸ್ಯ, ಕೂರ್ಮ, ವರಾಹ ದೇವರು, **ಚ** ಮತ್ತು, **ಸಿಂಹವಾಮನಭಾರ್ಗವಾಃ** ನರಸಿಂಹ ವಾಮನ ಪರಶುರಾಮ ದೇವರು, **ರಾಘವಃ** ಶ್ರೀರಾಮಚಂದ್ರನು, **ಚ** ಮತ್ತು, **ಕೃಷ್ಣಬುದ್ಧೌ** ಕೃಷ್ಣ ಮತ್ತು ಬುದ್ಧರು, **ತಥಾ** ಹಾಗೆಯೆ, **ಕೃಷ್ಣದ್ವೈಪಾಯನಃ** ವೇದವ್ಯಾಸ ದೇವರು, **ಕಪಿಲಃ** ಕಪಿಲ ಋಷಿಯು, **ದತ್ತ ಋಷಭೌ** ದತ್ತ ಮತ್ತು ಋಷಭರು, **ಶಿಂಶುಮಾರಃ** ಶಿಂಶುಮಾರನು, **ರುಚೇಃ** ರುಚಿ ಪ್ರಜಾಪತಿಯ, **ಸುತಃ** ಮಗನಾದ ಯಜ್ಞನು, **ನಾರಾಯಣಃ** ಧರ್ಮಪ್ರಜಾಪತಿಯ ಮಗನಾದ ನಾರಾಯಣ ಋಷಿಯು, **ಹರಿಃ ಕೃಷ್ಣಃ** ಧರ್ಮಪ್ರಜಾಪತಿಯ ಮಗನಾದ ಹರಿ ಮತ್ತು ಕೃಷ್ಣನು, **ತಾಪಸಃ ಮನುಃ ಏವ** ತಾಪಸನೆಂಬ ಮನುವೂ, **ಚ** ಮತ್ತು, **ಮಹಿದಾಸಃ** ಐತರೇಯ ಮಹಿದಾಸನು, **ತಥಾ** ಹಾಗೆಯೇ, **ಹಂಸಃ** ಹಂಸನು,

**ಸ್ತ್ರೀರೂಪಃ** (ಸಮುದ್ರ ಮಥನ ಕಾಲದಲ್ಲಿ ಅವತರಿಸಿದ) ನಾರಾಯಣಿಯು, **ಹಯಶೀರ್ಷವಾನ್** ಹಯಗ್ರೀವನು; **ತಥೈವ** ಹಾಗೆಯೇ, **ವಡವಾವಕ್ತ್ರ** ವಡವಾಗ್ನಿಯು, **ಕಲ್ಕೀ** ಕಲ್ಕಿಯು, **ಪ್ರಭುಃ ಧನ್ವಂತರಿಃ** ಸಮರ್ಥನಾದ ಧನ್ವಂತರಿಯು, **ಇತ್ಯಾದ್ಯಾಃ** ಇವೇ ಮೊದಲಾದ ರೂಪಗಳು, **ಕೇವಲಃ** ಭೇದ ವಿಲ್ಲದ, **ವಿಷ್ಣುಃ** ವಿಷ್ಣು ರೂಪಗಳೇ, **ಏಷಾಂ** ಈ ರೂಪಗಳಿಗೆ, **ಕಥಂಚನ** ಯಾವ ಪ್ರಕಾರದಿಂದಲೂ, **ಭೇದಃ** ಭೇದವು, **ನ** ಇರುವುದಿಲ್ಲ, **ಕ್ವಚಿತ್** ಯಾವ ಅವತಾರದಲ್ಲಿಯೂ, **ಬಲಜ್ಞಾನಾದಿಭಿಃ** ಬಲ ಜ್ಞಾನವೇ ಮೊದಲಾದ, **ಸರ್ವೈಃ** ಎಲ್ಲ, **ಗುಣೈಃ** ಗುಣಗಳಿಂದ, **ವಿಶೇಷಃ** ವ್ಯತ್ಯಾಸವು, **ನ** ಇರುವುದಿಲ್ಲ.

**ತಾತ್ಪರ್ಯ** :- ಮತ್ಸ್ಯಾದಿ ದಶಾವತರಾಗಳು ಹಾಗೂ ವೇದವ್ಯಾಸ, ದತ್ತ, ಕಪಿಲ ಮೊದಲಾದ ಅವತಾರಗಳು ಸಾಕ್ಷಾತ್ ಭಗವದವತಾರಗಳೇ ಆಗಿವೆ. ಯಾವ ರೂಪದಲ್ಲಿಯೂ ಜ್ಞಾನಾದಿ ಯಾವ ಗುಣದಿಂದಲೂ ವ್ಯತ್ಯಾಸ ವಿರುವುದಿಲ್ಲ.॥ ೨೫-೨೮ ॥

**ಪೀಠಿಕೆ** :- ಭಗವಂತನ ವಿಶೇಷಾವೇಶ ಮತ್ತು ಕಿಂಚಿದಾವೇಶ ಉಳ್ಳವರನ್ನು ಈಗ ತಿಳಿಸುತ್ತಾರೆ —

**ಶ್ರೀರ್ಬ್ರಹ್ಮರುದ್ರೌ ಶೇಷಶ್ಚ ವೀಂದ್ರೇದ್ರೌ ಕಾಮ ಏವ ಚ ॥ ೨೯ ॥**

**ಕಾಮಪುತ್ರೋಽನಿರುದ್ಧಶ್ಚ ಸೂರ್ಯಶ್ಚಂದ್ರೋ ಬೃಹಸ್ಪತಿಃ**
**ಧರ್ಮ ಏಷಾಂ ತಥಾ ಭಾರ್ಯಾ ದಕ್ಷಾದ್ಯಾ ಮನವಸ್ತಥಾ ॥ ೩೦ ॥**

**ಮನುಪುತ್ರಾಶ್ಚ ಋಷಯೋ ನಾರದಃ ಪರ್ವತಸ್ತಥಾ**
**ಕಶ್ಯಪಃ ಸನಕಾದ್ಯಾಶ್ಚ ವಹ್ನ್ಯಾದ್ಯಾಶ್ಚೈವ ದೇವತಾಃ ॥ ೩೧ ॥**

**ಭರತಃ ಕಾರ್ತವೀರ್ಯಶ್ಚ ವೈನ್ಯಾದ್ಯಾಶ್ಚಕ್ರವರ್ತಿನಃ**
**ಗಯಶ್ಚ ಲಕ್ಷ್ಮಣಾದ್ಯಾಶ್ಚ ತ್ರಯೋ ರೋಹಿಣಿನಂದನಃ ॥ ೩೨ ॥**

**ಪ್ರದ್ಯುಮ್ನೋ ರೌಕ್ಮಿಣೇಯಶ್ಚ ತತ್ಪುತ್ರಶ್ಚಾನಿರುದ್ಧಕಃ**
**ನರಃ ಫಲ್ಗುನ ಇತ್ಯಾದ್ಯಾ ವಿಶೇಷಾವೇಶಿನೋ ಹರೇಃ ॥ ೩೩ ॥**

**ವಾಲಿಸಾಂಬಾದಯಶ್ಚೈವ ಕಿಂಚಿದಾವೇಶಿನೋ ಹರೇಃ ।**

**ಅರ್ಥ** :- **ಶ್ರೀಃ** ಲಕ್ಷ್ಮೀದೇವಿಯು, **ಬ್ರಹ್ಮರುದ್ರೌ** ಬ್ರಹ್ಮ ಮತ್ತು ರುದ್ರರು, **ಚ** ಮತ್ತು, **ಶೇಷಃ** ಶೇಷದೇವರು, **ವೀಂದ್ರೇಂದ್ರೌ** ಗರುಡ ಮತ್ತು ಇಂದ್ರರು, **ಚ** ಮತ್ತು, **ಕಾಮಃ** ಏವ ಮನ್ಮಥನೂ, **ಕಾಮಪುತ್ರಃ** ಮನ್ಮಥನ ಮಗನಾದ, **ಅನಿರುದ್ಧಃ** ಅನಿರುದ್ಧನು, **ಸೂರ್ಯಃ** ಸೂರ್ಯನು, **ಚಂದ್ರಃ** ಚಂದ್ರನು, **ಬೃಹಸ್ಪತಿಃ** ದೇವಗುರು ಬೃಹಸ್ಪತಾಚಾರ್ಯರು, **ಧರ್ಮ** ಯಮ ಧರ್ಮ ರಾಜನು, **ತಥಾ** ಹಾಗೆಯೇ, **ಏಷಾಂ** ಈ ಬ್ರಹ್ಮಾದಿಗಳ, **ಭಾರ್ಯಾಃ** ಪತ್ನಿಯರು, **ತಥಾ** ಹಾಗೆಯೇ, **ದಕ್ಷಾದ್ಯಾಃ** ದಕ್ಷನೇ ಮೊದಲಾದ ಪ್ರಜಾಪತಿ ಗಳು **ಮನವಃ** ಸ್ವಾಯಂಭುವಾದಿ ಮನುಗಳು, **ಚ** ಮತ್ತು, **ಮನುಪುತ್ರಾಃ** ಮನುಗಳ ಮಕ್ಕಳು, **ಋಷಯಃ** ಋಷಿಗಳಾದ, **ನಾರದಃ** ನಾರದರು, **ಪರ್ವತಃ** ಪರ್ವತರು, **ತಥಾ** ಹಾಗೆಯೇ, **ಕಶ್ಯಪಃ** ಕಶ್ಯಪರು, **ಚ** ಮತ್ತು, **ಸನಕಾದ್ಯಾಃ** ಸನಕಾದಿಗಳು, **ಚ** ಮತ್ತು, **ವಹ್ನ್ಯಾದ್ಯಾ** ಏವ **ದೇವತಾಃ** ವಹ್ನಿ ಮೊದಲಾದ ದೇವತೆಗಳೂ, **ಚಕ್ರವರ್ತಿನಃ** ಚಕ್ರವರ್ತಿಗಳಾದ, **ಭರತಃ** ಭರತನು, **ಕಾರ್ತವೀರ್ಯಃ** ಕಾರ್ತವೀರ್ಯಾರ್ಜುನನು, **ಚ** ಮತ್ತು, **ವೈನ್ಯಾದ್ಯಾಃ** ವೇನಪುತ್ರನಾದ ಪೃಥುವೇ ಮೊದಲಾದವರೂ, **ಚ** ಮತ್ತು, **ಗಯಃ** ಗಯನು, **ಚ** ಮತ್ತು, **ಲಕ್ಷ್ಮಣಾದ್ಯಾಃ** ಲಕ್ಷ್ಮಣನೇ ಮೊದಲಾದ, **ತ್ರಯಃ** ಲಕ್ಷ್ಮಣ, ಭರತ, ಶತ್ರುಘ್ನ ಎಂದು ಮೂವರು, **ರೋಹಿಣೀನಂದನಃ** ರೋಹಿಣೀತನಯನಾದ ಬಲರಾಮನು, **ಚ** ಮತ್ತು, **ರೌಗ್ಮಿಣೇಯಃ** ರುಕ್ಮಿಣೀತನಯನಾದ, **ಪ್ರದ್ಯುಮ್ನಃ** ಪ್ರದ್ಯುಮ್ನನು, **ಚ** ಮತ್ತು, **ತತ್ಪುತ್ರಃ** ಆ ಪ್ರದ್ಯುಮ್ನ ಪುತ್ರನಾದ, **ಅನಿರುದ್ಧಕಃ** ಅನಿರುದ್ಧನು, **ನರಃ** ನರ ಋಷಿಯು, **ಫಲ್ಗುನಃ** ಅರ್ಜುನನು, **ಇತ್ಯಾದ್ಯಾಃ** ಇವರೇ ಮೊದಲಾದವರು, **ಹರೇಃ** ಭಗವಂತನ, **ವಿಶೇಷಾವೇಶಿನಃ** ವಿಶಿಷ್ಟವಾದ ಆವೇಶ ಉಳ್ಳವರು, **ವಾಲಿಸಾಂಬಾದಯಶ್ಚೈವ** ವಾಲಿ, ಸಾಂಬ ಮೊದಲಾದ ವರೂ ಕೂಡ, **ಹರೇಃ** ಭಗವಂತನ, **ಕಿಂಚಿದಾವೇಶಿನಃ** ಸ್ವಲ್ಪ ಆವೇಶವುಳ್ಳವರು.

**ವಿಶೇಷ ವಿಷಯ** :- 'ಕಾಮಪುತ್ರೋಽನಿರುದ್ಧಶ್ಚ' ಎಂಬಲ್ಲಿ ಭಗವತಾರ ಭೂತನಾದ ಅನಿರುದ್ಧನನ್ನಿಟ್ಟುಕೊಳ್ಳಬಾರದೆಂದು 'ಕಾಮಪುತ್ರಃ' ಎಂಬ ವಿಶೇಷಣ ವನ್ನು ಕೊಟ್ಟಿದ್ದಾರೆ. ಮೂಲರೂಪಿಯಾದ ಮನ್ಮಥನಿಂದ ಮೂಲರೂಪಿ ಅನಿರುದ್ಧನೊಬ್ಬನು ಹುಟ್ಟಿದ್ದಾನೆ. ಆ ಅನಿರುದ್ಧನನ್ನು ಇಲ್ಲಿಟ್ಟುಕೊಳ್ಳಬೇಕು.

ಪ್ರದ್ಯುಮ್ನೋ ರೌಗ್ಮಿಣೇಯಶ್ಚ ಎಂಬಲ್ಲಿಯೂ ಸಹ ಭಗವದವತಾರನಾದ ಪ್ರದ್ಯುಮ್ನನನ್ನು ಇಟ್ಟುಕೊಳ್ಳಬಾರದೆಂಬ ಉದ್ದೇಶ್ಯದಿಂದಲೇ 'ರೌಗ್ಮಿಣೇಯಃ' ಎಂದು ಹೇಳಿದ್ದಾರೆ.

'ತತ್ಪುತ್ರಶ್ಚಾನಿರುದ್ಧಕಃ' ಎಂಬಲ್ಲಿಯೂ ಮೂಲರೂಪಿ ಕಾಮನಿಂದ ಹುಟ್ಟಿದ ಮೂಲರೂಪಿ ಅನಿರುದ್ಧನಲ್ಲದೆ ಕೃಷ್ಣಪುತ್ರನಾದ ಪ್ರದ್ಯುಮ್ನನ ಮಗನಾದ ಅನಿರುದ್ಧನನ್ನು ಇಟ್ಟುಕೊಳ್ಳಬೇಕು. ಇದನ್ನು ಸೂಚಿಸಲೆಂದೇ 'ಸತ್ಪುತ್ರಃ' ಎಂದು ವಿಶೇಷಣ ಕೊಟ್ಟಿದ್ದಾರೆ. ॥ ೨೯-೩೩ ॥

**ಪೀಠಿಕೆ :-** ಬ್ರಹ್ಮದೇವರು ದೇವೋತ್ತಮರೆಂಬ ಪ್ರಮೇಯವನ್ನು 'ಯೋ ಯ ಏವ' ಎಂಬ ಶ್ಲೋಕದಿಂದ ಈವರೆಗೆ ಸಮರ್ಥಿಸಿ ಇದನ್ನು ಉಪಸಂಹಾರ ಮಾಡುತ್ತಾ ಮತ್ತೊಂದು ಪ್ರಮೇಯವನ್ನು ತಿಳಿಸುತ್ತಾರೆ —

**ತಸ್ಮಾತ್ ಬಲಪ್ರವೃತ್ತಸ್ಯ ರಾಮಕೃಷ್ಣಾತ್ಮನೋ ಹರೇಃ ॥ ೩೪ ॥**

**ಅಂತರಂಗಂ ಹನೂಮಾಂಶ್ಚ ಭೀಮಸ್ತತ್ಕಾರ್ಯಸಾಧಕೌ ।**

**ಅರ್ಥ :- ತಸ್ಮಾತ್** ಆದ್ದರಿಂದ, **ಬಲಪ್ರವೃತ್ತಸ್ಯ** ಬಲಕಾರ್ಯದಲ್ಲಿ ತೊಡಗಿದ, **ರಾಮಕೃಷ್ಣಾತ್ಮನಃ** ರಾಮ ಮತ್ತು ಕೃಷ್ಣಸ್ವರೂಪನಾದ, **ಹರೇಃ** ಭಗವಂತನಿಗೆ **ಭೀಮಃ** ಭೀಮನು, **ಹನೂಮಾಂಶ್ಚ** ಹನುಮಂತನೂ ಕೂಡ, **ಅಂತರಂಗಂ** ಮುಖ್ಯ ಅಂಗವಾಗುವ ಹಾಗೆ, **ತತ್ಕಾರ್ಯಸಾಧಕೌ** ಆ ಹರಿಯ ಕಾರ್ಯವನ್ನು ಸಾಧಿಸತಕ್ಕವರು.

**ತಾತ್ಪರ್ಯ :-** ದೇವಾಂಶರಾದ ಕ್ಷತ್ರಿಯರಲ್ಲಿ ಬಲಾಧಿಕ್ಯವಿದ್ದಲ್ಲಿ ಜ್ಞಾನಾದಿ ಗುಣಾಧಿಕ್ಯವಿರುತ್ತದೆಂಬ ನಿಯಮದ ಪ್ರಕಾರ ಉತ್ತಮರಾಗಿ ಇರುವುದರಿಂದ, ಭೀಮ ಮತ್ತು ಹನುಮಂತರು ಬಲಕಾರ್ಯಪ್ರವೃತ್ತನಾದ ಭಗವಂತನಿಗೆ ಮುಖ್ಯ ಅಂಗವಾಗುವ ಹಾಗೆ ಕಾರ್ಯಸಾಧಕರಾಗಿದ್ದಾರೆ.

**ವಿಶೇಷ ವಿಷಯ :-** ಇಲ್ಲಿ ಭೀಮನು ಮಾತ್ರ ಪ್ರಸ್ತುತನಾಗಿದ್ದರೂ ಪ್ರಾಸಂಗಿಕವಾಗಿ ಹನುಮಂತನ ವಿಷಯವನ್ನು ಹೇಳಲಾಗಿದೆ. ॥ ೩೪ ॥

**ಪೀಠಿಕೆ** :- ಹಿಂದೆ ಬ್ರಹ್ಮದೇವರು ಉತ್ತಮರೆಂಬ ವಿಷಯವನ್ನು ಪ್ರಸ್ತಾಪಿಸಲಾಗಿತ್ತು. ಆದರೆ ಈಗ ತಸ್ಮಾತ್ ಎಂಬ ಶ್ಲೋಕದಲ್ಲಿ ಹನುಮ ಭೀಮರು ಪ್ರಧಾನಾಂಗ ಎಂದು ಉಪಸಂಹಾರ ಮಾಡುವುದು ಹೇಗೆ ಕೂಡುತ್ತದೆ ಎಂಬ ಶಂಕೆಯನ್ನು ಈ ಮುಂದಿನ ಶ್ಲೋಕದಲ್ಲಿ ಪರಿಹರಿಸುತ್ತಾರೆ –

**ಬ್ರಹ್ಮಾತ್ಮಕೋ ಯತೋ ವಾಯುಃ ಪದಂ ಬ್ರಾಹ್ಮಮಗಾತ್ ಪುರಾ ॥ ೩೫ ॥**

**ವಾಯೋರನ್ಯಸ್ಯ ನ ಬ್ರಾಹ್ಮಂ ಪದಂ ತಸ್ಮಾತ್ ಸ ಏವ ಸಃ ।**

**ಅರ್ಥ** :- **ಯತಃ** ಯಾವ ಕಾರಣದಿಂದ, **ಪುರಾ** ಪೂರ್ವಕಲ್ಪದಲ್ಲಿಯ, **ವಾಯುಃ** ವಾಯು ದೇವರು, **ಇದಾನೀಂ** ಈ ಕಲ್ಪದಲ್ಲಿ, **ಬ್ರಹ್ಮಾತ್ಮಕಃ** ಬ್ರಹ್ಮ ರೂಪಿಯಾಗಿ, **ಬ್ರಾಹ್ಮಂ ಪದಂ** ಬ್ರಹ್ಮಪದವಿಯನ್ನು, **ಅಗಾತ್** ಹೊಂದಿದರೋ, ಮತ್ತು **ವಾಯೋಃ ಅನ್ಯಸ್ಯ** ವಾಯುವನ್ನು ಬಿಟ್ಟು ಬೇರೆಯವರಿಗೆ, **ಬ್ರಾಹ್ಮಂ ಪದಂ** ಬ್ರಹ್ಮ ಪದವಿಯು, **ನ** ಇಲ್ಲವೋ, **ತಸ್ಮಾತ್** ಆದ್ದರಿಂದ, **ಸಃ ಏವ** ವಾಯುದೇವರೇ, **ಸಃ** ಬ್ರಹ್ಮದೇವರು.

**ತಾತ್ಪರ್ಯ** :- ಹಿಂದಿನ ಕಲ್ಪದ ವಾಯುದೇವರೇ ಈ ಕಲ್ಪದಲ್ಲಿ ಬ್ರಹ್ಮ ಪದವಿಗೆ ಬಂದು ಬ್ರಹ್ಮದೇವರಾಗುತ್ತಾರೆ. ವಾಯುದೇವರಲ್ಲದೇ ಬೇರಾರೂ ಬ್ರಹ್ಮನಾಗುವಂತಿಲ್ಲ. ಆದ್ದರಿಂದ ವಾಯುವೇ ಬ್ರಹ್ಮದೇವರು. ಆದ್ದರಿಂದ ಬ್ರಹ್ಮದೇವರು ಇತರ ದೇವತೆಗಳಲ್ಲಿ ಉತ್ತಮರು ಎಂದು ಉಪಕ್ರಮಿಸಿದ್ದ ವಿಷಯವನ್ನು ಹನುಮ ಭೀಮರಿಗೆ ಉತ್ತಮತ್ವವನ್ನು ಹೇಳುವ ಮೂಲಕ ಉಪಸಂಹಾರ ಮಾಡಿದ್ದರಿಂದ ಅಸಂಗತಿಯಿಲ್ಲ. ॥ ೩೫ ॥

**ಪೀಠಿಕೆ** :- ಹಿಂದೆ, ಭೀಮನು ಭಗವತ್ ಕಾರ್ಯದಲ್ಲಿ ಸಾಕ್ಷಾದಂಗ ಎಂದು ಹೇಳಲಾಗಿದೆ. ಈಗ ಅವನ ಪತ್ನಿಯಾದ ದ್ರೌಪದಿಯೂ ಭಗವತ್ ಕಾರ್ಯದಲ್ಲಿ ಸಾಕ್ಷಾದಂಗ ಎಂದು ಹೇಳುವುದಕ್ಕೋಸ್ಕರ ಮೊದಲು ದ್ರೌಪದಿಯು ನಾರಿಯರಲ್ಲಿ ಉತ್ತಮಳೆಂಬುದಕ್ಕೆ ಕಾರಣವನ್ನು ತಿಳಿಸುತ್ತಾರೆ–

**ಯತ್ರ ರೂಪಂ ತತ್ರ ಗುಣಾಃ ಭಕ್ತ್ಯಾದ್ಯಾಃ ಸ್ತ್ರೀಷು ನಿತ್ಯಶಃ ॥ ೩೬ ॥**

**ರೂಪಂ ಹಿ ಸ್ಥೂಲದೃಷ್ಟೀನಾಂ ದೃಶ್ಯಂ ವ್ಯಕ್ತಂ ತತೋ ಹಿ ತತ್ ।**
**ಪ್ರಾಯೋ ವೇತ್ತುಂ ಶಕ್ಯಂತೇ ಭಕ್ತ್ಯಾದ್ಯಾಃ ಸ್ತ್ರೀಷು ಯತ್ತತಃ ॥ ೩೭ ॥**

**ಯಾಸಾಂ ರೂಪಂ ಗುಣಾಸ್ತಾಸಾಂ ಭಕ್ತ್ಯಾದ್ಯಾ ಇತಿ ನಿಶ್ಚಯಃ ।**

**ಅರ್ಥ :- ಸ್ತ್ರೀಷು** ಸ್ತ್ರೀಯರಲ್ಲಿ **ಯತ್ರ** ಯಾರಲ್ಲಿ, **ರೂಪಂ** ಸೌಂದರ್ಯ ವಿದೆಯೋ, **ತತ್ರ** ಅವರಲ್ಲಿ **ನಿತ್ಯಶಃ** ಯಾವಾಗಲೂ, **ಭಕ್ತ್ಯಾದಾಃ** ಭಕ್ತಿಯೇ ಮೊದಲಾದ, **ಗುಣಾಃ** ಗುಣಗಳು ಇರುತ್ತವೆ. **ಸ್ಥೂಲದೃಷ್ಟೀನಾಂ** ಸ್ಥೂಲದೃಷ್ಟಿ ಯುಳ್ಳವರಿಂದ, **ರೂಪಂ** ಸೌಂದರ್ಯವೇ, **ವ್ಯಕ್ತಂ** ಸ್ಪಷ್ಟವಾಗಿ, **ದೃಶ್ಯಂ** ನೋಡಲ್ಪಡುವುದಷ್ಟೆ **ತತಃ** ಆದ್ದರಿಂದ, **ತತ್** ಸೌಂದರ್ಯವೇ, **ವ್ಯಾಪ್ಯಂ** ಭಕ್ತ್ಯಾದಿಗಳಿಗೆ ಜ್ಞಾಪಕವು.

**ಯತ್** ಯಾವ ಕಾರಣದಿಂದ, **ಪ್ರಾಯಃ** ಹೆಚ್ಚಾಗಿ, **ಸ್ತ್ರೀಷು** ಸ್ತ್ರೀಯರಲ್ಲಿ **ಭಕ್ತ್ಯಾದ್ಯಾಃ** ಭಕ್ತಿಯೇ ಮೊದಲಾದ ಗುಣಗಳು, **ವೇತ್ತುಂ** ತಿಳಿಯಲು, **ನ ಶಕ್ಯಂತೇ** ಸಾಧ್ಯವಾಗುವುದಿಲ್ಲವೋ, **ತತ್** ಆ ಕಾರಣದಿಂದ, **ಯಾಸಾಂ** ಯಾವ ಸ್ತ್ರೀಯರಿಗೆ, **ರೂಪಂ** ಸೌಂದರ್ಯವಿದೆಯೋ, **ತಾಸಾಂ** ಅವರಿಗೆ, **ಭಕ್ತ್ಯಾದ್ಯಾಃ ಗುಣಾಃ** ಭಕ್ತಿಯೇ ಮೊದಲಾದ ಗುಣಗಳು ಇರುತ್ತವೆ, **ಇತಿ** ಎಂಬುದಾಗಿ, **ನಿಶ್ಚಯಃ** ನಿರ್ಣಯವು.

**ತಾತ್ಪರ್ಯ :-** ಸ್ತ್ರೀಯರಲ್ಲಿ ಸೌಂದರ್ಯವಿದ್ದಲ್ಲಿ ಭಕ್ತ್ಯಾದಿ ಗುಣ ಗಳಿರುತ್ತವೆಂದು ತಿಳಿಯಬೇಕು. ಸೌಂದರ್ಯವೇ ಭಕ್ತ್ಯಾದಿಗುಣಗಳಿಗೆ ಜ್ಞಾಪಕ. ಏಕೆಂದರೆ ಸ್ಥೂಲದೃಷ್ಟಿಯವರಿಗೆ ಸೌಂದರ್ಯವೇ ಸ್ಪಷ್ಟವಾಗಿ ಕಾಣುವುದು ಹೊರತು, ಭಕ್ತ್ಯಾದಿಗಳಲ್ಲ. ಆದ್ದರಿಂದ ಸೌಂದರ್ಯದಿಂದಲೇ ಭಕ್ತಿ ಮೊದಲಾದ ಗುಣಗಳನ್ನು ಊಹಿಸಿ ತಿಳಿಯಬೇಕು.

**ತಚ್ಚ ನೈಸರ್ಗಿಕಂ ರೂಪಂ ದ್ವಾತ್ರಿಂಶಲ್ಲಕ್ಷಣೈರ್ಯುತಮ್ ॥ ೩೮ ॥**

**ನಾಲಕ್ಷಣಂ ವಪುರ್ಮಾತ್ರಂ ಗುಣಹೇತುಃ ಕಥಂಚನ ।**
**ಆಸುರೀಣಾಂ ವರಾದೇಸ್ತು ವಪುರ್ಮಾತ್ರಂ ಭವಿಷ್ಯತಿ ॥ ೩೯ ॥**

**ನ ಲಕ್ಷಣಾನ್ಯತಸ್ತಾಸಾಂ ನೈವ ಭಕ್ತಿಃ ಕಥಂಚನ ।**

**ಅರ್ಥ :- ದ್ವಾತ್ರಿಂಶಲ್ಲಕ್ಷಣೈಃ** ಮೂವತ್ತೆರಡು ಲಕ್ಷಣಗಳಿಂದ, **ಯುತಂ** ಕೂಡಿದ, **ತತ್** ಆ, **ನೈಸರ್ಗಿಕಂ ರೂಪಂ ಚ** ಸ್ವಾಭಾವಿಕ ರೂಪವೇ, **ಗುಣಹೇತುಃ** ಭಕ್ತ್ಯಾದಿ ಗುಣಗಳಿಗೆ ಜ್ಞಾಪಕವು, **ಅಲಕ್ಷಣಂ** ಮೂವತ್ತೆರಡು

ಲಕ್ಷಣಗಳಿಲ್ಲದ **ವಪುರ್ಮಾತ್ರಂ** ಕೇವಲ ಸುಂದರ ದೇಹವೆಂಬುದು, **ಕಥಂಚನ** ಯಾವ ಪ್ರಕಾರದಿಂದಲೂ, **ನ ಗುಣಹೇತುಃ** ಭಕ್ತ್ಯಾದಿಗಳಿಗೆ ಜ್ಞಾಪಕವಲ್ಲ, **ಆಸುರೀಣಾಂ** ಅಸುರ ಸ್ತ್ರೀಯರಿಗೆ, ವರಾದೇಸ್ತು ವರ ಅಥವಾ ಮಾಯೆ ಯಿಂದ, **ವಪುರ್ಮಾತ್ರಂ** ಸುಂದರ ದೇಹ ಮಾತ್ರ, **ಭವಿಷ್ಯತಿ** ಬರುತ್ತದೆ, **ನ ಲಕ್ಷಣಾನಿ** ಲಕ್ಷಣಗಳು ಇರುವುದಿಲ್ಲ, **ಅತಃ** ಆದ್ದರಿಂದ, **ತಾಸಾಂ** ಅವರಿಗೆ **ಕಥಂಚನ** ಯಾವ ರೀತಿಯಿಂದಲೂ, **ಭಕ್ತಿಃ** ಭಕ್ತಿಯು, **ನೈವ** ಇರುವುದೇ ಇಲ್ಲ.

**ತಾತ್ಪರ್ಯ :-** ಸ್ತ್ರೀಯರ ಸುಂದರ ದೇಹವು ಮೂವತ್ತೆರಡು ಲಕ್ಷಣ ಗಳಿಂದ ಕೂಡಿದ್ದಾಗಿ ಸ್ವಾಭಾವಿಕವಾಗಿದ್ದರೆ ಮಾತ್ರ ಭಕ್ತ್ಯಾದಿಗಳಿಗೆ ಜ್ಞಾಪಕ. ಅದಲ್ಲದೆ ಅಸುರ ಸ್ತ್ರೀಯರಿಗೆ ವರದಿಂದಲೋ ಮಾಯೆಯಿಂದಲೋ ಉಂಟಾಗುವ ಲಕ್ಷಣವಿಲ್ಲದ ಸುಂದರ ದೇಹ ಮಾತ್ರ ಭಕ್ತಾದಿಗಳಿಗೆ ಜ್ಞಾಪಕವಾಗುವುದಿಲ್ಲ. ಆದ್ದರಿಂದ ಅಸುರ ಸ್ತ್ರೀಯರಲ್ಲಿ ಸುಂದರ ದೇಹ ಕಂಡುಬಂದರೂ ಲಕ್ಷಣಗಳಿರುವುದಿಲ್ಲವಾದ್ದರಿಂದ ಭಕ್ತ್ಯಾದಿಗಳಿರುವುದಿಲ್ಲ ಎಂದೇ ತಿಳಿಯಬೇಕು.

**ತಸ್ಮಾತ್ ರೂಪಗುಣೋದಾರಾ ಜಾನಕೀ ರುಕ್ಮಿಣೀ ತಥಾ ॥ ೪೦ ॥**

**ಸತ್ಯಭಾಮೇತ್ಯಾದಿರೂಪಾ ಶ್ರೀಃ ಸರ್ವಪರಮಾ ಮತಾ ।**
**ತತಃ ಪಶ್ಚಾತ್ ದ್ರೌಪದೀ ಚ ಸರ್ವಾಭ್ಯೋ ರೂಪತೋ ವರಾ ॥ ೪೧ ॥**

**ಭೂಭಾರಕ್ಷಪಣೇ ಸಾಕ್ಷಾದಂಗಂ ಭೀಮವದೀಶಿತುಃ ।**

**ಅರ್ಥ :- ತಸ್ಮಾತ್** ಆದ್ದರಿಂದ, **ರೂಪಗುಣೋದಾರಾ** ರೂಪ ಮತ್ತು ಭಕ್ತ್ಯಾದಿ ಗುಣಗಳಿಂದ ಉತ್ತಮಳಾದ, **ಜಾನಕೀ** ಸೀತೆಯು, **ರುಕ್ಮಿಣೀ** ರುಗ್ಮಿಣಿಯು, **ತಥಾ** ಹಾಗೆಯೇ, **ಸತ್ಯಭಾಮಾ ಇತ್ಯಾದಿರೂಪಾ** ಸತ್ಯ ಭಾಮೆಯು ಇವೇ ಮೊದಲಾದ ರೂಪವುಳ್ಳ, **ಶ್ರೀಃ** ಲಕ್ಷ್ಮೀದೇವಿಯು, **ಸರ್ವ ಪರಮಾ** ಎಲ್ಲ ಸ್ತ್ರೀಯರಿಗಿಂತ ಉತ್ತಮಳೆಂದು, **ಮತಾ** ಸಮ್ಮತಳು, **ತತಃ ಪಶ್ಚಾತ್** ಆ ಲಕ್ಷ್ಮೀದೇವಿಯ ನಂತರ, **ದ್ರೌಪದೀ ಚ** ದ್ರೌಪದಿಯೂ ಕೂಡ, **ರೂಪತಃ** ಸೌಂದರ್ಯಾಧಿಕ್ಯವಿರುವುದರಿಂದ, **ಸರ್ವಾಭ್ಯಃ** ಎಲ್ಲ ಸ್ತ್ರೀಯರಿಗಿಂತ, **ವರಾ** ಉತ್ತಮಳು, **ಭೂಭಾರ ಕ್ಷಪಣೇ** ಭೂಮಿಗೆ ಭಾರವೆನಿಸಿದ ದೈತ್ಯರ ಸಂಹಾರಕಾರ್ಯದಲ್ಲಿ, **ಭೀಮವತ್** ಭೀಮನಂತೆ, **ಈಶಿತುಃ** ಭಗವಂತನಿಗೆ, **ಸಾಕ್ಷಾದಂಗಂ** ಪ್ರಧಾನ ಅಂಗಭೂತಳು (ಸೇವಕಳು).

**ತಾತ್ಪರ್ಯ** :- ಸ್ತ್ರೀಯರಲ್ಲಿ ಮೂವತ್ತೆರಡು ಲಕ್ಷಣಗಳಿಂದ ಕೂಡಿದ ರೂಪವು ಅಧಿಕವಾಗಿದ್ದಲ್ಲಿ ಗುಣಾಧಿಕ್ಯವಿರುತ್ತದೆ. ಗುಣಾಧಿಕ್ಯವುಳ್ಳವರೇ ಉತ್ತಮರು ಎಂಬ ನಿಯಮವಿರುವುದರಿಂದ ಇಂತಹ ರೂಪ ಮತ್ತು ಗುಣಾಧಿಕ್ಯವುಳ್ಳ ಸೀತಾ ರುಕ್ಮಿಣೀ ಸತ್ಯಭಾಮಾ ಮೊದಲಾದ ರೂಪವುಳ್ಳ ಲಕ್ಷ್ಮಿಯು ಸರ್ವನಾರಿಯರಲ್ಲಿ ಶ್ರೇಷ್ಠಳು. ಅನಂತರ ಸೌಂದರ್ಯಾಧಿಕ್ಯ ನಿಮಿತ್ತದಿಂದಲೇ ದ್ರೌಪದಿಯೂ ಶ್ರೇಷ್ಠಳು. ಆದ್ದರಿಂದಲೇ ಭೀಮನಂತೆಯೇ ಭೂಭಾರಹರಣ ಕಾರ್ಯದಲ್ಲಿ ಭಗವಂತನಿಗೆ ಪ್ರಧಾನಾಂಗಳೂ, (ಪ್ರಧಾನ ಸೇವಕಳೂ). ಆಗಿದ್ದಾಳೆ.

**ಹಂತಾ ಚ ವೈರಹೇತುಶ್ಚ ಭೀಮಃ ಪಾಪಜನಸ್ಯ ತು ॥ ೪೨ ॥**

**ದ್ರೌಪದೀ ವೈರಹೇತುಃ ಸಾ ತಸ್ಮಾದ್ ಭೀಮಾದನಂತರಾ ।**

**ಅರ್ಥ** :- **ಭೀಮಃ** ಭೀಮನು, **ಪಾಪಜನಸ್ಯ** ಪಾಪಿಷ್ಠರಾದ ದುರ್ಯೋಧನಾದಿಗಳಿಗೆ, **ಹಂತಾ ಚ** ಸಂಹಾರಕನೂ, **ವೈರಹೇತುಶ್ಚ** ದ್ವೇಷಕ್ಕೆ ಕಾರಣನೂ ಆಗಿದ್ದಾನೆ. **ದ್ರೌಪದೀ ತು** ದ್ರೌಪದಿಯಾದರೂ, **ವೈರಹೇತುಃ** ಕೇವಲ ದ್ವೇಷಕ್ಕೆ ಕಾರಣಳಾಗಿದ್ದಾಳೆ. **ತಸ್ಮಾತ್** ಆದ್ದರಿಂದ, **ಸಾ** ಆ ದ್ರೌಪದಿಯು, **ಭೀಮಾತ್** ಭೀಮನಿಗಿಂತ, **ಅನಂತರಾ** ಅವರಳು.

**ತಾತ್ಪರ್ಯ** :- ಯದ್ಯಪಿ ಭೀಮ ಮತ್ತು ದ್ರೌಪದಿ ಇಬ್ಬರೂ ಭಗವಂತನ ಭೂಭಾರಹರಣ ಕಾರ್ಯದಲ್ಲಿ ಪ್ರಧಾನಾಂಗರು. ಆದರೆ ಭೀಮನು ದುರ್ಯೋಧನಾದಿಗಳಿಗೆ ದ್ವೇಷಬರಲು ಕಾರಣನೂ ಮತ್ತು ಸಂಹಾರಕನೂ ಆಗಿದ್ದಾನೆ. ದ್ರೌಪದಿಯು ದುರ್ಯೋಧನಾದಿಗಳ ದ್ವೇಷಕ್ಕೆ ಕಾರಣಳಾಗಿದ್ದಾಳೆಯೇ ಹೊರತು ಅವರ ಸಂಹಾರಕಳಲ್ಲ. ಆದ್ದರಿಂದ ಅವಳು ತಾರತಮ್ಯದಲ್ಲಿ ಭೀಮನಿಗಿಂತ ಅವರಳು.

**ವಿಶೇಷ ವಿಷಯ** :- ಭೀಮನು ಬಾಲ್ಯದಲ್ಲಿ ಮರದ ಮೇಲೇರಿದ ದುರ್ಯೋಧನಾದಿಗಳನ್ನು ಅನಾಯಾಸವಾಗಿ ಬೀಳುಸುತ್ತಿದ್ದ ಮತ್ತು ಹೊಡೆಯುತ್ತಿದ್ದ. ಈ ಕಾರಣದಿಂದ ಅವರಿಗೆ ದ್ವೇಷ ಉಂಟಾಗಲು ಭೀಮನು ನಿಮಿತ್ತ. ದ್ರೌಪದಿಯು ದುರ್ಯೋಧನಾದಿಗಳನ್ನು ತಿರಸ್ಕರಿಸಿ ಪಾಂಡವರನ್ನು ಸ್ವೀಕರಿಸಿದ್ದರಿಂದ ಮತ್ತು ದುರ್ಯೋಧನಾದಿಗಳ ಪತ್ನಿಯರಿಗಿಂತಲೂ ಕೋಟಿ

ಪಟ್ಟು ಹೆಚ್ಚು ಸುಂದರಿಯಾದ್ದರಿಂದಲೂ ದುರ್ಯೋಧನಾದಿಗಳ ಮನಸ್ಸಿನಲ್ಲಿ ದ್ವೇಷ ಉಂಟಾಗಲು ನಿಮಿತ್ತಳು. ಮತ್ತು ಸಭೆಯಲ್ಲಿ ಭೀಮನ ಎದುರಿಗೇ ದುರ್ಯೋಧನಾದಿಗಳು ದ್ರೌಪದೀಕೇಶಗ್ರಹಣ ಮಾಡಿದ್ದರಿಂದ ದ್ರೌಪದಿಯು ಸಂಹಾರಕನಾದ ಭೀಮನ ಮನಸ್ಸಿನಲ್ಲಿಯೂ ಕೌರವರ ಮೇಲೆ ದ್ವೇಷ ಉಂಟಾಗಲು ನಿಮಿತ್ತಳಾಗಿದ್ದಾಳೆ. ಆದ್ದರಿಂದ ಭೂಭಾರ ಭೂತನಾದ ದುರ್ಯೋಧನನ ಸಂಹಾರಕಾರ್ಯದಲ್ಲಿ ಇತರ ನಾರಿಯರಿಗಿಂತ ದ್ರೌಪದಿಯೇ ಪ್ರಧಾನಾಂಗಭೂತಳು.

**ಪೀಠಿಕೆ** :- ಭಗವತ್ ಕಾರ್ಯದಲ್ಲಿ ವಾಯುದೇವರ ಅನಂತರ ಶೇಷದೇವರು ಸಹಾಯಕರು. ಶೇಷದೇವರ ನಂತರ ಇಂದ್ರ, ಅನಂತರ ಇತರ ದೇವತೆಗಳು ಎಂಬ ಶಾಸ್ತ್ರರಹಸ್ಯವನ್ನು ಮಹಾಭಾರತದಲ್ಲಿರುವ ಬಲರಾಮಾದಿ ಗಳ ನಿದರ್ಶನದಿಂದ ತೋರಿಸುತ್ತಾರೆ —

**ಬಲದೇವಸ್ತತಃ ಪಶ್ಚಾತ್ ತತಃ ಪಶ್ಚಾಚ್ಚ ಫಲ್ಗುನಃ ॥ ೪೩ ॥**

**ನರಾವೇಶಾತ್' ಅನ್ಯಥಾ ತು ದ್ರೌಣಿಃ ಪಶ್ಚಾತ್ ತತೋಽಪರೇ ।**
**ರಾಮವಜ್ಜಾಂಬವತ್ಯಾದ್ಯಾಃ ಷಟ್ ತತೋ ರೇವತೀ ತಥಾ ॥ ೪೪ ॥**

**ಅರ್ಥ** :- **ತತಃ** ಭೀಮ ದ್ರೌಪದಿಯರ, **ಪಶ್ಚಾತ್** ಅನಂತರದಲ್ಲಿ (ತಾರತಮ್ಯದಲ್ಲಿ ಅವರಿಗಿಂತ ಕೆಳಗಿನ ಕಕ್ಷೆಯಲ್ಲಿ) **ಬಲದೇವಃ** ಶೇಷಾವತಾರಿ ಯಾದ ಬಲರಾಮನು. **ತತಃ ಪಶ್ಚಾತ್** ಬಲರಾಮನ ನಂತರ, **ನರಾವೇಶಾತ್** ಶೇಷಾವತಾರ ಭೂತನಾದ ನರಋಷಿಯ ಆವೇಶ ನಿಮಿತ್ತದಿಂದ, **ಫಲ್ಗುನಃ** ಅರ್ಜುನನು, **ಅಂಗಂ** ಹರಿಕಾರ್ಯದಲ್ಲಿ ಸಹಾಯಕರು (ಸೇವಕರು), **ಅನ್ಯಥಾ** ನರಾವೇಶವನ್ನಪೇಕ್ಷಿಸದೇ ಸ್ವರೂಪ ವಿಚಾರಮಾಡಿದಾಗ, **ಪಶ್ಚಾತ್** ಬಲ ರಾಮನ ನಂತರ **ದ್ರೌಣಿಃ** ರುದ್ರಾಂಶರಾದ ಅಶ್ವತ್ಥಾಮಾಚಾರ್ಯರು, **ಅಂಗಂ** ಹರಿಕಾರ್ಯದಲ್ಲಿ ಸಹಾಯಕರು (ಸೇವಕರು), **ತತಃ** ಅಶ್ವತ್ಥಾಮರ ನಂತರ **ಅಪರೇ** ಅರ್ಜುನಾದಿಗಳು ಸಹಾಯಕರು, **ಜಾಂಬವತ್ಯಾದ್ಯಾಃ** ಜಾಂಬವತಿ ಮೊದಲಾದ, **ಷಟ್** ಆರುಮಂದಿ ಕೃಷ್ಣಮಹಿಷಿಯರು, **ರಾಮವತ್** ಬಲರಾಮ ನಂತೆ ಸಹಾಯಕರು, **ತತಃ** ಷಣ್ಮಹಿಷಿಯರ ನಂತರ, **ರೇವತೀ** ಬಲರಾಮನ ಪತ್ನಿಯಾದ, ರೇವತಿಯು, **ತಥಾ** ಸಹಾಯಕಳು.

**ತಾತ್ಪರ್ಯ** :- ಭೀಮ ದ್ರೌಪದಿಯರ ನಂತರ ಕಕ್ಷೆಯಲ್ಲಿ ಶೇಷಾವತಾರನಾದ ಬಲರಾಮನು ಭಗವತ್ ಕಾರ್ಯದಲ್ಲಿ ಸೇವಕನಾಗುವನು. ಅನಂತರ ಶೇಷಾವತಾರಿ ನರನ ಆವೇಶ ನಿಮಿತ್ತದಿಂದಾಗಿ ಅರ್ಜುನನು ಸೇವಕ. ಆವೇಶ ಬಿಟ್ಟು ಸ್ವರೂಪ ವಿಚಾರಮಾಡಿದರೆ ಬಲರಾಮನ ನಂತರ ರುದ್ರಾಂಶರಾದ ಅಶ್ವತ್ಥಾಮಾಚಾರ್ಯರು, ಅವರ ನಂತರ ಅರ್ಜುನಾದಿಗಳು. ಜಾಂಬವತ್ಯಾದಿ ಷಣ್ಮಹಿಷಿಯರು ಬಲರಾಮನಂತೆ. ಅವರ ನಂತರ ಬಲರಾಮನ ಪತ್ನಿ ರೇವತಿ ಸೇವಕಳು ಎಂದು ತಿಳಯಬೇಕು.

**ವಿಶೇಷ ವಿಷಯ** :- ಶೇಷರುದ್ರರೂ ಸಮಾನರೇ ಆಗಿದ್ದಾರೆ. ಆದರೂ ಶೇಷಾವತಾರಿ ಬಲರಾಮನಲ್ಲಿ ಹರಿಯ ಶುಕ್ಲಕೇಶಾವೇಶ ಇರುವ ಪ್ರಯುಕ್ತ ರುದ್ರಾಂಶರಾದ ಅಶ್ವತ್ಥಾಮರಿಗಿಂತ ಬಲರಾಮ ಅಧಿಕ ಎಂದಿದ್ದಾರೆ.

**ಪೀಠಿಕೆ** :- ರಾಮಾಯಣ ಕಥೆಯ ತಾತ್ಪರ್ಯವನ್ನು ವಿಮರ್ಶೆ ಮಾಡಿದಾಗಲೂ ವಾಯು ಶೇಷಾದಿಗಳು ಈ ರೀತಿಯ ತಾರತಮ್ಯದಿಂದಲೇ ಹರಿಕಾರ್ಯದಲ್ಲಿ ಸೇವಕರಾಗಿದ್ದಾರೆಂದು ತಿಳಿದು ಬರುತ್ತದೆಂದು ತೋರಿಸುತ್ತಾರೆ —

**ಲಕ್ಷ್ಮಣೋ ಹನುಮತ್ಪಶ್ಚಾತ್ ತತೋ ಭರತವಾಲಿನೌ ।**
**ಶತ್ರುಘ್ನಸ್ತು ತತಃ ಪಶ್ಚಾತ್ ಸುಗ್ರೀವಾದ್ಯಾಸ್ತತೋಽವರಾಃ ॥ ೪೫ ॥**

**ಅರ್ಥ** :- **ಹನುಮತ್ಪಶ್ಚಾತ್** ಹನುಮಂತನ ಅನಂತರದಲ್ಲಿ (ಹನುಮಂತನಿಗಿಂತ ತಾರತಮ್ಯದಲ್ಲಿ ಅವರನಾಗಿ), **ಲಕ್ಷ್ಮಣಃ** ಲಕ್ಷ್ಮಣನು, **ತತಃ** ಅನಂತರ ಕಕ್ಷೆಯಲ್ಲಿ **ಭರತವಾಲಿನೌ** ಭರತ ಮತ್ತು ವಾಲಿಗಳು, **ಶತ್ರುಘ್ನಸ್ತು** ಶತ್ರುಘ್ನನಾದರೂ, **ತತಃ ಪಶ್ಚಾತ್** ಭರತವಾಲಿಗಳಿಗಿಂತ ಅವರನು, **ತತಃ** ಆ ಶತ್ರುಘ್ನನಿಗಿಂತ, **ಸುಗ್ರೀವಾದ್ಯಾಃ** ಸುಗ್ರೀವ ಮೊದಲಾದವರು, **ಅವರಾಃ** ಕೆಳಗಿನವರು.

**ವಿಶೇಷ ವಿಷಯ** :- ಈ ಶ್ಲೋಕದಲ್ಲಿ ಹನುಮಂತನು ಪ್ರಧಾನಾಂಗ ಎಂದು ಮುಖತಃ ಹೇಳದಿದ್ದರೂ 'ಹನುಮತ್ಪಶ್ಚಾತ್ ಲಕ್ಷ್ಮಣಃ' (ಹನುಮಂತನ ಅನಂತರದಲ್ಲಿ ಲಕ್ಷ್ಮಣ) ಎಂದು ಹೇಳಿದ್ದರಿಂದಲೇ ಹನುಮಂತನು ಪ್ರಧಾನಾಂಗ ಎಂದು ಆಚಾರ್ಯರಿಗೆ ಅಭಿಪ್ರೇತವಾಗಿದೆಯೆಂದು ತಿಳಿಯುವುದು.

ಗಂಧಮಾದನವನ್ನು ತಂದದ್ದು ಸಮುದ್ರ ದಾಟಿದ್ದು ಇವೇ ಮೊದಲಾದ ನಿದರ್ಶನದಿಂದ ಹನುಮಂತನು ಹರಿಸೇವಾ ರೂಪಕಾರ್ಯದಲ್ಲಿ ಪ್ರಧಾನಾಂಗ ವೆಂಬುದು ಪ್ರಸಿದ್ಧ ಎಂದು ಸೂಚಿಸಲು ಪ್ರತ್ಯೇಕವಾಗಿ ಹೇಳಿಲ್ಲ.

**''ಗೋಷ್ಪದೀಕೃತವಾರಾಶಿಂ ಮಶಕೀಕೃತ ರಾಕ್ಷಸಂ ।**
**ರಾಮಾಯಣ ಮಹಾಮಾಲಾರತ್ನಂ ವಂದೇಽನಿಲಾತ್ಮಜಮ್ ॥''**

ಸಮುದ್ರವನ್ನು ಗೋಷ್ಪದದಂತೆ (ನೀರು ನಿಂತ ಸಣ್ಣ ತಗ್ಗಿನಂತೆ) ಮಾಡಿದ, ರಾಕ್ಷಸರನ್ನು ಸೊಳ್ಳೆಗಳಂತೆ ಕಂಡಿರುವ, ರಾಮಾಯಣವೆಂಬ ಮಹಾಮಾಲೆಯ ರತ್ನದಂತಿರುವ ವಾಯುಪುತ್ರ ಹನುಮಂತನನ್ನು ನಮಿಸುವೆ ಎಂಬ ಕಥಾ ಸಂಗ್ರಾಹಕ ಸರ್ಗದಲ್ಲಿಯ ವಾಲ್ಮೀಕಿಗಳ ಮಾತಿನಿಂದಲೂ ಹನುಮಂತನು ರಾಮಕಾರ್ಯದಲ್ಲಿ ಪ್ರಧಾನಾಂಗನೆಂಬುವುದು ಸ್ಪಷ್ಟವಾಗುವುದು.

ಕಾಮ, ಮತ್ತು ಇಂದ್ರರೇ ಭರತ ಮತ್ತು ವಾಲಿಗಳಾದ್ದರಿಂದ, ಇಂದ್ರ ಕಾಮರು ಸಮಾನರಾದ್ದರಿಂದ ಅವರ ಅಂಶರಾದ ಭರತ ವಾಲಿಗಳನ್ನು ಒಂದೇ ಸಮಸ್ತ ಪದದಿಂದ (ಭರತವಾಲಿನೌ) ನಿರ್ದೇಶಿಸಿದ್ದಾರೆ. ಅವರಿಬ್ಬರಲ್ಲಿ ವಾಲಿಯು ಬೇಗನೇ ಮೃತನಾದ್ದರಿಂದ ಹೆಚ್ಚುಸೇವೆ ಮಾಡಿಲ್ಲ. ಭರತನು ಮಾತ್ರ ಸ್ವರ್ಗಾರೋಹಣ ಪರ್ಯಂತ ರಾಮನ ಸೇವೆ ಮಾಡಿದ್ದರಿಂದ ಅವನಲ್ಲಿರುವ ಈ ವೈಶಿಷ್ಟ್ಯವನ್ನು ತೋರಿಸಲು ''ಭರತವಾಲಿನೌ'' ಎಂಬ ಪದದಲ್ಲಿ ಮೊದಲು ಭರತನನ್ನು ನಿರ್ದೇಶಿಸಿದ್ದಾರೆ.

**ಪೀಠಿಕೆ :-** ಭರತನಷ್ಟು ರಾಮದೇವರ ಸೇವೆಯನ್ನು ವಾಲಿಯು ಮಾಡಿಲ್ಲ ವಾದ್ದರಿಂದ ಅವರಿಬ್ಬರೂ ಹರಿಸೇವೆಯ ಕಾರ್ಯದಲ್ಲಿ ಹೇಗೆ ಸಮಾನ ಅಂಗಭೂತರಾಗುತ್ತಾರೆ ಎಂಬ ಸಂದೇಹವನ್ನು ಪರಿಹರಿಸುತ್ತಾರೆ —

**ರಾಮಕಾರ್ಯಂ ತು ಯೈಃ ಸಮ್ಯಕ್ ಸ್ವಯೋಗ್ಯಂ ನ ಕೃತಂ ಪುರಾ ।**
**ತೈಃ ಪೂರಿತಂ ತತ್ ಕೃಷ್ಣಾಯ ಬೀಭತ್ಸ್ವಾದ್ಯೈಃ ಸಮಂತತಃ ॥ ೪೬ ॥**

**ಅರ್ಥ :- ಯೈಃ ತು** ಯಾವ ವಾಲಿ ಮೊದಲಾದವರಿಂದಲಾದರೂ, **ಪುರಾ** ಹಿಂದೆ ರಾಮಾವತಾರ ಕಾಲದಲ್ಲಿ, **ಸ್ವಯೋಗ್ಯಂ** ತಮಗೆ ಯೋಗ್ಯವಾದ, **ರಾಮಕಾರ್ಯಂ** ರಾಮನ ಸೇವಾರೂಪವಾದ ಕಾರ್ಯವು, **ಸಮ್ಯಕ್** ಚೆನ್ನಾಗಿ,

ನ **ಕೃತಂ** ಮಾಡಲ್ಪಟ್ಟಿಲ್ಲವೋ, **ತೈಃ** ಅವರಿಂದ **ಬೀಭತ್ಸ್ವಾದ್ಯೈಃ** ಅರ್ಜುನ ಮೊದಲಾದ ರೂಪಗಳಿಂದ, **ಕೃಷ್ಣಾಯ** ಕೃಷ್ಣನಿಗೋಸ್ಕರವಾಗಿ, **ತತ್** ಆ ಸೇವಾ ರೂಪವಾದ ಕಾರ್ಯವು ಸಮಂತತಃ ಪೂರ್ಣವಾಗಿ, **ಪೂರಿತಃ** ಮುಗಿಸಲ್ಪಟ್ಟಿತು.

**ತಾತ್ಪರ್ಯ** :- ವಾಲಿ ಮೊದಲಾದವರು ರಾಮಾವತಾರ ಕಾರ್ಯದಲ್ಲಿ ಬೇಗ ಮರಣಹೊಂದಿದ್ದರಿಂದ ರಾಮನ ಸೇವೆಯನ್ನು ಯೋಗ್ಯತಾನು ಗುಣವಾಗಿ ಪೂರ್ಣವಾಗಿ ಮಾಡಿಲ್ಲ. ಆದರೂ ಅವರೇ ಅರ್ಜುನಾದಿಗಳಾಗಿ ಕೃಷ್ಣನ ಸೇವೆ ಮಾಡಿ ಪೂರ್ತಿ ಮಾಡಿದ್ದಾರೆ.

**ವಿಶೇಷ ವಿಷಯ** :- ಸಂಪಾದಿಸಿದ ಲಕ್ಷ ರೂಪಾಯಿಗಳಿಗೂ ಮುಂದೆ ಸಂಪಾದಿಸಲಿರುವ ಲಕ್ಷ ರೂಪಾಯಿಗಳಿಗೂ ಸಾಮ್ಯವಿದೆ. ಆದರಂತೆ ರಾಮಾವ ತಾರದಲ್ಲಿ ಭರತನು ಪೂರ್ಣ ಸೇವೆ ಮಾಡಿದ್ದರೂ, ವಾಲಿಯು ಅರ್ಜುನನಾಗಿ ಕೃಷ್ಣಾವತಾರ ಕಾಲದಲ್ಲಿ ಬಾಕಿ ಉಳಿದ ಸೇವೆಯನ್ನು ಮಾಡುವುದರಿಂದ ಇಬ್ಬರೂ ಹರಿಸೇವಾ ಕಾರ್ಯದಲ್ಲಿ ಸಮಾನರೇ ಆಗಿದ್ದಾರೆ.

ಬೀಭತ್ಸ್ವಾದ್ಯೈಃ ಎಂಬಲ್ಲಿ 'ಆದ್ಯ' ಪದದಿಂದ ದ್ರೋಣಾದಿಗಳನ್ನಿಟ್ಟು ಕೊಳ್ಳಬೇಕು. ಇಂದ್ರ ಮತ್ತು ಬೃಹಸ್ಪತ್ಯಾಚಾರ್ಯರು ವಾಲಿ ಮತ್ತು ತಾರ ರೂಪ ದಿಂದ ಸ್ವಯೋಗ್ಯತಾನುಸಾರ ಪೂರ್ತಿಯಾಗಿ ರಾಮನ ಸೇವೆಯನ್ನು ಮಾಡಿಲ್ಲ ವಾದ್ದರಿಂದ ಅವರೇ ಕೃಷ್ಣಾವತಾರ ಕಾಲದಲ್ಲಿ ಅರ್ಜುನ ರೂಪದಿಂದ ಮತ್ತು ದ್ರೋಣ ರೂಪದಿಂದ ಕೃಷ್ಣನಿಗೆ ಮಹಾ ಸೇವೆಯನ್ನು ಮಾಡಿದ್ದಾರೆಂದು ಅಭಿಪ್ರಾಯ.

**ಅಧಿಕಂ ಯೈಃ ಕೃತಂ ತತ್ರ ತೈರೂನಂ ಕೃತಮತ್ರ ತತ್ ।**
**ಕರ್ಣಾದ್ಯೈರಧಿಕಂ ಯೈಸ್ತು ಪ್ರಾದುರ್ಭಾವದ್ವಯೇ ಕೃತಮ್ ॥ ೪೭ ॥**

**ವಿವಿದಾದ್ಯೈರ್ಹಿ ತೈಃ ಪಶ್ಚಾತ್ ವಿಪ್ರತೀಪಂ ಕೃತಂ ಹರೇ ॥**

**ಅರ್ಥ** :- **ಯೈಃ** ಯಾವ ಲಕ್ಷ್ಮಣ ಅಂಗದಾದಿಗಳಿಂದ, **ತತ್ರ** ರಾಮಾವತಾರ ಕಾಲದಲ್ಲಿ, **ಅಧಿಕಂ** ಹೆಚ್ಚಾಗಿ, **ಕೃತಂ** ಮಾಡಲ್ಪಟ್ಟಿದೆಯೋ, **ತೈಃ** ಅವರಿಂದ, **ಅತ್ರ** ಕೃಷ್ಣಾವತಾರಕಾಲದಲ್ಲಿ, **ತತ್** ಹರಿಸೇವಾ ಕಾರ್ಯವು, **ಊನಂ ಕೃತಂ** ಸ್ವಲ್ಪವಾಗಿ ಮಾಡಲ್ಪಟ್ಟಿದೆ. **ಯೈಃ ಕರ್ಣಾದ್ಯೈಸ್ತು** ಯಾವ ಕರ್ಣಾದಿಗಳಿಂದಾದರೂ, **ಪ್ರಾದುರ್ಭಾವದ್ವಯೇ** ರಾಮ ಮತ್ತು ಕೃಷ್ಣ ಎಂಬ

ಗಂಧಮಾದನವನ್ನು ತಂದದ್ದು, ಸಮುದ್ರ ದಾಟಿದ್ದು ಇವೇ ಮೊದಲಾದ ನಿದರ್ಶನದಿಂದ ಹನುಮಂತನು ಹರಿಸೇವಾ ರೂಪಕಾರ್ಯದಲ್ಲಿ ಪ್ರಧಾನಾಂಗ ವೆಂಬುದು ಪ್ರಸಿದ್ಧ ಎಂದು ಸೂಚಿಸಲು ಪ್ರತ್ಯೇಕವಾಗಿ ಹೇಳಿಲ್ಲ.

**"ಗೋಷ್ಪದೀಕೃತವಾರಾಶಿಂ ಮಶಕೀಕೃತ ರಾಕ್ಷಸಂ ।**
**ರಾಮಾಯಣ ಮಹಾಮಾಲಾರತ್ನಂ ವಂದೇऽನಿಲಾತ್ಮಜಮ್ ॥"**

ಸಮುದ್ರವನ್ನು ಗೋಷ್ಪದದಂತೆ (ನೀರು ನಿಂತ ಸಣ್ಣ ತಗ್ಗಿನಂತೆ) ಮಾಡಿದ, ರಾಕ್ಷಸರನ್ನು ಸೊಳ್ಳೆಗಳಂತೆ ಕಂಡಿರುವ, ರಾಮಾಯಣವೆಂಬ ಮಹಾಮಾಲೆಯ ರತ್ನದಂತಿರುವ ವಾಯುಪುತ್ರ ಹನುಮಂತನನ್ನು ನಮಿಸುವೆ ಎಂಬ ಕಥಾ ಸಂಗ್ರಾಹಕ ಸರ್ಗದಲ್ಲಿಯ ವಾಲ್ಮೀಕಿಗಳ ಮಾತಿನಿಂದಲೂ ಹನುಮಂತನು ರಾಮಕಾರ್ಯದಲ್ಲಿ ಪ್ರಧಾನಾಂಗನೆಂಬುವುದು ಸ್ಪಷ್ಟವಾಗುವುದು.

ಕಾಮ, ಮತ್ತು ಇಂದ್ರರೇ ಭರತ ಮತ್ತು ವಾಲಿಗಳಾದ್ದರಿಂದ, ಇಂದ್ರ ಕಾಮರು ಸಮಾನರಾದ್ದರಿಂದ ಅವರ ಅಂಶರಾದ ಭರತ ವಾಲಿಗಳನ್ನು ಒಂದೇ ಸಮಸ್ತ ಪದದಿಂದ (ಭರತವಾಲಿನೌ) ನಿರ್ದೇಶಿಸಿದ್ದಾರೆ. ಅವರಿಬ್ಬರಲ್ಲಿ ವಾಲಿಯು ಬೇಗನೇ ಮೃತನಾದ್ದರಿಂದ ಹೆಚ್ಚುಸೇವೆ ಮಾಡಿಲ್ಲ, ಭರತನು ಮಾತ್ರ ಸ್ವರ್ಗಾರೋಹಣ ಪರ್ಯಂತ ರಾಮನ ಸೇವೆ ಮಾಡಿದ್ದರಿಂದ ಅವನಲ್ಲಿರುವ ಈ ವೈಶಿಷ್ಟ್ಯವನ್ನು ತೋರಿಸಲು "ಭರತವಾಲಿನೌ" ಎಂಬ ಪದದಲ್ಲಿ ಮೊದಲು ಭರತನನ್ನು ನಿರ್ದೇಶಿಸಿದ್ದಾರೆ.

**ಪೀಠಿಕೆ :-** ಭರತನಷ್ಟು ರಾಮದೇವರ ಸೇವೆಯನ್ನು ವಾಲಿಯು ಮಾಡಿಲ್ಲ ವಾದ್ದರಿಂದ ಅವರಿಬ್ಬರೂ ಹರಿಸೇವೆಯ ಕಾರ್ಯದಲ್ಲಿ ಹೇಗೆ ಸಮಾನ ಅಂಗಭೂತರಾಗುತ್ತಾರೆ ಎಂಬ ಸಂದೇಹವನ್ನು ಪರಿಹರಿಸುತ್ತಾರೆ —

**ರಾಮಕಾರ್ಯಂ ತು ಯೈಃ ಸಮ್ಯಕ್ ಸ್ವಯೋಗ್ಯಂ ನ ಕೃತಂ ಪುರಾ ।**
**ತೈಃ ಪೂರಿತಂ ತತ್ ಕೃಷ್ಣಾಯ ಬೀಭತ್ಸ್ವಾದ್ಯೈಃ ಸಮಂತತಃ ॥ ೪೬ ॥**

**ಅರ್ಥ :- ಯೈಃ ತು** ಯಾವ ವಾಲಿ ಮೊದಲಾದವರಿಂದಲಾದರೂ, **ಪುರಾ** ಹಿಂದೆ ರಾಮಾವತಾರ ಕಾಲದಲ್ಲಿ, **ಸ್ವಯೋಗ್ಯಂ** ತಮಗೆ ಯೋಗ್ಯವಾದ, **ರಾಮಕಾರ್ಯಂ** ರಾಮನ ಸೇವಾರೂಪವಾದ ಕಾರ್ಯವು, **ಸಮ್ಯಕ್** ಚೆನ್ನಾಗಿ,

ನ **ಕೃತಂ** ಮಾಡಲ್ಪಟ್ಟಿಲ್ಲವೋ, **ತೈಃ** ಅವರಿಂದ **ಬೀಭತ್ಸ್ವಾದ್ಯೈಃ** ಅರ್ಜುನ ಮೊದಲಾದ ರೂಪಗಳಿಂದ, **ಕೃಷ್ಣಾಯ** ಕೃಷ್ಣನಿಗೋಸ್ಕರವಾಗಿ, **ತತ್** ಆ ಸೇವಾ ರೂಪವಾದ ಕಾರ್ಯವು **ಸಮಂತತಃ** ಪೂರ್ಣವಾಗಿ, **ಪೂರಿತಃ** ಮುಗಿಸಲ್ಪಟ್ಟಿತು.

**ತಾತ್ಪರ್ಯ :-** ವಾಲಿ ಮೊದಲಾದವರು ರಾಮಾವತಾರ ಕಾರ್ಯದಲ್ಲಿ ಬೇಗ ಮರಣಹೊಂದಿದ್ದರಿಂದ ರಾಮನ ಸೇವೆಯನ್ನು ಯೋಗ್ಯತಾನು ಗುಣವಾಗಿ ಪೂರ್ಣವಾಗಿ ಮಾಡಿಲ್ಲ. ಆದರೂ ಅವರೇ ಅರ್ಜುನಾದಿಗಳಾಗಿ ಕೃಷ್ಣನ ಸೇವೆ ಮಾಡಿ ಪೂರ್ತಿ ಮಾಡಿದ್ದಾರೆ.

**ವಿಶೇಷ ವಿಷಯ :-** ಸಂಪಾದಿಸಿದ ಲಕ್ಷ ರೂಪಾಯಿಗಳಿಗೂ ಮುಂದೆ ಸಂಪಾದಿಸಲಿರುವ ಲಕ್ಷ ರೂಪಾಯಿಗಳಿಗೂ ಸಾಮ್ಯವಿದೆ. ಅದರಂತೆ ರಾಮಾವ ತಾರದಲ್ಲಿ ಭರತನು ಪೂರ್ಣ ಸೇವೆ ಮಾಡಿದ್ದರೂ, ವಾಲಿಯು ಅರ್ಜುನನಾಗಿ ಕೃಷ್ಣಾವತಾರ ಕಾಲದಲ್ಲಿ ಬಾಕಿ ಉಳಿದ ಸೇವೆಯನ್ನು ಮಾಡುವುದರಿಂದ ಇಬ್ಬರೂ ಹರಿಸೇವಾ ಕಾರ್ಯದಲ್ಲಿ ಸಮಾನರೇ ಆಗಿದ್ದಾರೆ.

ಬೀಭತ್ಸ್ವಾದ್ಯೈಃ ಎಂಬಲ್ಲಿ 'ಆದ್ಯ' ಪದದಿಂದ ದ್ರೋಣಾದಿಗಳನ್ನಿಟ್ಟು ಕೊಳ್ಳಬೇಕು. ಇಂದ್ರ ಮತ್ತು ಬೃಹಸ್ಪತ್ಯಾಚಾರ್ಯರು ವಾಲಿ ಮತ್ತು ತಾರ ರೂಪ ದಿಂದ ಸ್ವಯೋಗ್ಯತಾನುಸಾರ ಪೂರ್ತಿಯಾಗಿ ರಾಮನ ಸೇವೆಯನ್ನು ಮಾಡಿಲ್ಲ ವಾದ್ದರಿಂದ ಅವರೇ ಕೃಷ್ಣಾವತಾರ ಕಾಲದಲ್ಲಿ ಅರ್ಜುನ ರೂಪದಿಂದ ಮತ್ತು ದ್ರೋಣ ರೂಪದಿಂದ ಕೃಷ್ಣನಿಗೆ ಮಹಾ ಸೇವೆಯನ್ನು ಮಾಡಿದ್ದಾರೆಂದು ಅಭಿಪ್ರಾಯ.

**ಅಧಿಕಂ ಯೈಃ ಕೃತಂ ತತ್ರ ತೈರೂನಂ ಕೃತಮತ್ರ ತತ್ ।**
**ಕರ್ಣಾದ್ಯೈರಧಿಕಂ ಯೈಸ್ತು ಪ್ರಾದುರ್ಭಾವದ್ವಯೇ ಕೃತಮ್ ॥ ೪೭ ॥**

**ವಿವಿದಾದ್ಯೈರ್ಹಿ ತೈಃ ಪಶ್ಚಾತ್ ವಿಪ್ರತೀಪಂ ಕೃತಂ ಹರೇ ॥**

**ಅರ್ಥ :- ಯೈಃ** ಯಾವ ಲಕ್ಷ್ಮಣ ಅಂಗದಾದಿಗಳಿಂದ, **ತತ್ರ** ರಾಮಾವತಾರ ಕಾಲದಲ್ಲಿ, **ಅಧಿಕಂ** ಹೆಚ್ಚಾಗಿ, **ಕೃತಂ** ಮಾಡಲ್ಪಟ್ಟಿದೆಯೋ, **ತೈಃ** ಅವರಿಂದ, **ಅತ್ರ** ಕೃಷ್ಣಾವತಾರಕಾಲದಲ್ಲಿ, **ತತ್** ಹರಿಸೇವಾ ಕಾರ್ಯವು, **ಊನಂ ಕೃತಂ** ಸ್ವಲ್ಪವಾಗಿ ಮಾಡಲ್ಪಟ್ಟಿದೆ. **ಯೈಃ ಕರ್ಣಾದ್ಯೈಸ್ತು** ಯಾವ ಕರ್ಣಾದಿಗಳಿಂದಾದರೂ, **ಪ್ರಾದುರ್ಭಾವದ್ವಯೇ** ರಾಮ ಮತ್ತು ಕೃಷ್ಣ ಎಂಬ

ಎರಡು ಅವತಾರಗಳಲ್ಲಿ **ಅಧಿಕಂ ಕೃತಂ** ಹೆಚ್ಚು ಸೇವೆ ಮಾಡಲ್ಪಟ್ಟಿದೆಯೋ, **ತೈಃ** ಅವರೇ ಆದ, **ವಿವಿದಾದ್ಯೈಃ** ವಿವಿದ ಮೊದಲಾದವರಿಂದ, **ಪಶ್ಚಾತ್** ಅನಂತರ ಕಾಲದಲ್ಲಿ, **ಹರೇಃ** ಭಗವಂತನಿಗೆ, **ವಿಪ್ರತೀಪಂ** ವಿರೋಧವು, **ಕೃತಂ ಹಿ** ಮಾಡಲ್ಪಟ್ಟಿತಷ್ಟೆ.

**ತಾತ್ಪರ್ಯ** :- ಲಕ್ಷ್ಮಣ ಮತ್ತು ಅಂಗದಾದಿಗಳು ರಾಮಾಯಣ ಕಾಲದಲ್ಲಿ ಅಧಿಕ ಸೇವೆಯನ್ನು ಮಾಡಿದ್ದಾರೆ. ಅವರು ಕೃಷ್ಣಾವತಾರ ಕಾಲದಲ್ಲಿ ಬಲರಾಮ ಮತ್ತು ಅಭಿಮನ್ಯುವಾಗಿ ಕಡಿಮೆ ಸೇವೆ ಮಾಡಿದ್ದಾರೆ. ಬಲರಾಮನು ಕೃಷ್ಣನಿಗೆ ಅಣ್ಣನಾದ್ದರಿಂದ ಅವನಿಗೆ ನಮಸ್ಕಾರಾದಿ ಸೇವೆಯನ್ನು ಮಾಡಿಲ್ಲ. ಅಭಿಮನ್ಯುವು ಬೇಗನೇ ಮೃತನಾದ್ದರಿಂದ ಅವನೂ ಹೆಚ್ಚು ಸೇವೆಯನ್ನು ಮಾಡಲಿಲ್ಲ.

ಕರ್ಣ ಮತ್ತು ನಕುಲ - ಸಹದೇವರು ಎರಡು ಅವತಾರಗಳಲ್ಲಿಯೂ ಹೆಚ್ಚು ಸೇವೆ ಮಾಡಿದ್ದಾರೆ. ಸೂರ್ಯಾಂಶನಾದ ಕರ್ಣನು ರಾಮಾವತಾರ ಕಾಲದಲ್ಲಿ ಸುಗ್ರೀವನಾಗಿ ಹೆಚ್ಚು ಸೇವೆ ಮಾಡಿದ್ದಾನೆ. ಕೃಷ್ಣಾವತಾರಕಾಲದಲ್ಲಿ ಕರ್ಣ ಪರಶುರಾಮದೇವರ ಸೇವೆಯನ್ನು ಮಾಡಿದ್ದಾನೆ. ಕೃಷ್ಣಾವತಾರಕಾಲದಲ್ಲಿ ಕರ್ಣ ಪರಶುರಾಮದೇವರ ಸೇವೆಯನ್ನು ಮಾಡಿದ್ದಾನೆ. ಭೂಭಾರ ಹರಣದಲ್ಲಿ ನಿಮಿತ್ತನೂ ಆಗಿದ್ದಾನೆ. ಅಶ್ವಿನೀದೇವತೆಗಳು ರಾಮಾಯಣ ಕಾಲದಲ್ಲಿ ಮೈಂದ ವಿವಿದರಾಗಿ ಹೆಚ್ಚು ರಾಮಸೇವೆಯನ್ನು ಮಾಡಿದ್ದಾರೆ. ಅವರೇ ನಕುಲ ಸಹದೇವರಾಗಿ ಕೃಷ್ಣಸೇವೆಯನ್ನೂ ಹೆಚ್ಚಾಗಿಯೇ ಮಾಡಿದ್ದಾರೆ. ಹೀಗೆ ಎರಡು ಅವತಾರಗಳಲ್ಲಿಯೂ ಹೆಚ್ಚಾಗಿ ಸೇವೆ ಮಾಡಿದರೂ ಇವರೇ ಕೊನೆಗೆ ಅಂದರೆ ಕೃಷ್ಣಾವತಾರ ಕಾಲದಲ್ಲಿ ಕೊನೆಯಲ್ಲಿ ಕೃಷ್ಣನಿಗೆ ವಿರೋಧವನ್ನು ಮಾಡಿ ಅಧಿಕ ಪುಣ್ಯವನ್ನು ನಾಶಮಾಡಿಕೊಂಡಿದ್ದಾರೆ. ವಿವಿದನು ನರಕಾಸುರನ ಪಕ್ಷಕ್ಕೆ ಸೇರಿ ಸ್ಥೂಲವಾದ ಬೊಗಸೆಗಳಿಂದ ಉಪ್ಪು ನೀರನ್ನು ಚೆಲ್ಲಿ ಕೃಷ್ಣನ ಗ್ರಾಮಗಳನ್ನು ನಾಶಪಡಿಸಿದ್ದಾನೆ. ಕರ್ಣನೂ ದುರ್ಯೋಧನನ ಪಕ್ಷಕ್ಕೆ ಸೇರಿ ಕೃಷ್ಣನ ಮಾತನ್ನು ಮೀರಿದ್ದು, ದ್ರೌಪದಿಯನ್ನು ತಿರಸ್ಕರಿಸಿದ್ದು, ಪಾಂಡವರನ್ನು ದ್ವೇಷಿಸಿದ್ದು ಇವೇ ಮೊದಲಾದ ಪಾಪ ಕರ್ಮಗಳನ್ನು ಮಾಡಿದ್ದಾನೆ. 'ಏಧಮಾನದ್ವಿಟ್' (ಶ್ರೀಹರಿಯು ಯೋಗ್ಯತೆ ಮೀರಿ ಪುಣ್ಯ ಮಾಡುವವರನ್ನು ದ್ವೇಷಿಸುವವನು) ಎಂಬ ಶ್ರುತಿಯ ಪ್ರಕಾರ ಕರ್ಣಾದಿಗಳು ಸಂಪಾದಿಸಿದ ಅಧಿಕ ಪುಣ್ಯವು ನಾಶವಾಗಿದೆ.

ಪ್ರಾದುರ್ಭಾವದ್ವಯೇ ಹ್ಯಸ್ಮಿನ್ ಸರ್ವೇಷಾಂ ನಿರ್ಣಯಃ ಕೃತಃ ॥ ೪೮ ॥

ನೈತಯೋರಕೃತಂ ಕಿಂಚಿತ್ ಶುಭಂ ವಾ ಯದಿ ವಾಽಶುಭಮ್ ।
ಅನ್ಯತ್ರ ಪೂರ್ಯತೇ ಕ್ವಾಪಿ ತಸ್ಮಾದತ್ರೈವ ನಿರ್ಣಯಃ ॥ ೪೯ ॥

ಪಶ್ಚಾತ್ತನತ್ವಾತ್ ಕೃಷ್ಣಸ್ಯ ವೈಶೇಷ್ಯಾತ್ ತತ್ರ ನಿರ್ಣಯಃ ।
ಪ್ರಾದುರ್ಭಾವಮಿಮಂ ತಸ್ಮಾತ್ ಗೃಹೀತ್ವಾ ಭಾರತಂ ಕೃತಮ್ ॥ ೫೦ ॥

**ಅರ್ಥ :-** **ಅಸ್ಮಿನ್ ಪ್ರಾದುರ್ಭಾವದ್ವಯೇ** ಈ ರಾಮ, ಮತ್ತು ಕೃಷ್ಣ ಎಂಬ ಎರಡು ಅವತಾರಗಳಲ್ಲಿ, **ಸರ್ವೇಷಾಂ** ಎಲ್ಲ ಶಾಸ್ತ್ರಾರ್ಥಗಳ, **ನಿರ್ಣಯಃ** ನಿರ್ಣಯವು, **ಕೃತಃ** ಮಾಡಲ್ಪಟ್ಟಿದೆ. **ಹಿ** ಯಾಕೆಂದರೆ, **ಏತಯೋಃ** ಈ ಎರಡು ಅವತಾರಗಳಲ್ಲಿ, **ಅಕೃತಂ** ನಿರ್ಣಯಿಸಲ್ಪಡದೇ ಇದ್ದ, ಶುಭಂ ಅಶುಭಂ, **ವಾ** ಪುಣ್ಯ ಅಥವಾ ಪಾಪಕರ್ಮವಾಗಲೀ, **ಕಿಂಚಿತ್** ಯಾವುದೂ ಕೂಡ, **ಅನ್ಯತ್ರ ಕ್ವಾಪಿ** ಬೇರೆ ಯಾವ ಅವತಾರದಲ್ಲಿಯೂ, **ನ ಪೂರ್ಯತೇ** ನಿರ್ಣಯಿಸಲ್ಪಡುವುದಿಲ್ಲ, **ತಸ್ಮಾತ್** ಆದ್ದರಿಂದ, **ಅತ್ರೈವ** ಈ ಎರಡು ಅವತಾರಗಳಲ್ಲಿಯೇ, **ನಿರ್ಣಯಃ** ನಿರ್ಣಯವು, **ಕೃಷ್ಣಸ್ಯ ಪಶ್ಚಾತ್ತನತ್ವಾತ್** ಕೃಷ್ಣಾವತಾರವು ಅನಂತರವಾದ್ದರಿಂದ, **ತತ್ರ** ಅಲ್ಲಿ **ವೈಶೇಷ್ಯಾತ್** ವಿಶೇಷವಾಗಿ, **ನಿರ್ಣಯಃ** ನಿರ್ಣಯವು (ಆಗುತ್ತದೆ). **ತಸ್ಮಾತ್** ಆದ್ದರಿಂದ, **ಇಮಂ ಪ್ರಾದುರ್ಭಾವಂ** ಈ ಅವತಾರವನ್ನೇ, **ಗೃಹೀತ್ವಾ** ವಿಷಯವನ್ನಾಗಿ ಸ್ವೀಕರಿಸಿ, **ಭಾರತಂ** ಭಾರತವು, **ಕೃತಂ** ವ್ಯಾಸರೂಪನಾದ ಕೃಷ್ಣನಿಂದಲೇ ಮಾಡಲ್ಪಟ್ಟಿದೆ.

**ತಾತ್ಪರ್ಯ :-** ಭಗವದವತಾರಗಳಲ್ಲಿ ರಾಮ ಮತ್ತು ಕೃಷ್ಣಾವತಾರಗಳು ಮಾತ್ರವೇ ಭೂಭಾರಹರಣದ ನೆಪದಿಂದ ಹರಿಸರ್ವೋತ್ತಮತ್ವ, ತಾರತಮ್ಯ ಮೊದಲಾದ ಸಕಲ ಶಾಸ್ತ್ರಾರ್ಥಗಳನ್ನು ನಿರ್ಣಯಿಸಲು ಪ್ರವೃತ್ತವಾಗಿವೆ. ಈ ಎರಡು ಅವತಾರಗಳನ್ನು ಬಿಟ್ಟು ಬೇರೆ ವರಾಹಾದಿ ಅವತಾರಗಳಲ್ಲಿ ದೇವತೆಗಳು ಮಾಡಿದ ಶುಭಾಶುಭಕರ್ಮಗಳನ್ನು, ತನ್ನಿಮಿತ್ತಕವಾದ ತಾರತಮ್ಯಾದಿ ಶಾಸ್ತ್ರಾರ್ಥವನ್ನು ನಿರ್ಣಯಿಸಲು ಸಾಧ್ಯವಿಲ್ಲ. ಅದರಲ್ಲಿಯೂ ಕೃಷ್ಣಾವತಾರವು ರಾಮಾವತಾರದ ನಂತರ ಆದದ್ದರಿಂದ ಅದುವೇ ರಾಮಾವತಾರಕ್ಕಿಂತ ಹೆಚ್ಚಾಗಿ ಸಕಲ ಶಾಸ್ತ್ರಾರ್ಥವನ್ನು ನಿರ್ಣಯಿಸುವುದು. ಆದ್ದರಿಂದ ಕೃಷ್ಣಾವತಾರದ ಸಕಲ ಚರಿತ್ರೆಯನ್ನು ವರ್ಣಿಸುವುದರ ಸಲುವಾಗಿ ಕೃಷ್ಣನೇ ವೇದವ್ಯಾಸ ಎಂಬ

ರೂಪಾಂತರವನ್ನು ತಾಳಿ ಭಾರತವನ್ನು ರಚಿಸಿದ್ದರಿಂದ ಭಾರತವೇ ಸಕಲ ಶಾಸ್ತ್ರದಲ್ಲಿ ಉತ್ತಮ.

**ಪೀಠಿಕೆ :-** ರಾಮಾವತಾರವೂ ಶಾಸ್ತ್ರಾರ್ಥ ನಿರ್ಣಯಕ್ಕೆ ಪ್ರವೃತ್ತವಾದ-ದ್ದೆಂದ ಮೇಲೆ ಭಾರತದಲ್ಲಿ ರಾಮನ ಕಥೆಯನ್ನು ಹೇಳಿಲ್ಲವಾದ್ದರಿಂದ ಭಾರತವು ಸಕಲ ಶಾಸ್ತ್ರಾರ್ಥ ನಿರ್ಣಾಯಕ ಹೇಗೆ ? ಎಂಬ ಶಂಕೆಯನ್ನು ಪರಿಹರಿಸುತ್ತಾರೆ —

**ಉಕ್ತಾ ರಾಮಕಥಾಪ್ಯಸ್ಮಿನ್ ಮಾರ್ಕಂಡೇಯ ಸಮಾಸ್ಯಯಾ ।**
**ತಸ್ಮಾದ್ ಯದ್ ಭಾರತೇ ನೋಕ್ತಂ ತದ್ಧಿ ನೈವಾಸ್ತಿ ಕುತ್ರಚಿತ್ ॥ ೫೦ ॥**

**ಅತ್ರೋಕ್ತಂ ಸರ್ವಶಾಸ್ತ್ರೇಷು ನ ಹಿ ಸಮ್ಯಗುದಾಹೃತಮ್ ।**
**ಇತ್ಯಾದಿ ಕಥಿತಂ ಸರ್ವಂ ಬ್ರಹ್ಮಾಂಡೇ ಹರಿಣಾ ಸ್ವಯಮ್ ॥ ೫೨ ॥**

**ಅರ್ಥ :- ಅಸ್ಮಿನ್** ಈ ಭಾರತದಲ್ಲಿ, **ಮಾರ್ಕಂಡೇಯಸಮಾಸ್ಯಯಾ** ಮಾರ್ಕಂಡೇಯಸಮಾಸ್ಯಾಪರ್ವದಿಂದ, **ರಾಮಕಥಾಽಪಿ** ರಾಮಾವತಾರದ ಕಥೆಯೂ ಕೂಡ, **ಉಕ್ತಾ** ಹೇಳಲ್ಪಟ್ಟಿದೆ. **ತಸ್ಮಾತ್** ಆದ್ದರಿಂದ, **ಯತ್** ಯಾವುದು, **ಭಾರತೇ** ಭಾರತದಲ್ಲಿ, **ನೋಕ್ತಂ** ಹೇಳಲ್ಪಟ್ಟಿಲ್ಲವೋ, **ತತ್** ಅದು, **ಕುತ್ರಚಿತ್** ಬೇರೆ ಯಾವ ಗ್ರಂಥದಲ್ಲಿಯೂ, **ನೈವಾಸ್ತಿ ಹಿ** ಇಲ್ಲವೇ ಇಲ್ಲವಷ್ಟೆ

**ಅತ್ರ** ಈ ಭಾರತದಲ್ಲಿ, **ಉಕ್ತಂ** ಹೇಳಲ್ಪಟ್ಟಿದ್ದು, **ಸರ್ವಶಾಸ್ತ್ರೇಷು** ಎಲ್ಲ ಶಾಸ್ತ್ರಗಳಲ್ಲಿ, **ಸಮ್ಯಕ್** ಚೆನ್ನಾಗಿ, **ನ ಹಿ ಉದಾಹೃತಂ** ಹೇಳಲ್ಪಟ್ಟಿಲ್ಲವಷ್ಟೆ **ಇತ್ಯಾದಿ ಸರ್ವಂ** ಇದೇ ಮೊದಲಾದ ಮಹಿಮೆ ಎಲ್ಲವೂ, **ಹರಿಣಾ ಸ್ವಯಂ** ಸ್ವಯಂ ಭಗವಂತನಿಂದಲೇ, **ಬ್ರಹ್ಮಾಂಡೇ** ಬ್ರಹ್ಮಾಂಡಪುರಾಣದಲ್ಲಿ, **ಕಥಿತಂ** ಹೇಳಲ್ಪಟ್ಟಿದೆ.

**ತಾತ್ಪರ್ಯ :-** ಮಹಾಭಾರತದ ವನಪರ್ವದಲ್ಲಿ ಮಾರ್ಕಂಡೇಯ ಸಮಾಸ್ಯಾಪರ್ವ ಎಂಬ ಉಪಪರ್ವದಲ್ಲಿ ರಾಮಕಥೆಯೂ ನಿರೂಪಿತವಾಗಿದೆ. ಆದ್ದರಿಂದ ಭಾರತದಲ್ಲಿಲ್ಲದ ಪ್ರಮೇಯ ಎಲ್ಲಿಯೂ ಇರುವುದಿಲ್ಲ. ಇಲ್ಲಿ ಹೇಳಿದ ಪ್ರಮೇಯವಾದರೂ ಬೇರೆಲ್ಲಿಯೂ ಇಲ್ಲಿಯಷ್ಟು ಸ್ಪಷ್ಟವಾಗಿ ಬಂದಿಲ್ಲ. ಆದ್ದರಿಂದ ಭಾರತವು ಸಕಲ ಶಾಸ್ತ್ರಾರ್ಥ ನಿರ್ಣಾಯಕ. ಎಂಬಿವೇ ಮೊದಲಾದ ವಿಷಯವನ್ನು ಸ್ವತಃ ಪರಮಾತ್ಮನೇ ಬ್ರಹ್ಮಾಂಡ ಪುರಾಣದಲ್ಲಿ ಹೇಳಿದ್ದಾನೆ.

ಮಾರ್ಕಂಡೇಯೇಽಪಿ ಕಥಿತಂ ಭಾರತಸ್ಯ ಪ್ರಶಂಸನಮ್ ।
ದೇವತಾನಾಂ ಯಥಾ ವ್ಯಾಸೋ ದ್ವಿಪದಾಂ ಬ್ರಾಹ್ಮಣೋ ವರಃ ॥ ೫೩ ॥

ಆಯುಧಾನಾಂ ಯಥಾ ವಜ್ರಂ ಓಷಧೀನಾಂ ಯಥಾ ಯವಾಃ ।
ತಥೈವ ಸರ್ವಶಾಸ್ತ್ರಾಣಾಂ ಮಹಾಭಾರತಮುತ್ತಮಮ್ ॥ ೫೪ ॥

**ಅರ್ಥ** :- **ಮಾರ್ಕಂಡೇಯೇಽಪಿ** ಮಾರ್ಕಂಡೇಯಪುರಾಣದಲ್ಲಿಯೂ, **ಭಾರತಸ್ಯ** ಮಹಾಭಾರತದ, **ಪ್ರಶಂಸನಂ** ಪ್ರಶಂಸೆಯು, **ಕಥಿತಂ** ಮಾಡಲ್ಪಟ್ಟಿದೆ, **ದೇವತಾನಾಂ** ದೇವತೆಗಳ ಮಧ್ಯದಲ್ಲಿ, **ವ್ಯಾಸಃ** ವೇದವ್ಯಾಸ ದೇವರು, **ಯಥಾ ವರಃ** ಹೇಗೆ ಶ್ರೇಷ್ಠರೋ, **ದ್ವಿಪದಾಂ** ಮನುಷ್ಯರಲ್ಲಿ, **ಬ್ರಾಹ್ಮಣಃ** ಬ್ರಾಹ್ಮಣನು, **ಯಥಾ ವರಃ** ಹೇಗೆ ಶ್ರೇಷ್ಠನೋ, **ಆಯುಧಾನಾಂ** ಆಯುಧಗಳಲ್ಲಿ, **ವಜ್ರಂ** ವಜ್ರಾಯುಧವು, **ಯಥಾ ವರಂ** ಹೇಗೆ ಶ್ರೇಷ್ಠವೋ, **ಓಷಧೀನಾಂ** ಧಾನ್ಯಗಳಲ್ಲಿ, **ಯವಾಃ** ಜವೆಗೋದಿ, **ಯಥಾ ವರಾಃ** ಹೇಗೆ ಶ್ರೇಷ್ಠವೋ, **ತಥೈವ** ಹಾಗೆಯೇ, **ಸರ್ವ ಶಾಸ್ತ್ರಾಣಾಂ** ಎಲ್ಲ ಶಾಸ್ತ್ರಗಳಲ್ಲಿ, **ಮಹಾಭಾರತಂ** ಮಹಾಭಾರತವು, **ಉತ್ತಮಂ** ಶ್ರೇಷ್ಠವಾಗಿದೆ.

**ತಾತ್ಪರ್ಯ** :- ದೇವತೆಗಳಲ್ಲಿ ವ್ಯಾಸರಂತೆ, ಮನುಷ್ಯರಲ್ಲಿ ಬ್ರಾಹ್ಮಣರಂತೆ ಆಯುಧಗಳಲ್ಲಿ ವಜ್ರಾಯುಧದಂತೆ, ಧಾನ್ಯಗಳಲ್ಲಿ ಜವೆಗೋಧಿಯಂತೆ ಶಾಸ್ತ್ರಗಳಲ್ಲಿ ಮಹಾಭಾರತವು ಶ್ರೇಷ್ಠ ಎಂದು ಭಾರತದ ಪ್ರಶಂಸೆಯು ಮಾರ್ಕಂಡೇಯ ಪುರಾಣದಲ್ಲೂ ಇದೆ.

ವಾಯುಪ್ರೋಕ್ತೇಽಪಿ ತತ್ ಪ್ರೋಕ್ತಂ ಭಾರತಸ್ಯ ಪ್ರಶಂಸನಮ್ ।
ಕೃಷ್ಣ ದ್ವೈಪಾಯನಂ ವ್ಯಾಸಂ ವಿದ್ಧಿ ನಾರಾಯಣಂ ಪ್ರಭುಮ್ ॥ ೫೫ ॥

ಕೋ ಹ್ಯನ್ಯಃ ಪುಂಡರೀಕಾಕ್ಷಾತ್ ಮಹಾಭಾರತಕೃದ್ ಭವೇತ್ ।
ಏವಂ ಹಿ ಸರ್ವಶಾಸ್ತ್ರೇಷು ಪೃಥಕ್ ಪೃಥಗುದೀರಿತಮ್ ॥ ೫೬ ॥

**ಅರ್ಥ** :- **ವಾಯುಪ್ರೋಕ್ತೇಽಪಿ** ವಾಯುಪ್ರೋಕ್ತವೆಂಬ ಗ್ರಂಥದಲ್ಲೂ, **ತತ್** ಆ, **ಭಾರತಸ್ಯ ಪ್ರಶಂಸನಂ** ಭಾರತದ ಪ್ರಶಂಸೆಯು, **ಪ್ರೋಕ್ತಂ** ಹೇಳಲ್ಪಟ್ಟಿದೆ.

**ಕೃಷ್ಣದ್ವೈಪಾಯನಂ ವ್ಯಾಸಂ** ಕೃಷ್ಣದ್ವೈಪಾಯನರೆಂಬ ವ್ಯಾಸರನ್ನು, **ಪ್ರಭುಂ** ಸರ್ವಸಮರ್ಥರಾದ, **ನಾರಾಯಣಂ** ನಾರಾಯಣನೆಂದು, **ವಿದ್ಧಿ** ತಿಳಿದುಕೊ, **ಹಿ** ಏಕೆಂದರೆ, **ಪುಂಡರೀಕಾಕ್ಷಾತ್** ಕಮಲನಯನನಾದ ಭಗವಂತನಿಗಿಂತ, **ಅನ್ಯಃ** ಬೇರೆಯವರಾದ, **ಕಃ** ಯಾರು ತಾನೆ, **ಮಹಾಭಾರತಕೃದ್** ಮಹಾಭಾರತವನ್ನು ರಚಿಸುವವರು, **ಭವೇತ್** ಆದಾರು? **ಏವಂ** ಇದೇ ರೀತಿಯಾಗಿ ಭಾರತದ ಉತ್ತಮತ್ವವು, **ಸರ್ವಶಾಸ್ತ್ರೇಷು** ಎಲ್ಲ ಶಾಸ್ತ್ರಗಳಲ್ಲಿಯೂ, **ಪೃಥಕ್ ಪೃಥಕ್** ಪ್ರತ್ಯೇಕವಾಗಿ, **ಉದೀರಿತಂ ಹಿ** ಹೇಳಲ್ಪಟ್ಟಿದೆಯಷ್ಟೆ

**ತಾತ್ಪರ್ಯ** :- 'ಕೃಷ್ಣದ್ವೈಪಾಯನ ವ್ಯಾಸರನ್ನು ಸಾಕ್ಷಾತ್ ನಾರಾಯಣನೆಂದೇ ತಿಳಿಯಬೇಕು. ಏಕೆಂದರೆ ನಾರಾಯಣನಲ್ಲದೇ ಮಹಾಭಾರತವನ್ನು ಬೇರೆ ಯಾರು ರಚಿಸಿಯಾರು? ಆದ್ದರಿಂದ ಭಾರತ ಕರ್ತೃಗಳಾದ ವ್ಯಾಸರು ನಾರಾಯಣನೇ ಎಂದು ವಾಯುಪ್ರೋಕ್ತದಲ್ಲಿದೆ. ಹೀಗೆಯೇ ಇತರ ಶಾಸ್ತ್ರಗಳಲ್ಲಿಯೂ ಭಾರತವು ಪ್ರಶಂಸಿಸಲ್ಪಟ್ಟಿದೆ.

**ವಿಶೇಷ ವಿಷಯ** :- 'ಕೃಷ್ಣದ್ವೈಪಾಯನಂ ವ್ಯಾಸಂ —' ಎಂಬ ಶ್ಲೋಕವು ವಾಯು ಪ್ರೋಕ್ತದಲ್ಲಿ ಮಾತ್ರವಲ್ಲದೆ ಭಾರತದಲ್ಲಿಯೂ ಇದೆ. ಲಕ್ಷ ಶ್ಲೋಕಗಳುಳ್ಳ ಭಾರತವನ್ನು ರಚಿಸಿದ ಮಾತ್ರದಿಂದ ವ್ಯಾಸರು ನಾರಾಯಣನೇ ಏಕಾಗಬೇಕು ? ನಾರಾಯಣನಲ್ಲದವರು ಯಾರೂ ಗ್ರಂಥವನ್ನು ರಚಿಸಲಾರರೆ ? ಎಂದು ಶಂಕೆ ಉಂಟಾಗಬಹುದು. ಅದಕ್ಕೆ 'ಕೋ ಹ್ಯನ್ಯಃ' ಎಂಬ ಶ್ಲೋಕದ ಅಭಿಪ್ರಾಯವನ್ನು ಹೀಗೆ ತಿಳಿಯಬೇಕು – ಕುರು-ಪಾಂಡವ ವಂಶದ ಉತ್ಪತ್ತಿಗಿಂತ ಪೂರ್ವದಲ್ಲೇ ಎರಡೂ ವಂಶಗಳ ಉತ್ಪತ್ತಿ ಪ್ರಕಾರವನ್ನೂ, ರಾಜಸೂಯ, ಅಶ್ವಮೇಧಾದಿ ಯಾಗಗಳ ಮಹಿಮೆಯನ್ನೂ, ಅದಕ್ಕಾಗಿ ಪಾಂಡವರು ಮಾಡಿದ ದಿಗ್ವಿಜಯ ಪ್ರಕಾರವನ್ನೂ, ಅರಗಿನ ಮನೆಯಿಂದ ಪಾರಾಗುವ ಕುಶಲತೆಯನ್ನೂ ಬಕ-ಹಿಡಂಬಾಸುರ ಸಂಹಾರವನ್ನೂ, ದ್ರೌಪದೀ ವಿವಾಹವನ್ನು ನೆರವೇರಿಸುವ ಸಾಮರ್ಥ್ಯವನ್ನೂ, ಜೂಜಾಟದಲ್ಲಿ ತೊಡಗುವುದನ್ನೂ, ವನವಾಸ ಅಜ್ಞಾತವಾಸ ಗೋಗ್ರಹಣಾದಿ ಅನೇಕ ಕಥೆಗಳನ್ನೂ, ಹದಿನೆಂಟು ಅಕ್ಷೌಹಿಣೀ ಸೈನ್ಯದಲ್ಲಿ ಪರಸ್ಪರ ನಡೆದ ವಚನ ಪ್ರತಿವಚನಗಳ ಪ್ರಕಾರವನ್ನೂ, ಪರಸ್ಪರವಾಗಿ ಪ್ರಯೋಗಿಸಿದ ಬಾಣ ಪ್ರತಿಬಾಣಗಳ ಸಂಖ್ಯೆಯನ್ನೂ, ವ್ಯೂಹ ಪ್ರತಿವ್ಯೂಹ ನಿರ್ಮಾಣದ ಕ್ರಮವನ್ನೂ, ಅಸ್ತ್ರ ಪ್ರತ್ಯಸ್ತ್ರಗಳ

ಪ್ರಯೋಗದ ಕ್ರಮವನ್ನೂ, ಭೀಮ, ಅರ್ಜುನ, ಭೀಷ್ಮ ದ್ರೋಣಾದಿಗಳು ಪ್ರತಿದಿನದಲ್ಲಿ ಕೊಲ್ಲುವ ಆನೆ ಕುದುರೆ ಮೊದಲಾದ ಅನೇಕ ಸೈನ್ಯದ ಸಂಖ್ಯೆ ಮೊದಲಾದುದನ್ನೂ, ಅಂಗೈಯ ನೆಲ್ಲಿಕಾಯಿಯಂತೆ ಕಂಡು ಮಹಾಭಾರತ ಗ್ರಂಥದಲ್ಲಿ ಬರೆದಿಟ್ಟಿರುವ ವ್ಯಾಸರು ಅನಂತವಾದ ಜಗತ್ತನ್ನು ನಿರ್ಮಿಸಿದ ನಾರಾಯಣನಂತೆ ನಿರವಧಿಕವಾದ ಸರ್ವಜ್ಞತ್ವ ಉಳ್ಳವರೆಂದು ಸಿದ್ಧವಾಗುವುದ ರಿಂದ ನಾರಾಯಣನ ಸಾಕ್ಷಾದವತಾರವೆಂದು ಜ್ಞಾನಿಗಳು ಊಹಿಸಬಹು ದಾಗಿದೆ. ಇಲ್ಲದಿದ್ದರೆ ಮತ್ಸ್ಯ ಕೂರ್ಮಾದಿಗಳಿಗಾದರೂ ಸಾಕ್ಷಾದವತಾರತ್ವವು ಹೇಗೆ ಸಿದ್ಧವಾದೀತು? ಆದ್ದರಿಂದ 'ಕೋಹ್ಯನ್ಯಃ ಪುಂಡರೀಕಾಕ್ಷಾತ್ ಮಹಾ ಭಾರತ ಕೃದ್‌ಭವೇತ್' ಎಂದು ಹೇಳಿದ್ದು ಯುಕ್ತವೇ ಆಗಿವೆ.

**ಉಕ್ತೋಽರ್ಥಃ ಸರ್ವ ಏವಾಯಂ ಮಾಹಾತ್ಮ್ಯಕ್ರಮಪೂರ್ವಕಃ ।**
**ಭಾರತೇಽಪಿ ಯಥಾ ಪ್ರೋಕ್ತೋ ನಿರ್ಣಯೋಽಯಂ ಕ್ರಮೇಣ ತು ॥೫೭॥**

**ತಥಾ ಪ್ರದರ್ಶಯಿಷ್ಯಾಮಃ ತದ್ವಾಕ್ಯೈರೇವ ಸರ್ವಶಃ ।**

**ಅರ್ಥ :-** **ಮಹಾತ್ಮ್ಯ ಕ್ರಮಪೂರ್ವಕಃ** ಶ್ರೀಹರಿಯ ಮಹಿಮೆ ಮತ್ತು ತಾರತಮ್ಯವೇ ಮೊದಲಾದ, **ಅಯಂ ಸರ್ವ ಏವ ಅರ್ಥಃ** ಈ ಎಲ್ಲ ಪ್ರಮೇಯವು, **ಸರ್ವಶಾಸ್ತ್ರೇಷು,** ಎಲ್ಲ ಶಾಸ್ತ್ರಗಳಲ್ಲಿ **ಉಕ್ತಃ** ಹೇಳಲ್ಪಟ್ಟಿದೆ. **ಅಯಂ ನಿರ್ಣಯಃ** ಈ ನಿರ್ಣಯವು, **ಭಾರತೇಽಪಿ** ಭಾರತದಲ್ಲಿಯೂ, **ಯಥಾ** ಯಾವ ಪ್ರಕಾರದಿಂದ, **ಪ್ರೋಕ್ತಃ** ಹೇಳಲ್ಪಟ್ಟಿದೆಯೋ, **ತಥಾ** ಹಾಗೆಯೇ, **ಕ್ರಮೇಣ ತು** ಕ್ರಮವಾಗಿ, **ಸರ್ವಶಃ** ಎಲ್ಲವನ್ನು, **ತದ್ವಾಕ್ಯೈರೇವ** ಆ ಭಾರತ ವಾಕ್ಯಗಳಿಂದಲೇ **ಪ್ರದರ್ಶಯಿಷ್ಯಾಮಃ** ತೋರಿಸುವೆವು.

**ತಾತ್ಪರ್ಯ :-** ಈವರೆಗೆ ಹೇಳಿದ ಶ್ರೀಹರಿಯ ಮಹಿಮೆ, ತಾರತಮ್ಯ ಮೊದಲಾದ ಎಲ್ಲ ಪ್ರಮೇಯವೂ ಇತರ ಶಾಸ್ತ್ರಗಳಲ್ಲಿ ಮತ್ತು ಭಾರತದಲ್ಲಿಯೂ ಬಂದಿದೆ. ಭಾರತದಲ್ಲಿ ಹೇಗೆ ನಿರ್ಣಯಿಸಲಾಗಿದೆ ಎಂಬುದನ್ನು ಭಾರತವಾಕ್ಯ ಗಳಿಂದಲೇ ತೋರಿಸುತ್ತೇವೆ.

**ವಿಶೇಷ ವಿಷಯ :-** ಹಿಂದೆ ಸಂದಿಗ್ಧವಾದ ನಾರತವಾಕ್ಯಗಳ ಅರ್ಥವನ್ನು ಇತರ ಭಾರತವಾಕ್ಯಗಳನ್ನು ಉದಾಹರಿಸುವುದರ ಮೂಲಕವೇ ನಿರ್ಣಯಿಸು ತ್ತೇವೆ ಎಂದಿದ್ದರು. ಅದನ್ನು ಈಗ ಪುನಃ ನೆನಪಿಸಿದ್ದಾರೆ. ಮುಂದೆ ಸಂದಿಗ್ಧ

ವಾಕ್ಯಗಳನ್ನು ವ್ಯಾಖ್ಯಾನ ಮಾಡುತ್ತಾರೆ. ಇದರಿಂದ ಸಕಲ ಶಾಸ್ತ್ರಗಳಲ್ಲಿ ಹೇಳಿದ ಅರ್ಥವು ಭಾರತದಲ್ಲಿದೆ ಎಂದು ತಿಳಿಯುವುದು.

**ಪೀಠಿಕೆ :-** ಹರಿಸರ್ವೋತ್ತಮತ್ವಾದಿ ಸಕಲ ಪ್ರಮೇಯಗಳನ್ನು ಭಾರತದ ಆದ್ಯ ಪದ್ಯವೇ ಹೇಳುವುದರಿಂದ ಮತ್ತು ಉಪಕ್ರಮಾನುಸಾರಿಯಾಗಿ ಎಲ್ಲ ಗ್ರಂಥವನ್ನು ಅರ್ಥೈಸಬೇಕಾದ್ದರಿಂದ ಭಾರತದ ಲಕ್ಷ ಶ್ಲೋಕಗಳೂ ಕೂಡ ಭಗವಂತನ ಮಹಿಮೆಯನ್ನು ಹೇಳುತ್ತವೆ ಎಂಬ ಅಭಿಪ್ರಾಯದಿಂದ, ಆಚಾರ್ಯರು, ಭಾರತದ ಆದಿಯಲ್ಲಿ ಲೋಕ ಶಿಕ್ಷಣಾರ್ಥವಾಗಿ ವ್ಯಾಸರು ರಚಿಸಿದ ಮಂಗಲ ಪದ್ಯವನ್ನು ವ್ಯಾಖ್ಯಾನಿಸಲು ಆ ಪದ್ಯವನ್ನೀಗ ಹೇಳುತ್ತಾರೆ –

**ನಾರಾಯಣಂ ಸುರಗುರುಂ ಜಗದೇಕನಾಥಂ**
**ಭಕ್ತಪ್ರಿಯಂ ಸಕಲಲೋಕನಮಸ್ಕೃತಂ ಚ ।**
**ತ್ರೈಗುಣ್ಯವರ್ಜಿತಮಜಂ ವಿಭುಮಾದ್ಯಮೀಶಂ**
**ವಂದೇ ಭವಘ್ನಮಮರಾಸುರಸಿದ್ಧವಂದ್ಯಮ್ ॥ ೫೮ ॥**

**ಅರ್ಥ :-ಸುರಗುರುಂ** ದೇವತೆಗಳಿಗೆ ಗುರುವಾದ, **ಜಗದೇಕನಾಥಂ** ಜಗತ್ತಿಗೆ ಮುಖ್ಯ ಸ್ವಾಮಿಯಾದ, **ಭಕ್ತಪ್ರಿಯಂ** ಭಕ್ತರಿಗೆ ಪ್ರಿಯನಾದ **ಸಕಲಲೋಕನಮಸ್ಕೃತಂ** ಎಲ್ಲ ಸುಜೀವಿಗಳಿಂದ ನಮಸ್ಕರಿಸಿಕೊಳ್ಳುವ, **ಚ** ಮತ್ತು, **ತ್ರೈಗುಣ್ಯವರ್ಜಿತಂ** ಸತ್ವ ರಜಸ್ತಮೋಗುಣಗಳಿಂದ ರಹಿತನಾದ, **ಅಜಂ** ಜನನವಿಲ್ಲದ, **ವಿಭುಂ** ಸರ್ವ ಗುಣಪೂರ್ಣನಾದ, **ಆದ್ಯಂ** ಆದಿಯಲ್ಲಿ ಸೃಷ್ಟಿಕರ್ತನಾದ, **ಈಶಂ** ಸರ್ವಶಕ್ತನಾದ, **ಭವಘ್ನಂ** ಸಂಸಾರ ಪರಿಹಾರಕನಾದ, **ಅಮರಾಸುರಸಿದ್ಧವಂದ್ಯಂ** ಮುಕ್ತರಾದ ತತ್ವಾಭಿಮಾನಿ ದೇವತೆಗಳಿಂದ ವಂದ್ಯನಾದ, **ನಾರಾಯಣಂ** ನಾರಾಯಣನನ್ನು **ವಂದೇ** ನಮಸ್ಕರಿಸುತ್ತೇನೆ.

**ತಾತ್ಪರ್ಯ :-** ನಾರಾಯಣನು ಲಕ್ಷ್ಮೀ ಮೊದಲಾದ ದೇವತೆಗಳಿಗೆ ಜ್ಞಾನಪ್ರದ. ಜಗತ್ತಿಗೆ ಮುಖ್ಯಸ್ವಾಮಿ ಭಕ್ತವತ್ಸಲ. ಎಲ್ಲ ಸಜ್ಜನರಿಂದ ನಮ್ಯ. ಸತ್ವ ರಜಸ್ತಮೋ ಗುಣಹೀನ. ಜನನ ರಹಿತ. ಸರ್ವಸಮರ್ಥ. ಆದಿಪುರುಷ ಲೋಕ ಸ್ವಾಮಿ. ಸಂಸಾರನಾಶಕ. ಮತ್ತು ಮುಕ್ತರಾದ ತತ್ವಾಭಿಮಾನಿಗಳಿಗೂ ವಂದ್ಯ. ಇಂತಹ ನಾರಾಯಣನನ್ನು ನಮಸ್ಕರಿಸುವೆ.

**ಪೀಠಿಕೆ :-** ಹಿಂದಿನ ಪದ್ಯದಲ್ಲಿರುವ ಪ್ರಮೇಯಗಳನ್ನು ಮುಂದಿನ ಈ ಪದ್ಯದಲ್ಲಿ ವಿಶದೀಕರಿಸುತ್ತಾರೆ —

**ಜ್ಞಾನಪ್ರದಃ ಸ ಭಗವಾನ್ ಕಮಲಾವಿರಿಂಚಿ**
**ಶರ್ವಾದಿಪೂರ್ವಜಗತೋ ನಿಖಿಲಾದ್ವರಿಷ್ಠಃ ।**
**ಭಕ್ತ್ಯೈವ ತುಷ್ಯತಿ ಹರಿಪ್ರವಣತ್ವಮೇವ**
**ಸರ್ವಸ್ಯ ಧರ್ಮ ಇತಿ ಪೂರ್ವವಿಭಾಗಸಂಸ್ಥಃ ॥ ೫೯ ॥**

**ಅರ್ಥ :-** **ಸ ಭಗವಾನ್** ಷಡ್ಗುಣೈಶ್ವರ್ಯ ಸಂಪನ್ನನಾದ ಆ ನಾರಾಯಣನು, **ಕಮಲಾವಿರಿಂಚಿಶರ್ವಾದಿಪೂರ್ವಜಗತಃ** ಲಕ್ಷ್ಮೀ, ಬ್ರಹ್ಮ ರುದ್ರ ಮೊದಲಾದ ಎಲ್ಲ ಜಗತ್ತಿಗೂ, **ಜ್ಞಾನಪ್ರದಃ** ಉಪದೇಶಕನು, ನಿಖಿಲಾತ್ ವರಿಷ್ಠಃ ಸರ್ವೋತ್ತಮನು, **ಭಕ್ತ್ಯೈವ** ಭಕ್ತಿಯಿಂದ ಮಾತ್ರ, **ತುಷ್ಯತಿ** ಸಂತುಷ್ಟನಾಗುತ್ತಾನೆ, **ಹರಿಪ್ರವಣತ್ವಮೇವ** ಭಗವಂತನಿಗೆ ನಮಸ್ಕರಿಸುವುದೇ, **ಸರ್ವಸ್ಯ** ಎಲ್ಲ ಜಾತಿಯವರಿಗೂ, **ಧರ್ಮಃ** ಧರ್ಮವು, **ಇತಿ** ಎಂಬ ಪ್ರಮೇಯವು, **ಪೂರ್ವವಿಭಾಗ ಸಂಸ್ಥಃ** ಪೂರ್ವಾರ್ಧದಲ್ಲಿರುವುದು.

**ತಾತ್ಪರ್ಯ :-** 'ನಾರಾಯಣಂ ಸುರಗುರುಂ' ಎಂಮ ಮಂಗಲ ಪದ್ಯದ ಪೂರ್ವಾರ್ಧದಲ್ಲಿ ಈ ಕೆಳಗಿನ ಪ್ರಮೇಯಗಳು ಕಂಡುಬರುತ್ತವೆ. ನಾರಾಯಣನು ಲಕ್ಷ್ಮ್ಯಾದಿ ಎಲ್ಲರಿಗೂ ಜ್ಞಾನದಾಯಕ, ಸರ್ವೋತ್ತಮ, ಭಕ್ತಿಯಿಂದಲೇ ಪ್ರಸನ್ನನಾಗುವನು. ಶ್ರೀಹರಿಗೆ ನಮಸ್ಕರಿಸುವುದು ಎಲ್ಲ ಜಾತಿಯವರೂ ಮಾಡಬೇಕಾದ ಧರ್ಮ.

**ವಿಶೇಷ ವಿಷಯ :-** ''ಕಮಲಾವಿರಿಂಚಿಶರ್ವಾದಿಪೂರ್ವಜಗತಃ ಜ್ಞಾನಪ್ರದಃ'' ಎಂಬುದು 'ಸುರುಗುರುಂ' ಎಂಬುದರ ಅರ್ಥ. ಗುರುಶಬ್ದವು ಗೃ ನಿಗರಣೆ (ಹೇಳುವುದು) ಎಂಬ ಧಾತುವಿನಿಂದ ನಿಷ್ಪನ್ನವಾಗಿ ಜ್ಞಾನಪ್ರದ (ಉಪದೇಶಕ) ಎಂಬ ಅರ್ಥವುಳ್ಳದ್ದಾಗಿದೆ.

'ಸುಷ್ಠು ರಮಯತೀತಿ ಸುರಃ' (ಚೆನ್ನಾಗಿ ಆನಂದಪಡಿಸುವವಳು) ಎಂಬ ವಿಶ್ಲೇಷಣೆಯ ಪ್ರಕಾರ ಲಕ್ಷ್ಮಿಯು ಸುರಶಬ್ದ ವಾಚ್ಯಳಾಗಿದ್ದಾಳೆ. ಮತ್ತು ದೇವತೆಯಾದ್ದರಿಂದಲೂ ಸುರಶಬ್ದ ವಾಚ್ಯಳಾಗಿದ್ದಾಳೆ. ಆದ್ದರಿಂದ 'ಕಮಲಾ' ಎಂಬುದಾಗಿ ಲಕ್ಷ್ಮಿಯನ್ನು ಸುರಶಬ್ದದ ವ್ಯಾಖ್ಯಾನದಲ್ಲಿ ಸೇರಿಸಿದ್ದಾರೆ.

ನಾರಾಯಣನೇ ಏಕೆ ಸುರಗುರು? ಎಂಬ ಪ್ರಶ್ನೆಗೆ ಉತ್ತರ ರೂಪವಾಗಿ ಜಗದೇಕನಾಥಂ ಎಂದು ಮಂಗಲಪದ್ಯದಲ್ಲಿದೆ. ಸರ್ವೋತ್ತಮನಾದ್ದರಿಂದ ಗುರು ಎಂದು ಅದರ ಅಭಿಪ್ರಾಯ. ಆಚಾರ್ಯರು ನಿಖಿಲಾತ್ ವರಿಷ್ಠಃ ಎಂದು 'ಜಗದೇಕನಾಥಂ' ಎಂಬ ಪದವನ್ನು ವ್ಯಾಖ್ಯಾನಿಸಿದ್ದಾರೆ. ಏಕನಾಥ ಎಂದರೆ ಮುಖ್ಯಸ್ವಾಮಿ ಎಂದರ್ಥ. ಇದನ್ನು ಸೂಚಿಸುವುದಕ್ಕಾಗಿಯೇ ಆಚಾರ್ಯರು 'ವರಿಷ್ಠ' ಶಬ್ದವನ್ನು ಪ್ರಯೋಗಿಸಿದ್ದಾರೆ. ವರಿಷ್ಠ ಶಬ್ದಕ್ಕೆ ಅತಿಶಯೇನ ವರ (ಮುಖ್ಯವಾಗಿ ಸ್ವಾಮಿ) ಎಂದೇ ಅರ್ಥ.

ಇಂತಹ ಮಹಾಮಹಿಮನಾದ ಭಗವಂತನ ಪ್ರಸಾದವನ್ನು ಹೇಗೆ ಸಂಪಾದಿಸಲು ಸಾಧ್ಯ? ಎಂಬ ಶಂಕೆಯನ್ನು ಪರಿಹರಿಸಲು ಭಕ್ತಪ್ರಿಯಂ ಎನ್ನಲಾಗಿದೆ. ಇದರ ಅರ್ಥವನ್ನೇ ಆಚಾರ್ಯರು 'ಭಕ್ತ್ಯೈವ ತುಷ್ಯತಿ' ಎಂದು ವಿವರಿಸಿದ್ದಾರೆ. ಸರ್ವಂ ವಾಕ್ಯಂ ಸಾವಧಾರಣಂ ಎಂಬ ನ್ಯಾಯದ ಪ್ರಕಾರವೂ, ಮತ್ತು ಅಸುರರಲ್ಲಿ ಪ್ರೀತಿ ಇಲ್ಲದಿರುವುದರಿಂದಲೂ ಭಕ್ತಪ್ರಿಯಂ ಎಂಬ ಪದಕ್ಕೆ ಭಕ್ತರಿಗೆ ಮಾತ್ರ ಪ್ರಿಯನಾದವನು ಎಂಬ ಅರ್ಥವನ್ನು ಹೇಳುವುದು ಯುಕ್ತವಾಗುತ್ತದೆ. ಭಕ್ತಪ್ರಿಯಂ ಎಂಬ ಈ ವಿಶೇಷಣವನ್ನು ಹೇತುಗರ್ಭ ವಿಶೇಷಣ ಎಂದು ಭಾವಿಸಬೇಕು. ಆಗ ಭಕ್ತಿಯೇ ಭಗವಂತನ ಪ್ರಸನ್ನತೆಗೆ ಕಾರಣ ಎಂಬ ಅರ್ಥ ದೊರೆಯುತ್ತದೆ.

ಭಗವಂತನಿಗೆ ಪ್ರಿಯರಾದ ಬ್ರಹ್ಮಾದಿಗಳ ಅಂತರಂಗದಲ್ಲಿರುವ ಭಕ್ತಿ ಇತರರಿಗೆ ಹೇಗೆ ತಿಳಿಯಲು ಸಾಧ್ಯ? ಎಂದರೆ, ಅವರು ಯಾವಾಗಲೂ ಭಗವಂತನ ಪರಿವಾರವಾಗಿ ತಲೆಯ ಮೇಲೆ ಕೈಜೋಡಿಸಿ ನಮಸ್ಕರಿಸುವುದರಿಂದಲೇ ಅವರ ಅಂತರಂಗದಲ್ಲಿ ಭಕ್ತಿ ಇದೆ ಎಂದು ಊಹಿಸಬಹುದು ಎಂಬ ಅಭಿಪ್ರಾಯದಿಂದಲೇ ಸಕಲ ಲೋಕ ನಮಸ್ಕೃತಂ ಚ ಎಂದು ವ್ಯಾಸರು ವಿಶೇಷಣ ಕೊಟ್ಟಿದ್ದಾರೆ. ಆಚಾರ್ಯರು ಅದರ ತಾತ್ಪರ್ಯವನ್ನು 'ಹರಿಪ್ರವಣತ್ವಮೇವ ಸರ್ವಸ್ಯ ಧರ್ಮಃ' ಎಂದು ತಿಳಿಸಿದ್ದಾರೆ. ಹರಿಗೆ ನಮಸ್ಕಾರ ಮಾಡುವುದನ್ನು ಧರ್ಮ ಎಂದು ಹೇಳಿದ್ದರಿಂದ ಸಂಧ್ಯಾವಂದನೆ ಮಾಡದಿದ್ದರೆ ಪಾಪ ಬರುವಂತೆ ಶ್ರೀಹರಿಗೆ ನಮಸ್ಕಾರ ಮಾಡದಿದ್ದರೂ ಪಾಪ ಬರುತ್ತದೆಂದು ತಿಳಿಯುವುದು. ಮಂಗಲಪದ್ಯದಲ್ಲಿ ಸಕಲಲೋಕನತಂ ಎನ್ನದಂತೆ ನಮಸ್ಕೃತಂ ಎನ್ನಲಾಗಿದೆ. ಇದರಿಂದ ನಮನವು ಕರ್ತವ್ಯ ಎಂದು ತಿಳಿಯುವುದು. ಆದ್ದರಿಂದ

ಶ್ರೀ ಹರಿಯ ನಮನವು ಧರ್ಮವೆಂದೂ ಹೇಳಿದಂತಾಯಿತು. ಶ್ರುತಿಯು ಯಾವುದನ್ನು ಕರ್ತವ್ಯ ಎಂದು ವಿಧಾನ ಮಾಡುತ್ತದೋ ಅದೇ ಧರ್ಮ. 'ಭೂಯಿಷ್ಠಾಂ ತೇ ನಮ ಉಕ್ತಿಂ ವಿಧೇಮ' (ಭಗವಂತನೇ ನಿನಗೆ ಭಕ್ತಿ ಜ್ಞಾನಗಳಿಂದ ಕೂಡಿದ ನಮಸ್ಕಾರವನ್ನು ಮಾಡುವೆವು) ಎಂದು ಶ್ರುತಿಯೂ ನಮನವನ್ನು ಬೋಧಿಸುತ್ತದೆ. ಆದ್ದರಿಂದ ನಮನವು ಧರ್ಮ. ಅದರಲ್ಲಿಯೂ ಶ್ರೀಹರಿ ನಮನವೇ ಮುಖ್ಯ ಧರ್ಮ ಎಂಬ ಅಭಿಪ್ರಾಯದಿಂದ ಆಚಾರ್ಯರು ಹರಿಪ್ರವಣತ್ವಮೇವ ಎಂದು ಏವಕಾರಸಹಿತವಾಗಿ ಹೇಳಿದ್ದಾರೆ.

ಯಾಗಾದಿಗಳಿಗೆ ವಿಶಿಷ್ಟ ಅಧಿಕಾರಿಗಳನ್ನು ಹೇಳಿದಂತೆ ನಮಸ್ಕಾರವನ್ನು ಮಾಡಲು ವಿಶಿಷ್ಟ ಅಧಿಕಾರಿಗಳನ್ನು ಹೇಳಿಲ್ಲ. ಸ್ತ್ರೀ ಶೂದ್ರ ಚಂಡಾಲಾದಿ ಎಲ್ಲರೂ ಶ್ರೀಹರಿನಮನವನ್ನು ಮಾಡಲು ಯೋಗ್ಯರೇ ಆಗಿದ್ದಾರೆ. ಆದ್ದರಿಂದ ಸರ್ವಸ್ಯ ಧರ್ಮಃ ಎಂದು ಆಚಾರ್ಯರು ತಿಳಿಸಿದ್ದಾರೆ.

**ಪೀಠಿಕೆ** :- ಮಂಗಲಪದ್ಯದ ಉತ್ತರಾರ್ಧದಲ್ಲಿರುವ ಪ್ರಮೇಯಗಳನ್ನು ತಿಳಿಸುತ್ತಾರೆ—

ನಿರ್ದೋಷಕಃ ಸೃತಿವಿಹೀನ ಉದಾರಪೂರ್ಣ—

**ಸಂವಿದ್ಗುಣಃ ಪ್ರಥಮಕೃತ್ ಸಕಲಾತ್ಮಶಕ್ತಿಃ ।**
**ಮೋಕ್ಷೈಕಹೇತುರಸುರೂಪಸುರೈಶ್ಚ ಮುಕ್ತೈಃ**
**ವಂದ್ಯಃ ಸ ಏಕ ಇತಿ ಚೋಕ್ತಮಥೋತ್ತರಾರ್ಧೇ ॥ ೬೦ ॥**

**ಅರ್ಥ** :- ಅನಂತರ, **ಉತ್ತರಾರ್ಧೇ** ಉತ್ತರಾರ್ಧದಲ್ಲಿ, **ಸಃ** ಆ ನಾರಾಯಣನು **ನಿರ್ದೋಷಕಃ** ದೋಷರಹಿತನು, **ಸೃತಿವಿಹೀನಃ** ಸಂಸಾರ ರಹಿತನು, **ಉದಾರ ಪೂರ್ಣಸಂವಿದ್ಗುಣಃ** ಉತ್ಕೃಷ್ಟವಾದ ಪೂರ್ಣವಾದ, ಜ್ಞಾನಾದಿಗುಣವುಳ್ಳವನು, **ಪ್ರಥಮಕೃತ್** ಆದಿಕಾಲದಲ್ಲಿ ಸೃಷ್ಟಿ ಮಾಡಿದವನು, **ಸಕಲಾತ್ಮಶಕ್ತಿಃ** ಸ್ವಭಾವ ಭೂತವಾದ ಸರ್ವಶಕ್ತಿಯುಳ್ಳವನು, **ಮೋಕ್ಷೈಕಹೇತುಃ** ಮೋಕ್ಷಕ್ಕೆ ಮುಖ್ಯ ಕಾರಣನು, **ಮುಕ್ತೈಃ** ಮುಕ್ತರಾದ, **ಅಸುರೂಪ ಸುರೈಶ್ಚ** ತತ್ವಾಭಿಮಾನಿ ದೇವತೆಗಳಿಂದಲೂ, **ವಂದ್ಯಃ** ನಮ್ಯನು, **ಏಕಃ** ಒಬ್ಬನೇ (ಸ್ವಗತ ಭೇದ ವಿವರ್ಜಿತ), **ಇತಿ ಚ**, ಎಂಬುದಾಗಿಯೂ **ಉಕ್ತಂ** ಹೇಳಲ್ಪಟ್ಟಿದೆ.

**ತಾತ್ಪರ್ಯ** :- ಮಂಗಲಪದ್ಯದ ಉತ್ತರಾರ್ಧದಲ್ಲಿರುವ ಪ್ರಮೇಯಗಳು-

ಶ್ರೀಹರಿಯು ದೋಷದೂರನು, ಸಂಸಾರರಹಿತನು, ಜ್ಞಾನಾದಿ ಉತ್ತಮ ಗುಣಪೂರ್ಣನು, ಸೃಷ್ಟಿಯ ಆದಿಯಲ್ಲಿದ್ದು ಸೃಷ್ಟಿ ಮಾಡಿದವನು, ಸ್ವರೂಪ ಭೂತವಾದ ಅಮಿತಶಕ್ತಿಯುಳ್ಳವನು ಮುಕ್ತಿಗೆ ಮುಖ್ಯಕಾರಣನು, ಮುಕ್ತರಾದ ತತ್ತ್ವಾಭಿಮಾನಿಗಳಿಂದಲೂ ವಂದ್ಯ ಮತ್ತು ಸ್ವಗತಭೇದಶೂನ್ಯ.

**ವಿಶೇಷ ವಿಷಯ** :- ತ್ರೈಗುಣ್ಯ ವರ್ಜಿತಂ ಎಂಬ ಪದದ ವ್ಯಾಖ್ಯಾನವೇ ನಿರ್ದೋಷಕಃ ಎಂಬ ಪದ. ಅಜ್ಞಾನ, ರಾಗ, ದ್ವೇಷ, ನಿದ್ದೆ ಆಲಸ್ಯ, ದುಃಖ, ಬಂಧ (ಸಂಸಾರ) ಮೊದಲಾದ ದೋಷಗಳು ಸತ್ವರಜಸ್ತಮೋಗುಣ ಮೂಲಕ ವಾಗಿವೆ. ಆದ್ದರಿಂದ ತ್ರೈಗುಣ್ಯವರ್ಜಿತ ಎಂದರೆ ದೋಷದೂರ ಎಂದೇ ಅರ್ಥವಾಗುವುದು.

ಅಜ ಎಂದರೆ ಜನನ ರಹಿತ. ಜನನ ಎಂದರೆ ಪುನಃ ಪುನಃ ಜನನ ರೂಪವಾದ ಸಂಸಾರ. ಆದ್ದರಿಂದ ಅಜ ಎಂದರೆ ಸಂಸಾರರಹಿತ ಎಂದರ್ಥ.

'ವಿಭುಂ' ಎಂಬಲ್ಲಿರುವ ಭೂಧಾತುನಿಷ್ಪನ್ನವಾದ 'ಭೂ' ಪದಕ್ಕೆ 'ಭವನ' ಎಂದು ಅರ್ಥ. ಭೂ ಪ್ರಾಪ್ತೌ ಎಂಬ ಧಾತುಪಾಠಕ್ಕನುಸಾರವಾಗಿ ಆ ಧಾತುವಿಗೆ ಪ್ರಾಪ್ತಿ ಎಂಬ ಅರ್ಥವಿದೆ. ಪ್ರಾಪ್ತಿ ಎಂಬ ಅರ್ಥವಿರುವ ಧಾತುಗಳಿಗೆಲ್ಲ ಜ್ಞಾನ ಎಂಬ ಅರ್ಥವಿರುತ್ತದೆ ಎಂಬ ನಿಯಮಾನುಸಾರ ಭವನ ಎಂದರೆ ಜ್ಞಾನ ಎಂದರ್ಥ. ಇದೇ ಭೂಶಬ್ದಕ್ಕೆ ಭೂಮಿತ್ವ ಎಂಬ ಅರ್ಥವಿಟ್ಟುಕೊಂಡರೆ ಸರ್ವಾಧಾರತ್ವ ಎಂಬ ಅರ್ಥ ದೊರೆಯುತ್ತದೆ. ಭಾ ದೀಪ್ತೌ ಎಂಬ ಧಾತುವಿಗನುಸಾರವಾಗಿ ಭವನವೆಂದರೆ ದೀಪ್ತಿ ಎಂದೂ ಅರ್ಥವಾಗುತ್ತದೆ. ಭವನ ಎಂದರೆ ಅಭಿಭವನ ಅಂದರೆ ಶತ್ರುಗಳನ್ನು ಪರಾಭವಗೊಳಿಸುವುದು ಎಂದೂ ಅರ್ಥವಿದೆ. ಭೂ ಸತ್ತಾಯಾಂ ಎಂಬ ಧಾತು ಪಾಠಕ್ಕನುಗುಣವಾಗಿ ಭವನ ಎಂದರೆ ಯಾವಾಗಲೂ ಇರುವಿಕೆ ಎಂದರ್ಥ. ಸರ್ವತ್ರ ಭವತಿ ಎಂಬ ವಿವರಣೆಯ ಪ್ರಕಾರ ಭವನ ಎಂದರೆ ವ್ಯಾಪ್ತಿ ಎಂದರ್ಥ. ಭವನ ಎಂದರೆ ತಿರೋಭವನ ಅಂದರೆ ಅದೃಶ್ಯತ್ವ ಎಂದರ್ಥ. ಭವನ ಎಂದರೆ ಆವಿರ್ಭಾವಃ ಅಂದರೆ ಪ್ರಸನ್ನತೆ. ಇವೇ ಮೊದಲಾದ ವಿವರಣೆಯ ಪ್ರಕಾರ, ವಿಭು ಎಂಬಲ್ಲಿರುವ ಭವನಾರ್ಥಕವಾದ ಭೂಪದಕ್ಕೆ ಜ್ಞಾನ, ಸರ್ವಾಧಾರತ್ವ

ಮೊದಲಾದ ಗುಣಗಳು ಎಂದರ್ಥವಾಗುತ್ತದೆ. ಒಟ್ಟಿನಲ್ಲಿ 'ವಿ' - ವಿಶಿಷ್ಟವಾದ ಅಂದರೆ ಸರ್ವೋತ್ತಮವಾದ ಮತ್ತು ಪೂರ್ಣವಾದ 'ಭು' - ಜ್ಞಾನಾದಿ ಗುಣಗಳುಳ್ಳವನು ಎಂದು ವಿಭುಪದದ ಅರ್ಥವಾಗುತ್ತದೆ. ಆದ್ದರಿಂದಲೇ ಆಚಾರ್ಯರು ವಿಭುಪದಕ್ಕೆ ಉದಾರಪೂರ್ಣಸಂವಿದ್ಗುಣಃ ಎಂದು ಸಂವಿದ್ಗುಣಾಃ ಎಂದು ಮಧ್ಯಮಪದಲೋಪಿ ಕರ್ಮಧಾರಯ ಸಮಾಸ ಮಾಡಬೇಕು. ಅಥವಾ ಸಂವಿತ್ ಚ ಗುಣಾಶ್ಚ ಎಂದಾಗಲೀ ಅಥವಾ ಜ್ಞಾನ ಮತ್ತು ಇತರ ಗುಣಗಳೆಂದಾಗಲೀ ಅರ್ಥವಾಗುತ್ತದೆ. ಇಲ್ಲದಿದ್ದರೆ 'ಸಂವಿದ್ಗುಣ' ಪದಕ್ಕೆ ಜ್ಞಾನವೆಂಬ ಗುಣವೆಂದು ಮಾತ್ರ ಅರ್ಥವಾಗಿ ಇತರ ಗುಣಗಳನ್ನು ಸಂಗ್ರಹಿಸಿದಂತಾಗಲಾರದು.

ಆದ್ಯಂ ಎಂಬ ಪದಕ್ಕೆ 'ಆದೌ ಯಾಪಯತಿ' - ಸೃಷ್ಟಿಯ ಆದಿಯಲ್ಲಿ ತನ್ನ ಉದರದಿಂದ ಜಗತ್ತನ್ನು ಹೊರಗೆ ಮಾಡುವವನು ಎಂಬ ವಿವರಣೆಯ ಪ್ರಕಾರ ಆದಿಯಲ್ಲಿ ಸೃಷ್ಟಿಕರ್ತ ಎಂದರ್ಥವಾಗುವುದು. ಇದನ್ನೇ ಆಚಾರ್ಯರು ಪ್ರಥಮ ಕೃತ್ ಎಂದು ವಿವರಿಸಿದ್ದಾರೆ.

ಈಶ ಪದವು ಈಶ್ಲ್ ಶಕ್ತೌ ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ಆದ್ದರಿಂದ ಈಶ ಎಂದರೆ ಶಕ್ತ ಎಂದರ್ಥ. ಕೆಲವು ವಿಷಯದಲ್ಲಿ ಮಾತ್ರ ಶಕ್ತ ಎಂದು ಅರ್ಥ ಸಂಕೋಚ ಮಾಡಲು ಕಾರಣವಿಲ್ಲವಾದ್ದರಿಂದ ಸರ್ವಶಕ್ತ ಎಂದೇ ತಿಳಿಯಬೇಕು. ಮತ್ತು ಭಗವಂತನಿಗೆ ಶಕ್ತಿಯನ್ನು ಕೊಡುವವರು ಯಾರೂ ಇಲ್ಲವಾದ್ದರಿಂದ ಅವನ ಶಕ್ತಿಯು ಸ್ವರೂಪಭೂತವೆಂದೇ ತಿಳಿಯ ಬೇಕು. ಆದ್ದರಿಂದಲೇ ಆಚಾರ್ಯರು ಈಶ ಪದಕ್ಕೆ ಸಕಲಾತ್ಮಶಕ್ತಿಃ ಸ್ವರೂಪ ಭೂತವಾದ ಸರ್ವಶಕ್ತಿಯುಳ್ಳವನು ಎಂದು ವ್ಯಾಖ್ಯಾನಮಾಡಿದ್ದಾರೆ.

'ಭವಘ್ನಂ' ಎಂಬ ಪದಕ್ಕೆ 'ಮೋಕ್ಷೈಕ ಹೇತುಃ' ಎಂದು ಅರ್ಥ ಮಾಡಿದ್ದಾರೆ. ಮೋಕ್ಷ - ಮೋಕ್ಷಕ್ಕೆ, ಏಕಹೇತುಃ - ಮುಖ್ಯಕಾರಣ ಎಂದರ್ಥ. ಭವಂ ಹಂತೀತಿ ಭವಘ್ನಃ ಎಂಬ ನಿರ್ವಚನದ ಪ್ರಕಾರ ಭವಘ್ನ ಪದಕ್ಕೆ ಸಂಸಾರ ಹನನ ಕರ್ತ ಎಂದರ್ಥವಾಗುವುದು. ಹನನ ಕ್ರಿಯೆಯಲ್ಲಿ ಕರ್ತನೇ ಮುಖ್ಯ. ಬೇರೆಯದೆಲ್ಲ ಸಹಕಾರಿ ಮಾತ್ರ. ಆದ್ದರಿಂದ 'ಭವಘ್ನ' ಎಂಬ ಪದಕ್ಕೆ ಸಂಸಾರ ನಾಶರೂಪವಾದ ಮೋಕ್ಷಕ್ಕೆ ಮುಖ್ಯಕಾರಣ ಎಂದು ಅರ್ಥಮಾಡಲಾಗಿದೆ.

ಅಮರಾಸುರಸಿದ್ಧ ವಂದ್ಯಂ ಎಂಬಲ್ಲಿ ಅಸುರ ಎಂದರೆ 'ಅಸೂನ್ ರಮಯಂತಿ ಪ್ರಾಣಗಳನ್ನು ಸಂತೋಷಪಡಿಸುವವರು ಎಂಬ ವ್ಯುತ್ಪತ್ತಿಯಿಂದ ತತ್ತ್ವಾಭಿಮಾನಿಗಳು ಎಂದರ್ಥ. ಈ 'ಅಸುರ' ಪದದ ಫಲಿತಾರ್ಥವನ್ನೇ ಇಟ್ಟುಕೊಂಡು ಆಚಾರ್ಯರು ತಮ್ಮ ಪದ್ಯದಲ್ಲಿ ಅಸುರೂಪ ಎಂದಿದ್ದಾರೆ. ಅಸುರೂಪ ಎಂದರೆ, ಅಸೂನ್ - ಪ್ರಾಣಗಳನ್ನು ರೂಪಯಂತಿ - ಸಂತೋಷ ಪಡಿಸುವುದರ ಮೂಲಕ ರೂಪಿಸುವವರು ಎಂಬ ವಿವರಣೆಯಿಂದ ತತ್ತ್ವಾಭಿಮಾನಿಗಳು ಎಂದೇ ಅರ್ಥವಾಗುತ್ತದೆ. ಸಿದ್ಧ ಎಂದರೆ ಮುಕ್ತರು. 'ಸಿದ್ಧಾಶ್ಚ ತೇ ಅಸುರಾಶ್ಚ ಅಸುರಸಿದ್ಧಾಃ । ಅಸುರಸಿದ್ಧಾಶ್ಚ ತೇ ಅಮರಾಶ್ಚ ಅಮರಾಸುರಸಿದ್ಧಾಃ' ಎಂದು ವಿಗ್ರಹ ಪ್ರದರ್ಶನ. ಯದ್ಯಪಿ ಈ ವಿಗ್ರಹ ಪ್ರದರ್ಶನದ ಪ್ರಕಾರ 'ಸಿದ್ಧಾಸುರಾಮರಾಃ' ಎಂದು ಸಮಸ್ತ ರೂಪವಾಗಬೇಕಾಗುತ್ತದೆ. ಆದರೂ 'ಆಹಿತಃ ಅಗ್ನಿಃ ಯೈಃ ತೇ ಅಗ್ನ್ಯಾಹಿತಾಃ' ಎಂದಾಗುವಂತೆ ಇಲ್ಲಿಯೂ ಉತ್ತರಪದವು ಪೂರ್ವದಲ್ಲಿ ಬಂದಿದೆ ಎಂದಿಟ್ಟುಕೊಳ್ಳಬೇಕು. ಈ ಸಮಸ್ತಪದಕ್ಕೆ 'ಮುಕ್ತರಾದ ತತ್ತ್ವಾಭಿಮಾನಿ ದೇವತೆಗಳಿಂದ ವಂದ್ಯ' ಎಂದರ್ಥ. ಇದನ್ನು ಆಚಾರ್ಯರು ಅಸುರೂಪಸುರೈಶ್ಚ ಮುಕ್ತೈರ್ವಂದ್ಯಃ । ಎಂಬುದಾಗಿ ತಿಳಿಸಿದ್ದಾರೆ.

ಪೂರ್ವಾರ್ಧದಲ್ಲಿರುವ 'ಸಕಲಲೋಕನಮಸ್ಕೃತಂ' ಎಂಬುದಕ್ಕೆ ಸಂಸಾರಿ ಜೀವರಿಂದ ವಂದ್ಯ ಎಂದರ್ಥ. ಉತ್ತರಾರ್ಧದಲ್ಲಿರುವ ಅಮರಾಸುರ ಸಿದ್ಧವಂದ್ಯ' ಎಂಬ ಪದಕ್ಕೆ ಮುಕ್ತರಿಂದ ವಂದ್ಯ ಎಂದರ್ಥವಾಗುವುದರಿಂದ ಪುನರುಕ್ತಿದೋಷವಿಲ್ಲ. 'ಅನಾನುಭೂತೀರವಧೂನ್ವಾನಃ' ಎಂಬ ಶ್ರುತಿ ಪ್ರಕಾರ ಅಸುರರಿಗೆ ಮುಕ್ತಿ ಇಲ್ಲವಾದ್ದರಿಂದ, ಅಮರಾಸುರಸಿದ್ಧ ಎಂಬಲ್ಲಿಯಾದರೂ ಸಿದ್ಧ (ಮುಕ್ತ) ಎಂಬ ವಿಶೇಷಣವಿರುವುದರಿಂದ 'ಅಸುರ' ಪದಕ್ಕೆ ಅಸುರರು ಎಂದರ್ಥ ಮಾಡದೇ ತತ್ತ್ವಾಭಿಮಾನಿಗಳು ಎಂದೇ ಅರ್ಥವನ್ನು ಹೇಳಬೇಕು. ತತ್ತ್ವಾಭಿಮಾನಿ ದೇವತೆಗಳು ಅನ್ನಪಾನಾದಿಗಳಿಂದ ಸೌಖ್ಯವನ್ನು ಉಂಟು ಮಾಡಿದಾಗ ಪ್ರಾಣಿಗಳಿಗೆ ಹರ್ಷವಾಗುತ್ತದೆ. ಇಲ್ಲದಿದ್ದರೆ ದೈರ್ಘ್ಯ, ಮಾಂದ್ಯ, ಖಾಸ (ದೀರ್ಘವಾದ ಶ್ವಾಸ, ಮಂದವಾದ ಶ್ವಾಸ, ಕೆಮ್ಮು) ಮೊದಲಾದವು ಗಳಿಂದ ಪ್ರಾಣಗಳ ಸಂಚಾರ ಸರಿಯಾಗಿ ನಡೆಯುವುದಿಲ್ಲ. ಆದ್ದರಿಂದ ಅಸುರ ಪದದಿಂದ ಎಲ್ಲ ತತ್ತ್ವಾಭಿಮಾನಿ ದೇವತೆಗಳನ್ನಿಟ್ಟುಕೊಳ್ಳಬೇಕು.

ಹಿಂದೆ ಆಚಾರ್ಯರು 'ಕ್ವಚಿದಂತರಿತಾನಪಿ' (ಕೆಲವರು ಕೆಲವು ಶ್ಲೋಕಗಳನ್ನೇ ತೆಗೆದುಬಿಡುತ್ತಾರೆ) ಎಂದು ಹೇಳಿದಂತೆ, ಕೆಲವರು ಹರಿ ಸರ್ವೋತ್ತಮತ್ವ ಪ್ರತಿಪಾದಕವಾದ ಈ ಮಂಗಲ ಪದ್ಯವನ್ನೇ ಆದಿಯಲ್ಲಿ ಬರೆಯುವುದಿಲ್ಲ. ಕೇರಳ ದೇಶದಲ್ಲಿರುವ ಪ್ರಾಚೀನ ಪುಸ್ತಕಗಳಲ್ಲಿ ಇಂದಿಗೂ 'ನಾರಾಯಣಂ ಸುರಗುರುಂ' ಎಂಬ ಪದ್ಯ ಕಂಡು ಬರುತ್ತದೆ. ಈ ಮಂಗಲ ಪದ್ಯವನ್ನು ಸೇರಿಸುವುದೇ ಯುಕ್ತ. ಇಲ್ಲದಿದ್ದರೆ ಲೋಕ ಶಿಕ್ಷಕರಾದ ವ್ಯಾಸರು ಒಂದು ಲಕ್ಷ ಪರಿಮಿತವಾದ ಮಹಾಭಾರತವನ್ನು ರಚಿಸುವಾಗ ಆದಿಯಲ್ಲಿ ಲೋಕ ಶಿಕ್ಷಣಾರ್ಥವಾಗಿ ಮಂಗಲ ಪದ್ಯವನ್ನು ಹೇಗೆ ತಾನೇ ರಚಿಸಲಿಕ್ಕಿಲ್ಲ. ಸಣ್ಣದಾದ ಭಾಗವತ, ಹರಿವಂಶಾದಿ ಗ್ರಂಥಗಳಲ್ಲೇ 'ಸತ್ಯಂ ಪರಂ ಧೀಮಹಿ' ಎಂದು, ಮತ್ತು 'ಸೋನಾದಿರ್ವಾಸುದೇವಃ ಶಮಯತು ದುರಿತಂ ಜನ್ಮ ಜನ್ಮಾರ್ಜಿತಂ ನಃ' ಎಂದು ಲೋಕ ಶಿಕ್ಷಣಾರ್ಥವಾಗಿ ಮಂಗಲ ಪದ್ಯವನ್ನು ರಚಿಸಿದ್ದಾರೆ. ಹೀಗಿರುವಾಗ ಮಹಾಭಾರತದಂತಹ ದೊಡ್ಡ ಗ್ರಂಥದಲ್ಲಿಯೂ ಸಕಲ ಶಿಷ್ಟರ ಗುರುವಾದ ವ್ಯಾಸರು ಮಂಗಲ ಪದ್ಯವನ್ನು ರಚಿಸಿದ್ದಾರೆಂದೇ ತಿಳಿಯಬೇಕು. ॥ ೬೦ ॥

**ಪೀಠಿಕೆ :-** ಪೂರ್ವಾರ್ಧದಲ್ಲಿರುವ 'ಸಕಲ ಲೋಕ' ಎಂಬಲ್ಲಿ ಅಮುಕ್ತರೆಂದೂ ಉತ್ತರಾರ್ಧದಲ್ಲಿರುವ 'ಅಮರಾಸುರಸಿದ್ಧ' ಎಂಬಲ್ಲಿ ಮುಕ್ತರೆಂದು ವ್ಯಾಖ್ಯಾನ ಮಾಡಲು ಕಾರಣವನ್ನು ಹೇಳುತ್ತಾರೆ —

**ನಮ್ಯತ್ವಮುಕ್ತಮುಭಯತ್ರ ಯತಸ್ತತೋಽಸ್ಯ**
**ಮುಕ್ತೈರಮುಕ್ತಿಗಗಣೈಶ್ಚ ವಿನಮ್ಯತೋಕ್ತಾ ।**
**ಇತ್ಥಂ ಹಿ ಸರ್ವಗುಣಪೂರ್ತಿರಮುಷ್ಯ ವಿಷ್ಣೋಃ**
**ಪ್ರಸ್ತಾವಿತಾ ಪ್ರಥಮತಃ ಪ್ರತಿಜಾನತೈವ ॥ ೬೧ ॥**

**ಅರ್ಥ :- ಉಭಯತ್ರ** ಪೂರ್ವಾರ್ಧ ಮತ್ತು ಉತ್ತರಾರ್ಧದಲ್ಲಿಯೂ, **ಯತಃ** ಯಾವ ಕಾರಣದಿಂದ, **ನಮ್ಯತ್ವಂ** ನಮನಾರ್ಹತ್ವವು, **ಉಕ್ತಂ** ಹೇಳಲ್ಪಟ್ಟಿದೆಯೋ, **ತತಃ** ಆ ಕಾರಣದಿಂದ, **ಅಸ್ಯ** ಪರಮಾತ್ಮನಿಗೆ **ಮುಕ್ತೈಃ** ಮುಕ್ತರಿಂದ, **ಅಮುಕ್ತಿಗಗಣೈಶ್ಚ** ಸಂಸಾರಸ್ಥ ಜೀವರ ಸಮುದಾಯದಿಂದಲೂ, **ವಿನಮ್ಯತಾ** ವಂದ್ಯತ್ವವು, **ಉಕ್ತಾ** ಹೇಳಲ್ಪಟ್ಟಿದೆ, **ಇತ್ಥಂ** ಈ ರೀತಿಯಾಗಿ, **ಪ್ರಥಮತಃ** ಏವ ಉಪಕ್ರಮದಲ್ಲಿಯೇ, **ಪ್ರತಿಜಾನತಾ** ಪ್ರತಿಜ್ಞೆಮಾಡುವ

ಶ್ರೀ ವಾಸ್ವರಿಂದ, **ಅಮುಷ್ಯ ವಿಷ್ಣೋಃ** ಆ ಭಗವಂತನ, **ಗುಣಪೂರ್ತಿಃ** ಗುಣಪೂರ್ಣತ್ವವು, **ಪ್ರಸ್ತಾವಿತಾ ಹಿ** ಪ್ರಸ್ತಾಪಿಸಲ್ಪಟ್ಟಿದೆಯಷ್ಟೆ

**ತಾತ್ಪರ್ಯ :-** 'ನಾರಾಯಣಂ' ಇತ್ಯಾದಿ ಮಂಗಲ ಪದ್ಯದಲ್ಲಿ ಪೂರ್ವಾರ್ಧ ಮತ್ತು ಉತ್ತರಾರ್ಧ ಎರಡರಲ್ಲಿಯೂ ಭಗವಂತನು ನಮ್ಯ ಎನ್ನಲಾಗಿದೆ. ಆದ್ದರಿಂದ ಮುಕ್ತರಿಂದ ಮತ್ತು ಅಮುಕ್ತರಿಂದಲೂ ನಮ್ಯ ಎಂದರ್ಥ ಮಾಡಬೇಕು. ಇದರಿಂದ ಪುನರುಕ್ತಿ ದೋಷಕ್ಕೆ ಅವಕಾಶವಿಲ್ಲ.

ಈ ರೀತಿಯಾಗಿ ಮಂಗಲ ಪದ್ಯದಲ್ಲಿಯೇ ಪ್ರತಿಜ್ಞೆಯನ್ನು ಮಾಡುತ್ತಿರುವ (ಗ್ರಂಥದಲ್ಲಿ ಮುಂದೆ ಹೇಳುವ ವಿಷಯವಾವುದೆಂದು ನಿರೂಪಿಸುತ್ತಿರುವ) ವ್ಯಾಸರೇ ವಿಷ್ಣುವು ಸರ್ವಗುಣಪೂರ್ಣನೆಂಬ ವಿಷಯವನ್ನು ಪ್ರಸ್ತಾಪಿಸಿದ್ದಾರೆ.

**ವಿಶೇಷ ವಿಷಯ :-** ಪ್ರತಿಯೊಂದು ಶಾಸ್ತ್ರವೂ ಪ್ರತಿಜ್ಞೆಮಾಡಲ್ಪಟ್ಟ ವಿಷಯವನ್ನು ಪ್ರತಿಪಾದಿಸುವುದಾಗಿರುತ್ತದೆ. ಭಾರತವೂ ಒಂದು ಶಾಸ್ತ್ರ ಆದರೆ ಇದರಲ್ಲಿ ಪ್ರತ್ಯೇಕ ಪ್ರತಿಜ್ಞಾ ವಾಕ್ಯವಿಲ್ಲವಾದ್ದರಿಂದ ಮಂಗಲ ಪದ್ಯವನ್ನೇ ಪ್ರತಿಜ್ಞಾ ವಾಕ್ಯರೂಪ ಎಂದು ತಿಳಿಯಬೇಕು. ॥ ೬೧ ॥

**ಪೀಠಿಕೆ :-** ಸಂದಿಗ್ಧವಾದ ಭಾರತ ವಾಕ್ಯವನ್ನು ಸ್ಪಷ್ಟವಾದ ಭಾರತ ವಾಕ್ಯದಿಂದಲೇ ವಿವರಿಸುವುದಾಗಿ ಆಚಾರ್ಯರು ಹೇಳಿದ್ದರು. ಅದರ ಪ್ರಕಾರವಾಗಿ ಈಗ ಭಗವಂತನಲ್ಲಿ ಮುಕ್ತಾಮುಕ್ತ ವಂದ್ಯತ್ವವಿದೆ ಎಂಬ ವಿಷಯದಲ್ಲಿ ಸ್ಪಷ್ಟವಾದ ಭಾರತ ವಾಕ್ಯವನ್ನು ಉದಾಹರಿಸುತ್ತಾರೆ —

**ಕೃಷ್ಣೋ ಯಜ್ಞೈರಿಜ್ಯತೇ ಸೋಮಪೂತೈಃ**
**ಕೃಷ್ಣೋ ವೀರೈರಿಜ್ಯತೇ ವಿಕ್ರಮದ್ಭಿಃ ।**
**ಕೃಷ್ಣೋ ವನ್ಯೈರಿಜ್ಯತೇ ಸಂಮೃಶಾನ್ಯೈಃ**
**ಕೃಷ್ಣೋ ಮುಕ್ತೈರಿಜ್ಯತೇ ವೀತಮೋಹೈಃ ॥ ೬೨ ॥**

**ಅರ್ಥ :-** **ಕೃಷ್ಣಃ** ಶ್ರೀಹರಿಯ, **ಸೋಮಪೂತೈಃ** ಸೋಮಪಾನದಿಂದ ಪಾವನಗೊಂಡ ಯಜಮಾನರಿಂದ, **ಯಜ್ಞೈಃ** ಯಜ್ಞಗಳಿಂದ, **ಇಜ್ಯತೇ** ಪೂಜಿಸಲ್ಪಡುತ್ತಾನೆ. **ಕೃಷ್ಣಃ** ಶ್ರೀಹರಿಯು, **ವಿಕ್ರಮದ್ಭಿಃ** ಯುದ್ಧ ಮಾಡುವ, **ವೀರೈಃ** ವೀರರಾದ ರಾಜರಿಂದ, **ಇಜ್ಯತೇ** ಯುದ್ಧರೂಪ ಸ್ವಧರ್ಮದಿಂದ

ಪೂಜಿಸಲ್ಪಡುತ್ತಾನೆ, **ಕೃಷ್ಣಃ** ಶ್ರೀಹರಿಯು, **ಸಂಮೃಶಾನ್ಯೈಃ** ಚೆನ್ನಾಗಿ ವೇದಶಾಸ್ತ್ರ ವಿಚಾರಮಾಡುವ, **ವನ್ಯೈಃ** ಕಾಡಿನಲ್ಲಿರುವ ವಾನಪ್ರಸ್ಥಾಶ್ರಮಿಗಳಿಂದ ಮತ್ತು ಸಂನ್ಯಾಸಿಗಳಿಂದ, **ಇಜ್ಯತೇ** ಪೂಜಿಸಲ್ಪಡುತ್ತಾನೆ, **ಕೃಷ್ಣಃ** ಶ್ರೀಹರಿಯು, **ವೀತಮೋಹೈಃ** ಮೋಹ ರಹಿತರಾದ, **ಮುಕ್ತೈಃ** ಮುಕ್ತರಿಂದ, **ಇಜ್ಯತೇ** ಪೂಜಿಸಲ್ಪಡುತ್ತಾನೆ.

**ತಾತ್ಪರ್ಯ** :- ಸೋಮಪಾನಮಾಡಿ ಪವಿತ್ರರಾದ ಯಜಮಾನರು ಯಾಗದ ಮೂಲಕವಾಗಿ, ಶೂರರಾದ ರಾಜರು ಧರ್ಮಯುದ್ಧ ಮೂಲಕ ವಾಗಿ, ಕಾಡಿನಲ್ಲಿರುವ ವಾನಪ್ರಸ್ಥಾಶ್ರಮಿಗಳು ಹಾಗೂ ಸಂನ್ಯಾಸಿಗಳು ವೇದಾದಿ ಶಾಸ್ತ್ರವಿಚಾರ ಮಾಡುವುದರ ಮೂಲಕವಾಗಿ, ಮತ್ತು ಮುಕ್ತರು ಋಗ್ವೇದ ಪಠನ ಸಾಮಗಾನ, ಭಾರತಾದಿ ಪೌರುಷೇಯ ಗ್ರಂಥಾಧ್ಯಯನ ಮತ್ತು ಧ್ಯಾನಾದಿ ಮೂಲಕವಾಗಿಯೂ ಶ್ರೀಹರಿಯನ್ನು ಪೂಜಿಸುತ್ತಾರೆ. ಈ ಶ್ಲೋಕದ ಮೂರು ಪಾದಗಳಲ್ಲಿ ಅಮುಕ್ತರಿಂದ ನಮ್ಯತ್ವವೂ ಕೊನೆಯ ಪಾದದಲ್ಲಿ ಮುಕ್ತರಿಂದ ನಮ್ಯತ್ವವೂ ಸ್ಪಷ್ಟವಾಗಿ ಪ್ರತಿಪಾದಿತವಾಗಿದೆ.

**ವಿಶೇಷ ವಿಷಯ** :- ರಾಜರು ಯುದ್ಧಮಾಡುವುದೇ ಪೂಜೆ. ಇದಕ್ಕೆ ಪ್ರಮಾಣ 'ಧರ್ಮ್ಯಾದ್ಧಿ ಯುದ್ಧಾತ್ ಶ್ರೇಯೋಽನ್ಯತ್ ಕ್ಷತ್ರಿಯಸ್ಯ ನ ವಿದ್ಯತೇ' (ಕ್ಷತ್ರಿಯರಿಗೆ ಧರ್ಮಯುದ್ಧ ಬಿಟ್ಟು ಶ್ರೇಯಸ್ಕರವಾದ ಮತ್ತೊಂದು ಧರ್ಮವಿಲ್ಲ)

ಮುಕ್ತರು ಋಗ್ವೇದಾದಿಗಳನ್ನು ಅಧ್ಯಯನ ಮಾಡುವರೆಂಬುದಕ್ಕೆ ಪ್ರಮಾಣ ಋಚಾಂ ತ್ವಃ ಪೋಷಮಾಸ್ತೇ — ಇತ್ಯಾದಿ ಶ್ರುತಿ. ॥ ೬೨ ॥

**ಪೀಠಿಕೆ** :- ಭವಘ್ನಂ ಮತ್ತು ಜಗದೇಕನಾಥಂ ಎಂಬಲ್ಲಿರುವ ಪ್ರಮೇಯದ ವಿಷಯದಲ್ಲಿ ಸ್ಪಷ್ಟವಾದ ಭಾರತ ಶ್ಲೋಕವನ್ನು ಇನ್ನು ಮುಂದೆ ಉದಾಹರಿಸುತ್ತಾರೆ—

**ಸೃಷ್ಟಾ ಬ್ರಹ್ಮಾದಯೋ ದೇವಾ ನಿಹತಾ ಯೇನ ದಾನವಾಃ ।**
**ತಸ್ಮೈ ದೇವಾದಿದೇವಾಯ ನಮಸ್ತೇ ಶಾರ್ಙ್ಗಧಾರಿಣೇ ॥ ೬೩ ॥**

**ಅರ್ಥ** :- **ಯೇನ** ಯಾರಿಂದ, **ಬ್ರಹ್ಮಾದಯೋ ದೇವಾಃ** ಬ್ರಹ್ಮಾದಿ ದೇವತೆಗಳು, **ಸೃಷ್ಟಾಃ** ಮುಕ್ತರಾಗಿದ್ದಾರೋ, **ದಾನವಾಃ** ದಾನವರು, **ನಿಹತಾಃ**

ತಮಸ್ಸಿಗೆ ಹೋಗಿದ್ದಾರೋ, **ತಸ್ಮೈ** ಅಂತಹ, **ದೇವಾದಿದೇವಾಯ** ದೇವತೆಗಳಲ್ಲಿ ಆದಿ ದೇವನಾದ, **ಶಾರ್ಙ್ಗಧಾರಿಣೇ** ಶಾರ್ಙ್ಗವೆಂಬ ಧನುಸ್ಸನ್ನು ಧರಿಸಿದ, **ತೇ** ಭಗವಂತನಾದ ನಿನಗೆ, **ನಮಃ** ನಮಸ್ಕಾರವು.

**ತಾತ್ಪರ್ಯ** :- 'ಬ್ರಹ್ಮಾದಿ ದೇವತೆಗಳಿಗೆ ಮುಕ್ತಿಯನ್ನೂ ದಾನವರಿಗೆ ತಮಸ್ಸನ್ನೂ ಕೊಟ್ಟು ಸಂಸಾರ ನಾಶಕವಾದ, ದೇವತೆಗಳಲ್ಲಿ ಆದಿದೇವನಾದ ಆದ್ದರಿಂದಲೇ ಜಗದೇಕನಾಥನಾದ, ಭಗವಂತನೇ ನಿನಗೆ ನಮಸ್ಕಾರ.

**ವಿಶೇಷ ವಿಷಯ** :- ಈ ಭಾರತ ಶ್ಲೋಕದಲ್ಲಿ ಪೂರ್ವಾರ್ಧದಲ್ಲಿ 'ಭವಘ್ನ' ಎಂಬ ಪ್ರಮೆಯದ ವಿವರಣೆ ಬಂದಿದೆ. ಸಂಸಾರನಾಶವು ಎರಡು ಪ್ರಕಾರ. ಸಂಸಾರದಲ್ಲಿರುವ ದೇವತೆಗಳಿಗೆ ಮುಕ್ತಿ ಮತ್ತು ಸಂಸಾರದಲ್ಲಿರುವ ದಾನವರಿಗೆ ತಮಸ್ಸು ಇದರ ವಿವರಣೆ ಪೂರ್ವಾರ್ಧದಲ್ಲಿದೆ. ಉತ್ತರಾರ್ಧದಲ್ಲಿ 'ದೇವಾದಿ ದೇವಾಯ' ಎಂಬುದು 'ಜಗದೇಕನಾಥ' ಎಂಬುದರ ವಿವರಣೆ. ॥ ೬೩ ॥

**ಪೀಠಿಕೆ** :- ಮೇಲಿನ ಶ್ಲೋಕದಲ್ಲಿರುವ 'ಸೃಷ್ಟಿ' ಮತ್ತು 'ನಿಹತ' ಶಬ್ದಗಳಿಗೆ ಮುಕ್ತಿ ಮತ್ತು ತಮಸ್ಸು ಎಂಬ ಅಪೂರ್ವಾರ್ಥವನ್ನೇ ಹೇಳಬೇಕು. ಪ್ರಸಿದ್ಧಾರ್ಥವನ್ನು ಹೇಳಿದರೆ ಅಯುಕ್ತವಾಗುವುದು ಎಂದು ಇನ್ನು ಮುಂದೆ ತೋರಿಸುತ್ತಾರೆ —

**ಸ್ರಷ್ಟೃತ್ವಂ ದೇವಾನಾಂ ಮುಕ್ತಿ ಸ್ರಷ್ಟೃತ್ವ ಮುಚ್ಯತೇ ನಾನ್ಯತ್ ।**
**ಉತ್ಪತ್ತಿರ್ದೈತ್ಯಾನಾಮಪಿ ಯಸ್ಮಾತ್ ಸಮ್ಮಿತಾ ವಿಶೇಷೋಽಯಮ್ ॥ ೬೪ ॥**

**ಅರ್ಥ** :- **ದೇವಾನಾಂ ಸ್ರಷ್ಟೃತ್ವಂ** ದೇವತೆಗಳನ್ನು ಸೃಷ್ಟಿ ಮಾಡುವುದು ಎಂದರೆ, **ಮುಕ್ತಿ ಸ್ರಷ್ಟೃತ್ವಂ** ಮುಕ್ತಿಯನ್ನು ಕೊಡುವಿಕೆಯೆಂದೇ, **ಉಚ್ಯತೇ** ಹೇಳಲ್ಪಡುತ್ತದೆ, **ನ ಅನ್ಯತ್** ದೇಹಸಂಬಂಧ ರೂಪವಾದ ಸೃಷ್ಟಿಮಾಡುವಿಕೆ ಯಲ್ಲ, **ಯಸ್ಮಾತ್** ಯಾವ ಕಾರಣದಿಂದ, **ಉತ್ಪತ್ತಿಃ** ದೇಹಸಂಬಂಧರೂಪವಾದ ಸೃಷ್ಟಿಯು, **ದೈತ್ಯಾನಾಮಪಿ** ದೈತ್ಯರಿಗೂ, **ಸಮ್ಮಿತಾ** ಸಮಾನವಾಗಿದೆಯೋ, **ತಸ್ಮಾತ್** ಆ ಕಾರಣದಿಂದ, **ಅಯಂ ವಿಶೇಷಃ** ಸೃಷ್ಟಿ ಎಂದರೆ ಮುಕ್ತಿ ಎಂಬ ಅರ್ಥ ವಿಶೇಷವು ಗ್ರಾಹ್ಯವಾಗಿದೆ.

**ತಾತ್ಪರ್ಯ** :- ದೇವತೆಗಳನ್ನು ಸೃಷ್ಟಿಸುವುದು ಎಂದರೆ ಸಂಸಾರದಲ್ಲಿ ಸೃಷ್ಟರಾದ ದೇವತೆಗಳಿಗೆ ಸಂಸಾರಧ್ವಂಸರೂಪವಾದ ಮುಕ್ತಿಯನ್ನು ಉಂಟು

ಮಾಡುವುದು ಎಂದು ಅರ್ಥ. ಕೇವಲ ದೇಹಸಂಬಂಧರೂಪ ಸೃಷ್ಟಿಯಲ್ಲ, ಇಂತಹ ಸೃಷ್ಟಿಯು ದೈತ್ಯರಿಗೂ ಇದ್ದೇಇರುವಾಗ ಬ್ರಹ್ಮಾದಿ ದೇವತೆಗಳನ್ನು ಸೃಷ್ಟಿ ಮಾಡಿದವನು ಎಂದು ಬ್ರಹ್ಮಾದಿಗಳನ್ನು ಮಾತ್ರ ಉಲ್ಲೇಖಿಸುವುದು ಸರಿಯಾಗುವುದಿಲ್ಲ. ಆದ್ದರಿಂದ ಭಾರತದಲ್ಲಿ 'ಸೃಷ್ಟಾಃ' ಎಂಬ ಪದಕ್ಕೆ 'ಮುಕ್ತಿಯ ಸೃಷ್ಟಿಯುಳ್ಳವರು' ಎಂದು ಅರ್ಥ ಮಾಡಬೇಕು. ॥ ೬೪ ॥

**ಅಥ ಚದೈತ್ಯಹತಿಸ್ತಮಸಿ ಸ್ಥಿರಾ**
**ನಿಯತಸಂಸ್ಥಿತಿರೇವ ನ ಚಾನ್ಯಥಾ ।**
**ತನುವಿಭಾಗಕೃತಿಸ್ಸಕಲೇಷ್ವಿಯಂ**
**ನಹಿ ವಿಶೇಷಕೃತಾ ಸುರದೈತ್ಯಗಾ ॥ ೬೫ ॥**

**ಅರ್ಥ** :- **ಹಿ** ಯಾವ ಕಾರಣದಿಂದ, **ತನುವಿಭಾಗಕೃತಿಃ** ದೇಹವಿಯೋಗ ವನ್ನುಂಟು ಮಾಡುವಿಕೆಯೆಂಬ ಸಂಹಾರವು, **ಸಕಲೇಷು** ಎಲ್ಲರಲ್ಲಿಯೂ ಸಮಾನವಾಗಿದೆಯೋ, **ಚ** ಮತ್ತು, **ಸುರದೈತ್ಯಗಾ** ದೇವ ಮತ್ತು ದಾನವ ರಲ್ಲಿರುವ ಸಂಹಾರವು, **ವಿಶೇಷ ಕೃತಾ ನ** ಪ್ರೀತಿ ಮತ್ತು ದ್ವೇಷ ಎಂಬ ವಿಶೇಷ ಕಾರಣದಿಂದ ಮಾಡಲ್ಪಡುವುದಲ್ಲವೋ, **ಅಥ** ಆ ಕಾರಣದಿಂದ, **ದೈತ್ಯಹತಿಃ** ದೈತ್ಯರ ಸಂಹಾರವೆಂದರೆ, **ತಮಸಿ** ತಮಸ್ಸಿನಲ್ಲಿ, **ಸ್ಥಿರಾ** ಸ್ಥಿರವಾದ,, **ನಿಯತ ಸಂಸ್ಥಿತಿರೇವ** ನಿಯತವಾದ ಇರುವಿಕೆಯೇ ಆಗಿದೆ. **ಅನ್ಯಥಾ ಚ** ದೇಹ ವಿಯೋಗರೂಪವಾದದ್ದು **ನ** ಅಲ್ಲ.

**ತಾತ್ಪರ್ಯ** :- 'ನಿಹತಾ ಯೇನ ದಾನವಾಃ' ಎಂಬಲ್ಲಿ ದೈತ್ಯರ ಸಂಸಾರವೆಂದರೆ ಅವರನ್ನು ಶಾಶ್ವತವಾಗಿ ತಮಸ್ಸಿನಲ್ಲಿ ಹಾಕುವುದೇ ಹೊರತು ದೇಹವಿಯೋಗ ಉಂಟುಮಾಡುವುದು ಮಾತ್ರವಲ್ಲ. ಇದು ಎಲ್ಲರಿಗೂ ಸಮಾನ ಮತ್ತು ದೇವತೆಗಳಲ್ಲಿ ದೇಹ ವಿಯೋಗವು ಪ್ರೀತಿಯಿಂದ ಕೂಡಿದ್ದು ದಾನವರಲ್ಲಿ ದೇಹವಿಯೋಗ ಮಾಡಿದ್ದು ದ್ವೇಷದ ಮೂಲಕ ಎಂಬೀ ವಿಶೇಷವೂ ಇಲ್ಲ. ಆದ್ದರಿಂದ ಇಲ್ಲಿ ಸಂಹಾರವೆಂದರೆ ದೇಹವಿಯೋಗವನ್ನುಂಟು ಮಾಡುವುದೆಂದು ಇಟ್ಟುಕೊಂಡರೆ ದೈತ್ಯರಿಗೆ ಮಾತ್ರ ವಿಶೇಷವಾಗಿ ಹೇಳಿದ್ದು ಸರಿಯಾಗುವುದಿಲ್ಲ. ಆದ್ದರಿಂದ 'ತಮಸ್ಸಿನಲ್ಲಿ ಸ್ಥಿತಿ' ಎಂದೇ ಅರ್ಥಮಾಡಬೇಕು.

**ವಿಶೇಷ ವಿಷಯ** :- ತಮಸ್ಸಿನಲ್ಲಿ ಬಿದ್ದ ದೈತ್ಯರಾದರೂ ತಮ್ಮ ಮೇಲೆ ಬೀಳುವ ಶಕ್ತಿಯೇ ಮೊದಲಾದ ಅಸ್ತ್ರ ಸಮೂಹಗಳಿಂದ ತಡೆ ಇರುವುದರಿಂದ

ಮೇಲೆ ಬರುವಂತಿಲ್ಲ. ಆದ್ದರಿಂದ ನಿಯಮೇನ ಅಲ್ಲೇ ಇರಬೇಕು. ಆದ್ದರಿಂದ ಸ್ಥಿರಾ ಸಂಸ್ಥಿತಿಃ ಎಂದು ಹೇಳಿದ್ದಾರೆ. ॥ ೬೫ ॥

**ಪೀಠಿಕೆ** :- 'ಸೃಷ್ಟಾ ಬ್ರಹ್ಮಾದಯಃ' ಎಂಬ ಭಾರತ ಶ್ಲೋಕಕ್ಕೆ ನಾವು ಮಾಡಿದ ಅಪೂರ್ವ ವ್ಯಾಖ್ಯಾನವು ಯುಕ್ತಿಸಿದ್ಧವೆಂದಷ್ಟೇ ಅಲ್ಲ ಶ್ರೀಹರಿಯು ದೇವತೆಗಳಿಗೆ ಇಷ್ಟ ಸಾಧಕ, ಅಸುರರಿಗೆ ಅನಿಷ್ಟಕಾರಕ ಎಂಬುದು ಭಾರತ ಕಥೆಯ ಪರ್ಯಾಲೋಚನೆಯಿಂದಲೂ ಸ್ಪಷ್ಟವಾಗಿ ಸಿದ್ಧವಾಗುತ್ತದೆ ಎಂದು ಹೇಳುತ್ತಾರೆ —

**ತಮಿಮಮೇವ ಸುರಾಸುರಸಂಚಯೇ**
**ಹರಿಕೃತ, ಪ್ರವಿಶೇಷಮುದೀಕ್ಷಿತುಮ್ ।**
**ಪ್ರತಿವಿಭಜ್ಯ ಚ ಭೀಮಸುಯೋಧನೌ**
**ಸ್ವಪರಪಕ್ಷಭಿದಾ ಕಥಿತಾ ಕಥಾ ॥ ೬೬ ॥**

**ಅರ್ಥ** :- **ಸುರಾಸುರಸಂಚಯೇ** ದೇವದಾನವಸಮೂಹದಲ್ಲಿ, **ಹರಿಕೃತಂ** ಭಗವಂತನಿಂದ ಮಾಡಲ್ಪಟ್ಟ **ತಂ ಇಮಮೇವ ಪ್ರವಿಶೇಷಂ** ಹಿಂದಿನ ಶ್ಲೋಕ ದಲ್ಲಿ ಹೇಳಿದ ಆ ವಿಶೇಷವನ್ನು **ಉದೀಕ್ಷಿತುಂ** ತೋರಿಸಲು, **ಭೀಮ ಸುಯೋಧನೌ** ಭೀಮ ಮತ್ತು ದುರ್ಯೋಧನರನ್ನು **ಪ್ರತಿವಿಭಜ್ಯ** ಬೇರೆ ಬೇರೆ ಪಕ್ಷದಲ್ಲಿರುವಂತೆ ವಿಭಾಗಮಾಡಿ, **ಸ್ವಪರಪಕ್ಷ ಭಿದಾ** ತನ್ನವರಾದ ದೇವತೆಗಳ ಪಕ್ಷ ಮತ್ತು ತನ್ನವರಲ್ಲದ ಅಸುರರ ಪಕ್ಷಗಳಲ್ಲಿ ಜಯಪರಾಜಯವೆಂಬ ಫಲಭೇದವುಳ್ಳ, **ಕಥಾ** ಕಥೆಯು, **ಕಥಿತಾ** ಹೇಳಲ್ಪಟ್ಟಿದೆ.

**ತಾತ್ಪರ್ಯ** :- ಭಗವಂತನು ದೇವತೆಗಳಿಗೆ ಇಷ್ಟವನ್ನು, ದಾನವರಿಗೆ ಅನಿಷ್ಟವನ್ನೂ ಮಾಡುತ್ತಾನೆಂಬ ಪ್ರಮೇಯವನ್ನು ತೋರಿಸಲಿಕ್ಕಾಗಿಯೇ ಶ್ರೀ ವ್ಯಾಸರು ಭೀಮನನ್ನು ತಮ್ಮ ಪಕ್ಷದಲ್ಲಿ, ದುರ್ಯೋಧನನನ್ನು ಪರಪಕ್ಷದಲ್ಲಿ ರುವಂತೆ ವಿಭಾಗ ಮಾಡಿ ಭೀಮನಿರುವ ದೇವಪಕ್ಷಕ್ಕೆ ಜಯವನ್ನೂ ದುರ್ಯೋಧನನಿರುವ ಅಸುರ ಪಕ್ಷಕ್ಕೆ ಪರಾಜಯವನ್ನೂ ಪ್ರತಿಪಾದಿಸುವ ಕಥೆಯನ್ನು ಹೇಳಿದ್ದಾರೆ. ಆದ್ದರಿಂದ ಭಾರತ ಕಥೆಯನ್ನು ನೋಡಿದಾಗ ಶ್ರೀಹರಿಯು ದೇವತೆಗಳಿಗೆ ಅನುಗ್ರಹವನ್ನೂ ಅಸುರರಿಗೆ ನಿಗ್ರಹವನ್ನೂ ಮಾಡುತ್ತಾನೆಂಬುದು ಸ್ಪಷ್ಟವಾಗುತ್ತದೆ. ॥ ೬೬ ॥

**ವಿಶೇಷ ವಿಷಯ** :- ಈ ಶ್ಲೋಕದಲ್ಲಿ ಆಚಾರ್ಯರು 'ಉದೀಕ್ಷಯಿತುಂ' (ತೋರಿಸಲು) ಎಂಬ ಪ್ರಯೋಗದ ಬದಲು 'ಉದೀಕ್ಷಿತುಂ' (ನೋಡಲು) ಎಂದು ಪ್ರಯೋಗ ಮಾಡಿದ್ದಾರೆ. ಇದರಿಂದ ವ್ಯಾಸರಿಗೂ ದುರ್ಯೋಧನನ ಸಂಕಟವನ್ನು ಮತ್ತು ಭೀಮನ ಹರ್ಷವನ್ನು ನೋಡುವುದರಲ್ಲಿ ಅಭಿರುಚಿ ಇದೆಯೆಂದು ಧ್ವನಿತವಾಗುತ್ತದೆ. ॥ ೬೬ ॥

**ಪೀಠಿಕೆ** :- ಈಗ ಭಾರತದ ಆದಿಯಲ್ಲಿ ಅವಾಂತರವಕ್ತಾರರಾದ ವೈಶಂಪಾಯನರು ಮಾಡಿದ ನಮಸ್ಕಾರರೂಪವಾದ ಮತ್ತು ವಸ್ತುನಿರ್ದೇಶಾತ್ಮಕವಾದ ಮಂಗಲ ಪ್ರತಿಪಾದಕ ಪದ್ಯಗಳನ್ನು ಉದಾಹರಿಸುತ್ತಾರೆ - (೬೭ನೇ ಪದ್ಯದಿಂದ ೬೯ನೇ ಪದ್ಯದವರೆಗೆ)

**ನಮೋ ಭಗವತೇ ತಸ್ಮೈ ವ್ಯಾಸಾಯಾಮಿತತೇಜಸೇ ।**
**ಯಸ್ಯ ಪ್ರಾಸದಾದ್ ವಕ್ಷ್ಯಾಮಿ ನಾರಾಯಣ ಕಥಾಮಿಮಾಮ್ ॥೬೭॥**

**ಅರ್ಥ** :- **ಯಸ್ಯ** ಯಾರ, **ಪ್ರಸಾದಾತ್** ಅನುಗ್ರಹದಿಂದ, **ಇಮಾಂ** ಈ, **ನಾರಾಯಣಕಥಾಂ** ಭಗವಂತನ ಕಥೆಯನ್ನು, **ವಕ್ಷ್ಯಾಮಿ** ಹೇಳುವೆನೋ, **ತಸ್ಮೈ** ಅಂತಹ, **ಅಮಿತತೇಜಸೇ** ಅಪರಿಮಿತ ತೇಜಸ್ಸುಳ್ಳ, **ಭಗವತೇ** ಷಡ್ಗುಣೈಶ್ವರ್ಯ ಸಂಪನ್ನರಾದ, **ವ್ಯಾಸಾಯ** ವೇದವ್ಯಾಸರಿಗೆ, **ನಮಃ** ನಮಸ್ಕಾರವು.

**ತಾತ್ಪರ್ಯ** :- ಅತ್ಯಂತ ಪ್ರಕಾಶಯುಕ್ತರಾದ ಭಗವಾನ್ ವೇದವ್ಯಾಸರ ಅನುಗ್ರಹದಿಂದಲೇ ನಾನು (ವೈಶಂಪಾಯನರು) ನಾರಾಯಣನ ಕಥೆಯನ್ನು ಹೇಳುವೆನು. ಆ ವ್ಯಾಸರಿಗೆ ನಮಸ್ಕಾರ. ॥ ೬೭ ॥

**ವಾಸುದೇವಸ್ತು ಭಗವಾನ್ ಕೀರ್ತಿತೋಽತ್ರ ಸನಾತನಃ ।**
**ಪ್ರತಿಬಿಂಬಮಿವಾದರ್ಶೇ ಯಂ ಪಶ್ಯಂತ್ಯಾತ್ಮನಿ ಸ್ಥಿತಮ್ ॥ ೬೮ ॥**

**ಅರ್ಥ** :- **ಆತ್ಮನಿ** ಜೀವನಲ್ಲಿ, **ಸ್ಥಿತಂ** ಇರುವ, **ಯಂ** ಯಾವ ಪರಮಾತ್ಮನನ್ನು, **ಆದರ್ಶೇ** ಕನ್ನಡಿಯಲ್ಲಿ, **ಪ್ರತಿಬಿಂಬಮಿವ** ಪ್ರತಿಬಿಂಬವನ್ನೆಂಬಂತೆ, **ಪಶ್ಯಂತಿ** ಜ್ಞಾನಿಗಳು ನೋಡುತ್ತಾರೋ, **ಸಃ** ಅಂತಹ, **ಸನಾತನಃ** ಅನಾದಿ ನಿತ್ಯನಾದ, **ಭಗವಾನ್** ಷಡ್ಗುಣೈಶ್ವರ್ಯಸಂಪನ್ನನಾದ, **ವಾಸುದೇವಸ್ತು** ಶ್ರೀಮನ್ನಾರಾಯಣನೇ, **ಅತ್ರ** ಈ ಭಾರತದಲ್ಲಿ **ಕೀರ್ತಿತಃ** ವರ್ಣಿಸಲ್ಪಟ್ಟಿದ್ದಾನೆ.

**ತಾತ್ಪರ್ಯ** :- ಋಷಿಗಳು ಜೀವರಲ್ಲಿರುವ ಪರಮಾತ್ಮನನ್ನು ಕನ್ನಡಿಯಲ್ಲಿ ಪ್ರತಿಬಿಂಬವನ್ನು ನೋಡುವಂತೆ ನೋಡುತ್ತಾರೆ. ಅಂತಹ ಅನಾದಿನಿತ್ಯನಾದ ಶ್ರೀಹರಿಯು ಈ ಭಾರತದಲ್ಲಿ ಪ್ರತಿಪಾದ್ಯನಾಗಿದ್ದಾನೆ. ॥ ೬೮ ॥

**ನಾಸ್ತಿ ನಾರಾಯಣಸಮಂ ನ ಭೂತಂ ನ ಭವಿಷ್ಯತಿ ।**
**ಏತೇನ ಸತ್ಯವಾಕ್ಯೇನ ಸರ್ವಾರ್ಥಾನ್ ಸಾಧಯಾಮ್ಯಹಮ್ ॥ ೬೯ ॥**

**ಅರ್ಥ** :- **ನಾರಾಯಣಸಮಂ** ನಾರಾಯಣನಿಗೆ ಸದೃಶವಾದ ವಸ್ತು, **ನಾಸ್ತಿ** ಇಲ್ಲ, **ನ ಭೂತಂ** ಹಿಂದೆ ಇದ್ದಿಲ್ಲ, **ನ ಭವಿಷ್ಯತಿ** ಮುಂದೆ ಇರುವುದಿಲ್ಲ, **ಏತೇನ ಸತ್ಯವಾಕ್ಯೇನ** ಈ ಸತ್ಯ ವಾಕ್ಯದಿಂದಲೇ, **ಸರ್ವಾರ್ಥಾನ್** ಎಲ್ಲ ಶಾಸ್ತ್ರಾರ್ಥಗಳನ್ನು **ಅಹಂ** ನಾನು, **ಸಾಧಯಾಮಿ** ಸಾಧಿಸುತ್ತೇನೆ.

**ತಾತ್ಪರ್ಯ** :- 'ನಾರಾಯಣನಿಗೆ ಸಮಾನವಾದ ವಸ್ತು ಭೂತ ಭವಿಷ್ಯತ್ ವರ್ತಮಾನಗಳಲ್ಲಿ ಇಲ್ಲ' ಎಂಬ ಈ ಸತ್ಯ ವಾಕ್ಯದಿಂದಲೇ ನಾನು ಎಲ್ಲ ಪ್ರಮೇಯಗಳನ್ನೂ ಸಾಧಿಸುವೆನು. ಅಂದರೆ ಹರಿಸರ್ವೋತ್ತಮತ್ವವೇ ಸಕಲ ಶಾಸ್ತ್ರಾರ್ಥ ಎಂದು ಅಭಿಪ್ರಾಯ. ॥ ೬೯ ॥

**ಪೀಠಿಕೆ** :- ಗ್ರಂಥಾದಿಯಲ್ಲಿ ಮಂಗಲ ಪದ್ಯದಲ್ಲಿ ಪ್ರಸ್ತಾಪಿಸಿದ ಪ್ರಮೇಯಕ್ಕೆ ಅನುಕೂಲವಾದ ಪ್ರಮೇಯವನ್ನೇ ಮುಂದೆ ತೋರಿಸಬೇಕು ಹೊರತು ವಿರುದ್ಧವಾದುದನ್ನಲ್ಲ. ಆದ್ದರಿಂದ ಭಾರತದ ಲಕ್ಷ ಶ್ಲೋಕಗಳಿಗೂ ಹರಿ ಸರ್ವೋತ್ತಮತ್ವದಲ್ಲೇ ತಾತ್ಪರ್ಯವೆಂಬ ಅಭಿಪ್ರಾಯದಿಂದ ಹೇಳುತ್ತಾರೆ —

**ಆದ್ಯಂತಯೋರಿತ್ಯವದತ್ ಸ ಯಸ್ಮಾತ್**
**ವ್ಯಾಸಾತ್ಮಕೋ ವಿಷ್ಣುರುದಾರಶಕ್ತಿಃ ।**
**ತಸ್ಮಾತ್ ಸಮಸ್ತಾ ಹರಿಸದ್ಗುಣಾನಾಂ**
**ನಿರ್ಣೀತಯೇ ಭಾರತಗಾ ಕಥೈಷಾ ॥ ೭೦ ॥**

**ಅರ್ಥ** :- ಇತಿ ಈ ರೀತಿಯಾಗಿ, **ಆದ್ಯಂತಯೋಃ** ಮಂಗಲ ಪದ್ಯಗಳ ಆದಿ ಮತ್ತು ಅಂತ್ಯಗಳಲ್ಲಿ, **ಉದಾರಶಕ್ತಿಃ** ಉತ್ಕೃಷ್ಟ ಶಕ್ತಿಯುಳ್ಳ, **ವ್ಯಾಸಾತ್ಮಕಃ** ವ್ಯಾಸರೂಪನಾದ, **ವಿಷ್ಣುಃ** ವಿಷ್ಣುವು, **ಯಸ್ಮಾತ್** ಯಾವ ಕಾರಣದಿಂದ, **ಅವದತ್** ಹೇಳಿರುವರೋ, **ತಸ್ಮಾತ್** ಆ ಕಾರಣದಿಂದ, **ಭಾರತಗಾ** ಭಾರತ

ದಲ್ಲಿರುವ, **ಏಷಾ ಸಮಸ್ತಾ ಕಥಾ** ಈ ಎಲ್ಲ ಕಥೆಯು, **ಹರಿಸದ್ಗುಣಾನಾಂ** ಭಗವಂತನ ಸದ್ಗುಣಗಳ **ನಿರ್ಣೀತಯೇ** ನಿರ್ಣಯಕೋಸ್ಕರ ಪ್ರವೃತ್ತವಾಗಿದೆ.

**ತಾತ್ಪರ್ಯ :-** ವ್ಯಾಸರೂಪನಾದ ವಿಷ್ಣುವು ಈವರೆಗೆ ಉದಾಹರಿಸಿದ ಮಂಗಲ ಪದ್ಯಗಳ ಆದ್ಯಂತಗಳಲ್ಲಿ ಹರಿಸದ್ಗುಣಗಳನ್ನೇ ವರ್ಣಿಸಿದ್ದಾನೆ. ಆದ್ದರಿಂದ ಆ ಮಂಗಲ ಪದ್ಯಗಳಿಗೆ ಅನುಗುಣವಾಗಿ ಸಮಗ್ರ ಭಾರತದ ಕಥೆಗಳಲ್ಲಿಯೂ ಹರಿಯ ಸದ್ಗುಣಗಳೇ ನಿರ್ಣಯಿಸಲ್ಪಟ್ಟಿವೆ.

**ವಿಶೇಷ ವಿಷಯ :-** 'ಆದ್ಯಂತಯೋಃ' ಎಂಬ ಪದವು ಉಪಲಕ್ಷಣ. ಆದ್ದರಿಂದ ಇನ್ನೊಂದು ಅಭಿಪ್ರಾಯವನ್ನೂ ಇಟ್ಟುಕೊಳ್ಳಬಹುದು - ಭಾರತದ ಆದಿಯಲ್ಲಿ 'ನಾಸ್ತಿ ನಾರಾಯಣ ಸಮಂ' ಎಂಬ ಪದ್ಯದವರೆಗಿನ ಪದ್ಯಗಳಿಂದ ಹರಿಸರ್ವೋತ್ತಮತ್ವವನ್ನು ಉಪಕ್ರಮ ಮಾಡಲಾಗಿದೆ. ಮಧ್ಯಮಧ್ಯದಲ್ಲಿ 'ಮಯಿ ಸರ್ವಮಿದಂ ಪ್ರೋತಂ ಸೂತ್ರೇ ಮಣಿಗಣಾ ಇವ' (ದಾರದಲ್ಲಿ ಮಣಿಗಳಂತೆ ನನ್ನಲ್ಲಿ ಎಲ್ಲವೂ ಆಶ್ರಿತವಾಗಿದೆ) ಇತ್ಯಾದಿಯಾಗಿ ಹರಿ ಸರ್ವೋತ್ತಮತ್ವವನ್ನು ಹೇಳುವ ಅನೇಕ ಪದ್ಯಗಳನ್ನು ರಚಿಸಲಾಗಿದೆ. ಕೆಳಗೆ ಅಂತಹ ಕೆಲವು ಶ್ಲೋಕಗಳನ್ನು ಉದಾಹರಿಸಲಾಗಿದೆ.

'ಮತ್ತಃ ಪರತರಂ ನಾನ್ಯತ್ ಕಿಂಚಿದಸ್ತಿ ಧನಂಜಯ' (ಅರ್ಜುನನೇ! ನನಗಿಂತ ಉತ್ತಮ ಯಾವುದೂ ಇಲ್ಲ).

**ಯಸ್ಮಾತ್ ಕ್ಷರಮತೀತೋऽಹಮಕ್ಷರಾದಪಿ ಚೋತ್ತಮಃ ।**
**ಅತೋಽಸ್ಮಿ ಲೋಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ ॥**

(ನಾನು (ಕೃಷ್ಣ) ಕ್ಷರ ಮತ್ತು ಅಕ್ಷರ ಪುರುಷರಿಗಿಂತ ಉತ್ತಮನಾದುದರಿಂದ ಲೋಕದಲ್ಲಿಯೂ ವೇದದಲ್ಲಿಯೂ ಪುರುಷೋತ್ತಮನೆಂದು ಪ್ರಸಿದ್ಧನಾಗಿದ್ದೇನೆ.)

**ಸಸುರಾಸುರಗಂಧರ್ವಂ ಸಯಕ್ಷೋರಗರಾಕ್ಷಸಮ್ ।**
**ಜಗದ್ವಶೇऽವರ್ತತೇದಂ ಕೃಷ್ಣಸ್ಯ ಸಚರಾಚರಮ್ ॥**

(ದೇವ ದಾನವ ಗಂಧರ್ವರಿಂದ ಕೂಡಿದ, ಯಕ್ಷನಾಗರಾಕ್ಷಸರಿಂದ ಕೂಡಿದ, ಚರಾಚರ ಸಹಿತವಾದ ಈ ಜಗತ್ತು ಕೃಷ್ಣನ ವಶದಲ್ಲಿದೆ.)

**'ವಿಶ್ವಂ ವಿಷ್ಣುರ್ವಷಟ್ಕಾರೋ ಭೂತಭವ್ಯ ಭವತ್ಪ್ರಭುಃ'**

(ಭಗವಂತನು ಎಲ್ಲ ಜಗತ್ತನ್ನು ಪ್ರವೇಶಿಸಿರುವುದರಿಂದ 'ವಿಶ್ವ'ನೂ ವಿಶಿಷ್ಟವಾದ ಬಲ, ಪ್ರೇರಕತ್ವ ಮತ್ತು ವ್ಯಾಪ್ತಿ ಉಳ್ಳವನಾದ್ದರಿಂದ 'ವಿಷ್ಣು'ವೂ, ಐಶ್ವರ್ಯಾದಿ ಷಡ್ಗುಣ ಪೂರ್ಣನಾದ್ದರಿಂದ, ವಷಟ್ ಎಂದು ಕರೆಯಿಸಿಕೊಳ್ಳುವವನಾದ್ದರಿಂದ 'ವಷಟ್ಕಾರ'ನೂ, ಭೂತ ಭವಿಷ್ಯತ್ ವರ್ತಮಾನ ಪ್ರಪಂಚಕ್ಕೆ ಸ್ವಾಮಿಯೂ ಆಗಿದ್ದಾನೆ.)

**'ಪೂತಾತ್ಮಾ ಪರಮಾತ್ಮಾ ಚ ಮುಕ್ತಾನಾಂ ಪರಮಾಗತಿಃ'**

(ಭಗವಂತನು ನಿರ್ದುಷ್ಟನೂ ಉತ್ತಮನೂ ಮುಕ್ತರಿಗೆ ಆಶ್ರಯನೂ ಆಗಿದ್ದಾನೆ)

**'ಏಷ ನಿಷ್ಕಂಟಕಃ ಪಂಥಾ ಯತ್ರ ಸಂಪೂಜ್ಯತೇ ಹರಿಃ ।**
**ಕುಪಥಂ ತಂ ವಿಜಾನೀಯಾತ್ ಗೋವಿಂದರಹಿತಾಗಮಮ್' ॥**

(ಗೋವಿಂದನ ಗುಣವರ್ಣನ ರೂಪವಾದ ಪೂಜೆ ಎಲ್ಲಿ ನಡೆಯುವುದೋ ಅದೇ ನಿಷ್ಕಂಟಕವಾದ ಮಾರ್ಗ (ಶಾಸ್ತ್ರ). ಗೋವಿಂದನಿಲ್ಲದ ಶಾಸ್ತ್ರವು ಕುಮಾರ್ಗ.)

**'ಅನಾಶ್ರಿತ್ಯೋಚ್ಚ್ರಯೋ ನಾಸ್ತಿ ಮುಖ್ಯಮಾಶ್ರಯಮಾಶ್ರಯೇ'**

(ಶ್ರೀಹರಿಯನ್ನಾಶ್ರಯಿಸದೇ ಏಳಿಗೆಯಿಲ್ಲ, ಅಂತಹ ಮುಖ್ಯ ಆಶ್ರಯನಾದ ಭಗವಂತನನ್ನಾಶ್ರಯಿಸುತ್ತೇನೆ.)

**'ರುದ್ರಂ ಸಮಾಶ್ರಿತಾ ದೇವಾ ರುದ್ರೋ ಬ್ರಹ್ಮಾಣಮಾಶ್ರಿತಃ ।**
**ಬ್ರಹ್ಮಾ ಮಾಮಾಶ್ರಿತೋ ನಿತ್ಯಂ ನಾಹಂ ಕಂಚಿದುಪಾಶ್ರಿತಃ' ॥**

(ಎಲ್ಲ ದೇವತೆಗಳು ರುದ್ರನನ್ನಾಶ್ರಯಿಸಿದ್ದಾರೆ. ರುದ್ರನು ಬ್ರಹ್ಮದೇವರನ್ನಾಶ್ರಯಿಸಿದ್ದಾನೆ. ಬ್ರಹ್ಮನು ನನ್ನನ್ನು (ಹರಿ) ಆಶ್ರಯಿಸಿದ್ದಾನೆ. ನಾನು ಯಾರನ್ನೂ ಆಶ್ರಯಿಸಿಲ್ಲ) ಇವೇ ಮೊದಲಾದ ಶ್ಲೋಕಗಳಲ್ಲಿ ಹರಿಸರ್ವೋತ್ತಮತ್ವವು ವರ್ಣಿಸಲ್ಪಟ್ಟಿದೆ.

ಕೊನೆಯಲ್ಲಿ ಆಶ್ಚರ್ಯಪರ್ವದಲ್ಲಿ

**'ಸತ್ಯಂ ಸತ್ಯಂ ಪುನಃ ಸತ್ಯಂ ಉದ್ಧೃತ್ಯ ಭುಜಮುಚ್ಯತೇ ।**
**ವೇದಶಾಸ್ತ್ರಾತ್ ಪರಂ ನಾಸ್ತಿ ನ ದೈವಂ ಕೇಶವಾತ್ ಪರಮ್' ॥**

(ಇದು ಸತ್ಯ ಸತ್ಯ ಪುನಃ ಪುನಃ ಸತ್ಯವೆಂದು ಭುಜವೆತ್ತಿ ಸಾರುವೆವು. ವೇದಕ್ಕಿಂತ ಮಿಗಿಲಾದ ಶಾಸ್ತ್ರವಿಲ್ಲ. ಹರಿಗಿಂತ ಉತ್ತಮ ದೇವರಿಲ್ಲ) ಎಂದು ಹರಿಸರ್ವೋತ್ತಮತ್ವವನ್ನೇ ದೃಷ್ಟಾಂತ ಪೂರ್ವಕವಾಗಿ ಶಪಥ ಪೂರ್ವಕವಾಗಿ ಭುಜವೆತ್ತಿ ಸಾರಲಾಗಿದೆ. ಉಪಕ್ರಮ, ಉಪಸಂಹಾರ, ಅಭ್ಯಾಸ (ಪುನಃ ಪುನಃ ಹೇಳುವುದು) ಅಪೂರ್ವತಾ, ಫಲ, ಅರ್ಥವಾದ (ಪ್ರಶಂಸಾ ಅಥವಾ ನಿಂದೆ) ಉಪಪತ್ತಿ (ಯುಕ್ತಿ) ಇವುಗಳು ಗ್ರಂಥದ ಮಹಾ ತಾತ್ಪರ್ಯವನ್ನು ತಿಳಿಸುತ್ತಿವೆ ಎಂದು ಸಕಲ ವಿದ್ವಾಂಸರು ಅಂಗೀಕರಿಸಿರುವುದರಿಂದ ಪ್ರಕೃತದಲ್ಲಿಯೂ ಭಾರತದ ತಾತ್ಪರ್ಯವನ್ನು ಉಪಕ್ರಮಾದಿಗಳಿಂದಲೇ ತಿಳಿಯಬೇಕು. ಭಾರತದಲ್ಲಿ ಆದಿ ಮಧ್ಯ ಅಂತ್ಯಗಳಲ್ಲಿಹರಿ ಸರ್ವೋತ್ತಮತ್ವವೇ ವರ್ಣಿತವಾದ್ದ ರಿಂದ ಒಂದೂಕಾಲುಲಕ್ಷ ಭಾರತ ಶ್ಲೋಕಗಳಿಗೂ ಹರಿಸರ್ವೋತ್ತಮತ್ವದಲ್ಲೇ ತಾತ್ಪರ್ಯ ಎಂದು ಆಚಾರ್ಯರ ಅಭಿಪ್ರಾಯ. ॥ ೭೦ ॥

**ಪೀಠಿಕೆ** :- ಹರಿಸರ್ವೋತ್ತಮತ್ವವನ್ನು ಪ್ರತಿಪಾದಿಸುವ ಭಾರತದ ಅಂತ್ಯದಲ್ಲಿರುವ ಶ್ಲೋಕವನ್ನು ಉದಾಹರಿಸುತ್ತಾರೆ —

**ಸತ್ಯಂ ಸತ್ಯಂ ಪುನಃ ಸತ್ಯಂ ಉದ್ಧೃತ್ಯ ಭುಜಮುಚ್ಯತೇ ।**
**ವೇದಶಾಸ್ತ್ರಾತ್ ಪರಂ ನಾಸ್ತಿ ನ ದೈವಂ ಕೇಶವಾತ್ ಪರಮ್ ॥ ೭೧ ॥**

**ಅರ್ಥ** :- **ಭುಜಂ ಉದ್ಧೃತ್ಯ** ಕೈ ಎತ್ತಿ, **ಉಚ್ಯತೇ**, ಹೇಳಲ್ಪಡುತ್ತದೆ. **ಸತ್ಯಂ** ಸತ್ಯವು, **ಸತ್ಯಂ** ಸತ್ಯವು, **ಪುನಃ ಸತ್ಯಂ** ಮತ್ತೂ ಸತ್ಯವು, **ವೇದಶಾಸ್ತ್ರಾತ್** ವೇದ ಮತ್ತು ಮೀಮಾಂಸ ಶಾಸ್ತ್ರಕ್ಕಿಂತ, **ಪರಂ ನಾಸ್ತಿ** ಉತ್ತಮ ಶಾಸ್ತ್ರವಿಲ್ಲ **ಕೇಶವಾತ್** ಶ್ರೀಹರಿಗಿಂತ, **ಪರಂ ದೈವಂ** ಉತ್ತಮ ದೇವತೆಯು, **ನ** ಇಲ್ಲ.

**ತಾತ್ಪರ್ಯ** :- ಭುಜ ಎತ್ತಿ ಇದು ಸತ್ಯ ಸತ್ಯ ಎಂದು ಸಾರುತ್ತೇವೆ. ವೇದ ಮತ್ತು ಬ್ರಹ್ಮಮೀಮಾಂಸಾಶಾಸ್ತ್ರಕ್ಕಿಂತ ಉತ್ತಮ ಶಾಸ್ತ್ರವಿಲ್ಲ. ಹರಿಗಿಂತ ಉತ್ತಮದೇವತೆ ಇಲ್ಲ. ॥ ೭೧ ॥

**ಆಲೋಡ್ಯ ಸರ್ವಶಾಸ್ತ್ರಾಣಿ ವಿಚಾರ್ಯ ಚ ಪುನಃ ಪುನಃ ।**
**ಇದಮೇಕಂ ಸುನಿಷ್ಪನ್ನಂ ಧ್ಯೇಯೋ ನಾರಾಯಣಃ ಸದಾ ॥ ೭೨ ॥**

**ಅರ್ಥ** :- **ಸರ್ವಶಾಸ್ತ್ರಾಣಿ** ಎಲ್ಲ ಶಾಸ್ತ್ರಗಳನ್ನು, **ಆಲೋಡ್ಯ** ಮಥನ ಮಾಡಿ, **ಪುನಃ ಪುನಃ** ಮತ್ತು ಮತ್ತೂ, **ವಿಚಾರ್ಯ ಚ** ವಿಚಾರವನ್ನೂ ಮಾಡಿ, **ಸದಾ** ಯಾವಾಗಲೂ, **ನಾರಾಯಣಃ** ಶ್ರೀಹರಿಯು, **ಧ್ಯೇಯಃ** ಧ್ಯಾನಿಸಲ್ಪಡಬೇಕು, **ಇದಮೇಕಂ** ಎಂಬ ಈ ಒಂದು ಪ್ರಮೇಯವು, **ಸುನಿಷ್ಪನ್ನಮ್** ನಿಶ್ಚಯಿಸಲ್ಪಟ್ಟಿದೆ.

**ತಾತ್ಪರ್ಯ** :- ಸಕಲ ಶಾಸ್ತ್ರಗಳನ್ನೂ ಮಥನಮಾಡಿ ಪುನಃ ಪುನಃ ವಿಚಾರ ಮಾಡಿ ಈ ಪ್ರಮೇಯವನ್ನು ನಿರ್ಣಯಿಸಿದ್ದೇವೆ - ಯಾವಾಗಲೂ ಶ್ರೀಹರಿಯನ್ನೇ ಧ್ಯಾನಮಾಡಬೇಕು.

**ಪೀಠಿಕೆ** :- ಇನ್ನು ಮುಂದೆ ಭಾರತದ ಮಧ್ಯದಲ್ಲಿರುವ ಅನೇಕ ವಾಕ್ಯಗಳಿಂದ, ಮತ್ತು ಭಗವದವತಾರಗಳಲ್ಲಿ ಕಂಡು ಬರುವ ಭೇದ ಮೊದಲಾದ ದೋಷಗಳು ಅಸುರ ಮೋಹನಾರ್ಹ ಎಂದು ಪ್ರತಿಪಾದಿಸುವ ವಾಕ್ಯಗಳಿಂದಲೂ ಹರಿಸರ್ವೋತ್ತಮತ್ವಾದಿ ಮಹಿಮೆಯನ್ನೂ ಹಾಗೂ ಜನನ ಮರಣಾದಿ ಸಕಲದೋಷದೂರತ್ವವನ್ನೂ ದೃಢೀಕರಿಸುತ್ತಾರೆ —

**ಸ್ಮರ್ತವ್ಯಃ ಸತತಂ ವಿಷ್ಣುಃ ವಿಸ್ಮರ್ತವ್ಯೋ ನ ಜಾತುಚಿತ್ ।**
**ಸರ್ವೇ ವಿಧಿನಿಷೇಧಾಃ ಸ್ಯುಃ ಏತಯೋರೇವ ಕಿಂಕರಾಃ ॥ ೭೩ ॥**

**ಅರ್ಥ** :- **ಸತತಂ** ಯಾವಾಗಲೂ, **ವಿಷ್ಣುಃ** ವಿಷ್ಣುವೇ, **ಸ್ಮರ್ತವ್ಯಃ** ಸ್ಮರಿಸಲ್ಪಡಬೇಕು, **ಜಾತುಚಿತ್** ಒಮ್ಮೆಯೂ, **ನ ವಿಸ್ಮರ್ತವ್ಯಃ** ಮರೆಯಲ್ಪಡ ತಕ್ಕವನಲ್ಲ, **ಸರ್ವೇ** ಎಲ್ಲ, **ವಿಧಿನಿಷೇಧಾಃ** ಜ್ಯೋತಿಷ್ಟೋಮಾದಿ ವಿಧಿಗಳು ಬ್ರಾಹ್ಮಣ ಹನನಾದಿಗಳ ನಿಷೇಧಗಳು, **ಏತಯೋರೇವ** ಹರಿಸ್ಮರಣೆಯ ವಿಧಿ ಮತ್ತು ವಿಸ್ಮರಣೆಯ ನಿಷೇಧಗಳಿಗೇನೇ, **ಕಿಂಕರಾಃ** ದಾಸಸ್ಥಾನದಲ್ಲಿರುವುವು.

**ತಾತ್ಪರ್ಯ ಮತ್ತು ವಿಶೇಷಾಂಶ** :- ಹರಿಸ್ಮರಣೆಯ ವಿಧಿ ಮತ್ತು ಹರಿ ವಿಸ್ಮರಣೆಯ ನಿಷೇಧ ಇವುಗಳೇ ಮುಖ್ಯವಾಗಿ ಮೋಕ್ಷಕ್ಕೆ ಕಾರಣ. ಬೇರೆ ಯಾಗಾದಿ ವಿಧಿಗಳು ಹರಿಸ್ಮರಣೆಗೆ ಅಗತ್ಯವಾದ ಅಂತಃಕರಣವೆಂಬ ಮನೆಯ

ಶುದ್ಧೀಕರಣಕ್ಕಾಗಿಯೇ ಇರುವುದರಿಂದ ಹರಿಸ್ಮರಣ ವಿಧಿಯ ದಾಸಸ್ಥಾನದಲ್ಲಿವೆ. ಬ್ರಹ್ಮಹತ್ಯಾದಿಗಳ ನಿಷೇಧಗಳೂ ಕೂಡ ಹರಿವಿಸ್ಮರಣ ನಿಷೇಧಕ್ಕೆ ಪ್ರತಿಯೋಗಿ ಯಾದ ಹರಿವಿಸ್ಮರಣೆಯನ್ನುಂಟುಮಾಡುವ ದೋಷಗಳನ್ನು ಪರಿಹರಿಸುವುದ ಕ್ಕಾಗಿಯೇ ಇರುವುದರಿಂದ ಪರಂಪರಯಾ ಹರಿವಿಸ್ಮರಣೆಯ ನಿಷೇಧಕ್ಕೆ ದಾಸಸ್ಥಾನದಲ್ಲಿವೆ. ಇದಕ್ಕೆ ದೃಷ್ಟಾಂತ ರಾಮನ ವಿರೋಧಿ ರಾವಣ. ಅವನ ಸಹಾಯಕರು ರಾಕ್ಷಸರು. ಅವರನ್ನು ಕೊಲ್ಲುವ ಕಪಿಗಳು ಪರಂಪರಯಾ ರಾಮಕಿಂಕರರು. ಹಾಗೆ ಹರಿವಿಸ್ಮರಣ ನಿಷೇಧಕ್ಕೆ ಪ್ರತಿಯೋಗಿ ವಿಸ್ಮರಣ. ಅದಕ್ಕೆ ಕಾರಣ ದೋಷ. ಆ ದೋಷ ಪರಿಹಾರಕವಾದದ್ದು ಬ್ರಹ್ಮಹತ್ಯಾದಿ ನಿಷೇಧ. ಆದ್ದರಿಂದ ಇದೂ ಕೂಡ ಪರಂಪರಯಾ ಹರಿವಿಸ್ಮರಣ ನಿಷೇಧದ ಕೈಂಕರ್ಯ ವನ್ನು ಮಾಡುತ್ತದೆಂದು ಅಭಿಪ್ರಾಯ. ॥ ೭೩ ॥

**ಕೋ ಹಿ ತಂ ವೇದಿತುಂ ಶಕ್ತೋ ಯೋ ನ ಸ್ಯಾತ್ ತದ್ವಿಧೋಽಪರಃ ।**
**ತದ್ವಿಧಶ್ಚಾಪರೋ ನಾಸ್ತಿ ತಸ್ಮಾತ್ ತಂ ವೇದ ಸ ಸ್ವಯಂ ॥ ೭೪ ॥**

**ಅರ್ಥ** :- **ಯಃ ಅಪರಃ** ಭಗವಂತನಿಗಿಂತ ಬೇರೆಯಾದ ಯಾವ ಬ್ರಹ್ಮಾದಿಗಳು, **ತದ್ವಿಧಃ ನ ಸ್ಯಾತ್** ಅವನಿಗೆ ಸಮರಾಗುವುದಿಲ್ಲವೋ, **ಸಃ ಅಪರಃ** ಬೇರೆಯವರಾದ ಅಂತಹ ಬ್ರಹ್ಮಾದಿಗಳು, **ಕಃ ಹಿ** ಯಾರು ತಾನೆ, **ತಂ ವೇದಿತುಂ** ಆ ಭಗವಂತನನ್ನು ತಿಳಿಯಲು, **ಶಕ್ತಃ** ಸಮರ್ಥರು? **ತದ್ವಿಧಶ್ಚ** ಅವನಿಗೆ ಸಮರೂ ಮತ್ತು, **ಅಪರಃ** ಬ್ರಹ್ಮಾದಿಗಳಲ್ಲಿ ಸೇರದ ಬೇರೆ ಯಾರೂ, **ನಾಸ್ತಿ** ಇಲ್ಲ **ತಸ್ಮಾತ್** ಆದ್ದರಿಂದ, **ತಂ** ಆ ಪರಮಾತ್ಮನನ್ನು, **ಸ್ವಯಂ ಸಃ** ಆ ಪರಮಾತ್ಮನೇ, **ವೇದ** ತಿಳಿದಿದ್ದಾನೆ.

**ತಾತ್ಪರ್ಯ** :- ಶ್ರೀಹರಿಯನ್ನು ತಿಳಿಯಬೇಕಾದರೆ ಅವನಂಥವರೇ ಆಗಬೇಕು. ಆದರೆ ಬ್ರಹ್ಮಾದಿಗಳು ಯಾರೂ ಅವನಿಗೆ ಸಮರಲ್ಲ, ಅವರೆಲ್ಲರೂ ಶ್ರೀಹರಿಗಿಂತ ಅಧಮರೇ ಆಗಿದ್ದಾರೆ. ಮತ್ತು ಬ್ರಹ್ಮಾದಿಗಳಲ್ಲಿ ಸೇರದೆ ಅವರಿಗಿಂತ ಉತ್ತಮರಾಗಿ ಭಗವಂತನಿಗೆ ಸಮರಾದವರೂ ಯಾರೂ ಇಲ್ಲ. ಆದ್ದರಿಂದ ಆ ಪರಮಾತ್ಮನು ತಾನೊಬ್ಬನೇ ತನ್ನನ್ನು ಪೂರ್ತಿಯಾಗಿ ತಿಳಿದವನು.

**ವಿಶೇಷ ವಿಷಯ** :- ಆ ಪರಮಾತ್ಮನನ್ನು ತಿಳಿಯುವವರು ಯಾರೂ ಇಲ್ಲವೆಂದಾಗ ಅವನನ್ನು ಅವೇದ್ಯ ಎನ್ನಬಹುದೇ ಎಂದು ಶಂಕೆ ಬರುತ್ತವೆ.

ಆದರೆ ಅವೇದ್ಯನಾದರೆ ತತ್ತ್ವವೇ ಆಗುವುದಿಲ್ಲ. ಆದ್ದರಿಂದ, ತಾನೇ ತನ್ನನ್ನು ತಿಳಿದಿದ್ದಾನೆ ಎಂದು ಹೇಳಿದ್ದಾರೆ. ॥ ೭೪ ॥

**ಕೋ ಹಿ ತಂ ವೇದಿತುಂ ಶಕ್ತೋ ನಾರಾಯಣಮನಾಮಯಮ್ ।**
**ಋತೇ ಸತ್ಯವತೀಸೂನೋಃ ಕೃಷ್ಣಾದ್ವಾ ದೇವಕೀಸುತಾತ್ ॥ ೭೫ ॥**

**ಅರ್ಥ :-** **ಅನಾಮಯಂ** ನಿರ್ದುಷ್ಟನಾದ, **ನಾರಾಯಣಂ** ನಾರಾಯಣನನ್ನು, **ವೇದಿತುಂ** ತಿಳಿಯಲು, **ಸತ್ಯವತೀಸೂನೋಃ ಋತೇ** ವೇದವ್ಯಾಸರಲ್ಲದೆ, **ದೇವಕೀ ಸುತಾತ್** ದೇವಕೀತನಯನಾದ, **ಕೃಷ್ಣಾದ್ವಾ ಋತೇ** ಕೃಷ್ಣನಾಗಲೀ ಅಲ್ಲದೆ, **ಕೋ ಹಿ** ಬೇರೆ ಯಾರು ತಾನೆ, **ಶಕ್ತಃ** ಸಮರ್ಥರು.

**ತಾತ್ಪರ್ಯ :-** ಭಗವಂತನನ್ನು ಸಂಪೂರ್ಣವಾಗಿ ತಿಳಿಯಲು ವ್ಯಾಸರಾಗಲೀ ಕೃಷ್ಣನಾಗಲೀ ಸಮರ್ಥರು ಹೊರತು ಬೇರೆ ರಮಾ ಮೊದಲಾದವರು ಯಾರೂ ಕೂಡ ಪೂರ್ತಿಯಾಗಿ ತಿಳಿಯಲಾರರು. ॥ ೭೫ ॥

**ಅಪ್ರಮೇಯೋಽನಿಯೋಜ್ಯಶ್ಚ ಸ್ವಯಂ ಕಾಮಗಮೋ ವಶೀ**
**ಮೋದತ್ಯೇಷ ಸದಾ ಭೂತೈಃ ಬಾಲಃ ಕ್ರೀಡನಕೈರಿವ ॥ ೭೬ ॥**

**ಅರ್ಥ :-** ಏಷಃ ಈ ಪರಮಾತ್ಮನು, **ಅಪ್ರಮೇಯಃ** ಪೂರ್ತಿಯಾಗಿ, ತಿಳಿಯಲಶಕ್ಯನು **ಚ** ಮತ್ತು, **ಅನಿಯೋಜ್ಯಃ** ಯಾರ ನಿಯಮನಕ್ಕೂ ಒಳಪಡದವನು, **ಸ್ವಯಂ ಕಾಮಗಮಃ** ಸ್ವೇಚ್ಛೆಯಿಂದ ಸಂಚರಿಸುವವನು, **ವಶೀ** ಜಗತ್ತನ್ನು ತನ್ನ ವಶದಲ್ಲಿಟ್ಟುಕೊಂಡವನು, **ಸದಾ** ಯಾವಾಗಲೂ, **ಬಾಲಃ** ಬಾಲಕನು, **ಕ್ರೀಡನಕೈರಿವ** ಆಟದ ಗೊಂಬೆಗಳಿಂದೆಂಬಂತೆ, **ಭೂತೈಃ** ಪ್ರಾಣಿಗಳಿಂದ, **ಮೋದತಿ** ಸಂತೋಷಪಡುತ್ತಾನೆ.

**ತಾತ್ಪರ್ಯ :-** ಆ ಪರಮಾತ್ಮನನ್ನು ಯಾರೂ ಪೂರ್ತಿಯಾಗಿ ತಿಳಿದಿಲ್ಲ. ಅವನನ್ನು ಸೃಷ್ಟಿಯೇ ಮೊದಲಾದ ಕಾರ್ಯಗಳಲ್ಲಿ ನಿಯೋಜಿಸುವವರು ಯಾರೂ ಇಲ್ಲ. ತಾನೇ ಸ್ವೇಚ್ಛೆಯಿಂದ ಪ್ರವೃತ್ತನಾಗುತ್ತಾನೆ. ಎಲ್ಲ ಜಗತ್ತನ್ನೂ ತನ್ನ ಅಧೀನದಲ್ಲಿಟ್ಟುಕೊಂಡು ಬಾಲಕರು ಗೊಂಬೆಗಳಿಂದ ಆಡುವಂತೆ ಈ ಪ್ರಪಂಚದಿಂದ ಭಗವಂತನು ಕ್ರೀಡಿಸುತ್ತಾನೆ. ॥ ೭೬ ॥

**'ನ ಪ್ರಮಾತುಂ ಮಹಾಬಾಹುಃ ಶಕ್ಯೋಽಯಂ ಮಧುಸೂದನಃ ।**
**ಪರಮಾತ್ ಪರಮೇತಸ್ಮಾತ್ ವಿಶ್ವರೂಪಾನ್ನ ವಿದ್ಯತೇ' ॥ ೭೭ ॥**

**ಅರ್ಥ :- ಮಹಾಬಾಹುಃ** ಮಹಾ ಬಾಹುಶಾಲಿಯಾದ, **ಮಧುಸೂದನಃ** ಮಧುನಾಮಕ ದೈತನನ್ನು ಸಂಹರಿಸಿದ, **ಅಯಂ** ಈ ಪರಮಾತ್ಮನು, **ಪ್ರಮಾತುಂ ನ ಶಕ್ಯಃ** ಪೂರ್ತಿಯಾಗಿ ತಿಳಿಯಲ್ಪಡುವವನಲ್ಲ, **ಪರಮಾತ್** ಉತ್ತಮನಾದ **ಏತಸ್ಮಾತ್ ವಿಶ್ವರೂಪಾತ್** ಈ ವ್ಯಾಪ್ತವಾದ ರೂಪವುಳ್ಳ ಭಗವಂತನಿಗಿಂತ, **ಪರಂ** ಉತ್ತಮವಾದದ್ದು **ನ ವಿದ್ಯತೇ** ಇಲ್ಲ.

**ತಾತ್ಪರ್ಯ :-** ಪರಮಾತ್ಮನನ್ನು ಯಾರೂ ಪೂರ್ತಿಯಾಗಿ ತಿಳಿಯಲಾರರು. ವಿಶ್ವರೂಪಿಯಾದ ಇವನಿಗಿಂತ ಉತ್ತಮವಾದ ವಸ್ತು ಯಾವುದೂ ಇಲ್ಲ. ॥ ೭೭ ॥

**'ವಸುದೇವಸುತೋ ನಾಯಂ ನಾಯಂ ಗರ್ಭೇಽವಸತ್ ಪ್ರಭುಃ ।**
**ನಾಯಂ ದಶರಥಾತ್ ಜಾತೋ ನ ಚಾಪಿ ಜಮದಗ್ನಿತಃ' ॥ ೭೮ ॥**

**ಅರ್ಥ :- ಅಯಂ** ಈ ಕೃಷ್ಣನು, **ವಸುದೇವಸುತಃ ನ** ವಸುದೇವನ ಮಗನಲ್ಲ, **ಅಯಂ ಪ್ರಭುಃ** ಈ ಸರ್ವಸಮರ್ಥನಾದ ಹರಿಯು, **ಗರ್ಭೇ** ಗರ್ಭದಲ್ಲಿ **ನ ಅವಸತ್** ವಾಸಮಾಡಿಲ್ಲ **ಅಯಂ** ಈ ರಾಮನು, **ದಶರಥಾತ್** ದಶರಥನಿಂದ, **ನ ಜಾತಃ** ಹುಟ್ಟಿದವನಲ್ಲ **ಅಯಂ ಅಪಿ** ಪರಶುರಾಮನೂ ಕೂಡ, **ಜಮದಗ್ನಿತಃ** ಜಮದಗ್ನಿ ಋಷಿಯಿಂದ, **ನ ಚ ಜಾತಃ** ಹುಟ್ಟಿದವನಲ್ಲ.

**ತಾತ್ಪರ್ಯ :-** ಶ್ರೀಕೃಷ್ಣನು ವಸ್ತುತಃ ವಸುದೇವನ ಮಗನಲ್ಲ. ಅವನಿಗೆ ಗರ್ಭವಾಸವೇ ಇಲ್ಲ. ಇದರಂತೆ ರಾಮನು ದಶರಥನಿಂದ, ಪರಶುರಾಮನು ಜಮದಗ್ನಿಯಿಂದ ಹುಟ್ಟಿದವರಲ್ಲ. ಭಗವದವತಾರಗಳಿಗೆ ಜನನವೇ ಇಲ್ಲ. ॥ ೭೮ ॥

**ಜಾಯತೇ ನೈವ ಕುತ್ರಾಪಿ ಮ್ರಿಯತೇ ಕುತ ಏವ ತು ।**
**ನ ವೇಧ್ಯೋ ಮುಹ್ಯತೇ ನಾಯಂ ಬಧ್ಯತೇ ನೈವ ಕೇನಚಿತ್ ॥ ೭೯ ॥**

**ಅರ್ಥ :- ಅಯಂ** ಈ ನಾರಾಯಣನು, **ಕುತ್ರಾಪಿ** ಯಾರಲ್ಲಿಯೂ, **ನೈವ ಜಾಯತೇ** ಹುಟ್ಟುವುದೇ ಇಲ್ಲ **ಕುತ ಏವ ತು** ಹೇಗೆ ತಾನೇ, **ಮ್ರಿಯತೇ**

ಮರಣ ಹೊಂದಬಲ್ಲ? **ಅಯಂ** ಈ ನಾರಾಯಣನು, **ನ ವೇಧ್ಯಃ** ಗಾಯಗೊಳಿಸಲು ಅರ್ಹನಲ್ಲ, **ನ ಮುಹ್ಯತೇ** ಮೋಹಗೊಳ್ಳುವುದಿಲ್ಲ, **ಕೇನಚಿತ್** ಯಾರಿಂದಲೂ, **ನೈವ ಬಧ್ಯತೇ** ಬಂಧಿಸಲ್ಪಡುವುದೂ ಇಲ್ಲ.

**ತಾತ್ಪರ್ಯ** :- ಶ್ರೀಮನ್ನಾರಾಯಣನಿಗೆ ಜನನವೇ ಇಲ್ಲ. ಹೀಗಿರುವಾಗ ಮರಣವಾದರೂ ಹೇಗೆ? ಇವನಿಗೆ ಯಾರಿಂದಲೂ ವೇಧಮೋಹ ಬಂಧನಗಳಿಲ್ಲ. ॥ ೭೯ ॥

**'ಕುತೋ ದುಃಖಂ ಸ್ವತಂತ್ರಸ್ಯ ನಿತ್ಯಾನಂದೈಕರೂಪಿಣಃ ।**
**ಈಶನ್ನಪಿ ಹಿ ದೇವೇಶಸ್ಸರ್ವಸ್ಯ ಜಗತೋ ಹರಿಃ ॥ ೮೦ ॥**

**ಕರ್ಮಾಣಿ ಕುರುತೇ ನಿತ್ಯಂ ಕೀನಾಶ ಇವ ದುರ್ಬಲಃ' ।**

**ಅರ್ಥ** :- **ಸ್ವತಂತ್ರಸ್ಯ** ಸ್ವತಂತ್ರನಾದ, **ನಿತ್ಯಾನಂದೈಕರೂಪಿಣಃ** ಯಾವಾಗಲೂ ಆನಂದವೇ ದೇಹವಾಗಿ ಉಳ್ಳ ಪರಮಾತ್ಮನಿಗೆ, **ದುಃಖಂ** ದುಃಖವು, **ಕುತಃ** ಯಾವ ಕಾರಣದಿಂದ? **ದೇವೇಶಃ** ದೇವತೆಗಳಿಗೆ ಸ್ವಾಮಿಯಾದ, **ಹರಿಃ** ನಾರಾಯಣನು, **ಸರ್ವಸ್ಯ** ಎಲ್ಲ, **ಜಗತಃ** ಜಗತ್ತಿಗೆ, **ಈಶನ್ನಪಿ** ಸ್ವಾಮಿಯಾಗಿದ್ದರೂ, **ದುರ್ಬಲಃ ಕೀನಾಶಃ ಇವ** ದುರ್ಬಲನಾದ ಕೃಷಿಕರ್ಮಕಾರನಂತೆ, **ನಿತ್ಯಂ** ಯಾವಾಗಲೂ, **ಕರ್ಮಾಣಿ** ಕರ್ಮಗಳನ್ನು **ಕುರುತೇ** ಮಾಡುತ್ತಾನೆ.

**ತಾತ್ಪರ್ಯ** :- ಭಗವಂತನು ಸ್ವತಂತ್ರ ಮತ್ತು ಆನಂದಮಯ. ಇಂತಹ ಭಗವಂತನಿಗೆ ದುಃಖ ಬರುವುದಾದರೂ ಹೇಗೆ? ಅವನಿಗೆ ದುಃಖವೇ ಇಲ್ಲ. ಮತ್ತು ಅವನು ಸಕಲ ಜಗತ್ತಿಗೂ ಅಧಿಪತಿ. ಹಾಗಿದ್ದರೂ ಪರಾಧೀನರಾದ ಕರ್ಮಕಾರರಂತೆ ಅರ್ಜುನನ ಸಾರಥ್ಯ, ಬಲಿ ಯಾಚನೆ, ನಾರದವಂದನ, ಸಂಧ್ಯಾವಂದನಾದಿ ಕರ್ಮಗಳನ್ನು ಮಾಡುತ್ತಾನೆ. ॥ ೮೦ ॥

**'ಸ್ವಾತ್ಮಾನಂ ವೇದ ಮುಗ್ಧೋಽಯಂ ದುಃಖೀ ಸೀತಾಂ ಚ ಮಾರ್ಗತೇ ।**
**ಬದ್ಧಃ ಶಕ್ರಜಿತೇತ್ಯಾದಿಲೀಲೇಷಾ ಅಸುರಮೋಹಿನೀ' ॥ ೮೧ ॥**

**ಅರ್ಥ** :- **ಅಯಂ** ಈ ರಾಮನು, **ಮುಗ್ಧಃ** ಮುಗ್ಧನು, **ಆತ್ಮಾನಂ** ತನ್ನನ್ನೇ, **ನ ವೇದ** ತಿಳಿಯುವುದಿಲ್ಲ, **ದುಃಖೀ** ದುಃಖವುಳ್ಳವನು, **ಚ** ಮತ್ತು, **ಸೀತಾಂ**

ಸೀತೆಯನ್ನು **ಮಾರ್ಗತೇ** ಹುಡುಕುತ್ತಾನೆ, **ಶಕ್ರಜಿತಾ** ಇಂದ್ರಜಿತನಿಂದ, **ಬದ್ಧಃ** ಬಂಧಿಸಲ್ಪಟ್ಟವನು, **ಇತ್ಯಾದಿ** ಇದೇ ಮೊದಲಾದದ್ದು **ಲೀಲಾ** ಲೀಲೆಯು, **ಏಷಾ** ಇದು, **ಅಸುರಮೋಹಿನೀ** ಅಸುರಜನ ಮೋಹಕವು.

**ತಾತ್ಪರ್ಯ :-** 'ಶ್ರೀರಾಮನು ಮುಗ್ಧನು, ತನ್ನನ್ನೇ ತಾನು ತಿಳಿದಿಲ್ಲ, ದುಃಖಿಯಾಗಿ ಸೀತೆಯನ್ನು ಹುಡುಕಿದ. ಇಂದ್ರಜಿತ್‌ನ ಬಂಧನಕ್ಕೊಳಗಾದ' ಎಂಬಿವೇ ಮೊದಲಾದ ವ್ಯಾಪಾರಗಳು ಅಸುರಜನ ಮೋಹಕವಾದ ಲೀಲಾ ಮಾತ್ರವಾಗಿವೆ.

**'ಮುಹ್ಯತೇ ಶಸ್ತ್ರಪಾತೇನ ಭಿನ್ನತ್ವಗ್ರುಧಿರಸ್ರವಃ ।**
**ಅಜಾನನ್ ಪೃಚ್ಛತಿ ಸ್ಮಾನ್ಯಾನ್ ತನುಂ ತ್ಯಕ್ತ್ವಾ ದಿವಂಗತಃ ॥ ೮೨ ॥**

**ಇತ್ಯಾದ್ಯಸುರಮೋಹಾಯ ದರ್ಶಯಾಮಾಸ ನಾಟ್ಯವತ್ ।**
**ಅವಿದ್ಯಮಾನಮೇವೇಶಃ ಕುಹಕಂ ತದ್ವಿದುಃ ಸುರಾಃ' ॥ ೮೩ ॥**

**ಅರ್ಥ :-** **ಶಸ್ತ್ರಪಾತೇನ** ಶಸ್ತ್ರಪ್ರಹಾರದಿಂದ, **ಮುಹ್ಯತೇ** ಮೋಹಗೊಳ್ಳುವನು, **ಭಿನ್ನತ್ವಕ್** ಭಿನ್ನವಾದ ಚರ್ಮವುಳ್ಳವನು, **ರುಧಿರಸ್ರವಃ** ರಕ್ತಸ್ರಾವ ಉಳ್ಳವನು ಆಗುತ್ತಾನೆ, **ಅಜಾನನ್** ತಿಳಿಯದವನಾಗಿ, **ಅನ್ಯಾನ್** ಬೇರೆಯವರನ್ನು **ಪೃಚ್ಛತಿ ಸ್ಮ** ಕೇಳುತ್ತಾನೆ. **ತನುಂ** ದೇಹವನ್ನು **ತ್ಯಕ್ತ್ವಾ** ಬಿಟ್ಟು **ದಿವಂಗತಃ** ಸ್ವರ್ಗಕ್ಕೆ ಹೋದನು, **ಇತ್ಯಾದಿ** ಇವೇ ಮೊದಲಾದುದನ್ನು **ಈಶಃ** ಭಗವಂತನು, **ಅವಿದ್ಯಮಾನಮೇವ** ತನ್ನಲ್ಲಿ ಇಲ್ಲದುದನ್ನೇ, **ಅಸುರಮೋಹಾಯ** ಅಸುರ ಜನ ಮೋಹಕ್ಕೋಸ್ಕರವಾಗಿ, **ನಾಟ್ಯವತ್** ನಟನಂತೆ, **ದರ್ಶಯಾಮಾಸ** ತೋರಿಸಿದನು, **ತತ್** ಅದನ್ನು **ಸುರಾಃ** ದೇವತೆಗಳು, **ಕುಹಕಂ** ವಿಡಂಬನೆಯೆಂದು, **ವಿದುಃ** ತಿಳಿಯುತ್ತಾರೆ.

**ತಾತ್ಪರ್ಯ :-** ಶ್ರೀಹರಿಗೆ, ಶಸ್ತ್ರಪ್ರಹಾರದಿಂದ ಮೋಹ, ಉಂಟಾದದ್ದು ಚರ್ಮ ಸೀಳಿದ್ದು ರಕ್ತ ಸುರಿದದ್ದು ಇವೇ ಮೊದಲಾದದ್ದು ಕಂಡು ಬರುತ್ತದೆ. ಮತ್ತು ಅವನು ಏನೂ ತಿಳಿಯದವನಂತೆ ಇನ್ನೊಬ್ಬರನ್ನು ಕೇಳುವುದು, ದೇಹತ್ಯಾಗ ಮಾಡಿ ಸ್ವರ್ಗಕ್ಕೆ ಹೋಗುವುದು ಇವೆಲ್ಲ ಕಂಡು ಬರುತ್ತದೆ. ಇದು ಕೂಡ ಅಸುರ ಜನ ಮೋಹನಾರ್ಥವಾದ ಲೀಲೆ, ಅಂದರೆ ನಟರು ಮಾಡುವಂತೆ ನಟನೆಯೇ ಹೊರತು ವಾಸ್ತವವಲ್ಲ. ಇದು ದೇವತೆಗಳಿಗೆ ತಿಳಿಯುವುದು.

**'ಪ್ರಾದುರ್ಭಾವಾ ಹರೇಃ ಸರ್ವೇ ನೈವ ಪ್ರಾಕೃತದೇಹಿನಃ**
**ನಿರ್ದೋಷಗುಣ ಸಂಪೂರ್ಣಾ ದರ್ಶಯಂತ್ಯನ್ಯಥೈವ ತು ॥ ೮೪ ॥**

**ದುಷ್ಟಾನಾಂ ಮೋಹನಾರ್ಥಾಯ ಸತಾಮಪಿ ಚ ಕುತ್ರಚಿತ್ ।**
**ಯಥಾಯೋಗ್ಯಫಲಪ್ರಾಪ್ತ್ಯೈ ಲೀಲೈಷಾ ಪರಮಾತ್ಮನಃ' ॥ ೮೫ ॥**

**ಅರ್ಥ :- ಹರೇಃ** ಪರಮಾತ್ಮನ, **ಸರ್ವೇ ಪ್ರಾದುರ್ಭಾವಾಃ** ಎಲ್ಲ ಅವತಾರಗಳೂ, **ಪ್ರಾಕೃತದೇಹಿನಃ ನೈವ** ಪ್ರಾಕೃತ ದೇಹ ಉಳ್ಳವುಗಳಲ್ಲವೇ ಅಲ್ಲ, **ನಿರ್ದೋಷ ಗುಣಸಂಪೂರ್ಣಾಃ** ನಿರ್ದೋಷ ಮತ್ತು ಪೂರ್ಣ ಗುಣ ಉಳ್ಳವುಗಳು, **ತು** ಆದರೆ, **ದುಷ್ಟಾನಾಂ** ದುರ್ಜನರಿಗೆ, **ಕುತ್ರಚಿತ್** ಕೆಲವು ಕಡೆಗಳಲ್ಲಿ, **ಸತಾಮಪಿ ಚ** ಸಜ್ಜನರಿಗೂ ಕೂಡ, **ಮೋಹನಾರ್ಥಾಯ** ಮೋಹ ಉಂಟಾಗುವುದಕ್ಕೋಸ್ಕರ, **ಅನ್ಯಥಾ** ವ್ಯತ್ಯಾಸ ಮಾಡಿ, **ದರ್ಶಯಂತಿ** ತೋರಿಸುತ್ತವೆ, **ಏಷಾ** ಇದು, **ಯಥಾಯೋಗ್ಯ ಫಲಪ್ರಾಪ್ತ್ಯೈ** ಜೀವರು ತಮ್ಮ ಯೋಗ್ಯತಾನುಗುಣವಾಗಿ ಫಲವನ್ನು ಪಡೆಯಲು (ಪ್ರವೃತ್ತವಾದ), ಪರಮಾತ್ಮನಃ ಭಗವಂತನ, **ಲೀಲಾ** ಲೀಲೆಯು.

**ತಾತ್ಪರ್ಯ :-** ಶ್ರೀಹರಿಯ ಯಾವ ಅವತಾರವೂ ಪ್ರಾಕೃತ ದೇಹ ಉಳ್ಳದ್ದಲ್ಲ. ಪ್ರತಿಯೊಂದು ನಿರ್ದುಷ್ಟ ಗುಣಪೂರ್ಣ. ಆದರೂ ದುರ್ಜನರ ಮೋಹಕ್ಕಾಗಿ, ಕೆಲವು ಸಲ ಸಜ್ಜನರಿಗೂ ಮೋಹಕ್ಕೋಸ್ಕರವಾಗಿ ಭಗವಂತನು ತನ್ನ ಅವತಾರಗಳಲ್ಲಿ ದೋಷಗಳನ್ನು ತೋರಿಸುತ್ತಾನೆ. ಸಜ್ಜನರೇ ಆಗಲೀ ದುರ್ಜನರೇ ಆಗಲಿ ಅವರವರ ಯೋಗ್ಯತಾನುಸಾರ ಫಲವನ್ನು ಹೊಂದಬೇಕು. ಅದಕ್ಕಾಗಿ ಭಗವಂತ ಮಾಡುವ ಲೀಲೆಯಿದು. ॥ ೮೫ ॥

**ಪೀಠಿಕೆ :-** ಹರಿ ಸರ್ವೋತ್ತಮತ್ವಾದಿ ಪ್ರಮೇಯಗಳನ್ನು ಪ್ರತಿಪಾದಿಸುವ ಗೀತಾ ವಾಕ್ಯಗಳನ್ನು ಇನ್ನು ಮುಂದೆ ಉದಾಹರಿಸುತ್ತಾರೆ—

**'ಜ್ಞಾನಂ ತೇಽಹಂ ಸವಿಜ್ಞಾನಮಿದಂ ವಕ್ಷ್ಯಾಮ್ಯಶೇಷತಃ ।**
**ಯದ್ ಜ್ಞಾತ್ವಾ ನೇಹ ಭೂಯೋಽನ್ಯತ್ ಜ್ಞಾತವ್ಯಮವಶಿಷ್ಯತೇ' ॥ ೮೬ ॥**

**ಅರ್ಥ :- ಯದ್ ಜ್ಞಾತ್ವಾ** ಯಾವುದನ್ನು ತಿಳಿದ ಮೇಲೆ, **ಇಹ** ಈ ನನ್ನ ವಿಷಯದಲ್ಲಿ, **ಭೂಯಃ** ಮತ್ತು, **ಜ್ಞಾತವ್ಯಮನ್ಯತ್** ತಿಳಯಬೇಕಾದುದು

ಯಾವುದೂ, **ನ ಅವಶಿಷ್ಯತೇ** ಉಳಿಯುವುದಿಲ್ಲವೋ, **ಇದಂ** ಇಂತಹ, **ಸವಿಜ್ಞಾನಂ** ವಿಜ್ಞಾನದಿಂದ ಕೂಡಿದ, **ಜ್ಞಾನಂ** ಜ್ಞಾನವನ್ನು, **ಅಶೇಷತಃ** ಪೂರ್ತಿಯಾಗಿ, **ಅಹಂ** ನಾನು, **ತೇ** ನಿನಗೆ, **ವಕ್ಷ್ಯಾಮಿ** ಹೇಳುವೆನು.

**ತಾತ್ಪರ್ಯ :-** ಅರ್ಜುನ! ನನ್ನ ವಿಷಯದಲ್ಲಿ ಸಾಮಾನ್ಯ ಜ್ಞಾನವನ್ನೂ ಮತ್ತು ವಿಶೇಷ ಜ್ಞಾನವನ್ನೂ ಇನ್ನು ಮುಂದೆ ನಿನ್ನ ಯೋಗ್ಯತಾನುಸಾರ ನಿನಗೆ ಪೂರ್ತಿಯಾಗಿ ಉಪದೇಶಿಸುತ್ತೇನೆ. ಇದನ್ನು ತಿಳಿದ ಮೇಲೆ ಬೇರೇನೂ ತಿಳಿಯಬೇಕಾದುದ್ದು ಉಳಿಯುವುದಿಲ್ಲ.

**ವಿಶೇಷ ವಿಷಯ :-** ಇಲ್ಲಿ 'ಜ್ಞಾನಂ ಅಂದರೆ ಸಾಮಾನ್ಯವಾಗಿ ಭಗವಂತನ ಮಹಿಮೆಯನ್ನು ತಿಳಿಯುವ ಪ್ರಕಾರವನ್ನು ಎಂದರ್ಥ. ವಿಜ್ಞಾನ ಎಂದರೆ ವಿಶೇಷವಾಗಿ ತಿಳಿಯುವ ಪ್ರಕಾರವೆಂದರ್ಥ ಅಥವಾ ಸಾಮಾನ್ಯವಾಗಿ ಮತ್ತು ವಿಶೇಷವಾಗಿ ತಿಳಿಯಬೇಕಾದ ತನ್ನ ಸ್ವರೂಪವನ್ನು ಎಂದರ್ಥ.

ಅದು ಹೇಗೆಂದರೆ, 'ಮತ್ತಃ ಪರತರಂ ನಾನ್ಯತ್ ಕಿಂಚಿದಸ್ತಿ ಧನಂಜಯ' ('ತಾನು ಸರ್ವೋತ್ತಮ') ಎಂದು ಸಾಮಾನ್ಯವಾಗಿ ಅರ್ಜುನನಿಗೆ ಉಪದೇಶಿಸ ಲ್ಪಟ್ಟ ತನ್ನ ಸ್ವರೂಪವು ಜ್ಞಾನವೆನಿಸುವುದು. ಅಥವಾ ಸಾಮಾನ್ಯತಃ ಅವನ ಮಹಿಮೆಯ ತಿಳುವಳಿಕೆಯೆ ಜ್ಞಾನವೆನಿಸುವುದು. ಈ ಸರ್ವೋತ್ತಮತ್ವವನ್ನು ಸಮರ್ಥಿಸಲು, 'ಅಹಂ ಕೃತ್ಸ್ನಸ್ಯ ಜಗತಃ ಪ್ರಭವಃ ಪ್ರಲಯಸ್ತಥಾ' ಎಂಬಲ್ಲಿ ಸಕಲ ಜಗಜ್ಜನ್ಮಾದಿ ಕರ್ತೃತ್ವವುಳ್ಳವನೆಂದು ಉಪದೇಶಿಸಲ್ಪಟ್ಟ ಭಗವಂತನ ಸ್ವರೂಪವು ವಿಜ್ಞಾನವೆನಿಸುವುದು ಅಥವಾ ಅಂತಹ ವಿಶಿಷ್ಟವಾದ ಗುಣಗಳ ತಿಳುವಳಿಕೆಯೇ ವಿಜ್ಞಾನವೆನಿಸುತ್ತದೆ. ಮುಂದೆ 'ಅವಜಾನಂತಿ ಮಾಂ' ಎಂಬ ಶ್ಲೋಕದಲ್ಲಿ ಹೇಳಿದ್ದೂ ವಿಜ್ಞಾನವೇ. ಏಕೆಂದರೆ ಆ ಶ್ಲೋಕದಲ್ಲಿ 'ಭಗವಂತನು ತನ್ನನ್ನು ತಿರಸ್ಕರಿಸುವವರಿಗೆ ಆಶಾಭಂಜಕನೆಂದೂ ಮತ್ತು ಭಕ್ತರಿಗೆ, ಸತ್ಯ ಸಂಕಲ್ಪತ್ವ, ಮಹಾಮಾಹಾತ್ಮ್ಯವೇ ಮೊದಲಾದ ತನ್ನ ಮಹಿಮೆಗಳನ್ನು ತೋರಿಸು ವನು' ಎಂದು ಅವನ ವಿಶಿಷ್ಟಸ್ವರೂಪವನ್ನೇ ವರ್ಣಿಸಲಾಗಿದೆ. ॥ ೮೬ ॥

**''ಅಹಂ ಕೃತ್ಸ್ನಸ್ಯ ಜಗತಃ ಪ್ರಭವಃ ಪ್ರಲಯಸ್ತಥಾ'' ॥ ೮೭ ॥**

**''ಮತ್ತಃ ಪರತರಂ ನಾನ್ಯತ್ ಕಿಂಚಿದಸ್ತಿ ಧನಂಜಯ'' ।**

**ಅರ್ಥ** :- **ಧನಂಜಯ** ಅರ್ಜುನನೇ! **ಅಹಂ** ನಾನು, **ಕೃತ್ಸ್ನಸ್ಯ ಜಗತಃ** ಸಮಗ್ರ ಪ್ರಪಂಚಕ್ಕೆ, **ಪ್ರಭವಃ** ಸೃಷ್ಟಿಕರ್ತನು, **ತಥಾ** ಹಾಗೆಯೇ, **ಪ್ರಲಯಃ** ಸಂಹಾರ ಕರ್ತನೂ ಆಗಿದ್ದೇನೆ. **ಮತ್ತಃ** ನನಗಿಂತ, **ಪರತರಂ** ಉತ್ತಮವಾದದ್ದು **ಅನ್ಯತ್ ಕಿಂಚಿತ್** ಬೇರೆ ಯಾವುದೂ, **ನಾಸ್ತಿ** ಇಲ್ಲ.

**ತಾತ್ಪರ್ಯ** :- ಅರ್ಜುನ! ನಾನೇ ಜಗತ್ತಿನ ಸೃಷ್ಟಿ ಸಂಹಾರಕರ್ತ. ನನಗಿಂತ ಉತ್ತಮರು ಯಾರೂ ಇಲ್ಲ. ॥ ೮೭ ॥

**''ಅವಜಾನಂತಿ ಮಾಂ ಮೂಢಾಃ ಮನುಷೀಂ ತನುಮಾಶ್ರಿತಮ್ ॥ ೮೮ ॥**

**ಪರಂಭಾವಮಜಾನಂತೋ ಮಮ ಭೂತಮಹೇಶ್ವರಮ್ ।**
**ಮೋಘಾಶಾ ಮೋಘಕರ್ಮಾಣೋ ಮೋಘಜ್ಞಾನಾ ವಿಚೇತಸಃ ॥ ೮೯ ॥**

**ರಾಕ್ಷಸೀಮಾಸುರೀಂ ಚೈವ ಪ್ರಕೃತಿಂ ಮೋಹಿನೀಂ ಶ್ರಿತಾಃ ।**

**ಅರ್ಥ** :- **ಮಾನುಷೀಂ** ಮನುಷ್ಯ ಶರೀರದಂತಿರುವ, **ತನುಂ** ದೇಹವನ್ನು **ಆಶ್ರಿತಂ** ಹೊಂದಿರುವ, **ಮಾಂ** ನನ್ನನ್ನು, **ಮೂಢಾಃ** ತಾಮಸ ಜನರು, **ಮಮ** ನನ್ನ **ಭೂತಮಹೇಶ್ವರಂ** ಶಾಶ್ವತ, ವ್ಯಾಪ್ತ, ಮತ್ತು ಸಮರ್ಥವಾದ, **ಪರಂಭಾವಂ** ಉತ್ತಮವಾದ ಸ್ವರೂಪವನ್ನು **ಅಜಾನಂತಃ** ತಿಳಿಯದವರಾಗಿ, **ಅವಜಾನಂತಿ** ತಿರಸ್ಕರಿಸುತ್ತಾರೆ.

**ರಾಕ್ಷಸೀಂ** ರಾಕ್ಷಸ ಸಂಬಂಧಿಯಾದ, **ಆಸುರೀಂ ಚೈವ** ಅಸುರಸಂಬಂಧಿಯೂ ಆದ, **ಮೋಹಿನೀಂ** ಮೋಹಗೊಳಿಸುವ, **ಪ್ರಕೃತಿಂ** ಸ್ವಭಾವವನ್ನು **ಶ್ರಿತಾಃ** ಅವಲಂಬಿಸಿದ ಆ ತಾಮಸರು, **ಮೋಘಾಶಾಃ** ವ್ಯರ್ಥವಾದ ಆಶೆಯುಳ್ಳವರು, **ಮೋಘಕರ್ಮಾಣಃ** ವ್ಯರ್ಥವಾದ ಯಜ್ಞಾದಿ ಕರ್ಮವುಳ್ಳವರೂ, **ಮೋಘಜ್ಞಾನಾಃ** ವ್ಯರ್ಥವಾದ ತತ್ವಜ್ಞಾನವುಳ್ಳವರು, **ವಿಚೇತಸಃ** ತತ್ವಜ್ಞಾನಕ್ಕೆ ವಿರುದ್ಧವಾದ ಮನಸ್ಸುಳ್ಳವರೂ ಆಗುತ್ತಾರೆ.

**ತಾತ್ಪರ್ಯ** :- ಅರ್ಜುನ! ನಾನು ಮನುಷ್ಯ ಶರೀರದಂತಿರುವ ಶರೀರವನ್ನು ಧರಿಸಿದ್ದೇನೆ. ಆದರೆ ವಸ್ತುತಃ ನನ್ನ ನಿಜಸ್ವರೂಪವು ಶಾಶ್ವತ, ವ್ಯಾಪ್ತ, ಸರ್ವಸಮರ್ಥ ಹಾಗೂ ಉತ್ತಮವಾಗಿದೆ. ಇದನ್ನರಿಯದೆ ತಾಮಸ ಜನರು ನಾನು ಧರಿಸಿದ ಮನುಷ್ಯ ದೇಹವನ್ನು ನೋಡಿ ನನ್ನನ್ನು ಸಾಮಾನ್ಯ

ಮನುಷ್ಯನೆಂದು ತಿರಸ್ಕರಿಸುತ್ತಾರೆ. ಹೀಗೆ ಮೋಹಕವಾದ ರಾಕ್ಷಸ ಮತ್ತು ಆಸುರ ಸ್ವಭಾವವನ್ನವಲಂಬಿಸಿದವರಾಗಿರುವುದರಿಂದ ಅವರ ಆಶೆ, ಕರ್ಮ, ಜ್ಞಾನ ಎಲ್ಲವೂ ವ್ಯರ್ಥವಾಗಿ ಅವರು ತತ್ವಜ್ಞಾನಕ್ಕೆ ವಿರುದ್ಧ ಮನಸ್ಕರಾಗುವರು. ॥ ೮೯ ॥

**ಮಹಾತ್ಮಾನಸ್ತು ಮಾಂ ಪಾರ್ಥ ದೈವೀಂ ಪ್ರಕೃತಿಮಾಶ್ರಿತಾಃ ॥ ೯೦ ॥**

**ಭಜಂತ್ಯನನ್ಯ ಮನಸೋ ಜ್ಞಾತ್ವಾ ಭೂತಾದಿಮವ್ಯಯಮ್ ॥ ೯೧ ॥**

**ಅರ್ಥ** :- **ಪಾರ್ಥ** ಅರ್ಜುನ! **ದೈವೀಂ ಪ್ರಕೃತಿಂ** ಸಾತ್ವಿಕ ಸ್ವಭಾವವನ್ನು **ಆಶ್ರಿತಾಃ** ಹೊಂದಿದ, **ಮಹಾತ್ಮಾನಸ್ತು** ಮಹಾತ್ಮರಾದರೂ, **ಅನನ್ಯಮನಸಃ** ಅನನ್ಯ ಭಕ್ತಿ ಯುಳ್ಳವರಾಗಿ, **ಮಾಂ** ನನ್ನನ್ನು, **ಭೂತಾದಿಂ** ಜಗತ್ತಿನ ಉತ್ಪತ್ತಿಗೆ ಕಾರಣನೆಂದು, **ಅವ್ಯಯಂ** ನಾಶರಹಿತನೆಂದು, **ಜ್ಞಾತ್ವಾ** ತಿಳಿದು, **ಭಜಂತಿ** ಭಜಿಸುತ್ತಾರೆ. ॥ ೯೧ ॥

**ತಾತ್ಪರ್ಯ** :- ಅರ್ಜುನ! ಸಾತ್ವಿಕ ಸ್ವಭಾವದ ಮಹಾತ್ಮರು ನನ್ನನ್ನು ಸೃಷ್ಟಿಕರ್ತನೆಂದೂ ನಾಶರಹಿತನೆಂದು ತಿಳಿದು ಅನನ್ಯಮನಸ್ಕರಾಗಿ ಭಜಿಸುತ್ತಾರೆ. ॥ ೯೧ ॥

**'ಪಿತಾऽಸಿ ಲೋಕಸ್ಯ ಚರಾಚರಸ್ಯ**
**ತ್ವಮಸ್ಯ ಪೂಜ್ಯಶ್ಚ ಗುರುರ್ಗರೀಯಾನ್ ।**
**ನ ತ್ವತ್ಸಮಶ್ಚಾಭ್ಯಧಿಕಃ ಕುತೋऽನ್ಯೋ**
**ಲೋಕತ್ರಯೇऽಪ್ಯಪ್ರತಿಮಪ್ರಭಾವ' ॥ ೯೨ ॥**

**ಅರ್ಥ** :- **ಲೋಕತ್ರಯೇऽಪಿ** ಮೂರು ಲೋಕದಲ್ಲಿಯೂ, **ಅಪ್ರತಿಮ ಪ್ರಭಾವ** ಅಸದೃಶ ಶಕ್ತಿಶಾಲಿಯಾದ ಭಗವಂತನೇ! **ತ್ವಂ** ನೀನು, **ಅಸ್ಯ** ಈ, **ಚರಾಚರಸ್ಯ ಲೋಕಸ್ಯ** ಚರಾಚರಾತ್ಮಕ ಪ್ರಪಂಚಕ್ಕೆ, **ಪಿತಾ ಅಸಿ** ತಂದೆಯಾಗಿ ರುವಿ, **ಅಸ್ಯ** ಈ ಲೋಕಕ್ಕೆ, **ಪೂಜ್ಯಶ್ಚ** ಪೂಜ್ಯನೂ, **ಗರೀಯಾನ್ ಗುರುಃ** ಶ್ರೇಷ್ಠ ಗುರುವೂ, **ಅಸಿ** ಆಗಿರುವಿ, **ತ್ವತ್ಸಮಶ್ಚ** ನಿನಗೆ ಸಮನಾದವನೇ, **ಅನ್ಯಃ** ಬೇರೆ ಯಾರೂ, **ನ** ಇಲ್ಲ, **ಅಭ್ಯಧಿಕಃ** ಉತ್ತಮನಾದವನು, **ಕುತಃ** ಎಲ್ಲಿಂದ?

**ತಾತ್ಪರ್ಯ** :- ವಿಶ್ವರೂಪ ಕಂಡ ಅರ್ಜುನನು ಹೇಳುತ್ತಾನೆ - ಮೂರು ಲೋಕದಲ್ಲಿ ಅಸದೃಶ ಸಾಮರ್ಥ್ಯವುಳ್ಳ ಕೃಷ್ಣನೇ! ನೀನು ಎಲ್ಲ ಜಗತ್ತಿಗೆ

ತಂದೆಯೂ ಪೂಜ್ಯನೂ, ಉತ್ತಮ ಗುರುವೂ ಆಗಿರುವಿ. ನಿನಗೆ ಸಮರೇ ಇಲ್ಲ ಉತ್ತಮರಂತೂ ಸುತಾರಾಂ ಇಲ್ಲ. ॥ ೯೨ ॥

'ಪರಂ ಭೂಯಃ ಪ್ರವಕ್ಷ್ಯಾಮಿ ಜ್ಞಾನಾನಾಂ ಜ್ಞಾನಮುತ್ತಮಮ್ ।
ಯದ್ ಜ್ಞಾತ್ವಾ ಮುನಯಃ ಸರ್ವೇ ಪರಾಂ ಸಿದ್ಧಿಮಿತೋ ಗತಾಃ' ॥ ೯೩ ॥

'ಮಮ ಯೋನಿರ್ಮಹದ್ ಬ್ರಹ್ಮ ತಸ್ಮಿನ್ ಗರ್ಭಂ ದಧಾಮ್ಯಹಮ್ ।
ಸಂಭವಃ ಸರ್ವಭೂತಾನಾಂ ತತೋ ಭವತಿ ಭಾರತ' ॥ ೯೪ ॥

**ಅರ್ಥ** :- **ಯತ್** ಯಾವುದನ್ನು, **ಜ್ಞಾತ್ವಾ** ತಿಳಿದು, **ಸರ್ವೇ** ಎಲ್ಲ **ಮುನಯಃ** ಮನನ ಶೀಲರು, **ಇತಃ** ಸಂಸಾರದಿಂದ, **ಸಿದ್ಧಿಂ ಗತಾಃ** ಮುಕ್ತಿಯನ್ನು ಪಡೆದಿರುವರೋ, **ತತ್** ಅಂತಹ, **ಜ್ಞಾನಾನಾಂ** ಜ್ಞೇಯ ವಿಷಯಗಳಲ್ಲಿ **ಉತ್ತಮಂ** ಉತ್ತಮವಾದ, **ಪರಂ ಜ್ಞಾನಂ** ಇನ್ನೊಂದು ವಿಷಯವನ್ನು, **ಭೂಯಃ** ಮತ್ತು, **ಪ್ರವಕ್ಷ್ಯಾಮಿ** ಹೇಳುವೆನು. **ಭಾರತ** ಅರ್ಜುನ! **ಮಹದ್ ಬ್ರಹ್ಮ** ಮಹಾಲಕ್ಷ್ಮೀಯು, **ಮಮ ಯೋನಿಃ** ನನ್ನ ಮಡದಿಯು, **ತಸ್ಮಿನ್** ಅವಳಲ್ಲಿ **ಅಹಂ** ನಾನು, **ಗರ್ಭಂ ದಧಾಮಿ** ಇಪ್ಪತ್ನಾಲ್ಕು ತತ್ವಗಳ ಅಂಶದಿಂದ ಕೂಡಿದ ಜೀವರನ್ನು ರೇತೋರೂಪದಿಂದ ಹೊರಪಡಿಸಿ ಇಡುತ್ತೇನೆ. **ತತಃ** ಅನಂತರ, **ಸರ್ವಭೂತಾನಾಂ** ಎಲ್ಲ ಜೀವರ, **ಸಂಭವಃ** ಉತ್ಪತ್ತಿಯು, **ಭವತಿ** ಆಗುತ್ತದೆ.

**ತಾತ್ಪರ್ಯ** :- ಅರ್ಜುನ ಇನ್ನೊಂದು ಶ್ರೇಷ್ಠವಾದ ವಿಷಯವನ್ನು ಹೇಳುತ್ತೇನೆ. ಅನೇಕರು ಅದನ್ನು ತಿಳಿದು ಮನನಮಾಡಿ ಮುಕ್ತರಾಗಿರುವರು – ಅದು ಯಾವುದೆಂದರೆ – ಲಕ್ಷ್ಮಿಯು ನನ್ನ ಮಡದಿ. ನಾನು ನನ್ನ ಉದರ ದಲ್ಲಿರುವ ಇಪ್ಪತ್ತನಾಲ್ಕು ತತ್ವಾಂಶಗಳಿಂದ ಕೂಡಿದ ಜೀವರನ್ನು ರೇತಸ್ಸಿನ ರೂಪದಿಂದ ಹೊರಪಡಿಸಿ ಲಕ್ಷ್ಮಿಯ ಉದರದಲ್ಲಿಡುತ್ತೇನೆ. ಅನಂತರ ಜೀವರು ಹುಟ್ಟುವರು.

**ವಿಶೇಷ ವಿಷಯ** :- ಈ ಶ್ಲೋಕದಲ್ಲಿ ನನ್ನ ಯೋನಿ ಎಂದರೆ ನನ್ನ ಕಾರಣಳು (ತಾಯಿ) ಎಂದರ್ಥವಲ್ಲ. ಮುಂದೆಯೇ 'ತಸ್ಮಿನ್ ಗರ್ಭಂ ದಧಾಮಿ' ಎಂದು ಹೇಳಿದ್ದು ವಿರುದ್ಧವಾಗುತ್ತದೆ. ಆದ್ದರಿಂದ 'ಯುಜ್ಯತೇ ಪುಮಾನ್ ಅನಯಾ ಇತಿ ಯೋನಿಃ' (ಪುರುಷನ ಯೋಗವನ್ನು ಪಡೆಯು ವವಳು 'ಯೋನಿ')ಎಂಬ ವ್ಯುತ್ಪತ್ತಿಯಿಂದ ಮಡದಿ ಎಂದರ್ಥ.

'ಪ್ರಕೃತಿಃ ಪರಮಂ ಬ್ರಹ್ಮ' (ಲಕ್ಷ್ಮಿಯು ಮಹತ್ತಾದ ಬ್ರಹ್ಮ' ಎಂಬ ಪ್ರಮಾಣಕ್ಕನುಸಾರವಾಗಿ 'ಮಹದ್‌ಬ್ರಹ್ಮ' ಎಂದರೆ ಲಕ್ಷ್ಮಿದೇವಿ. ಈ ಶ್ಲೋಕದಲ್ಲಿ ಹೇಳಿದ್ದೂ ವಿಜ್ಞಾನವೇ ಆಗಿದೆ. ॥ ೯೪ ॥

**ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವ ಚ ।**
**ಕ್ಷರಃ ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ ॥ ೯೫ ॥**

**ಅರ್ಥ** :- **ಲೋಕೇ** ಭಗವಂತನಿಂದ ನಿಯಮ್ಯವಾದ ಲೋಕದಲ್ಲಿ, **ಇಮೌ** ಪ್ರಮಾಣ ಸಿದ್ಧರಾದ, **ಪುರುಷೌ** ಚೇತನರು, **ಕ್ಷರಶ್ಚ ಅಕ್ಷರಶ್ಚ** ಕ್ಷರ ಮತ್ತು ಅಕ್ಷರ ಎಂದು, **ದ್ವೌ** ಏವ ಎರಡೇ ವಿಧವಾಗಿದ್ದಾರೆ. **ಸರ್ವಾಣಿ ಭೂತಾನಿ** ಬ್ರಹ್ಮಾದಿ ಎಲ್ಲ ಜೀವರು, **ಕ್ಷರಃ** ಕ್ಷರ ಪುರುಷರು, **ಕೂಟಸ್ಥಃ** ಆಕಾಶದಂತೆ ನಿರ್ವಿಕಾರಳಾದ ಲಕ್ಷ್ಮಿಯು, **ಅಕ್ಷರ ಉಚ್ಯತೇ** ಅಕ್ಷರಳೆನಿಸುವಳು.

**ತಾತ್ಪರ್ಯ** :- ಭಗವಂತನಿಂದ ನಿಯಮ್ಯವಾದ ಈ ಪ್ರಪಂಚದಲ್ಲಿ ಚೇತನರು ಕ್ಷರ ಅಕ್ಷರ ಎಂದು ಎರಡು ವಿಧ. ದೇಹನಾಶವುಳ್ಳವರು ಕ್ಷರರೆನಿಸುತ್ತಾರೆ. ದೇಹ ನಾಶವಿಲ್ಲದ ಲಕ್ಷ್ಮೀದೇವಿಯು ಅಕ್ಷರಳೆನಿಸುವಳು. ॥ ೯೫ ॥

**ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ ।**
**ಯೋ ಲೋಕತ್ರಯಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ ॥ ೯೬ ॥**

**ಅರ್ಥ** :- **ಯಃ** ಯಾವಾತನು, **ಲೋಕತ್ರಯಂ** ಭೂಃ ಭುವಃ ಸ್ವಃ ಎಂಬ ಮೂರು ಲೋಕಗಳನ್ನು, **ಆವಿಶ್ಯ** ಪ್ರವೇಶಿಸಿ, **ಅವ್ಯಯಃ** ನಾಶವಿಲ್ಲದವನಾಗಿ, **ಈಶ್ವರಃ** ಸಮರ್ಥನಾಗಿ, **ಬಿಭರ್ತಿ** ಪಾಲಿಸುವನೋ, ಸಃ ಅಂತಹ, **ಉತ್ತಮಃ ಪುರುಷಸ್ತು** ಸರ್ವೋತ್ತಮನಾದ ಚೇತನನಾದರೂ, **ಅನ್ಯಃ** ಕ್ಷರಾಕ್ಷರರಿಗಿಂತ ಬೇರೆಯಾಗಿದ್ದಾನೆ. **ಪರಮಾತ್ಮಾ ಇತಿ** ಪರಮ ಚೇತನನೆಂದು, **ಉದಾಹೃತಃ** 'ನಿತ್ಯೋ ನಿತ್ಯಾನಾಂ' ಇತ್ಯಾದಿ ಶ್ರುತಿಯಲ್ಲಿ ಹೇಳಲ್ಪಟ್ಟಿದ್ದಾನೆ.

**ತಾತ್ಪರ್ಯ** :- ಹಿಂದೆ ಹೇಳಿದ ಕ್ಷರ-ಅಕ್ಷರದಿಂದ ಉತ್ತಮವಾದ ಚೇತನನೊಬ್ಬನಿದ್ದಾನೆ. ಅವನು ಭೂಃ ಭುವಃ ಸ್ವಃ ಎಂಬ ಮೂರು ಲೋಕಗಳೊಳಗಿದ್ದು ಸಮರ್ಥನಾಗಿ ನಾಶವಿಲ್ಲದೇ ಆ ಲೋಕಗಳನ್ನು ಸಂರಕ್ಷಿಸುವನು. ಅವನನ್ನು ಶ್ರುತಿಯು 'ಪರಮಾತ್ಮಾ' ಎಂದು ಬಣ್ಣಿಸಿದೆ. ॥ ೯೬ ॥

**ಯಸ್ಮಾತ್ ಕ್ಷರಮತೀತೋಽಹಮಕ್ಷರಾದಪಿ ಚೋತ್ತಮಃ ।**
**ಅತೋಽಸ್ಮಿ ಲೋಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ ॥ ೯೭ ॥**

**ಯೋ ಮಾಮೇವಮಸಂಮೂಢೋ ಜಾನಾತಿ ಪುರುಷೋತ್ತಮಮ್ ।**
**ಸ ಸರ್ವವಿದ್ ಭಜತಿ ಮಾಂ ಸರ್ವಭಾವೇನ ಭಾರತ ॥ ೯೮ ॥**

**ಅರ್ಥ :- ಅಹಂ** ನಾನು, **ಯಸ್ಮಾತ್** ಯಾವ ಕಾರಣದಿಂದ, **ಕ್ಷರಂ ಅತೀತಃ** ಕ್ಷರ ಪುರುಷರನ್ನು ಮೀರಿದ್ದೇನೋ, **ಚ** ಮತ್ತು, **ಅಕ್ಷರಾದಪಿ ಉತ್ತಮಃ** ಅಕ್ಷರಳೆನಿಸಿದ ಲಕ್ಷ್ಮೀಗಿಂತ ಉತ್ತಮನೋ, **ಅತಃ** ಆ ಕಾರಣದಿಂದ, **ಲೋಕೇ** ಸ್ಮೃತಿಯಲ್ಲಿ, **ವೇದೇ ಚ** ವೇದದಲ್ಲಿಯೂ, **ಪುರುಷೋತ್ತಮ ಇತಿ** ಪುರುಷೋತ್ತಮನೆಂದು, **ಪ್ರಥಿತಃ ಅಸ್ಮಿ** ಪ್ರಸಿದ್ಧನಾಗಿರುವೆನು.

ಭಾರತ ಅರ್ಜುನ! ಯಃ ಯಾರು, ಮಾಂ ನನ್ನನ್ನು, ಏವಂ ಈ ರೀತಿಯಾಗಿ, ಪುರುಷೋತ್ತಮಂ ಪುರುಷೋತ್ತಮನೆಂದು, ಅಸಂಮೂಢಃ ಮಿಥ್ಯಾ ಜ್ಞಾನರಹಿತನಾಗಿ, ಜಾನಾತಿ ತಿಳಿಯುವನೋ, ಸಃ ಅವನು, ಸರ್ವವಿತ್ ಎಲ್ಲ ಶಾಸ್ತ್ರಸಾರವನ್ನು ತಿಳಿದವನೆನಿಸಿ, ಮಾಂ ನನ್ನನ್ನು, ಸರ್ವಭಾವೇನ ಎಲ್ಲ ಪ್ರಕಾರದಿಂದಲೂ, ಭಜತಿ ಭಜಿಸುತ್ತಾನೆ.

**ತಾತ್ಪರ್ಯ :-** ಅರ್ಜುನ! ನಾನು ಕ್ಷರಾಕ್ಷರಗಳನ್ನು ಮೀರಿದ್ದರಿಂದ ಶ್ರುತಿ ಸ್ಮೃತಿಗಳಲ್ಲಿ ಪುರುಷೋತ್ತಮನೆಂದು ಪ್ರಸಿದ್ಧನಾಗಿದ್ದೇನೆ. ಈ ಪುರುಷೋತ್ತ ಮತ್ತ್ವವು ಸುಳ್ಳು ಎಂದು ಭ್ರಾಂತನಾಗದೇ ನನ್ನನ್ನು ಪುರುಷೋತ್ತಮನೆಂದೇ ತಿಳಿದವನು ಶಾಸ್ತ್ರಸಾರವನ್ನು ಬಲ್ಲವನೆನಿಸಿ ಸರ್ವ ಪ್ರಕಾರದಿಂದಲೂ ನನ್ನನ್ನು ಭಜಿಸುವನು. ॥ ೯೮ ॥

**ಇತಿ ಗುಹ್ಯತಮಂ ಶಾಸ್ತ್ರಂ ಇದಮುಕ್ತಂ ಮಯಾಽನಘ ।**
**ಏತದ್ ಬುದ್ಧ್ವಾ ಬುದ್ಧಿಮಾನ್ ಸ್ಯಾತ್ ಕೃತಕೃತ್ಯಶ್ಚ ಭಾರತ' ॥ ೯೯ ॥**

**ಅರ್ಥ :- ಅನಘ** ಹೇ ಪಾಪರಹಿತನಾದ ಅರ್ಜುನ! **ಇತಿ** ಈ ರೀತಿಯಾದ, **ಗುಹ್ಯತಮಂ ಇದಂ ಶಾಸ್ತ್ರಂ** ಅತಿ ಗೋಪ್ಯವಾದ ಈ ಶಾಸ್ತ್ರವು, **ಮಯಾ** ನನ್ನಿಂದ, **ಉಕ್ತಂ** ಹೇಳಲ್ಪಟ್ಟಿದೆ. **ಭಾರತ** ಅರ್ಜುನ, **ಏತದ್** ಇದನ್ನು **ಬುದ್ಧ್ವಾ** ತಿಳಿದು ಅಧಿಕಾರಿಯು, **ಬುದ್ಧಿಮಾನ್** ಅಪರೋಕ್ಷ ಜ್ಞಾನಿಯೂ, **ಕೃತಕೃತ್ಯಶ್ಚ** ಧನ್ಯನೂ (ಮುಕ್ತನೂ) **ಸ್ಯಾತ್** ಆಗುವನು.

ತಾತ್ಪರ್ಯ :- ಅರ್ಜುನ ! ಗೋಪ್ಯವಾದ ಶಾಸ್ತ್ರವನ್ನು ನಿನಗೆ ಉಪದೇಶಿಸಿದ್ದೇನೆ. ಇದನ್ನು ತಿಳಿದವನು ಅಪರೋಕ್ಷವನ್ನು ಪಡೆದು ಮುಕ್ತನಾಗುವನು.॥೯೯॥

'ದ್ವೌ ಭೂತಸರ್ಗೌ ಲೋಕೇಽಸ್ಮಿನ್ ದೈವ ಆಸುರ ಏವ ಚ ।
ದೈವೋ ವಿಸ್ತರಶಃ ಪ್ರೋಕ್ತಃ ಆಸುರಂ ಪಾರ್ಥ ಮೇ ಶೃಣು' ॥ ೧೦೦ ॥

ಅರ್ಥ :- **ಪಾರ್ಥ** ಅರ್ಜುನ! **ಅಸ್ಮಿನ್ ಲೋಕೇ** ಈ ಲೋಕದಲ್ಲಿ **ಭೂತಸರ್ಗೌ** ಜೀವರ ಸ್ವಭಾವವು, **ದೈವಃ ಆಸುರ ಏವ ಚ** ದೈವ ಮತ್ತು ಆಸುರ ಎಂದು, **ದ್ವೌ** ಎರಡು ವಿಧವಾಗಿದೆ, **ದೈವಃ** ದೈವಸ್ವಭಾವವು, **ವಿಸ್ತರಶಃ** ವಿಸ್ತಾರವಾಗಿ, **ಪ್ರೋಕ್ತಃ** ಹೇಳಲ್ಪಟ್ಟಿದೆ, **ಆಸುರಂ** ಆಸುರ ಸ್ವಭಾವವನ್ನು, **ಮೇ** ನನ್ನಿಂದ, **ಶೃಣು** ಕೇಳು.

ತಾತ್ಪರ್ಯ :- ಅರ್ಜುನ! ಲೋಕದಲ್ಲಿ ಎರಡು ವಿಧದ ಸ್ವಭಾವ ಉಳ್ಳ ಜೀವರ ಸೃಷ್ಟಿಯಾಗಿದೆ. ದೈವ ಮತ್ತು ಆಸುರ ಎಂದು. ವಿಸ್ತಾರವಾಗಿ ದೈವಸ್ವಭಾವವನ್ನು ವರ್ಣಿಸಿದ್ದೇನೆ. ಆಸುರ ಸ್ವಭಾವವನ್ನು ಈಗ ಕೇಳು.॥೧೦೦॥

'ಅಸತ್ಯಮಪ್ರತಿಷ್ಠಂ ತೇ ಜಗದಾಹುರನೀಶ್ವರಂ ।
ಅಪರಸ್ಪರಸಂಭೂತಂ ಕಿಮನ್ಯತ್ ಕಾಮಹೈತುಕಮ್ ॥ ೧೦೧ ॥

ಏತಾಂ ದೃಷ್ಟಿಮವಷ್ಟಭ್ಯ ನಷ್ಟಾತ್ಮಾನೋಽಲ್ಪಬುದ್ಧಯಃ ।
ಪ್ರಭವಂತ್ಯುಗ್ರಕರ್ಮಾಣಃ ಕ್ಷಯಾಯ ಜಗತೋಽಹಿತಾಃ' ॥ ೧೦೨ ॥

ಅರ್ಥ :- **ತೇ** ಆ ಅಸುರಸ್ವಭಾವದ ಜನರು, **ಜಗತ್** ಜಗತ್ತನ್ನು, **ಅಸತ್ಯಂ** ಸತ್ಯ ಅಲ್ಲವೆಂದು, **ಅಪ್ರತಿಷ್ಠಂ** ಬಹುಕಾಲ ನಿಲ್ಲತಕ್ಕದ್ದಲ್ಲವೆಂದು (ಬ್ರಹ್ಮಜ್ಞಾನ ಬಾಧ್ಯವೆಂದು), **ಅನೀಶ್ವರಂ** ನಿಯಾಮಕನಾದ ಈಶ್ವರನಲ್ಲದ್ದೆಂದೂ, **ಅಪರಸ್ಪರ ಸಂಭೂತಂ** ಒಂದರಿಂದ ಇನ್ನೊಂದು ಎಂಬ ಕ್ರಮದಿಂದ ಹುಟ್ಟಿಲ್ಲವೆಂದೂ, **ಕಿಂ** ಹಾಗಾದರೆ ಈ ಪ್ರಪಂಚ ಎಂತಹದು? ಎಂದರೆ, **ಅನ್ಯತ್** ಸದಸದ್ವಿಲಕ್ಷಣ, ಮತ್ತು **ಕಾಮಹೈತುಕಂ** ಅಜ್ಞಾನಕಲ್ಪಿತ ಎಂದು, **ಆಹುಃ** ಹೇಳುತ್ತಾರೆ. **ಏತಾಂ ದೃಷ್ಟಿಂ** ಈ ದೃಷ್ಟಿಯನ್ನು, **ಅವಷ್ಟಭ್ಯ** ಇಟ್ಟುಕೊಂಡು, **ನಷ್ಟಾತ್ಮಾನಃ** ಮಲಿನವಾದ ಅಂತಃಕರಣವುಳ್ಳವರಾಗಿ, **ಅಲ್ಪಬುದ್ಧಯಃ** ಅಲ್ಪ ಜ್ಞಾನವುಳ್ಳವರಾಗಿ, **ಉಗ್ರ ಕರ್ಮಾಣಃ** ಘೋರವಾದ ಕಾರ್ಯಗಳನ್ನು ಮಾಡುವವರಾಗಿ, **ಅಹಿತಾಃ** ಶತ್ರುಗಳಾಗಿ, **ಜಗತಃ** ಜಗತ್ತಿನ, **ಕ್ಷಯಾಯ** ನಾಶಕ್ಕೋಸ್ಕರವೇ, **ಪ್ರಭವಂತಿ** ಹುಟ್ಟುತ್ತಾರೆ.

**ತಾತ್ಪರ್ಯ** :- ಅಸುರಸ್ವಭಾವದ ಜನರು ಈ ಜಗತ್ತನ್ನು ಸುಳ್ಳೆಂದೂ ಇದಕ್ಕೆ ನಿಯಾಮಕನಾದ ಈಶ್ವರನಿಲ್ಲವೆಂದೂ ಇದು ಬ್ರಹ್ಮಜ್ಞಾನದಿಂದ ಬಾಧ್ಯವೆಂದೂ ಅಂದರೆ ಬಹುಕಾಲ ಅಬಾಧಿತವಾಗಿ ಇರುವುದಿಲ್ಲವೆಂದೂ, ಮತ್ತು ಮಣ್ಣಿನಿಂದ ಮಡಿಕೆ, ತಂತುಗಳಿಂದ ಪಟ ಹೇಗೆ ಹುಟ್ಟುವವೋ ಹಾಗೆ ಹುಟ್ಟಿದ್ದಲ್ಲವೆಂದೂ ಹೇಳುತ್ತಾರೆ. ಹಾಗಾದರೆ ಈ ಜಗತ್ತು ಎಂತಹುದು ಎಂದು ಕೇಳಿದರೆ ಇದನ್ನು ಸತ್ ಅಲ್ಲ, ಅಸತ್ ಅಲ್ಲ, ಸದಸದ್ವಿಲಕ್ಷಣ ಎಂದೂ, ಅಜ್ಞಾನದಿಂದ ಕಲ್ಪಿತ ಎಂದೂ ಹೇಳುತ್ತಾರೆ. ಇಂಥವರ ಅಂತಃಕರಣವು ಮಲಿನ, ಇವರ ಜ್ಞಾನವೂ ಅಲ್ಪ, ಇವರ ಕರ್ಮವೂ ಘೋರ. ಇವರು ಜಗತ್ತಿನ ಶತ್ರುಗಳು. ಇವರು ಜನ್ಮತಾಳಿದ್ದೇ ಜಗತ್ತನ್ನು ನಾಶಗೊಳಿಸಲು.

**ವಿಶೇಷ ವಿಷಯ** :- 'ಕಾಮ' ಶಬ್ದಕ್ಕೆ 'ಕಾಮಯಂತಿ ದುರ್ವಿಷಯಾನ್ ಅನೇನ ಇತಿ ಕಾಮಃ (ಜೀವರು ಯಾವುದರಿಂದಾಗಿ ದುರ್ವಿಷಯಗಳನ್ನು ಬಯಸುತ್ತಾರೋ ಅದು ಕಾಮ) ಎಂಬ ವ್ಯುತ್ಪತ್ತಿಗನುಗುಣವಾಗಿ ಅಜ್ಞಾನ ಎಂದರ್ಥ. ಅಜ್ಞಾನದಿಂದಲೇ ದುರ್ವಿಷಯಗಳನ್ನು ಜೀವರು ಬಯಸುವರು.

॥ ೧೦೨ ॥

**'ಈಶ್ವರೋऽಹಮಹಂ ಭೋಗೀ ಸಿದ್ಧೋऽಹಂ ಬಲವಾನ್ ಸುಖೀ' ।**
**'ಆಢ್ಯೋऽಭಿಜನವಾನಸ್ಮಿ ಕೋऽನ್ಯೋऽಸ್ತಿ ಸದೃಶೋ ಮಯಾ' ॥ ೧೦೩ ॥**

**ಅರ್ಥ** :- **ಅಹಂ** ನಾನೇ, **ಈಶ್ವರಃ** ದೇವರು, **ಅಹಂ** ನಾನು, **ಭೋಗೀ** ಸಕಲ ಭೋಗ ಉಳ್ಳವನು, **ಅಹಂ** ನಾನು, **ಸಿದ್ಧಃ** ಕೃತಕೃತ್ಯನು, **ಬಲವಾನ್** ಬಲಿಷ್ಠನು, **ಸುಖೀ** ಸುಖ ಉಳ್ಳವನು, **ಆಢ್ಯಃ** ಶ್ರೀಮಂತನು, **ಅಭಿಜನವಾನ್** ಸತ್ಕುಲ ಪ್ರಸೂತನು, **ಅಸ್ಮಿ** ಆಗಿರುವೆನು, **ಮಯಾ ಸದೃಶಃ** ನನಗೆ ಸಮಾನರು, **ಕೋऽನ್ಯೋऽಸ್ತಿ** ಬೇರೆ ಯಾರಿದ್ದಾರೆ.

**ತಾತ್ಪರ್ಯ** :- ಅಸುರ ಸ್ವಭಾವದ ಜನರು 'ನಾನೇ ದೇವರು, ನಾನೇ ಭೋಗಗಳನ್ನನುಭವಿಸಿದವನು, ನಾನು ಕೃತಕೃತ್ಯ, ಬಲಶಾಲಿ, ಸುಖಿ, ಶ್ರೀಮಂತ, ಕುಲೀನನಾಗಿದ್ದೇನೆ. ನನ್ನಂತವರು ಬೇರೆ ಯಾರಿದ್ದಾರೆ' ಎಂದು ಭಾವಿಸುತ್ತಾರೆ.

**ವಿಶೇಷ ವಿಷಯ** :- 'ದೈವೀ ಸಂಪದ್ ವಿಮೋಕ್ಷಾಯ ನಿಬಂಧಾ ಯಾಸುರೀ ಮತಾ ।' 'ದೈವೋ ವಿಸ್ತರಶಃ ಪ್ರೋಕ್ತ ಆಸುರಂ ಪಾರ್ಥ ಮೇ

ಶೃಣು ॥' ಎಂದು ಆರಂಭಿಸಿ 'ಅಸತ್ಯಮಪ್ರತಿಷ್ಠಂ ತೇ', 'ಈಶ್ವರೋಹಮಹಂ ಭೋಗಿ' ಇವೇ ಮೊದಲಾದ ಶ್ಲೋಕಗಳಲ್ಲಿ 'ಜಗನ್ಮಿಥ್ಯಾತ್ವ ಮತ್ತು ಬ್ರಹ್ಮೈಕ್ಯವು ಅಸುರರಿಗೆ ಯೋಗ್ಯವಾದ ದುರ್ಮತ' ಎಂದು ಹೇಳಿದ್ದರಿಂದ ವಿವೇಕಿಗಳು ಆ ಮತವನ್ನು ಅನುಸರಿಸಬಾರದೆಂದು ಪ್ರತಿಪಾದಿಸಿದಂತಾಯಿತು ಎಂಬ ಅಭಿಪ್ರಾಯದಿಂದ ಆ ಶ್ಲೋಕಗಳನ್ನು ಉದಾಹರಿಸಿದ್ದಾರೆ. 'ನಿಬಂಧಾಯ ಆಸುರೀ ಮತಾ' ಎಂಬಲ್ಲಿ ನಿಬಂಧ ಎಂದರೆ ನಿತರಾಂ ಬಂಧ ಅಂದರೆ ತಮಸ್ಸಿನಲ್ಲಿ ಅನುಭವಿಸುವ ದುಃಖವೇ ಹೊರತು ಸಂಸಾರ ಎಂದರ್ಥವಲ್ಲ. 'ದೈವೀ ಸಂಪದ್ ವಿಮೋಕ್ಷಾಯ' ಎಂಬಲ್ಲಿ ಹೇಳಿದ ಮೋಕ್ಷಕ್ಕೆ ವಿರುದ್ಧವಾದದ್ದು ತಮಸ್ಸೇ ಆದ್ದರಿಂದ ಮೋಕ್ಷಕ್ಕೆ ವಿರುದ್ಧವಾದ ನಿಬಂಧ ಎಂದರೆ ತಮಸ್ಸೆಂದು ಅರ್ಥೈಸುವುದೇ ಉಚಿತ. ಆದ್ದರಿಂದಲೇ ಮುಂದೆ 'ತತೋ ಯಾಂತಿ ಅಧಮಾಂ ಗತಿಂ' ಎಂದು ಆಸುರಸಂಪತ್ತಿನ ಫಲವು ಅಧಮಗತಿ (ತಮಸ್ಸು) ಎಂದೇ ಹೇಳುವರು. ॥ ೧೦೩ ॥

**'ಮಾಮಾತ್ಮ ಪರದೇಹೇಷು ಪ್ರದ್ವಿಷಂತೋಽಭ್ಯಸೂಯಕಾಃ' ।**
**'ತಾನಹಂ ದ್ವಿಷತಃ ಕ್ರೂರಾನ್ ಸಂಸಾರೇಷು ನರಾಧಮಾನ್ ॥ ೧೦೪ ॥**

**ಕ್ಷಿಪಾಮ್ಯಜಸ್ರಮಶುಭಾನಾಸುರೀಷ್ವೇವ ಯೋನಿಷು ।**
**ಆಸುರೀಂ ಯೋನಿಮಾಪನ್ನಾ ಮೂಢಾ ಜನ್ಮನಿ ಜನ್ಮನಿ ॥ ೧೦೫ ॥**

**ಮಾಮಪ್ರಾಪ್ಯೈವ ಕೌಂತೇಯ ತತೋ ಯಾಂತ್ಯಧಮಾಂ ಗತಿಮ್' ।**

**ಅರ್ಥ** :- **ಮಾಂ** ನನ್ನನ್ನು (ಕೃಷ್ಣನನ್ನು) **ಆತ್ಮಪರದೇಹೇಷು** ತಮ್ಮ ಮತ್ತು ಬೇರೆಯವರ ದೇಹದಲ್ಲಿ **ಪ್ರದ್ವಿಷಂತಃ** ದ್ವೇಷಿಸುವವರಾಗಿ, **ಅಭ್ಯಸೂಯಕಾಃ** ನನ್ನಲ್ಲಿ ಗುಣಗಳಿದ್ದರೂ ದೋಷಾರೋಪಣೆಯನ್ನು ಮಾಡತಕ್ಕವರಾಗಿ (ತಾಮಸರು ಡಾಂಭಿಕವಾಗಿ ಯಜ್ಞವನ್ನಾಚರಿಸುತ್ತಾರೆ). **ಅಹಂ** ನಾನು (ಕೃಷ್ಣ), **ದ್ವಿಷತಃ** ನನ್ನನ್ನು ದ್ವೇಷಿಸುವ, **ಕ್ರೂರಾನ್** ಕ್ರೂರರಾದ, **ಅಶುಭಾನ್** ಅಮಂಗಳರಾದ, **ತಾನ್** ಆ ತಾಮಸರಾದ ಮನುಷ್ಯಾಧಮರನ್ನು **ಅಜಸ್ರಂ** ಯಾವಾಗಲೂ, **ಸಂಸಾರೇಷು** ಸಂಸಾರದಲ್ಲಿ ಅದರಲ್ಲಿಯೂ **ಆಸುರೀಷ್ವೇವ ಯೋನಿಷು** ಅಸುರ ಜಾತಿಗಳಲ್ಲಿಯೇ, **ಕ್ಷಿಪಾಮಿ** ಹುಟ್ಟಿಸುತ್ತೇನೆ. **ಮೂಢಾಃ** ಮೂಢರಾದ ಆ ತಾಮಸರು, **ಜನ್ಮನಿ ಜನ್ಮನಿ** ಪ್ರತಿ ಜನ್ಮದಲ್ಲಿಯೂ, **ಆಸುರೀಂ ಯೋನಿಮಾ ಪನ್ನಾಃ** ಅಸುರ ಜಾತಿಯಲ್ಲಿಯೇ ಹುಟ್ಟಿದವರಾಗಿ, **ಮಾಮ್**

ನನ್ನನ್ನು **ಅಪ್ರಾಪ್ಯೈವ** ಹೊಂದದೆಯೇ, **ತತಃ** ಅನಂತರ, **ಅಧಮಾಂ ಗತಿಂ** **ನಿತ್ಯನರಕವನ್ನು, ಯಾಂತಿ** ಪಡೆಯುತ್ತಾರೆ.

**ತಾತ್ಪರ್ಯ** :- ತಾಮಸ ಜನರು ತಮ್ಮಲ್ಲಿಯೂ ಬೇರೆಯವರಲ್ಲಿಯೂ ಅಂತರ್ಯಾಮಿಯಾಗಿ ಇರುವ ನನ್ನನ್ನು ದ್ವೇಷಿಸುತ್ತಾರೆ. ನನ್ನಲ್ಲಿ ಇಲ್ಲದಿರುವ ದೋಷಗಳನ್ನು ಆರೋಪಿಸುತ್ತಾರೆ. ಅಂತಹ ಕ್ರೂರ ಮರ್ತ್ಯಾಧಮರನ್ನು ನಾನು ಯಾವಾಗಲೂ ಸಂಸಾರದಲ್ಲಿ ಅದರಲ್ಲಿಯೂ ಅಸುರಜಾತಿಯಲ್ಲಿ ಹುಟ್ಟಿಸುತ್ತೇನೆ. ಅನಂತರ ಅವರು ಜನ್ಮಜನ್ಮದಲ್ಲಿಯೂ ಅಸುರಯೋನಿಯಲ್ಲಿಯೇ ಹುಟ್ಟಿ ಕೊನೆಗೂ ನನ್ನನ್ನು ಪಡೆಯದೆ ತಮಸ್ಸಿಗೆ ಹೋಗುತ್ತಾರೆ.

**ವಿಶೇಷ ವಿಷಯ** :- ತಾಮಸರು ತಮ್ಮಲ್ಲಿರುವ ಹರಿಯನ್ನು ದ್ವೇಷಿಸುವುದು ಎಂದರೆ 'ನಾನೇ ಬ್ರಹ್ಮ' ಎಂದು ದುರಾಗ್ರಹ ಮಾಡುವುದು. ಇನ್ನೊಬ್ಬರ ದೇಹದಲ್ಲಿರುವ ಹರಿಯನ್ನು ದ್ವೇಷಿಸುವುದೆಂದರೆ 'ನೀನು ಬ್ರಹ್ಮ' ಎಂದು ಅವರಿಗೆ ಉಪದೇಶಿಸುವುದು.

ಈ ಪದ್ಯಗಳನ್ನು ಆಚಾರ್ಯರು ಭಗವದ್ದ್ವೇಷಿಗಳಿಗೂ ಮೋಕ್ಷ ದೊರೆಯುತ್ತದೆ ಎಂಬ ಭ್ರಾಂತಿಯನ್ನು ನಿವಾರಿಸಲು ಉದಾಹರಿಸಿದ್ದಾರೆ.

ಈ ಪದ್ಯಗಳಲ್ಲಿ 'ಅಜಸ್ರಂ' 'ಆಸುರೀಷ್ವೇವ ಯೋನಿಷು' 'ಜನ್ಮನಿ ಜನ್ಮನಿ' 'ಮಾಮಪ್ರಾಪ್ಯೈವ' ('ಯಾವಾಗಲೂ' 'ಅಸುರ ಯೋನಿಗಳಲ್ಲಿಯೇ' 'ಜನ್ಮ ಜನ್ಮದಲ್ಲೂ' 'ನನ್ನನ್ನು ಹೊಂದದೇನೇ') ಎಂದು ನಾಲ್ಕು ವಿಶೇಷಣಗಳಿಂದ ಹರಿದ್ವೇಷಿಗಳಿಗೆ ಮೇಲಿನ ಶುಭ ಲೋಕಗಳು ಸರ್ವಥಾ ಇಲ್ಲವೆಂಬ ನಿಯಮ ವನ್ನು ನಿರ್ಣಯಿಸಲಾಗಿದೆ. 'ತತೋ ಯಾಂತಿ ಅಧಮಾಂ ಗತಿಂ' (ಅನಂತರ ತಮಸ್ಸಿನಲ್ಲಿ ಬೀಳುತ್ತಾರೆ) ಎಂಬ ವಾಕ್ಯದಿಂದ ಅಂಧಂತಮಸ್ಸನ್ನೂ ನಿರ್ಣಯಿಸ ಲಾಗಿದೆ. ॥ ೧೦೫ ॥

**'ಸರ್ವಭೂತೇಷು ಯೇನೈಕಂ ಭಾವಮವ್ಯಯಮೀಕ್ಷತೇ ॥ ೧೦೬ ॥**

**ಅವಿಭಕ್ತಂ ವಿಭಕ್ತೇಷು ತದ್ ಜ್ಞಾನಂ ವಿದ್ಧಿ ಸಾತ್ವಿಕಮ್' ।**

**ಅರ್ಥ** :- **ವಿಭಕ್ತೇಷು** ಭಿನ್ನ ಭಿನ್ನರಾದ, **ಸರ್ವಭೂತೇಷು** ಎಲ್ಲ ಜೀವರಲ್ಲಿ, **ಅವಿ ಭಕ್ತಂ** ಅಭಿನ್ನನಾದ, **ಏಕಂ** ಮುಖ್ಯನಾದ, **ಭಾವಂ**

ಯಾವಾಗಲೂ ಇರುವ ಬ್ರಹ್ಮನನ್ನು, **ಯೇನ** ಸತ್ವಗುಣನಿಮಿತ್ತಕವಾದ ಯಾವ ಜ್ಞಾನದಿಂದ, **ಈಕ್ಷತೇ** ನೋಡುತ್ತಾನೋ (ತಿಳಿಯುತ್ತಾನೋ), **ತದ್ ಜ್ಞಾನಂ** ಆ ಜ್ಞಾನವನ್ನು, **ಸಾತ್ವಿಕಂ ವಿದ್ಧಿ** ಸಾತ್ವಿಕವೆಂದು ತಿಳಿ.

**ತಾತ್ಪರ್ಯ :-** ಜೀವರೆಲ್ಲರೂ ಪರಸ್ಪರ ಭಿನ್ನರು ಮತ್ತು ಭಗವಂತನಿಗಿಂತಲೂ ಭಿನ್ನರು ಅವರೆಲ್ಲರಲ್ಲಿಯೂ ಪರಮಾತ್ಮನಿದ್ದಾನೆ. ಅವನು ಮಾತ್ರ ಅಭಿನ್ನ. ಅಂದರೆ ಯಾವ ಅಂತರ್ಯಾಮಿ ರೂಪಗಳಲ್ಲಿಯೂ ಭೇದವಿಲ್ಲ. ಇಂತಹ ತಿಳುವಳಿಕೆಯೇ ಸಾತ್ವಿಕ ಜ್ಞಾನವೆನಿಸುವುದು.

**ವಿಶೇಷ ವಿಷಯ :-** ಈ ಶ್ಲೋಕವನ್ನು ಉದಾಹರಿಸಿದ್ದರಿಂದ ಜೀವರಲ್ಲಿ ಪರಸ್ಪರ ಭೇದ, ಅಂತರ್ಯಾಮಿ ರೂಪಗಳಲ್ಲಿ ಪರಸ್ಪರ ಅಭೇದ ಎಂಬ ಪ್ರಮೇಯವು ಸಿದ್ಧವಾಯಿತು. ಅಂತರ್ಯಾಮಿರೂಪಗಳಲ್ಲಿ ಪರಸ್ಪರ ಭೇದವಿಲ್ಲದಿರುವುದರಿಂದಲೇ ಶ್ರೀವ್ಯಾಸರು 'ನ ಸ್ಥಾನತೋಽಪಿ ಪರಸ್ಯೋಭಯಲಿಂಗಂ ಸರ್ವತ್ರ ಹಿ' ಎಂಬ ಬ್ರಹ್ಮ ಸೂತ್ರದಲ್ಲಿಯೂ ಈ ಪ್ರಮೇಯವನ್ನು ನಿರ್ಣಯಿಸಿದ್ದಾರೆ. (ಸೂತ್ರಾರ್ಥ - ಪರಸ್ಯ ಪರಮಾತ್ಮನಿಗೆ, ಸ್ಥಾನತೋಽಪಿ - ಸ್ಥಾನಭೇದಪ್ರಯುಕ್ತವಾಗಿಯೂ, ಉಭಯ ಲಿಂಗಂ - ಭಿನ್ನರೂಪವು, ನ - ಇಲ್ಲ, ಸರ್ವತ್ರ - ಎಲ್ಲ ಕಡೆಯಲ್ಲಿರುವ ರೂಪವು ಒಂದೇ ಆಗಿದೆ, ಹಿ - ಇದು ಶ್ರುತಿಸಿದ್ಧವಾಗಿದೆ) ॥ ೧೦೬ ॥

**'ಸರ್ವಗುಹ್ಯತಮಂ ಭೂಯಃ ಶೃಣು ಮೇ ಪರಮಂ ವಚಃ ॥ ೧೦೭ ॥**

**ಇಷ್ಟೋಽಸಿ ಮೇ ದೃಢಮಿತಿ ತತೋ ವಕ್ಷ್ಯಾಮಿ ತೇ ಹಿತಮ್ ।**
**ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು ॥ ೧೦೮ ॥**

**ಮಾಮೇವೈಷ್ಯಸಿ ಸತ್ಯಂ ತೇ ಪ್ರತಿಜಾನೇ ಪ್ರಿಯೋಽಸಿ ಮೇ' ।**

**ಅರ್ಥ :- ಸರ್ವಗುಹ್ಯತಮಂ** ಸಾಧನಗಳಲ್ಲೆಲ್ಲ ಅತ್ಯಂತ ಗೋಪ್ಯವಾದ ಸಾಧನವನ್ನು ಹೇಳುವ, **ಮೇ** ನನ್ನ, **ಪರಮಂ** ಉತ್ತಮವಾದ, **ಇತಿ** ಮುಂದೆ ಹೇಳುವ, **ವಚಃ** ಮಾತನ್ನು, **ಭೂಯಃ** ಮತ್ತು, **ಶೃಣು** ಕೇಳು, **ತ್ವಂ** ನೀನು, **ಮೇ** ನನಗೆ, **ದೃಢಂ** ಬಹಳವಾಗಿ, **ಇಷ್ಟಃ ಅಸಿ** ಪ್ರಿಯನಾಗಿದ್ದಿ **ತತಃ** ಆ ಕಾರಣದಿಂದ, **ತೇ** ನಿನಗೆ, **ಹಿತಂ** ಹಿತವನ್ನು **ವಕ್ಷ್ಯಾಮಿ** ಹೇಳುವೆನು, **ಮನ್ಮನಾಃ** ನನ್ನಲ್ಲಿ

ಮನಸ್ಸುಳ್ಳವನೂ, **ಮದ್ಭಕ್ತಃ** ನನ್ನ ಭಕ್ತನೂ, **ಮದ್ಯಾಜೀ** ನನ್ನ ಪೂಜಕನೂ, **ಭವ** ಆಗು, **ಮಾಂ** ನನ್ನನ್ನು **ನಮಸ್ಕುರು** ನಮಸ್ಕರಿಸು, **ತ್ವಂ** ನೀನು, **ಮೇ ಪ್ರಿಯೋಽಸಿ** ನನಗೆ ಪ್ರಿಯನಾಗಿದ್ದಿ **ತೇ** ನಿನಗೆ, **ಸತ್ಯಂ ಪ್ರತಿಜಾನೇ** ಶಪಥ ಮಾಡಿ ಹೇಳುತ್ತೇನೆ. **ತ್ವಂ** ನೀನು, **ಮಾಮೇವ** ನನ್ನನ್ನೇ, **ಏಷ್ಯಸಿ** ಹೊಂದುವಿ.

**ತಾತ್ಪರ್ಯ** :- ಅರ್ಜುನ! ಸಾಧನಗಳಲ್ಲಿ ಗೋಪ್ಯವಾದ ಸಾಧನವನ್ನೀಗ ನಿನಗೆ ಉಪದೇಶಿಸುತ್ತೇನೆ. ಏಕೆಂದರೆ ನೀನು ನನಗೆ ಅತ್ಯಂತ ಪ್ರೀತಿಪಾತ್ರ. ನಾನು ನಿನಗೆ ಹಿತವನ್ನೇ ಹೇಳುತ್ತೇನೆ. ಆ ಮಾತನ್ನು ಕೇಳು. ನಿನಗೆ ಪ್ರತಿಜ್ಞೆ ಮಾಡಿ ಹೇಳುತ್ತೇನೆ — ನನ್ನಲ್ಲಿ ಮನಸ್ಸಿಡು. ನನ್ನ ಭಕ್ತನಾಗು. ನನ್ನ ಪೂಜಕನಾಗು. ನನಗೆ ನಮಸ್ಕರಿಸು. ಇದರಿಂದ ನೀನು ನನ್ನನ್ನೇ ಹೊಂದುವಿ. ॥ ೧೦೮ ॥

**ಪೀಠಿಕೆ** :- ವಿಷ್ಣೂತ್ಕರ್ಷ ವಿಷಯದಲ್ಲಿ ಭಾರತಾಂತರ್ಗತ ಮೋಕ್ಷಧರ್ಮ ಪರ್ವದ ವಚನಗಳನ್ನು ಉದಾಹರಿಸುತ್ತಾರೆ–

**'ಪಂಚರಾತ್ರಸ್ಯ ಕೃತ್ಸ್ನಸ್ಯ ವಕ್ತಾ ನಾರಾಯಣಃ ಸ್ವಯಮ್ ॥ ೧೦೯ ॥**

**ಸರ್ವೇಷ್ವೇತೇಷು ರಾಜೇಂದ್ರ ಜ್ಞಾನೇಷ್ವೇತದ್ ವಿಶಿಷ್ಯತೇ' ।**

**ಅರ್ಥ** :- **ರಾಜೇಂದ್ರ** ಜನಮೇಜಯ! **ಸ್ವಯಂ ನಾರಾಯಣಃ** ಮೂಲರೂಪಿ ನಾರಾಯಣನೇ, **ಕೃತ್ಸ್ನಸ್ಯ ಪಂಚರಾತ್ರಸ್ಯ ವಕ್ತಾ** ಸಮಗ್ರ ಪಂಚರಾತ್ರಾಗಮವನ್ನು ರಚಿಸಿದವನು. **ಏತೇಷು ಸರ್ವೇಷು ಜ್ಞಾನೇಷು** ಜ್ಞಾನಸಾಧನವಾದ ಸಾಂಖ್ಯ ಯೋಗ, **ಪಾಶುಪತ** ವೇದಾರಣ್ಯಕ ಮತ್ತು ವೇದಾರಣ್ಯಕದ ವ್ಯಾಖ್ಯಾನ ರೂಪವಾದ ಪಂಚರಾತ್ರವೆಂಬ ಈ ಶಾಸ್ತ್ರಗಳಲ್ಲಿ, **ಏತದ್** ಈ ವೇದಾರಣ್ಯಕ ಮತ್ತು ಪಂಚರಾತ್ರವು, **ವಿಶಿಷ್ಯತೇ** ಉತ್ತಮವಾಗಿದೆ.

**ತಾತ್ಪರ್ಯ** :- ಸಾಂಖ್ಯ, ಯೋಗ, ಪಾಶುಪತ, ವೇದಾರಣ್ಯಕ ಮತ್ತು ವೇದಾರಣ್ಯಕದ ವಿವರಣ ರೂಪವಾದ ಪಂಚರಾತ್ರಗಳು ಪರಸ್ಪರ ವಿರುದ್ಧಾರ್ಥ ಪ್ರತಿಪಾದಕಗಳೇ? ಅಥವಾ ಸಮಾನಾರ್ಥ ಪ್ರತಿಪಾದಕಗಳೇ? ಎಂದು ಜನಮೇಜಯನ ಪ್ರಶ್ನೆಗೆ ಉತ್ತರಿಸುತ್ತಾ ವೈಶಂಪಾಯನರು 'ಜನಮೇಜಯ! ಈ ಶಾಸ್ತ್ರಗಳು ಸಮಾನಾರ್ಥ ಪ್ರತಿಪಾದಕವಲ್ಲ. ಪರಸ್ಪರ ವಿರುದ್ಧಾರ್ಥ ಪ್ರತಿಪಾದಕ ಗಳೇ ಆಗಿವೆ. ಆದರೆ ಇವುಗಳಲ್ಲಿ ವೇದಾರಣ್ಯಕ ಮತ್ತು ಪಂಚರಾತ್ರಾಗಮಗಳು

ಶ್ರೇಷ್ಠ ಅಂದರೆ ಪ್ರಮಾಣ. ಪಂಚರಾತ್ರವೇಕೆ ಪ್ರಮಾಣವೆಂದರೆ ಸ್ವಯಂ ನಾರಾಯಣನೇ ಪಂಚರಾತ್ರಾಗಮವನ್ನು ರಚಿಸಿದವನು. ಇಂತಹ ಪಂಚರಾತ್ರಕ್ಕೆ ಮೂಲವಾದ್ದರಿಂದ ವೇದವೂ ಪ್ರಮಾಣವೇ ಆಗಿದೆ.

**ವಿಶೇಷ ವಿಷಯ :-** ಜನಮೇಜಯ ಮತ್ತು ವೈಶಂಪಾಯನರ ಪ್ರಶ್ನೋತ್ತರಗಳನ್ನು ವರ್ಣಿಸಿರುವ ಶ್ಲೋಕಗಳು ಹೀಗಿವೆ —

**ಜನಮೇಜಯಃ**

**ಸಾಂಖ್ಯಂ ಯೋಗಃ ಪಾಶುಪತಂ ವೇದಾರಣ್ಯಕಮೇವ ಚ ।**
**ಜ್ಞಾನಾನ್ಯೇತಾನಿ ಭಿನ್ನಾನಿ ಉತಾಹೋ ನೇತಿ ಚೋಚ್ಯತಾಮ್ ॥**

**ವೈಶಂಪಾಯನಃ**

**ಸಾಂಖ್ಯಂ ಯೋಗಃ ಪಾಶುಪತಂ ವೇದಾರಣ್ಯಕಮೇವ ಚ ।**
**ಜ್ಞಾನಾನ್ಯೇತಾನಿ ಭಿನ್ನಾನಿ ನಾತ್ರ ಕಾರ್ಯಾ ವಿಚಾರಣಾ ॥**

**ಪಂಚರಾತ್ರಸ್ಯ ಕೃತ್ಸ್ನಸ್ಯ ವಕ್ತಾ ನಾರಾಯಣಃ ಸ್ವಯಂ ।**
**ಸರ್ವೇಷ್ವೇತೇಷು ರಾಜೇಂದ್ರ ಜ್ಞಾನೇಷ್ವೇತದ್ವಿಶಿಷ್ಯತೇ ॥**

ಇಲ್ಲಿ 'ಜ್ಞಾನ' ಪದಕ್ಕೆ ಜ್ಞಾನಸಾಧನವಾದ ಶಾಸ್ತ್ರ ಎಂದು ಅರ್ಥ ಮಾಡಬೇಕು. 'ಭಿನ್ನಾನಿ' ಎಂಬ ಪದಕ್ಕೆ ವಿರುದ್ಧಾರ್ಥಪ್ರತಿಪಾದಕ ಎಂಬ ಅರ್ಥವನ್ನಿಟ್ಟುಕೊಳ್ಳಬೇಕು. ಇಲ್ಲದಿದ್ದರೆ ಶಾಸ್ತ್ರಗಳು ಸ್ವರೂಪತಃ ಭಿನ್ನ ಭಿನ್ನವೇ ಎಂದು ಸಿದ್ಧವಾಗಿರುವುದರಿಂದ ಪ್ರಶ್ನೆಯೇ ಅಪ್ರಸ್ತುತವಾಗುತ್ತದೆ. ಆದ್ದರಿಂದ ಉತ್ತರವೂ ಅಪ್ರಸ್ತುತವಾಗುತ್ತದೆ.

'ಜ್ಞಾನೇಷ್ವೇತೇಷು' ಎಂಬ ಶ್ಲೋಕದಲ್ಲಿ ಸಾಂಖ್ಯ, ಯೋಗ, ಪಾಶುಪತ ವೆಂಬ ಮೂರು ಶಾಸ್ತ್ರಗಳಿಗಿಂತ ವೇದಾರಣ್ಯಕ ಮತ್ತು ಪಂಚರಾತ್ರಗಳಿಗೆ ಉತ್ತಮತ್ವವು ಹೇಳಲ್ಪಟ್ಟಿದೆ. ಯದ್ಯಪಿ ಹಿಂದಿನ ಶ್ಲೋಕದಲ್ಲಿ ಪ್ರಸ್ತುತವಾದದ್ದು ಸಾಂಖ್ಯ, ಯೋಗ ಪಾಶುಪತ ವೇದಾರಣ್ಯಕಗಳು ಮಾತ್ರ. ಇವುಗಳಲ್ಲಿ ಪಂಚರಾತ್ರವು ಸೇರಿಯೇ ಇಲ್ಲ. ಹೀಗಿರುವಾಗ 'ಇವುಗಳಿಗಿಂತ ಪಂಚರಾತ್ರ ಶ್ರೇಷ್ಠ ಎನ್ನಬೇಕಾಗಿತ್ತು ಹೊರತು 'ಇವುಗಳಲ್ಲಿ' ಎಂದಲ್ಲ. ಕಪ್ಪು ಗೋವು, ಗೋವುಗಳಲ್ಲಿ ಸೇರಿದ್ದರಷ್ಟೇ 'ಗೋವುಗಳಲ್ಲಿ ಕಪ್ಪುಗೋವು ಹೆಚ್ಚು ಹಾಲು

ಕೊಡುವುದು' ಎಂದು ಹೇಳಬಹುದು. ಆದ್ದರಿಂದ ಇಲ್ಲಿ ಪಂಚರಾತ್ರವನ್ನು ಸಾಂಖ್ಯ ಯೋಗಾದಿಗಳಲ್ಲಿ ಅಮುಖ್ಯ ವೃತ್ತಿಯಿಂದಾದರೂ ಸೇರಿಸಿದರೆ ಮಾತ್ರ 'ಏತೇಷು ಪಂಚರಾತ್ರಂ ವಿಶಿಷ್ಯತೇ' ಎಂಬಲ್ಲಿ 'ಏತೇಷು' ಎಂಬ ನಿರ್ಧಾರಣಾರ್ಥಕ ಸಪ್ತಮೀ ಸರಿಯಾದೀತು. ಆದ್ದರಿಂದ 'ವೇದಾರಣ್ಯಕ' ಪದಕ್ಕೆ ಲಕ್ಷಣಾ ವೃತ್ತಿಯನ್ನು ಸ್ವೀಕರಿಸಿ ಅದರ ವ್ಯಾಖ್ಯಾನ ರೂಪವಾದ್ದರಿಂದ ಅದಕ್ಕೆ ಸಮಾನಾರ್ಥಕವಾದ ಪಂಚರಾತ್ರವನ್ನೂ ಇಟ್ಟುಕೊಳ್ಳಬೇಕು ಮತ್ತು ವೇದಾರಣ್ಯಕವೂ ಪ್ರಮಾಣವೇ ಆದ್ದರಿಂದ 'ಏತತ್' ಎಂಬ ಪದದಿಂದಲೂ ಲಕ್ಷಣಾ ವೃತ್ತಿಯಿಂದ ಪಂಚರಾತ್ರದ ಜೊತೆಗೆ ವೇದಾರಣ್ಯಕವನ್ನು ಇಟ್ಟುಕೊಂಡು ಎರಡೂ ಪ್ರಮಾಣವೆಂದು ತಿಳಿಯಬೇಕು. ॥ ೧೦೯ ॥

**ಪೀಠಿಕೆ** :- ಹಾಗಾದರೆ ಸಾಂಖ್ಯಾದಿ ಶಾಸ್ತ್ರಗಳು ಸರ್ವಥಾ ಅಪ್ರಮಾಣವೇ? ಎಂಬ ಪ್ರಶ್ನೆಗೆ ಉತ್ತರಿಸುವ ಪದ್ಯವನ್ನು ಉದಾಹರಿಸುತ್ತಾರೆ—

**'ಜ್ಞಾನೇಷ್ವೇತೇಷು ರಾಜೇಂದ್ರ ಸಾಂಖ್ಯಪಾಶುಪತಾದಿಷು ॥ ೧೧೦ ॥**

**ಯಥಾಯೋಗಂ ಯಥಾನ್ಯಾಯಂ ನಿಷ್ಠಾ ನಾರಾಯಣಃ ಪರಃ' ।**

**ಅರ್ಥ :- ರಾಜೇಂದ್ರ** ಜನಮೇಜಯ! **ಜ್ಞಾನೇಷು** ಜ್ಞಾನಸಾಧನವಾದ, **ಏತೇಷು** ಈ, **ಸಾಂಖ್ಯಪಾಶುಪತಾದಿಷು** ಸಾಂಖ್ಯ ಪಾಶುಪತ ಮೊದಲಾದ ಶಾಸ್ತ್ರಗಳಲ್ಲಿ, **ಯಥಾಯೋಗಂ** ಪಂಚರಾತ್ರದಲ್ಲಿ ಹೇಳಿದ ಉಪಾಯ (ಮಾರ್ಗ)ಕ್ಕೆ ಅನುಗುಣವಾಗಿ, **ಯಥಾನ್ಯಾಯಂ** ಪಂಚರಾತ್ರದಲ್ಲಿ ಹೇಳಿದ ಉಪಕ್ರಮಾದಿ ನ್ಯಾಯಗಳಿಗನುಗುಣವಾಗಿ, **ನಾರಾಯಣಃ ಪರಃ** ಹರಿಯು ಸರ್ವೋತ್ತಮನು ಎಂದು ಪ್ರತಿಪಾದಿಸಿದ ಅಂಶದಲ್ಲಿ, **ನಿಷ್ಠಾ** ಪ್ರಾಮಾಣ್ಯವು, **ಅಸ್ತಿ** ಇರುತ್ತದೆ.

**ತಾತ್ಪರ್ಯ** :- ಜನಮೇಜಯ! ಸಾಂಖ್ಯಾದಿ ಶಾಸ್ತ್ರಗಳಲ್ಲಿಯೂ ಯಾವ ಭಾಗದಲ್ಲಿ, ಪಂಚರಾತ್ರಾಗಮದಲ್ಲಿ ಹೇಳಿದ ಮಾರ್ಗ ಮತ್ತು ಉಪಕ್ರಮಾದಿ ನ್ಯಾಯಗಳಿಗನುಸಾರವಾಗಿ ಹರಿಸರ್ವೋತ್ತಮತ್ವದ ಪ್ರತಿಪಾದನೆಯು ಇದೆಯೋ ಆ ಭಾಗಕ್ಕೆ ಪ್ರಾಮಾಣ್ಯವೇ ಇರುತ್ತದೆ.

**ವಿಶೇಷ ವಿಷಯ** :- 'ನಿಷ್ಠಾ ಉತ್ಕರ್ಷೇ ವ್ಯವಸ್ಥಾಯಾಮ್' (ನಿಷ್ಠಾ ಶಬ್ದವು ಉತ್ಕರ್ಷ ಮತ್ತು ವ್ಯವಸ್ಥೆ ಎಂಬ ಅರ್ಥಗಳಲ್ಲಿದೆ) ಎಂಬ ಅನುಶಾಸನದ

ಪ್ರಕಾರವಾಗಿ ನಿಷ್ಠಾ ಎಂದರೆ ಉತ್ಕರ್ಷ. ಅಂದರೆ ಪ್ರಾಮಾಣ್ಯ ಎಂಬ ಅಭಿಪ್ರಾಯವನ್ನಿಟ್ಟುಕೊಳ್ಳಬೇಕು.

ಸಾಂಖ್ಯ ಶಾಸ್ತ್ರದಲ್ಲಿ ಪ್ರಕೃತಿಜ್ಞಾನದಿಂದ ಮೋಕ್ಷವೆಂದೂ, ಯೋಗ ಶಾಸ್ತ್ರದಲ್ಲಿ ಪ್ರಾಣಾಯಾಮವೇ ಮೊದಲಾದ ಶ್ವಾಸನಿರೋಧದಿಂದ ಮೋಕ್ಷ ಎಂದೂ, ಪಾಶುಪತದಲ್ಲಿ ರುದ್ರನ ಜ್ಞಾನದಿಂದಲೇ ಮೋಕ್ಷವೆಂದೂ, ಇದನ್ನೇ ಹೆಚ್ಚಾಗಿ ಆಯಾಯಾ ಶಾಸ್ತ್ರಗಳಲ್ಲಿ ಪ್ರತಿಪಾದಿಸಲಾಗಿದೆ. ಇಲ್ಲದಿದ್ದರೆ ಹಿಂದೆ ಹೇಳಿದ 'ಜ್ಞಾನಾನ್ಯೇತಾನಿ ಭಿನ್ನಾನಿ' (ಈ ಶಾಸ್ತ್ರಗಳು ವಿರುದ್ಧಾರ್ಥ ಪ್ರತಿಪಾದಕವಾಗಿವೆ) ಎಂಬ ಮಾತು ಅಸಂಗತವಾಗುತ್ತದೆ. ಆದ್ದರಿಂದ ಈ ಶಾಸ್ತ್ರಗಳು ಪಂಚರಾತ್ರಕ್ಕೆ ವಿರುದ್ಧವೇ ಆಗಿವೆ. ಆದರೂ ಆ ಶಾಸ್ತ್ರಗಳಲ್ಲಿ ಅಲ್ಲಲ್ಲಿ ಕೆಲವು ಕಡೆ ಹರಿಭಕ್ತಿಯಿಂದಲೋ ಅಥವಾ ಹರಿ ಭಕ್ತರಿಗೆ ಆ ತಮ್ಮ (ಸಾಂಖ್ಯಾದಿ) ಶಾಸ್ತ್ರಗಳಲ್ಲಿಯೂ ಅಭಿರುಚಿಯನ್ನುಂಟು ಮಾಡಲಿಕ್ಕಾಗಿಯೇ ಪಂಚರಾತ್ರದ ನ್ಯಾಯವನ್ನನುಸರಿಸಿ ಭಗವನ್ಮಾಹಾತ್ಮ್ಯವೂ ಹೇಳಲ್ಪಟ್ಟಿದೆ. ಆ ಅಂಶಗಳಿಗೆ ಮಾತ್ರ ಪ್ರಾಮಾಣ್ಯವಿರುತ್ತದೆಂದು ತಿಳಿಯಬೇಕು. ॥ ೧೧೦ ॥

**'ಪಂಚರಾತ್ರವಿದೋ ಮುಖ್ಯಾ ಯಥಾಕ್ರಮಪರಾ ನೃಪ ।**
**ಏಕಾಂತಭಾವೋಪಗತಾ ವಾಸುದೇವಂ ವಿಶಂತಿ ತೇ' ॥ ೧೧೧ ॥**

**ಅರ್ಥ** :- **ನೃಪ** ಜನಮೇಜಯರಾಜನೇ! **ಯೇ** ಯಾರು, **ಪಂಚರಾತ್ರವಿದಃ** ಪಂಚರಾತ್ರಾಗಮವನ್ನು ತಿಳಿದವರೋ, **ಯಥಾಕ್ರಮಪರಾಃ** ತಾರತಮ್ಯ ಜ್ಞಾನದಲ್ಲಿ ಆಸಕ್ತರೋ, **ಏಕಾಂತಭಾವೋಪಗತಾಃ** ಏಕಾಂತ ಭಕ್ತಿಯನ್ನು ಹೊಂದಿದವರೋ, **ತೇ** ಅಂತಹ, **ಮುಖ್ಯಾಃ** ಶ್ರೇಷ್ಠರು, **ವಾಸುದೇವಂ ವಿಶಂತಿ** ವಾಸುದೇವನನ್ನು ಪ್ರವೇಶಿಸುತ್ತಾರೆ (ಮುಕ್ತರಾಗುತ್ತಾರೆ).

**ತಾತ್ಪರ್ಯ** :- ಪಂಚರಾತ್ರಾಗಮದ ಪ್ರಮೇಯವನ್ನು ತಿಳಿದವರು ಮತ್ತು ತಾರತಮ್ಯ ಜ್ಞಾನವುಳ್ಳವರು, ಭಗವಂತನಲ್ಲಿ ಅಚ್ಛಿನ್ನ ಭಕ್ತಿಯುಳ್ಳವರು, ಶ್ರೇಷ್ಠರು. ಅವರು ಮುಕ್ತರಾಗುತ್ತಾರೆ. ॥ ೧೧೧ ॥

**ಜನಮೇಜಯ ಉವಾಚ**

**ಬಹವಃ ಪುರುಷಾ ಬ್ರಹ್ಮನ್ ಉತಾಹೋ ಏಕ ಏವ ತು ।**
**ಕೋ ಹ್ಯತ್ರ ಪುರುಷಶ್ರೇಷ್ಠಃ ತಂ ಭವಾನ್ ವಕ್ತುಮರ್ಹತಿ ॥ ೧೧೨ ॥**

ಜನಮೇಜಯನು ಹೇಳುತ್ತಾನೆ —

**ಅರ್ಥ** :- **ಬ್ರಹ್ಮನ್** ಪೂಜ್ಯರೇ! **ಪುರುಷಾಃ** ಚೇತನರು, **ಬಹವಃ** ಬಹಳ ಮಂದಿಯೋ? **ಉತಾಹೋ** ಅಥವಾ, **ಏಕ ಏವ ತು** ಒಬ್ಬನೇ ಚೇತನನೋ ? **ಅತ್ರ** ಬಹಳ ಚೇತನರೆಂಬ ಪಕ್ಷದಲ್ಲಿ, **ಕಃ** ಯಾರು, **ಪುರುಷಶ್ರೇಷ್ಠಃ** ಚೇತನರಲ್ಲಿ ಉತ್ತಮನು? **ತಂ** ಆ ಪುರುಷೋತ್ತಮನನ್ನು **ಭವಾನ್** ನೀವು, **ವಕ್ತುಮರ್ಹತಿ ಹಿ** ಹೇಳಲು ಶ್ರೇಷ್ಠರಾಗಿದ್ದೀರಷ್ಟೆ

**ತಾತ್ಪರ್ಯ** :- ಪೂಜ್ಯರೇ! ಬಹುಚೇತನರಿರುವರೋ ಅಥವಾ ಚೇತನನು ಒಬ್ಬನೋ! ಬಹುಚೇತನರಿರುವ ಪಕ್ಷದಲ್ಲಿ ಅವರಲ್ಲಿ ಉತ್ತಮನಾರೆಂಬುದನ್ನು ತಿಳಿಸಿರಿ ಎಂದು ಜನಮೇಜಯನು ವೈಶಂಪಾಯನರನ್ನು ಕೇಳಿದನು. ॥ ೧೧೨ ॥

ವೈಶಂಪಾಯನ ಉವಾಚ —

**ನೈತದಿಚ್ಛಂತಿ ಪುರುಷಮೇಕಂ ಕುರುಕುಲೋದ್ವಹ ।**
**ಬಹೂನಾಂ ಪುರುಷಾಣಾಂ ಹಿ ಯಥೈಕಾ ಯೋನಿರುಚ್ಯತೇ ॥ ೧೧೩ ॥**

**ತಥಾ ತಂ ಪುರುಷಂ ವಿಶ್ವಮಾಖ್ಯಾಸ್ಯಾಮಿ ಗುಣಾಧಿಕಮ್' ।**

ವೈಶಂಪಾಯನರು ಹೇಳಿದರು —

**ಅರ್ಥ** :- **ಕುರುಕುದೋದ್ವಹ** ಕುರುಕುಲಶ್ರೇಷ್ಠನಾದ ಜನಮೇಜಯನೇ! **ಪುರುಷಂ ಏಕಂ** ಚೇತನನು ಒಬ್ಬನೇ ಎಂದು ಕೆಲವರು ಹೇಳುವರು. **ಏತತ್ ನ ಇಚ್ಛಂತಿ** ಪಂಡಿತರಾದವರು ಇದನ್ನು ಮನಸ್ಸಿನಲ್ಲಿಯೂ ಇಚ್ಛಿಸುವುದಿಲ್ಲ **ಯಥಾ** ಹೇಗೆ, **ಬಹೂನಾಂ ಪುರುಷಾಣಾಂ** ಬಹಳ ಚೇತನರಿಗೆ, **ಏಕಾ ಯೋನಿಃ** ಭಗವಂತನೊಬ್ಬನೇ ಕಾರಣನೆಂದು, **ಉಚ್ಯತೇ** ಶ್ರುತಿಸ್ಮೃತಿಗಳಲ್ಲಿ ಹೇಳಲ್ಪಡುತ್ತದೆಯೋ, **ತಥಾ** ಹಾಗೆಯೇ, **ಅಹಂ** ನಾನೂ ಕೂಡ, **ವಿಶ್ವಂ** ಸಕಲ ಜೀವರಲ್ಲಿ ಪ್ರವೇಶಿಸಿದ, **ತಂ ಪುರುಷಂ** ಆ ಭಗವಂತನನ್ನು **ಗುಣಾಧಿಕಂ** ಗುಣಗಳಿಂದ ಉತ್ತಮನೆಂದು **ಆಖ್ಯಾಸ್ಯಾಮಿ** ಹೇಳುತ್ತೇನೆ.

**ತಾತ್ಪರ್ಯ** :- ಜನಮೇಜಯ! ಕೆಲವು ದುರ್ಜನರು ಚೇತನನೊಬ್ಬನೇ ಎಂದು ಹೇಳುತ್ತಾರೆ. ಆದರೆ ಜ್ಞಾನಿಗಳು ಇದನ್ನು ಮನಸ್ಸಿನಲ್ಲಿಯೂ ಭಾವಿಸುವುದಿಲ್ಲ, ಹೇಳುವದಂತೂ ಇಲ್ಲವೇ ಇಲ್ಲ. ಹಾಗಾದರೆ ಚೇತನರೆಲ್ಲ ಸಮಾನರೋ

ಅಥವಾ ಅವರಲ್ಲಿ ಯಾರಾದರೂ ಉತ್ತಮರಿರುವರೋ? ಎಂಬ ಪ್ರಶ್ನೆ ಬಂದರೆ ಅದಕ್ಕೆ ಇದು ಉತ್ತರ — ಎಲ್ಲ ಚೇತನರಿಗೆ ಸೃಷ್ಟ್ಯಾದಿಕರ್ತನು ಭಗವಂತನು ಎಂದು 'ಯತೋ ವಾ' ಇತ್ಯಾದಿ ವೇದದಲ್ಲಿ ಹೇಳಲ್ಪಟ್ಟಿದೆ. ಜನ್ಮಾದ್ಯಸ್ಯ ಯತಃ ಎಂಬ ಸೂತ್ರದಲ್ಲಿ ಶ್ರೀವ್ಯಾಸರೂ ಹೇಳಿದ್ದಾರೆ. ಆದ್ದರಿಂದ ಅವರ ಶಿಷ್ಯನಾದ ನಾನೂ ಹಾಗೆಯೇ ಅಂದರೆ, ಭಗವಂತನೇ ಅಧಿಕನೆಂದು ಹೇಳುತ್ತೇನೆ. ಚೇತನರೆಲ್ಲರೂ ಸಮರಲ್ಲ, ಶ್ರೀಹರಿಯು ಉತ್ತಮನಾಗಿದ್ದಾನೆ ಎಂದು ಅಭಿಪ್ರಾಯ. ॥ ೧೧೩ ॥

**ಅಹ ಬ್ರಹ್ಮಾ ಏತಮೇವಾರ್ಥಂ ಮಹಾದೇವಾಯ ಪೃಚ್ಛತೇ ।**
**''ತಸ್ಯೈಕಸ್ಯ ಮಮತ್ವಂ ಹಿ ಸ ಚೈಕಃ ಪುರುಷೋ ವಿರಾಟ್'' ॥ ೧೧೪ ॥**

**ಅರ್ಥ** :- **ಬ್ರಹ್ಮಾ** ಬ್ರಹ್ಮದೇವರೂ, **ಪೃಚ್ಛತೇ** ಪ್ರಶ್ನೆ ಮಾಡಿದ, **ಮಹಾದೇವಾಯ** ರುದ್ರದೇವರಿಗೆ, **ಏತಮೇವ ಅರ್ಥಂ** ಇದೇ ವಿಷಯವನ್ನೇ, **ಆಹ** ಹೇಳಿದ್ದಾರೆ. ತಸ್ಯ ಏಕಸ್ಯ ಆ ಭಗವಂತನಿಗೊಬ್ಬನಿಗೇ, **ಮಮತ್ವಂ ಹಿ** ವಶಿತ್ವವಷ್ಟೆ **ಸ ಚೈಕಃ** ಅವನೊಬ್ಬನೇ, **ವಿರಾಟ್** ವಿಶೇಷವಾಗಿ ಪ್ರಕಾಶಿಸುವ (ಸರ್ವೋತ್ತಮನಾದ) ಪುರುಷನು.

**ತಾತ್ಪರ್ಯ** :- ಭಗವಂತನೊಬ್ಬನಿಗೇ 'ಈ ಜಗತ್ತು ನನ್ನ ಅಧೀನದಲ್ಲಿದೆ' ಎಂಬ ಅನಿಸಿಕೆಗೆ ಹೇತುವಾದ 'ವಶಿತ್ವ'ವೆಂಬ ಮಮತೆ ಇದೆ. ಅವನೊಬ್ಬನೇ ಸರ್ವೋತ್ತಮ ಪುರುಷ. ಈ ಪ್ರಮೇಯವನ್ನೇ ಬ್ರಹ್ಮದೇವರೂ ಸಹ ರುದ್ರನಿಗೆ ಉಪದೇಶಿಸಿದ್ದಾರೆ.

**ವಿಶೇಷ ವಿಷಯ** :- ಇಲ್ಲಿ ಹೇಳಿರುವ ಮಮತೆಯೆಂದರೆ, ಮನೆ, ಶರೀರ ಮೊದಲಾದ ವಸ್ತುಗಳಲ್ಲಿ - ಅವುಗಳು ತನ್ನ ಅಧೀನವಲ್ಲದಿದ್ದರೂ - ಅನುರಾಗಪೂರ್ವಕವಾಗಿ ಉಂಟಾಗುವ ಅಭಿಮಾನವಲ್ಲ. ಇಲ್ಲಿ ಹೇಳಿರುವ ಮಮತ್ವವು ವಶೀಕರಣ ಶಕ್ತಿ ರೂಪವಾದ ವಶಿತ್ವ. ಇದು ಅಣಿಮಾ ಮಹಿಮಾ ಮೊದಲಾದ ಎಂಟು ಐಶ್ವರ್ಯಗಳಲ್ಲಿ (ಸಿದ್ಧಿಗಳಲ್ಲಿ) ಒಂದು. ಇದು ನಿರವಧಿಕವಾಗಿ ಬೇರೆ ಯಾರಲ್ಲಿಯೂ ಇಲ್ಲ, ಭಗವಂತನೊಬ್ಬನಿಗೇ ಇರುವುದು ಎಂದು ಅಭಿಪ್ರಾಯ. ॥ ೧೧೪ ॥

'ಅಹಂ ಬ್ರಹ್ಮಾ ಚಾದ್ಯ ಈಶಃ ಪ್ರಜಾನಾಂ
ತಸ್ಮಾಜ್ಜಾತಃ ತ್ವಂ ಚ ಮತ್ತಃ ಪ್ರಸೂತಃ ।
ಮತ್ತೋ ಜಗತ್ ಸ್ಥಾವರಂ ಜಂಗಮಂ ಚ
ಸರ್ವೇ ವೇದಾಃ ಸರಹಸ್ಯಾಶ್ಚ ಪುತ್ರ' ॥ ೧೧೫ ॥

**ಅರ್ಥ :- ಪ್ರಜಾನಾಂ ಈಶಃ** ಪ್ರಜೆಗಳಿಗೆ ಅಧಿಪತಿಯಾದ, **ಆದ್ಯಃ** ಮೊದಲಿಗನಾದ, **ಬ್ರಹ್ಮಾ** ಬ್ರಹ್ಮಪದವಾಚ್ಯನಾದ, **ಅಹಂಚ** ನಾನಾದರೂ, **ತಸ್ಮಾತ್** ಆ ಪರಮಾತ್ಮನಿಂದ, **ಜಾತಃ** ಹುಟ್ಟಿದ್ದೇನೆ, **ಪುತ್ರ** ಮಗನಾದ ರುದ್ರನೇ! **ತ್ವಂ ಚ** ನೀನಾದರೂ, **ಮತ್ತಃ** ನನ್ನಿಂದ, **ಪ್ರಸೂತಃ** ಹುಟ್ಟಿದವನು, **ಸ್ಥಾವರಂ ಜಂಗಮಂ ಜಗತ್ ಚ** ಚರಾಚರಾತ್ಮಕವಾದ ಪ್ರಪಂಚವಾದರೂ, **ಮತ್ತಃ** ನನ್ನಿಂದ, **ಪ್ರಸೂತಂ** ಹುಟ್ಟಿದೆ, **ಸರಹಸ್ಯಾಃ** ಉಪನಿಷತ್ತಿನಿಂದ ಸಹಿತವಾದ, **ಸರ್ವೇವೇದಾಶ್ಚ** ಎಲ್ಲ ವೇದಗಳೂ ಕೂಡ, **ಮತ್ತಃ** ನನ್ನಿಂದಲೇ ಉಪದೇಶಿಸಲ್ಪಟ್ಟಿವೆ.

**ತಾತ್ಪರ್ಯ :-** 'ರುದ್ರ! ಪ್ರಜಾಪತಿಯಾದ, ಆದ್ಯ ಬ್ರಹ್ಮನೆನಿಸಿದ ನಾನು ಪರಮಾತ್ಮನಿಂದ ಹುಟ್ಟಿದ್ದೇನೆ. ನೀನು ನನ್ನಿಂದ ಹುಟ್ಟಿದ್ದಿ. ಚರಾಚರಾತ್ಮಕವಾದ ಪ್ರಪಂಚವೂ ನನ್ನಿಂದ ಉತ್ಪತ್ತಿಯನ್ನು ಪಡೆದಿದೆ. ಉಪನಿಷತ್ತು ಹಾಗೂ ವೇದಗಳನ್ನು ಉಪದೇಶಿಸಿದವನು ನಾನು' ಎಂಬುದಾಗಿಯೂ ಬ್ರಹ್ಮದೇವರು ರುದ್ರನಿಗೆ ಹೇಳಿದ ವಚನವಿದೆ. ಇದರಿಂದಲೂ ಹರಿಸರ್ವೋತ್ತಮತ್ವವೇ ಸಿದ್ಧವಾಗುತ್ತದೆ. ॥ ೧೧೫ ॥

ತಥೈವ ಭೀಮವಚನಂ ಧರ್ಮಜಂ ಪ್ರತ್ಯುದೀರಿತಮ್ ।
'ಬ್ರಹ್ಮೇಶಾನಾದಿಭಿಃ ಸರ್ವೈಃ ಸಮೇತೈರ್ಯದ್ಗುಣಾಂಶಕಃ ।
ನಾವಸಾಯಯಿತುಂ ಶಕ್ಯೋ ವ್ಯಾಚಕ್ಷಾಣೈಶ್ಚ ಸರ್ವದಾ ॥ ೧೧೬ ॥

ಸ ಏಷ ಭಗವಾನ್ ಕೃಷ್ಣೋ ನೈವ ಕೇವಲಮಾನುಷಃ ।
ಯಸ್ಯ ಪ್ರಸಾದಜೋ ಬ್ರಹ್ಮಾ ರುದ್ರಶ್ಚ ಕ್ರೋಧಸಂಭವಃ' ॥ ೧೧೭ ॥

**ಅರ್ಥ :- ತಥೈವ ಚ** ಹಾಗೆಯೇ, **ಧರ್ಮಜಂ ಪ್ರತಿ** ಯುಧಿಷ್ಠಿರನನ್ನು ಕುರಿತು, **ಉದೀರಿತಂ** ಹೇಳಲ್ಪಟ್ಟ **ಭೀಮವಚನಂ** ಭೀಮನ ಮಾತು, **ಅಸ್ತಿ** ಇದೆ. **ಸರ್ವದಾ** ಯಾವಾಗಲೂ, **ವ್ಯಾಚಕ್ಷಾಣೈಃ** ವರ್ಣಿಸುತ್ತಲೇ ಇರುವ,

**ಬ್ರಹ್ಮೇಶಾನಾದಿಭಿಃ** ಬ್ರಹ್ಮ ರುದ್ರ ಮೊದಲಾದ, **ಮಿಲಿತೈಃ** ಒಟ್ಟಾದ ಎಲ್ಲ ದೇವತೆಗಳಿಂದಲೂ, **ಯದ್ಗುಣಾಂಶಕಃ** ಯಾವ ಪರಮಾತ್ಮನ ಗುಣದ ಅಂಶವೂ ಕೂಡ **ಅವಸಾಯಯಿತುಂ ನ ಶಕ್ಯಃ** ಇಷ್ಟೇ ಎಂದು ಹೇಳಿ ಮುಗಿಸಲು ಶಕ್ಯವಿಲ್ಲವೋ, (ಮತ್ತು) **ಬ್ರಹ್ಮಾ** ಬ್ರಹ್ಮದೇವರು, **ಯಸ್ಯ ಪ್ರಸಾದಜಃ** ಯಾವ ಪರಮಾತ್ಮನ ಪ್ರಸನ್ನತೆಯಿಂದ ಹುಟ್ಟಿದವರೋ, **ರುದ್ರಶ್ಚ** ರುದ್ರನೂ, **ಕ್ರೋಧಸಂಭವಃ** ಕೋಪದಿಂದ ಹುಟ್ಟಿದವನೋ, **ಸ ಏಷಃ** ಅಂತಹ ಈ, **ಭಗವಾನ್ ಕೃಷ್ಣಃ** ಷಡ್ಗುಣ್ಯೈಶ್ವರ್ಯ ಸಂಪನ್ನನಾದ ಕೃಷ್ಣನು, **ಕೇವಲಮಾನುಷಃ ನೈವ** ಕೇವಲ ಮನುಷ್ಯನು ಅಲ್ಲವೇ ಅಲ್ಲ.

**ತಾತ್ಪರ್ಯ** :- ಭೀಮನು ಧರ್ಮರಾಜನಿಗೆ ಹೇಳಿದ ಮಾತು ಹೀಗಿದೆ — ಶ್ರೀಕೃಷ್ಣನು ಅನಂತಗುಣಪೂರ್ಣನು. ಬ್ರಹ್ಮಾದಿ ದೇವತೆಗಳೆಲ್ಲ ಸೇರಿ ನಿರಂತರ ಬಣ್ಣಿಸಿದರೂ ಸಹ ಅವನ ಗುಣದ ಒಂದು ಅಂಶವನ್ನು ಸಹ ಮುಗಿಸಲಾರರು. ಬ್ರಹ್ಮದೇವರು ಈ ಕೃಷ್ಣನ ಪ್ರಸನ್ನತೆಯಿಂದ ಹುಟ್ಟಿದವರು. ರುದ್ರನು ಕೋಪದಿಂದ ಹುಟ್ಟಿದವನು. ಇಂತಹ ಕೃಷ್ಣನು ಕೇವಲ ಮನುಷ್ಯನಾಗಿರಲು ಸಾಧ್ಯವಿಲ್ಲ. ಸರ್ವೋತ್ಕೃಷ್ಟ ದೇವತೆಯಾಗಿದ್ದಾನೆ.

**ವಚನಂ ಚೈವ ಕೃಷ್ಣಸ್ಯ ಜ್ಯೇಷ್ಠ ಕುಂತೀಸುತಂ ಪ್ರತಿ ।**
**'ರುದ್ರಂ ಸಮಾಶ್ರಿತಾ ದೇವಾ ರುದ್ರೋ ಬ್ರಹ್ಮಾಣಮಾಶ್ರಿತಃ ॥ ೧೧೮ ॥**

**ಬ್ರಹ್ಮಾ ಮಾಮಾಶ್ರಿತೋ ನಿತ್ಯಂ ನಾಹಂ ಕಂಚಿದುಪಾಶ್ರಿತಃ ।**
**ಯಥಾಶ್ರಿತಾನಿ ಜ್ಯೋತೀಂಷಿ ಜ್ಯೋತಿಃಶ್ರೇಷ್ಠಂ ದಿವಾಕರಮ್ ।**
**ಏವಂ ಮುಕ್ತಗಣಾಃ ಸರ್ವೇ ವಾಸುದೇವಮುಪಾಶ್ರಿತಾಃ' ॥ ೧೧೯ ॥**

**ಅರ್ಥ** :- **ಜ್ಯೇಷ್ಠಂ** ಜ್ಯೇಷ್ಠನಾದ, **ಕುಂತೀಸುತಂ ಪ್ರತಿ** ಕುಂತಿಯ ಮಗನಾದ ಧರ್ಮರಾಜನನ್ನು ಕುರಿತು, **ಕೃಷ್ಣಸ್ಯೈವ** ಕೃಷ್ಣನದೇ, **ವಚನಂ ಚ** ಮಾತೂ ಕೂಡ, **ಆಸ್ತಿ** ಇದೆ, **ದೇವಾಃ** ದೇವತೆಗಳು, **ರುದ್ರಂ ಸಮಾಶ್ರಿತಾಃ** ರುದ್ರನನ್ನು ಆಶ್ರಯಿಸಿದ್ದಾರೆ. **ರುದ್ರಃ** ರುದ್ರನು, **ಬ್ರಹ್ಮಾಣಂ ಆಶ್ರಿತಃ** ಬ್ರಹ್ಮನನ್ನಾಶ್ರಯಿಸಿದ್ದಾನೆ. **ಬ್ರಹ್ಮಾ** ಬ್ರಹ್ಮನು, **ನಿತ್ಯಂ** ಯಾವಾಗಲೂ, **ಮಾಂ** ನನ್ನನ್ನು, **ಆಶ್ರಿತಃ** ಆಶ್ರಯಿಸಿದ್ದಾನೆ. **ಅಹಂ** ನಾನು, **ಕಂಚಿತ್** ಯಾರನ್ನೂ, **ನ ಉಪಾಶ್ರಿತಃ** ಆಶ್ರಯಿಸಿಲ್ಲ. **ಜ್ಯೋತೀಂಷಿ** ಎಲ್ಲ ಪ್ರಕಾಶವುಳ್ಳ ವಸ್ತುಗಳು,

**ಯಥಾ** ಹೇಗೆ, **ಜ್ಯೋತಿಃಶ್ರೇಷ್ಠಂ** ಪ್ರಕಾಶಕ ವಸ್ತುಗಳಲ್ಲಿ ಶ್ರೇಷ್ಠನಾದ, **ದಿವಾಕರಂ** ಸೂರ್ಯನನ್ನು, **ಆಶ್ರಿತಾನಿ,** ಆಶ್ರಿಯಿಸಿವೆಯೋ **ಏವಂ** ಇವೇ ರೀತಿಯಲ್ಲಿ **ಸರ್ವೇ ಮುಕ್ತಗಣಾಃ** ಎಲ್ಲ ಮುಕ್ತ ಸಮೂಹಗಳು, **ವಾಸುದೇವಂ** ವಾಸುದೇವ ನನ್ನು, **ಉಪಾಶ್ರಿತಾಃ** ಆಶ್ರಯಿಸಿದ್ದಾರೆ.

**ತಾತ್ಪರ್ಯ** :- ಧರ್ಮರಾಜನಿಗೆ ಕೃಷ್ಣ ಹೇಳಿದ ಮಾತೂ ಇದೆ. ಎಲ್ಲ ದೇವತೆಗಳು ರುದ್ರನನ್ನಾಶ್ರಯಿಸಿದ್ದಾರೆ. ರುದ್ರನು ಬ್ರಹ್ಮನನ್ನೂ, ಬ್ರಹ್ಮನು ನನ್ನನ್ನೂ ಆಶ್ರಯಿಸಿದ್ದಾನೆ. ನಾನು ಮಾತ್ರ ಯಾರನ್ನೂ ಆಶ್ರಯಿಸಿಲ್ಲ. ಇದು ಸಂಸಾರದಲ್ಲಿ ಮಾತ್ರವಲ್ಲ, ಮುಕ್ತಿಯಲ್ಲೂ ಹೀಗೆಯೇ ಇದೆ. ಪ್ರಕಾಶವುಳ್ಳ ವಸ್ತುಗಳೆಲ್ಲ ಸೂರ್ಯನನ್ನಾಶ್ರಯಿಸಿದಂತೆ ಮುಕ್ತರೆಲ್ಲರೂ ನನ್ನನ್ನಾಶ್ರಯಿಸಿಯೇ ಇದ್ದಾರೆ. ॥ ೧೨೦ ॥

**ಭವಿಷ್ಯತ್ಪರ್ವಗಂ ಚಾಪಿ ವಚೋ ವ್ಯಾಸಸ್ಯ ಸಾದರಮ್ ॥ ೧೨೧ ॥**

**ವಾಸುದೇವಸ್ಯ ಮಹಿಮಾ ಭಾರತೇ ನಿರ್ಣಯೋದಿತಃ ।**
**ತದರ್ಥಾಸ್ತು ಕಥಾಃ ಸರ್ವಾ ನಾನ್ಯಾರ್ಥಂ ವೈಷ್ಣವಂ ಯಶಃ ॥ ೧೨೨ ॥**

**ಅರ್ಥ** :- **ಅಪಿ ಚ** ಮತ್ತೂ, **ಭವಿಷ್ಯತ್ಪರ್ವಗಂ** ಭವಿಷ್ಯತ್ಪರ್ವದಲ್ಲಿರುವ, **ವ್ಯಾಸಸ್ಯ ವಚಃ** ವ್ಯಾಸರ ಮಾತು, **ಸಾದರಂ** ತಾತ್ಪರ್ಯ ಪೂರ್ವಕವಾಗಿ, **ಅಸ್ತಿ** ಇದೆ, **ಭಾರತೇ** ಭಾರತದಲ್ಲಿ, **ವಾಸುದೇವಸ್ಯ ಮಹಿಮಾ** ಶ್ರೀಹರಿಯ ಮಹಿಮೆಯು, **ನಿರ್ಣಯೋದಿತಃ** ನಿರ್ಣಯದಿಂದ ಹೇಳಲ್ಪಟ್ಟಿದೆ. **ಸರ್ವಾಃ ಕಥಾಸ್ತು** ಬೇರೆಲ್ಲ ಕಥೆಗಳಾದರೂ, **ತದರ್ಥಾಃ** ಭಗವಂತನ ಉತ್ಕರ್ಷವನ್ನು ತೋರಿಸಲೆಂದೇ ವರ್ಣಿತವಾಗಿವೆ, **ವೈಷ್ಣವಂ ಯಶಃ** ಭಗವಂತನ ಕೀರ್ತಿಯು (ಕಥೆಯು) ಮಾತ್ರ, **ನ ಅನ್ಯಾರ್ಥಂ** ಬೇರೆ ಉದ್ದೇಶ್ಯದಿಂದ ವರ್ಣಿತವಾದುದಲ್ಲ.

**ತಾತ್ಪರ್ಯ** :- ಭವಿಷ್ಯತ್ಪರ್ವದಲ್ಲಿ ಶ್ರೀವ್ಯಾಸರೇ ತಾತ್ಪರ್ಯಪೂರ್ವಕವಾಗಿ ಹೇಳಿದ್ದಾರೆ - ಭಾರತದಲ್ಲಿ ನಾನು ಕೃಷ್ಣನ ಉತ್ಕರ್ಷವನ್ನೇ ಹೇಳಿದ್ದೇನೆ. ಪಾಂಡವಾದಿಗಳ ಕಥೆ ಹೇಳಿದುದರ ಉದ್ದೇಶ್ಯವೂ ಕೃಷ್ಣನ ಮಹಿಮೆಯನ್ನು ತೋರಿಸುವುದೇ ಆಗಿದೆ. ಪಾಂಡವರ ಕಥೆಯಂತೆ ಕೃಷ್ಣನ ಕಥೆ ಮಾತ್ರ ಬೇರೊಂದು ಉದ್ದೇಶದಿಂದ ಹೇಳಿದ್ದಲ್ಲ.

**ವಿಶೇಷ ವಿಷಯ** :- ಬೇರೆ ಕಥೆಗಳೆಂದರೆ ಪಾಂಡವರು ಮಾಡಿದ ರಾಜಸೂಯ, ವನವಾಸ, ಯುದ್ಧಾದಿ ಕಥೆಗಳೆಂದರ್ಥ. ಈ ಕಥೆಗಳ ವರ್ಣನೆಯಿಂದ ಶ್ರೀಹರಿ ಮಹಿಮೆಯೇ ತಿಳಿಯುತ್ತದೆ. ಪಾಂಡವರು ಭಗವದ್ ಭಕ್ತಿಯಿಂದಲೇ ರಾಜಸೂಯಯಾಗ ಮಾಡಿದ್ದಾರೆ. ವನವಾಸ ಮತ್ತು ಯುದ್ಧದಲ್ಲಿ ಶತ್ರುಗಳನ್ನು ಪರಾಜಯಗೊಳಿಸಿದ್ದೂ ಭಗವದ್‌ಭಕ್ತಿಯಿಂದಲೇ. ಮತ್ತು ಧರ್ಮದಿಂದ ರಾಜ್ಯಪರಿಪಾಲನೆಗೈದಿದ್ದಾರೆ. ಇದನ್ನೆಲ್ಲ ವರ್ಣಿಸಿದಾಗ ಹರಿಮಹಿಮೆಯೇ ಪ್ರಕಾಶಿತವಾಗುವುದು. ॥ ೧೨೨ ॥

**ತತ್ಪ್ರತೀಪಂ ತು ಯದ್ ದೃಶ್ಯೇನ್ನ ತನ್ಮಮ ಮನೀಷಿತಮ್ ।**
**ಭಾಷಾಸ್ತು ತ್ರಿವಿಧಾಸ್ತತ್ರ ಮಯಾ ವೈ ಸಂಪ್ರದರ್ಶಿತಾಃ ॥ ೧೨೩ ॥**

**ಅರ್ಥ** :- **ತತ್ರ** ಭಾರತದಲ್ಲಿ, **ತತ್ಪ್ರತೀಪಂ ತು ಯತ್** ವಿಷ್ಣೂತ್ಕರ್ಷಕ್ಕೆ ವಿರುದ್ಧವಾದ ಯಾವುದಾದರೂ ವಚನವು, **ದೃಶ್ಯೇತ್** ಕಂಡದ್ದಾದರೆ, **ತತ್** ಅದು, **ಮಮ ಮನೀಷಿತಂ ನ** ಮನಃಪೂರ್ವಕವಾಗಿ ನನ್ನಿಂದ ಹೇಳಲ್ಪಟ್ಟಿದ್ದಲ್ಲ. (ಏಕೆಂದರೆ) **ಮಯಾ** ನನ್ನಿಂದ, **ತತ್ರ** ಭಾರತದಲ್ಲಿ, **ಭಾಷಾಸ್ತು** ಭಾಷೆಗಳಾದರೂ, **ತ್ರಿವಿಧಾಃ** ಮೂರು ವಿಧವಾದವುಗಳು, **ಸಂಪ್ರದರ್ಶಿತಾಃ ವೈ** ನಿಶ್ಚಯವಾಗಿ ತೋರಿಸಲ್ಪಟ್ಟಿವೆ.

**ತಾತ್ಪರ್ಯ** :- ಭಾರತದಲ್ಲಿ ವಿಷ್ಣೂತ್ಕರ್ಷಕ್ಕೆ ವಿರುದ್ಧವಾದ ಯಾವು-ದಾದರೂ ವಚನವಿದ್ದರೆ ಅದು ನಾನು ಮನಃಪೂರ್ವಕವಾಗಿ ಹೇಳಿದ ಮಾತಲ್ಲ. ಬೇರೆ ದರ್ಶನದವರು ಹೀಗೆ ಹೇಳುತ್ತಾರೆಂಬ ಅಭಿಪ್ರಾಯದಿಂದ ಅಂದರೆ ದರ್ಶನಭಾಷೆಯಿಂದ ಹೇಳಿದ ಮಾತೇ ಆಗಿರುತ್ತದೆ. ಯಾಕೆಂದರೆ ನಾನು ಭಾರತದಲ್ಲಿ ಸಮಾಧಿಭಾಷಾ, ಗುಹ್ಯಭಾಷಾ ಮತ್ತು ದರ್ಶನಭಾಷಾ ಎಂದು ಮೂರು ಭಾಷೆಗಳಲ್ಲಿ ವಿಷಯಗಳನ್ನು ನಿರೂಪಿಸಿದ್ದೇನೆ. ॥ ೧೨೩ ॥

ಪೀಠಿಕೆ :- ಈಗ ಸಮಾಧಿ ಭಾಷೆಯನ್ನು ತೋರಿಸುತ್ತಾರೆ —

**ಉಕ್ತೋ ಯೋ ಮಹಿಮಾ ವಿಷ್ಣೋಃ ಸ ತೂಕ್ತೋ ಹಿ ಸಮಾಧಿನಾ ।**
**ಶೈವದರ್ಶನಮಾಲಂಬ್ಯ ಕ್ವಚಿತ್ ಶೈವೀ ಕಥೋದಿತಾ ॥ ೧೨೪ ॥**

**ಅರ್ಥ** :- **ವಿಷ್ಣೋಃ** ವಿಷ್ಣುವಿನ, **ಯಃ** ಯಾವ, **ಮಹಿಮಾ** ಮಹಿಮೆಯು, **ಉಕ್ತಃ** ಸ್ಪಷ್ಟವಾಗಿ ಹೇಳಲ್ಪಟ್ಟಿದೆಯೋ, **ಸ ತು** ಅದಾದರೂ

ಸಮಾಧಿನಾ, **ಉಕ್ತಃ ಹಿ** ಸಮಾಧಿ ಭಾಷೆಯಿಂದ ಹೇಳಲ್ಪಟ್ಟಿರುತ್ತದಷ್ಟೆ **ಶೈವದರ್ಶನಮಾಲಂಬ್ಯ** ಶೈವದರ್ಶನವನ್ನು ಅವಲಂಬಿಸಿ, **ಕ್ವಚಿತ್** ಕೆಲವು ಕಡೆ, **ಶೈವೀ ಕಥಾ** ಶಿವನ ಕಥೆಯು, **ಉದಿತಾ** ಹೇಳಲ್ಪಟ್ಟಿದೆ.

**ತಾತ್ಪರ್ಯ** :- ಸ್ಪಷ್ಟವಾಗಿ ಹೇಳಿದ ವಿಷ್ಣುಮಹಿಮೆಯು ಸಮಾಧಿ ಭಾಷೆಯಿಂದಲೇ ಹೇಳಲ್ಪಟ್ಟದೆಂದು ತಿಳಿಯಬೇಕು. ಸಮಾಧಾನವುಳ್ಳ ಮನಸ್ಸಿನಿಂದ ಅಂದರೆ ಏಕಾಗ್ರತೆಯುಳ್ಳ ಮನಸ್ಸಿನಿಂದ ಹೇಳಲ್ಪಟ್ಟದ್ದು. ಆದ್ದರಿಂದ ಅದು ಸಮಾಧಿ ಭಾಷೆಯೆನಿಸುವುದು. ಶಿವನ ಉತ್ಕರ್ಷವನ್ನೂ ಕೆಲವು ಕಡೆ ಹೇಳಲಾಗಿದೆ. ಅದು ಶೈವದರ್ಶನ ಪ್ರಕಾರ ಹೇಳಿದ್ದೆಂದು ತಿಳಿಯಬೇಕು.

**ವಿಶೇಷ ವಿಷಯ** :- ಸಮಾಹಿತ ಮನಸ್ಸಿನಿಂದ, ಅಂದರೆ ಚಿತ್ತೈಕಾಗ್ರತೆಯಿಂದ, ಹೇಳಿದ್ದು ಸಮಾಧಿ ಭಾಷೆ. ಉದಾಹರಣೆ — 'ನಾಸ್ತಿ ನಾರಾಯಣ ಸಮಂ' 'ರುದ್ರಂ ಸಮಾಶ್ರಿತಾ ದೇವಾಃ' 'ಸತ್ಯಂ ಸತ್ಯಂ ಪುನಃ ಸತ್ಯಂ' ಇವೇ ಮೊದಲಾದ ಶ್ಲೋಕಗಳು ಸಮಾಧಿ ಭಾಷೆಯಿಂದ ಹೇಳಲ್ಪಟ್ಟಿವೆ. ॥ ೧೨೪ ॥

**ಸಮಾಧಿಭಾಷಯೋಕ್ತಂ ಯತ್ ತತ್ ಸರ್ವಂ ಗ್ರಾಹ್ಯಮೇವ ಹಿ ।**
**ಅವಿರುದ್ಧಂ ಸಮಾಧೇಸ್ತು ದರ್ಶನೋಕ್ತಂ ಚ ಗೃಹ್ಯತೇ ॥ ೧೨೫ ॥**

**ಅರ್ಥ** :- **ಯತ್** ಯಾವುದು, **ಸಮಾಧಿಭಾಷಯಾ ಉಕ್ತಂ** ಸಮಾಧಿ ಭಾಷೆಯಿಂದ ಹೇಳಲ್ಪಟ್ಟಿದೆಯೋ, **ತತ್ ಸರ್ವಂ** ಅದೆಲ್ಲವೂ, **ಗ್ರಾಹ್ಯಮೇವ ಹಿ** ಸ್ವೀಕರಿಸಲು ಯೋಗ್ಯವೇ ಆಗಿದೆ, **ದರ್ಶನೋಕ್ತಂ ಚ** ದರ್ಶನಭಾಷೆಯಿಂದ ಹೇಳಲ್ಪಟ್ಟಿದ್ದೂ ಕೂಡ, **ಸಮಾಧೇಃ ಅವಿರುದ್ಧಂ ತು** ಸಮಾಧಿಭಾಷೆಗೆ ವಿರುದ್ಧವಾಗಿಲ್ಲದಿದ್ದರೆ, **ಗೃಹ್ಯತೇ** ಸ್ವೀಕರಿಸಲ್ಪಡುತ್ತದೆ.

**ತಾತ್ಪರ್ಯ** :- ಸಮಾಧಿಭಾಷೆಯಲ್ಲಿ ಹೇಳಿದ್ದೆಲ್ಲ ಗ್ರಾಹ್ಯವೇ ಆಗಿದೆ. ದರ್ಶನ ಭಾಷೆಯಿಂದ ಹೇಳಿದ್ದೂ ಕೂಡ ಸಮಾಧಿಭಾಷೆಯಿಂದ ಹೇಳಿದ ಪ್ರಮೇಯಕ್ಕೆ ಅವಿರುದ್ಧವಾಗಿದ್ದರೆ ಅದೂ ಗ್ರಾಹ್ಯವೇ. ॥ ೧೨೫ ॥

**ಆದ್ಯಂತಯೋರ್ವಿರುದ್ಧಂ ಯದ್ದರ್ಶನೇ ತದುದಾಹೃತಮ್ ।**
**ದರ್ಶನಾಂತರಸಿದ್ಧಂ ಚ, ಗುಹ್ಯಭಾಷಾಽನ್ಯಥಾ ಭವೇತ್ ॥ ೧೨೬ ॥**

**ಅರ್ಥ** :- **ಆದ್ಯಂತಯೋಃ** ಆದಿ ಮತ್ತು ಅಂತ್ಯದಲ್ಲಿರುವ ಪ್ರಮೇಯ ಗಳಿಗೆ, **ಯತ್** ಯಾವುದು, **ವಿರುದ್ಧಂ** ವಿರುದ್ಧವಾಗಿದೆಯೋ, **ಚ** ಮತ್ತು, **ದರ್ಶನಾಂತರಸಿದ್ಧಂ** ಇತರ ಶೈವಾದಿದರ್ಶನಸಿದ್ಧವಾಗಿದೆಯೋ, **ತತ್** ಅದು, **ದರ್ಶನೇ** ದರ್ಶನ ಭಾಷೆಯಲ್ಲಿ ಹೇಳಲ್ಪಟ್ಟಿದ್ದೆಂದು, **ಉದಾಹೃತಂ** ಹೇಳಲ್ಪಟ್ಟಿದೆ, **ಅನ್ಯಥಾ** ದರ್ಶನ ಭಾಷೆ ಮತ್ತು ಸಮಾಧಿಭಾಷೆಗಳಿಗಿಂತ ಬೇರೆ ಪ್ರಕಾರವಾಗಿ ಹೇಳಲ್ಪಟ್ಟಿದ್ದು **ಗುಹ್ಯ ಭಾಷಾ** ಗುಹ್ಯಭಾಷೆಯು, **ಭವೇತ್** ಆಗುವುದು.

**ತಾತ್ಪರ್ಯ** :- ಯಾವುದೇ ಗ್ರಂಥದ ಆದಿ ಅಂತ್ಯಗಳಲ್ಲಿರುವ ಪ್ರಮೇಯಕ್ಕೆ ವಿರುದ್ಧವಾದ ಯಾವುದಾದರೂ ವಿಷಯವು ಮಧ್ಯದಲ್ಲಿ ಬಂದರೆ ಅದು ಇತರ ದರ್ಶನದಲ್ಲಿ ಸಿದ್ಧವಾದ ವಿಷಯವಾಗಿದ್ದರೆ, ಅದನ್ನು ದರ್ಶನಭಾಷೆಯಿಂದ ಹೇಳಲಾಗಿದೆ ಎಂದು ತಿಳಿಯಬೇಕು.

ಸ್ವಪ್ರಾರ್ಥಕವಾದ ಸಮಾಧಿಭಾಷೆಯೂ ಅಲ್ಲದೇ, ದರ್ಶನಭಾಷೆಯೂ ಅಲ್ಲದೇ ಬೇರೆ ಪ್ರಕಾರದಿಂದ ಹೇಳಿದ್ದರೆ ಅದು ಗುಹ್ಯಭಾಷೆ ಎಂದು ತಿಳಿಯಬೇಕು.

**ವಿಶೇಷ ವಿಷಯ** :- ಭಾರತದ ಆದಿಯಲ್ಲಿ ಹೇಳಿದ ಕೃಷ್ಣಮಹಿಮೆಗೂ ಮತ್ತು ಅಂತ್ಯದಲ್ಲಿ ಹೇಳಿದ ಕೃಷ್ಣನ ಉತ್ತಮತ್ವಕ್ಕೂ ಶ್ರೀಕೃಷ್ಣನು ರುದ್ರದೇವರನ್ನು ಪೂಜಿಸಿದ್ದಾನೆಂಬ ವಿರುದ್ಧವಾದ ಪ್ರಮೇಯ ಮಧ್ಯದಲ್ಲಿ ಬಂದಿದೆ. ಇದು ವೈಷ್ಣವದರ್ಶನಕ್ಕೆ ವಿರುದ್ಧವಾದ ಶೈವದರ್ಶನದಲ್ಲಿ ಸಿದ್ಧವಾದದ್ದು. ಇದನ್ನು ಭಾರತದಲ್ಲಿ ಅಜ್ಞಜನಮೋಹನಾರ್ಥವಾಗಿ ಹೇಳಿದ್ದಾರೆ. ಇದು ದರ್ಶನ ಭಾಷೆಯಿಂದ ಹೇಳಲ್ಪಟ್ಟಿದ್ದೆಂದು ಅಭಿಪ್ರಾಯ.

**ಅಟ್ಟಶೂಲಾ ಜನಪದಾಃ ಶಿವಶೂಲಾಶ್ಚತುಷ್ಪಥಾಃ ।**
**ಪ್ರಮದಾಃ ಕೇಶಶೂಲಿನ್ಯೋ ಭವಿಷ್ಯಂತಿ ಕಲೌಯುಗೇ ॥**

ಎಂದು ಗೂಢಾರ್ಥಕ ಪದಗಳನ್ನು ಸೇರಿಸಿ ಹೇಳಿದರೆ ಅದು ಗುಹ್ಯಭಾಷೆ ಎಂದರ್ಥ.

(ಈ ಶ್ಲೋಕದ ಅರ್ಥ — ಕಲಿಯುಗದಲ್ಲಿ ಜನರು ಅನ್ನ ಮಾರಿ ಬದುಕುತ್ತಾರೆ. ಬ್ರಾಹ್ಮಣರು ವೇದ ವಿದ್ಯೆಯನ್ನು ಮಾರಿ ಬದುಕುತ್ತಾರೆ. ಸ್ತ್ರೀಯರು ದೇಹ ಮಾರಿ ಬದುಕುತ್ತಾರೆ).

**ತಸ್ಮಾದ್ವಿಷ್ಣೋರ್ಹಿ ಮಹಿಮಾ ಭಾರತೋಕ್ತೋ ಯಥಾರ್ಥತಃ ।**

**ಅರ್ಥ :- ತಸ್ಮಾತ್** ಆದ್ದರಿಂದ, **ವಿಷ್ಣೋಃ ಮಹಿಮಾ** ಭಗವಂತನ ಮಹಿಮೆಯೇ, **ಭಾರತೋಕ್ತಃ** ಭಾರತದಲ್ಲಿ ಹೇಳಲ್ಪಟ್ಟಿದೆ ಎಂಬುದು, **ಯಥಾರ್ಥತಃ ಹಿ** ಯಥಾರ್ಥವಾಗಿದೆಯಷ್ಟೆ

**ತಾತ್ಪರ್ಯ :-** ಭಾರತದಲ್ಲಿ ಸಮಾಧಿಭಾಷೆಯಿಂದ ವಿಷ್ಣು ಮಹಿಮೆಯು ವರ್ಣಿತವಾದ್ದರಿಂದ 'ಭಾರತದಲ್ಲಿ ವಿಷ್ಣೂತ್ಕರ್ಷವನ್ನು ಹೇಳಲಾಗಿದೆ' ಎಂಬ ಮಾತು ಸತ್ಯವೇ ಆಗಿದೆ.

**ಪೀಠಿಕೆ :-** ವಾಯು ಮೊದಲಾದವರು ಭಗವತ್ಕಾರ್ಯದಲ್ಲಿ ಅಂಗಭೂತರೆಂದು ಹೇಳುವ ಭವಿಷ್ಯತ್ಪರ್ವದ ವಚನವನ್ನು ಈಗ ಉದಾಹರಿಸುತ್ತಾರೆ.

**ತಸ್ಯಾಂಗಂ ಪ್ರಥಮಂ ವಾಯುಃ ಪ್ರಾದುರ್ಭಾವತ್ರಯಾನ್ವಿತಃ ॥ ೧೨೭ ॥**

**ಪ್ರಥಮೋ ಹನುಮಾನ್ನಾಮ ದ್ವಿತೀಯೋ ಭೀಮ ಏವ ಚ ।**
**ಪೂರ್ಣಪ್ರಜ್ಞಸ್ತೃತೀಯಸ್ತು ಭಗವತ್ಕಾರ್ಯಸಾಧಕಃ ॥ ೧೨೮ ॥**

**ತ್ರೇತಾದ್ಯೇಷು ಯುಗೇಷ್ವೇಷ ಸಂಭೂತಃ ಕೇಶವಾಜ್ಞಯಾ ।**
**ಏಕೈಕಶಸ್ತ್ರಿಷು ಪೃಥಕ್, ದ್ವಿತೀಯಾಂಗಂ ಸರಸ್ವತೀ ॥ ೧೨೯ ॥**

**ಶಂರೂಪೇ ತು ರತೇರ್ವಾಯೌ ಶ್ರೀರಿತ್ಯೇವ ಚ ಕೀರ್ತ್ಯತೇ ।**
**ಸೈವ ಚ ದ್ರೌಪದೀ ನಾಮ ಕಾಲೀ ಚಂದ್ರೇತಿ ಚೋಚ್ಯತೇ ॥ ೧೩೦ ॥**

**ಅರ್ಥ :-** ತಸ್ಯ ಆ ಪರಮಾತ್ಮನಿಗೆ, **ಪ್ರಾದುರ್ಭಾವತ್ರಯಾನ್ವಿತಃ** ಮೂರು ಅವತಾರಗಳಿಂದ ಕೂಡಿದ, **ವಾಯುಃ** ವಾಯುದೇವರು, **ಪ್ರಥಮಂ ಅಂಗಂ** ಮೊದಲನೆಯ ಅಂಗಭೂತರು (ಪ್ರಧಾನ ಸೇವಕರು), **ಪ್ರಥಮಃ** ಮೊದಲನೆಯ ಅವತಾರವು, **ಹನುಮಾನ್ ನಾಮ** ಹನುಮಂತನೆಂದು ಪ್ರಸಿದ್ಧವಾಗಿದೆ, **ದ್ವಿತೀಯಃ** ಎರಡನೆಯ ಅವತಾರವು, **ಭೀಮ ಏವ ಚ** ಭೀಮನೆಂದೇ ಪ್ರಸಿದ್ಧವಾಗಿದೆ, **ತೃತೀಯಸ್ತು** ಮೂರನೆಯದಾದರೂ, **ಪೂರ್ಣಪ್ರಜ್ಞಃ** ಪೂರ್ಣ ಪ್ರಜ್ಞಾವತಾರವು, **ಭಗವತ್ಕಾರ್ಯ ಸಾಧಕಃ** ಭಗವತ್ಕಾರ್ಯವನ್ನು

ಸಾಧಿಸುವ, **ಏಷಃ** ಈ ವಾಯುದೇವರು, **ತ್ರಿಷು** ಮೂರು ರೂಪಗಳಲ್ಲಿ **ಏಕೈಕಶಃ** ಒಂದೊಂದನ್ನೂ ಕುರಿತು, **ಪೃಥಕ್** ಪ್ರತ್ಯೇಕ ಪ್ರತ್ಯೇಕವಾಗಿ (ಮಾಡಲ್ಪಟ್ಟ), **ಕೇಶವಾಜ್ಞಯಾ** ಭಗವದಾಜ್ಞೆಯಿಂದ, **ತ್ರೇತಾದ್ಯೇಷು ಯುಗೇಷು** ತ್ರೇತಾದಿಯುಗಗಳಲ್ಲಿ, **ಸಂಭೂತಃ** ಅವತರಿಸಿದ್ದಾರೆ. **ತಸ್ಯ** ಆ ಭಗವಂತನಿಗೆ, **ಸರಸ್ವತೀ** ಸರಸ್ವತೀದೇವಿಯು, **ದ್ವಿತೀಯಾಂಗಂ** ಎರಡನೆಯ ಅಂಗಭೂತಳು, **ದ್ರೌಪದೀ ನಾಮ** ದ್ರೌಪದಿ ಎಂದು ಪ್ರಸಿದ್ಧಳಾದ, **ಸೈವ** ಆ ಸರಸ್ವತಿಯೇ, **ಶಂರೂಪೇ** 'ಶ' ಅಂದರೆ ಸುಖಸ್ವರೂಪರಾದ ವಾಯು ದೇವರಲ್ಲಿ, **ರತೇಃ** ರಮಿಸುವುದರಿಂದ, **ಶ್ರೀಃ ಇತ್ಯೇವ ಚ** ಶ್ರೀ ಎಂಬುದಾಗಿಯೂ, **ಕೀರ್ತ್ಯತೇ** ಹೇಳಲ್ಪಡುತ್ತಾಳೆ, **ಕಾಲೀ ಚಂದ್ರಾ ಇತಿ ಚ** ಕಾಲೀ, ಚಂದ್ರಾ ಎಂಬುದಾಗಿಯೂ, **ಉಚ್ಯತೇ** ಹೇಳಲ್ಪಡುತ್ತಾಳೆ.

**ತಾತ್ಪರ್ಯ :-** ಭಗವಂತನಿಗೆ ಅವನ ಕಾರ್ಯದಲ್ಲಿ ಪ್ರಧಾನಾಂಗ ವಾಯುದೇವರು. ಅವರು ಮೂರು ರೂಪಗಳಲ್ಲಿ ಒಂದೊಂದನ್ನೂ ಕುರಿತು ಪ್ರತ್ಯೇಕ ಪ್ರತ್ಯೇಕವಾಗಿ ಮಾಡಲ್ಪಟ್ಟ ಭಗವದಾಜ್ಞೆಯಿಂದ ತ್ರೇತಾ ದ್ವಾಪರ ಮತ್ತು ಕಲಿಯುಗದಲ್ಲಿ ಅವತರಿಸಿದ್ದಾರೆ. ಪ್ರಥಮಾವತಾರವು 'ಹನುಮಾನ್' ಎಂದೂ, ದ್ವಿತೀಯಾವತಾರವು 'ಭೀಮ' ಎಂದೂ, ಮೂರನೆಯದು ಪೂರ್ಣಪ್ರಜ್ಞ ಎಂದೂ ಪ್ರಸಿದ್ಧವಾಗಿದೆ.

ಆ ಭಗವಂತನಿಗೆ ಎರಡನೆಯ ಅಂಗಭೂತಳು ಸರಸ್ವತಿಯು. ಆ ಸರಸ್ವತಿಯೇ ದ್ರೌಪದೀದೇವಿಯು. ಭಾರತದಲ್ಲಿ ಕೆಲವುಕಡೆಗಳಲ್ಲಿ ದ್ರೌಪದಿಯ ಪ್ರಸಂಗದಲ್ಲಿ 'ಶ್ರೀಃ' ಎಂಬ ಉಲ್ಲೇಖವಿದೆ. ಅಲ್ಲಿ ಶ್ - ವಾಯುವಿನಲ್ಲಿ ರೀ - ರಮಿಸುವವಳು ಎಂಬ ವ್ಯುತ್ಪತ್ತಿಯಿಂದ ದ್ರೌಪದಿಯೇ ಶ್ರೀ ಎನಿಸುವಳು. ಅವಳೇ ಕಾಳೀ, ಚಂದ್ರಾ ಎಂದೂ ಹೇಳಲ್ಪಡುತ್ತಾಳೆ.

**ವಿಶೇಷ ವಿಷಯ :-** ಶ್ರೀ ಎಂಬಲ್ಲಿ ಶಕಾರವು ವಾಯುವಾಚಕ. ರೇಫವು ರಮತೇ ಎಂಬ ಅರ್ಥದಲ್ಲಿ ಬಂದಿದೆ. ಸ್ತ್ರೀಲಿಂಗವಾದ್ದರಿಂದ ನದೀ ಸಂಜ್ಞೆಯೂ, ಜೀಪ್ ಪ್ರತ್ಯಯವೂ ಬಂದು 'ಶ್ರೀಃ' ಎಂದು ಶಬ್ದ ನಿಷ್ಪತ್ತಿಯಾಗಿದೆ. ॥ ೧೩೦ ॥

**ತೃತೀಯಾಂಗಂ ಹರೇಶ್ಚೇಷಃ ಪ್ರಾದುರ್ಭಾವಸಮನ್ವಿತಃ ।**
**ಪ್ರಾದುರ್ಭಾವಾ ನರಶ್ಚೈವ ಲಕ್ಷಣೋ ಬಲ ಏವ ಚ ॥ ೧೩೧ ॥**

**ರುದ್ರಾತ್ಮಕತ್ವಾತ್ ಶೇಷಸ್ಯ ಶುಕೋ ದ್ರೌಣಿಶ್ಚ ತತ್ತನೂ ।**
**ಇಂದ್ರೇ ನರಾಂಶಸಂಪತ್ತ್ಯಾ ಪಾರ್ಥೋऽಪೀಷತ್ ತದಾತ್ಮಕಃ ॥ ೧೩೨ ॥**

**ಅರ್ಥ** :- **ಹರೇಃ** ಭಗವಂತನಿಗೆ, **ಪ್ರಾದುರ್ಭಾವಸಮನ್ವಿತಃ** ಅವತಾರಗಳಿಂದ ಕೂಡಿದ, **ಶೇಷಃ** ಶೇಷನು, **ತೃತೀಯಾಂಗಂ** ಮೂರನೆಯ ಅಂಗಭೂತನು, **ನರಶ್ಚೈವ** ನರ ಋಷಿಯೂ, **ಲಕ್ಷ್ಮಣಃ** ಲಕ್ಷ್ಮಣನೂ, **ಬಲಶ್ಚೈವ** ಬಲರಾಮನೂ, **ಪ್ರಾದುರ್ಭಾವಾಃ** ಶೇಷಾವತಾರಭೂತರು, **ಶೇಷಸ್ಯ ರುದ್ರಾತ್ಮಕತ್ವಾತ್** ಶೇಷನು ರುದ್ರಸ್ವರೂಪನಾದ್ದರಿಂದ, **ಶುಕಃ ದ್ರೌಣಿಶ್ಚ** ರುದ್ರಾಂಶರಾದ ಶುಕರು ಮತ್ತು ಅಶ್ವತ್ಥಾಮರೂ, **ತತ್ತನೂ** ಶೇಷಸ್ವರೂಪರು, **ಇಂದ್ರೇ** ಇಂದ್ರನಲ್ಲಿ, **ನರಾಂಶಸಂಪತ್ತ್ಯಾ** ನರಾವೇಶ ಇರುವುದರಿಂದ, **ಪಾರ್ಥೋऽಪಿ** ಇಂದ್ರಾಂಶನಾದ ಅರ್ಜುನನೂ, **ಈಷತ್** ಸ್ವಲ್ಪ **ತದಾತ್ಮಕಃ** ಶೇಷಸ್ವರೂಪನು.

**ತಾತ್ಪರ್ಯ** :- ಶ್ರೀಹರಿಗೆ ಮೂರನೆಯ ಅಂಗಭೂತರಾದವರು - ಶೇಷದೇವರು ಮತ್ತು ಅವರ ಅವತಾರಭೂತರಾದ ನರ, ಲಕ್ಷ್ಮಣ ಮತ್ತು ಬಲರಾಮದೇವರು. ರುದ್ರನೇ ಶೇಷನಾಗುವುದರಿಂದ ರುದ್ರಾಂಶರಾದ ಶುಕ ಮತ್ತು ಅಶ್ವತ್ಥಾಮರೂ ಶೇಷ ಸ್ವರೂಪರೇ ಆಗಿದ್ದಾರೆ. ಇಂದ್ರನಲ್ಲಿ ಶೇಷಾಂಶನಾದ ನರನ ಆವೇಶ ಇದ್ದ ಪ್ರಯುಕ್ತ ಇಂದ್ರಾಂಶನಾದ ಅರ್ಜುನನೂ ಸ್ವಲ್ಪ ಮಟ್ಟಿಗೆ ಶೇಷಸ್ವರೂಪನೇ ಆಗಿದ್ದಾನೆ. ಅವರೂ ಅಂಗಭೂತರು. ॥ ೧೩೨ ॥

**ಪ್ರದ್ಯುಮ್ನಾದ್ಯಾಸ್ತತೋ ವಿಷ್ಣೋರಂಗಭೂತಾಃ ಕ್ರಮೇಣ ತು ।**
**ಚರಿತಂ ವೈಷ್ಣವಾನಾಂ ತು ವಿಷ್ಣೂದ್ರೇಕಾಯ ಕಥ್ಯತೇ ॥ ೧೩೩ ॥**

**ಅರ್ಥ** :- **ತತಃ** ಅನಂತರದಲ್ಲಿ **ಪ್ರದ್ಯುಮ್ನಾದ್ಯಾಃ** ಪ್ರದ್ಯುಮ್ನ ಮೊದಲಾದವರು, **ಕ್ರಮೇಣ** ತಾರತಮ್ಯದಿಂದ, **ವಿಷ್ಣೋಃ** ಪರಮಾತ್ಮನಿಗೆ, **ಅಂಗಭೂತಾಃ** ಸೇವಕರು, **ವೈಷ್ಣವಾನಾಂ** ಭಗವದ್‌ಭಕ್ತರ, **ಚರಿತಂ ತು** ಚರಿತ್ರೆಯಾದರೂ, **ವಿಷ್ಣೂದ್ರೇಕಾಯ** ಭಗವಂತನ ಉತ್ಕರ್ಷಕ್ಕೋಸ್ಕರವಾಗಿಯೇ, **ಕಥ್ಯತೇ** ಹೇಳಲ್ಪಡುತ್ತದೆ.

**ತಾತ್ಪರ್ಯ** :- ಹಿಂದೆ ಹೇಳಿದ, ಶೇಷದೇವರು ಅವರ ಅವತಾರ ಮತ್ತು ಶೇಷಾವತಾರಿ ನರನ ಆವೇಶವುಳ್ಳ ಇಂದ್ರ — ಇವರನಂತರ ಪ್ರದ್ಯುಮ್ನ - ಅನಿರುದ್ಧಾದಿಗಳು ತಾರತಮ್ಯದಿಂದ ಭಗವಂತನಿಗೆ ಅಂಗಭೂತರಾಗಿದ್ದಾರೆ.

ಭಾರತದಲ್ಲಿ ವಿಷ್ಣುಭಕ್ತರ ಕಥೆ ಹೇಳಿರುವುದಾದರೂ ವಿಷ್ಣೂತ್ಕರ್ಷವನ್ನು ಸಾಧಿಸುವುದೇ ಅದರ ಉದ್ದೇಶ್ಯವಾಗಿದೆ. ॥ ೧೩೩ ॥

**ತಥಾ ಭಾಗವತೇಽಪ್ಯುಕ್ತಂ ಹನುಮದ್ವಚನಂ ಪರಮ್ ।**
**ಮರ್ತ್ಯಾವತಾರಸ್ತ್ವಿಹ ಮರ್ತ್ಯಶಿಕ್ಷಣಂ**
**ರಕ್ಷೋವಧಾಯೈವ ನ ಕೇವಲಂ ವಿಭೋಃ ।**
**ಕುತೋಽನ್ಯಥಾ ಸ್ಯೂ ರಮತಃ ಸ್ವ ಆತ್ಮನ್**
**ಸೀತಾಕೃತಾನಿ ವ್ಯಸನಾನೀಶ್ವರಸ್ಯ ॥ ೧೩೪ ॥**

**ಅರ್ಥ** :- **ತಥಾ** ಹಾಗೆಯೇ, **ಭಾಗವತೇ** ಭಾಗವತದಲ್ಲಿ **ಉಕ್ತಂ** ಹೇಳಲ್ಪಟ್ಟ **ಪರಂ** ಶ್ರೇಷ್ಠವಾದ, **ಹನೂಮದ್ವಚನಂ ಅಪಿ** ಹನುಮಂತನ ಮಾತೂ, **ಅಸ್ತಿ** ಇದೆ.

**ಇಹ** ಭೂಮಿಯಲ್ಲಿ, **ವಿಭೋಃ** ಸಮರ್ಥನಾದ ಶ್ರೀರಾಮನ, **ಮರ್ತ್ಯಾವತಾರಸ್ತು** ಮನುಷ್ಯರಾಗಿ ಮಾಡಿದ ಅವತಾರವಾದರೂ, **ಮರ್ತ್ಯಶಿಕ್ಷಣಂ** ಮನುಷ್ಯರ ಶಿಕ್ಷಣಕ್ಕೋಸ್ಕರವೇ ಆಗಿದೆ, **ಕೇವಲಂ ರಕ್ಷೋವಧಾಯ ನ** ಕೇವಲ ರಾಕ್ಷಸ ಸಂಹಾರಕ್ಕೋಸ್ಕರವಲ್ಲ, **ಅನ್ಯಥಾ** ಮರ್ತ್ಯರ ಶಿಕ್ಷಣಾರ್ಥ ಅಲ್ಲದಿದ್ದರೆ, **ಸ್ವ ಆತ್ಮನ್ ರಮತಃ** ಇನ್ನೊಬ್ಬರ ಅಪೇಕ್ಷೆ ಇಲ್ಲದೆ ಸ್ವತಂತ್ರನಾದ ತನ್ನಲ್ಲಿಯೇ ತಾನು ಆನಂದ ಪಡುವ, **ಈಶ್ವರಸ್ಯ** ಸ್ವಾಮಿಯಾದ ರಾಮನಿಗೆ, **ಸೀತಾಕೃತಾನಿ** ಸೀತಾ ನಿಮಿತ್ತಕವಾದ, **ವ್ಯಸನಾನಿ** ದುಃಖಗಳು, **ಕುತಃ ಸ್ಯುಃ** ಏಕೆ ಆದಾವು?

**ತಾತ್ಪರ್ಯ** :- ಭಾಗವತದಲ್ಲಿ ಹನುಮಂತ ಹೇಳಿದ ಮಾತೂ ಕೂಡ ವಿಷ್ಣು ಸರ್ವೋತ್ತಮತ್ವಾದಿ ವಿಷಯಗಳಲ್ಲಿ ಪ್ರಮಾಣವಾಗುವುದು —

ಭಗವಂತನು ರಾಮನಾಗಿ ಭೂಮಿಯಲ್ಲಿ ಅವತರಿಸಿ ದಶರಥಾಜ್ಞಾ ಪರಿಪಾಲನೆ, ಸೀತಾನ್ವೇಷಣೆ, ಸುಗ್ರೀವನ ಅಭೀಷ್ಟಪೂರಣೆ, ವಿಭೀಷಣರಾಜ್ಯ ದಾನ ಇತ್ಯಾದಿಗಳನ್ನು ಮಾಡಿದ್ದು ಗುರುಗಳ ಆಜ್ಞೆಯನ್ನು ಪಾಲಿಸುವುದು, ದುಃಖದಲ್ಲಿರುವವರನ್ನೂ ಶರಣಾಗರಾದವರನ್ನೂ ಪಾಲಿಸುವುದು, ಭಕ್ತಾಭೀಷ್ಟ ವನ್ನು ಪೂರೈಸುವುದು ಇತ್ಯಾದಿ ಕರ್ತವ್ಯಗಳನ್ನು ಮಾಡಬೇಕು ಎಂದು ಶಿಕ್ಷಣ ಕ್ಕಾಗಿಯೇ ಹೊರತು ಕೆಲವು ರಾವಣಾದಿ ರಾಕ್ಷಸರ ಸಂಹಾರಕ್ಕಾಗಿ ಮಾತ್ರ ಅಲ್ಲ. ಸ್ವತಂತ್ರನಾದ, ಸ್ವರಮಣನಾದ ಭಗವಂತನಿಗೆ ಸೀತಾ ನಿಮಿತ್ತವಾದ ದುಃಖಗಳೂ ಇಲ್ಲ. ॥ ೧೩೪ ॥

**ನ ವೈ ಸ ಆತ್ಮಾऽऽತ್ಮವತಾಮಧೀಶ್ವರೋ**
**ಭುಂಕ್ತೇ ಹಿ ದುಃಖಂ ಭಗವಾನ್ ವಾಸುದೇವಃ ।**
**ನ ಸ್ತ್ರೀಕೃತಂ ಕಶ್ಮಲಮಶ್ನುವೀತ**
**ನ ಲಕ್ಷ್ಮಣಂ ಚಾಪಿ ಜಹಾತಿ ಕರ್ಹಿಚಿತ್ ॥ ೧೩೫ ॥**

**ಅರ್ಥ :- ಆತ್ಮವತಾಂ** ಮನೋನಿಗ್ರಹವುಳ್ಳ ಯೋಗಿಗಳಿಗೆ, **ಅಧೀಶ್ವರಃ** ಸ್ವಾಮಿಯಾದ, **ಭಗವಾನ್** ಷಡ್ಗುಣೈಶ್ವರ್ಯಸಂಪನ್ನನಾದ, **ವಾಸುದೇವಃ** ವಾಸುದೇವ ಶಬ್ದವಾಚ್ಯನಾದ, **ಸಃ ಆತ್ಮಾ** ಆ ಪರಮಾತ್ಮನಾದ ರಾಮನು, **ದುಃಖಂ** ದುಃಖವನ್ನು, **ನ ಭುಂಕ್ತೇ ಹಿ** ಅನುಭವಿಸುವುದಿಲ್ಲವಷ್ಟೆ **ಸ್ತ್ರೀಕೃತಂ** ಸ್ತ್ರೀ ನಿಮಿತ್ತಕವಾದ, **ಕಶ್ಮಲಂ** ದುಃಖವನ್ನು, **ನ ಅಶ್ನುವೀತ** ಅನುಭವಿಸುವುದಿಲ್ಲ, **ಲಕ್ಷ್ಮಣಂ ಚಾಪಿ** ಲಕ್ಷ್ಮಣನನ್ನೂ ಕೂಡ, **ಕರ್ಹಿಚಿತ್** ಯಾವಾಗಲೂ, **ನ ಜಹಾತಿ** ಬಿಡುವುದಿಲ್ಲ.

**ತಾತ್ಪರ್ಯ :-** ಶ್ರೀರಾಮನು ಮನೋನಿಗ್ರಹವುಳ್ಳ ಯೋಗಿಗಳಲ್ಲಿ ಶ್ರೇಷ್ಠನು. ಆನಂದಾದಿ ಗುಣಪೂರ್ಣನು ಮತ್ತು ಸಕಲ ಜಗತ್ತಿನಲ್ಲಿ ವಾಸಮಾಡುವುದರಿಂದ, (ವಾಸು), ಮತ್ತು ಕ್ರೀಡಾದಿಗುಣ ವಿಶಿಷ್ಟನಾದ್ದರಿಂದಲೂ (ದೇವ), ವಾಸುದೇವ ನಾಮಕನಾಗಿದ್ದಾನೆ ಇಂತಹ ಭಗವಂತನಿಗೆ ದುಃಖವಾಗಲೀ ಸ್ತ್ರೀ ನಿಮಿತ್ತಕವಾದ ವಿರಹಾದಿ ವೇದನೆಗಳಾಗಲೀ ಇಲ್ಲ. ಕೋಪಾದಿದೋಷಗಳೂ ಇಲ್ಲ. ಆದ್ದರಿಂದಲೇ, ರಾಮ-ರುದ್ರರ ಸಂಭಾಷಣೆ ಕಾಲದಲ್ಲಿ ಲಕ್ಷ್ಮಣನು ದುರ್ವಾಸರನ್ನು ಒಳಗೆ ಬಿಟ್ಟನೆಂಬ ಕಾರಣದಿಂದ ಅವನನ್ನು ಬಿಟ್ಟದ್ದೂ ಇಲ್ಲ. ಹಾಗೆ ಬಿಟ್ಟಂತೆ ತೋರಿಸಿದ್ದು ಕೇವಲ ಅಸುರಜನ ಮೋಹಕ್ಕಾಗಿ ಮಾತ್ರ.

**ವಿಶೇಷ ವಿಷಯ :-** ಇಲ್ಲಿ ಭಗವಾನ್ (ಆನಂದಾದಿಗುಣಪೂರ್ಣ) ಎಂಬ ವಿಶೇಷಣವನ್ನು ಕೊಟ್ಟಿದ್ದರಿಂದ ಅವನಿಗೆ ದುಃಖವಿಲ್ಲವೆಂದೂ, ಮತ್ತು ವಾಸುದೇವ (ಸಕಲ ಜಗದ್ವ್ಯಾಪಿ) ಎಂಬ ವಿಶೇಷಣ ಕೊಟ್ಟಿದ್ದರಿಂದ ಸೀತಾ ವಿಯೋಗವೂ ಇಲ್ಲ ಎಂದು ಸೂಚಿತವಾಗಿದೆ.

ವಾಸುದೇವ ಎಂಬ ಪದದಿಂದ 'ವಾಸು' ಸ್ತ್ರೀಯರೊಂದಿಗೆ 'ದೇವ' ಕ್ರೀಡಿಸುವನು ಎಂಬ ಅರ್ಥವೂ ದೊರೆಯುವುದರಿಂದ ಕೃಷ್ಣಾವತಾರ ಕಾಲದಲ್ಲಿ

ಅನೇಕ ಸಾವಿರ ಸ್ತ್ರೀಯರೊಂದಿಗೆ ರಮಿಸುವವನಿಗೂ ಸಹ ಸ್ತ್ರೀನಿಮಿತ್ತ ದೋಷಗಳಿಲ್ಲವೆಂದು ಸೂಚಿತವಾಗುತ್ತದೆ.

ಈ ಶ್ಲೋಕದಲ್ಲಿರುವ 'ಹಿ' ಶಬ್ದದಿಂದ 'ನಿರನಿಷ್ಟೋ ನಿರವದ್ಯಃ' (ಭಗವಂತನು ಅನಿಷ್ಟ ಮತ್ತು ದೋಷಗಳಿಲ್ಲದವನು) ಎಂಬ ಶ್ರುತಿಯ ಪ್ರಸಿದ್ಧಿಯೂ ಇದೆ ಎಂದು ಸೂಚಿತವಾಗುತ್ತದೆ. ॥ ೧೩೫ ॥

**ಯತ್ಪಾದಪಂಕಜಪರಾಗನಿಷೇವಕಾಣಾಂ**
**ದುಃಖಾನಿ ಸರ್ವಾಣಿ ಲಯಂ ಪ್ರಯಾಂತಿ ।**
**ಸ ಬ್ರಹ್ಮವಂದ್ಯಚರಣೋ ಜನಮೋಹನಾಯ**
**ಸ್ತ್ರೀಸಂಗಿನಾಮಿತಿ ರತಿಂ ಪ್ರಥಯಾಂಚಕಾರ' ॥ ೧೩೬ ॥**

**ಅರ್ಥ :- ಯತ್ಪಾದಪಂಕಜಪರಾಗನಿಷೇವಕಾಣಾಂ** ಯಾವ ಭಗವಂತನ ಪಾದಪದ್ಮಗಳನ್ನು ಸೇವಿಸುವ ಜನರ, **ಸರ್ವಾಣಿ ದುಃಖಾನಿ** ಎಲ್ಲ ದುಃಖಗಳೂ, **ಲಯಂ** ನಾಶವನ್ನು, **ಪ್ರಯಾಂತಿ** ಹೊಂದುತ್ತವೋ, **ಸಃ** ಅಂತಹ, **ಬ್ರಹ್ಮವಂದ್ಯ ಚರಣಃ** ಬ್ರಹ್ಮದೇವರಿಂದ ನಮಿಸಿಕೊಳ್ಳುವ ಪಾದಗಳುಳ್ಳ ಭಗವಂತನು (ರಾಮನು), **ಜನಮೋಹನಾಯ** ಅಜ್ಞ ಜನರ ಮೋಹಕ್ಕೋಸ್ಕರವಾಗಿ, **ಸ್ತ್ರೀಸಂಗಿನಾಂ** ಸ್ತ್ರೀಯರಲ್ಲಿ ಆಸಕ್ತರಾದವರಿಗೆ, **ಇತಿ ರತಿಂ** ಇಂತಹ ಆಸಕ್ತಿಯನ್ನು **ಪ್ರಥಯನ್** ಪ್ರಸಿದ್ಧಿ ಪಡಿಸತಕ್ಕವನಾಗಿ, **ಚಚಾರ** ಸಂಚರಿಸಿದನು.

**ತಾತ್ಪರ್ಯ :-** ಶ್ರೀರಾಮನ ಪಾದಕಮಲಗಳನ್ನಾರಾಧಿಸಿದರೆ ಸಮಗ್ರ ದುಃಖಗಳೂ ಪರಿಹಾರವಾಗುತ್ತವೆ. ಶ್ರೀರಾಮನು ಬ್ರಹ್ಮದೇವರಿಗೂ ವಂದ್ಯನಾಗಿದ್ದಾನೆ. ಅಂತಹ ರಾಮನು ಸ್ತ್ರೀಸಂಗಿಗಳಿಗಿರುವ ಆಸಕ್ತಿಯನ್ನು ಪ್ರಕಟಪಡಿಸುತ್ತಾ ಅಜ್ಞ ಜನ ಮೋಹನಾರ್ಥವಾಗಿ ಸಂಚರಿಸಿದ್ದಾನೆ. ವಾಸ್ತವವಾಗಿ ಶ್ರೀರಾಮನಿಗೆ ಯಾವ ದುಃಖವೂ ಇಲ್ಲ. ॥ ೧೩೬ ॥

**ಕ್ವಚಿಚ್ಛಿವಂ ಕ್ವಚಿದೃಷೀನ್ ಕ್ವಚಿದ್ದೇವಾನ್ ಕ್ವಚಿನ್ನರಾನ್**
**ನಮತ್ಯರ್ಚಯತಿ ಸ್ತೌತಿ ವರಾನರ್ಥಯತೇಽಪಿ ಚ ॥ ೧೩೭ ॥**

**ಲಿಂಗಂ ಪ್ರತಿಷ್ಠಾಪಯತಿ ವೃಣೋತ್ಯಸುರತೋ ವರಾನ್ ।**
**ಸರ್ವೇಶ್ವರಃ ಸ್ವತಂತ್ರೋಽಪಿ ಸರ್ವಶಕ್ತಿಶ್ಚ ಸರ್ವದಾ ॥ ೧೩೮ ॥**

**ಸರ್ವಜ್ಞೋಽಪಿ ವಿಮೋಹಾಯ ಜನಾನಾಂ ಪುರುಷೋತ್ತಮಃ' ।**

**ಪುರುಷೋತ್ತಮಃ** ಪುರುಷಶ್ರೇಷ್ಠನಾದ, ಭಗವಂತನು, **ಸರ್ವೇಶ್ವರಃ** ಸರ್ವೇಶ್ವರನಾದರೂ, **ಸ್ವತಂತ್ರೋಽಪಿ** ಸ್ವತಂತ್ರನಾದರೂ, **ಸರ್ವದಾ** ಯಾವಾಗಲೂ **ಸರ್ವಶಕ್ತಿಶ್ಚ** ಸರ್ವಶಕ್ತಿಯುಳ್ಳವನೂ ಆದರೂ, **ಸರ್ವಜ್ಞೋಽಪಿ** ಸರ್ವಜ್ಞನಾಗಿದ್ದರೂ, **ಜನಾನಾಂ ವಿಮೋಹಾಯ** ಅಜ್ಞಜನರ ಮೋಹಕ್ಕೋಸ್ಕರವಾಗಿ, **ಕ್ವಚಿತ್** ಕೆಲವುಕಡೆ, **ಶಿವಂ** ರುದ್ರನನ್ನು **ಕ್ವಚಿತ್** ಕೆಲವು ಕಡೆ, **ಋಷೀನ್** ಋಷಿಗಳನ್ನು **ಕ್ವಚಿತ್** ಕೆಲವುಕಡೆ, **ದೇವಾನ್** ದೇವತೆಗಳನ್ನು **ಕ್ವಚಿತ್** ಕೆಲವು ಕಡೆ, **ನರಾನ್** ಮನುಷ್ಯರನ್ನು **ನಮತಿ** ನಮಸ್ಕರಿಸುತ್ತಾನೆ, **ಅರ್ಚಯತಿ** ಪೂಜಿಸುತ್ತಾನೆ, **ಸ್ತೌತಿ** ಸ್ತೋತ್ರಮಾಡುತ್ತಾನೆ, **ಅಪಿ ಚ** ಮತ್ತೂ, **ವರಾನ್** ಅರ್ಥಯತೇ ವರಗಳನ್ನು ಬೇಡುತ್ತಾನೆ, **ಲಿಂಗಂ ಪ್ರತಿಷ್ಠಾಪಯತಿ** ಲಿಂಗ ಪ್ರತಿಷ್ಠೆ ಮಾಡುತ್ತಾನೆ, **ಅಸುರತಃ** ಅಸುರರಿಂದ, **ವರಾನ್ ವೃಣೋತಿ** ವರಗಳನ್ನು ಬೇಡುತ್ತಾನೆ.

**ತಾತ್ಪರ್ಯ :-** ಶ್ರೀಹರಿಯು ಸ್ವತಂತ್ರ, ಸರ್ವಕ್ಕೂ ಸ್ವಾಮಿ, ಸರ್ವಶಕ್ತ, ಸರ್ವಜ್ಞ. ಆದರೂ ಅಜ್ಞ ಜನರ ಮೋಹನೆಗೋಸ್ಕರ ಅಲ್ಲಲ್ಲಿ ರುದ್ರನನ್ನು ಋಷಿಗಳನ್ನೂ ದೇವತೆಗಳನ್ನೂ ಮನುಷ್ಯರನ್ನೂ ನಮಸ್ಕರಿಸುವುದು, ಸ್ತೋತ್ರ ಮಾಡುವುದು ಪೂಜಿಸುವುದು, ವರಬೇಡುವುದು, ಲಿಂಗಪ್ರತಿಷ್ಠೆ ಮಾಡುವುದು ಮತ್ತು ಅಸುರರಲ್ಲಿ ವರಬೇಡುವುದು ಇವುಗಳನ್ನು ಮಾಡುತ್ತಾನೆ.

**ವಿಶೇಷ ವಿಷಯ :-** ಮದಾಂಧರಾದ ಮಧು ಕೈಟಭರು ಪರಮಾತ್ಮನ ಬಳಿ ಬಂದು 'ನೀನು ಬೇಕಾದ ವರವನ್ನು ಕೇಳು ಕೊಡುವೆವು' ಎನ್ನುತ್ತಾರೆ. ಆಗ ಕೃಷ್ಣನು 'ನಾನು ನಿಮ್ಮಿಬ್ಬರಿಗೆ ಸಂಹಾರಕನಾಗಬೇಕು' ಎಂದು ವರ ಕೇಳುತ್ತಾನೆ. ಈ ವರವನ್ನು ಕೊಡದಿದ್ದರೆ ತಮ್ಮ ಮಹತ್ವ ಕಡಿಮೆಯಾಗುವುದೆಂದು ಭಾವಿಸಿ ಮಧು ಕೈಟಭರು 'ತಥಾಸ್ತು' ಎನ್ನುತ್ತಾರೆ. ಈ ಕಥೆಯನ್ನು ''ವೃಣೋತ್ಯಸುರತೋ ವರಾನ್'' ಎಂದು ಸಂಗ್ರಹಿಸಿದ್ದಾರೆ. ॥ ೧೩೮ ॥

**ತಸ್ಮಾದ್ಯೋ ಮಹಿಮಾ ವಿಷ್ಣೋಃ ಸರ್ವಶಾಸ್ತ್ರೋದಿತಸ್ಸ ಹಿ ॥ ೧೩೯ ॥**

**ನಾನ್ಯದಿತ್ಯೇಷ ಶಾಸ್ತ್ರಾಣಾಂ ನಿರ್ಣಯಃ ಸಮುದಾಹೃತಃ ।**

**ಅರ್ಥ :-** **ತಸ್ಮಾತ್** ಆದ್ದರಿಂದ, **ಯಃ** ಯಾವುದು, **ವಿಷ್ಣೋಃ** ವಿಷ್ಣುವಿನ, **ಮಹಿಮಾ** ಮಹಿಮೆಯೋ, **ಸ ಹಿ** ಅದೇನೇ, **ಸರ್ವಶಾಸ್ತ್ರೋದಿತಃ** ಸಕಲ

ಶಾಸ್ತ್ರಗಳಲ್ಲಿ ಹೇಳಲ್ಪಟ್ಟಿದೆ. **ಅನ್ಯತ್** ಬೇರೆಯಾದದ್ದು (ರುದ್ರನನ್ನು ಪೂಜಿಸಿದ್ದು ಇತ್ಯಾದಿ), **ನ** ಅಲ್ಲ, **ಇತಿ** ಎಂಬ, **ಏಷಃ** ಈ, **ಶಾಸ್ತ್ರಾಣಾಂ** ಶಾಸ್ತ್ರಗಳ, **ನಿರ್ಣಯಃ** ನಿರ್ಣಯವು, **ಸಮುದಾಹೃತಃ** ಹೇಳಲ್ಪಟ್ಟಿತು.

**ತಾತ್ಪರ್ಯ** :- ಹೀಗೆ ಪುರಾಣ ವಾಕ್ಯಗಳಿರುವುದರಿಂದ ವಿಷ್ಣುವಿನ ಮಹಿಮೆಯೇ ಸರ್ವಶಾಸ್ತ್ರಗಳಲ್ಲಿ ಹೇಳಲ್ಪಟ್ಟಿದೆ. ಆದ್ದರಿಂದ ರುದ್ರಾದಿಗಳನ್ನು ಪೂಜಿಸಿರುವುದು ಮೊದಲಾದುದೆಲ್ಲ ವಿಡಂಬನೆಯೇ ಹೊರತು ಸಕಲ ಶಾಸ್ತ್ರಗಳ ಪ್ರಮೇಯವಲ್ಲ, ಹೀಗೆ ಶಾಸ್ತ್ರಗಳ ನಿರ್ಣಯವು ಹೇಳಲ್ಪಟ್ಟಿತು. ॥ ೧೩೯ ॥

**ಪೀಠಿಕೆ** :- ಪ್ರಕಾರಾಂತರದಿಂದಲೂ ಭಾರತಾರ್ಥವು ಮೂರು ವಿಧವಾದದ್ದೆಂದು ಹೇಳಲು ಪ್ರಾರಂಭಿಸುತ್ತಾರೆ—

**ಭಾರತಾರ್ಥಸ್ತ್ರಿಧಾ ಪ್ರೋಕ್ತಃ ಸ್ವಯಂ ಭಗವತೈವ ಹಿ ॥ ೧೪೦ ॥**

**'ಮನ್ವಾದಿ ಕೇಚಿದ್ ಬ್ರುವತೇ ಹ್ಯಾಸ್ತೀಕಾದಿ ತಥಾಽಪರೇ ।**
**ತಥೋಪರಿಚರಾದ್ಯನ್ಯೇ ಭಾರತಂ ಪರಿಚಕ್ಷತೇ' ॥ ೧೪೧ ॥**

**ಅರ್ಥ** :- **ಸ್ವಯಂ ಭಗವತಾ ಏವ** ಸಾಕ್ಷಾತ್ ವ್ಯಾಸರಿಂದಲೇ, **ಭಾರತಾರ್ಥಃ ತ್ರಿಧಾ** ಭಾರತಾರ್ಥವು ಮೂರು ವಿಧವಾದದ್ದೆಂದು, **ಪ್ರೋಕ್ತಃ** ಹೇಳಲ್ಪಟ್ಟಿದೆ. **ಕೇಚಿತ್** ಕೆಲವರು, **ಭಾರತಂ** ಭಾರತವನ್ನು, **ಮನ್ವಾದಿ** ಧರ್ಮಾದಿಗಳನ್ನು ಪ್ರತಿಪಾದಿಸುವುದೆಂದು, **ಬ್ರುವತೇ** ಹೇಳುತ್ತಾರೆ, **ತಥಾ** ಮತ್ತು, **ಅಪರೇ** ಕೆಲವರು, **ಆಸ್ತೀಕಾದಿ** ಆಸ್ತಿಕರನ್ನು ಪ್ರತಿಪಾದಿಸುವುದೆಂದು, **ಅನ್ಯೇ** ಬೇರೆಯವರು, **ಉಪರಿಚರಾದಿ** ಸರ್ವೋತ್ತಮನಾದ ಹರಿಯನ್ನು ಪ್ರತಿಪಾದಿಸುವುದೆಂದು, **ಪರಿಚಕ್ಷತೇ** ಹೇಳುತ್ತಾರೆ.

**ತಾತ್ಪರ್ಯ** :- ಕೆಲವರು, ಭಾರತವನ್ನು ಧರ್ಮ, ಭಕ್ತಿ ಮೊದಲಾದುವು ಗಳನ್ನು ಪ್ರತಿಪಾದಿಸುತ್ತದೆಂದೂ, ಇನ್ನು ಕೆಲವರು ಆಸ್ತಿಕರನ್ನು ಪ್ರತಿಪಾದಿಸುತ್ತ ದೆಂದೂ ಮತ್ತೆ ಕೆಲವರು ಸರ್ವೋತ್ತಮನಾದ ಹರಿಯನ್ನು ಪ್ರತಿಪಾದಿಸುತ್ತ ದೆಂದೂ ಹೇಳುತ್ತಾರೆ.

**ವಿಶೇಷ ವಿಷಯ** :- ಈ ಶ್ಲೋಕದಲ್ಲಿ ಮನುಗಳೆಂದರೆ ಸ್ವಾಯಂಭುವಾದಿ ಮನುಗಳೆಂದೂ, ಆಸ್ತೀಕ ಎಂದರೆ ಆಸ್ತಿಕನೆಂಬ ಋಷಿಯೆಂದೂ ಉಪರಿಚರ

**ಪುರುಷೋತ್ತಮಃ** ಪುರುಷಶ್ರೇಷ್ಠನಾದ, ಭಗವಂತನು, **ಸರ್ವೇಶ್ವರಃ** ಸರ್ವೇಶ್ವರನಾದರೂ, **ಸ್ವತಂತ್ರೋಽಪಿ** ಸ್ವತಂತ್ರನಾದರೂ, **ಸರ್ವದಾ** ಯಾವಾಗಲೂ **ಸರ್ವಶಕ್ತಿಶ್ಚ** ಸರ್ವಶಕ್ತಿಯುಳ್ಳವನೂ ಆದರೂ, **ಸರ್ವಜ್ಞೋಽಪಿ** ಸರ್ವಜ್ಞನಾಗಿದ್ದರೂ, **ಜನಾನಾಂ ವಿಮೋಹಾಯ** ಅಜ್ಞಜನರ ಮೋಹಕ್ಕೋಸ್ಕರ ವಾಗಿ, **ಕ್ವಚಿತ್** ಕೆಲವುಕಡೆ, **ಶಿವಂ** ರುದ್ರನನ್ನು **ಕ್ವಚಿತ್** ಕೆಲವು ಕಡೆ, **ಋಷೀನ್** ಋಷಿಗಳನ್ನು **ಕ್ವಚಿತ್** ಕೆಲವುಕಡೆ, **ದೇವಾನ್** ದೇವತೆಗಳನ್ನು **ಕ್ವಚಿತ್** ಕೆಲವು ಕಡೆ, **ನರಾನ್** ಮನುಷ್ಯರನ್ನು **ನಮತಿ** ನಮಸ್ಕರಿಸುತ್ತಾನೆ, **ಅರ್ಚಯತಿ** ಪೂಜಿಸುತ್ತಾನೆ, **ಸ್ತೌತಿ** ಸ್ತೋತ್ರಮಾಡುತ್ತಾನೆ, **ಅಪಿ ಚ** ಮತ್ತೂ, ವರಾನ್ ಅರ್ಥಯತೇ ವರಗಳನ್ನು ಬೇಡುತ್ತಾನೆ, **ಲಿಂಗಂ ಪ್ರತಿಷ್ಠಾಪಯತಿ** ಲಿಂಗ ಪ್ರತಿಷ್ಠೆ ಮಾಡುತ್ತಾನೆ, **ಅಸುರತಃ** ಅಸುರರಿಂದ, **ವರಾನ್ ವೃಣೋತಿ** ವರಗಳನ್ನು ಬೇಡುತ್ತಾನೆ.

**ತಾತ್ಪರ್ಯ** :- ಶ್ರೀಹರಿಯು ಸ್ವತಂತ್ರ, ಸರ್ವಕ್ಕೂ ಸ್ವಾಮಿ, ಸರ್ವಶಕ್ತ, ಸರ್ವಜ್ಞ. ಆದರೂ ಅಜ್ಞ ಜನರ ಮೋಹನೆಗೋಸ್ಕರ ಅಲ್ಲಲ್ಲಿ ರುದ್ರನನ್ನು ಋಷಿಗಳನ್ನೂ ದೇವತೆಗಳನ್ನೂ ಮನುಷ್ಯರನ್ನೂ ನಮಸ್ಕರಿಸುವುದು, ಸ್ತೋತ್ರ ಮಾಡುವುದು ಪೂಜಿಸುವುದು, ವರಬೇಡುವುದು, ಲಿಂಗಪ್ರತಿಷ್ಠೆ ಮಾಡುವುದು ಮತ್ತು ಅಸುರರಲ್ಲಿ ವರಬೇಡುವುದು ಇವುಗಳನ್ನು ಮಾಡುತ್ತಾನೆ.

**ವಿಶೇಷ ವಿಷಯ** :- ಮದಾಂಧರಾದ ಮಧು ಕೈಟಭರು ಪರಮಾತ್ಮನ ಬಳಿ ಬಂದು 'ನೀನು ಬೇಕಾದ ವರವನ್ನು ಕೇಳು ಕೊಡುವೆವು' ಎನ್ನುತ್ತಾರೆ. ಆಗ ಕೃಷ್ಣನು 'ನಾನು ನಿಮ್ಮಿಬ್ಬರಿಗೆ ಸಂಹಾರಕನಾಗಬೇಕು' ಎಂದು ವರ ಕೇಳುತ್ತಾನೆ. ಈ ವರವನ್ನು ಕೊಡದಿದ್ದರೆ ತಮ್ಮ ಮಹತ್ವ ಕಡಿಮೆಯಾಗುವುದೆಂದು ಭಾವಿಸಿ ಮಧು ಕೈಟಭರು 'ತಥಾಸ್ತು' ಎನ್ನುತ್ತಾರೆ. ಈ ಕಥೆಯನ್ನು ''ವೃಣೋತ್ಯಸುರತೋ ವರಾನ್'' ಎಂದು ಸಂಗ್ರಹಿಸಿದ್ದಾರೆ. ॥ ೧೩೮ ॥

**ತಸ್ಮಾದ್ಯೋ ಮಹಿಮಾ ವಿಷ್ಣೋಃ ಸರ್ವಶಾಸ್ತ್ರೋದಿತಸ್ಸ ಹಿ ॥ ೧೩೯ ॥**

**ನಾನ್ಯದಿತ್ಯೇಷ ಶಾಸ್ತ್ರಾಣಾಂ ನಿರ್ಣಯಃ ಸಮುದಾಹೃತಃ ।**

**ಅರ್ಥ** :- **ತಸ್ಮಾತ್** ಆದ್ದರಿಂದ, **ಯಃ** ಯಾವುದು, **ವಿಷ್ಣೋಃ** ವಿಷ್ಣುವಿನ, **ಮಹಿಮಾ** ಮಹಿಮೆಯೋ, **ಸ ಹಿ** ಅದೇನೇ, **ಸರ್ವಶಾಸ್ತ್ರೋದಿತಃ** ಸಕಲ

ಶಾಸ್ತ್ರಗಳಲ್ಲಿ ಹೇಳಲ್ಪಟ್ಟಿದೆ. **ಅನ್ಯತ್** ಬೇರೆಯಾದದ್ದು (ರುದ್ರನನ್ನು ಪೂಜಿಸಿದ್ದು ಇತ್ಯಾದಿ), **ನ** ಅಲ್ಲ, **ಇತಿ** ಎಂಬ, **ಏಷಃ** ಈ, **ಶಾಸ್ತ್ರಾಣಾಂ** ಶಾಸ್ತ್ರಗಳ, **ನಿರ್ಣಯಃ** ನಿರ್ಣಯವು, **ಸಮುದಾಹೃತಃ** ಹೇಳಲ್ಪಟ್ಟಿತು.

**ತಾತ್ಪರ್ಯ** :- ಹೀಗೆ ಪುರಾಣ ವಾಕ್ಯಗಳಿರುವುದರಿಂದ ವಿಷ್ಣುವಿನ ಮಹಿಮೆಯೇ ಸರ್ವಶಾಸ್ತ್ರಗಳಲ್ಲಿ ಹೇಳಲ್ಪಟ್ಟಿದೆ. ಆದ್ದರಿಂದ ರುದ್ರಾದಿಗಳನ್ನು ಪೂಜಿಸಿರುವುದು ಮೊದಲಾದುದೆಲ್ಲ ವಿಡಂಬನೆಯೇ ಹೊರತು ಸಕಲ ಶಾಸ್ತ್ರಗಳ ಪ್ರಮೇಯವಲ್ಲ, ಹೀಗೆ ಶಾಸ್ತ್ರಗಳ ನಿರ್ಣಯವು ಹೇಳಲ್ಪಟ್ಟಿತು. ॥ ೧೩೯ ॥

**ಪೀಠಿಕೆ** :- ಪ್ರಕಾರಾಂತರದಿಂದಲೂ ಭಾರತಾರ್ಥವು ಮೂರು ವಿಧವಾದದ್ದೆಂದು ಹೇಳಲು ಪ್ರಾರಂಭಿಸುತ್ತಾರೆ—

**ಭಾರತಾರ್ಥಸ್ತ್ರಿಧಾ ಪ್ರೋಕ್ತಃ ಸ್ವಯಂ ಭಗವತೈವ ಹಿ ॥ ೧೪೦ ॥**

**'ಮನ್ವಾದಿ ಕೇಚಿದ್ ಬ್ರುವತೇ ಹ್ಯಾಸ್ತೀಕಾದಿ ತಥಾಽಪರೇ ।**
**ತಥೋಪರಿಚರಾದ್ಯನ್ಯೇ ಭಾರತಂ ಪರಿಚಕ್ಷತೇ' ॥ ೧೪೧ ॥**

**ಅರ್ಥ** :- **ಸ್ವಯಂ ಭಗವತಾ ಏವ** ಸಾಕ್ಷಾತ್ ವ್ಯಾಸರಿಂದಲೇ, **ಭಾರತಾರ್ಥಃ ತ್ರಿಧಾ** ಭಾರತಾರ್ಥವು ಮೂರು ವಿಧವಾದದ್ದೆಂದು, **ಪ್ರೋಕ್ತಃ** ಹೇಳಲ್ಪಟ್ಟಿದೆ. **ಕೇಚಿತ್** ಕೆಲವರು, **ಭಾರತಂ** ಭಾರತವನ್ನು **ಮನ್ವಾದಿ** ಧರ್ಮಾದಿಗಳನ್ನು ಪ್ರತಿಪಾದಿಸುವುದೆಂದು, **ಬ್ರುವತೇ** ಹೇಳುತ್ತಾರೆ, **ತಥಾ** ಮತ್ತು, **ಅಪರೇ** ಕೆಲವರು, **ಆಸ್ತೀಕಾದಿ** ಆಸ್ತಿಕರನ್ನು ಪ್ರತಿಪಾದಿಸುವುದೆಂದು, **ಅನ್ಯೇ** ಬೇರೆಯವರು, **ಉಪರಿಚರಾದಿ** ಸರ್ವೋತ್ತಮನಾದ ಹರಿಯನ್ನು ಪ್ರತಿಪಾದಿಸುವುದೆಂದು, **ಪರಿಚಕ್ಷತೇ** ಹೇಳುತ್ತಾರೆ.

**ತಾತ್ಪರ್ಯ** :- ಕೆಲವರು, ಭಾರತವನ್ನು ಧರ್ಮ, ಭಕ್ತಿ ಮೊದಲಾದುವುಗಳನ್ನು ಪ್ರತಿಪಾದಿಸುತ್ತದೆಂದೂ, ಇನ್ನು ಕೆಲವರು ಆಸ್ತಿಕರನ್ನು ಪ್ರತಿಪಾದಿಸುತ್ತದೆಂದೂ ಮತ್ತೆ ಕೆಲವರು ಸರ್ವೋತ್ತಮನಾದ ಹರಿಯನ್ನು ಪ್ರತಿಪಾದಿಸುತ್ತದೆಂದೂ ಹೇಳುತ್ತಾರೆ.

**ವಿಶೇಷ ವಿಷಯ** :- ಈ ಶ್ಲೋಕದಲ್ಲಿ ಮನುಗಳೆಂದರೆ ಸ್ವಾಯಂಭುವಾದಿ ಮನುಗಳೆಂದೂ, ಆಸ್ತೀಕ ಎಂದರೆ ಆಸ್ತಿಕನೆಂಬ ಋಷಿಯೆಂದೂ ಉಪರಿಚರ

ಎಂದರೆ ಆ ಹೆಸರಿನ ಒಬ್ಬ ವಸು ಎಂದು ಮೇಲ್ನೋಟಕ್ಕೆ ತೋರುತ್ತದೆ. ಆದರೆ ಇದು ಅರ್ಥವಲ್ಲ. ಏಕೆಂದರೆ ಭಾರತದಲ್ಲಿ ಮನುಗಳ ಪ್ರಸಂಗವಂತೂ ಇಲ್ಲವೇ ಇಲ್ಲ. ಆಸ್ತೀಕ ಋಷಿಯ ವಿಚಾರ ಮತ್ತು ಉಪರಿಚರ ವಸುವಿನ ವಿಚಾರ ಆದಿಪರ್ವದ ಆದಿ ಭಾಗದಲ್ಲಿ ಸರ್ಪಯಾಗ ವಿಘ್ನಪ್ರಸಂಗದಲ್ಲಿ ಮತ್ತು ಸತ್ಯವತೀದೇವಿಯ ಜನ್ಮ ಪ್ರಸಂಗದಲ್ಲಿ ಕ್ರಮವಾಗಿ ಒಂದೊಂದು ಅಧ್ಯಾಯದಲ್ಲಿ ಬಂದಿದ್ದರೂ ಆದಿಪರ್ವದ ಅಂತ್ಯಭಾಗದಲ್ಲಿಯೇ ಅವರ ವಿಚಾರ ಪುನಃ ಬರುವುದಿಲ್ಲ. ಹೀಗಿರುವಾಗ ಸಕಲ ಭಾರತ ಪ್ರತಿಪಾದ್ಯತ್ವವಂತೂ ಸುತರಾಂ ಯುಕ್ತವಾಗಲಾರದು. ಆದ್ದರಿಂದ,

**'ವೇದೇ ರಾಮಾಯಣೇ ಚೈವ ಪುರಾಣೇ ಭಾರತೇ ತಥಾ ।**
**ಆದಾವಂತೇ ಚ ಮಧ್ಯೇ ಚ ವಿಷ್ಣುಃ ಸರ್ವತ್ರ ಗೀಯತೇ ॥'**

ಎಂದು ಭಾರತದಲ್ಲಿಯೇ ಹೇಳಿದ್ದರಿಂದ ವಿಷ್ಣುವಿಗೇ ಸಕಲಭಾರತ ಪ್ರತಿಪಾದ್ಯತ್ವವನ್ನು ಹೇಳಬೇಕು. ಅದಕ್ಕೋಸ್ಕರ ಉಪರಿಚರ ಎಂದರೆ 'ಸರ್ವೇಷಾಂ ಉಪರಿ ಚರತೀತಿ ಉಪರಿಚರಃ' (ಎಲ್ಲರ ಮೇಲೆ ಸಂಚರಿಸುವ ವಸು) ಎಂಬ ವ್ಯುತ್ಪತ್ತಿಯಿಂದ ಸರ್ವೋತ್ತಮನಾದ ನಾರಾಯಣ ಎಂದರ್ಥ. ಅವನೇ ಸ್ವರ, ವರ್ಣ, ಪದ, ವಾಕ್ಯರೂಪವಾದ ಸಕಲ ಭಾರತಗ್ರಂಥದಿಂದ ಪರಮ ಮುಖ್ಯವೃತ್ತಿಯಿಂದ ಪ್ರತಿಪಾದ್ಯನಾಗಿದ್ದಾನೆ.

ಇದರಂತೆಯೇ 'ವೈಷ್ಣವಾನಾಂ ತು ಚರಿತಂ ವಿಷ್ಣೂದ್ರೇಕಾಯ ಕಥ್ಯತೇ' (ವಿಷ್ಣು ಸರ್ವೋತ್ತಮತ್ವವನ್ನು ತಿಳಿಸುವುದಕ್ಕಾಗಿಯೇ ವೈಷ್ಣವರ ಕಥೆಯೂ ಹೇಳಲ್ಪಡುವುದು) ಎಂಬ ಪ್ರಮಾಣ ಇರುವುದರಿಂದ ವೈಷ್ಣವಾಗ್ರೇಸರರಾದ ಪಾಂಡವರ ಕಥೆಯನ್ನೂ ಹರಿಸರ್ವೋತ್ತಮತ್ವ ಪ್ರಮೇಯಕ್ಕೆ ಅಂಗಭೂತವಾಗಿ ಹೇಳುವುದು ಉಚಿತ. ಆದ್ದರಿಂದಲೇ ಸಮಗ್ರ ಭಾರತದಲ್ಲಿ ಪಾಂಡವರ ಉತ್ಪತ್ತಿಯೇ ಮೊದಲಾದ ಕಥೆಯನ್ನು ಹೇಳಿದ್ದೂ ಕೂಡ ಕಂಡಿದೆ.

ಮತ್ತು 'ವಿವಿದಿಷಂತಿ ಯಜ್ಞೇನ ದಾನೇನ ತಪಸಾऽನಾಶಕೇನ' (ಯಜ್ಞ, ದಾನ, ತಪಸ್ಸು ಮತ್ತು ಉಪವಾಸ ಇವುಗಳಿಂದ ಭಗವಂತನನ್ನು ತಿಳಿಯ ಲಿಚ್ಛಿಸುತ್ತಾರೆ) ಎಂಬ ಶ್ರುತಿಯಿಂದ, 'ಭಕ್ತಿರೇವೈನಂ ನಯತಿ' (ಭಕ್ತಿಯೇ ಜೀವನನ್ನು ಭಗವಂತನ ಬಳಿ ಕರೆದುಕೊಂಡು ಹೋಗುತ್ತದೆ), 'ಭಕ್ತ್ಯಾ

ತ್ವನನ್ಯಯಾ ಶಕ್ಯಃ' (ಅನನ್ಯ ಭಕ್ತಿಯಿಂದ ನಾನು (ಕೃಷ್ಣ) ಲಭ್ಯನು), 'ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯಃ' (ಶ್ರೀಹರಿಯು ಶ್ರವಣಮಾಡಲ್ಪಡ ಬೇಕು, ಮನನ ಮಾಡಲ್ಪಡಬೇಕು ಧ್ಯಾನಮಾಡಲ್ಪಡಬೇಕು), 'ತದ್ವಿಜ್ಞಾನಾರ್ಥಂ ಸ ಗುರುಮೇವಾಭಿಗಚ್ಛೇತ್' (ಭಗವಂತನ ಜ್ಞಾನಕ್ಕೋಸ್ಕರವಾಗಿ ಜಿಜ್ಞಾಸುವು ಗುರುಗಳ ಬಳಿ ಹೋಗಬೇಕು), 'ವೇದಾ ಹ್ಯೇವೈನಂ ವೇದಯಂತಿ' (ವೇದಗಳೇ ಭಗವಂತನನ್ನು ತಿಳಿಸುತ್ತವೆ) ಇತ್ಯಾದಿ ವಚನಗಳಿಂದ ಧರ್ಮಾಚರಣೆ, ಭಕ್ತಿ ವೈರಾಗ್ಯಾದಿಗುಣಗಳು, ಶ್ರವಣಾದಿಗಳು, ಗುರೂಪಸತ್ಯಾದಿ ಶೀಲವಿನಯಗಳು ಮತ್ತು ವೇದ ಇವುಗಳು ವೈಷ್ಣವರಿಗೆ ಭಗವಂತನ ಸಾಕ್ಷಾತ್ಕಾರ ಪ್ರಸಾದಾದಿಗಳನ್ನು ಸಂಪಾದಿಸಲು ಅಂಗಭೂತವೆಂದು ತಿಳಿಯುವುದರಿಂದ ಆ ಧರ್ಮಾದಿಗಳ ವರ್ಣನೆಯನ್ನೂ ಕೂಡ ವೈಷ್ಣವರ ಉಪಕಾರಕ್ಕಾಗಿ ಅಂದರೆ ಶ್ರೀಹರಿಯ ಅನುಗ್ರಹಾದಿಗಳ ಸಂಪಾದನೆಗಾಗಿ ಮಾಡುವುದು ಉಚಿತ.

ಆದ್ದರಿಂದ, ಒಟ್ಟಿನಲ್ಲಿ ಭಾರತದಲ್ಲಿ ಮುಖ್ಯವಾಗಿ ಭಗವಂತ, ಅನಂತರ ಪಾಂಡವರು ಮತ್ತು ಧರ್ಮಭಕ್ತ್ಯಾದಿಗಳನ್ನು ವರ್ಣಿಸುವುದೇ ಮೇಲೆ ಹೇಳಿದ ನ್ಯಾಯದಿಂದ ಯುಕ್ತವಾದದ್ದು.

ಭಾರತದಲ್ಲಿ ಧರ್ಮಭಕ್ತ್ಯಾದಿಗಳನ್ನು ವರ್ಣಿಸಿರುವುದೂ ಕಂಡಿದೆ — ಸಭಾ ಪರ್ವ, ಆಶ್ವಮೇಧಿಕಪರ್ವ, ಮತ್ತು ರಾಜಸೂಯಪರ್ವ ಮೊದಲಾದವು ಗಳಲ್ಲಿ ರಾಜಸೂಯಾಶ್ವಮೇಧಾದಿಗಳ ಪ್ರಸಂಗವೂ ಬಂದಿದೆ. ಅದರ ಪ್ರಶಂಸೆಯೂ ಇದೆ. ಅದರಲ್ಲಿಯೂ ಹರಿಗೆ ಅಗ್ರಪೂಜೆ ಸಲ್ಲಿಸಿದ್ದರಿಂದ ಕೃಷ್ಣನಲ್ಲಿ ಮುಖ್ಯವಾದ ಭಕ್ತಿಯೂ ವರ್ಣಿಸಲ್ಪಟ್ಟಿದೆ. ಕೆಲವು ಕಡೆಗಳಲ್ಲಿ ಶ್ರವಣ ಮನನಾದಿಗಳನ್ನು ಮಾಡಬೇಕೆಂಬುದಾಗಿಯೂ ವಿಹಿತವಾಗಿದೆ. ಪಾಂಡವರು ಮಾಡಿದ ರಾಜ್ಯತ್ಯಾಗದಿಂದ ವೈರಾಗ್ಯವೂ ಸತ್ಯವಚನ ಪರಿಪಾಲನೆಯೂ ವರ್ಣಿತವಾಗಿದೆ. ವನಪರ್ವಾದಿಗಳಲ್ಲಿ ಮಾರ್ಕಂಡೇಯ ಮೊದಲಾದ ಋಷಿಗಳಿಂದ ಭಗವತ್ ಕಥೆ ಮತ್ತು ಸದ್ಧರ್ಮಗಳ ಉಪದೇಶವಿರುವುದರಿಂದ ಶ್ರವಣಮನನಾದಿಗಳನ್ನೂ ವರ್ಣಿಸಲಾಗಿದೆ. ಭೀಮಾದಿಗಳು ಜ್ಯೇಷ್ಠನಾದ ಧರ್ಮರಾಜನನ್ನನುಸರಿಸುವುದನ್ನು ವರ್ಣಿಸಿದ್ದರಿಂದ ವಿನಯಾದಿಗಳನ್ನು ವರ್ಣಿಸಲಾಗಿದೆ.

ಹೀಗೆ ಭಾರತದಲ್ಲಿ ಭಗವಂತನ, ಪಾಂಡವರ ಮತ್ತು ಧರ್ಮಭಕ್ತ್ಯಾದಿಗಳ ವರ್ಣನೆಯೇ ಉಚಿತವಾದ್ದರಿಂದ ಮತ್ತು ಅದೇ ಕಂಡುಬರುವುದರಿಂದ 'ಮನ್ವಾದಿ...' ಎಂಬ ಶ್ಲೋಕಕ್ಕೆ ಹೀಗೆ ಅರ್ಥೈಸಬೇಕು — 'ಮೀಯತೇ ಏಭಿಃ ಪರಮಾತ್ಮಾ ಇತಿ ಮನವಃ' (ಇವುಗಳಿಂದ ಭಗವಂತನು ತಿಳಿಯಲ್ಪಡುತ್ತಾನೆ) ಎಂಬ ವ್ಯುತ್ಪತ್ತಿಯಿಂದ, ಮನು ಪದಕ್ಕೆ,

೧. ಧರ್ಮಗಳು
೨. ಭಕ್ತ್ಯಾದಿದಶಕ (ಭಕ್ತಿ, ಜ್ಞಾನ, ವೈರಾಗ್ಯ, ಪ್ರಜ್ಞೆ, ಮೇಧಾ, ಧೃತಿ, ಸ್ಥಿತಿ, ಯೋಗ, ಪ್ರಾಣ, ಬಲ)
೩. ಶ್ರುತಾದಿ (ಶ್ರವಣ, ಮನನ, ಧ್ಯಾನ)
೪. ಶೀಲ ವಿನಯಗಳು
೫. ವೇದಗಳು

ಈ ಐದು ಅರ್ಥವಾಗುತ್ತವೆ. ಧರ್ಮಗಳಿಗೆ ಅಭಿಮಾನಿಯಾದ್ದರಿಂದ ಧರ್ಮರಾಜನು, ಭಕ್ತ್ಯಾದಿದಶಕಕ್ಕೆ ಅಭಿಮಾನಿಯಾದ್ದರಿಂದ ಭೀಮನು, ಶ್ರವಣಕ್ಕೆ ಅಭಿಮಾನಿಯಾದ್ದರಿಂದ ಅರ್ಜುನನು, ಶೀಲ ವಿನಯಗಳಿಗೆ ಅಭಿಮಾನಿಗಳಾದ್ದ ರಿಂದ ನಕುಲ ಸಹದೇವರು, ವೇದಾಭಿಮಾನಿಯಾದ್ದರಿಂದ ದ್ರೌಪದೀಯು — ಇವರೆಲ್ಲರೂ ಮನುಪದವಾಚ್ಯರೇ ಆಗಿದ್ದಾರೆ. ಭಾರತದಲ್ಲಿ ಧರ್ಮಾದಿಗಳ ಪ್ರತಿಪಾದನೆ ಇದ್ದಲ್ಲೆಲ್ಲ ಅಭಿಮಾನಿಗಳಾದ ಇವರೂ ಪ್ರತಿಪಾದಿಸಲ್ಪಡುತ್ತಾರೆ. ಆದ್ದರಿಂದ ಮನವಃ - ಧರ್ಮಾಧಿಗಳಿಗೆ ಅಭಿಮಾನಿಗಳಾದ ಪಾಂಡವರು, ಯಸ್ಯ - ಯಾವ ಗ್ರಂಥದಲ್ಲಿ, ಆದಯಃ - ಸ್ವೀಕರಿಸಲ್ಪಟ್ಟವರು ಪ್ರತಿಪಾದ್ಯರು ಆಗಿದ್ದಾರೋ ಅದು 'ಮನ್ವಾದಿ' ಎಂಬ ವ್ಯುತ್ಪತ್ತಿಯಿಂದ ಕೆಲವರು ಭಾರತವನ್ನು ಮನ್ವಾದಿ ಎನ್ನುತ್ತಾರೆ. ಅಭಿಮನ್ಯಮಾನವಾದ ಧರ್ಮಾದಿಗಳನ್ನು ಹೇಳುವ ನೆಪದಿಂದ ಅಭಿಮಾನಿಗಳಾದ ಪಾಂಡವರನ್ನು ಸ್ತೋತ್ರಮಾಡಲು ಭಾರತವು ಪ್ರವೃತ್ತವಾಗಿದೆ ಎಂದು ಅವರ ಅಭಿಪ್ರಾಯ.

'ಅಸ್ತಿ ಪರದೇವತಾ' ಅಸ್ತಿ ಪರಲೋಕಃ ಇತಿ ಜಾನಂತಃ ಆಸ್ತಿಕಾಃ' ಪರದೇವತೆ ಇರುವನು, ಪರಲೋಕವಿರುವುದು ಎಂದು ತಿಳಿದವರು ಆಸ್ತಿಕರು. ಮನು ಮುನಿ ಮೊದಲಾದವರು ಆಸ್ತಿಕರು. ಇವರಿಗಿಂತ ಹೆಚ್ಚಾಗಿ 'ಅಸ್ತಿ ಪರದೇವತಾ' ಎಂಬ ಭಾವನೆಯುಳ್ಳವರೇ ಆಸ್ತೀಕರು. ಅಭಿಮನ್ಯಮಾನವಾದ

ಧರ್ಮ ಭಕ್ತ್ಯಾದಿಗಳಿಗಿಂತ ಕೇವಲ ಪಾಂಡವರ ಉತ್ಪತ್ತಿ, ಯುದ್ಧ ಮೊದಲಾದ ಚರಿತ್ರೆಯು ಭಾರತದಲ್ಲಿ ಹೆಚ್ಚಾಗಿ ಬಂದಿರುವುದರಿಂದ ಅದು 'ಆಸ್ತೀಕಾದಿ' ಎನಿಸುತ್ತದೆ. ಇಲ್ಲಿಯೂ ಹಿಂದಿನಂತೆ ಆಸ್ತೀಕಾಃ' (ದ್ರೌಪದೀ ಸಹಿತರಾದ ಪಾಂಡವರು) ಯಸ್ಯ (ಯಾವ ಭಾರತದಲ್ಲಿ) 'ಆದಯಃ' (ಪ್ರತಿಪಾದ್ಯ ರಾಗಿದ್ದಾರೋ) 'ತತ್ ಆಸ್ತೀಕಾದಿ' (ಅದು ಆಸ್ತೀಕಾದಿ) ಎಂದು ವ್ಯುತ್ಪತ್ತಿ ಯನ್ನಿಟ್ಟುಕೊಳ್ಳಬೇಕು. ಭಾರತದಲ್ಲಿ ಯಾವ ಪ್ರಕರಣದಲ್ಲಿ ಹೆಚ್ಚಾಗಿ ಧರ್ಮಾದಿ ಗಳನ್ನಲ್ಲದೇ ಕೇವಲ ಪರಮಾಸ್ತಿಕ ಶಿರೋಮಣಿಗಳಾದ, ಪುಣ್ಯಶ್ಲೋಕರಾದ ಪಾಂಡವರ ಕಥೆಯನ್ನಷ್ಟೇ ವರ್ಣಿಸಬೇಕೆಂದು ಗ್ರಂಥಕಾರರ ಅಭಿಪ್ರಾಯ ವಿದೆಯೋ ಆ ಪ್ರಕರಣಕ್ಕೆ ಆಸ್ತೀಕಾದಿ ಎನ್ನುತ್ತಾರೆ.

ಒಟ್ಟಿನಲ್ಲಿ ಸಕಲ ಭಾರತವು ಸಾಕ್ಷಾತ್ತಾಗಿಯಾಗಲಿ ಧರ್ಮಾದಿಗಳ ಮೂಲಕ ವಾಗಲೀ ಪರಮ ವೈಷ್ಣವರಾದ ಪಾಂಡವರ ಪ್ರಶಂಸೆಗಾಗಿ ಪ್ರವೃತ್ತವಾಗಿದೆ ಎಂದು ತಾತ್ಪರ್ಯ.

ಸರ್ವೋತ್ತಮನಾದ್ದರಿಂದ 'ಉಪರಿಚರ'ನಾದ ಭಗವಂತನು ಆದಿಮಧ್ಯಾಂತಗಳಲ್ಲಿ 'ಆದಿ' ಪ್ರತಿಪಾದ್ಯನಾಗಿರುವುದರಿಂದ ಭಾರತವು ಉಪಚರಾದಿಯಾಗಿದೆ.

ಭಾರತವು ಸ್ವರವರ್ಣ ಪದವಾಕ್ಯಗಳಿಂದಲೂ ಪರಮ ಮುಖ್ಯವೃತ್ತಿ ಯಿಂದ ಭಗವಂತನನ್ನೇ ಪ್ರತಿಪಾದಿಸುವುದರಿಂದ 'ಭಾರತವು ಉಪರಿಚರಾದಿ' ಎನ್ನುವುದು ಮುಖ್ಯಪ್ರಮೇಯ. ಆದ್ದರಿಂದ, ಮನ್ವಾದಿ ಎಂಬ ಶ್ಲೋಕದಲ್ಲಿ 'ಉಪರಿಚರಾದಿ' ಎಂಬ ಅಂಶವನ್ನು ಕೊನೆಗೆ ಪಠಿಸಿದ್ದರೂ 'ಪಾಠಕ್ರಮಾತ್ ಅರ್ಥಕ್ರಮೋ ಜ್ಯಾಯಾನ್' (ಪಾಠಕ್ರಮಕ್ಕಿಂತ ಅರ್ಥಕ್ರಮವು ಶ್ರೇಷ್ಠ) ಎಂಬ ನ್ಯಾಯದಿಂದ 'ಭಾರತವು ಉಪರಿಚರ' ಎಂಬ ಪ್ರಮೇಯವನ್ನೇ ಮುಖ್ಯ ಎಂದು ತಿಳಿಯಬೇಕು. ಮಧ್ಯದಲ್ಲಿ 'ಆಸ್ತೀಕಾದಿ' ಎಂಬ ಅಂಶದಿಂದ ಹೇಳಿದ, ಕೇವಲ ಪಾಂಡವ ಪ್ರತಿಪಾದಕತ್ವವು ಮಧ್ಯಮ ಪ್ರಮೇಯವಾಗಿದೆ. ಆದಿಯಲ್ಲಿಯೇ 'ಮನ್ವಾದಿ' ಎಂದು ಪಠಿತವಾಗಿದ್ದರೂ ಆ ಮನ್ವಾದಿತ್ವವು, ಅಂದರೆ, 'ಮನುಶಬ್ದವಾಚ್ಯರಾದ ಪಾಂಡವರು ಅಭಿಮನ್ಯಮಾನವಾದ ಧರ್ಮಾದಿಗಳ ದ್ವಾರಾ ಕೆಲವು ಭಾಗದಲ್ಲಿ ಮಾತ್ರ ಪ್ರತಿಪಾದ್ಯರಾಗಿದ್ದಾರೆ' ಎಂಬ ಪ್ರಮೇಯವು ಅಮುಖ್ಯವಾದದ್ದು ಎಂದು ತಿಳಿಯಬೇಕು.

ಪೀಠಿಕೆ :- 'ಮನ್ವಾದಿ' ಎಂಬ ಪದ್ಯವನ್ನೇ ಸ್ಪಷ್ಟಪಡಿಸುತ್ತಾರೆ —

**ಸಕೃಷ್ಣಾನ್ ಪಾಂಡವಾನ್ ಗೃಹ್ಯ ಯೋऽಯಮರ್ಥಃ ಪ್ರವರ್ತತೇ ।**
**ಪ್ರಾತಿಲೋಮ್ಯಾದಿ ವೈಚಿತ್ರ್ಯಾತ್ ತಮಾಸ್ತೀಕಂ ಪ್ರಚಕ್ಷತೇ ॥ ೧೪೩ ॥**

**ಅರ್ಥ** :- **ಪ್ರಾತಿಲೋಮ್ಯಾದಿ ವೈಚಿತ್ರ್ಯಾತ್** ಅನಂತರ ಹೇಳಬೇಕಾದ ಪ್ರಮೇಯವನ್ನು ಪ್ರಾಸಂಗಿಕವಾಗಿ ಮೊದಲು ಹೇಳುವುದು, ಮೊದಲು ಹೇಳಬೇಕಾದುದನ್ನು ಅನಂತರ ಹೇಳುವ ಪ್ರಮೇಯಕ್ಕೆ ಸಂಗತವಾಗುವಂತೆ ಅನಂತರವೇ ಹೇಳುವುದು ಎಂಬ ಪ್ರಾತಿಲೋಮ್ಯವೇ ಮೊದಲಾದ ವಿಚಿತ್ರಕ್ರಮದಿಂದ, **ಸಕೃಷ್ಣಾನ್ ಪಾಂಡವಾನ್ ಗೃಹ್ಯ** ದ್ರೌಪದೀಸಹಿತರಾದ ಪಾಂಡವರನ್ನು ಪ್ರಧಾನವಾಗಿಟ್ಟುಕೊಂಡು, **ಯೋಽಯಮ್ ಅರ್ಥಃ** ಯಾವ ಕಥೆಯು, **ಪ್ರವರ್ತತೇ** ಪ್ರವೃತ್ತವಾಗುತ್ತದೋ, **ತಂ** ಅದನ್ನು, **ಆಸ್ತೀಕಂ** ಆಸ್ತೀಕಾದಿ ಎಂದು, **ಪ್ರಚಕ್ಷತೇ** ಹೇಳುತ್ತಾರೆ.

**ತಾತ್ಪರ್ಯ** :- ಮುಂದೆ ಹೇಳಬೇಕಾದ ಪ್ರಮೇಯವನ್ನು ಪ್ರಸಂಗ ಬಂದರೆ ಮುಂಚೆಯೇ ಹೇಳುವುದು. ಮೊದಲು ಹೇಳಬೇಕಾದುದನ್ನು ಮುಂದಿನ ಪ್ರಮೇಯಕ್ಕೆ ಸಂಗತಗೊಳಿಸಲು ಅನಂತರವೇ ಹೇಳುವುದು — ಈ ಕ್ರಮಕ್ಕೆ ಪ್ರಾತಿಲೋಮ್ಯ ಎನ್ನುತ್ತಾರೆ. ಅರ್ಜುನ ಮಾಡಿದ ಕಾರ್ಯವನ್ನು ಭೀಮನು ಮಾಡಿದ್ದಾನೆನ್ನುವುದು - ಈ ಕ್ರಮಕ್ಕೆ ವ್ಯತ್ಯಾಸ ಎನ್ನುತ್ತಾರೆ. ಇಂತಹ ಕ್ರಮಗಳಿಂದ ದ್ರೌಪದೀ ಮತ್ತು ಪಾಂಡವರ ಕಥೆಯನ್ನು ವರ್ಣಿಸುವುದರಿಂದ ಭಾರತವನ್ನು ಆಸ್ತೀಕಾದಿ ಎನ್ನುತ್ತಾರೆ. ॥ ೧೪೩ ॥

**ಧರ್ಮೋ ಭಕ್ತ್ಯಾದಿದಶಕಃ ಶ್ರುತಾದಿಃ ಶೀಲವೈನಯೌ ।**
**ಸಬ್ರಹ್ಮಕಾಸ್ತು ತೇ ಯತ್ರ ಮನ್ವಾದಿಂ ತಂ ವಿದುರ್ಬುಧಾಃ ॥ ೧೪೪ ॥**

**ಅರ್ಥ** :- **ಸಬ್ರಹ್ಮಕಾಃ** ವೇದಾಭಿಮಾನಿ ದ್ರೌಪದೀಸಹಿತರಾದ, **ತೇ** ಪ್ರಸಿದ್ಧರಾದ, **ಧರ್ಮಃ** ಧರ್ಮಾಭಿಮಾನಿ ಯುಧಿಷ್ಠಿರನು, **ಭಕ್ತ್ಯಾದಿದಶಕಃ** ಭಕ್ತಿಯೇ ಮೊದಲಾದ ಹತ್ತು ಗುಣಗಳ ಅಭಿಮಾನಿಯಾದ ಭೀಮನು, **ಶ್ರುತಾದಿಃ** ಶ್ರವಣಾದಿಗಳ ಅಭಿಮಾನಿಯಾದ ಅರ್ಜುನನು, **ಶೀಲವೈನಯೌ** ಶೀಲ ಮತ್ತು ವಿನಯಗಳ ಅಭಿಮಾನಿಗಳಾದ ನಕುಲ ಸಹದೇವರು, **ಯತ್ರ** ಎಲ್ಲಿ ಪ್ರತಿಪಾದ್ಯರೋ, **ತಂ** ಆ ಭಾಗವನ್ನು, **ಬುಧಾಃ** ಜ್ಞಾನಿಗಳು, **ಮನ್ವಾದಿಂ ಪ್ರಚಕ್ಷತೇ** ಮನ್ವಾದಿ ಎಂದು ಹೇಳುತ್ತಾರೆ.

**ತಾತ್ಪರ್ಯ** :- ಧರ್ಮಕ್ಕೆ ಅಭಿಮಾನಿಯಾದ ಯುಧಿಷ್ಠಿರ, ಭಕ್ತ್ಯಾದಿ ಹತ್ತು ಶೋಭನ ಗುಣಗಳಿಗೆ ಅಭಿಮಾನಿಯಾದ ಭೀಮ, ಶ್ರವಣ ಮನನನಾದಿಗಳಿಗೆ ಅಭಿಮಾನಿಯಾದ ಅರ್ಜುನ, ಶೀಲ ವಿನಯಗಳಿಗೆ ಅಭಿಮಾನಿಗಳಾದ ನಕುಲ ಸಹದೇವ, ಇವರನ್ನೂ ವೇದಾಭಿಮಾನಿ ದ್ರೌಪದಿಯನ್ನೂ ಎಲ್ಲಿ ಧರ್ಮಾದಿಗಳ ದ್ವಾರಾ ವರ್ಣಿಸುತ್ತಾರೋ ಆ ಭಾಗವನ್ನು ಮನ್ವಾದಿ ಎಂದು ಜ್ಞಾನಿಗಳು ಹೇಳುತ್ತಾರೆ.

**ವಿಶೇಷ ವಿಷಯ** :- ಅರ್ಜುನನು ಶ್ರೀಕೃಷ್ಣನ ಮುಖದಿಂದ ಸಕಲ ಶಾಸ್ತ್ರ ಸಾರಭೂತವಾದ ಗೀತೆಯನ್ನು ಶ್ರವಣಮಾಡಿದ್ದರಿಂದ ಮನನವನ್ನೂ ಮಾಡಿದ್ದರಿಂದ ಶ್ರವಣಾದಿಗಳಿಗೆ ಅರ್ಜುನನು ಅಭಿಮಾನಿಯಾಗಿದ್ದಾನೆ. ॥ ೧೪೪ ॥

**ನಾರಾಯಣಸ್ಯ ನಾಮಾನಿ ಸರ್ವಾಣಿ ವಚನಾನಿ ತು ।**
**ತತ್ಸಾಮರ್ಥ್ಯಾಭಿಧಾಯೀನಿ ತಮೌಪರಿಚರಂ ವಿದುಃ ॥ ೧೪೫ ॥**

**ಅರ್ಥ** :- **ಸರ್ವಾಣಿ ವಚನಾನಿ ತು** ಭಾರತದ ಎಲ್ಲ ವಚನಗಳು, **ತತ್ಸಾಮರ್ಥ್ಯಾಭಿಧಾಯೀನಿ** ನಾರಾಯಣನ ಸಾಮರ್ಥ್ಯವನ್ನು ಹೇಳುವ, **ನಾರಾಯಣಸ್ಯ ನಾಮಾನಿ** ಆ ನಾರಾಯಣನ ನಾಮಗಳೇ ಆಗಿವೆ. ಆದ್ದರಿಂದ, **ತಂ** ಭಾರತವನ್ನು, **ಔಪರಿಚರಂ** ಉಪರಿಚರಾದಿ ಎಂದು, **ವಿದುಃ** ತಿಳಿಯುತ್ತಾರೆ.

**ತಾತ್ಪರ್ಯ** :- ಭಾರತದ ಎಲ್ಲ ವಾಕ್ಯಗಳೂ ನಾರಾಯಣನ ಸಾಮರ್ಥ್ಯವನ್ನು ಹೇಳುವ ಅವನ ನಾಮಗಳೇ ಆದ್ದರಿಂದ ಭಾರತವನ್ನು 'ಉಪರಿಚರಾದಿ' ಎನ್ನುವರು. ॥ ೧೪೫ ॥

**ಪೀಠಿಕೆ** :- ಈಗ ಭಕ್ತ್ಯಾದಿ ಹತ್ತು ಗುಣಗಳನ್ನು ವಿವರಿಸುತ್ತಾರೆ—

**ಭಕ್ತಿರ್ಜ್ಞಾನಂ ಸವೈರಾಗ್ಯಂ ಪ್ರಜ್ಞಾ ಮೇಧಾ ಧೃತಿಃ ಸ್ಥಿತಿಃ ।**
**ಯೋಗಃ ಪ್ರಾಣೋ ಬಲಂ ಚೈವ ವೃಕೋದರ ಇತಿ ಸ್ಮೃತಃ ॥ ೧೪೬ ॥**

**ಏತದ್ದಶಾತ್ಮಕೋ ವಾಯುಸ್ತಸ್ಮಾದ್ ಭೀಮಸ್ತದಾತ್ಮಕಃ ।**

**ಅರ್ಥ** :- **ಭಕ್ತಿಃ** ಭಕ್ತಿಯು, **ಸವೈರಾಗ್ಯಂ** ವೈರಾಗ್ಯದಿಂದ ಕೂಡಿದ, **ಜ್ಞಾನಂ** ಜ್ಞಾನವು, **ಪ್ರಜ್ಞಾ** ಬೇಗನೇ ವಿಷಯವನ್ನು ಗ್ರಹಿಸುವ ಸಾಮರ್ಥ್ಯವು, **ಮೇಧಾ**

ಕೇಳಿದ್ದನ್ನು ನೆನಪಿಟ್ಟುಕೊಳ್ಳುವುದು, **ಧೃತಿಃ** ಧೈರ್ಯವು, **ಸ್ಥಿತಿಃ** ಸ್ಥಿರತೆಯು, **ಯೋಗಃ** ಯೋಗವು, **ಪ್ರಾಣಃ** ಪ್ರಾಣವು, **ಬಲಂ ಚ** ಬಲವೆಂದು, ಈ ಹತ್ತು ಗುಣಗಳು, **ವೃಕೋದರ ಇತಿ** ಭೀಮನೆಂದು, **ಸ್ಮೃತಃ** ಹೇಳಲ್ಪಡುತ್ತವೆ, **ಯಸ್ಮಾತ್** ಯಾವ ಕಾರಣದಿಂದ, **ವಾಯುಃ** ವಾಯುದೇವರು, **ಏತದ್ದಶಾತ್ಮಕಃ** ಭಕ್ತ್ಯಾದಿ ಹತ್ತು ಗುಣಗಳಸ್ವರೂಪಭೂತರೋ, **ತಸ್ಮಾತ್** ಆ ಕಾರಣದಿಂದ, **ಭೀಮಃ** ವಾಯುಸ್ವರೂಪನಾದ ಭೀಮನು, **ತದಾತ್ಮಕಃ** ಭಕ್ತ್ಯಾದಿಸ್ವರೂಪನಾಗಿದ್ದಾನೆ.

**ತಾತ್ಪರ್ಯ** :- ವಾಯುದೇವರು ಭಕ್ತಿ, ಜ್ಞಾನ, ವೈರಾಗ್ಯ, ಪ್ರಜ್ಞಾ, ಮೇಧಾ, ಧೈರ್ಯ, ಸ್ಥೈರ್ಯ ಪ್ರಾಣ ಮತ್ತು ಬಲ — ಎಂಬ ಈ ಹತ್ತು ಶೋಭನ ಗುಣಸ್ವರೂಪರಾಗಿದ್ದಾರೆ. ಆದ್ದರಿಂದ ವಾಯುದೇವರ ಸ್ವರೂಪ ಭೂತನಾದ ಭೀಮನೂ ಭಕ್ತ್ಯಾದಿಸ್ವರೂಪನಾಗಿದ್ದಾನೆ – ಅಂದರೆ ಅಭಿಮಾನಿಯಾಗಿದ್ದಾನೆ. ॥ ೧೪೬ ॥

**ಪೀಠಿಕೆ** :- ಈವರಗೆ ಮುಖ್ಯವಾಗಿ ಭಾರತ ಪ್ರತಿಪಾದ್ಯ ಪ್ರಮೇಯವನ್ನು ಹೇಳಿ ಇನ್ನು ಮುಂದೆ ಹೇಯರಾಗಿಯೂ, ಕೊಲ್ಲಲು ಯೋಗ್ಯರಾಗಿಯೂ ಪ್ರಸಕ್ತರಾದ ದುರ್ಯೋಧನಾದಿಗಳು ಮತ್ತು ಅವರ ಸೈನ್ಯವನ್ನೂ ಹಾಗೂ ಉಪಾದೇಯರೆಂದು ಅವಾಂತರ ತಾತ್ಪರ್ಯ ವಿಷಯರಾದ (ಅಮುಖ್ಯವಾಗಿ ಪ್ರಸಕ್ತರಾದ) ಎರಡೂ ಸೇನೆಗಳಲ್ಲಿರುವ ಭೀಷ್ಮ ದ್ರೋಣ, ಕರ್ಣ, ದ್ರುಪದ, ವಿರಾಟ ಮೊದಲಾದ ಸಜ್ಜನರ ಸೇನೆಯನ್ನೂ ವರ್ಣಿಸಿದ ಭಾರತವು ಶೋಭನ ಮತ್ತು ಅಶೋಭನ ಜೀವರುಗಳಿಂದ ಕೂಡಿದ ದೇಹದ ಹೋಲಿಕೆಯುಳ್ಳದ್ದೆಂಬ ಅಭಿಪ್ರಾಯದಿಂದ ವಿವರಿಸುತ್ತಾರೆ—

**ಸರ್ವವಿದ್ಯಾ ದ್ರೌಪದೀ ತು ಯಸ್ಮಾತ್ ಸೈವ ಸರಸ್ವತೀ ॥ ೧೪೭ ॥**

**ಅಜ್ಞಾನಾದಿಸ್ವರೂಪಸ್ತು ಕಲಿರ್ದುರ್ಯೋಧನಃ ಸ್ಮೃತಃ ।**
**ವಿಪರೀತಂ ತು ಯದ್ ಜ್ಞಾನಂ ದುಃಶಾಶನ ಇತೀರಿತಃ ॥ ೧೪೮ ॥**

**ಅರ್ಥ** :- **ಯಸ್ಮಾತ್** ಯಾವ ಕಾರಣದಿಂದ, **ದ್ರೌಪದೀ ತು** ದ್ರೌಪದಿಯಾದರೂ, **ಸರ್ವವಿದ್ಯಾ** ಸರ್ವ ವಿದ್ಯಾಭಿಮಾನಿನಿಯೋ, **ತಸ್ಮಾತ್** ಆ ಕಾರಣದಿಂದ, **ಸೈವ** ದ್ರೌಪದಿಯೇ, **ಸರಸ್ವತೀ** ಮುಖದಲ್ಲಿರುವ ವಾಣಿಯು,

**ಅಜ್ಞಾನಾದಿ ಸ್ವರೂಪಃ** ಅಜ್ಞಾನ ಭ್ರಾಂತಿ ಪ್ರಮಾದಾದಿಗಳಿಗೆ ಅಭಿಮಾನಿಯಾಗಿ ದೇಹದಲ್ಲಿರುವ, **ಕಲಿಸ್ತು** ಕಲಿಯೇ, **ದುರ್ಯೋಧನಃ ಸ್ಮೃತಃ** ದುರ್ಯೋದನೆ ನಿಸಿದ್ದಾನೆ. **ವಿಪರೀತಂ ತು ಯದ್ ಜ್ಞಾನಂ** ವಿಪರೀತವಾದ ಯಾವ ಜ್ಞಾನವಿದೆಯೋ, **ತತ್** ಅದಕ್ಕೆ ಮಾತ್ರ ಅಭಿಮಾನಿಯಾದ ದೇಹದಲ್ಲಿರುವ ದೈತ್ಯನು, **ದುಃಶಾಸನ ಇತಿ** ದುಃಶಾಸನನೆಂದು, **ಈರಿತಃ** ಹೇಳಲ್ಪಟ್ಟಿದ್ದಾನೆ.

**ತಾತ್ಪರ್ಯ** :- ದ್ರೌಪದಿಯು ಸರ್ವವಿದ್ಯಾಭಿಮಾನಿಯಾದ್ದರಿಂದ ಮುಖದಲ್ಲಿರುವ ವಾಣಿಯ ಉಪಮೆಯಿಂದ ಹೇಳಲ್ಪಟ್ಟಿದ್ದಾಳೆ. ದುರ್ಯೋಧನನು ದೇಹದಲ್ಲಿರುವ ವಿಪರೀತ ಜ್ಞಾನಮಾತ್ರಕ್ಕೆ ಅಭಿಮಾನಿಯಾಗಿರುವ ದೈತ್ಯನೇ ದುಃಶಾಸನನಾಗಿದ್ದಾನೆ. ॥ ೧೪೮ ॥

**ನಾಸ್ತಿಕ್ಯಂ ಶಕುನಿರ್ನಾಮ ಸರ್ವದೋಷಾತ್ಮಕಾಃ ಪರೇ**
**ಧಾರ್ತರಾಷ್ಟ್ರಾಸ್ತು, ಅಹಂಕಾರೋ ದ್ರೌಣೀ ರುದ್ರಾತ್ಮಕೋ ಯತಃ ॥೧೪೮॥**

**ದ್ರೋಣಾದ್ಯಾ ಇಂದ್ರಿಯಾಣ್ಯೇವ ಪಾಪಾನ್ಯನ್ಯೇತು ಸೈನಿಕಾಃ ।**
**ಪಾಂಡವೇಯಾಶ್ಚ ಪುಣ್ಯಾನಿ ತೇಷಾಂ ವಿಷ್ಣುರ್ನಿಯೋಜಕಃ ॥ ೧೪೯ ॥**

**ಅರ್ಥ** :- **ನಾಸ್ತಿಕ್ಯಂ** ದೇಹದಲ್ಲಿರುವ ನಾಸ್ತಿಕ್ಯಾಭಿಮಾನಿ ದೈತ್ಯನೇ, **ಶಕುನಿರ್ನಾಮ** ಶಕುನಿ ಎಂದು ಪ್ರಸಿದ್ಧನು. **ಸರ್ವದೋಷಾತ್ಮಕಾಃ** ದೇಹದಲ್ಲಿರುವ ಕಾಮಕ್ರೋಧ ಮದ ಮತ್ಸರಾದಿ ಸಕಲ ದೋಷ ನಿಯಾಮಕರಾದ ದೈತ್ಯರೇ, **ಪರೇ ಧಾರ್ತರಾಷ್ಟ್ರಾಃ** ದುರ್ಯೋಧನ, ದುಃಶಾಸನ ವ್ಯತಿರಿಕ್ತರಾದ ಧೃತರಾಷ್ಟ್ರ ಪುತ್ರರು. **ಯತಃ** ಯಾವ ಕಾರಣದಿಂದ, **ದ್ರೌಣಿಃ** ಅಶ್ವತ್ಥಾಮಾಚಾರ್ಯರು, **ರುದ್ರಾತ್ಮಕಃ** ಅಹಂಕಾರಾಭಿಮಾನಿ ರುದ್ರಸ್ವರೂಪರೋ, **ತತಃ** ಆ ಕಾರಣದಿಂದ, **ಅಹಂಕಾರಃ** ದೇಹದಲ್ಲಿರುವ ಅಹಂಕಾರಾಭಿಮಾನಿಯೇ, **ದ್ರೌಣಿಃ** ಅಶ್ವತ್ಥಾಮರು, **ಇಂದ್ರಿಯಾಣ್ಯೇವ** ದೇಹದಲ್ಲಿರುವ ಇಂದ್ರಿಯಾಭಿಮಾನಿಗಳೇ, **ದ್ರೋಣಾದ್ಯಾಃ** ದ್ರೋಣ, ಕರ್ಣ, ಭೀಷ್ಮಾದಿಗಳು, **ಪಾಪಾನಿ** ಪರಹಿಂಸಾ, ಪರದ್ರವ್ಯಾಪಹರಣ, ಪರನಿಂದಾ, ಪರನಾರೀಗಮನಾದಿ ಪಾಪಕರ್ಮಾಭಿಮಾನಿ ದೈತ್ಯರೇ, **ಸೈನಿಕಾಃ** ದುರ್ಯೋಧನನ ಪಕ್ಷದ ಸೈನಿಕರು. **ಪುಣ್ಯಾನಿ** ಪುಣ್ಯಕರ್ಮಾಭಿಮಾನಿ ದೇವತೆಗಳು, **ಪಾಂಡವೇಯಾಃ** ಪಾಂಡವರ ಸೈನಿಕರು, **ತೇಷಾಂ** ಅವರೆಲ್ಲರಿಗೂ, **ನಿಯೋಜಕಃ** ನಿಯಾಮಕನಾದ ನಾರಾಯಣನೇ, **ವಿಷ್ಣುಃ** ಸಾಕ್ಷಾತ್ ಕೃಷ್ಣನು.

**ತಾತ್ಪರ್ಯ** :- ಶಕುನಿಯು ನಾಸ್ತಿಕ್ಯಕ್ಕೆ, ದುರ್ಯೋಧನ, ದುಃಶಾಸನರನ್ನು ಬಿಟ್ಟು ಉಳಿದ ಧೃತರಾಷ್ಟ್ರಪುತ್ರರು ದೇಹದಲ್ಲಿರುವ ಕಾಮಕ್ರೋಧಾದಿಗಳಿಗೆ ನಿಯಾಮಕರಾದ ದೈತ್ಯರಾಗಿದ್ದಾರೆ. ರುದ್ರಾಂಶರಾದ ಅಶ್ವತ್ಥಾಮಾಚಾರ್ಯರು ದೇಹದಲ್ಲಿರುವ ಅಹಂಕಾರಕ್ಕೆ ನಿಯಾಮಕರು. ಪರಹಿಂಸಾದಿ ಪಾಪಕರ್ಮಗಳಿಗೆ ದುರ್ಯೋಧನ ಪಕ್ಷದ ಸೈನಿಕರು, ಪುಣ್ಯ ಕರ್ಮಗಳಿಗೆ ಪಾಂಡವಪಕ್ಷದ ಸೈನಿಕರು ನಿಯಾಮಕರು. ಇವರೆಲ್ಲರಿಗೂ ನಿಯಾಮಕನಾದ ದೇಹದಲ್ಲಿರುವ ಹರಿಯೇ ಕೃಷ್ಣನಾಗಿದ್ದಾನೆ. ಹೀಗೆ ದೇಹದಲ್ಲಿ ಸದಸಜ್ಜೀವರಿರುವಂತೆ ಭಾರತದಲ್ಲಿಯೂ ಇದ್ದಾರೆ.

**ವಿಶೇಷ ವಿಷಯ** :- ನಾಸ್ತಿಕ್ಯವು ಎರಡು ವಿಧ. ಸಜ್ಜನರಲ್ಲಿ ದುಃಖಾದಿಗಳನ್ನು ಅನುಭವಿಸಿದ ಸಂಕಟದಿಂದ ನಾಸ್ತಿಕ್ಯವು ಉಂಟಾಗುತ್ತದೆ. ದುರ್ಜನರಲ್ಲಿ ಸ್ವಾಭಾವಿಕವಾಗಿಯೇ ನಾಸ್ತಿಕ್ಯವಿರುತ್ತದೆ.

ದ್ರೋಣಾದಿಗಳು ಇಂದ್ರಿಯಾಭಿಮಾನಿಗಳು. ಹೇಗೆಂದರೆ, ದ್ರೋಣರು ಶ್ರೋತ್ರಾಭಿಮಾನಿ ಬೃಹಸ್ಪತ್ಯಾಚಾರ್ಯರು. ಕರ್ಣನು ಚಕ್ಷುರಾಭಿಮಾನಿ ಸೂರ್ಯ ಸ್ವರೂಪನು. ಭೀಷ್ಮರು ವಾಗಿಂದ್ರಿಯಾಭಿಮಾನಿ ಅಗ್ನಿ ಸ್ವರೂಪರು. ಅಭಿಮನ್ಯುವು ಮನೋಽಭಿಮಾನಿ ಚಂದ್ರಸ್ವರೂಪನು. ನಕುಲ ಸಹದೇವರು ಘ್ರಾಣೇಂದ್ರಿಯಾಭಿಮಾನಿ ಅಶ್ವಿನೀದೇವತೆಗಳ ಸ್ವರೂಪರು. ಅರ್ಜುನನು ಮನೋಽಭಿಮಾನಿ ಇಂದ್ರ ಸ್ವರೂಪನು ಇತ್ಯಾದಿ ಪ್ರಮೇಯವನ್ನು ಊಹಿಸಿ ತಿಳಿಯಬೇಕು.

ಇಲ್ಲಿ ದೋಷಾಭಿಮಾನಿಗಳು ಧೃತರಾಷ್ಟ್ರಪುತ್ರರೆಂದೂ, ಪಾಪಾಭಿಮಾನಿಗಳು ಸೈನಿಕರೆಂದೂ ಪ್ರತ್ಯೇಕ ಹೇಳಲಾಗಿದೆ. ಏಕೆಂದರೆ ಕಾಮಕ್ರೋಧಾದಿಗಳು ಸ್ವಾಭಾವಿಕ. ಆದ್ದರಿಂದ ಪ್ರಬಲ. ಅದಕ್ಕಾಗಿ ಧೃತರಾಷ್ಟ್ರಪುತ್ರರ ಉಪಮೆಯನ್ನು ಹೇಳಿದ್ದು. ಪಾಪಕರ್ಮಗಳು ಕೆಲವೊಮ್ಮೆ ಮಾತ್ರ ನಡೆಯುವುವು. ಆದ್ದರಿಂದ ಸೈನಿಕರ ಉಪಮೆಯನ್ನು ಕೊಡಲಾಗಿದೆ.

ತೇಷಾಂ ವಿಷ್ಣುರ್ನಿಯೋಜಕಃ ಎಂದರೆ ದೇಹದೊಳಗೆ ಮತ್ತು ಹೊರಗಿರುವ ಎಲ್ಲ ಅಭಿಮಾನಿಗಳಿಗೂ ನಿಯಾಮಕನಾದ ನಾರಾಯಣನು ಕೃಷ್ಣ ಎಂದರ್ಥ.

ಹೇಗೆ ಪರಮಾತ್ಮನು ತನ್ನ ಭಕ್ತರ ಮುಕ್ತಿಗಾಗಿ ತಾನೇ ನಿರ್ಮಿಸಿದ ಉತ್ತಮ ದೇಹದಲ್ಲಿ ಅಪರೋಕ್ಷ ಜ್ಞಾನದಶಾದಲ್ಲಿ ಆ ಜೀವರು ಮಾಡಿದ ದುಷ್ಕರ್ಮ ಗಳನ್ನು ಸಂಗ್ರಹಿಸಲು ದೈತ್ಯರನ್ನೂ, ಮತ್ತು ಆ ಜೀವರು ಮಾಡಿದ ಅಧಿಕ ಪುಣ್ಯವನ್ನು ಸಂಗ್ರಹಿಸಲು ಸಜ್ಜೀವರನ್ನೂ ಸೇರಿಸುವನೋ ಅದರಂತೆ ವ್ಯಾಸರೂ ತಮ್ಮ ಗ್ರಂಥದಲ್ಲಿ ಶತ್ರುಗಳ ಪರಾಜಯ ಮತ್ತು ಭಕ್ತರ ವಿಜಯವನ್ನು ವರ್ಣಿಸಲು ಸಜ್ಜೀವರ ಮತ್ತು ಅಸಜ್ಜೀವರ ಹೀಗೆ ಎರಡೂ ವಿಧರಾದ ಜೀವರ ಕಥೆಯನ್ನು ಸೇರಿಸಿ ಭಾರತವನ್ನು ರಚಿಸಿದ್ದಾರೆ. ॥ ೧೪೯ ॥

**ಏವಮಧ್ಯಾತ್ಮನಿಷ್ಠಂ ಹಿ ಭಾರತಂ ಸರ್ವಮುಚ್ಯತೇ ।**
**ದುರ್ವಿಜ್ಞೇಯಮತಃ ಸರ್ವೈಃ ಭಾರತಂ ತು ಸುರೈರಪಿ ॥ ೧೫೦ ॥**

**ಅರ್ಥ :- ಏವಂ** ಈ ರೀತಿಯಾಗಿ, **ಸರ್ವಂ ಭಾರತವು** ಸಮಗ್ರಭಾರತವು, **ಅಧ್ಯಾತ್ಮ ನಿಷ್ಠಂ ಹಿ** ದೇಹಾಂತರ್ಯಾಮಿಗಳನ್ನು ಪ್ರತಿಪಾದಿಸುವುದಷ್ಟೆ **ಅತಃ** ಆದ್ದರಿಂದ, **ಭಾರತಂ** ಭಾರತವು, **ಸರ್ವೈಃ ಸುರೈರಪಿ** ಎಲ್ಲ ದೇವತೆಗಳಿಂದಲೂ, **ದುರ್ವಿಜ್ಞೇಯಂ** ತಿಳಿಯಲಶಕ್ಯವುಃ ॥ ೧೫೦ ॥

**ತಾತ್ಪರ್ಯ :-** ಹಿಂದೆ ಹೇಳಿದಂತೆ ಭಾರತವು ಆಧ್ಯಾತ್ಮಿಕಾರ್ಥ ವುಳ್ಳದ್ದಾಗಿದೆ. ಗಹನವಾದ ಇದನ್ನು ದೇವತೆಗಳೂ ಪೂರ್ತಿ ತಿಳಯಲಾರರು.

**ಸ್ವಯಂ ವ್ಯಾಸೋ ಹಿ ತದ್ವೇದ ಬ್ರಹ್ಮಾ ವಾ ತತ್ಪ್ರಸಾದತಃ ।**
**ತಥಾಪಿ ವಿಷ್ಣು ಪರತಾ ಭಾರತೇ ಸರ್ವಸಂಗ್ರಹಃ ॥ ೧೫೧ ॥**

**ಇತ್ಯಾದಿ ವ್ಯಾಸವಾಕ್ಯೈಸ್ತು ವಿಷ್ಣೋರುತ್ಕರ್ಷೋಽವಗಮ್ಯತೇ ।**

**ಅರ್ಥ :- ತತ್** ಆ ಭಾರತವನ್ನು, **ಸ್ವಯಂ ವ್ಯಾಸಃ** ಸಾಕ್ಷಾತ್ ವ್ಯಾಸರೇ, **ವೇದ ಹಿ** ತಿಳಿಯುತ್ತಾರಷ್ಟೆ **ವಾ** ಅಥವಾ, **ಬ್ರಹ್ಮಾ** ಬ್ರಹ್ಮದೇವರು, **ತತ್ಪ್ರಸಾದಕಃ** ವಾಸ್ಯರ ಅನುಗ್ರಹದಿಂದ, **ವೇದ** ತಿಳಿಯುತ್ತಾರೆ, **ತಥಾಪಿ** ಹಾಗಿದ್ದರೂ, **ಭಾರತೇ** ಭಾರತದಲ್ಲಿ, **ವಿಷ್ಣುಪರತಾ** ವಿಷ್ಣು ಪ್ರತಿಪಾದಕತ್ವವು, **ಸರ್ವಸಂಗ್ರಹಃ** ಸಮಗ್ರ ಭಾರತದ ಸಂಕ್ಷಿಪ್ತಾಭಿಪ್ರಾಯವು (ಎಂದು ಮನುಷ್ಯರಿಂದ ಸ್ಥೂಲವಾಗಿ ತಿಳಿಯಲ್ಪಡುವುದು), **ಇತ್ಯಾದಿವ್ಯಾಸವಾಕ್ಯೈಸ್ತು** ಇವೇ ಮೊದಲಾದ ವ್ಯಾಸರ ವಚನಗಳಿಂದಲೇ, **ವಿಷ್ಣೂತ್ಕರ್ಷಃ** ವಿಷ್ಣುಪಾರಮ್ಯವು, **ಅವಗಮ್ಯತೇ** ತಿಳಿಯಲ್ಪಡುತ್ತದೆ.

**ತಾತ್ಪರ್ಯ** :- ದೇವದುರ್ಜ್ಞೇಯವಾದ ಈ ಭಾರತವನ್ನು ಸ್ವಯಂ ವ್ಯಾಸರೇ ಅಥವಾ ಅವರ ಅನುಗ್ರಹದಿಂದ ಬ್ರಹ್ಮದೇವರಾಗಲೀ ತಿಳಿಯುತ್ತಾರೆ. ಬೇರೆ ಯಾರಿಗೂ ಸಾಧ್ಯವಿಲ್ಲ. ಆದರೂ ಮನುಷ್ಯರು ಭಾರತಾಧ್ಯಯನ ಮಾಡುವುದು ವ್ಯರ್ಥವೇನಲ್ಲ. ಏಕೆಂದರೆ ಭಾರತವು ವಿಷ್ಣು ಪಾರಮ್ಯವನ್ನು ಪ್ರತಿಪಾದಿಸುತ್ತದೆ ಎಂಬ ಸಂಕ್ಷಿಪ್ತವಾದ ಅರ್ಥವನ್ನು ಮನುಷ್ಯರೂ ತಿಳಿಯ ಬಹುದು. ಹೀಗೆ ಈವರೆಗೆ ತೋರಿಸಿದ ವ್ಯಾಸರ ವಚನಗಳಿಂದಲೇ ವಿಷ್ಣು ಪಾರಮ್ಯವು ತಿಳಿದುಬರುತ್ತದೆ. ॥ ೧೫೧ ॥

**ವಾಯ್ವಾದೀನಾಂ ಕ್ರಮಶ್ಚೈವ ತದ್ವಾಕ್ಯೈರೇವ ಚಿಂತ್ಯತೇ ॥ ೧೫೨ ॥**

**ವಾಯುರ್ಹಿ ಬ್ರಹ್ಮತಾಮೇತಿ ತಸ್ಮಾದ್ ಬ್ರಹ್ಮೈವ ಸಸ್ಮೃತಃ ।**
**ನ ಬ್ರಹ್ಮಸದೃಶಃ ಕಶ್ಚಿತ್ ಶಿವಾದಿಷು ಕಥಂಚನ ॥ ೧೫೩ ॥**

**ಅರ್ಥ** :- **ವಾಯ್ವಾದೀನಾಂ** ವಾಯುದೇವರೇ ಮೊದಲಾದವರ, **ಕ್ರಮಶ್ಚೈವ** ತಾರತಮ್ಯಕ್ರಮವೂ ಕೂಡ, **ತದ್ವಾಕ್ಯೈರೇವ** ವ್ಯಾಸರ ವಚನ ಗಳಿಂದಲೇ, **ಚಿಂತ್ಯತೇ** ವಿಚಾರ ಮಾಡಲ್ಪಡುತ್ತದೆ. **ವಾಯುಃ** ವಾಯುದೇವರು, **ಬ್ರಹ್ಮತಾಂ** ಚತುರ್ಮುಖ ಬ್ರಹ್ಮಪದವಿಯನ್ನು, **ಏತಿ ಹಿ** ಹೊಂದುತ್ತಾರಷ್ಟೆ **ತಸ್ಮಾತ್** ಆದ್ದರಿಂದ, **ಸಃ** ಆ ವಾಯುದೇವರು, **ಬ್ರಹ್ಮಾ ಏವ ಸ್ಮೃತಃ** ಬ್ರಹ್ಮದೇವರೆಂಬುದಾಗಿಯೇ ಹೇಳಲ್ಪಡುತ್ತಾರೆ. **ಶಿವಾದಿಷು** ರುದ್ರಾದಿಗಳಲ್ಲಿ **ಕಶ್ಚಿತ್** ಯಾರೂ ಕೂಡ, **ಕಥಂಚನ** ಯಾವ ಪ್ರಕಾರದಿಂದಲೂ, **ಬ್ರಹ್ಮಸದೃಶಃ** ಬ್ರಹ್ಮದೇವರಿಗೆ ಸದೃಶರಾದವರು, **ನ** ಇಲ್ಲ.

**ತಾತ್ಪರ್ಯ** :- ವ್ಯಾಸರ ವಚನಗಳಿಂದಲೇ ಇನ್ನು ಮುಂದೆ ವಾಯು ಮೊದಲಾದವರ ತಾರತಮ್ಯ ಕ್ರಮವನ್ನು ಆಚಾರ್ಯರು ತಿಳಿಸುತ್ತಾರೆ — ವಾಯುದೇವರೇ ಚತುರ್ಮುಖ ಬ್ರಹ್ಮಪದವಿಗೆ ಬರುವುದರಿಂದ ಅವರು ಬ್ರಹ್ಮದೇವರೆಂದೇ ಪರಿಗಣಿಸಲ್ಪಡುವರು. ರುದ್ರಾದಿಗಳಲ್ಲಿ ಯಾರೂ ಬ್ರಹ್ಮ ದೇವರಿಗೆ ಸಮರಿಲ್ಲ. ॥ ೧೫೩ ॥

**ಜ್ಞಾನೇ ವಿರಾಗೇ ಹರಿಭಕ್ತಿಭಾವೇ**
**ಧೃತಿಸ್ಥಿತಿಪ್ರಾಣಬಲೇಷು ಯೋಗೇ ।**
**ಬುದ್ಧೌ ಚ ನಾನ್ಯೋ ಹನುಮತ್ಸಮಾನಃ**
**ಪುಮಾನ್ ಕದಾಚಿತ್ ಕ್ವಚ ಕಶ್ಚನೈವ ॥ ೧೫೪ ॥**

**ಅರ್ಥ** :- **ಜ್ಞಾನೇ** ಜ್ಞಾನದಲ್ಲಿ, **ವಿರಾಗೇ** ವೈರಾಗ್ಯದಲ್ಲಿ, **ಹರಿಭಕ್ತಿಭಾವೇ** ಹರಿ ಭಕ್ತಿಯಲ್ಲಿ, **ಧೃತಿಸ್ಥಿತಿಪ್ರಾಣಬಲೇಷು** ಧೈರ್ಯಸ್ಥೈರ್ಯ ಚೇಷ್ಟಾ ಮತ್ತು ಸಾಮರ್ಥ್ಯಗಳಲ್ಲಿ, **ಯೋಗೇ** ಯೋಗದಲ್ಲಿ, **ಬುದ್ಧೌ ಚ** ಬುದ್ಧಿಯಲ್ಲಿಯೂ **ಹನುಮತ್ಸಮಾನಃ** ಹನುಮಂತನಿಗೆ ಸಮಾನನಾದ, **ಅನ್ಯಃ ಕಶ್ಚನ ಪುಮಾನ್** ಬೇರೆ ಯಾವ ಪುರುಷನೂ, **ಕ್ವಚ** ಎಲ್ಲಿಯೂ, **ಕದಾಚಿತ್** ಯಾವಾಗಲೂ, **ನೈವ** ಇಲ್ಲವೇ ಇಲ್ಲ.

**ತಾತ್ಪರ್ಯ** :- ಜ್ಞಾನ, ಭಕ್ತಿ, ವೈರಾಗ್ಯ, ಧೈರ್ಯ, ಸ್ಥೈರ್ಯ ಚೇಷ್ಟಾ ಸಾಮರ್ಥ್ಯ ಯೋಗ, ಬುದ್ಧಿ ಇವುಗಳಲ್ಲಿ ಹನುಮಂತನಿಗೆ ಸಮಾನರಾದವರು ಯಾರೂ ಎಂದೂ ಎಲ್ಲಿಯೂ ಇಲ್ಲವೇ ಇಲ್ಲ. ಹನುಮಂತನು ವಾಯುದೇವರ ಅವತಾರನಾದ್ದರಿಂದ ಹನುಮಂತನಿಗೆ ಸಮಾನರಿಲ್ಲವೆಂದದ್ದರಿಂದ ಬ್ರಹ್ಮ ದೇವರಿಗೂ ಸಮಾನರಿಲ್ಲವೆಂದು ಹೇಳಿದಂತಾಯಿತು. ॥ ೧೫೪ ॥

**ಪೀಠಿಕೆ** :- ಹರಿಸರ್ವೋತ್ತಮತ್ವ ಮತ್ತು ವಾಯುದೇವರ ಪ್ರಧಾನಾಂಗತ್ವ ವಿಷಯದಲ್ಲಿ ಸ್ಮೃತಿಗಳನ್ನು ಹೇಳಲಾಯಿತು. ಇನ್ನು ಮುಂದೆ ಶ್ರುತಿಗಳನ್ನು ಹೇಳುತ್ತಾರೆ —

**ಬಳಿತ್ಥಾ ತದ್ವಪುಷೇ ಧಾಯಿ ದರ್ಶತಂ**
**ದೇವಸ್ಯ ಭರ್ಗಃ ಸಹಸೋ ಯತೋಽಜನಿ ।**
**ಯದೀಮುಪಹ್ವರತೇ ಸಾಧತೇ**
**ಮತಿರ್ಋತಸ್ಯ ಧೇನಾ ಅನಯಂತ ಸಸ್ರುತಃ ॥ ೧೫೫ ॥**

**ಅರ್ಥ** :- **ಯತಃ** ಯಾವ ನಾರಾಯಣನಿಂದ, **ಅಜನಿ** (ವಾಯುದೇವರು), ಹುಟ್ಟಿದರೋ, **ದೇವಸ್ಯ** ಆ ನಾರಾಯಣನ ಪ್ರೀತಿಗಾಗಿ ಅವನ ಆಜ್ಞೆಯಿಂದ, **ಸಹಸಃ** ಬಲ ರೂಪವಾದ, ಕಲ್ಯಾದಿ ಶತ್ರುವೇಗ ಸಹನಶೀಲರಾದ, ವೇಗವುಳ್ಳ ಮುಖ್ಯಪ್ರಾಣದೇವರ, **ಬಟ್** ಬಲಾತ್ಮಕವಾದ, **ದರ್ಶತಂ** ಜ್ಞಾನದಿಂದ ಪೂರ್ಣವಾದ, **ಭರ್ಗಃ** ಜಗತ್ತನ್ನು ಭರಣಮಾಡುವ, ಪರಬ್ರಹ್ಮನನ್ನು ಹೊಂದಿಸುವ, **ತತ್** ಆ ಮೂಲರೂಪವು, **ಇತ್ಥಾ** ಮೂಲರೂಪ ದಂತೆಯೇ, **ವಪುಷೇ** ಅವತಾರಕ್ಕೋಸ್ಕರ, **ಧಾಯಿ** ಧರಿಸಲ್ಪಟ್ಟಿತು (ಅವತಾರ ಮಾಡಿತು), **ಯತ್** ಯಾವ ಅವತಾರ ರೂಪವು, **ಮತಿಃ** ಹನುಮಾನ್ ಎಂಬ

ಶಬ್ದದಿಂದ ವಾಚ್ಯವಾಗಿದೆಯೋ, **ಋತಸ್ಯ** ಜ್ಞಾನಸ್ವರೂಪನಾದ ರಾಮನ, **ಉಪ** ಹತ್ತಿರದಲ್ಲಿ, **ಹ್ವರತೇ** ಕ್ರೀಡಿಸುತ್ತದೋ, ಭಕ್ತಿಯಿಂದ ನಮ್ರವಾಗಿದೆಯೋ, **ಈಂ** ಇದರಂತೆ, **ಸಾಧತೇ** ದೂರವಿದ್ದೂ ರಾಮಸೇವೆಯನ್ನು ಮಾಡುತ್ತದೋ, **ಯೇನ** ಯಾವ ಅವತಾರ ರೂಪದಿಂದ, **ಋತಸ್ಯ** ಸತ್ಯವಚನವುಳ್ಳ ಶ್ರೀರಾಮನ, **ಸಸ್ರುತಃ** ಅಮೃತಸ್ರವದಿಂದ ಕೂಡಿದ, **ಧೇನಾಃ** ಸುರಕಾರ್ಯಪೋಷಕಗಳಾದ ವಚನಗಳು, **ಅನಯಂತ** ಸೀತಾದೇವಿಯ ಬಳಿಗೆ ಒಯ್ಯಲ್ಪಟ್ಟವೋ, **ತತ್** ಆ ಅವತಾರವು, **ಪ್ರಥಮಂ** ಮೊದಲನೆಯ ಅವತಾರವು.

**ತಾತ್ಪರ್ಯ** :- ಶ್ರೀ ವಾಯುದೇವರು ಶ್ರೀಮನ್ನಾರಾಯಣನಿಂದ ಹುಟ್ಟಿದವರು. ಪೂರ್ಣಬಲ ಜ್ಞಾನಸ್ವರೂಪರು. ಕಲ್ಯಾದಿಗಳ ಭಾಧೆ ಅವರಿಗಿಲ್ಲ. ಅವರ ಅವತಾರ ರೂಪಗಳೂ ಮೂಲರೂಪದಂತೆ ಜ್ಞಾನ ಮತ್ತು ಬಲಗಳಿಂದ ಪೂರ್ಣ. ಭಗವದಾಜ್ಞೆಯಿಂದ ಭಗವತ್ಪ್ರೀತ್ಯರ್ಥವಾಗಿ ವಾಯುದೇವರು ಮೂರು ಅವತಾರಗಳನ್ನು ಮಾಡಿದ್ದಾರೆ. ಪ್ರಥಮಾವತಾರವು ವಿಶೇಷ ಬುದ್ಧಿಯುಳ್ಳದ್ದಾದ್ದರಿಂದ ಹನುಮಾನ್ ಎಂದು ಪ್ರಸಿದ್ಧವಾಗಿದೆ. ಈ ರೂಪವು ಸದಾ ರಾಮದೇವರ ಬಳಿ ಭಕ್ತಿ ನಮ್ರವಾಗಿದೆ ಮತ್ತು ದೂರದಲ್ಲೂ ರಾಮಸೇವೆಯನ್ನು ಮಾಡಿದೆ ಅಂದರೆ, ರಾಮದೇವರ ಉತ್ತಮ ಸಂದೇಶವನ್ನು ಲಂಕೆಯಲ್ಲಿದ್ದ ಸೀತೆಗೆ ಮುಟ್ಟಿಸಿದೆ.

**ವಿಶೇಷ ವಿಷಯ** :- 'ದ್ರವಿಣಂ ತರಃ ಸಹಃ ಬಲಂ ಶೌರ್ಯಾಣಿ' ಎಂಬ ಅನುಶಾಸನದ ಪ್ರಕಾರ 'ಸಹಸ್' ಶಬ್ದಕ್ಕೆ ಬಲ ಎಂದರ್ಥ. 'ಸಹಸಃ' ಎಂದರೆ ಬಲಸ್ವರೂಪರಾದ ಎಂದು ಅರ್ಥ. ಈ ಶಬ್ದವು 'ಷಹ ಮರ್ಷಣೇ' ಎಂಬ ಧಾತುವಿನಿಂದ ನಿಷ್ಪನ್ನವಾದ್ದರಿಂದ (ಮರ್ಷಣ) ಸಹನಶೀಲ ಎಂದೂ ಅರ್ಥ. ವಾಯುದೇವರು ಕಲ್ಯಾದ್ಯುಪದ್ರವವನ್ನು ಸಹಿಸುವುದರಿಂದ ಅಂದರೆ ಉಪದ್ರವಕ್ಕೆ ಒಳಗಾಗದಿರುವುದರಿಂದ ಇವರು 'ಸಹಸ್' ಶಬ್ದವಾಚ್ಯರಾಗಿದ್ದಾರೆ. ವಾಯುದೇವರಿಗೆ ಅಸುರೋಪದ್ರವ ಇಲ್ಲವೆನ್ನುವುದಕ್ಕೆ ಆಧಾರ ಛಾಂದೋಗ್ಯ ಉಪನಿಷತ್ತಿನಲ್ಲಿದೆ — 'ಯ ಏವಾಯಂ ಮುಖ್ಯಪ್ರಾಣಃ ತಂ ಉದ್ಗೀಥಮುಪಾಸಾಂಚಕ್ರಿರೇ । ತಂ ಹ ಅಸುರಾಃ ಋತ್ವಾ ವಿದಧ್ವಸುಃ ಯಥಾ ಅಶ್ಮಾನಂ ಆಖಣಂ ಋತ್ವಾ ವಿಧ್ವಂಸತೇ ॥' (ದೇವತೆಗಳು ಮುಖ್ಯಪ್ರಾಣನಲ್ಲಿ ಉದ್ಗೀಥನಾಮಕ ಪರಮಾತ್ಮನ ಉಪಾಸನೆಯನ್ನು ಮಾಡಿದರು. ದಾನವರು

ಮುಖ್ಯಪ್ರಾಣನೆಂಬ ಪ್ರತಿಮೆಯನ್ನು ಅಶುದ್ಧಿಗೊಳಿಸಲು ಬಂದು ಗಟ್ಟಿಯಾದ ಬಂಡೆಕಲ್ಲಿಗೆ ಬಡಿದ ಮಣ್ಣಿನ ಹೆಂಟೆ ಪುಡಿಯಾಗುವ ಹಾಗೆ ನಾಶ ಹೊಂದಿದರು).

'ಬಿಭರ್ತಿ ಗಮಯತಿ ಚ ಇತಿ ಭರ್ಗಃ' ಶ್ವಾಸರೂಪದಿಂದ ಜಗತ್ತಿನ ಭರಣ ಮಾಡುತ್ತಾರೆ, ಮತ್ತು 'ಸ ಏನಾನ್ ಬ್ರಹ್ಮ ಗಮಯತಿ' ಎಂಬ ಶ್ರುತಿಯ ಪ್ರಕಾರ ಪರಮಾತ್ಮನ ಕಡೆಗೆ ಕರೆದುಕೊಂಡು ಹೋಗುತ್ತಾರೆ. ಆದ್ದರಿಂದ ವಾಯು ದೇವರು ಭರ್ಗಶಬ್ದವಾಚ್ಯರು. 'ಆದಿಭೂಭ್ಯಾಂ ಡುತಚ್' ಎಂಬ ಸೂತ್ರದಿಂದ ಎರಡು ಧಾತುಗಳಿಗೆ ಒಂದು ಪ್ರತ್ಯಯ ಬಂದಂತೆ ಇಲ್ಲಿಯೂ ಭೃ ಮತ್ತು ಗಮ್ ಎಂಬ ಎರಡು ಧಾತುಗಳಿಗೆ ಉಣಾದಿ ಪ್ರತ್ಯಯಗಳಲ್ಲಿ ಸೇರಿದ ಅಸುನ್ ಪ್ರತ್ಯಯವು ಬಂದು 'ಭರ್ಗಃ' ಎಂದಾಗಿದೆ.

ಈ ಮಂತ್ರದಲ್ಲಿರುವ ಬಟ್ ಮತ್ತು ದರ್ಶತಂ ಎಂಬ ಎರಡು ವಿಶೇಷಣ ಗಳಿಂದ 'ವಾಯು' ಶಬ್ದಾರ್ಥವನ್ನು ವಿವರಿಸಿದಂತಾಗುತ್ತದೆ. ಅಯ ಪಯ ಗತೌ ಎಂಬ ಧಾತುಪಾಠದ ಪ್ರಕಾರ 'ವಾಯು' ಎಂಬಲ್ಲಿ 'ಅಯ್' ಎಂದರೆ ಜ್ಞಾನ. ಇದನ್ನು 'ದರ್ಶತಂ' ಎಂಬ ಪದವು ವಿವರಿಸಿದೆ. 'ವ್' ಎಂದರೆ ಬಲ. ಅದನ್ನೇ ಬಟ್ ಎಂಬ ಪದವು ವಿವರಿಸಿದೆ. ವಬಯೋಃ ಅಭೇದಃ (ವ ಬ ಅಕ್ಷರಗಳು ಒಂದೇ) ಎಂಬ ನ್ಯಾಯದ ಪ್ರಕಾರ ಬಟ್ ಎಂಬಲ್ಲಿ ವಕಾರದ ಬದಲು ಬಕಾರ ಬಂದಿದೆ.

'ಹನೂಮಾನ್' ಶಬ್ದವು 'ಹನ' ಧಾತುವಿನಿಂದ ನಿಷ್ಪನ್ನವಾಗಿದೆ. ಹನ ಧಾತುವಿಗೆ 'ಹನ ಹಿಂಸಾಗತ್ಯೋಃ' ಎಂಬ ಧಾತುಪಾಠದ ಪ್ರಕಾರ ಗತಿ ಎಂದರ್ಥ. ಗತ್ಯರ್ಥಕ ಧಾತುಗಳೆಲ್ಲ ಜ್ಞಾನಾರ್ಥಕವಾಗಿರುತ್ತವೆ ಎಂಬ ನಿಯಮದಿಂದ ಹನ ಧಾತುವಿಗೆ ಜ್ಞಾನ ಎಂದೂ ಅರ್ಥ. ವಿಶೇಷವಾದ ಜ್ಞಾನವುಳ್ಳವರು ಎಂಬ ಅರ್ಥದಲ್ಲಿ ಹನುಮಾನ್ ಎಂದಾಗಿದೆ. ಯದ್ಯಪಿ 'ಹನವಾನ್' ಎಂದು ಆಗಬೇಕಾಗಿತ್ತು ಆದರೆ ಜ್ಞಾನವು ಅವರ ಸ್ವಭಾವ (ಶೀಲ) ಎಂದು ತಿಳಿಸಲು (ಸ್ವಭಾವ) ತಾಚ್ಛೀಲ್ಯಾರ್ಥದಲ್ಲಿ ಬರುವ ಉಕಾರವನ್ನು ಸೇರಿಸಲಾಗಿದೆ. ಯಾವಾಗಲೂ ಜ್ಞಾನಶೀಲರೆಂದು ಸೂಚಿಸಲು ಮತ್ತೊಂದು ಉಕಾರವನ್ನೂ ಸೇರಿಸಿ ಹನೂಮಾನ್ ಎಂದು ಶಬ್ದನಿಷ್ಪತ್ತಿಯನ್ನು ಮಾಡಿದ್ದಾರೆ.

'ಋ ಗತೌ' ಎಂಬ ಧಾತುವಿನಿಂದ ನಿಷ್ಪನ್ನವಾದ 'ಋತ' ಶಬ್ದಕ್ಕೆ ಜ್ಞಾನಾತ್ಮಕ ಎಂದು ಅರ್ಥ.

ಹ್ವರ ಕೌಟಿಲ್ಯೇ ಎಂಬ ಧಾತುಪಾಠದ ಪ್ರಕಾರ ಹ್ವರ ಧಾತುವಿಗೆ ವಕ್ರವಾಗುವುದು ಎಂದರ್ಥ. ಪ್ರಕೃತದಲ್ಲಿ ಹ್ವರತೇ ಎಂಬ ಪದಕ್ಕೆ ಭಕ್ತಿಯಿಂದ ಬಾಗಿದ್ದಾರೆ ಎಂದು ಅರ್ಥವನ್ನು ಹೇಳಲಾಗಿದೆ.

'ಧೇನಾಃ' ಎಂಬ ಶಬ್ದವು ಧಿಜ್ ಪೋಷಣೇ ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ಆದ್ದರಿಂದ ಸುರಕಾರ್ಯಪೋಷಕ ಎಂದು ಅರ್ಥ. ॥ ೧೫೫ ॥

**ಪೀಠಿಕೆ :-** ಎರಡನೇ ಮತ್ತು ಮೂರನೇ ಅವತಾರದ ರೂಪವನ್ನು ಹೇಳುತ್ತಾರೆ —

**ಪೃಕ್ಷೋ ವಪುಃ ಪಿತುಮಾನ್ ನಿತ್ಯ ಆಶಯೇ**
**ದ್ವಿತೀಯಮಾ ಸಪ್ತ ಶಿವಾಸು ಮಾತೃಷು ।**
**ತೃತೀಯಮಸ್ಯ ವೃಷಭಸ್ಯ ದೋಹಸೇ**
**ದಶಪ್ರಮತಿಂ ಜನಯಂತ ಯೋಷಣಃ ॥ ೧೫೬ ॥**

**ಅರ್ಥ :- ದ್ವಿತೀಯಂ ವಪುಃ** ಎರಡನೆಯ ಭೀಮಾವತಾರ ರೂಪವು, **ಪೃಕ್ಷಃ** ದುಷ್ಟ ಸೈನ್ಯವನ್ನು ಸಂಹರಿಸುವುದರಿಂದ ಪೃಕ್ಷಸ್ ಶಬ್ದವಾಚ್ಯವಾಗಿದೆ. **ಪಿತುಮಾನ್** ಬಹಳ ಅನ್ನವನ್ನು ಭುಂಜಿಸುವ, **ನಿತ್ಯಃ** ಸ್ವೇಚ್ಛಾ ಮರಣವುಳ್ಳ **ಆ** ಭೀಮನು, **ಸಪ್ತ ಶಿವಾಸು ಮಾತೃಷು** ಶೋಭನವಾದ ಋಗ್ ಯಜುಸ್ ಸಾಮ ಅಥರ್ವ ಭಾರತ ಪಂಚರಾತ್ರ ಮತ್ತು ಮೂಲರಾಮಾಯಣವೆಂಬ ಏಳು ವಿದ್ಯೆಗಳಲ್ಲಿ, **ಆ ಶಯೇ** ಚೆನ್ನಾಗಿ ಪರಿಣತನಾಗಿದ್ದಾನೆ. **ಯೋಷಣಃ** ಶ್ರೀ, ಭೂ, ದುರ್ಗಾ ಎಂಬ ವೇದಾಭಿಮಾನಿ ದೇವತೆಗಳು, **ದೋಹಸೇ** ಜ್ಞಾನಪ್ರಸಾರ ಮಾಡಲು, **ವೃಷಭಸ್ಯ** ದೇವ ಶ್ರೇಷ್ಠರಾದ, **ಅಸ್ಯ** ವಾಯುದೇವರ, **ತೃತೀಯಂ** ಮೂರನೆಯದಾದ, **ದಶಪ್ರಮತಿಂ** ಪೂರ್ಣಪ್ರಜ್ಞ ಎಂಬ ರೂಪವನ್ನು **ಜನಯಂತ** ಪಡೆದರು.

**ತಾತ್ಪರ್ಯ :-** ವಾಯುದೇವರ ದ್ವಿತೀಯಾವತಾರಭೂತರಾದ ಭೀಮಸೇನ ದೇವರು ಶತ್ರು ಸೈನ್ಯವನ್ನು ವಿಶೇಷವಾಗಿ ಸಂಹಾರಮಾಡಿದ್ದಾರೆ,

ಬಹಳ ಅನ್ನವನ್ನು ಜೀರ್ಣಮಾಡಿಕೊಳ್ಳುವ ಶಕ್ತಿಯನ್ನು ಹೊಂದಿದ್ದಾರೆ. ಸ್ವೇಚ್ಛಾ ಮರಣಿಗಳಾಗಿದ್ದಾರೆ. ನಾಲ್ಕು ವೇದಗಳು ಭಾರತ ಪಂಚರಾತ್ರ ಮತ್ತು ಮೂಲ ರಾಮಾಯಣವೆಂಬ ಏಳು ವಿದ್ಯೆಗಳಲ್ಲಿ ಯಾವಾಗಲೂ ಆಸಕ್ತರಾಗಿದ್ದಾರೆ.

ವಾಯುದೇವರ ಮೂರನೆಯ ರೂಪವಾದ ಪೂರ್ಣಪ್ರಜ್ಞರೂಪವನ್ನು ವೇದಾಭಿಮಾನಿಗಳಾದ ಶ್ರೀ ಭೂ ದುರ್ಗಾದೇವಿಯರು, ಇತರರು ವೇದಕ್ಕೆ ಮಾಡಿದ ಅಪಾರ್ಥವನ್ನು ಖಂಡಿಸಿ ಸಮೀಚೀನ ವ್ಯಾಖ್ಯಾನ ಮಾಡಿ ಎಲ್ಲರಿಗೂ ಉಪದೇಶ ಮಾಡಲಿ ಎಂಬ ಉದ್ದೇಶದಿಂದ ಮಧ್ಯಗೇಹಭಟ್ಟರ ಪತ್ನಿಯಲ್ಲಿ ಸನ್ನಿಹಿತರಾಗಿ ಪಡೆದಿದ್ದಾರೆ.

**ವಿಶೇಷ ವಿಷಯ** :- ಪೃಕ್ಷಃ ಎಂಬಲ್ಲಿ ಸೇನಾರ್ಥಕ ಪೃತ್ ಶಬ್ದದ ನಂತರವಿರುವ ಕ್ಷೀಜ್ (ಕ್ಷಯೇ) ಧಾತುವಿಗೆ 'ಕರ್ತಾ' ಎಂಬ ಅರ್ಥದಲ್ಲಿ ಉಣಾದಿಗಳಲ್ಲಿ ಸೇರಿದ ಡಸನ್ ಪ್ರತ್ಯಯ ಬಂದು 'ಪೃಕ್ಷಸ್' ಎಂದು ಸ ಕಾರಾಂತ ಶಬ್ದವಾಗಿದೆ. ಸೇನಾಕ್ಷಯಕರ್ತ ಎಂದು ಅರ್ಥ.

'ಪಿತುಃ ಇತಿ ಅನ್ನನಾಮ' (ಪಿತುಃ ಎಂದರೆ ಅನ್ನ) ಎಂಬ ಬ್ರಾಹ್ಮಣ (ವೇದ ವ್ಯಾಖ್ಯಾನರೂಪವಾದ ಅಪೌರುಷೇಯಗ್ರಂಥ) ವಚನದಿಂದ ಪಿತು ಶಬ್ದಕ್ಕೆ ಅನ್ನ ಎಂದು ಅರ್ಥ. ಈ ಶಬ್ದಕ್ಕೆ 'ಪ್ರಾಶಸ್ತ್ಯ' ಎಂಬ ಅರ್ಥದಲ್ಲಿ ಮತುಪ್ ಪ್ರತ್ಯಯ ಬಂದು ನಿಷ್ಪನ್ನವಾದ 'ಪಿತುಮಾನ್' ಶಬ್ದಕ್ಕೆ ಬಹ್ವನ್ನಭೋಕ್ತಾ ಎಂದು ಅರ್ಥ.

ಮಾಪದಂತಿ ಪರಮಾತ್ಮಾನಂ (ಪರಮಾತ್ಮನನ್ನು ತಿಳಿಸುತ್ತವೆ). ಎಂಬ ವ್ಯುತ್ಪತ್ತಿಯಿಂದ ಸಿದ್ಧವಾದ 'ಮಾತೃ' ಶಬ್ದಕ್ಕೆ 'ವಿದ್ಯೆ' ಎಂದು ಅರ್ಥವಿದೆ.

'ಆ ಶಯೇ' ಎಂದರೆ ಚೆನ್ನಾಗಿ ಮಲಗಿದ್ದಾರೆ ಎಂದರ್ಥ. ಅಂದರೆ, ಮಲಗಿದವರಿಗೆ ಹೇಗೆ ಬಾಹ್ಯ ಪರಿಜ್ಞಾನವಿರುವುದಿಲ್ಲವೋ ಹಾಗೆ ಭೀಮಸೇನ ದೇವರು ಬೇರೆಕಡೆ ಗಮನವಿಡದೆ ಸಪ್ತವಿದ್ಯೆಗಳಲ್ಲೇ ಬಾಣ ತಯಾರಿಸುವ ವನಂತೆ ಏಕಾಗ್ರತೆಯಿಂದ ಅವುಗಳನ್ನೇ ವಿಮರ್ಶೆಮಾಡುತ್ತಿದ್ದಾರೆ ಎಂದು ಅಭಿಪ್ರಾಯ. ಇದನ್ನು ಸೂಚಿಸಲೆಂದೇ 'ಆ ಶಯೇ' ಎಂಬುದಾಗಿ ವೇದಮಂತ್ರ ದಲ್ಲಿದೆ. ಇದರಿಂದ 'ಭೃತಾಃ ಮಾಃ ಯೇನ ಸಃ ಭೀಮಃ' (ಎಲ್ಲ ವಿದ್ಯೆಗಳನ್ನೂ ಧರಿಸಿದವನು ಭೀಮ) ಎಂದು ಭೀಮ ಶಬ್ದಾರ್ಥವನ್ನು ವಿವರಿಸಿದಂತಾಯಿತು. ಯದ್ಯಪಿ ಈ ವ್ಯುತ್ಪತ್ತಿಯಿಂದ 'ಭೃಮ' ಎಂದಾಗಬೇಕಾಗುತ್ತದೆ. ಆದರೂ

'ವರ್ಣಾಗಮೋ ವರ್ಣವಿಕಾರಶ್ಚ' (ಶಬ್ದ ನಿಷ್ಪತ್ತಿಯಲ್ಲಿ ಕೆಲವು ವರ್ಣಗಳು ಬಂದು ಸೇರುತ್ತವೆ, ಕೆಲವು ವಿಕಾರವಾಗುತ್ತವೆ) ಎಂಬ ವಚನದ ಪ್ರಕಾರ ಭೃ ಎಂಬಲ್ಲಿ ಋಕಾರಕ್ಕೆ ಈಕಾರ ಬಂದು 'ಭೀಮ' ಎಂದಾಗಿದೆ.

'ದೋಹಸೇ' ಎಂಬ ಶಬ್ದವು ದುಹ ಪ್ರಪೂರಣೇ ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ಆದ್ದರಿಂದ 'ಜ್ಞಾನ ಪೂರಣೆಗಾಗಿ' ಎಂದರ್ಥ.

**'ದಶೇತಿ ಪೂರ್ಣಮುದ್ದಿಷ್ಟಂ ಸರ್ವಂ ಪೂರ್ಣಮಿಹೋಚ್ಯತೇ ।**
**ಪ್ರಜ್ಞಾ ಪ್ರಮತಿರುದ್ದಿಷ್ಟಾ ಪೂರ್ಣಪ್ರಜ್ಞಸ್ತತಃ ಸ್ಮೃತಃ ॥**

(ದಶ ಎಂದರೆ ಸರ್ವ. ಸರ್ವ ಎಂದರೆ ಪೂರ್ಣ. ಪ್ರಮತಿ ಎಂದರೆ ಪ್ರಜ್ಞಾ ಆದ್ದರಿಂದ ದಶ ಪ್ರಮತಿ ಎಂದರೆ ಪೂರ್ಣಪ್ರಜ್ಞ ಎಂದರ್ಥ) ಎಂಬ ಸ್ಮೃತಿಯಿಂದಲೂ ಮತ್ತು 'ದಶದಶತಃ ತತ್ ಶತಂ' (ಹತ್ತಕ್ಕೆ ಹತ್ತರಿಂದ ಗುಣಿಸಿದರೆ ನೂರು. ಇದೇ ರೀತಿ ಗುಣಕದಿಂದ ಸಾವಿರ ಮೊದಲಾದುದಾಗಿ ಅನಂತವಾಗುತ್ತದೆ) ಎಂಬ ಶ್ರುತಿಯಿಂದಲೂ ದಶ ಎಂದರೆ ಪೂರ್ಣ. ಮತಿ ಎಂದರೆ ಬುದ್ಧಿ. ಅದು ಭಗವದ್ವಿಷಯಕವಾದ್ದರಿಂದ ಪ್ರಕೃಷ್ಟವಾಗಿ ಪ್ರಮತಿ ಎನಿಸುತ್ತದೆ. ಹೀಗೆ ದಶ (ಪೂರ್ಣವಾದ) ಪ್ರಮತಿ (ಪ್ರಜ್ಞೆ) ವುಳ್ಳವರು ಎಂಬ ವ್ಯುತ್ಪತ್ತಿಯಿಂದ ದಶಪ್ರಮತಿ ಪದಕ್ಕೆ ಪೂರ್ಣಪ್ರಜ್ಞ ಎಂದು ಅರ್ಥ.

'ಬಹುಲಂ ಛಂದಸಿ ಅಮಾಜ ಯೋಗೇಽಪಿ' (ಮಾ ಅಭೂತ್ ಎಂದಿರುವಾಗ, ಮಾಜ ಇರುವುದರಿಂದ ಅಭೂತ್ ಎಂಬಲ್ಲಿ ಅಕಾರವು ಇಲ್ಲದಂತೆ ಮಾಭೂತ್ ಎಂದು ಪ್ರಯೋಗಿಸಬೇಕು. ಆದರೆ ವೇದದಲ್ಲಿ ಮಾಜ ಇಲ್ಲದಿದ್ದರೂ ಪ್ರಾಯಃ ಅಕಾರವಿಲ್ಲದ ಪ್ರಯೋಗವಿರುತ್ತದೆ) ಎಂಬ ವಚನ ಇರುವುದರಿಂದ ಅಜನಯಂತ ಎಂದಿರಬೇಕಾದದ್ದು 'ಜನಯಂತ' ಎಂದಾಗಿದೆ. ॥ ೧೫೬ ॥

**ನಿರ್ಯದೀಂ ಬುಧ್ನಾನ್ಮಹಿಷಸ್ಯ ವರ್ಪಸ**
**ಈಶಾನಾಸಃ ಶವಸಾ ಕ್ರಂತ ಸೂರಯಃ ।**
**ಯದೀಮನುಪ್ರದಿವೋ ಮಧ್ವ ಆಧವೇ**
**ಗುಹಾ ಸಂತಂ ಮಾತರಿಶ್ವಾ ಮಥಾಯತಿ ॥ ೧೫೭ ॥**

**ಅರ್ಥ :- ಯತ್** ಯಾವ ಕಾರಣದಿಂದ, **ಮಧ್ವಃ ಮಾತರಿಶ್ವಾ** ಯಾವ ಮಧ್ವರೆಂಬ ವಾಯುದೇವರು, **ಈಂ** ಹಿಂದೆ ಹೇಳಿದಂತೆ ಜ್ಞಾನಪೂರಣೆಗಾಗಿ, **ಪ್ರದಿವಃ** ಅನುಪ್ರಕೃಷ್ಟ ಬುದ್ಧಿಪ್ರಕಾಶವುಳ್ಳ ರುದ್ರಾದಿ ದೇವತೆಗಳನ್ನು ಕುರಿತು, **ಗುಹಾ ಸಂತಂ** ಹೃದಯಗುಹೆಯಲ್ಲಿ ಅಡಗಿರುವ ಪರಮಾತ್ಮನನ್ನು **ಆಥವೇ** ಅವನ ಸರ್ವೋತ್ತಮತ್ವ ವಿಷಯದಲ್ಲಿ, **ಮಥಾಯತಿ** ವೇದಶಾಸ್ತ್ರ ವಿಮರ್ಶೆಯಿಂದ ತಿಳಿಸಿದ್ದಾರೋ, **ತತ್** ಆ ಕಾರಣದಿಂದ, **ಬುಧ್ನಾತ್** ಜ್ಞಾನರೂಪರಾದ ಅಥವಾ ಪಂಡಿತರನ್ನು ಸನ್ಮಾರ್ಗಕ್ಕೆ ಒಯ್ಯುವ, **ವರ್ಪಸಃ** ಸಜ್ಜನರನ್ನು ಸ್ವೀಕರಿಸುವ ಮತ್ತು ಪಾಲಿಸುವ, **ಮಹಿಷಸ್ಯ ಯತ್** ದೇವಶ್ರೇಷ್ಠರಾದ ವಾಯುದೇವರ ಯಾವ ಮೂರನೆಯ ಅವತಾರವಾದ ಮಧ್ವರ ದೆಶೆಯಿಂದ, **ಈಂ** ಈ ಪ್ರಕಾರವಾಗಿ, **ಈಶಾನಾಸಃ** ರುದ್ರಾದಿ ದೇವತೆಗಳು, **ಶವಸಾ** ಅನಾಯಾಸವಾಗಿ, **ಸೂರಯಃ ನಿಃ ಕ್ರಂತ** ಚೆನ್ನಾಗಿ ಜ್ಞಾನಿಗಳಾಗಿ ಮಾಡಲ್ಪಟ್ಟರೋ, ಅಂತಹ ರೂಪವನ್ನು ಶ್ರೀ, ಭೂ, ದುರ್ಗಾದೇವಿಯರು ಪಡೆದರು.

**ತಾತ್ಪರ್ಯ :-** ವಾಯುದೇವರು ಜ್ಞಾನರೂಪರು. ಪಂಡಿತರನ್ನು ಸನ್ಮಾರ್ಗದಲ್ಲಿ ತರುವರು. ಸಜ್ಜನರನ್ನು ತನ್ನವರೆಂದು ಸ್ವೀಕರಿಸಿ ಪಾಲಿಸುವರು. ಇವರ ಮೂರನೆ ಅವತಾರರಾದ ಶ್ರೀಮಧ್ವರು ರುದ್ರಾದಿದೇವತೆಗಳನ್ನುದ್ದೇಶಿಸಿ ವೇದಶಾಸ್ತ್ರ ವಿಮರ್ಶ ಪೂರ್ವಕವಾಗಿ ಹೃದಯ ಗುಹಾವಾಸಿಯಾದ ಭಗವಂತನನ್ನು ಸರ್ವೋತ್ತಮನೆಂದು ತಿಳಿಸಿದ್ದಾರೆ. ಆದ್ದರಿಂದಲೇ ರುದ್ರಾದಿಗಳು ಜ್ಞಾನಿಗಳಾದರು.

**ವಿಶೇಷ ವಿಷಯ :-** ಬುಧ್ನ ಶಬ್ದವು ಬುಧ ಅವಗಮನೇ (ಅವಗಮನ-ಜ್ಞಾನ) ಧಾತುವಿನಿಂದ ನಿಷ್ಪನ್ನವಾಗಿದೆ. ಆದ್ದರಿಂದ 'ಬುಧ್ನಾತ್' ಎಂಬ ಪದಕ್ಕೆ 'ಜ್ಞಾನ ರೂಪರಾದ' ಎಂದರ್ಥ. ಅಥವಾ 'ಬುಧಃ ಪಂಡಿತಾನ್ ನಯತೀತಿ ಬುಧ್ನಃ' (ಪಂಡಿತರನ್ನು ಸನ್ಮಾರ್ಗದಲ್ಲಿ ನಡೆಸುವವರು) ಎಂದು ವ್ಯುತ್ಪತ್ತಿ ಮಾಡಬಹುದು.

ವರ್ಪಸಃ ಎಂಬಲ್ಲಿಯೂ 'ವರಯತಿ ಪಾಲಯತಿ' ಎಂಬ ವ್ಯುತ್ಪತ್ತಿಯಿಂದ ವೃ ಮತ್ತು ಪಾಲ ಧಾತುಗಳಿಗೆ ಕರ್ತ ಎಂಬ ಅರ್ಥದಲ್ಲಿ ಡಸುನ್ ಪ್ರತ್ಯಯ ಬಂದು ವರ್ಪಸ್ ಶಬ್ದ ನಿಷ್ಪತ್ತಿಯಾಗಿದೆ. ವರ್ಪಸಃ' ಎಂಬ ಪದವು ವರ್ಪಸ್ ಶಬ್ದದ ಪಂಚಮೀವಿಭಕ್ತ್ಯಂತ ರೂಪ.

'ಬಹುವಚನಂ ಆದ್ಯರ್ಥೇ' (ಬಹುವಚನಕ್ಕೆ ಆದಿ ಎಂಬ ಅರ್ಥವಿದೆ) ಎಂಮ ವಚನದಂತೆ ಈಶಾನಾಸಃ ಎಂದರೆ ರುದ್ರಾದಿ ದೇವತೆಗಳು ಎಂದರ್ಥ,

'ಗುಹಾ' ಎಂಬ ಪದವು ಸಪ್ತಮೀವಿಭಕ್ತ್ಯಂತ ಪದ. ಸಪ್ತಮೀ ವಿಭಕ್ತಿಯು ಲೋಪವಾಗಿ ಗುಹಾ ಎಂದಾಗಿದೆ.

'ಆಧವೇ' ಎಂಬಲ್ಲಿ 'ಆ' ಎಂದರೆ 'ಸಮಗ್ರ' ಎಂದರ್ಥ. 'ಧವ' ಪದಕ್ಕೆ 'ಧವಃ ಪ್ರಿಯಃ ಪತಿಃ ಭರ್ತಾ' ಎಂಬ ಅನುಶಾಸನದ ಪ್ರಕಾರ 'ಪತಿ' ಎಂದರ್ಥ. 'ಭಾವಪ್ರಧಾನ ನಿರ್ದೇಶ'ದಿಂದ (ಧರ್ಮಿವಾಚಕ ಪದವನ್ನು ಪ್ರಯೋಗಿಸಿದ್ದರೂ ಧರ್ಮವೇ ಪ್ರಧಾನವಾಗಿ ವಾಚ್ಯವೆಂಬ ಉದ್ದೇಶವಿರುತ್ತದೆ ಆದ್ದರಿಂದ) ಧವ ಪದಕ್ಕೆ ಪತಿತ್ವ ಎಂದರ್ಥ. ಒಟ್ಟಿನಲ್ಲಿ 'ಸಮಗ್ರ ಪ್ರಪಂಚದ ಪತಿತ್ವ ವಿಷಯದಲ್ಲಿ' ಎಂದು ಅರ್ಥವಾಗುತ್ತದೆ.

'ಭಗವಂತನು ಅನಂತವೇದ ವಿಷಯನು ಎಂದು ಮಥನ ಮಾಡಿದ್ದಾರೆ' ಎಂಬ ಅರ್ಥವು ಅಭಿಪ್ರೇತವಾದ್ದರಿಂದ ಇಂತಹ ಮಥನವು ಮಹತ್ವ ಪೂರ್ಣವಾದ್ದರಿಂದ ಇದನ್ನು ಸೂಚಿಸಲು ಮಥಯತಿ ಎಂಬ ಪದದಲ್ಲಿ ದೀರ್ಘಬಂಧು ಮಥಾಯತಿ ಎಂದಾಗಿದೆ. ಅಪಾರವೇದ ರಾಶಿಯನ್ನು ವಿಮರ್ಶೆಮಾಡಿ ಹರಿಸರ್ವೋತ್ತಮತ್ವವನ್ನು ಸ್ಥಾಪಿಸಿದ್ದಾರೆಂದು ಅಭಿಪ್ರಾಯ. ॥ ೧೫೭ ॥

**ಪ್ರ ಯತ್ ಪಿತುಃ ಪರಮಾನ್ನೀಯತೇ ಪರ್ಯಾ**
**ಪೃಕ್ಷುಧೋ ವೀರುಧೋ ದಂಸು ರೋಹತಿ ।**
**ಉಭಾ ಯದಸ್ಯ ಜನುಷಂ ಯದಿನ್ವತ**
**ಆದಿದ್ಯವಿಷ್ಠೋ ಅಭವತ್ ಘೃಣಾ ಶುಚಿಃ ॥ ೧೫೮ ॥**

**ಅರ್ಥ** :- **ಯತ್** ಯಾವ ಕಾರಣದಿಂದ, **ಪರಮಾತ್** ಉತ್ತಮನಾದ, **ಪಿತುಃ** ತಂದೆಯಾದ ನಾರಾಯಣನಿಂದ, **ಆ** ಚನ್ನಾಗಿ, **ಪರಿ** ಎಲ್ಲ ಕಡೆಯಲ್ಲಿಯೂ, **ಪ್ರಣೀಯತೇ** ಪ್ರೇರಿಸಲ್ಪಡುತ್ತಾರೋ, **ಪೃಕ್ಷುಧಃ** ಹಸಿವೆಯಂತೆ ಪೀಡಿಸುವ ಪ್ರಶ್ನೆಗಳೆಂಬ, **ವೀರುಧಃ** ಬಳ್ಳಿಗಳನ್ನು **ದಂಸು ರೋಹತಿ** ಹಲ್ಲಿನಲ್ಲಿಡುತ್ತಾರೋ, **ಯತ್** ಯಾವ ಕಾರಣದಿಂದ, **ಉಭಾ** ಲಕ್ಷ್ಮೀ ನಾರಾಯಣರಿಬ್ಬರು, **ಅಸ್ಯ ಜನುಷಂ** ಶ್ರೀಮಧ್ವರ ಜನ್ಮವನ್ನು, **ಯತ್** ಜ್ಞಾನದ

ಉದ್ದೇಶದಿಂದ, **ಇನ್ವತಃ** ಪ್ರತಿಯುಗದಲ್ಲಿ ಪ್ರೇರಿಸುವರೋ, **ತತ್** ಆ ಕಾರಣದಿಂದ, **ಆತ್ ಯುವಿಷ್ಠಃ** ಅಕಾರವಾಚ್ಯನಾದ ಭಗವಂತನಿಗಿಂತ ಕನಿಷ್ಠ ರಾದ ಮಧ್ವಾಚಾರ್ಯರು, **ಇತ್** ಈ ಪ್ರಕಾರವಾಗಿ, (ಈಗ ತೋರುವಂತೆ), **ಘೃಣಾ** ಕರುಣಾಶಾಲಿಗಳಾಗಿ, **ಶುಚಿಃ** ದೋಷದ ಅಪವಾದ ದಿಂದಲೂ ದೂರವಾಗಿದ್ದಾರೆ.

**ತಾತ್ಪರ್ಯ :-** ಶ್ರೀಮಧ್ವರು ತಂದೆಯಾದ ನಾರಾಯಣನ ಆದೇಶದಂತೆ ನಡೆಯುವವರು. ಎತ್ತು ಬಳ್ಳಿಗಳನ್ನು ತಿಂದು ಹಾಕುವಂತೆ ಎಲ್ಲ ಪ್ರಶ್ನೆಗಳನ್ನು ಇವರು ಖಂಡಿಸುವರು. ಲಕ್ಷ್ಮೀನಾರಾಯಣರ ಆಜ್ಞೆಯಿಂದ ಇವರು ಪ್ರತಿಯುಗದಲ್ಲಿ ಜ್ಞಾನ ಪ್ರಸಾರಕ್ಕಾಗಿ ಜನಿಸುವರು. ಈ ಕಾರಣದಿಂದ ಭಗವಂತನಿಗಿಂತ ಕನಿಷ್ಠರಾದ ಇವರು ದಯಾಮಯರು. ಹನುಮ ಭೀಮರಂತೆ ಭಗವದಾಜ್ಞೆ ಇಲ್ಲದ್ದರಿಂದ ಶತ್ರುಗಳನ್ನು ಸಂಹರಿಸದೆ ವಾದದಲ್ಲಿ ಮಾತಿನಿಂದಲೇ ಸೋಲಿಸಿದ್ದಾರೆ ಆದ್ದರಿಂದ ದೋಷದ ಆರೋಪಕ್ಕೂ ಇವರು ಹೊರತಾಗಿದ್ದಾರೆ.

**ವಿಶೇಷ ವಿಷಯ :-** 'ಪಿತುಃ ಆ ಪರಿ ಪ್ರಣೀಯತೇ' (ತಂದೆಯಾದ ಭಗವಂತನಿಂದ ಎಲ್ಲ ಕಾರ್ಯದಲ್ಲಿಯೂ ಪ್ರೇರಿಸಲ್ಪಟ್ಟಿದ್ದಾರೆ) ಅಂದರೆ 'ಪಾಜಕ ಕ್ಷೇತ್ರದಲ್ಲಿ ಅವತರಿಸು. ಬ್ರಹ್ಮಸೂತ್ರ ದಶೋಪನಿಷತ್ತುಗಳಿಗೆ ಭಾಷ್ಯವನ್ನು ರಚಿಸು, ಉಡುಪಿಯಲ್ಲಿ ಕೃಷ್ಣ ಪ್ರತಿಷ್ಠೆ ಮಾಡು. ಸೇತು (ರಾಮೇಶ್ವರ) ದರ್ಶನಕ್ಕಾಗಿ ಹೋಗಿ ಅಲ್ಲಿ ದುರ್ಜನರನ್ನು ಜಯಿಸು. ಸಜ್ಜನರಲ್ಲಿ ಜ್ಞಾನಪ್ರಸಾರ ಮಾಡು. ಬದರಿಗೆ ಹೋಗು. ವ್ಯಾಸರನ್ನು ಸಂದರ್ಶಿಸು. ಮಾರ್ಗ ಮಧ್ಯದಲ್ಲಿ ಸಜ್ಜನರನ್ನು ಅನುಗ್ರಹಿಸು' ಇತ್ಯಾದಿಯಾಗಿ ಪ್ರೇರಿಸಲ್ಪಟ್ಟಿದ್ದಾರೆ. ಎಂದರ್ಥ.

'ಪೃಕ್ಷುಧೋ ವೀರುಧಃ' ಎಂಬಲ್ಲಿ ಪ್ರಶ್ನೆಗಳನ್ನು ಬಳ್ಳಿಗಳಿಗೆ ಹೋಲಿಸಿದ್ದಾರೆ ಏಕೆಂದರೆ ಬಳ್ಳಿಗಳಂತೆ ಪ್ರಶ್ನೆಗಳೂ ಪುನಃ ಪುನಃ ಉದ್ಭವಿಸುತ್ತವೆ.

ದಂಸು ರೋಹತಿ ಎಂಬಲ್ಲಿ ರೋಹತಿ ಎಂಬ ಕ್ರಿಯಾಪದವು ಣಿಚ್ ಪ್ರತ್ಯಯದ ಅರ್ಥವನ್ನೊಳಗೊಂಡು ರೋಪಯತಿ ಎಂಬ ಅರ್ಥವುಳ್ಳದ್ದಾಗಿದೆ ಎಂದಿಟ್ಟುಕೊಳ್ಳಬೇಕು. ಆಗ 'ಹಲ್ಲಿನಲ್ಲಿಡುತ್ತಾರೆ' ಎಂದು ಅರ್ಥವು ಯುಕ್ತವಾಗುತ್ತದೆ.

ಇಲ್ಲಿ 'ಹಲ್ಲುಗಳಲ್ಲಿ' ಎಂಬ ಅರ್ಥದಲ್ಲಿ 'ದತ್ಸು' ಎಂದು ಪ್ರಯೋಗಿಸ ಬೇಕಾಗಿತ್ತು ಆದರೆ 'ವರ್ಣ ವಿಕಾರ'ವಾಗಿ 'ಪುಂಸು' ಎಂಬ ಪದದಂತೆ 'ದಂಸು' ಎಂದಾಗಿದೆ ಎಂದು ತಿಳಿಯಬೇಕು.

ಈ ಮಂತ್ರದಲ್ಲಿ 'ಯದಿನ್ವತಃ' ಎಂಬಲ್ಲಿರುವ ಯತ್ ಶಬ್ದವು 'ಯಾ ಪ್ರಾಪಣೇ' ಧಾತುವಿನಿಂದ ನಿಷ್ಪನ್ನವಾಗಿದೆ. 'ಯಾ' ಧಾತುವಿಗೆ (ಪ್ರಾಪಣ) ಗತಿ ಎಂಬ ಅರ್ಥವಿರುವುದರಿಂದ ಜ್ಞಾನವೆಂಬ ಅರ್ಥವೂ ಇದೆ. ಅಂತಹ ಧಾತುವಿನಿಂದ ನಿಷ್ಪನ್ನವಾದ್ದರಿಂದ 'ಯತ್' ಪದಕ್ಕೆ 'ಜ್ಞಾನವನ್ನುದ್ದೇಶಿಸಿ' ಎಂದು ಅರ್ಥಮಾಡಿದ್ದು ಯುಕ್ತವೇ ಆಗಿದೆ.॥ ೧೫೮ ॥

**ಆದಿನ್ಮಾತೃರಾವಿಶದ್ಯಾಸ್ವಾಶುಚಿರಹಿಂಸ್ಯಮಾನ**
**ಉರ್ವಿಯಾ ವಿವಾವೃಧೇ ।**
**ಅನು ಯತ್ ಪೂರ್ವಾ ಅರುಹತ್ ಸನಾಜುವೋ**
**ನಿ ನವ್ಯಸೀಷ್ವವರಾಸು ಧಾವತೇ ॥ ೧೫೯ ॥**

**ಅರ್ಥ :- ಯಾಸು** ಯಾವ ತಾಯಂದಿರಲ್ಲಿ, **ಉರ್ವಿಯಾ** ಶ್ರೇಷ್ಠವಾದ ತನ್ನ ಶಕ್ತಿಯಿಂದ, **ಆ** ಚೆನ್ನಾಗಿ, **ಶುಚಿಃ** ದುಷ್ಕರ್ಮದ ಸ್ಪರ್ಶವಿಲ್ಲದವರಾಗಿ, ಆದ್ದರಿಂದಲೇ **ಅಹಿಂಸ್ಯಮಾನಃ** ಪಾಪಕರ್ಮದಿಂದಾಗಲೀ, ಉದರದಲ್ಲಿರುವ ಜಂತುಗಳಿಂದಾಗಲೀ ಹಿಂಸೆ ಪಡೆಯದವರಾಗಿ, **ವವೃಧೇ** ಪ್ರಸವದವರೆಗೆ ಬೆಳೆದರೋ, **ಮಾತೄಃ** ಅಂತಹ ತಾಯಂದಿರನ್ನು **ಅತ್** ಅಕಾರವಾಚ್ಯನಾದ ಭಗವಂತನ ಆಜ್ಞೆಯಿಂದ, **ಇತ್** ಹಿಂದೆ ಹೇಳಿದಂತೆ, **ಆ** ತ್ರೇತಾ ದ್ವಾಪರ ಕಲಿಯುಗಗಳನ್ನು ಗುಡವನ್ನಾಗಿ ಮಾಡಿ, **ಆವಿಶತ್** ಪ್ರವೇಶಿಸಿದರು. **ಸನಾಜುವಃ** ಸನಾತನನಾದ ಭಗವಂತನನ್ನು ಪ್ರತಿಪಾದಿಸುವ, **ಪೂರ್ವಾಃ** ಋಗಾದಿ ಏಳು ವಿದ್ಯೆಗಳಲ್ಲಿ ಮೊದಲಿನವುಗಳಾದ ನಾಲ್ಕು ವೇದಗಳು, **ಯತ್** ಯಾವ ಕಾರಣದಿಂದ ನಿತ್ಯವಾಗಿವೆಯೋ, **ತತ್** ಆ ಕಾರಣದಿಂದ, **ಅನು** ವೇದಾರ್ಥ ಬೋಧಕವಾದ ಶಿಕ್ಷಾ, ಕಲ್ಪ, ವ್ಯಾಕರಣಾದಿಗಳನ್ನನುಸರಿಸಿ, **ಅರುಹತ್** ಸಾವಧಾನವಾಗಿ ವಿಮರ್ಶಿಸಿದರು. **ನಿನವ್ಯಸೀಷು** ಅತ್ಯಂತ ನೂತನವಾದ, **ಅವರಾಸು** ಪೌರುಷೇಯವಾದ್ದರಿಂದ ವೇದಗಳಿಗಿಂತ ನಿಕೃಷ್ಟಗಳಾದ ಪಂಚರಾತ್ರ ಭಾರತಾದಿಗಳನ್ನು, **ಧಾವತೇ** ಶೀಘ್ರವಾಗಿ ವ್ಯಾಖ್ಯಾನ ಮಾಡುತ್ತಾರೆ.

**ತಾತ್ಪರ್ಯ** :- ವಾಯುದೇವರು ತ್ರೇತಾದಿ ಮೂರು ಯುಗಗಳಲ್ಲಿಯೂ ಕ್ರಮವಾಗಿ ಅಂಜನಾ, ಕುಂತೀ, ಮಧ್ಯಗೇಹರ ಪತ್ನಿಯರಲ್ಲಿ ಪ್ರವೇಶಿಸಿ ಉತ್ಕೃಷ್ಟವಾದ ತಮ್ಮ ಶಕ್ತಿಯಿಂದಲೇ, ಯಾವುದೇ ಪಾಪಕರ್ಮದ ಸ್ಪರ್ಶವಿಲ್ಲದವರಾದ್ದರಿಂದ ತಾಯಂದಿರ ಉದರದಲ್ಲಿರುವ ಜಂತುಗಳಿಂದ ಹಿಂಸೆ ಪಡದೆ (ಗರ್ಭವಾಸ ದುಃಖವಿಲ್ಲದೇ) ಪ್ರಸವದ ತನಕ ಚನ್ನಾಗಿ ಬೆಳೆದಿದ್ದಾರೆ ಮತ್ತು ಅಪೌರುಷೇಯವಾದ ನಿತ್ಯವಾದ ಋಗಾದಿ ವಿದ್ಯೆಗಳನ್ನು ಮರ ಹತ್ತುವವರಂತೆ ಜಾಗರೂಕತೆಯಿಂದ ಸಾವಧಾನವಾಗಿ ಶಿಕ್ಷಾದಿ ಷಡಂಗಗಳಿಗನುಸಾರವಾಗಿ ವಿಮರ್ಶಿಸಿ ವ್ಯಾಖ್ಯಾನ ಮಾಡಿದ್ದಾರೆ. ವೇದಕ್ಕಿಂತ ನವೀನವಾದ, ಪೌರುಷೇಯ ವಾದ್ದರಿಂದ ವೇದಗಳಿಗಿಂತ ಅವರಗಳಾದ ಪಂಚರಾತ್ರಾದಿಗಳನ್ನು ವೇದದಂತೆ ಕಠಿಣವಲ್ಲವಾದ್ದರಿಂದ ಶೀಘ್ರದಲ್ಲಿ ವ್ಯಾಖ್ಯಾನ ಮಾಡಿದ್ದಾರೆ.

**ವಿಶೇಷ ವಿಷಯ** :- ಸನಾಜುವಃ — ಇದು ಜುಷೀ ಪ್ರೀತಿಸೇವನಯೋಃ ಎಂಬ ಧಾತುವಿನಿಂದ ನಿಷ್ಪನ್ನವಾದ ಶಬ್ದ 'ಸಜೂಃ' ಎಂಬ ಶಬ್ದದಂತೆ 'ಸನಾಜೂಃ' ಎಂಬ ಶಬ್ದವು ಉಕಾರಾಂತವಾಗಿದೆ. ಇದರ ದ್ವಿತೀಯಾ ವಿಭಕ್ತಿ ಬಹುವಚನದಲ್ಲಿ ಸನಾಜುವಃ ಎಂದಾಗುತ್ತದೆ.

ಅನು ಯತ್ ಪೂರ್ವಾ ಎಂಬಲ್ಲಿ ಯತ್ ಶಬ್ದ ಮಾತ್ರವಿದ್ದರೂ ಯತ್ತದೋರ್ನಿತ್ಯಸಂಬಂಧಃ (ಯತ್ ತದ್ ಶಬ್ದಗಳಿಗೆ ಯಾವಾಗಲೂ ಸಂಬಂಧವಿರುತ್ತದೆ) ಎಂಬ ನಿಯಮದ ಪ್ರಕಾರ ತದ್ ಶಬ್ದವನ್ನು ಇಟ್ಟುಕೊಳ್ಳಬೇಕು.

ವೇದಗಳಲ್ಲಿ ಅಪ್ರಸಿದ್ಧವಾದ ಅಲೌಕಿಕ ಪದಗಳು ಬಹಳ ಇರುತ್ತವೆ. ಹಾಗೂ ಸ್ವರ, ಸಂಹಿತೆ, ಮತ್ತು ಪದಗಳೂ ನಿಯತವಾಗಿರುತ್ತವೆ. ಆದ್ದರಿಂದ ಸ್ವಚ್ಛಂದವ್ಯಾಖ್ಯಾನವು ಅನುಚಿತವಾಗುವ ಪ್ರಯುಕ್ತ ಚೆನ್ನಾಗಿ ಆಲೋಚಿಸಿ ವ್ಯಾಖ್ಯಾನ ಮಾಡಬೇಕು. ಋಜುಯೋಗಿಗಳಾದ್ದರಿಂದ ವಾಯುದೇವರ ಜ್ಞಾನವು ಆಲೋಚಿಸಿದರೆ ಸರ್ವವಿಷಯಕವಾಗುವ ಕಾರಣ ಆಲೋಚಿಸಿ ವೇದಗಳನ್ನು ವ್ಯಾಖ್ಯಾನಮಾಡುತ್ತಾರೆ. ಇದನ್ನು ಸೂಚಿಸಲು 'ಅರುಹತ್' (ಏರಿದರು). ಎಂದು ಪ್ರಯೋಗಿಸಲಾಗಿದೆ. ಮರವನ್ನೇರುವವರು ಜಾಗರೂಕತೆಯಿಂದ ಆಲೋಚಿಸಿ ಏರುವಂತೆ, ಆಲೋಚಿಸಿ ವ್ಯಾಖ್ಯಾನ ಮಾಡುತ್ತಾರೆಂದು ಅಭಿಪ್ರಾಯ. ಪೌರುಷೇಯ ಗ್ರಂಥಗಳು ಕಠಿಣವಲ್ಲವಾದ್ದರಿಂದ ಶೀಘ್ರವಾಗಿ

ವ್ಯಾಖ್ಯಾನ ಮಾಡುತ್ತಾರೆ ಎಂದು ಸೂಚಿಸಲು 'ಧಾವತೇ' (ಓಡುತ್ತಾರೆ) ಎಂದು ಪ್ರಯೋಗಿಸಲಾಗಿದೆ.॥ ೧೫೯ ॥

**ಪೀಠಿಕೆ** :- ಹರಿಸರ್ವೋತ್ತಮತ್ವ, ವಾಯುಜೀವೋತ್ತಮತ್ವ ಮತ್ತು ತಾರತಮ್ಯದ ವಿಷಯದಲ್ಲಿ ಭಾರತದಲ್ಲಿರುವ ಪ್ರಮಾಣ ವಾಕ್ಯಗಳನ್ನು ಉದಾಹರಿಸುತ್ತಾರೆ —

**ಅಶ್ವಮೇಧಃ ಕ್ರತುಶ್ರೇಷ್ಠೋ ಜ್ಯೋತಿಃಶ್ರೇಷ್ಠೋ ದಿವಾಕರಃ ।**
**ಬ್ರಾಹ್ಮಣೋ ದ್ವಿಪದಾಂ ಶ್ರೇಷ್ಠೋ ದೇವಶ್ರೇಷ್ಠಸ್ತು ಮಾರುತಃ ॥ ೧೬೦ ॥**

**ಅರ್ಥ** :- **ಕ್ರತುಶ್ರೇಷ್ಠಃ** ಯಾಗಗಳಲ್ಲಿ ಶ್ರೇಷ್ಠವಾದದ್ದು **ಅಶ್ವಮೇಧಃ** ಅಶ್ವಮೇಧಯಾಗವು, **ಜ್ಯೋತಿಃಶ್ರೇಷ್ಠಃ** ತೇಜಸ್ಸುಗಳಲ್ಲಿ ಉತ್ತಮನು, **ದಿವಾಕರಃ** ಸೂರ್ಯನು. **ದ್ವಿಪದಾಂ ಶ್ರೇಷ್ಠಃ** ಮನುಷ್ಯರಲ್ಲಿ ಶ್ರೇಷ್ಠನು, **ಬ್ರಾಹ್ಮಣಃ** ಬ್ರಾಹ್ಮಣನು. **ದೇವಶ್ರೇಷ್ಠಸ್ತು** ದೇವತೆಗಳಲ್ಲಿ ಶ್ರೇಷ್ಠರಾದರೂ, **ಮಾರುತಃ** ವಾಯುದೇವರು.

**ತಾತ್ಪರ್ಯ** :- ಯಾಗಗಳಲ್ಲಿ ಅಶ್ವಮೇಧ, ತೇಜಸ್ಸುಗಳಲ್ಲಿ ಸೂರ್ಯ, ಮನುಷ್ಯರಲ್ಲಿ ಬ್ರಾಹ್ಮಣ, ದೇವತೆಗಳಲ್ಲಿ ವಾಯು - ಇವರು ಶ್ರೇಷ್ಠರು.॥೧೬೦॥

**ಬಲಮಿಂದ್ರಸ್ಯ ಗಿರಿಶೋ ಗಿರಿಶಸ್ಯ ಬಲಂ ಮರುತ್ ।**
**ಬಲಂ ತಸ್ಯ ಹರಿಃ ಸಾಕ್ಷಾತ್ ನ ಹರೇರ್ಬಲಮನ್ಯತಃ ॥ ೧೬೧ ॥**

**ಅರ್ಥ** :- **ಇಂದ್ರಸ್ಯ** ದೇವೇಂದ್ರನಿಗೆ, **ಗಿರಿಶಃ** ರುದ್ರನು, **ಬಲಂ** ಬಲಪ್ರದನು, **ಗಿರಿಶಸ್ಯ** ರುದ್ರನಿಗೆ, **ಮರುತ್** ವಾಯುದೇವರು, **ಬಲಂ** ಬಲಪ್ರದರು, **ತಸ್ಯ** ಆ ವಾಯುದೇವರಿಗೆ, **ಸಾಕ್ಷಾತ್ ಹರಿಃ** ಸಾಕ್ಷಾತ್ ನಾರಾಯಣನು, **ಬಲಂ** ಬಲಪ್ರದನು, **ಹರೇಃ ಬಲಂ** ಭಗವಂತನ ಬಲವು, **ನ ಅನ್ಯತಃ** ಬೇರೆಯವರಿಂದಲ್ಲ.॥ ೧೬೧ ॥

**ವಾಯುರ್ಭೀಮೋ ಭೀಮನಾದೋ ಮಹೌಜಾಃ**
**ಸರ್ವೇಷಾಂ ಚ ಪ್ರಾಣಿನಾಂ ಪ್ರಾಣಭೂತಃ ।**
**ಅನಾವೃತ್ತಿರ್ದೇಹಿನಾಂ ದೇಹಪಾತೇ**
**ತಸ್ಮಾದ್ವಾಯುರ್ದೇವದೇವೋ ವಿಶಿಷ್ಟಃ ॥ ೧೬೨ ॥**

**ಅರ್ಥ** :- **ದೇಹಿನಾಂ** ಜೀವರ, **ದೇಹಪಾತೇ** ದೇಹಪತನವಾಗುತ್ತಿರಲು, **ಅನಾವೃತ್ತಿಃ ಅನ** ವಾಯುದೇವರ, **ಆವೃತ್ತಿಃ** ದೇಹದಲ್ಲಿ ಇಲ್ಲದಿರುವಿಕೆಯು, **ದೃಶ್ಯತೇ** ಕಂಡಿದೆ, **ತಸ್ಮಾತ್** ಆದ್ದರಿಂದ, **ದೇವದೇವಃ** ದೇವತೆಗಳಿಗೂ ದೇವನಾದ, **ಭೀಮಃ** ಭಯಂಕರನಾದ, **ಭೀಮನಾದಃ** ಯಮಭಟರಿಗೂ ಭಯಂಕರವಾದ ಪ್ರಾಣಘೋಷವೆಂಬ ನಾದವುಳ್ಳ, **ಮಹೌಜಾಃ** ಮಹಾ ಪರಾಕ್ರಮಶಾಲಿಯಾದ, **ಸರ್ವೇಷಾಂ ಪ್ರಾಣಿನಾಂ** ಎಲ್ಲ ಪ್ರಾಣಿಗಳಿಗೂ, **ಪ್ರಾಣಭೂತಃ** ಶ್ವಾಸಕ್ಕೆ ಅಭಿಮಾನಿಯಾದ, **ವಾಯುಃ** ವಾಯುದೇವರು, **ವಿಶಿಷ್ಟಃ** ದೇವತೆಗಳೇ ಮೊದಲಾದ ಸಕಲ ಜೀವರಿಗಿಂತಲೂ ಉತ್ತಮರು.

**ತಾತ್ಪರ್ಯ** :- (ವಾದಿರಾಜೀಯ ಟಿಪ್ಪಣಿಗೆ ಅನುಸಾರವಾಗಿ) ಜೀವರ ದೇಹ ಪತನವಾದಾಗ ಆ ದೇಹದಲ್ಲಿ ವಾಯುದೇವರು ಇಲ್ಲದಿರುವುದು ಕಂಡಿದೆ. ಇದರಿಂದ ದೇಹದಲ್ಲಿ ವಾಯುದೇರಿಲ್ಲದಿರುವಾಗಲೇ ದೇಹಪತನ ವಾಗುವುದು ಎಂದಾಯಿತು. ದೇಹ ಪತನವಾದ ಮೇಲೆ ಜೀವನವೂ ಇರುವುದಿಲ್ಲವಾದ್ದರಿಂದ ವಾಯುದೇವರಿಲ್ಲದೆ ಜೀವನವಿಲ್ಲ ಎಂದು ವ್ಯತಿರೇಕ ನಿಯಮವು ಸಿದ್ಧವಾಗುತ್ತದೆ. ಆದರೆ ದೇಹದಲ್ಲಿ ಕಿವುಡುತನ ಕುರುಡುತನ ಮೊದಲಾದ ಅವಸ್ಥೆಗಳಲ್ಲಿ ಚಕ್ಷುರಾದಿ ಅಭಿಮಾನಿ ದೇವತೆಗಳು ಇರುವುದಿಲ್ಲ. ಆದರೂ ವಾಯುದೇವರಿದ್ದರೆ ಕಿವುಡಾಗಿ ಕುರುಡಾಗಿ ಜೀವನವಂತೂ ನಡೆದೇ ಇರುತ್ತದೆ. ಆದ್ದರಿಂದ ಇತರ ಇಂದ್ರಿಯಾಭಿಮಾನಿ ದೇವತೆಗಳ ವಿಷಯದಲ್ಲಿ, ಅವರಿಲ್ಲದಿದ್ದರೆ ಜೀವನವಿಲ್ಲ ಎಂಬ ನಿಯಮವೇನೂ ಇಲ್ಲ. ಮತ್ತು ದೇಹದಲ್ಲೇ ಇತರ ದೇವತೆಗಳಿಲ್ಲದಿದ್ದರೂ ಪ್ರಾಣದೇವರಿದ್ದರೆ ಕಿವುಡಾಗಿಯೋ ಮೂಕನಾಗಿಯೋ ಕುರುಡಾಗಿಯೋ ಜೀವನವಂತೂ ಕಂಡದ್ದರಿಂದ ಪ್ರಾಣ ದೇವರಿದ್ದರೆ ಮಾತ್ರ ಜೀವನ ಎಂಬ ಅನ್ವಯನಿಯಮವೂ ಇದೆ. ಆದರೆ ಇತರ ದೇವತೆಗಳಿಲ್ಲದಿದ್ದರೂ ಅದರ ಪರಿಣಾಮವಾಗಿ ಕುರುಡು ಕಿವುಡು ಇತ್ಯಾದಿ ಅವಸ್ಥೆ ಬಂದರೂ ಜೀವನವು ಇರುವುದರಿಂದ 'ಇತರ ದೇವತೆಗಳಿದ್ದರೆ ಮಾತ್ರ ಜೀವನ' ಎಂಬ ಅನ್ವಯ ನಿಯಮವು ಇತರ ದೇವತೆಗಳ ವಿಷಯದಲ್ಲಿಲ್ಲ. ಅಥವಾ, "ವಾಕ್ ಪ್ರಾವಿಶತ್ । ಅಶಯದೇವ । ಚಕ್ಷುಃ ಪ್ರಾವಿಶತ್ । ಅಶಯದೇವ । ಶ್ರೋತ್ರಂ ಪ್ರಾವಿಶತ್ । ಅಶಯದೇವ । ಮನಃ ಪ್ರಾವಿಶತ್ । ಅಶಯದೇವ ।" (ಪ್ರಾಣದೇವರಿಲ್ಲದೇ ಬಿದ್ದ ದೇಹದಲ್ಲಿ) ವಾಗಭಿಮಾನಿಯು ಪ್ರವೇಶಿಸಿದನು. ಶರೀರವು ಮಲಗಿಯೇ ಇತ್ತು. ಚಕ್ಷುರಭಿಮಾನಿ

ವ್ಯಾಖ್ಯಾನ ಮಾಡುತ್ತಾರೆ ಎಂದು ಸೂಚಿಸಲು 'ಧಾವತೇ' (ಓಡುತ್ತಾರೆ) ಎಂದು ಪ್ರಯೋಗಿಸಲಾಗಿದೆ.॥ ೧೫೯ ॥

**ಪೀಠಿಕೆ** :- ಹರಿಸರ್ವೋತ್ತಮತ್ವ, ವಾಯುಜೀವೋತ್ತಮತ್ವ ಮತ್ತು ತಾರತಮ್ಯದ ವಿಷಯದಲ್ಲಿ ಭಾರತದಲ್ಲಿರುವ ಪ್ರಮಾಣ ವಾಕ್ಯಗಳನ್ನು ಉದಾಹರಿಸುತ್ತಾರೆ —

**ಅಶ್ವಮೇಧಃ ಕ್ರತುಶ್ರೇಷ್ಠೋ ಜ್ಯೋತಿಃಶ್ರೇಷ್ಠೋ ದಿವಾಕರಃ ।**
**ಬ್ರಾಹ್ಮಣೋ ದ್ವಿಪದಾಂ ಶ್ರೇಷ್ಠೋ ದೇವಶ್ರೇಷ್ಠಸ್ತು ಮಾರುತಃ ॥ ೧೬೦ ॥**

**ಅರ್ಥ** :- **ಕ್ರತುಶ್ರೇಷ್ಠಃ** ಯಾಗಗಳಲ್ಲಿ ಶ್ರೇಷ್ಠವಾದದ್ದು **ಅಶ್ವಮೇಧಃ** ಅಶ್ವಮೇಧಯಾಗವು, **ಜ್ಯೋತಿಃಶ್ರೇಷ್ಠಃ** ತೇಜಸ್ಸುಗಳಲ್ಲಿ ಉತ್ತಮನು, **ದಿವಾಕರಃ** ಸೂರ್ಯನು. **ದ್ವಿಪದಾಂ ಶ್ರೇಷ್ಠಃ** ಮನುಷ್ಯರಲ್ಲಿ ಶ್ರೇಷ್ಠನು, **ಬ್ರಾಹ್ಮಣಃ** ಬ್ರಾಹ್ಮಣನು. **ದೇವಶ್ರೇಷ್ಠಸ್ತು** ದೇವತೆಗಳಲ್ಲಿ ಶ್ರೇಷ್ಠರಾದರೂ, **ಮಾರುತಃ** ವಾಯುದೇವರು.

**ತಾತ್ಪರ್ಯ** :- ಯಾಗಗಳಲ್ಲಿ ಅಶ್ವಮೇಧ, ತೇಜಸ್ಸುಗಳಲ್ಲಿ ಸೂರ್ಯ, ಮನುಷ್ಯರಲ್ಲಿ ಬ್ರಾಹ್ಮಣ, ದೇವತೆಗಳಲ್ಲಿ ವಾಯು - ಇವರು ಶ್ರೇಷ್ಠರು.॥೧೬೦॥

**ಬಲಮಿಂದ್ರಸ್ಯ ಗಿರಿಶೋ ಗಿರಿಶಸ್ಯ ಬಲಂ ಮರುತ್ ।**
**ಬಲಂ ತಸ್ಯ ಹರಿಃ ಸಾಕ್ಷಾತ್ ನ ಹರೇರ್ಬಲಮನ್ಯತಃ ॥ ೧೬೧ ॥**

**ಅರ್ಥ** :- **ಇಂದ್ರಸ್ಯ** ದೇವೇಂದ್ರನಿಗೆ, **ಗಿರಿಶಃ** ರುದ್ರನು, **ಬಲಂ** ಬಲಪ್ರದನು, **ಗಿರಿಶಸ್ಯ** ರುದ್ರನಿಗೆ, **ಮರುತ್** ವಾಯುದೇವರು, **ಬಲಂ** ಬಲಪ್ರದರು, **ತಸ್ಯ** ಆ ವಾಯುದೇವರಿಗೆ, **ಸಾಕ್ಷಾತ್ ಹರಿಃ** ಸಾಕ್ಷಾತ್ ನಾರಾಯಣನು, **ಬಲಂ** ಬಲಪ್ರದನು, **ಹರೇಃ ಬಲಂ** ಭಗವಂತನ ಬಲವು, **ನ ಅನ್ಯತಃ** ಬೇರೆಯವರಿಂದಲ್ಲ.॥ ೧೯೧ ॥

**ವಾಯುರ್ಭೀಮೋ ಭೀಮನಾದೋ ಮಹೌಜಾಃ**
**ಸರ್ವೇಷಾಂ ಚ ಪ್ರಾಣಿನಾಂ ಪ್ರಾಣಭೂತಃ ।**
**ಅನಾವೃತ್ತಿರ್ದೇಹಿನಾಂ ದೇಹಪಾತೇ**
**ತಸ್ಮಾದ್ವಾಯುರ್ದೇವದೇವೋ ವಿಶಿಷ್ಟಃ ॥ ೧೬೨ ॥**

**ಅರ್ಥ** :- **ದೇಹಿನಾಂ** ಜೀವರ, **ದೇಹಪಾತೇ** ದೇಹಪತನವಾಗುತ್ತಿರಲು, **ಅನಾವೃತ್ತಿಃ** **ಅನ** ವಾಯುದೇವರ, **ಆವೃತ್ತಿಃ** ದೇಹದಲ್ಲಿ ಇಲ್ಲದಿರುವಿಕೆಯು, **ದೃಶ್ಯತೇ** ಕಂಡಿದೆ, **ತಸ್ಮಾತ್** ಆದ್ದರಿಂದ, **ದೇವದೇವಃ** ದೇವತೆಗಳಿಗೂ ದೇವನಾದ, **ಭೀಮಃ** ಭಯಂಕರನಾದ, **ಭೀಮನಾದಃ** ಯಮಭಟರಿಗೂ ಭಯಂಕರವಾದ ಪ್ರಾಣಘೋಷವೆಂಬ ನಾದವುಳ್ಳ, **ಮಹೌಜಾಃ** ಮಹಾ ಪರಾಕ್ರಮಶಾಲಿಯಾದ, **ಸರ್ವೇಷಾಂ** **ಪ್ರಾಣಿನಾಂ** ಎಲ್ಲ ಪ್ರಾಣಿಗಳಿಗೂ, **ಪ್ರಾಣಭೂತಃ** ಶ್ವಾಸಕ್ಕೆ ಅಭಿಮಾನಿಯಾದ, **ವಾಯುಃ** ವಾಯುದೇವರು, **ವಿಶಿಷ್ಟಃ** ದೇವತೆಗಳೇ ಮೊದಲಾದ ಸಕಲ ಜೀವರಿಗಿಂತಲೂ ಉತ್ತಮರು.

**ತಾತ್ಪರ್ಯ** :- (ವಾದಿರಾಜೀಯ ಟಿಪ್ಪಣಿಗೆ ಅನುಸಾರವಾಗಿ) ಜೀವರ ದೇಹ ಪತನವಾದಾಗ ಆ ದೇಹದಲ್ಲಿ ವಾಯುದೇವರು ಇಲ್ಲದಿರುವುದು ಕಂಡಿದೆ. ಇದರಿಂದ ದೇಹದಲ್ಲಿ ವಾಯುದೇರಿಲ್ಲದಿರುವಾಗಲೇ ದೇಹಪತನ ವಾಗುವುದು ಎಂದಾಯಿತು. ದೇಹ ಪತನವಾದ ಮೇಲೆ ಜೀವನವೂ ಇರುವುದಿಲ್ಲವಾದ್ದರಿಂದ ವಾಯುದೇವರಿಲ್ಲದೆ ಜೀವನವಿಲ್ಲ ಎಂದು ವ್ಯತಿರೇಕ ನಿಯಮವು ಸಿದ್ಧವಾಗುತ್ತದೆ. ಆದರೆ ದೇಹದಲ್ಲಿ ಕಿವುಡುತನ ಕುರುಡುತನ ಮೊದಲಾದ ಅವಸ್ಥೆಗಳಲ್ಲಿ ಚಕ್ಷುರಾದಿ ಅಭಿಮಾನಿ ದೇವತೆಗಳು ಇರುವುದಿಲ್ಲ. ಆದರೂ ವಾಯುದೇವರಿದ್ದರೆ ಕಿವುಡಾಗಿ ಕುರುಡಾಗಿ ಜೀವನವಂತೂ ನಡೆದೇ ಇರುತ್ತದೆ. ಆದ್ದರಿಂದ ಇತರ ಇಂದ್ರಿಯಾಭಿಮಾನಿ ದೇವತೆಗಳ ವಿಷಯದಲ್ಲಿ, ಅವರಿಲ್ಲದಿದ್ದರೆ ಜೀವನವಿಲ್ಲ ಎಂಬ ನಿಯಮವೇನೂ ಇಲ್ಲ. ಮತ್ತು ದೇಹದಲ್ಲೇ ಇತರ ದೇವತೆಗಳಿಲ್ಲದಿದ್ದರೂ ಪ್ರಾಣದೇವರಿದ್ದರೆ ಕಿವುಡಾಗಿಯೋ ಮೂಕನಾಗಿಯೋ ಕುರುಡಾಗಿಯೋ ಜೀವನವಂತೂ ಕಂಡದ್ದರಿಂದ ಪ್ರಾಣ ದೇವರಿದ್ದರೆ ಮಾತ್ರ ಜೀವನ ಎಂಬ ಅನ್ವಯನಿಯಮವೂ ಇದೆ. ಆದರೆ ಇತರ ದೇವತೆಗಳಿಲ್ಲದಿದ್ದರೂ ಅದರ ಪರಿಣಾಮವಾಗಿ ಕುರುಡು ಕಿವುಡು ಇತ್ಯಾದಿ ಅವಸ್ಥೆ ಬಂದರೂ ಜೀವನವು ಇರುವುದರಿಂದ 'ಇತರ ದೇವತೆಗಳಿದ್ದರೆ ಮಾತ್ರ ಜೀವನ' ಎಂಬ ಅನ್ವಯ ನಿಯಮವು ಇತರ ದೇವತೆಗಳ ವಿಷಯದಲ್ಲಿಲ್ಲ. ಅಥವಾ, "ವಾಕ್ ಪ್ರಾವಿಶತ್ । ಅಶಯದೇವ । ಚಕ್ಷುಃ ಪ್ರಾವಿಶತ್ । ಅಶಯದೇವ । ಶ್ರೋತ್ರಂ ಪ್ರಾವಿಶತ್ । ಅಶಯದೇವ । ಮನಃ ಪ್ರಾವಿಶತ್ । ಅಶಯದೇವ ।" (ಪ್ರಾಣದೇವರಿಲ್ಲದೇ ಬಿದ್ದ ದೇಹದಲ್ಲಿ) ವಾಗಭಿಮಾನಿಯು ಪ್ರವೇಶಿಸಿದನು. ಶರೀರವು ಮಲಗಿಯೇ ಇತ್ತು. ಚಕ್ಷುರಭಿಮಾನಿ

ಪ್ರವೇಶಿಸಿದನು. ಮಲಗಿಯೇ ಇತ್ತು. ಶ್ರೋತ್ರಾಭಿಮಾನಿಯು ಪ್ರವೇಶಿಸಿದನು ಮಲಗಿಯೇ ಇತ್ತು. ಮನೋಭಿಮಾನಿಯು ಪ್ರವೇಶಿಸಿದನು. (ಮಲಗಿಯೇ ಇತ್ತು) ಎಂಬ ಶ್ರುತಿಯು ಹೇಳುವಂತೆ ಪ್ರಾಣದೇವರಿಲ್ಲದಿರುವಾಗ ಬೇರೆ ದೇವತೆಗಳು ಪ್ರವೇಶಿಸಿದರೂ ದೇಹದಲ್ಲಿ ಜೀವನ ಕಂಡಿಲ್ಲವಾದ್ದರಿಂದ ಇತರ ದೇವತೆಗಳಿದ್ದರೆ ಜೀವನವಿರುತ್ತದೆ ಎಂಬ ಅನ್ವಯನಿಯಮವು ಅವರ ವಿಷಯದಲ್ಲಿ ಇಲ್ಲ. ಆದ್ದರಿಂದ ಪ್ರಾಣದೇವರೇ ಜೀವನಕ್ಕೆ ಮುಖ್ಯ ಕಾರಣೀಭೂತರಾಗಿರುವುದರಿಂದ ಇತರ ದೇವತೆಗಳಲ್ಲಿಲ್ಲದ ಮಹಾಮಹಿಮೆ ಉಳ್ಳವರಾದ್ದರಿಂದ ಅವರು ದೇವತೆಗಳಲ್ಲಿ ದೇವತೆಗಳು ಎನಿಸುವರು. ಅವರು ಶತ್ರು ಭಯಂಕರರು ಯಮಭಟರಿಗೂ ಭಯವನ್ನುಂಟು ಮಾಡುವ ಪ್ರಾಣಘೋಷ ಎಂಬ ಶಬ್ದವುಳ್ಳವರು. ಮಹಾಪರಾಕ್ರಮಿಗಳು. ಅವರು ಎಲ್ಲರ ಶ್ವಾಸಕ್ಕೆ ಅಭಿಮಾನಿಗಳೂ ಜೀವೋತ್ತಮರೂ ಆಗಿದ್ದಾರೆ.

**ವಿಶೇಷ ವಿಷಯ** :- ಈ ಶ್ಲೋಕದಲ್ಲಿ ಹೇಳಿರುವ ಪ್ರಮೇಯವು ಐತರೇಯೋಪನಿಷತ್ತಿನಲ್ಲಿಯೂ ಇದೆ —

'ಪ್ರಾಣ ಉದಕ್ರಾಮತ್ । ತತ್ ಪ್ರಾಣ ಉತ್ಕ್ರಾಂತೇಽಪದ್ಯತ । ತದದೀರ್ಯತ । ಆಶಾರೀತೀ ತಚ್ಛರೀರಮಭವತ್ ।' (ಪ್ರಾಣದೇವರು ದೇಹದಿಂದ ಹೊರಗೆ ಹೋದರು. ಪ್ರಾಣದೇವರು ಹೋದಾಗ ಆ ದೇಹವು ಬಿದ್ದಿತು. ಶೀರ್ಣವಾಗಲು (ನಶಿಸಲು) ಆರಂಭಿಸಿತು. ಶೀರ್ಣವಾದ್ದರಿಂದಲೇ ಆ ದೇಹವು ಶರೀರವೆನಿಸಿತು).

'ಪ್ರಾಣಃ ಪ್ರಾವಿಶತ್ । ಪ್ರಾಣೇ ಪ್ರಪನ್ನೇ ಉದತಿಷ್ಠತ್ । (ಮುಖ್ಯಪ್ರಾಣನು ಪ್ರವೇಶಿಸಿದನು. ಮುಖ್ಯಪ್ರಾಣನು ಪ್ರವೇಶಿಸಿದಾಗ ಶರೀರವು ಎದ್ದಿತು) 'ತಂ ದೇವಾ ಅಬ್ರುವನ್ – ತ್ವಮುಕ್ಥಮಸಿ, ತ್ವಮಿದಂ ಸರ್ವಮಸಿ, ತವ ವಯಂ ಸ್ಮಃ, ತ್ವಮಸ್ಮಾಕಮಸಿ' (ಮುಖ್ಯಪ್ರಾಣನಿಗೆ ದೇವತೆಗಳು ಹೇಳಿದರು – 'ನೀನು ಉತ್ತಮನಾಗಿರುವಿ. ನೀನು ಈ ಜಗತ್ತಿಗೆ ಒಡೆಯನಾಗಿರುವಿ. ನಾವು ನಿನ್ನ ಸೇವಕರು. ನೀನು ನಮ್ಮ ಸ್ವಾಮಿ.' ಇಲ್ಲಿ ಶ್ರುತಿಯ ಅಪೇಕ್ಷಿತ ಭಾಗವನ್ನಷ್ಟೇ ಉದಾಹರಿಸಲಾಗಿದೆ. ಸಮಗ್ರ ಶ್ರುತಿಯನ್ನು ಐತರೇಯೋಪನಿಷತ್ತಿನಲ್ಲಿ ನೋಡಬಹುದು.

'ಅನಾವೃತ್ತಿ' ಎಂಬ ಪದಕ್ಕೆ 'ಅನಸ್ಯ ಆವೃತ್ತಿಃ' ಎಂದು ಒಂದು ರೀತಿಯಲ್ಲಿ ವಿಗ್ರಹಮಾಡಿ ಅದರ ತಾತ್ಪರ್ಯವನ್ನು ಮೇಲೆ ವಿವರಿಸಲಾಗಿದೆ. ಇನ್ನೊಂದು ರೀತಿಯಲ್ಲೂ ಅರ್ಥಮಾಡಬಹುದು — ನ ಆವೃತ್ತಿಃ ಅನಾವೃತ್ತಿಃ ಎಂದು ವಿಗ್ರಹ. ಜೀವರ ದೇಹಪತನವಾದಾಗ ಎಲ್ಲ ಇಂದ್ರಿಯಾಭಿಮಾನಿ ದೇವತೆಗಳು ಒಂದೊಂದಂಶದಿಂದ ತಮ್ಮ ಮೂಲರೂಪಕ್ಕೆ ಹೋಗಿ ಸೇರುತ್ತಾರೆ. ಆದರೆ ವಾಯುದೇವರಿಗೆ ಮಾತ್ರ ಒಂದಂಶದಿಂದಲೂ ಮೂಲರೂಪಕ್ಕೆ (ಆ ವೃತ್ತಿ) ಹೋಗಿ ಸೇರುವಿಕೆಯು ಇಲ್ಲ. ಅವರು ಮೊದಲಿನಂತೆಯೇ ಇದ್ದು ಜೀವನನ್ನೂ ಪರಮಾತ್ಮನನ್ನೂ ಹೆಗಲಲ್ಲಿ ಹೊತ್ತು ಇನ್ನೊಂದು ದೇಹವನ್ನು ಪ್ರವೇಶಿಸುತ್ತಾರೆ. ಆದ್ದರಿಂದಲೂ ದೇವದೇವೋ ವಿಶಿಷ್ಟಃ ಎನ್ನಲಾಗಿದೆ.॥ ೧೬೨ ॥

**ತತ್ತ್ವಜ್ಞಾನೇ ವಿಷ್ಣುಭಕ್ತೌ ಸ್ಥೈರ್ಯೇ ಧೈರ್ಯೇ ಪರಾಕ್ರಮೇ ।**
**ವೇಗೇ ಚ ಲಾಘವೇ ಚೈವ ಪ್ರಲಾಪಸ್ಯ ಚ ವರ್ಜನೇ ॥ ೧೬೩ ॥**

**ಭೀಮಸೇನಸಮೋ ನಾಸ್ತಿ ಸೇನಯೋರುಭಯೋರಪಿ ।**
**ಪಾಂಡಿತ್ಯೇ ಚ ಪಟುತ್ವೇ ಚ ಶೂರತ್ವೇಽಪಿ ಬಲೇಽಪಿ ಚ ॥ ೧೬೪ ॥**

**ಅರ್ಥ** :- **ತತ್ತ್ವಜ್ಞಾನೇ** ತತ್ವಜ್ಞಾನದ ವಿಷಯದಲ್ಲಿ, **ವಿಷ್ಣುಭಕ್ತೌ** ವಿಷ್ಣುಭಕ್ತಿಯ ವಿಷಯದಲ್ಲಿ, **ಧೈರ್ಯೇ** ಮನೋನಿಗ್ರಹದ ವಿಷಯದಲ್ಲಿ, **ಸ್ಥೈರ್ಯೇ** ದೇಹದ ಸ್ಥಿರತೆಯ ವಿಷಯದಲ್ಲಿ, **ಪರಾಕ್ರಮೇ** ಪರಾಕ್ರಮದ ವಿಷಯದಲ್ಲಿ **ವೇಗೇ ಚ** ವೇಗದ ವಿಷಯದಲ್ಲಿಯೂ, **ಲಾಘವೇ ಚೈವ** ಶರೀರ ಲಾಘವದ ವಿಷಯದಲ್ಲಿಯೂ **ಪ್ರಲಾಪಸ್ಯ ವರ್ಜನೇ ಚ** ವ್ಯರ್ಥವಚನದ ತ್ಯಾಗದ ವಿಷಯದಲ್ಲಿಯೂ, **ಪಾಂಡಿತ್ಯೇ ಚ** ಪಾಂಡಿತ್ಯದ ವಿಷಯದಲ್ಲೂ, **ಪಟುತ್ವೇ ಚ** ಚಾತುರ್ಯದ ವಿಷಯದಲ್ಲಿಯೂ, **ಶೂರತ್ವೇಽಪಿ** ಶೌರ್ಯದ ವಿಷಯದಲ್ಲೂ, **ಬಲೇಽಪಿ ಚ** ಬಲದ ವಿಷಯದಲ್ಲಿಯೂ, **ಉಭಯೋಃ ಅಪಿ ಸೇನಯೋಃ** ಎರಡು ಸೇನೆಗಳಲ್ಲಿಯೂ, **ಭೀಮಸೇನಸಮಃ ನಾಸ್ತಿ** ಭೀಮನಿಗೆ ಸದೃಶರಿಲ್ಲ.

**ತಾತ್ಪರ್ಯ** :- ತತ್ವಜ್ಞಾನ, ಹರಿಭಕ್ತಿ, ಧೈಯ, ಸ್ಥೈರ್ಯ, ಪರಾಕ್ರಮ ವೇಗವಾಗಿ ಓಡುವುದು, ಶರೀರ ಲಾಘವ, ವ್ಯರ್ಥಮಾತಾಡದಿರುವುದು, ಪಾಂಡಿತ್ಯ ಚಾತುರ್ಯ, ಶೌರ್ಯ, ಬಲಗಳಲ್ಲಿ ಭೀಮನಿಗೆ ಸಮಾನರಾದವರು ಪಾಂಡವ ಕೌರವ ಎರಡು ಸೈನ್ಯದಲ್ಲೂ ಇಲ್ಲ.॥ ೧೬೪ ॥

**ತಥಾ ಯುಧಿಷ್ಠಿರೇಣಾಪಿ ಭೀಮಂ ಪ್ರತಿ ಸಮೀರಿತಮ್ ।**
**'ಧರ್ಮಶ್ಚಾರ್ಥಶ್ಚ ಕಾಮಶ್ಚ ಮೋಕ್ಷಶ್ಚೈವ ಯಶೋ ಧ್ರುವಮ್ ॥ ೧೬೫ ॥**

**ತ್ವಯ್ಯಾಯತ್ತಮಿದಂ ಸರ್ವಂ ಸರ್ವ ಲೋಕಸ್ಯ ಭಾರತ ।'**

**ಅರ್ಥ** :- **ತಥಾ** ಹಾಗೆಯೇ, **ಯುಧಿಷ್ಠಿರೇಣೈವ** ಧರ್ಮರಾಜನಿಂದಲೇ, **ಭೀಮಂ ಪ್ರತಿ** ಭೀಮನನ್ನು ಕುರಿತು, **ಸಮೀರಿತಂ** ಹೇಳಲ್ಪಟ್ಟಿದೆ. **ಭಾರತ** ಭೀಮನೇ! **ಸರ್ವಲೋಕಸ್ಯ** ಎಲ್ಲ ಲೋಕದ, **ಧರ್ಮಶ್ಚ** ಧರ್ಮವೂ, **ಅರ್ಥಶ್ಚ** ಅರ್ಥವೂ, **ಕಾಮಶ್ಚ** ಕಾಮವೂ, **ಮೋಕ್ಷಶ್ಚೈವ** ಮೋಕ್ಷವೂ, **ಯಶಃ** ಕೀರ್ತಿಯೂ, **ಇದಂ ಸರ್ವಂ** ಇದೆಲ್ಲವೂ, **ಧ್ರುವಂ** ನಿಶ್ಚಯವಾಗಿ, **ತ್ವಯಿ ಆಯತ್ತಂ** ನಿನ್ನ ಅಧೀನದಲ್ಲಿದೆ.

**ತಾತ್ಪರ್ಯ** :- ಧರ್ಮರಾಜನು ಭೀಮನಿಗೆ ಹೇಳಿದ ವಚನವೂ ಇದೆ । ಭೀಮ! ಎಲ್ಲ ಲೋಕದ ಧರ್ಮಾರ್ಥಕಾಮ ಮೋಕ್ಷವೆಂಬ ಚತುರ್ವಿಧ ಪುರುಷಾರ್ಥಗಳೂ ಮತ್ತು ಕೀರ್ತಿ ಎಲ್ಲವೂ ನಿನ್ನ ಅಧೀನದಲ್ಲಿದೆ.॥ ೧೬೫ ॥

**ವಿರಾಟಪರ್ವಗಂ ಚಾಪಿ ವಚೋ ದುರ್ಯೋಧನಸ್ಯ ಹಿ ॥ ೧೬೬ ॥**

**ವೀರಾಣಾಂ ಶಾಸ್ತ್ರವಿದುಷಾಂ ಕೃತೀನಾಂ ತತ್ವನಿರ್ಣಯೇ ।**
**ಸತ್ವೇ ಬಾಹುಬಲೇ ಧೈರ್ಯೇ ಪ್ರಾಣೇ ಶಾರೀರಸಂಭವೇ ॥ ೧೬೭ ॥**

**ಸಾಂಪ್ರತಂ ಮಾನುಷೇ ಲೋಕೇ ಸದೈತ್ಯನರರಾಕ್ಷಸೇ ।**
**ಚತ್ವಾರಃ ಪ್ರಾಣಿನಾಂ ಶ್ರೇಷ್ಠಾಃ ಸಂಪೂರ್ಣಬಲಪೌರುಷಾಃ ॥ ೧೬೮ ॥**

**ಭೀಮಶ್ಚ ಬಲಭದ್ರಶ್ಚ ಮದ್ರರಾಜಶ್ಚ ವೀರ್ಯವಾನ್ ।**
**ಚತುರ್ಥಃ ಕೀಚಕಸ್ತೇಷಾಂ ಪಂಚಮಂ ನಾನುಶುಶ್ರುಮ ॥ ೧೬೯ ॥**

**ಅನ್ಯೋನ್ಯಾನಂತರಬಲಾಃ ಕ್ರಮಾದೇವ ಪ್ರಕೀರ್ತಿತಾಃ ।**

**ಅರ್ಥ** :- **ವಿರಾಟಪರ್ವಗಂ** ವಿರಾಟಪರ್ವದಲ್ಲಿರುವ, **ದುರ್ಯೋಧನಸ್ಯ ವಚಃ ಚಾಪಿ** ದುರ್ಯೋಧನನ ಮಾತೂ, **ಹಿ** ಪ್ರಸಿದ್ಧವಾಗಿದೆ, **ವೀರಾಣಾಂ** ವೀರರಾದ, **ಶಾಸ್ತ್ರ ವಿದುಷಾಂ** ಶಾಸ್ತ್ರವನ್ನು ತಿಳಿದವರ ಮಧ್ಯದಲ್ಲಿ, **ಕೃತೀನಾಂ ತತ್ವನಿರ್ಣಯೇ** ಕರ್ತವ್ಯಕರ್ಮಗಳ ನಿರ್ಧಾರದಲ್ಲಿ, **ಸತ್ವೇ** ಪ್ರಜ್ಞಾ ಬಲದ

ವಿಷಯದಲ್ಲಿ, **ಬಾಹುಬಲೇ** ಭುಜಬಲದ ವಿಷಯದಲ್ಲಿ, **ಧೈರ್ಯೇ** ಧೈರ್ಯದ ವಿಷಯದಲ್ಲಿ, **ಪ್ರಾಣೇ** ಪ್ರಕೃಷ್ಟಚೇಷ್ಟಾ ವಿಷಯದಲ್ಲಿ, **ಶಾರೀರಸಂಭವೇ** ಶರೀರಸಂಬಂಧಿಯಾದ ಉದ್ಗಮನ ಉತ್ಪತನ ಮೊದಲಾದ ಕ್ರಿಯೆಗಳ ಸಂಭಾವನಾ ವಿಷಯದಲ್ಲಿ, **ಸಾಂಪ್ರತಂ** ಈಗ **ಸದೈತ್ಯನರರಾಕ್ಷಸೇ** ದೈತ್ಯರು ನರರು ರಾಕ್ಷಸರಿಂದ ಕೂಡಿದ, **ಮಾನುಷೇ ಲೋಕೇ** ಮನುಷ್ಯ ಲೋಕದಲ್ಲಿ, **ಸಂಪೂರ್ಣ ಬಲಪೌರುಷಾಃ** ಪರಿಪೂರ್ಣವಾದ ಬಲ ಮತ್ತು ಪರಾಕ್ರಮವುಳ್ಳ, **ವೀರ್ಯವಾನ್** ಪರಾಕ್ರಮಶಾಲಿಯಾದ, **ಭೀಮಶ್ಚ** ಭೀಮನೂ, **ಬಲಭದ್ರಶ್ಚ** ಬಲರಾಮನೂ, **ಮದ್ರರಾಜಶ್ಚ** ಮದ್ರದೇಶಾಧಿಪತಿಯಾದ ಶಲ್ಯರಾಜನೂ, **ಚತುರ್ಥಃ ಕೀಚಕಃ** ನಾಲ್ಕನೆಯವನಾದ ಕೀಚಕನೂ ಎಂಬ, **ಚತ್ವಾರಃ** ನಾಲ್ಕು ಪುರುಷರು, **ಪ್ರಾಣಿನಾಂ ಶ್ರೇಷ್ಠಾಃ** ಪ್ರಾಣಿಗಳಲ್ಲಿ ಶ್ರೇಷ್ಠರು, **ತೇಷಾಂ ಪಂಚಮಂ** ಅವರಿಗೆ (ಅವರೊಂದಿಗೆ), ಐದನೆಯ ಪುರುಷನನ್ನು **ನ ಅನುಶುಶ್ರುಮ** ಕೇಳಿಲ್ಲ, **ಅನ್ಯೋನ್ಯಾನಂತರ ಬಲಾಃ** ಒಬ್ಬರ ನಂತರ ಇನ್ನೊಬ್ಬರು ಎಂಬ ಈ ಕ್ರಮದಿಂದ ಬಲವುಳ್ಳ, **ತೇ** ಅವರು, **ಕ್ರಮಾದೇವ** ತಾರತಮ್ಯ ಕ್ರಮದಿಂದಲೇ **ಪ್ರಕೀರ್ತಿತಾಃ** ಹೇಳಲ್ಪಟ್ಟಿದ್ದಾರೆ.

**ತಾತ್ಪರ್ಯ** :- ವಿರಾಟಪರ್ವದಲ್ಲಿ ದುರ್ಯೋಧನನ ಮಾತೂ ಹೀಗಿದೆ — ದೈತ್ಯ ರಾಕ್ಷಸ ಮಾನವರಿಂದ ಕೂಡಿದ ಈ ಲೋಕದಲ್ಲಿ ಶಸ್ತ್ರವಿದ್ಯೆಯನ್ನೂ ವೇದಾದಿ ಶಾಸ್ತ್ರವನ್ನೂ ಬಲ್ಲ ವೀರರ ಮಧ್ಯದಲ್ಲಿ ಕರ್ತವ್ಯದ ನಿರ್ಧಾರ, ಬಲ, ಧೈರ್ಯ, ಚೇಷ್ಟಾ, ದೈಹಿಕ ವ್ಯಾಪಾರಗಳು ಮುಂತಾದ ವಿಷಯದಲ್ಲಿ ಭೀಮ, ಬಲರಾಮ, ಶಲ್ಯ, ಕೀಚಕ ಈ ನಾಲ್ವರೇ ಶ್ರೇಷ್ಠರು. ಐದನೆಯವರನ್ನು ಕೇಳಿಲ್ಲ, ಇವರಲ್ಲಿಯೂ ಒಬ್ಬರ ನಂತರ ಇನ್ನೊಬ್ಬರು ತುಂಬ ತಾರತಮ್ಯದಿಂದಲೇ ಬಲಶಾಲಿಗಳಾಗಿದ್ದಾರೆ.

**ವಿಶೇಷ ವಿಷಯ** :- ವೀರಾಣಾಂ ಶಾಸ್ತ್ರವಿದುಷಾಂ ಎಂಬಲ್ಲಿ ಶಾಸ್ತ್ರ ಎಂದರೆ ಧನುರ್ವಿದ್ಯೆ ಎಂದು ಅರ್ಥ. ವೇದಾದಿಶಾಸ್ತ್ರ ಎಂದೂ ಅರ್ಥ ಮಾಡಬಹುದು. ಕೀಚಕನಿಗೆ ಆ ಶಾಸ್ತ್ರದಲ್ಲಿ ಅಧಿಕಾರವಿಲ್ಲದಿದ್ದರೂ ಭೀಮಾದಿ ಗಳಿಗೆ ಇದೆ. ಆದ್ದರಿಂದಲೇ ಭೀಮ ಬಲರಾಮ ಶಲ್ಯರಾಜರನ್ನು ಒಟ್ಟಿಗೇ ಹೇಳಿ 'ಚತುರ್ಥಃ ಕೀಚಕಃ' ಎಂದು ಕೀಚಕನನ್ನು ಪ್ರತ್ಯೇಕವಾಗಿ ಹೇಳಿದ್ದಾರೆ.

'ಕೃತೀನಾಂ ತತ್ವನಿರ್ಣಯೇ' ಎಂದರೆ ಕರ್ತವ್ಯನಿರ್ಧಾರದಲ್ಲಿ ಎಂದು ಅರ್ಥ. ಈ ವಿಷಯದಲ್ಲಿ ಭೀಮನು ಶ್ರೇಷ್ಠನಾದುದರಿಂದಲೇ ಅರಗಿನ ಮನೆಯಿಂದ ಹೊರ ಹೋಗುವ ನಿರ್ಧಾರವನ್ನು ಭೀಮನೇ ಕೈಗೊಂಡದ್ದು ಹೊರತು ಬೇರೆಯವರಲ್ಲ.

ಪ್ರಾಣಶಬ್ದವು ಅನ ಚೇಷ್ಟಾಯಾಂ ಎಂಬ ಧಾತುವಿನಿಂದ ನಿಷ್ಪನ್ನವಾದ್ದರಿಂದ ಪ್ರಾಣೇ ಎಂದರೆ ಪ್ರಕೃಷ್ಟಚೇಷ್ಟಾ ವಿಷಯದಲ್ಲಿ ಎಂದು ಅರ್ಥ.

॥ ೧೬೬-೧೯೬॥

**ವಚನಂ ವಾಸುದೇವಸ್ಯ ತಥೋದ್ಯೋಗಗತಂ ಪರಂ ॥ ೧೭೦ ॥**

**ಯತ್ ಕಿಂಚಾತ್ಮನಿ ಕಲ್ಯಾಣಂ ಸಂಭಾವಯಸಿ ಪಾಂಡವ ।**
**ಸಹಸ್ರಗುಣಮಪ್ಯೇತತ್ ತ್ವಯಿ ಸಂಭಾವಯಾಮ್ಯಹಮ್ ॥ ೧೭೧ ॥**

**ಯಾದೃಶೇ ಚ ಕುಲೇ ಜಾತಃ ಸರ್ವರಾಜಾಭಿಪೂಜಿತೇ ।**
**ಯಾದೃಶಾನಿ ಚ ಕರ್ಮಾಣಿ ಭೀಮ ತ್ವಮಸಿ ತಾದೃಶಃ ॥ ೧೭೨ ॥**

**ಅಸ್ಮಿನ್ ಯುದ್ಧೇ ಭೀಮಸೇನ ತ್ವಯಿ ಭಾರಃ ಸಮಾಹಿತಃ ।**
**ಧೂರರ್ಜುನೇನ ವೋಢವ್ಯಾ ವೋಢವ್ಯ ಇತರೋ ಜನಃ ॥ ೧೭೩ ॥**

**ಅರ್ಥ** :- **ತಥಾ** ಹಾಗೆಯೇ, **ಪರಂ** ಇನ್ನೊಂದು, **ಉದ್ಯೋಗಪರ್ವಗಂ** ಉದ್ಯೋಗ ಪರ್ವದಲ್ಲಿರುವ, **ವಾಸುದೇವಸ್ಯ ವಚನಂ** ಕೃಷ್ಣನ ವಚನವೂ ಇದೆ, **ಪಾಂಡವ** ಭೀಮನೇ! **ಆತ್ಮನಿ** ನಿನ್ನಲ್ಲಿ, **ಯತ್‌ಕಿಂಚ ಕಲ್ಯಾಣಂ** ಏನಾದರೂ ಜ್ಞಾನ ಭಕ್ತ್ಯಾದಿ ಶುಭ ಗುಣವನ್ನು, **ಸಂಭಾವಯಸಿ** ತಿಳಿದಿರುವಿಯೋ, **ಅಹಂ** ನಾನು, **ತ್ವಯಿ** ನಿನ್ನಲ್ಲಿ, **ಏತತ್** ಇದನ್ನು, **ಸಹಸ್ರಗುಣಮಪಿ** ಸಾವಿರ ಪಟ್ಟು ಹೆಚ್ಚಾದದ್ದನ್ನು, **ಸಂಭಾವಯಾಮಿ** ತಿಳಿಯುತ್ತೇನೆ. **ಭೀಮ** ಭೀಮನೆ! **ತ್ವಂ** ನೀನು, **ಸರ್ವರಾಜಾಭಿಪೂಜಿತೇ** ಎಲ್ಲ ರಾಜರಿಂದಲೂ ಪೂಜಿತವಾದ, **ಯಾದೃಶೇ ಚ ಕುಲೇ** ಎಂತಹ ಕುಲದಲ್ಲಿ, **ಜಾತಃ** ಹುಟ್ಟಿರುವೆಯೋ, **ತಾದೃಶಃ ಅಸಿ** ಆ ಕುಲಕ್ಕೆ ಯೋಗ್ಯನೇ ಆಗಿರುವಿ. **ಚ** ಮತ್ತು, **ಯಾದೃಶಾನಿ ಕರ್ಮಾಣಿ** ಆ ಕುಲದಲ್ಲಿ ಜನಿಸಿದವರೆಗೆ ಯಾವ ಕರ್ಮಗಳು ಯೊಗ್ಯವೋ, **ತಾದೃಶಃ ಅಸಿ** ಅಂತಹ ಕರ್ಮಗಳುಳ್ಳವನಾಗಿರುವಿ. **ಭೀಮಸೇನ** ಭೀಮಸೇನನೇ! **ಅಸ್ಮಿನ್ ಯುದ್ಧೇ** ಈ ಯುದ್ಧದಲ್ಲಿ, **ತ್ವಯಿ** ನಿನ್ನಲ್ಲಿ, **ಭಾರಃ** ಭಾರವು, **ಸಮಾಹಿತಃ**

ಇಡಲ್ಪಟ್ಟಿದೆ. **ಧೂಃ** ಯುಗಂಧರವು (ನೊಗವು), **ಅರ್ಜುನೇನ** ಅರ್ಜುನನಿಂದ, **ವೋಢವ್ಯಾ** ಹೊರಲ್ಪಡಬೇಕು. **ಇತರೋ ಜನಃ** ಬೇರೆ ಜನರು, **ತ್ವಯಾ** ನಿನ್ನಿಂದ **ವೋಢವ್ಯಃ** ಹೊರಲ್ಪಡಬೇಕು.

**ತಾತ್ಪರ್ಯ :-** ಕೃಷ್ಣನು ಭೀಮನಿಗೆ ಹೇಳಿದ ಮಾತು ಉದ್ಯೋಗ ಪರ್ವದಲ್ಲಿದೆ - ಭೀಮ! ನಿನ್ನಲ್ಲಿ ಭಕ್ತಿ ವೈರಾಗ್ಯಾದಿಗಳು ಎಷ್ಟು ಇದೆ ಎಂದು ನೀನು ಭಾವಿಸಿರುವೆಯೋ ಅದರ ಸಾವಿರ ಪಟ್ಟು ಹೆಚ್ಚಾಗಿಯೇ ಇದೆಯೆಂದು ನಾನು ಭಾವಿಸಿದ್ದೇನೆ.

ಸರ್ವ ರಾಜರಿಂದ ಗೌರವಿಸಲ್ಪಡುವ ಯಾವ ಕುಲದಲ್ಲಿ ನೀನು ಜನಿಸಿರುವೆಯೋ ಆ ಕುಲಕ್ಕೆ ಯೋಗ್ಯನೇ ನೀನು ಆಗಿದ್ದಿ. ಆ ಕುಲದಲ್ಲಿ ಜನಿಸಿದವರಿಗೆ ಯೋಗ್ಯವಾದ ಕರ್ಮಗಳನ್ನು ನೀನು ಮಾಡತಕ್ಕವನೇ ಆಗಿರುವಿ.

ಭೀಮ ! ಈ ಯುದ್ಧದ ಸಮಗ್ರ ಭಾರ ನಿನ್ನ ಮೇಲಿದೆ. ಅರ್ಜುನನು ನೊಗ ಹೊರುವ ಕುದುರೆಯಂತೆ ನಿನಗೆ ಅಂಗಭೂತನು. ಎಲ್ಲರ ಭಾರವನ್ನು ನೀನು ಹೊರಬೇಕು.॥ ೧೭೦-೧೭೩ ॥

**ಪೀಠಿಕೆ :-** ದ್ರೌಪದೀಸ್ವರೂಪವನ್ನು ವಿವರಿಸುವ ಶ್ಲೋಕವನ್ನು ಉದಾಹರಿಸುತ್ತಾರೆ -

**ಉಕ್ತಂ ಪುರಾಣೇ ಬ್ರಹ್ಮಾಂಡೇ ಬ್ರಹ್ಮಣಾ ನಾರದಾಯ ಚ ।**
**ಯಸ್ಯಾಃ ಪ್ರಸಾದಾತ್ ಪರಮಂ ವಿದಂತಿ**
**ಶೇಷಃ ಸುಪರ್ಣೋಽಗಿರಿಶಃ ಸುರೇಂದ್ರಃ ।**
**ಮಾತಾ ಚ ಯೈಷಾಂ ಪ್ರಥಮೈವ ಭಾರತೀ**
**ಸಾ ದ್ರೌಪದೀ ನಾಮ ಬಭೂವ ಭೂಮೌ ॥ ೧೭೪ ॥**

**ಅರ್ಥ :- ಬ್ರಹ್ಮಾಂಡೇ ಪುರಾಣೇ ಚ** ಬ್ರಹ್ಮಾಂಡಪುರಾಣದಲ್ಲಿಯೂ, **ಬ್ರಹ್ಮಣಾ** ಬ್ರಹ್ಮದೇವರಿಂದ, **ನಾರದಾಯ** ನಾರದರಿಗೆ, **ಉಕ್ತಂ** ಹೇಳಲ್ಪಟ್ಟ ವಚನವೂ ಇದೆ, **ಯಸ್ಯಾಃ** ಯಾರ, **ಪ್ರಸಾದಾತ್** ಅನುಗ್ರಹದಿಂದ, **ಶೇಷಃ** ಶೇಷದೇವರು, **ಸುಪರ್ಣಃ** ಗರುಡದೇವರು, **ಸುರೇಂದ್ರಃ** ದೇವೇಂದ್ರನು, **ಪರಮಂ** ಪರಮಾತ್ಮನನ್ನು, **ವಿದಂತಿ** ತಿಳಿಯುತ್ತಾರೋ, **ಯಾ** ಯಾರು, **ಏಷಾಂ**

ಶೇಷಾದಿಗಳಿಗೆ, **ಪ್ರಥಮೈವ ಮಾತಾ ಚ** ಮೊದಲನೆಯ ತಾಯಿಯೇ ಆಗಿರುವಳೋ, **ಸಾ ಭಾರತೀ** ಅಂತಹ ಭಾರತೀದೇವಿಯೇ, **ದ್ರೌಪದೀ ನಾಮ** ದ್ರೌಪದಿ ಎಂದು ಪ್ರಸಿದ್ಧಳಾಗಿ, **ಭೂಮೌ** ಭೂಮಿಯಲ್ಲಿ, **ಬಭೂವ** ಅವತರಿಸಿದಳು.

**ತಾತ್ಪರ್ಯ** :- ಬ್ರಹ್ಮಾಂಡ ಪುರಾಣದಲ್ಲಿ ಬ್ರಹ್ಮದೇವರು ನಾರದರಿಗೆ ಹೇಳಿದ ಈ ವಚನವು ದ್ರೌಪದೀದೇವಿಯ ಸ್ವರೂಪವನ್ನು ತಿಳಿಸುತ್ತದೆ- ಭಾರತೀದೇವಿಯು ಶೇಷ, ಗರುಡ, ರುದ್ರ ಮತ್ತು ಇಂದ್ರ ಇವರಿಗೆ ಮೊದಲನೆ ತಾಯಿಯಾಗಿದ್ದಾಳೆ. ವಿನತಾದೇವಿ ಮೊದಲಾದವರು, ಗರುಡಾದಿಗಳು ಎರಡನೆ ಬಾರಿ ಹುಟ್ಟುವಾಗ ತಾಯಂದಿರಾಗಿದ್ದಾರೆ. ಮೊದಲನೆ ಬಾರಿ ಜನಿಸುವಾಗ ಭಾರತಿಯೇ ತಾಯಿಯಾಗಿದ್ದಳು. ಆ ಭಾರತೀದೇವಿಯ ಅನುಗ್ರಹದಿಂದಲೇ ಇವರು ಭಗವಂತನ ಜ್ಞಾನವನ್ನು ಪಡೆಯುತ್ತಾರೆ. ಅಂತಹ ಭಾರತಿಯೇ ದ್ರೌಪದಿಯಾಗಿ ಭೂಮಿಯಲ್ಲಿ ಅವತರಿಸಿದಳು. ॥ ೧೭೪ ॥

**ಯಾ ಮಾರುತಾದ್ ಗರ್ಭಮಧತ್ತ ಪೂರ್ವಂ**
**ಶೇಷಂ ಸುಪರ್ಣಂ ಗಿರಿಶಂ ಸುರೇಂದ್ರಮ್ ।**
**ಚತುರ್ಮುಖಾಭಾನ್ ಚತುರಃ ಕುಮಾರಾನ್**
**ಸಾ ದ್ರೌಪದೀ ನಾಮ ಬಭೂವ ಭೂಮೌ ॥ ೧೭೫ ॥**

**ಅರ್ಥ** :- **ಯಾ** ಯಾರು, **ಮಾರುತಾದ್** ವಾಯುದೇವರಿಂದ, **ಗರ್ಭಂ** ಗರ್ಭವನ್ನು **ಅಧತ್ತ** ಧರಿಸಿದಳೋ, **ಪೂರ್ವಂ** ಮೊದಲು, **ಶೇಷಂ** ಶೇಷವನ್ನು **ಸುಪರ್ಣಂ** ಗರುಡನನ್ನು **ಗಿರಿಶಂ** ರುದ್ರನನ್ನು **ಸುರೇಂದ್ರಂ** ದೇವೇಂದ್ರನನ್ನು (ಹೀಗೆ) **ಚತುರ್ಮುಖಾಭಾನ್** ಚತುರ್ಮುಖ ಬ್ರಹ್ಮಸದೃಶರಾದ. **ಚತುರಃ** ನಾಲ್ಕು, **ಕುಮಾರಾನ್** ಮಕ್ಕಳನ್ನು **ಅಧತ್ತ** ಧರಿಸಿದಳೋ (ಪಡೆದಳೋ), **ಸಾ** ಆ ಭಾರತಿಯು, **ದ್ರೌಪದೀನಾಮ** ದ್ರೌಪದಿ ಎಂದು, **ಭೂಮೌ ಬಭೂವ** ಭೂಮಿಯಲ್ಲಿ ಅವತರಿಸಿದಳು.

**ತಾತ್ಪರ್ಯ** :- ಯಾವ ಭಾರತೀದೇವಿಯು ವಾಯುದೇವರಿಂದ ಗರ್ಭ ಧರಿಸಿ ಶೇಷಗರುಡ ರುದ್ರ ಇಂದ್ರ ಎಂಬ ಬ್ರಹ್ಮ ಸದೃಶರಾದ ನಾಲ್ಕು ಮಕ್ಕಳನ್ನು ಪಡೆದಳೋ ಆ ಭಾರತಿಯೇ ದ್ರೌಪದಿಯಾಗಿ ಅವತರಿಸಿದಳು. ॥ ೧೭೫ ॥

**ಪೀಠಿಕೆ** :- ಶೇಷದೇವರು ಇಂದ್ರನಿಗಿಂತ ಅಧಿಕರೆಂಬ ವಿಷಯದಲ್ಲಿ ಭಾರತ ಶ್ಲೋಕವನ್ನು ಉದಾಹರಿಸುತ್ತಾರೆ -

**ಯಸ್ಯಾಧಿಕೋ ಬಲೇ ನಾಸ್ತಿ ಭೀಮಮೇಕಮೃತೇ ಕ್ವಚಿತ್ ।**
**ನ ವಿಜ್ಞಾನೇ ನ ಚ ಜ್ಞಾನೇ ಏಷ ರಾಮಃ ಸ ಲಾಂಗಲೀ ॥ ೧೭೬ ॥**

**ಯಸ್ಯ ನ ಪ್ರತಿಯೋದ್ಧಾಸ್ತಿ ಭೀಮಮೇಕಮೃತೇ ಕ್ವಚಿತ್ ।**
**ಅನ್ವಿಷ್ಯಾಪಿ ತ್ರಿಲೋಕೇಷು ಸ ಏಷ ಮುಸಲಾಯುಧಃ ॥ ೧೭೭ ॥**

**ಅರ್ಥ** :- **ಯಸ್ಯ** ಯಾವ ಶೇಷನಿಗೆ, **ಬಲೇ** ಬಲದ ವಿಷಯದಲ್ಲಿ, **ಭೀಮಮೇಕಂ ಋತೇ** ಭೀಮನೊಬ್ಬನನ್ನು ಬಿಟ್ಟು, **ಕ್ವಚಿತ್** ಎಲ್ಲಿಯೂ, **ಅಧಿಕಃ ನಾಸ್ತಿ** ಹೆಚ್ಚಿನವರಿಲ್ಲವೋ, **ವಿಜ್ಞಾನೇ** ವಿಶೇಷ ಜ್ಞಾನದಲ್ಲಿ, **ನ** ಇಲ್ಲವೋ, **ಜ್ಞಾನೇ ಚ** ಸಾಮಾನ್ಯ ಜ್ಞಾನದಲ್ಲಿಯೂ, **ನ** ಇಲ್ಲವೋ, **ಸಃ** ಆ ಶೇಷನೇ, **ಏಷಃ ಲಾಂಗಲೀ ರಾಮಃ** ನೇಗಿಲು ಆಯುಧವುಳ್ಳ ಈ ಬಲರಾಮನು, **ಯಸ್ಯ** ಯಾವ ಶೇಷನಿಗೆ, **ಭೀಮಮೇಕಮೃತೇ** ಭೀಮನೊಬ್ಬನನ್ನು ಬಿಟ್ಟು **ತ್ರಿಲೋಕೇಷು** ಮೂರು ಲೋಕಗಳಲ್ಲಿ, **ಕ್ವಚಿತ್** ಎಲ್ಲಿಯೂ, **ಅನ್ವಿಷ್ಯಾಪಿ** ಹುಡುಕಿದರೂ, **ಪ್ರತಿಯೋದ್ಧಾ ನಾಸ್ತಿ** ಪ್ರತಿಯಾಗಿ ಯುದ್ಧ ಮಾಡುವವನು ಇಲ್ಲವೋ, **ಸಃ** ಆ ಶೇಷನೇ, **ಏಷ ಮುಸಲಾಯುಧಃ** ಒನಕೆಯೇ ಆಯುಧ ವಾಗಿ ಉಳ್ಳ ಈ ಬಲರಾಮನು.

**ತಾತ್ಪರ್ಯ** :- ಭೀಮನನ್ನು ಬಿಟ್ಟರೆ ಶೇಷನಿಗೆ ಮೂರು ಲೋಕದಲ್ಲಿ ಬಲ, ಜ್ಞಾನ, ವಿಜ್ಞಾನದಲ್ಲಿ ಅಧಿಕರಿಲ್ಲ ಮತ್ತು ಭೀಮನಲ್ಲದೇ ಶೇಷನನ್ನು ಎದುರಿಸುವ ವರು ಯಾರೂ ಇಲ್ಲ, ಅಂತಹ ಶೇಷನೇ ಬಲರಾಮನಾಗಿದ್ದಾನೆ. ॥ ೧೭೭ ॥

**ಪೀಠಿಕೆ** :- ಇಂದ್ರಾಂಶನಾದ ಅರ್ಜುನನ ಸ್ವರೂಪವನ್ನು ವಿವರಿಸುವ ಪದ್ಯವನ್ನು ಉದಾಹರಿಸುತ್ತಾರೆ -

**ತಥಾ ಯುಧಿಷ್ಠಿರೇಣೈವ ಭೀಮಾಯ ಸಮುದೀರಿತಮ್ ।**
**ಅನುಜ್ಞಾತೋ ರೌಹಿಣೇಯಾತ್ ತ್ವಯಾ ಚೈವಾಪರಾಜಿತಃ ॥ ೧೭೮ ॥**

**ಸರ್ವವಿದ್ಯಾಸು ಬೀಭತ್ಸುಃ ಕೃಷ್ಣೇನ ಚ ಮಹಾತ್ಮನಾ ।**
**ಅನ್ವೇಷ ರೌಹಿಣೇಯಂ ಚ ತ್ವಾಂ ಚ ಭೀಮಾಪರಾಜಿತಮ್ ॥ ೧೭೯ ॥**

ಶೇಷಾದಿಗಳಿಗೆ, **ಪ್ರಥಮೈವ ಮಾತಾ ಚ** ಮೊದಲನೆಯ ತಾಯಿಯೇ ಆಗಿರುವಳೋ, **ಸಾ ಭಾರತೀ** ಅಂತಹ ಭಾರತೀದೇವಿಯೇ, **ದ್ರೌಪದೀ ನಾಮ** ದ್ರೌಪದಿ ಎಂದು ಪ್ರಸಿದ್ಧಳಾಗಿ, **ಭೂಮೌ** ಭೂಮಿಯಲ್ಲಿ **ಬಭೂವ** ಅವತರಿಸಿದಳು.

**ತಾತ್ಪರ್ಯ** :- ಬ್ರಹ್ಮಾಂಡ ಪುರಾಣದಲ್ಲಿ ಬ್ರಹ್ಮದೇವರು ನಾರದರಿಗೆ ಹೇಳಿದ ಈ ವಚನವು ದ್ರೌಪದೀದೇವಿಯ ಸ್ವರೂಪವನ್ನು ತಿಳಿಸುತ್ತದೆ- ಭಾರತೀದೇವಿಯು ಶೇಷ, ಗರುಡ, ರುದ್ರ ಮತ್ತು ಇಂದ್ರ ಇವರಿಗೆ ಮೊದಲನೆ ತಾಯಿಯಾಗಿದ್ದಾಳೆ. ವಿನತಾದೇವಿ ಮೊದಲಾದವರು, ಗರುಡಾದಿಗಳು ಎರಡನೆ ಬಾರಿ ಹುಟ್ಟುವಾಗ ತಾಯಂದಿರಾಗಿದ್ದಾರೆ. ಮೊದಲನೆ ಬಾರಿ ಜನಿಸುವಾಗ ಭಾರತಿಯೇ ತಾಯಿಯಾಗಿದ್ದಳು. ಆ ಭಾರತೀದೇವಿಯ ಅನುಗ್ರಹದಿಂದಲೇ ಇವರು ಭಗವಂತನ ಜ್ಞಾನವನ್ನು ಪಡೆಯುತ್ತಾರೆ. ಅಂತಹ ಭಾರತಿಯೇ ದ್ರೌಪದಿಯಾಗಿ ಭೂಮಿಯಲ್ಲಿ ಅವತರಿಸಿದಳು. ॥ ೧೭೪ ॥

**ಯಾ ಮಾರುತಾದ್ ಗರ್ಭಮಧತ್ತ ಪೂರ್ವಂ**
**ಶೇಷಂ ಸುಪರ್ಣಂ ಗಿರಿಶಂ ಸುರೇಂದ್ರಮ್ ।**
**ಚತುರ್ಮುಖಾಭಾನ್ ಚತುರಃ ಕುಮಾರಾನ್**
**ಸಾ ದ್ರೌಪದೀ ನಾಮ ಬಭೂವ ಭೂಮೌ ॥ ೧೭೫ ॥**

**ಅರ್ಥ** :- **ಯಾ** ಯಾರು, **ಮಾರುತಾದ್** ವಾಯುದೇವರಿಂದ, **ಗರ್ಭಂ** ಗರ್ಭವನ್ನು **ಅಧತ್ತ** ಧರಿಸಿದಳೋ, **ಪೂರ್ವಂ** ಮೊದಲು, **ಶೇಷಂ** ಶೇಷವನ್ನು, **ಸುಪರ್ಣಂ** ಗರುಡನನ್ನು, **ಗಿರಿಶಂ** ರುದ್ರನನ್ನು, **ಸುರೇಂದ್ರಂ** ದೇವೇಂದ್ರನನ್ನು (ಹೀಗೆ) **ಚತುರ್ಮುಖಾಭಾನ್** ಚತುರ್ಮುಖ ಬ್ರಹ್ಮಸದೃಶರಾದ. **ಚತುರಃ** ನಾಲ್ಕು, **ಕುಮಾರಾನ್** ಮಕ್ಕಳನ್ನು **ಅಧತ್ತ** ಧರಿಸಿದಳೋ (ಪಡೆದಳೋ), **ಸಾ** ಆ ಭಾರತಿಯು, **ದ್ರೌಪದೀನಾಮ** ದ್ರೌಪದಿ ಎಂದು, **ಭೂಮೌ ಬಭೂವ** ಭೂಮಿಯಲ್ಲಿ ಅವತರಿಸಿದಳು.

**ತಾತ್ಪರ್ಯ** :- ಯಾವ ಭಾರತೀದೇವಿಯು ವಾಯುದೇವರಿಂದ ಗರ್ಭ ಧರಿಸಿ ಶೇಷಗರುಡ ರುದ್ರ ಇಂದ್ರ ಎಂಬ ಬ್ರಹ್ಮ ಸದೃಶರಾದ ನಾಲ್ಕು ಮಕ್ಕಳನ್ನು ಪಡೆದಳೋ ಆ ಭಾರತಿಯೇ ದ್ರೌಪದಿಯಾಗಿ ಅವತರಿಸಿದಳು. ॥ ೧೭೫ ॥

**ಪೀಠಿಕೆ** :- ಶೇಷದೇವರು ಇಂದ್ರನಿಗಿಂತ ಅಧಿಕರೆಂಬ ವಿಷಯದಲ್ಲಿ ಭಾರತ ಶ್ಲೋಕವನ್ನು ಉದಾಹರಿಸುತ್ತಾರೆ -

**ಯಸ್ಯಾಧಿಕೋ ಬಲೇ ನಾಸ್ತಿ ಭೀಮಮೇಕಮೃತೇ ಕ್ವಚಿತ್ ।**
**ನ ವಿಜ್ಞಾನೇ ನ ಚ ಜ್ಞಾನೇ ಏಷ ರಾಮಃ ಸ ಲಾಂಗಲೀ ॥ ೧೭೬ ॥**

**ಯಸ್ಯ ನ ಪ್ರತಿಯೋದ್ಧಾಸ್ತಿ ಭೀಮಮೇಕಮೃತೇ ಕ್ವಚಿತ್ ।**
**ಅನ್ವಿಷ್ಯಾಪಿ ತ್ರಿಲೋಕೇಷು ಸ ಏಷ ಮುಸಲಾಯುಧಃ ॥ ೧೭೭ ॥**

**ಅರ್ಥ** :- **ಯಸ್ಯ** ಯಾವ ಶೇಷನಿಗೆ, **ಬಲೇ** ಬಲದ ವಿಷಯದಲ್ಲಿ **ಭೀಮಮೇಕಂ ಋತೇ** ಭೀಮನೊಬ್ಬನನ್ನು ಬಿಟ್ಟು, **ಕ್ವಚಿತ್** ಎಲ್ಲಿಯೂ, **ಅಧಿಕಃ ನಾಸ್ತಿ** ಹೆಚ್ಚಿನವರಿಲ್ಲವೋ, **ವಿಜ್ಞಾನೇ** ವಿಶೇಷ ಜ್ಞಾನದಲ್ಲಿ, **ನ** ಇಲ್ಲವೋ, **ಜ್ಞಾನೇ ಚ** ಸಾಮಾನ್ಯ ಜ್ಞಾನದಲ್ಲಿಯೂ, **ನ** ಇಲ್ಲವೋ, **ಸಃ** ಆ ಶೇಷನೇ, **ಏಷಃ ಲಾಂಗಲೀ ರಾಮಃ** ನೇಗಿಲು ಆಯುಧವುಳ್ಳ ಈ ಬಲರಾಮನು, **ಯಸ್ಯ** ಯಾವ ಶೇಷನಿಗೆ, **ಭೀಮಮೇಕಮೃತೇ** ಭೀಮನೊಬ್ಬನನ್ನು ಬಿಟ್ಟು **ತ್ರಿಲೋಕೇಷು** ಮೂರು ಲೋಕಗಳಲ್ಲಿ, **ಕ್ವಚಿತ್** ಎಲ್ಲಿಯೂ, **ಅನ್ವಿಷ್ಯಾಪಿ** ಹುಡುಕಿದರೂ, **ಪ್ರತಿಯೋದ್ಧಾ ನಾಸ್ತಿ** ಪ್ರತಿಯಾಗಿ ಯುದ್ಧ ಮಾಡುವವನು ಇಲ್ಲವೋ, **ಸಃ** ಆ ಶೇಷನೇ, **ಏಷ ಮುಸಲಾಯುಧಃ** ಒನಕೆಯೇ ಆಯುಧ ವಾಗಿ ಉಳ್ಳ ಈ ಬಲರಾಮನು.

**ತಾತ್ಪರ್ಯ** :- ಭೀಮನನ್ನು ಬಿಟ್ಟರೆ ಶೇಷನಿಗೆ ಮೂರು ಲೋಕದಲ್ಲಿ ಬಲ, ಜ್ಞಾನ, ವಿಜ್ಞಾನದಲ್ಲಿ ಅಧಿಕರಿಲ್ಲ ಮತ್ತು ಭೀಮನಲ್ಲದೇ ಶೇಷನನ್ನು ಎದುರಿಸುವ ವರು ಯಾರೂ ಇಲ್ಲ. ಅಂತಹ ಶೇಷನೇ ಬಲರಾಮನಾಗಿದ್ದಾನೆ. ॥ ೧೭೭ ॥

**ಪೀಠಿಕೆ** :- ಇಂದ್ರಾಂಶನಾದ ಅರ್ಜುನನ ಸ್ವರೂಪವನ್ನು ವಿವರಿಸುವ ಪದ್ಯವನ್ನು ಉದಾಹರಿಸುತ್ತಾರೆ -

**ತಥಾ ಯುಧಿಷ್ಠಿರೇಣೈವ ಭೀಮಾಯ ಸಮುದೀರಿತಮ್ ।**
**ಅನುಜ್ಞಾತೋ ರೌಹಿಣೇಯಾತ್ ತ್ವಯಾ ಚೈವಾಪರಾಜಿತಃ ॥ ೧೭೮ ॥**

**ಸರ್ವವಿದ್ಯಾಸು ಬೀಭತ್ಸುಃ ಕೃಷ್ಣೇನ ಚ ಮಹಾತ್ಮನಾ ।**
**ಅನ್ವೇಷ ರೌಹಿಣೇಯಂ ಚ ತ್ವಾಂ ಚ ಭೀಮಾಪರಾಜಿತಮ್ ॥ ೧೭೯ ॥**

**ವೀರ್ಯೇ ಶೌರ್ಯೇ ಬಲೇ ನಾನ್ಯಃ ತೃತೀಯಃ ಫಲ್ಗುನಾದೃತೇ ।**

**ಅರ್ಥ :-** **ತಥಾ** ಹಾಗೆಯೇ, **ಯುಧಿಷ್ಠಿರೇಣೈವ** ಧರ್ಮರಾಜನಿಂದಲೇ, **ಭೀಮಾಯ** ಭೀಮನಿಗೆ, **ಸಮುದೀರಿತಂ** ಹೇಳಲ್ಪಟ್ಟಿದೆ, **ಭೀಮ** ಭೀಮನೇ!, **ಯತಃ** ಯಾವ ಕಾರಣದಿಂದ, **ಬೀಭತ್ಸುಃ** ಅರ್ಜುನನು, **ರೌಹಿಣೇಯಾತ್** ಬಲರಾಮನಿಂದ, **ತ್ವಯಾ ಚೈವ** ನಿನ್ನಿಂದಲೂ, **ಮಹಾತ್ಮನಾ ಕೃಷ್ಣೇನ ಚ** ಮಹಾತ್ಮನಾದ ಕೃಷ್ಣನಿಂದಲೂ, **ಸರ್ವವಿದ್ಯಾಸು** ಎಲ್ಲ ವಿದ್ಯೆಗಳಲ್ಲಿ, **ಅನುಜ್ಞಾತಃ** ಅನುಜ್ಞೆ ಹೊಂದಿರುವನೋ, **ಅತಃ** ಆ ಕಾರಣದಿಂದ, **ಅಪರಾಜಿತಃ** ಪರಾಜಯವಿಲ್ಲದವನು, **ಏಷಃ** ಈ ಅರ್ಜುನನು, **ಅಪರಾಜಿತಂ** ಪರಾಜಯ ವಿಲ್ಲದ, **ರೌಹಿಣೇಯಂ ಚ ತ್ವಾಂ ಚ ಅನು** ಬಲರಾಮ ಮತ್ತು ನಿನ್ನ ನಂತರದವನು, **ವೀರ್ಯೇ** ವೀರ್ಯದಲ್ಲಿ, **ಶೌರ್ಯೇ** ಶೌರ್ಯದಲ್ಲಿ, **ಬಲೇ** ಬಲದಲ್ಲಿ, **ಫಲ್ಗುನಾದ್ ಋತೇ** ಅರ್ಜುನನನ್ನು ಬಿಟ್ಟು, **ಅನ್ಯಃ** ಬೇರೊಬ್ಬನು, **ತೃತೀಯಃ** ಮೂರನೇಯವನು, **ನ** ಇಲ್ಲ.

**ತಾತ್ಪರ್ಯ :-** ಧರ್ಮರಾಜನೇ ಭೀಮನಿಗೆ ಹೇಳಿದ್ದಾನೆ — ಭೀಮ! ಅರ್ಜುನನು ಶ್ರೀಕೃಷ್ಣನ ನಿನ್ನ ಮತ್ತು ಬಲರಾಮನ ಅನುಜ್ಞೆಯಿಂದಲೇ ಎಲ್ಲ ಧನುರ್ವಿದ್ಯೆಯನ್ನು ಕಲಿತು ಅಪರಾಜಿತನಾಗಿದ್ದಾನೆ. ಅರ್ಜುನನು ನಿನ್ನ ಮತ್ತು ಬಲರಾಮನ ನಂತರದವನು. ವೀರ್ಯ, ಶೌರ್ಯ, ಬಲಗಳಲ್ಲಿ ಅವನನ್ನು ಬಿಟ್ಟು ಬೇರೆ ಯಾರೂ ಮೂರನೆಯವರಿಲ್ಲ. ॥ ೧೭೮ - ೧೭೯ ॥

**ತಥೈವ ದ್ರೌಪದೀವಾಕ್ಯಂ ವಾಸುದೇವಂ ಪ್ರತೀರಿತಮ್ ॥ ೧೮೦ ॥**

**ಅಧಿಜ್ಯಮಪಿ ಯತ್ ಕರ್ತುಂ ಶಕ್ಯತೇ ನೈವ ಗಾಂಡಿವಮ್ ।**
**ಅನ್ಯತ್ರ ಭೀಮಪಾರ್ಥಾಭ್ಯಾಂ ಭವತಶ್ಚ ಜನಾರ್ದನ ॥ ೧೮೧ ॥**

**ಅರ್ಥ :-** **ತಥೈವ** ಹಾಗೆಯೇ, **ವಾಸುದೇವಂ ಪ್ರತಿ ಈರಿತಂ** ಕೃಷ್ಣನನ್ನು ಕುರಿತು ಹೇಳಿದ, **ದ್ರೌಪದೀವಾಕ್ಯಂ** ದ್ರೌಪದಿಯ ವಚನವೂ, **ಅಸ್ತಿ** ಇದೆ. ''**ಜನಾರ್ದನ** ಕೃಷ್ಣ!, **ಯತ್** ಯಾವ ಕಾರಣದಿಂದ, **ಗಾಂಡಿವಂ** ಗಾಂಡಿವ ಧನುಸ್ಸನ್ನು, **ಅಧಿಜ್ಯಂ ಕರ್ತುಮಪಿ** ಬಗ್ಗಿಸಿ ಹಗ್ಗ ಕಟ್ಟಲೂ ಕೂಡ, **ಭೀಮಪಾರ್ಥಾಭ್ಯಾಂ ಭವತಶ್ಚ ಅನ್ಯತ್ರ** ಭೀಮ, ಅರ್ಜುನ ಮತ್ತು ನಿನಗಿಂತ ಬೇರೆಯವರಿಂದ, **ನ ಶಕ್ಯತೇ** ಸಾಧ್ಯವಾಗುವುದಿಲ್ಲವೋ **ತತ್** ಆ ಕಾರಣದಿಂದ ...''

**ತಾತ್ಪರ್ಯ** :- ''ಕೃಷ್ಣ! ನೀನು ಮತ್ತು ಭೀಮಾರ್ಜುನರನ್ನು ಬಿಟ್ಟು ಬೇರೆ ಯಾರೂ ಗಾಂಡೀವ ಧನುಸ್ಸನ್ನು ಬಾಗಿಸಿ ಹಗ್ಗ ಕಟ್ಟಲಾರರು'' ಎಂದು ದ್ರೌಪದಿಯು ಕೃಷ್ಣನಿಗೆ ಹೇಳಿದ ಮಾತಿನಿಂದಲೂ ಕೃಷ್ಣ ವಾಯು, ಬಲರಾಮ, ಇವರ ನಂತರದಲ್ಲಿ ವೀರ್ಯ ಶೌರ್ಯಾದಿ ವಿಷಯದಲ್ಲಿ ಅರ್ಜುನನು ಶ್ರೇಷ್ಠನೆಂದು ತಿಳಿಯುತ್ತದೆ. ॥ ೧೮೦ - ೧೮೧ ॥

**ಪೀಠಿಕೆ** :- ಹಿಂದೆ, ಭೀಮನ ಅನಂತರ ಶೇಷಾವತಾರಿಯಾದ ಬಲರಾಮನು ಶ್ರೇಷ್ಠ ಎನ್ನಲಾಗಿದೆ. ಈಗ ಭೀಮನ ಅನಂತರದಲ್ಲಿ ರುದ್ರಾವತಾರ ಭೂತರಾದ ಅಶ್ವತ್ಥಾಮಾಚಾರ್ಯರು ಶ್ರೇಷ್ಠರೆಂದು ಹೇಳುತ್ತಾರೆ -

**ತಥೈವಾನ್ಯತ್ರ ವಚನಂ ಕೃಷ್ಣದ್ವೈಪಾಯನೇರಿತಮ್ ।**
**''ದ್ವಾವೇವ ಪುರುಷೌ ಲೋಕೇ ವಾಸುದೇವಾದನಂತರೌ ॥ ೧೮೨ ॥**

**ಭೀಮಸ್ತು ಪ್ರಥಮಸ್ತತ್ರ ದ್ವಿತೀಯೋ ದ್ರೌಣಿರೇವ ಚ ।''**

**ಅರ್ಥ** :- **ತಥೈವ** ಹಾಗೆಯೇ, **ಅನ್ಯತ್ರ** ಬೇರೆ ಕಡೆಯಲ್ಲಿ **ಕೃಷ್ಣದ್ವೈಪಾಯನೇ ರಿತಂ** ವೇದವ್ಯಾಸರಿಂದ ಹೇಳಲ್ಪಟ್ಟ **ವಚನಂ** ವಚನವೂ, **ಅಸ್ತಿ** ಇದೆ, **ಲೋಕೇ** ಲೋಕದಲ್ಲಿ **ದ್ವೌ ಏವ ಪುರುಷೌ** ಇಬ್ಬರೇ ಪುರುಷರು, **ವಾಸುದೇವಾತ್ ಅನಂತರೌ** ಶ್ರೀಕೃಷ್ಣನ ಅನಂತರದಲ್ಲಿ ಶ್ರೇಷ್ಠರು. **ತತ್ರ** ಅವರಿಬ್ಬರಲ್ಲಿ, **ಭೀಮಸ್ತು** ಭೀಮನಾದರೂ, **ಪ್ರಥಮಃ** ಮೊದಲಿಗನು, **ದ್ರೌಣಿರೇವ ಚ** ಅಶ್ವತ್ಥಾಮರೇ, **ದ್ವಿತೀಯಃ** ಎರಡನೆಯವರು.

**ತಾತ್ಪರ್ಯ** :- 'ಶ್ರೀಕೃಷ್ಣನ ಅನಂತರದವರು ಲೋಕದಲ್ಲಿ ಇಬ್ಬರೆ ಇದ್ದಾರೆ. ಅವರಲ್ಲಿ ಮೊದಲನೆಯವರು ಭೀಮದೇವರು. ಎರಡನೆಯವರು ಅಶ್ವತ್ಥಾಮರು' ಎಂದು ವ್ಯಾಸರು ಹೇಳಿದ ವಚನವು ಇರುವುದರಿಂದ ಶೌರ್ಯಾದಿಗಳ ವಿಷಯದಲ್ಲಿ ಭೀಮನ ನಂತರ ಅಶ್ವತ್ಥಾಮರೂ ಶ್ರೇಷ್ಠರಾಗಿದ್ದಾರೆ. ॥ ೧೮೨ ॥

**ಪೀಠಿಕೆ** :- ಯುದ್ಧದಲ್ಲಿ ಕೆಲವೊಮ್ಮೆ ಅಶ್ವತ್ಥಾಮರಿಗಿಂತ ಹೆಚ್ಚಿನ ಪರಾಕ್ರಮವು ಅರ್ಜುನನಲ್ಲಿ ಕಂಡುಬಂದಿರುವುದು. ಅದಕ್ಕೆ ವಿಶೇಷ ಕಾರಣವನ್ನು ಹೇಳುತ್ತಾರೆ -

**ಅಕ್ಷಯಾವಿಷುಧೀ ದಿವ್ಯೇ ಧ್ವಜೋ ವಾನರಲಕ್ಷಣಃ ॥ ೧೮೩ ॥**

**ಗಾಂಡೀವಂ ಧನುಷಾಂ ಶ್ರೇಷ್ಠಂ ತೇನ ದ್ರೌಣೇರ್ವರೋಽರ್ಜುನಃ ।**

**ಅರ್ಥ :-** **ಅಕ್ಷಯೌ** ನಾಶವಿಲ್ಲದ, **ದಿವ್ಯೇ** ದಿವ್ಯವಾದ, **ಇಷುಧೀ** ಬತ್ತಳಿಕೆಗಳು, **ವಾನರಲಕ್ಷಣಃ** ಕಪಿಯ ಚಿಹ್ನೆಯುಳ್ಳ, **ಧ್ವಜಃ** ಧ್ವಜವು, **ಧನುಷಾಂ ಶ್ರೇಷ್ಠಂ** ಬಿಲ್ಲುಗಳಲ್ಲಿ ಶ್ರೇಷ್ಠವಾದ, **ಗಾಂಡಿವಂ** ಗಾಂಡೀವವು, (ಅರ್ಜುನನಲ್ಲಿವೆ.) **ತೇನ** ಆದ್ದರಿಂದ, **ಅರ್ಜುನಃ** ಅರ್ಜುನನು, **ದ್ರೌಣೇಃ ವರಃ** ಅಶ್ವತ್ಥಾಮರಿಗಿಂತ ಶ್ರೇಷ್ಠನು.

**ತಾತ್ಪರ್ಯ :-** ಅರ್ಜುನನು ದಿವ್ಯವಾದ, ಅಕ್ಷಯವಾದ ಬತ್ತಳಿಕೆಗಳನ್ನೂ ಹನುಮಂತನ ಚಿಹ್ನೆಯುಳ್ಳ ಧ್ವಜವನ್ನೂ ಶ್ರೇಷ್ಠವಾದ ಗಾಂಡೀವ ಧನುಸ್ಸನ್ನೂ ಪಡೆದಿರುವುದರಿಂದ ತನ್ನಿಮಿತ್ತಕವಾಗಿ ಅಶ್ವತ್ಥಾಮರಿಗಿಂತ ಶ್ರೇಷ್ಠನೆನಿಸಿದ್ದಾನೆ ಹೊರತು ಸ್ವರೂಪದಿಂದಲ್ಲ. ॥ ೧೮೩ ॥

**ಇತ್ಯಾದ್ಯನಂತವಾಕ್ಯಾನಿ ಸಂತ್ಯೇವಾರ್ಥೇ ವಿವಕ್ಷಿತೇ ॥ ೧೮೪ ॥**

**ಕಾನಿಚಿದ್ದರ್ಶಿತಾನ್ಯತ್ರ ದಿಙ್ಮಾತ್ರಪ್ರತಿಪತ್ತಯೇ ।**
**ತಸ್ಮಾದುಕ್ತಕ್ರಮೇಣೈವ ಪುರುಷೋತ್ತಮತಾ ಹರೇಃ ॥ ೧೮೫ ॥**

**ಅನೌಪಚಾರಿಕೀ ಸಿದ್ಧಾ ಬ್ರಹ್ಮತಾ ಚ ವಿನಿರ್ಣಯಾತ್ ।**

**ಅರ್ಥ :-** **ಇತ್ಯಾದ್ಯನಂತವಾಕ್ಯಾನಿ** ಇವೇ ಮೊದಲಾದ ಅನಂತ ವಚನಗಳು, **ವಿವಕ್ಷಿತೇ ಅರ್ಥೇ** ವಿವಕ್ಷಿತವಾದ ವಿಷ್ಣುಸರ್ವೋತ್ತಮತ್ವಾದಿ ವಿಷಯದಲ್ಲಿ **ಸಂತ್ಯೇವ** ನಿಶ್ಚಯವಾಗಿ ಪ್ರಮಾಣವಾಗಿವೆ. **ದಿಙ್ಮಾತ್ರಪ್ರತಿಪತ್ತಯೇ** ಮಾದರಿಯ ಜ್ಞಾನವುಂಟಾಗಲು, **ಕಾನಿಚಿತ್** ಕೆಲವು ವಾಕ್ಯಗಳು, **ಅತ್ರ** ಈ ಅಧ್ಯಾಯದಲ್ಲಿ **ದರ್ಶಿತಾನಿ** ತೋರಿಸಲ್ಪಟ್ಟಿವೆ, **ತಸ್ಮಾತ್** ಆದ್ದರಿಂದ, **ಉಕ್ತಕ್ರಮೇಣೈವ** ಹಿಂದೆ ಹೇಳಿದ ರೀತಿಯಿಂದಲೇ, **ವಿನಿರ್ಣಯಾತ್** ಸರ್ವ ಶಾಸ್ತ್ರಾರ್ಥ ನಿರ್ಣಯದಿಂದ, **ಹರೇಃ** ವಿಷ್ಣುವಿಗೆ, **ಅನೌಪಚಾರಿಕೀ** ಮುಖ್ಯವಾದ, **ಪುರುಷೋತ್ತಮತಾ** ಸರ್ವೋತ್ತಮತ್ವವು, **ಬ್ರಹ್ಮತಾ ಚ** ಪರಬ್ರಹ್ಮತ್ವವೂ, **ಸಿದ್ಧಾ** ಸಿದ್ಧವಾಗಿದೆ.

**ತಾತ್ಪರ್ಯ** :- ವಿವಕ್ಷಿತವಾದ ವಿಷ್ಣುಸರ್ವೋತ್ತಮತ್ವಾದಿ ವಿಷಯದಲ್ಲಿ ಹಿಂದೆ ತೋರಿಸಿದಂತಹ ಪ್ರಮಾಣಗಳು ಅನಂತವಾಗಿವೆ. ಆದರೂ ಮಾದರಿಯಾಗಿ ಕೆಲವನ್ನು ಮಾತ್ರ ಈ ಅಧ್ಯಾಯದಲ್ಲಿ ಉದಾಹರಿಸಲಾಗಿದೆ. ಇವುಗಳ ಆಧಾರದಿಂದ ಶ್ರೀಹರಿಯಲ್ಲಿ ಮುಖ್ಯವಾದ ಸರ್ವೋತ್ತಮತ್ವವು ಮತ್ತು ಪರಬ್ರಹ್ಮತ್ವವು ಸಿದ್ಧವಾಗುತ್ತದೆ. ॥ ೧೮೪ – ೧೮೫ ॥

**ಪೂರ್ಣಪ್ರಜ್ಞಕೃತೇಯಂ ಸಂಕ್ಷೇಪಾದುದ್ಧೃತಿಃ ಸುವಾಕ್ಯಾನಾಮ್ ।**
**ಶ್ರೀಮದ್ಭಾರತಗಾನಾಂ ವಿಷ್ಣೋಃ ಪೂರ್ಣತ್ವನಿರ್ಣಯಾಯೈ ವ ॥ ೧೮೬ ॥**

**ಅರ್ಥ** :- **ವಿಷ್ಣೋಃ** ಶ್ರೀಹರಿಯ, **ಪೂರ್ಣತ್ವನಿರ್ಣಯಾಯೈವ,** ಗುಣಪೂರ್ಣತ್ವದ ನಿಶ್ಚಯಕ್ಕೋಸ್ಕರವಾಗಿಯೇ, **ಸಂಕ್ಷೇಪಾತ್** ಸಂಕ್ಷೇಪದಿಂದ, **ಶ್ರೀಮದ್ಭಾರತ ಗಾನಾಂ** ಶ್ರೀಮದ್ಭಾರತದಲ್ಲಿರುವ, **ಸುವಾಕ್ಯಾನಾಂ** ಉತ್ತಮ ವಚನಗಳ, **ಇಯಂ** ಈ, **ಉದ್ಧೃತಿಃ** ಉದ್ಧಾರವು (ಉಲ್ಲೇಖವು) **ಪೂರ್ಣ ಪ್ರಜ್ಞಕೃತಾ** ಶ್ರೀ ಪೂರ್ಣಪ್ರಜ್ಞರಿಂದ ಮಾಡಲ್ಪಟ್ಟಿದೆ.

**ತಾತ್ಪರ್ಯ** :- ನಾವು (ಪೂರ್ಣಪ್ರಜ್ಞರು) ಶ್ರೀಹರಿಯ ಗುಣಪೂರ್ಣತ್ವ ಪ್ರಮೇಯದ ನಿಶ್ಚಯಕ್ಕೋಸ್ಕರವಾಗಿ ಶ್ರೀಮದ್ಭಾರತದ ವಚನಗಳನ್ನು ಈ ಅಧ್ಯಾಯದಲ್ಲಿ ಉದಾಹರಿಸಿದ್ದೇವೆ. ॥ ೧೮೬ ॥

**ಪೀಠಿಕೆ** :- ಈ ಎರಡು ಅಧ್ಯಾಯಗಳಲ್ಲಿ ಶ್ರೀಮದಾಚಾರ್ಯರು ಹರಿಸರ್ವೋತ್ತಮತ್ವ ಮತ್ತು ದೇವತಾತಾರತಮ್ಯ ವಿಷಯದಲ್ಲಿ ಶ್ರುತಿ, ಭಾರತ, ಪಂಚರಾತ್ರ ಮತ್ತು ಪುರಾಣಗಳ ಅನೇಕ ವಾಕ್ಯಗಳನ್ನು ಉದಾಹರಿಸಿ ಸಕಲ ಶಾಸ್ತ್ರಾರ್ಥ ನಿರ್ಣಯ ರೂಪವಾದ ಹರಿಸೇವೆಯನ್ನು ಮಾಡಿದ್ದಾರೆ. ಋಜು ಕುಲೋತ್ಪನ್ನರಾದ್ದರಿಂದ ನಿರ್ವ್ಯಾಜ ಭಕ್ತರಾದ ಅವರು ಈ ಸೇವಾಫಲ ರೂಪವಾಗಿ ಹರಿಪ್ರಸಾದವನ್ನು ಬಿಟ್ಟು ಬೇರೆ ಯಾವುದನ್ನೂ ಬಯಸುವವರಲ್ಲ. ಆದ್ದರಿಂದ 'ನಮಗೆ ಶ್ರೀಹರಿ ಪ್ರಸಾದವಿರಲಿ' ಎಂಬ ಅಭಿಪ್ರಾಯದಿಂದ ಕೊನೆಯಲ್ಲಿ ಭಗವಂತನನ್ನು ಪ್ರಾರ್ಥಿಸುತ್ತಾರೆ –

**ಸ ಪ್ರೀಯತಾಂ ಪರತಮಃ ಪರಮಾದನಂತಃ**
**ಸಂತಾರಕಃ ಸತತಸಂಸೃತಿದುಸ್ತರಾರ್ಣಾತ್ ।**

**ಯತ್ಪಾದಪದ್ಮಕರಂದಜುಷೋ ಹಿ ಪಾರ್ಥಾಃ**
**ಸ್ವಾರಾಜ್ಯಮಾಪುರುಭಯತ್ರ ಸದಾ ವಿನೋದಾತ್ ॥ ೧೮೭ ॥**

**ಇತಿ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ ವಿರಚಿತೇ**
**ಶ್ರೀಮನ್ಮಹಾಭಾರತ ತಾತ್ಪರ್ಯ ನಿರ್ಣಯೇ**
**ಸುವಾಕ್ಯೋಧ್ಯಾರೋನಾಮ**
**ದ್ವಿತೀಯೋಽಧ್ಯಾಯಃ**

**ಅರ್ಥ** :- **ಯತ್ಪಾದಪದ್ಮಮಕರಂದಜುಷಃ** ಯಾವ ಪರಮಾತ್ಮನ ಪಾದಪದ್ಮಗಳ ಮಧುರಸವನ್ನು ಸೇವಿಸುವ, **ಪಾರ್ಥಾಃ** ಪಾಂಡವರು, **ಉಭಯತ್ರ** ಇಹ ಪರಗಳಲ್ಲಿ, **ವಿನೋದಾತ್** ಅನಾಯಾಸದಿಂದ, **ಸದಾ** ಯಾವಾಗಲೂ, **ಸ್ವಾರಾಜ್ಯಂ** ರಾಜ್ಯಾಧಿಪತ್ಯವನ್ನು **ಆಪುಃ** ಹೊಂದಿದರೋ, **ಸಃ** ಅಂತಹ, **ಸತತಸಂಸೃತಿದುಸ್ತರಾರ್ಣಾತ್** ಅನಾದಿಯಾದ ಸಂಸಾರವೆಂಬ ದಾಟಲಸಾಧ್ಯವಾದ ಸಾಗರದಿಂದ, **ಸಂತಾರಕಃ** ಚೆನ್ನಾಗಿ ದಾಟಿಸುವ, **ಪರಮಾತ್ ಪರತಮಃ** ಉತ್ತಮರಾದ ಬ್ರಹ್ಮಾದಿಗಳಿಗಿಂತ ನಿರವಧಿಕವಾಗಿ ಉತ್ತಮನಾದ, **ಅನಂತಃ** ದೇಶಕಾಲಗಳಲ್ಲಿ ವ್ಯಾಪ್ತನಾದ, ಗುಣಪೂರ್ಣನಾದ ಭಗವಂತನು, **ಪ್ರೀಯತಾಮ್** ಪ್ರೀತನಾಗಲಿ.

**ತಾತ್ಪರ್ಯ** :- ಶ್ರೀಹರಿಯು ದುಸ್ತರವಾದ ಸಂಸಾರಸಾಗರದಿಂದ ದಾಟಿಸಿ ಮೋಕ್ಷವನ್ನು ಕರುಣಿಸುವನು. ಬ್ರಹ್ಮಾದಿಗಳಿಗಿಂತ ನಿರವಧಿಕನಾಗಿ ಉತ್ತಮನು. ದೇಶತಃ ಕಾಲತಃ ಗುಣತಃ ಪೂರ್ಣನು. ಈ ಭಗವಂತನ ಪಾದಪದ್ಮಗಳ ನ್ನಾಶ್ರಯಿಸಿಯೇ ಪಾಂಡವರು ಇಹ ಪರಗಳೆರಡರಲ್ಲಿಯೂ ರಾಜ್ಯಾಧಿಪತ್ಯವನ್ನು ಪಡೆದಿದ್ದಾರೆ. ಅಂತಹ ಶ್ರೀಹರಿಯು ಪ್ರೀತನಾಗಲಿ.

**ವಿಶೇಷ ವಿಷಯ** :- ಪರತಮಃ - ರಾಜರಿಗೆ ರಾಜಭಟರಿಗಿಂತ ಉತ್ತಮತ್ವವಿದೆ. ಆದರೆ ಅದು ಸಾವಧಿಕ. ಪರಮಾತ್ಮನ ಉತ್ತಮತ್ವವು ಮಾತ್ರ ಇದರಂತೆ ಸಾವಧಿಕವಲ್ಲ, ನಿರವಧಿಕವಾಗಿದೆ ಎಂದು ಸೂಚಿಸಲು 'ಪರತಮಃ' ಎನ್ನಲಾಗಿದೆ.

**ಸಂತಾರಕಃ** :- 'ಭಗವಂತನು ಸಂಸಾರ ಸಾಗರವನ್ನು ದಾಟಿಸುವವನು, ಎಂಬ ವಿಶೇಷಣವೂ ಅವನಲ್ಲಿರುವ ಉತ್ತಮತ್ವಕ್ಕೆ ನಿಮಿತ್ತವಾಗಿದೆ.

ಭಗವಂತನು, ಸಮುದ್ರ ಮಧ್ಯದಲ್ಲಿರುವ ದ್ವೀಪಗಳಿಗೆ ಕರೆದೊಯ್ಯುವ ನೌಕೆಗಳಂತೆ ಸಂಸಾರತಾರಕನಲ್ಲ, ಚೆನ್ನಾಗಿ ಅಂದರೆ ಸಂಪೂರ್ಣವಾಗಿ ಸಂಸಾರಸಾಗರವನ್ನು ದಾಟಿಸಿ ಮೋಕ್ಷಲೋಕಕ್ಕೆ ಕರೆದೊಯ್ಯುವವನು ಎಂದು ತಿಳಿಸಲು ತಾರಕಃ ಎನ್ನದಂತೆ ಸಂತಾರಕಃ ಎನ್ನಲಾಗಿದೆ.

**ದುಸ್ತರಾರ್ಣಾತ್** :- ಸಂಸಾರಸಾಗರವನ್ನು ದಾಟುವುದು ಸುಲಭವೇ ಆಗಿದ್ದರೆ ಅದನ್ನು ದಾಟಿಸುವುದು ಭಗವಂತನ ಮಹಾಮಹಿಮೆಯಾಗಲಾರದು. ಆದ್ದರಿಂದ ಸಂಸಾರ ಸಾಗರಕ್ಕೆ 'ದುಸ್ತರ' ಎಂಬ ವಿಶೇಷಣವನ್ನು ಕೊಟ್ಟಿದ್ದಾರೆ.

**ಸತತ** :- ಸಂಸಾರವು ಅನಾದಿಯಾದ್ದರಿಂದ ಅದನ್ನು ದಾಟುವುದು ಸುಲಭವಲ್ಲ, ಎಂದು ಸ್ಪಷ್ಟಪಡಿಸಲು ಸತತ (ಅನಾದಿ) ಎಂದು ವಿಶೇಷಣವನ್ನು ಕೊಡಲಾಗಿದೆ. ಅಥವಾ 'ಸತತ' ಎಂಬ ಪದಕ್ಕೆ ಸಾರ್ವಕಾಲಿಕ ಎಂದು ಅರ್ಥ. ಒಬ್ಬನಿಗೆ ಮುಕ್ತಿಯಾದರೂ ಇನ್ನೊಬ್ಬನು ಸಂಸಾರದಲ್ಲೇ ಇರುವುದರಿಂದ ಸಂಸಾರವು ಸಾರ್ವಕಾಲಿಕ. ಆದ್ದರಿಂದ ಅದು ದುಸ್ತರ. ಇಲ್ಲದಿದ್ದರೆ, ಅನಾದಿಕಾಲದಿಂದ ಅದರಲ್ಲಿ ಮುಳುಗಿದವರು ಏಕೆ ದಾಟುವುದಿಲ್ಲ?

**ಸಂಸೃತಿ** :- ಸಂಸಾರವನ್ನು ಏಕೆ ದಾಟಬೇಕು? ಎಂಬ ಸಂದೇಹವನ್ನು ಪರಿಹರಿಸಲು 'ಸಂಸೃತಿ' ಎಂದು ಪ್ರಯೋಗಿಸಲಾಗಿದೆ. 'ಸಂ' - ಯಾವಾಗಲೂ 'ಸೃತಿ' ಮೇಲಿನ ಹಾಗೂ ಕೆಳಗಿನ ಲೋಕಗಳಲ್ಲಿ ತಿರುಗುವಿಕೆ ಎಂದು ಅದರ ಅರ್ಥ. ಮೇಲಿನ ಲೋಕಗಳಲ್ಲಿ ಸುಖ, ಕೆಳಗಿನ ಲೋಕಗಳಲ್ಲಿ ದುಃಖವೂ ಇರುವುದರಿಂದ ಸುಖ ದುಃಖ ಭರಿತವಾದ ಸಂಸಾರವು ಹೇಯವಾದ್ದರಿಂದ ಅದನ್ನು ದಾಟಬೇಕು ಎಂದು ಅಭಿಪ್ರಾಯ.

**ಯತ್ಪಾದಪದ್ಮಮಕರಂದಜುಷಃ** :- ಭಗವಂತನನ್ನಾಶ್ರಯಿಸಿದರೆ ಸಂಸಾರ ದುಃಖ ಪರಿಹಾರವಾಗುವುದು ಎಲ್ಲಿ ಕಂಡಿದೆ? ಎಂಬ ಸಂಶಯವನ್ನು ಪರಿಹರಿಸಲು ಈ ಶ್ಲೋಕದ ಉತ್ತರಾರ್ಧ ಪ್ರವೃತ್ತವಾಗಿದೆ.

ಪಾಂಡವರಿಗೆ 'ಭಗವಂತನ ಪಾದಕಮಲಗಳನ್ನಾಶ್ರಯಿಸಿದ' ಎಂಬ ಹೇತು ಗರ್ಭ ವಿಶೇಷಣವನ್ನು ಕೊಟ್ಟಿರುವುದರಿಂದ 'ಪಾಂಡವರು ಹರಿಪಾದಸೇವೆ ಯಿಂದಲೇ ಸ್ವಾರಾಜ್ಯವನ್ನು ಪಡೆದಿದ್ದಾರೆ ಹೊರತು ಸ್ವಶಕ್ತಿಯಿಂದಲ್ಲ' ಎಂಬ ಪ್ರಮೆಯವು ಸೂಚಿತವಾಗುತ್ತದೆ. ಈ ಪ್ರಮೇಯದ ಸ್ಪಷ್ಟೀಕರಣಕ್ಕಾಗಿಯೇ

'ಪಾಂಡವರು' ಎಂಬ ಅರ್ಥದಲ್ಲಿ 'ಪಾರ್ಥಾಃ' ಎಂಬ ಪದವನ್ನು ಪ್ರಯೋಗಿಸಿದ್ದಾರೆ. 'ಪೃಥೆಯ ಮಕ್ಕಳು' ಎಂದು ಅರ್ಥ. ಪೃಥೆಯು ಕೃಷ್ಣನ ಸೋದರತ್ತೆ. ಪಾಂಡುರಾಜನು ಅರಣ್ಯದಲ್ಲೇ ಮೃತನಾದ್ದರಿಂದ ಆ ಪೃಥೆಯು (ಕುಂತಿಯು) ಅನಾಥಳು. ಅವಳ ಮಕ್ಕಳಾದ ಪಾಂಡವರಿಗೆ ರಾಜ್ಯಲಾಭ ವಾದದ್ದು ಸ್ವಶಕ್ತಿಯಿಂದಲ್ಲ, ಅವರ ಸೋದರ ಮಾವನಾದ ಕೃಷ್ಣನ ಶಕ್ತಿಯಿಂದಲೇ ಎಂದು ಆ ಪದದ ಆಂತರ್ಯ.

ಶ್ರೀಹರಿಯು ಸಾಕಾರನೆಂದೂ ಸಗುಣನೆಂದೂ ತಮ್ಮ ತಮ್ಮ ಯೋಗ್ಯತಾನು ಸಾರವಾಗಿ ಮಾಡಿದ ಸೇವೆಯಿಂದ ಎಲ್ಲರೂ, ಫಲಭಾಗಿಗಳಾಗುವರೆಂದು ಸೂಚಿಸಲು 'ಪಾದ'ವೆಂಬ ಪದವನ್ನೂ ಪಾದಗಳಿಗೆ ಸುಂದರವಾದ ಪದ್ಮಗಳ ಹೋಲಿಕೆಗಾಗಿ 'ಪದ್ಮ'ಪದವನ್ನೂ ಮತ್ತು ಫಲಸೂಚಕವಾದ ಮಕರಂದ ಪದವನ್ನೂ ವಿಶೇಷಣವಾಗಿ ಕೊಟ್ಟಿದ್ದಾರೆ.

**ಉಭಯತ್ರ ಸ್ವಾರಾಜ್ಯಂ** :'ಸ್ವಯಮೇವ ರಾಜತೇ ಇತಿ ಸ್ವರಾಟ್, ಸ್ವರಾಜಃ ಭಾವಃ ಸ್ವಾರಾಜ್ಯಂ' 'ತಾನೇ ರಾಜನಾಗಿರುವಿಕೆ' ಎಂದರ್ಥ. ಪಾಂಡವರು ಭೂಮಿ ಮತ್ತು ಸ್ವರ್ಗದಲ್ಲಿ ಕಲ್ಯಾದಿ ಶತ್ರುಗಳನ್ನು ನಿಗ್ರಹಿಸಿ ತಾವೇ ರಾಜರಾದ್ದರಿಂದ ಐಹಿಕ ಸ್ವಾರಾಜ್ಯವನ್ನು ಪಡೆದಂತಾಯಿತು. ಮುಕ್ತಿಯಲ್ಲಿಯೂ ಬ್ರಹ್ಮ ಇಂದ್ರಾದಿ ರೂಪರಾಗಿಯೇ ಇರುವುದರಿಂದ ಅಲ್ಲಿಯೂ ತಾವೇ ರಾಜರಾಗಿರುವರು. ಆದ್ದರಿಂದ ಪರದಲ್ಲಿಯೂ ಸ್ವಾರಾಜ್ಯ ಲಭಿಸಿದಂತಾಯಿತು. ಆದ್ದರಿಂದಲೇ ಸದಾ ಎಂದು ವಿಶೇಷಣವನ್ನು ಕೊಡಲಾಗಿದೆ. ಸ್ವರ್ಗ ಸಾಮ್ರಾಜ್ಯವು ಸದಾತನವಲ್ಲವಾದ್ದರಿಂದ ಅದನ್ನು ಪಾರತ್ರಿಕ ಸ್ವಾರಾಜ್ಯ ಎಂದು ಭಾವಿಸಲಾಗದು. ಮುಕ್ತಿಯಲ್ಲಿರುವ ಸಾಮ್ರಾಜ್ಯವು ಸದಾತನವಾದ್ದರಿಂದ ಅದೇ ಪಾರತ್ರಿಕ ಸ್ವಾರಾಜ್ಯವೆಂದು ಭಾವಿಸಬೇಕು. ಇಂತಹ ಐಹಿಕ ಪಾರತ್ರಿಕ ಸ್ವಾರಾಜ್ಯವು ಶ್ರೀಕೃಷ್ಣನ ಕೃಪೆಯಿಂದ ಅನಾಯಾಸವಾಗಿ ದೊರೆತಿದೆಯೆಂದು ಸೂಚಿಸಲು ವಿನೋದಾತ್ ಎಂದಿದ್ದಾರೆ. ॥ ೧೮೭ ॥

**ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯ ವಿರಚಿತವಾದ**
**ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯದಲ್ಲಿ ಸರ್ವಶಾಸ್ತ್ರತಾತ್ಪರ್ಯ**
**ನಿರ್ಣಯವೆಂಬ ದ್ವಿತೀಯಾಧ್ಯಾಯವು ಸಮಾಪ್ತವಾಯಿತು.**

## ಅಧ್ಯಾಯ 3

ಜಯತ್ಯಜೋऽಖಂಡಗುಣೋರುಮಂಡಲಃ ।
ಸದೋದಿತೋ ಜ್ಞಾನಮರೀಚಿಮಾಲೀ ।
ಸ್ವಭಕ್ತಹಾರ್ದೋಚ್ಚತಮೋನಿಹಂತಾ
ವ್ಯಾಸಾವತಾರೋ ಹರಿರಾತ್ಮಭಾಸ್ಕರಃ ॥ ೧ ॥

ಪೂಜ್ಯರಾದ ಶ್ರೀ ಆನಂದತೀರ್ಥ ಮುನಿಗಳು ಮೊದಲೆರಡು ಅಧ್ಯಾಯ ಗಳಲ್ಲಿ ಭಗವಂತನು ಮಾಡುವ ಸೃಷ್ಟಿ ವಿಶೇಷಗಳನ್ನು ಮತ್ತು ಭಗವಂತನ ಅವತಾರಗಳೇ ಮೊದಲಾದವುಗಳ ಕಥೆಯನ್ನು ನಿರೂಪಿಸಿದರು. ಈಗ ಈ ಮೂರನೆ ಅಧ್ಯಾಯದಲ್ಲಿ ಸ್ವಗುರುಗಳಾದ ಶ್ರೀವೇದವ್ಯಾಸರ ಮತ್ತು ತಮ್ಮ ಇಷ್ಟದೈವ ಎನಿಸಿದ ಶ್ರೀರಾಮ ಮತ್ತು ಶ್ರೀಕೃಷ್ಣ ರೂಪಗಳ ಸ್ತೋತ್ರರೂಪವಾದ ಮಂಗಲವನ್ನು ಆಚರಿಸುತ್ತಿರುವರು. ಈ ಮೂರು ಮಂಗಲಗಳು ಈ ಗ್ರಂಥವು ಪರಮಮಂಗಲರೂಪ ಎನ್ನುವುದರ ಸೂಚಕಗಳೂ ಆಗಿವೆ.

**ಅರ್ಥ :ಅಜಃ** ಉತ್ಪತ್ತಿರಹಿತನಾದ ಮತ್ತು ಆಕಾರವಾಚ್ಯನಾದ, ಮೂಲರೂಪನಾದ ನಾರಾಯಣನಿಂದಲೆ ಆವಿರ್ಭಾವಗೊಂಡ, **ಅಖಂಡ ಗುಣೋರುಮಂಡಲಃ** ಅಖಂಡ ದೇಶತಃ ಕಾಲತಃ ನಾಶರಹಿತವಾದ, **ಗುಣ** ಸಾರ್ವಜ್ಞ್ಯವೇ ಮೊದಲಾದ ಗುಣಗಳೇ, **ಉರರು** ಉತ್ಕೃಷ್ಟವಾದ **ಮಂಡಲಃ** ಮಂಡಲದಂತಿರುವ ಶರೀರವುಳ್ಳ, **ಸದೋದಿತಃ** ಸದಾ ಅನಂತಕಾಲ ಗಳಲ್ಲಿಯೂ, **ಉದಿತಃ** ಉದಯವುಳ್ಳ, **ಜ್ಞಾನ ಮರೀಚಿಮಾಲೀ** ಜ್ಞಾನಮಯ ವಾದ ಕಿರಣಗಳ ಸಮುದಾಯವುಳ್ಳ, **ಸ್ವಭಕ್ತ ಹಾರ್ದೋಚ್ಚ ತಮೋನಿಹಂತಾ ಸ್ವಭಕ್ತ** ತನ್ನ ಭಕ್ತರ, **ಹಾರ್ದ** ಹೃದಯದಲ್ಲಿರುವ, **ಉಚ್ಚತಮಃ** ಅನಾದಿಕಾಲ ದಿಂದಲೂ ಬಂಧಕವಾದ ಮಹತ್ತರವಾದ ಅಜ್ಞಾನ ವೆಂಬ ಕತ್ತಲೆಯನ್ನು **ನಿಹಂತಾ** ಚೆನ್ನಾಗಿ ಪರಿಹರಿಸುವ, **ಆತ್ಮಭಾಸ್ಕರಃ** ಪರಮಾತ್ಮನ ಅರಿವು ಮೂಡಿಸುವ, **ವ್ಯಾಸಾವತಾರಃ** ವೇದವ್ಯಾಸರೆಂಬ ಅವತಾರವುಳ್ಳ, **ಹರಿಃ** ಶ್ರೀ ಹರಿಯು, **ಜಯತಿ** ಉತ್ಕೃಷ್ಟನಾಗಿದ್ದಾನೆ; ಲೌಕಿಕ ಸೂರ್ಯನನ್ನು ತನ್ನ ಮಹಿಮಾತಿಶಯದಿಂದ ಪರಾಭವಗೊಳಿಸಿರುವನು.

**ವಿಶೇಷ ವಿಷಯ** :ಶ್ರೀ ಮಧ್ವರು ಈ ಪದ್ಯದಲ್ಲಿ ತಮ್ಮ ಗುರುಗಳಾದ ವೇದ ವ್ಯಾಸರನ್ನು ಸ್ತೋತ್ರ ಮಾಡಿರುವರು. ವೇದವ್ಯಾಸರಿಗೆ ಸೂರ್ಯನ ಹೋಲಿಕೆಯನ್ನು ನೀಡುವುದರೊಂದಿಗೆ ಸೂರ್ಯನಿಗಿಂತಲೂ ಅತಿಶಯವನ್ನೂ ನಿರೂಪಿಸುತ್ತ ವೇದ ವ್ಯಾಸರು 'ಅಸದೃಶ ಭಾಸ್ಕರ' ಎಂದು ಪ್ರತಿಪಾದಿಸುತ್ತಿರುವರು.

ಲೌಕಿಕವಾದ ಪದಾರ್ಥಗಳನ್ನು ಸೂರ್ಯ ಬೆಳಗಿದರೆ ವೇದವ್ಯಾಸರು ವೇದ ವಿಭಾಗವನ್ನು ಮಾಡಿ, ವೇದಾರ್ಥನಿರ್ಣಾಯಕ ಬ್ರಹ್ಮಸೂತ್ರಗಳನ್ನು ರಚಿಸಿ, ಭಾರತ ಪುರಾಣಾದಿಗಳನ್ನು ವಿರಚಿಸಿ, ಪರಮಾತ್ಮನ ಯಥಾರ್ಥ ಜ್ಞಾನವನ್ನು, ಗೌತಮರ ಶಾಪವನ್ನು ಪರಿಹರಿಸಿ ಬ್ರಹ್ಮರುದ್ರಾದಿ ಸಜ್ಜೀವರಲ್ಲಿ ಸ್ಥಿರವಾಗಿ ಸ್ಥಾಪಿಸಿರುವರು.

ಸೂರ್ಯನು ಪ್ರಾಕೃತವಾದ, ಪರಿಮಿತವಾದ ತೇಜೋಮಂಡಲದಲ್ಲಿದ್ದರೆ ವ್ಯಾಸರು ಅಪ್ರಾಕೃತ, ಪರಿಪೂರ್ಣ, ನಿತ್ಯ ಅನಂತಗುಣರೂಪವಾದ, ಜಗತ್ತಿನ ಆಚೆ ಈಚೆ ವ್ಯಾಪಿಸಿರುವ ಮಂಡಲ ಅಂದರೆ ಶರೀರವುಳ್ಳವರು. ಸೂರ್ಯನು ಕಶ್ಯಪರಿಂದ ಹುಟ್ಟಿದವನಾದರೆ ವ್ಯಾಸರು ಉತ್ಪತ್ತಿರಹಿತರು. ತನ್ನ ಮೂಲ ರೂಪದಿಂದ ಅವಿರ್ಭಾವವುಳ್ಳವರಷ್ಟೆ ಸೂರ್ಯನು ಹಗಲಿನಲ್ಲಿ ಉದಿಸಿ ರಾತ್ರಿಯಲ್ಲಿ ಮುಳುಗಿದರೆ ಅನಂತ ಕಾಲದಲ್ಲಿ ಉದಯಿಸುತ್ತಲೇ ಇರುವ ವ್ಯಾಸರಿಗೆ ಅಸ್ತಮಯವೇ ಇಲ್ಲ.

ಸೂರ್ಯನ ಕಿರಣಗಳು ಪ್ರಾಕೃತಗಳಾದರೆ ವ್ಯಾಸರು ಅನಂತ ಗುಣಾತ್ಮಕ ವಾದ ಕಿರಣಗಳುಳ್ಳವರು.

ಬಾಹ್ಯಕತ್ತಲೆಯನ್ನು ನಿವಾರಿಸುವನೆಂದು ಸೂರ್ಯನು ಪ್ರಸಿದ್ಧನಾಗಿದ್ದರೂ ಆಂತರಿಕವಾದ ಅಜ್ಞಾನವೆಂಬ ಅಂಧಕಾರವನ್ನು ಪರಿಹರಿಸಲಾರ. ಅದರಲ್ಲಿಯೂ ಪರ್ವತಗುಹೆಗಳಲ್ಲಿ, ದೇಹದ ಮನೆಗಳ ಒಳಗೆ ಇರುವ ಕತ್ತಲೆಯನ್ನೂ ನಿವಾರಿಸಲಾರ. ಭಕ್ತರ, ಭಕ್ತರಲ್ಲದವರ ಎಲ್ಲರ ಕತ್ತಲೆಯನ್ನು ನಿವಾರಿಸುವವನು ಸೂರ್ಯನಾದರೆ ಕೇವಲ ಭಕ್ತರ ಆಂತರಿಕ ಅಜ್ಞಾನವನ್ನು ನಿವಾರಿಸುವ ಸಮರ್ಥರು ವ್ಯಾಸರು.

ಸೂರ್ಯನು ಜಗತ್ತನ್ನು ಬೆಳಗುವವನಾದರೂ ಆ ಬೆಳಕು ಅವನ ಸ್ವಂತದ್ದಲ್ಲ. ಭಗವಂತನ ತೇಜಸ್ಸಿನಿಂದ ಉಪಬ್ರಂಹಣ (ವೃದ್ಧಿ) ಹೊಂದಿಯೇ

ಕತ್ತಲೆಯನ್ನು ಅವನು ನಿವಾರಿಸುವನು. 'ಯದಾದಿತ್ಯಗತಂ ತೇಜೋ ಜಗದ್ಭಾಸಯತೇಽಖಿಲಮ್ । ಯಚ್ಚಂದ್ರಮಸಿ ಯಚ್ಚಾಗ್ನೌ ತತ್ತೇಜೋ ವಿದ್ಧಿ ಮಾಮಕಮ್' ಎಂಬ ಗೀತಾ ಶ್ಲೋಕದಲ್ಲಿ ವಿಶ್ವವನ್ನು ಬೆಳಗುವ ಸೂರ್ಯನ ತೇಜಸ್ಸು ಚಂದ್ರನಲ್ಲಿ, ಅಗ್ನಿಯಲ್ಲಿರುವ ತೇಜಸ್ಸು ತನ್ನದೆಂದು ಭಗವಂತನು ತಿಳಿಸಿರುವನು. ಆದರೆ ವೇದವ್ಯಾಸರು ಸ್ವತಂತ್ರವಾದ ಜ್ಞಾನಪ್ರಕಾಶದಿಂದ ಅಜ್ಞಾನವನ್ನು ನಿರ್ಮೂಲನಗೊಳಿಸಿರುವರು.

ವ್ಯಾಸಾವತಾರವನ್ನು ಮಾಡಿರುವ, ದುಷ್ಟರ ಸಂಹಾರಮಾಡುವುದರಲ್ಲಿ ಸಮರ್ಥನಾದುದರಿಂದಲೇ ಹರಿಶಬ್ದವಾಚ್ಯನಾದ ಭಗವಂತನು ಕಶ್ಯಪರ ಮಗನಾದ ಸೂರ್ಯನಂತೆ ರಾಹುವಿನ ಆಕ್ರಮಣಕ್ಕೆ ಬಲಿಯಾಗುವವನಲ್ಲ.

ಹೀಗೆ ಲೌಕಿಕ ಸೂರ್ಯನಿಗೂ ಶ್ರೀವ್ಯಾಸರಿಗೂ ಬಹಳ ಅಂತರವಿದೆ. ತನ್ನಲ್ಲಿರುವ, ಮೇಲೆ ತಿಳಿಸಿದ ಮಹಿಮಾತಿಶಯದಿಂದ ಸೂರ್ಯನನ್ನೂ ಮೀರಿದವರು ಶ್ರೀವ್ಯಾಸರು.

ಈ ಅಧ್ಯಾಯದ ಆರಂಭದಲ್ಲಿ ವ್ಯಾಸ, ರಾಮ, ಕೃಷ್ಣ ಈ ಮೂರು ರೂಪಗಳಲ್ಲಿ ಮೊದಲು ವ್ಯಾಸರನ್ನು ಸ್ತೋತ್ರ ಮಾಡಿರುವುದು ರಾಮಾವತಾರಕ್ಕೆ ಮುಂಚೆಯೂ ವ್ಯಾಸಾವತಾರ ಇದೆ ಎಂದು ತಿಳಿಸಲು. ಈ ವಿಷಯವನ್ನು ದ್ವಿತೀಯ ಸ್ಕಂಧ ಭಾಗವತ ತಾತ್ಪರ್ಯದಲ್ಲಿ ಆಚಾರ್ಯರು ತಿಳಿಸಿದ್ದಾರೆ — 'ತೃತೀಯೇ ಸಪ್ತಮೇ ಚೈವ ಷೋಡಶೇ ಪಂಚವಿಂಶಕೇ । ಅಷ್ಟಾವಿಂಶಯುಗೇ ಕೃಷ್ಣಃ ಸತ್ಯವತ್ಯಾಮಜಾಯತ ॥' ವೈವಸ್ವತ ಮನ್ವಂತರದ ಮೂರು, ಏಳು, ಹದಿನಾರು, ಇಪ್ಪತ್ತೈದು, ಇಪ್ಪತ್ತೆಂಟನೆಯ ದ್ವಾಪರ ಯುಗಗಳಲ್ಲಿ ವ್ಯಾಸರು ಸತ್ಯವತಿಯಲ್ಲಿ ಅವತರಿಸಿರುವರು. ಶ್ರೀರಾಮನಾಗಿ ವೈವಸ್ವತ ಮನ್ವಂತರದ ಇಪ್ಪತ್ತನಾಲ್ಕನೆ ತ್ರೇತಾಯುಗದಲ್ಲಿ ಭಗವಂತನು ಅವತರಿಸಿರುವುದಾಗಿ ಹರಿವಂಶ ತಿಳಿಸುತ್ತಿದೆ — "ಚತುರ್ವಿಂಶೇ ಯುಗೇ ಚಾಪಿ ವಿಶ್ವಾಮಿತ್ರಪುರಸ್ಸರಃ । ಜಜ್ಞೇ ದಶರಥಸ್ಯಾಥ ಪುತ್ರಃ ಪದ್ಮಾಯತೇಕ್ಷಣಃ ॥" ಹೀಗೆ ವ್ಯಾಸರ ಅವತಾರ ರಾಮಾವತಾರದ ಬಳಿಕವೂ ಇರುವುದರಿಂದ ಮುಂದೆ ಒಂಭತ್ತು ಅಧ್ಯಾಯಗಳಲ್ಲಿ ರಾಮಚರಿತ್ರೆಯನ್ನು ಹೇಳಿ ಅನಂತರ ಹತ್ತನೆಯ ಅಧ್ಯಾಯದಲ್ಲಿ ವ್ಯಾಸರ ಚರಿತ್ರೆಯನ್ನು ಆಚಾರ್ಯರು ತಿಳಿಸುವರು.

ವೇದವ್ಯಾಸರು ಮಹಾಭಾರತ, ರಾಮಾಯಣ, ಹರಿವಂಶ ಮೊದಲಾದ ಇತಿಹಾಸ ಪುರಾಣಾತ್ಮಕ ಶಾಸ್ತ್ರಗಳ ಹಾಗೂ ಬ್ರಹ್ಮಮೀಮಾಂಸಾಶಾಸ್ತ್ರದ ಕರ್ತರೂ ಆಗಿರುವರು. ಅಲ್ಲದೆ ಪ್ರಕೃತ ಗ್ರಂಥದ ಪ್ರತಿಪಾದ್ಯರೂ ಆಗಿರುವುದರಿಂದ ಶಾಸ್ತ್ರ ಕರ್ತೃತ್ವ, ಶಾಸ್ತ್ರಪ್ರತಿಪಾದ್ಯತ್ವ ಎಂಬ ಎರಡು ಕಾರಣಗಳಿಂದ ಶ್ರೀ ಮಧ್ವರು ಮೊದಲು ವ್ಯಾಸರನ್ನು ಸ್ತುತಿಸಿ ಅನಂತರ ಸ್ವಲ್ಪ ವಿಸ್ತಾರವಾಗಿ, ಪ್ರತಿಪಾದ್ಯರಾದ ರಾಮದೇವರನ್ನು, ಬಳಿಕ ಉಳಿದ ಸಮಗ್ರ ಗ್ರಂಥದಿಂದ ಇನ್ನೂ ಹೆಚ್ಚು ವಿಸ್ತಾರವಾಗಿ, ಪ್ರತಿಪಾದ್ಯನಾದ ಕೃಷ್ಣನ ಸ್ತೋತ್ರವನ್ನು ಮಾಡುತ್ತಿರುವರು.

ಸಜ್ಜನರ ಅಜ್ಞಾನವನ್ನು ನಾಶಮಾಡಿ ತತ್ವಜ್ಞಾನದ ಬೆಳಕನ್ನು ನೀಡಲೋಸುಗವೇ ವ್ಯಾಸರು ಅವತರಿಸಿರುವುದರಿಂದ ಅವರನ್ನು ಸೂರ್ಯ ದೃಷ್ಟಾಂತದಿಂದ ಸ್ತುತಿಸಿರುವರು. ॥ ೧ ॥

ಶ್ರೀರಾಮಚಂದ್ರನನ್ನು ಸ್ತುತಿಸುತ್ತಿರುವರು —

**ಜಯತ್ಯಜೋऽಕ್ಷೀಣ ಸುಖಾತ್ಮಬಿಂಬಃ**
**ಸ್ವೈಶ್ವರ್ಯಕಾಂತಿಪ್ರತತಃ ಸದೋದಿತಃ ।**
**ಸ್ವಭಕ್ತಸಂತಾಪದುರಿಷ್ಟಹಂತಾ**
**ರಾಮಾವತಾರೋ ಹರಿರೀಶಚಂದ್ರಮಾಃ ॥ ೨ ॥**

**ಅರ್ಥ :- ಅಜಃ** ಉತ್ಪತ್ತಿರಹಿತನಾದ, **ಅಕ್ಷೀಣಸುಖಾತ್ಮಬಿಂಬಃ** ನಾಶ ರಹಿತವಾದ, ಸುಖರೂಪವಾದ, ಎಲ್ಲೆಡೆ ವ್ಯಾಪಿಸಿರುವುದರಿಂದ ಆತ್ಮಪದವಾಚ್ಯವಾದ ಸ್ವರೂಪವುಳ್ಳ, **ಸ್ವೈಶ್ವರ್ಯಕಾಂತಿಪ್ರತತಃ, ಸ್ವ** ಸ್ವರೂಪಭೂತವಾದ, **ಐಶ್ವರ್ಯ** ಸಂಪತ್ತು (ಸು-ಅಪ್ರಾಕೃತವಾದ ಐಶ್ವರ್ಯ-ಸಂಪತ್ತು), **ಕಾಂತಿ** ಪ್ರಕಾಶದಿಂದ, **ಪ್ರತತಃ** ಪ್ರಕೃಷ್ಟವಾಗಿ ವ್ಯಾಪಿಸಿರುವ, **ಸದೋದಿತಃ** ಯಾವಾಗಲೂ ಉದಯಿಸಿರುವ, **ಸ್ವಭಕ್ತಸಂತಾಪದುರಿಷ್ಟಹಂತಾ = ಸ್ವಭಕ್ತ** ತನ್ನ ಭಕ್ತರ, **ಸಂತಾಪ** ಆಧಿಭೌತಿಕ, ಆಧ್ಯಾತ್ಮಿಕ, ಆಧಿದೈವಿಕ ಎಂಬ ಮೂರು ವಿಧ ದುಃಖಗಳನ್ನು **ದುರಿಷ್ಟ** ಸಂಸಾರವನ್ನು ಕಾಮಕ್ರೋಧಾದಿ ಶತ್ರುಗಳನ್ನು **ಹಂತಾ** ಮತ್ತೊಮ್ಮೆ ಅವುಗಳ ಸ್ಪರ್ಶವಾಗದಂತೆ ಪರಿಹರಿಸುವ, **ರಾಮಾವತಾರಃ** 'ರಾಮ' ಎಂಬ ಅವತಾರವುಳ್ಳ, **ಈಶಚಂದ್ರಮಾಃ** ಒಡೆಯನಾದ ಚಂದ್ರನು, **ಜಯತಿ** ಉತ್ಕೃಷ್ಟನಾಗಿದ್ದಾನೆ, ಲೌಕಿಕಚಂದ್ರನನ್ನು ತನ್ನ ಮಹಿಮಾತಿಶಯದಿಂದ ಪರಾಜಯಗೊಳಿಸುತ್ತಾನೆ.

**ವಿಶೇಷ ವಿಷಯ** :ಸಜ್ಜನರ ತ್ರಿವಿಧ ತಾಪಗಳನ್ನು ಪರಿಹರಿಸುವುದಕ್ಕೋಸ್ಕರವೇ ಅವತರಿಸಿದವನು ಶ್ರೀರಾಮ. ಅದಕ್ಕೆಂದೆ ಚಂದ್ರನ ದೃಷ್ಟಾಂತವನ್ನು ಕೊಟ್ಟು ಸ್ತುತಿಸಿದ್ದಾರೆ ಇಲ್ಲಿ ಆಚಾರ್ಯ ಮಧ್ವರು. ಆದರೆ ಶ್ರೀರಾಮಚಂದ್ರನು ಈ ಲೌಕಿಕ ಚಂದ್ರನನ್ನು ತನ್ನ ಪರಮ ಮಹಿಮಾತಿಶಯದಿಂದ ಸೋಲಿಸಿರುವುದನ್ನೂ ಇಲ್ಲಿ ತಿಳಿಸಿದ್ದಾರೆ.

ಈ ಚಂದ್ರ ಅತ್ರಿ ಋಷಿಗಳಿಂದ ಜನ್ಮ ಪಡೆದಿದ್ದರೆ ಶ್ರೀರಾಮಚಂದ್ರ ಉತ್ಪತ್ತಿ ರಹಿತನಾಗಿದ್ದಾನೆ.

ಪ್ರತಿಪಕ್ಷದಲ್ಲಿಯೂ ಕ್ಷಯವನ್ನೂ ವೃದ್ಧಿಯನ್ನೂ ಹೊಂದುವ ಪ್ರಾಕೃತವಾದ, ಪರಿಮಿತವಾದ ಸ್ವರೂಪವನ್ನು ಚಂದ್ರ ಹೊಂದಿದ್ದರೆ ಶ್ರೀರಾಮಚಂದ್ರ ನಾಶರಹಿತವಾದ ಅಪ್ರಾಕೃತವಾದ ಅಪರಿಮಿತವಾದ ಸ್ವರೂಪವುಳ್ಳವನು.

ಸ್ವರೂಪಭೂತನಾದ ಅಪ್ರಾಕೃತವಾದ ಸಂಪತ್ತು, ಕಾಂತಿಗಳಿಂದ ಶ್ರೀರಾಮಚಂದ್ರ ಸರ್ವತ್ರವ್ಯಾಪ್ತ. ಭಗವಂತನ ಅಧೀನವಾದ, ಭಗವಂತನ ತೇಜಸ್ಸಿನಿಂದ ಉಪಬೃಂಹಿತವಾದ ಪ್ರಾಕೃತ ಕಾಂತಿಯಿಂದ, ಪ್ರಾಕೃತ ಐಶ್ವರ್ಯದಿಂದ ಅಲ್ಪವ್ಯಾಪ್ತಿಯುಳ್ಳವನು ಲೌಕಿಕಚಂದ್ರ.

ರಾತ್ರಿಯಲ್ಲಿ ಮಾತ್ರ ಚಂದ್ರೋದಯ. ಆದರೆ ಸರ್ವದಾ ಭಗವಂತನ ಉದಯ. ಆತ್ಯಂತಿಕ ದುಃಖನಿವೃತ್ತಿರೂಪವಾದ ಮೋಕ್ಷವನ್ನು ಕೊಡುವ ಶ್ರೀರಾಮಚಂದ್ರ ತನ್ನ ಭಕ್ತರಿಗೆ ಮಾತ್ರ ತಾಪತ್ರಯ, ಸಂಸಾರ, ಶತ್ರು ಇವುಗಳೆಲ್ಲವನ್ನು ಮತ್ತೊಮ್ಮೆ ಅವುಗಳ ಸಂಪರ್ಕವೇ ಆಗದಂತೆ ಪರಿಹರಿಸುವನು. ಚಂದ್ರನು ಸಜ್ಜನರು ಅಸಜ್ಜನರು ಎಂಬ ವಿವೇಚನೆ ಇಲ್ಲದೆ ಎಲ್ಲರ ತಾಪವನ್ನು ಕಳೆಯುವನು. ಅದೂ ಪೂರ್ಣವಾಗಿ ಅಲ್ಲ.

ಕೇತುವಿನ ಆಕ್ರಮಣಕ್ಕೆ ಚಂದ್ರ ಬಲಿಯಾದರೆ ಸರ್ವದುಷ್ಟ ಸಂಹಾರಕನಾದ ಶ್ರೀಹರಿ ಅಪರಾಜಿತ.

ಸಕಲ ಜಗತ್ತಿಗೆ ಶ್ರೀರಾಮಚಂದ್ರನು ಸ್ವಾಮಿ. ಚಂದ್ರ ಕೆಲವೇ ಪದಾರ್ಥಗಳಿಗೆ ಭಗವಂತನಿಂದ ಕೊಡಲ್ಪಟ್ಟ ಸ್ವಾಮಿತ್ವವುಳ್ಳವನು. ಒಟ್ಟಿನಲ್ಲಿ ಯಾವುದಕ್ಕೂ ಸ್ವತಂತ್ರನಾದ ಒಡೆಯನಲ್ಲ.

ಈ ರೀತಿ ಶ್ರೀರಾಮಚಂದ್ರನು ಚಂದ್ರನನ್ನು ಪರಾಭವಗೊಳಿಸುತ್ತ ತನ್ನ ಅಸಾಧಾರಣವಾದ ಮಹಿಮೆಯಿಂದ ಉತ್ಕೃಷ್ಟನಾಗಿದ್ದಾನೆ. ॥ ೨ ॥

ಶ್ರೀ ಕೃಷ್ಣನ ಸ್ತುತಿ —

**ಜಯತ್ಯಸಂಖ್ಯೋರುಬಲಾಂಬುಪೂರೋ**
**ಗುಣೋಚ್ಚರತ್ನಾಕರ ಆತ್ಮವೈಭವಃ ।**
**ಸದಾ ಸದಾತ್ಮಜ್ಞನದೀಭಿರಾಪ್ಯಃ**
**ಕೃಷ್ಣಾವತಾರೋ ಹರಿರೇಕಸಾಗರಃ ॥ ೩ ॥**

**ಅರ್ಥ** :- **ಅಸಂಖ್ಯೋರುಬಲಾಂಬುಪೂರಃ** ಅಸಂಖ್ಯಾತಗಳಾದ, ಪೂರ್ಣಗಳಾದ ಬಲಗಳೆಂಬ ನೀರುಗಳಿಂದ ತುಂಬಿದ, **ಗುಣೋಚ್ಚರತ್ನಾಕರಃ** ಜ್ಞಾನಾನಂದಾದಿ ಗುಣಗಳೆಂಬ ಶ್ರೇಷ್ಠವಾದ ರತ್ನಗಳಿಗೆ ಆಶ್ರಯನಾದ, **ಆತ್ಮ ವೈಭವಃ** ಸ್ವರೂಪಭೂತವಾದ ಐಶ್ವರ್ಯವುಳ್ಳ, **ಸದಾತ್ಮಜ್ಞನದೀಭಿಃ** ಸರ್ವೋತ್ತಮನಾದ ಪರಮಾತ್ಮನನ್ನು ತಿಳಿದ ಜ್ಞಾನಿಗಳೆಂಬ ನದಿಗಳಿಂದ, **ಸದಾ** ಯಾವಾಗಲೂ, **ಆಪ್ಯಃ** ಹೊಂದಲ್ಪಡುವ, **ಕೃಷ್ಣಾವತಾರಃ** 'ಕೃಷ್ಣಃ' ಎಂಬ ಅವತಾರವುಳ್ಳ, **ಏಕಸಾಗರಃ** ಯಾವಾಗಲೂ ಏಕ ಪ್ರಕಾರವಾಗಿರುವ ಮುಖ್ಯ ಸಾಗರನಾದ, **ಹರಿಃ** ಶ್ರೀಹರಿಯು, **ಜಯತಿ** ಉತ್ಕೃಷ್ಟವಾಗಿರುವನು, ಸಾಗರವನ್ನು ಪರಾಭವಗೊಳಿಸಿರುವನು.

**ವಿಶೇಷ ವಿಷಯ** :- ಬಲಕಾರ್ಯಪ್ರದರ್ಶನ, ಜ್ಞಾನಪ್ರದಾನವೇ ಮೊದಲಾದ ವಿಚಿತ್ರ ಶಕ್ತಿಗಳನ್ನು ತೋರಿಸಲೋಸುಗವೇ ಅವತರಿಸಿರುವವನು ಶ್ರೀಕೃಷ್ಣ ಆದುದರಿಂದ ನಾನಾ ವೈಚಿತ್ರ್ಯಗಳಿಂದ ಕೂಡಿದ ಸಾಗರದ ದೃಷ್ಟಾಂತ ವನ್ನು ಇಲ್ಲಿ ಕೊಡಲಾಗಿದೆ. ಸಾಗರವನ್ನೂ ಮೀರಿಸುವಂಥ ಭಗವಂತನ ಅಸಾಧಾರಣ ಮಹಿಮೆಯನ್ನೂ ಇಲ್ಲಿ ವರ್ಣಿಸಲಾಗಿದೆ.

'ಶ್ರೀಕೃಷ್ಣ' ಎಂಬ ಸಾಗರ ಸರ್ವೋತ್ತಮ. ಮತ್ತು ಸರ್ವದಾ ಏಕಪ್ರಕಾರ ಆದರೆ ಪ್ರಸಿದ್ಧವಾದ ಸಾಗರ ತಾರತಮ್ಯದಲ್ಲಿ ಸೂರ್ಯಚಂದ್ರರಿಗಿಂತಲೂ ಕೆಳಗಿನವನು. ಒಂದೊಂದು ಪ್ರದೇಶದಲ್ಲಿ ಒಂದೊಂದು ಪ್ರಕಾರ. ಒಂದೆಡೆ ಉಪ್ಪು, ಇನ್ನೊಂದೆಡೆ ಸಿಹಿ, ಮತ್ತೊಂದೆಡೆ ಇಕ್ಷುರಸ.... ಹೀಗೆ. 'ಸಮುದ್ರಂ ಪರ್ವಣಿ ಸ್ಪೃಶೇತ್' ಎಂಬ ಪ್ರಮಾಣ ತಿಳಿಸುವಂತೆ ಪರ್ವಕಾಲದಲ್ಲಿ ಮಾತ್ರ

ಸ್ಪರ್ಶಯೋಗ್ಯ. ಇತರ ಕಾಲದಲ್ಲಿ ಅಸ್ಪೃಶ್ಯ. ಈ ರೀತಿ ದೇಶಕಾಲಗಳಲ್ಲಿ ಏಕಪ್ರಕಾರವಾಗಿಲ್ಲ. ಅಷ್ಟೇ ಅಲ್ಲದೆ ಚಂದ್ರೋದಯದಲ್ಲಿ ಉಕ್ಕುತ್ತದೆ. ಚಂದ್ರಾಸ್ತ ಮಯದಲ್ಲಿ ಕ್ಷೀಣವಾಗುತ್ತದೆ.

ಅಸಂಖ್ಯಾತವಾದ ಪೂರ್ಣವಾದ ಬಲವೇ ಶ್ರೀಕೃಷ್ಣಸಾಗರದ ಜಲ. ಅಲ್ಪ ಸಂಖ್ಯಾತವಾದ ಅಪೂರ್ವವಾದ ಜಲವೇ ಸಾಗರದಲ್ಲಿ. ಶ್ರೀಕೃಷ್ಣನಲ್ಲಿ ಜ್ಞಾನಾದಿ ಅನೇಕ ಗುಣಗಳಿರುವಾಗ ಬಲವನ್ನೇ ಜಲವೇ ಸಾಗರದಲ್ಲಿ. ಶ್ರೀಕೃಷ್ಣನಲ್ಲಿ ಜ್ಞಾನಾದಿ ಅನೇಕ ಗುಣಗಳಿರುವಾಗ ಬಲವನ್ನೇ ಜಲದ ಸ್ಥಾನದಲ್ಲಿ ಆಚಾರ್ಯರು ಹೇಳಲು ಕಾರಣ — ರಾಮಾವತಾರದಲ್ಲಿ ರಾವಣವಧ ಸಂದರ್ಭದಲ್ಲಿ ಮಾತ್ರ ಹೆಚ್ಚಿನ ಬಲ ಪ್ರದರ್ಶನವನ್ನು ಮಾಡಿದ ಶ್ರೀಹರಿ ಶ್ರೀಕೃಷ್ಣಾವತಾರ ಕಾಲದಲ್ಲಿ ತನ್ನ ಶೈಶವಾವಸ್ಥೆಯಿಂದ ಆರಂಭಿಸಿ ಪೂತನೆಯಿಂದ ಕೇಶಿಯವರೆಗಿನ ಅನೇಕದೈತ್ಯರ ಸಂಹಾರ ಮಾಡುವಾಗ, ಗೋವರ್ಧನಗಿರಿಯ ಉದ್ಧರಣಕಾಲದಲ್ಲಿ, ಪುನಃ ಮಲ್ಲರನ್ನು ಕಂಸಾದಿಗಳನ್ನು ಕೊಲ್ಲುವಾಗ, ಹದಿನೆಂಟು ಬಾರಿ ಯುದ್ಧಕ್ಕೆ ಬಂದ ಜರಾಸಂಧನ ನಾಲ್ಕು ನೂರ ಹದಿನಾಲ್ಕು ಅಕ್ಷೋಹಿಣೀ ಸೇನಾಸಂಹಾರ ಕಾಲದಲ್ಲಿ, ನರಕಾಸುರನ ವಧೆಯ ಸಮಯದಲ್ಲಿ ಹೇಗೆ ಅನೇಕಬಾರಿ ಬಲವನ್ನು ಪ್ರದರ್ಶಿಸಿರುವುದು.

ಜ್ಞಾನ ಆನಂದವೇ ಮುಂತಾದ ಶ್ರೇಷ್ಠಗುಣಗಳೇ ಕೃಷ್ಣಸಾಗರದ ರತ್ನ ಗಳಾದರೆ ಜಡವಾದ ಶಿಲಾಮಯವಾದ ಅಲ್ಪ ರತ್ನಗಳಿಗೆ ಆಕರ ಈ ಸಾಗರ.

ಭಗವಂತನ ವೈಭವ ಸ್ವಮಹಿಮೆಯಿಂದಲೇ ಬಂದದ್ದಾದರೆ ಸಾಗರದ ವೈಭವ ಭಗವಂತ ಕರುಣಿಸಿದ ಪಶ್ಚಿಮದಿಕ್ಪಾಲಕತ್ವದಿಂದ, ದ್ವಾರಕೆಯಲ್ಲಿ ಸಮುದ್ರದ ಮಧ್ಯೆ ಕೃಷ್ಣ ಮಾಡಿಸಿದ ರತ್ನಮಯಮಂಡಪನಿರ್ಮಾಣದಿಂದ, ಕ್ಷೀರಸಮುದ್ರದಲ್ಲಿ ದಿವ್ಯ ರತ್ನಮಯ ಮಂಟಪದಲ್ಲಿರುವ ಶ್ರೀಹರಿಯಿಂದ.

ಮಾಯಾವಾದಿಗಳಂತೆ ನೀಚಜೀವನ ಐಕ್ಯವನ್ನು ತಿಳಿಯದೆ ಭಗವಂತನ ಸರ್ವೋತ್ತಮತ್ವವನ್ನು ತಿಳಿದಿರುವ ಜ್ಞಾನಿಗಳೇ ಭಗವಂತನನ್ನು ಸದಾ ಸೇರುವ ನದಿಗಳು. ಜಡವಾದ ನದಿಗಳು ಮಳೆಗಾಲದಲ್ಲಿ ಮಾತ್ರ ಸಮುದ್ರ ವನ್ನು ಸೇರುತ್ತವೆ. ಬೇಸಿಗೆಯಲ್ಲಿ ನದಿಗಳು ಕೆಲವೊಮ್ಮೆ ಬತ್ತಿಹೋಗಿ ಸಮುದ್ರ ಸೇರುವುದಿಲ್ಲ. ॥ ೩ ॥

**ಪೀಠಿಕೆ :** ಗ್ರಂಥದ ಆದಿಯಲ್ಲಿ ಶ್ರೀಹರಿಯನ್ನು ಹೇಗೆ ನಮಿಸಲೇಬೇಕೋ ಹಾಗೆ ಗುರುಗಳನ್ನೂ ನಮಿಸಲೇಬೇಕು. ಅದರ ಬಳಿಕವೇ ಗ್ರಂಥವನ್ನು ಆರಂಭಿಸಬೇಕು ಎಂಬ ಶಿಷ್ಟಾಚಾರವನ್ನು ತಿಳಿಸಲು ಶ್ರೀಮಧ್ವರು ಈ ಪ್ರಮೇಯ ವನ್ನು ಪ್ರತಿಪಾದಿಸುವ ಭಾರತ ವಾಕ್ಯವನ್ನೆ ಹೇಳುತ್ತಿದ್ದಾರೆ —

**ನಾರಾಯಣಂ ನಮಸ್ಕೃತ್ಯ**
**ನರಂ ಚೈವ ನರೋತ್ತಮಮ್ ।**
**ದೇವೀಂ ಸರಸ್ವತೀಂ ವ್ಯಾಸಂ**
**ತತೋ ಜಯಮುದೀರಯೇ ॥ ೪ ॥**

**ಅರ್ಥ :- ನಾರಾಯಣಂ** ಈ ಗ್ರಂಥ (ಭಾರತ)ದಿಂದ ಪ್ರತಿಪಾದ್ಯನಾದ ನಾರಾಯಣನನ್ನು **ನರಂ ಚೈವ** ಉಪಸಾಧಕನಾದ ಶೇಷನನ್ನು ಕೂಡ **ನರೋತ್ತಮಮ್** ಶೇಷನಿಂದ ಉತ್ತಮನಾದ, ಸಾಧಕರಲ್ಲಿ ಶ್ರೇಷ್ಠನಾದ ವಾಯು ದೇವನನ್ನು, **ದೇವೀಂ** ಭಾಗ್ಯದಾಯಿನಿಯಾದ ಲಕ್ಷ್ಮೀದೇವಿಯನ್ನು, **ಸರಸ್ವತೀಂ** ಭಾರತವಾಕ್ಯಾಭಿಮಾನಿ ಸರಸ್ವತಿಯನ್ನು, **ವ್ಯಾಸಂ** ಈ ಗ್ರಂಥದ ಉಪದೇಶಕ ರಾದ ವ್ಯಾಸರನ್ನು, **ನಮಸ್ಕೃತ್ಯ** ನಮಿಸಿ, **ತತಃ** ಅನಂತರ, **ಜಯಂ** 'ಜಯ' ಎಂಬ ಇತಿಹಾಸವನ್ನು (ಭಾರತವನ್ನು), **ಉದೀರಯೇ** ಹೇಳುತ್ತೇನೆ.

**ಪೀಠಿಕೆ :** ಸ್ಥೂಲದೃಷ್ಟಿಗಳಿಗೆ ಈ ಮೇಲಿನ ಶ್ಲೋಕಕ್ಕೆ ಕೆಲವು ಸಂದೇಹಗಳು ಬರುತ್ತವೆ. ನರ ಎಂದರೆ ಮನುಷ್ಯ. ನರೋತ್ತಮ ಎಂದರೆ ರಾಜ ಎಂದಾಗ ಬಹುದು. ಭಾರತದ ಆರಂಭದಲ್ಲಿ ಇವರಿಗೇಕೆ ನಮನ? 'ದೇವೀಂ ಸರಸ್ವತೀಂ' ಎಂದರೆ ಸರಸ್ವತೀ ದೇವಿಯನ್ನು ಎಂದರ್ಥವೇ ? 'ವ್ಯಾಸಂ, ನಾರಾಯಣಂ' ಎಂದು ಬೇರೆ ಹೇಳಿದುದರಿಂದ ವ್ಯಾಸ ನಾರಾಯಣರು ಬೇರೆ ಬೇರೆಯೆ ? ಒಬ್ಬರೆ ಆದಲ್ಲಿ ಎರಡು ಬಾರಿ ಹೇಳಿದ್ದೇಕೆ ? ಪುನರುಕ್ತಿ ಆಗುವುದಿಲ್ಲವೆ ? 'ಜಯ' ಎಂದರೆ ಶತ್ರುಜಯವೇ ? ಇಂದ್ರಿಯ ಜಯ ಪ್ರಕೃತಕ್ಕೆ ಅಸಂಗತ. ಹಾಗಾದರೆ ಜಯ ಎಂದರೇನು ? ಈ ಎಲ್ಲ ಸಂಶಯಗಳನ್ನು ನಿವಾರಿಸಲು ಆಚಾರ್ಯರೇ ಈ ಪದ್ಯದ ವ್ಯಾಖ್ಯಾನ ಮಾಡುತ್ತಿದ್ದಾರೆ. ಇವರನ್ನೇ ಏಕೆ ನಮಿಸಲೇಬೇಕು? ಎಂಬುದಕ್ಕೆ ಕಾರಣವನ್ನೂ ಕೊಡುತ್ತಿದ್ದಾರೆ —

ಜಯೋ ನಾಮೇತಿಹಾಸೋऽಯಂ
ಕೃಷ್ಣದ್ವೈಪಾಯನೇರಿತಃ ।
ವಾಯುರ್ನರೋತ್ತಮೋ ನಾಮ
ದೇವೀತಿ ಶ್ರೀರುದೀರಿತಾ ॥ ೫ ॥

**ಅರ್ಥ :- ಕೃಷ್ಣದ್ವೈಪಾಯನೇರಿತಃ** ಕೃಷ್ಣದ್ವೈಪಾಯನರಿಂದ ಹೇಳಲ್ಪಟ್ಟ **ಅಯಂ** ಈ, **ಇತಿಹಾಸಃ** 'ಭಾರತ' ಇತಿಹಾಸವೂ, **ಜಯೋ ನಾಮ** 'ಜಯ' ಎಂದು ಪ್ರಸಿದ್ಧವು. **ವಾಯುಃ** ವಾಯುದೇವನು, **ನರೋತ್ತಮಃ ನಾಮ** ನರೋತ್ತಮ ಎಂದು ಪ್ರಸಿದ್ಧನು. **ದೇವೀ ಇತಿ** ದೇವೀ ಎಂದು, **ಶ್ರೀಃ** ಲಕ್ಷ್ಮೀದೇವಿಯು, **ಉದೀರಿತಾ** ಹೇಳಲ್ಪಟ್ಟಿರುವಳು.

**ವಿಶೇಷಾಂಶ :** ಹಿಂದೆ ವೇದವ್ಯಾಸರ ಆಜ್ಞೆಯಿಂದಲೆ ಬ್ರಹ್ಮಾದಿದೇವತೆಗಳು, ಋಷಿಗಳೂ ಸೇರಿ ತಕ್ಕಡಿಯ ಒಂದೆಡೆ ಎಲ್ಲ ವೇದಗಳನ್ನು ಮತ್ತೊಂದೆಡೆ ಭಾರತವನ್ನು ಹಾಕಿ ತೂಗಿದರು. ಮಹಾರ್ಥಪ್ರತಿಪಾದಕವಾದ ಭಾರತ ತನ್ನ ಅರ್ಥಭಾರದಿಂದ ಎಲ್ಲ ಗ್ರಂಥಗಳನ್ನು ಗೆದ್ದಿತು. ಆದ್ದರಿಂದಲೇ ಮಹಾಭಾರತ ವೆಂಬ ವ್ಯಾಸಕೃತ ಇತಿಹಾಸಕ್ಕೆ 'ಜಯ' ಎಂಬ ಹೆಸರು ಬಂತು. ಪ್ರಸಿದ್ಧಿಯೂ ಬಂತು.

'ನರ' ಎಂದರೆ ಶೇಷ. ನರೋತ್ತಮ ಎಂದರೆ ಶೇಷನಿಂದ ಉತ್ತಮನಾದ ವಾಯುದೇವರೆಂದೇ ಅರ್ಥ.

ಕ್ರೀಡಾದಿಗುಣ ವಿಶಿಷ್ಟನಾದ ನಾರಾಯಣನೇ ದೇವ. ಉಳಿದವರೆಲ್ಲ ದೇವಜಾತಿಯಲ್ಲಿ ಹುಟ್ಟಿದ ಕಾರಣ 'ದೇವ'ರು. ಆದುದರಿಂದ ಮುಖ್ಯದೇವ ದೇವದೇವನಾದ ನಾರಾಯಣನೆ. ಅವನ ಭಾರ್ಯೆಯಾದ ಲಕ್ಷ್ಮೀದೇವಿಯೇ 'ದೇವೀ' ॥ ೫ ॥

ನಾರಾಯಣೋ ವ್ಯಾಸ ಇತಿ
ವಾಚ್ಯವಕ್ತೃಸ್ವರೂಪಕಃ ।
ಏಕಸ್ಸ ಭಗವಾನುಕ್ತಃ
ಸಾಧಕೇಶೋ ನರೋತ್ತಮಃ ॥ ೬ ॥

**ಅರ್ಥ :- ಏಕಃ** ಒಬ್ಬನೇ, **ಸಃ** ಆ, **ಭಗವಾನ್** ಭಗವಂತನು, **ವಾಚ್ಯವಕ್ತೃ ಸ್ವರೂಪಕಃ** ಹೇಳಲ್ಪಡುವವನು ಮತ್ತು ಹೇಳುವವನೂ ಆದ ಸ್ವರೂಪದವನಾಗಿ,

**ನಾರಾಯಣಃ** ನಾರಾಯಣನು, **ವ್ಯಾಸಃ** ವ್ಯಾಸರು, **ಇತಿ** ಎಂದು, **ಉಕ್ತಃ** ಹೇಳಲ್ಪಟ್ಟಿರುವವನು. **ಸಾಧಕೇಶಃ** ಸಾಧಕರಿಗೆ ಸ್ವಾಮಿಯಾದ ವಾಯುದೇವರು, **ನರೋತ್ತಮಃ** ನರೋತ್ತಮರು.

**ವಿಶೇಷಾಂಶ** :- ನಾರಾಯಣರೂಪದಿಂದ ಶ್ರೀಹರಿಯು ಗ್ರಂಥಗಳನ್ನು ಕೇಳಿ ಅದರ ಅರ್ಥವನ್ನು ಸಾಧಿಸಿಕೊಂಡವರಾದ ಶುಕಾದಿಗಳಿಗಿಂತಲೂ ಶ್ರೇಷ್ಠರಾದ ವಾಯುದೇವರ ಕರುಣೆಯೇ ನಮಗಿಲ್ಲದಿದ್ದರೆ ಅರ್ಥಬೋಧವೇ ಆಗಲಾರದು. ಆದ್ದರಿಂದ ಅವರ ನಮನವೂ ಆವಶ್ಯಕ. ॥ ೬ ॥

**ಉಪಸಾಧಕೋ ನರಶ್ಶೋಕ್ತೋ**
**ದೇವೀ ಭಾಗ್ಯಾತ್ಮಿಕಾ ನೃಣಾಮ್ ।**
**ಸರಸ್ವತೀ ವಾಕ್ಯರೂಪಾ**
**ತಸ್ಮಾನ್ನಮ್ಯಾ ಹಿ ತೇಽಖಿಲಾಃ ।**
**ಕೃಷ್ಣೌ ಸತ್ಯಾ ಭೀಮಪಾರ್ಥೌ**
**ಕೃಷ್ಣೇತ್ಯುಕ್ತಾ ಹಿ ಭಾರತೇ ॥ ೭ ॥**

**ಅರ್ಥ** :- **ನರಃ ಚ** ಶೇಷನಾದರೂ, **ಉಪಸಾಧಕಃ** ಉಪಸಾಧಕ ಎಂದು (ಮುಖ್ಯ ಸಾಧಕರ ಅನಂತರದವನು), **ಉಕ್ತಃ** ಹೇಳಲ್ಪಟ್ಟಿರುವನು. **ದೇವೀ** ಲಕ್ಷ್ಮೀದೇವಿಯು, **ನೃಣಾಮ್** ಸಜ್ಜನರಿಗೆ, **ಭಾಗ್ಯಾತ್ಮಿಕಾ** ಸಂಪತ್ಸ್ವರೂಪಿಣಿಯಾಗಿರುವಳು. **ಸರಸ್ವತೀ** ಭಾರತೀದೇವಿಯು, **ವಾಕ್ಯರೂಪಾ** ಭಾರತವಾಕ್ಯಗಳ ಅಭಿಮಾನಿನಿಯು, **ತಸ್ಮಾತ್** ಆದುದರಿಂದ, **ತೇ ಅಖಿಲಾಃ** ಅವರೆಲ್ಲರು, **ನಮ್ಯಾಃ ಹಿ** ನಮಿಸಲು ಯೋಗ್ಯರಷ್ಟೇ.

**ಕೃಷ್ಣೌ** ವಾಸಿಷ್ಠ ಮತ್ತು ಯಾದವ ಕೃಷ್ಣರು, **ಸತ್ಯಾ** ಸತ್ಯಭಾಮೆಯು (ರುಗ್ಮಿಣಿಯರು), **ಭೀಮಪಾರ್ಥೌ** ಭೀಮಸೇನ ಮತ್ತು ಅರ್ಜುನ, ಅರ್ಜುನನಲ್ಲಿ ಆವೇಶಗೊಂಡಿರುವ ನರನ (ಶೇಷನ) ಅಪರಾವತಾರನಾದ ಬಲರಾಮನು, **ಕೃಷ್ಣಾ** ದ್ರೌಪದೀ, **ಇತಿ** (ಏತೇ ಸರ್ವೇ) ಹೀಗೆ ಇವರೆಲ್ಲರೂ, **ಭಾರತೇ** ಭಾರತದಲ್ಲಿ, **ಉಕ್ತಾಃ ಹಿ** ಪ್ರತಿಪಾದ್ಯರಷ್ಟೆ

**ವಿಶೇಷಾಂಶ** :- ಮುಖ್ಯಸಾಧಕರಾದ ವಾಯುದೇವರಿಂದ ನೇರವಾಗಿ ಭಾರತಾದಿಗಳನ್ನು ಕೇಳಲು ಅಸಮರ್ಥರಾದ ಸಜ್ಜನರಿಗೆ ವಾಯುದೇವರ

ಮುಖದಿಂದ ನೇರವಾಗಿ ಉಪದೇಶಪಡೆದ ಉಪಸಾಧಕರಾದ ಶೇಷದೇವರ ಅನುಗ್ರಹದಿಂದಲೇ ಭಾರತಾದಿಗಳ ಜ್ಞಾನ ಬರಬೇಕು. ಆದುದರಿಂದ ಉಪ ಸಾಧಕರನ್ನೂ ನಮಿಸಲೇಬೇಕು.

ವಕ್ತೃಗಳಿಗೆ ಶ್ರೋತೃಗಳಿಗೆ ಅನ್ನಪಾನಾದಿಗಳೇ ಇಲ್ಲದಿದ್ದರೆ, ಬದುಕುವುದೇ ದುಸ್ತರವಾದರೆ ಹೇಳುವರು ಯಾರು? ಕೇಳುವರು ಯಾರು? ಹೇಗೆ ? ಆದುದರಿಂದ ದಾರಿದ್ರ್ಯದ ಚಿಂತೆ ತಲೆಗೆ ಹತ್ತದೆ ನೆಮ್ಮದಿಯಿಂದ ಹೇಳುವಂತಾಗ ಬೇಕು. ನೆಮ್ಮದಿಯಿಂದ ಕೇಳುವಂತಾಗಬೇಕು ಅದಕ್ಕಾಗಿಯೇ ಸೌಭಾಗ್ಯ ದಾಯಿನಿಯಾದ ಸಂಪತ್ ಸ್ವರೂಪಿಣಿಯಾದ ಲಕ್ಷ್ಮೀದೇವಿಯ ನಮನವೂ ಅವಶ್ಯ.

ಕೋಶದಲ್ಲಿರುವ ಹಣ ಪಡೆಯಬೇಕಾದರೆ ಕೋಶಪಾಲನ ನಮನವು ಹೇಗೆ ಅಗತ್ಯವೋ ಹಾಗೆ ವಾಕ್ಯಗಳ ಭಾವ ಅರ್ಥವಾಗಬೇಕಾದರೆ ವಾಕ್ಯಾಭಿ ಮಾನಿನಿಯಾದ ಸರಸ್ವತಿಯ ನಮನವೂ ಅವಶ್ಯ.

ಶ್ರೀಹರಿಯು ನಾರಾಯಣರೂಪದಿಂದ ಮಾತ್ರ ಪ್ರತಿಪಾದ್ಯನಲ್ಲ, ವ್ಯಾಸ ರೂಪದಿಂದ ವ್ಯಾಸಾವತಾರ ಕಥಾಸಂದರ್ಭದಲ್ಲಿ ವಿಸ್ತಾರವಾಗಿ ಪ್ರತಿಪಾದ್ಯ ನಾಗಿರುವನು. ಅರ್ಜುನಸಾರಥ್ಯ, ದೌತ್ಯ, ಗೀತೋಪದೇಶ, ವಿಶ್ವರೂಪ ಪ್ರದರ್ಶನ ಮೊದಲಾದ ಸಂದರ್ಭದಲ್ಲಿ ಶ್ರೀಕೃಷ್ಣರೂಪದಿಂದಲೂ ಇನ್ನಷ್ಟು ವಿಸ್ತಾರವಾಗಿ ಪ್ರತಿಪಾದ್ಯನಾಗಿರುವನು. ಹೀಗೆ ಮೂಲರೂಪದಿಂದ, ವಾಸಿಷ್ಠ ಕೃಷ್ಣ ಯಾದವಕೃಷ್ಣ ರೂಪಗಳಿಂದಲೂ ಪ್ರತಿಪಾದ್ಯನೂ, ವ್ಯಾಸರೂಪದಿಂದ ವಕ್ತೃವೂ ಆದುದರಿಂದ ಶ್ರೀಹರಿಯ ನಮನ. ಲಕ್ಷ್ಮೀದೇವಿಯು ರಾಜಸೂಯ ಅಶ್ವಮೇಧಾದಿಗಳನ್ನು ಮಾಡುವ ಸಂದರ್ಭದಲ್ಲಿ ರುಗ್ಮಿಣೀ, ಸತ್ಯಭಾಮಾರೂಪ ಗಳಿಂದ ಪ್ರತಿಪಾದ್ಯಳೂ ಅಧ್ಯಯನ ಮಾಡುವವರಿಗೆ ಭಾಗ್ಯದಾಯಿನಿಯೂ ಆಗಿರುವುದರಿಂದ ನಮ್ಯಳು.

ಡಂಬೋದ್ಭವನ ಗರ್ವಶಮನದ ಸಂದರ್ಭದಲ್ಲಿ 'ನರ' ಮುನಿಯ ಚರಿತ್ರೆಯೂ ಬರುವುದರಿಂದ ನರರೂಪದಿಂದ ಪ್ರತಿಪಾದ್ಯರೂ, ಅರ್ಜುನನಲ್ಲಿ ಆವಿಷ್ಟರಾಗಿ ಮಹಿಮೆಗಳನ್ನು ತೋರಿ ಆವಿಷ್ಟರೂಪದಿಂದಲೂ ಪ್ರತಿಪಾದ್ಯರು. ತೀರ್ಥಯಾತ್ರೆ, ಗದಾಯುದ್ಧವೇ ಮುಂತಾದ ಸಂದರ್ಭದಲ್ಲಿ ಬಲರಾಮನ

ಕಥೆಯೂ ಬಂದಿದೆ. ಬಲರಾಮನೂ ಶೇಷಾವತಾರವೇ. ಹೀಗೆ ಮೂರು ರೂಪಗಳಿಂದ ಪ್ರತಿಪಾದ್ಯರಾಗಿ ಉಪಸಾಧಕರೂ ಆದುದರಿಂದ ಶೇಷನೂ ನಮ್ಯ.

ವಾಯುದೇವರು ಭೀಮರೂಪದಿಂದ ಭಾರತದೆಲ್ಲೆಡೆ ಪ್ರತಿಪಾದ್ಯರಾಗಿದ್ದಾರೆ. ಅಲ್ಲದೆ ವ್ಯಾಸರ ಮುಖದಿಂದ ನೇರವಾಗಿ ಸಕಲಭಾರತಾರ್ಥವನ್ನು ಕೇಳಿ ಸಂಗ್ರಹ ಮಾಡಿರುವ ಸಾಧಕಾಗ್ರೇಸರರೂ ಆಗಿರುವುದರಿಂದ ಅವಶ್ಯ ನಮ್ಯರು.

ಸರಸ್ವತಿಯು ದ್ರೌಪದೀರೂಪದಿಂದ ಭಾರತ ಪ್ರತಿಪಾದ್ಯಳಾಗಿರುವುದಲ್ಲದೆ ಭಾರತ ವಾಕ್ಯಾಭಿಮಾನಿನಿಯೂ ಆಗಿರುವಳು. ಆದುದರಿಂದ ಸರಸ್ವತಿಯ ನಮನವೂ ಆವಶ್ಯಕ. ॥ ೭ ॥

ಮೊದಲೆರಡು ಅಧ್ಯಾಯಗಳ ಪ್ರತಿಪಾದ್ಯ ವಿಷಯಗಳನ್ನು ಅನುವಾದ ಮಾಡಿ ಮುಂದಿನ ಸಮಗ್ರ ಗ್ರಂಥದ ಪ್ರತಿಪಾದ್ಯ ವಿಷಯವನ್ನು ತಿಳಿಸುತ್ತಾರೆ —

**ಸರ್ವಸ್ಯ ನಿರ್ಣಯಸುವಾಕ್ಯಸಮುದ್ಧೃತೀ ತು**
**ಸ್ವಧ್ಯಾಯಯೋರ್ಹರಿಪದಸ್ಮರಣೇನ ಕೃತ್ವಾ ।**
**ಆನಂದತೀರ್ಥವರನಾಮವತೀ ತೃತೀಯಾ**
**ಭೌಮೀ ತನುರ್ಮರುತ ಆಹ ಕಥಾಃ ಪರಸ್ಯ ॥ ೮ ॥**

**ಅರ್ಥ** :- **ಸ್ವಧ್ಯಾಯೋಃ** ಶೋಭನಗಳಾದ ಎರಡು ಅಧ್ಯಾಯಗಳಲ್ಲಿ **ಸರ್ವಸ್ಯ** ಎಲ್ಲ ಶಾಸ್ತ್ರಾರ್ಥಗಳ, **ನಿರ್ಣಯಸುವಾಕ್ಯ ಸಮುದ್ಧೃತೀ** ನಿರ್ಣಯವನ್ನು, ನಿರ್ಣಾಯಕಗಳಾದ ಶೋಭನ ವಾಕ್ಯಗಳ ಸಮೀಚೀನವಾದ ಉಲ್ಲೇಖಗಳನ್ನು, **ಹರಿಪದಸ್ಮರಣೇನ** ಶ್ರೀಹರಿಯ ಪಾದಸ್ಮರಣೆಯಿಂದ, **ಕೃತ್ವಾ** ಮಾಡಿ, **ಆನಂದತೀರ್ಥವರನಾಮವತೀ** 'ಆನಂದತೀರ್ಥ' ಎಂಬ ಶ್ರೇಷ್ಠ ಹೆಸರುಳ್ಳ, **ಭೌಮೀ** ಭೂಮಿಯಲ್ಲಿ ಅವತರಿಸಿದ, **ಮರುತಃ** ವಾಯುದೇವರ, **ತೃತೀಯಾ** ಮೂರನೆಯ, **ತನುಃ** ಅವತಾರವು, **ಪರಸ್ಯ** ಪರಮಾತ್ಮನ, **ಕಥಾಃ** ಕಥೆಗಳನ್ನು **ಆಹ** ಹೇಳುವುದು.

**ತಾತ್ಪರ್ಯ** :- ಮೊದಲನೆಯ ಮತ್ತು ಎರಡನೆಯ ಅಧ್ಯಾಯಗಳಲ್ಲಿ ಶಾಸ್ತ್ರಾರ್ಥ ನಿರ್ಣಯ ಮತ್ತು ನಿರ್ಣಾಯಕವಾದ ಪ್ರಮಾಣವಾಕ್ಯಗಳ

ಉಲ್ಲೇಖಗಳನ್ನು ಶ್ರೀಹರಿಪಾದಸ್ಮೃತಿಪೂರ್ವಕ ಮಾಡಿದ ವಾಯುದೇವರ ತೃತೀಯಾವತಾರರಾದ ಆನಂದತೀರ್ಥರು ಸರ್ವೋತ್ತಮನಾದ ಶ್ರೀಹರಿಯ ಕಥೆಗಳನ್ನು ಈಗ ಹೇಳುತ್ತಿರುವರು.॥ ೮ ॥

ಪ್ರಥಮಾಧ್ಯಾಯದಲ್ಲಿ ಯಾರಿಗೆ ಸೂಕ್ಷ್ಮ ಸೃಷ್ಟಿಯನ್ನು ಹೇಳಿದ್ದರೋ ಅವರ ಸ್ಥೂಲಸೃಷ್ಟಿಯ ಕ್ರಮವನ್ನೂ, ಹಿಂದೆ ಹೇಳಿದ ಸೃಷ್ಟಿಯನ್ನೂ ಅನುವಾದ ಮಾಡಿ, ತಿಳಿಸುವರು —

**ವ್ಯೂಢಶ್ಚತುರ್ಧಾ ಭಗವಾನ್ ಸ ಏಕೋ**
**ಮಾಯಾಂ ಶ್ರಿಯಂ ಸೃಷ್ಟಿವಿಧಿತ್ಸಯಾಽಽರ ।**
**ರೂಪೇಣ ಪೂರ್ವೇಣ ಸ ವಾಸುದೇವ**
**ನಾಮ್ನಾ ವಿರಿಂಚಂ ಸುಷುವೇ ಚ ಸಾಽತಃ ॥ ೯ ॥**

**ಅರ್ಥ** :- **ಭಗವಾನ್** ಐಶ್ವರ್ಯಾದಿ ಗುಣಗಳಿಂದ ಪೂರ್ಣನಾದ, **ಏಕಃ** ಅವತಾರಾದಿಗಳಲ್ಲಿ ಭೇದರಹಿತನಾದ, **ಸಃ** ಆ ನಾರಾಯಣನು, **ಚತುರ್ಧಾ** ನಾಲ್ಕು ಪ್ರಕಾರದಿಂದ (ವಾಸುದೇವ, ಸಂಕರ್ಷಣ, ಪ್ರದ್ಯುಮ್ನ ಅನಿರುದ್ಧ), **ವ್ಯೂಢಃ** ವ್ಯೂಹವನ್ನು ಹೊಂದಿ ಅವತರಿಸಿದನು. **ಸಃ** ಆ ಭಗವಂತನು **ವಾಸುದೇವನಾಮ್ನಾ** 'ವಾಸುದೇವ' ಎಂಬ ಹೆಸರುಳ್ಳ, **ಪೂರ್ವೇಣ** ಮೊದಲನೆಯ, **ರೂಪೇಣ** ರೂಪದಿಂದ, **ಸೃಷ್ಟಿ ವಿಧಿತ್ಸಯಾ** ಸೃಷ್ಟಿಯನ್ನು ಮಾಡುವ ಇಚ್ಛೆಯಿಂದ, **ಮಾಯಾಂ** 'ಮಾಯಾ' ಎಂಬ ಹೆಸರಿನ, **ಶ್ರಿಯಂ** ಲಕ್ಷ್ಮೀದೇವಿಯನ್ನು, **ಆರ** ಹೊಂದಿದನು. **ಸಾ ಚ** ಆ ಮಾಯಾದೇವಿ ಯಾದರೂ, **ಅತಃ** ಈ ವಾಸುದೇವನ ದೆಸೆಯಿಂದ, **ವಿರಿಂಚಂ** ಚತುರ್ಮುಖ ಬ್ರಹ್ಮನನ್ನು, **ಸುಷುವೇ** ಹಡೆದಳು. ॥ ೯ ॥

**ತಾತ್ಪರ್ಯ** :- ಅವತಾರ, ಅವಯವ, ಗುಣ, ಕ್ರಿಯಾಗಳಲ್ಲಿ ಭೇದರಹಿತ ನಾದ ಭಗವಂತನು ವಾಸುದೇವ, ಸಂಕರ್ಷಣ, ಪ್ರದ್ಯುಮ್ನ ಅನಿರುದ್ಧ ಎಂಬ ನಾಲ್ಕು ರೂಪಗಳನ್ನು ಹೊಂದಿದನು. ಆ ವಾಸುದೇವನು 'ಮಾಯಾ' ಎಂಬ ಹೆಸರಿನ ಲಕ್ಷ್ಮೀದೇವಿಯನ್ನು ಹೊಂದಿದನು. ಮಾಯೆಯು ಚತುರ್ಮುಖ ಬ್ರಹ್ಮನನ್ನು ಹಡೆದಳು.॥ ೯ ॥

**ಸಂಕರ್ಷಣಾಚ್ಚಾಪಿ ಜಯಾತನೂಜೋ**
**ಬಭೂವ ಸಾಕ್ಷಾದ್ ಬಲಸಂವಿದಾತ್ಮಾ ।**
**ವಾಯುರ್ಯ ಏವಾಥ ವಿರಿಂಚನಾಮಾ**
**ಭವಿಷ್ಯ ಆದ್ಯೋ ನ ಪರಸ್ತತೋ ಹಿ ॥ ೧೦ ॥**

**ಅರ್ಥ** :- **ಬಲಸಂವಿದಾತ್ಮಾ** ಸಾಮರ್ಥ್ಯ ಮತ್ತು ಯಥಾರ್ಥಜ್ಞಾನ ಇವುಗಳೇ ಸ್ವರೂಪವಾಗಿರುವ, **ಸಾಕ್ಷಾದ್ ವಾಯುಃ** ಮುಖ್ಯವಾಯು ದೇವರು, **ಸಂಕರ್ಷಣಾಚ್ಚಾಪಿ** ಸಂಕರ್ಷಣನ ದೆಸೆಯಿಂದಲೇ, **ಜಯಾತನೂಜಃ** 'ಜಯಾ' ಎಂಬ ಹೆಸರಿನ ಲಕ್ಷ್ಮೀದೇವಿಯ ಮಗನಾಗಿ, **ಬಭೂವ** ಅವತರಿಸಿದರು. ಈ ವಾಯು ಯಾರೆಂದರೆ **ಯ ಏವ** ಯಾವ ವಾಯುದೇವರೇ, **ಅಥ** ಕಲ್ಪಾಂತರದಲ್ಲಿ, **ಆದ್ಯಃ** ಮುಂದೆ ಬ್ರಹ್ಮಪದವಿಗೆ ಬರಲಿರುವವರಲ್ಲಿ ಮೊದಲಿಗರಾಗಿ, **ಭವಿಷ್ಯಃ ವಿರಿಂಚನಾಮಾ** 'ಭಾವಿಬ್ರಹ್ಮ' ಎಂಬ ಹೆಸರುಳ್ಳವರಾಗಿರುವರೋ, ಸ ಏವ ಅವರೇ. **ತತಃ** ಆ ವಾಯುದೇವರ ದೆಸೆಯಿಂದ, **ಪರಃ** ಬೇರೆಯವರು, **ನ ಹಿ** ಬ್ರಹ್ಮ ಪದವಿಯನ್ನು ಪಡೆಯುವವರಿಲ್ಲವಷ್ಟೆ॥ ೧೦ ॥

**ತಾತ್ಪರ್ಯ** :- ಮುಂದಿನ ಕಲ್ಪದಲ್ಲಿ ಬ್ರಹ್ಮಪದವಿಗೆ ಬರುವ, 'ಭಾವಿಬ್ರಹ್ಮ' ಎಂದೇ ಪ್ರಸಿದ್ಧರಾಗಿರುವ, ಸಾಮರ್ಥ್ಯ ಮತ್ತು ಯಥಾರ್ಥಜ್ಞಾನ ಇವುಗಳೇ ಸ್ವರೂಪವಾಗಿ ಉಳ್ಳ ವಾಯುದೇವರು ಸಂಕರ್ಷಣರೂಪಿ ಹರಿಯ ದೆಸೆಯಿಂದ 'ಜಯಾ' ಎಂಬ ಹೆಸರಿನ ಲಕ್ಷ್ಮೀದೇವಿಯಿಂದ ಹುಟ್ಟಿದರು.॥ ೧೦ ॥

**ಪೀಠಿಕೆ** :- ವಾಸುದೇವನಿಂದ ವಿರಿಂಚ, ಸಂಕರ್ಷಣನಿಂದ ವಾಯು ಹುಟ್ಟಿದರೆಂದು ಇಲ್ಲಿ ಹೇಳಿದೆ. ಬೇರೆ ಗ್ರಂಥಗಳಲ್ಲಿ ವಾಸುದೇವನಿಂದ ಪುರುಷ, ಸಂಕರ್ಷಣನಿಂದ ಸೂತ್ರ ಹುಟ್ಟಿದರೆಂದಿದೆ. ಆದುದರಿಂದ ಇವೆರಡು ಅಭಿಪ್ರಾಯಗಳಿಗೆ ವಿರೋಧ ಇದೆ ಎಂದು ಮೇಲ್ನೋಟಕ್ಕೆ ಬರುವ ಶಂಕೆಯನ್ನು ಆಚಾರ್ಯರು ಪರಿಹರಿಸುತ್ತಿದ್ದಾರೆ —

**ಸೂತ್ರಂ ಸ ವಾಯುಃ ಪುರುಷೋ ವಿರಿಚಃ**
**ಪ್ರದ್ಯುಮ್ನತಶ್ಚಾಥ ಕೃತೌ ಸ್ತ್ರಿಯೌ ದ್ವೇ ।**
**ಪ್ರಜಜ್ಞತುರ್ಯಮಳೇ ತತ್ರ ಪೂರ್ವಾ**
**ಪ್ರಧಾನಸಂಜ್ಞಾ ಪ್ರಕೃತಿರ್ಜನಿಶ್ರೀ ॥ ೧೧ ॥**

**ಅರ್ಥ** :- **ಸೂತ್ರಂ** ಬೇರೆ ಗ್ರಂಥದಲ್ಲಿ ಯಾರು 'ಸೂತ್ರ' ಎಂದು ಹೇಳಲ್ಪಟ್ಟಿರುವವರೋ, **ಸಃ** ಅವರು, **ವಾಯುಃ** ವಾಯುದೇವರೇ, **ಪುರುಷಃ** ಗ್ರಂಥಾಂತರದಲ್ಲಿ ಪುರುಷರೆಂದು ಯಾರು ಹೇಳಲ್ಪಟ್ಟಿರುವವರೋ, **ಸಃ ವಿರಿಂಚಃ** ಅವರು ಬ್ರಹ್ಮದೇವರೇ.

**ಅಥ** ಬ್ರಹ್ಮವಾಯುಗಳ ಉತ್ಪತ್ತಿಯ ಅನಂತರ, **ಪ್ರದ್ಯುಮ್ನತಃ ಚ** ಪ್ರದ್ಯುಮ್ನನಿಂದಲಾದರೂ, **ಕೃತೌ** 'ಕೃತಿ' ನಾಮಕಳಾದ ಲಕ್ಷ್ಮೀದೇವಿಯಲ್ಲಿ, **ದ್ವೇ** ಇಬ್ಬರು, **ಸ್ತ್ರಿಯೌ** ಹೆಣ್ಣುಮಕ್ಕಳು, **ಯಮಳೇ** ಅವಳಿಗಳಾಗಿ, **ಪ್ರಜಜ್ಞತುಃ** ಹುಟ್ಟಿದರು. **ತತ್ರ** ಅವರಿಬ್ಬರ ಮಧ್ಯದಲ್ಲಿ, **ಪೂರ್ವಾ** ಮೊದಲನೆಯವಳು, **ಪ್ರಧಾನ ಸಂಜ್ಞಾ** 'ಪ್ರಧಾನ' ಎಂಬ ಹೆಸರಿನ, **ಜನಿತ್ರೀ** ಶಿವಾದಿಗಳನ್ನೂ ಹುಟ್ಟಿಸುವ, **ಪ್ರಕೃತಿಃ** ಪ್ರಕೃತಿಯು.॥ ೧೧ ॥

**ತಾತ್ಪರ್ಯ** :- ವಾಯುದೇವರೇ ಬೇರೆ ಗ್ರಂಥದಲ್ಲಿ ಸೂತ್ರ ಎಂದೂ, ಬ್ರಹ್ಮ ದೇವರೇ ಬೇರೆಡೆ ಪುರುಷರೆಂದು ಹೇಳಲ್ಪಟ್ಟಿರುವರು. ಇವರಿಬ್ಬರ ಉತ್ಪತ್ತಿಯ ಬಳಿಕ ಪ್ರದ್ಯುಮ್ನರೂಪಿಯಾದ ಶ್ರೀಹರಿಯ ದೆಸೆಯಿಂದ 'ಕೃತಿ' ಎಂಬ ಹೆಸರಿನ ಲಕ್ಷ್ಮೀ ದೇವಿಯಲ್ಲಿ ಅವಳಿ ಹೆಣ್ಣುಮಕ್ಕಳು ಜನಿಸಿದರು. ಅವರಲ್ಲಿ ಮೊದಲನೆಯವಳು ಶಿವಾದಿಗಳಿಗೂ ಜನನಿಯಾದ 'ಪ್ರಧಾನ' ಎಂಬ ಹೆಸರಿನ ಪ್ರಕೃತಿ. ॥ ೧೧ ॥

**ಶ್ರದ್ಧಾ ದ್ವಿತೀಯಾಽಥ ತಯೋಶ್ಚ ಯೋಗೋ**
**ಬಭೂವ ಪುಂಸೈವ ಚ ಸೂತ್ರನಾಮ್ನಾ ।**
**ಹರೇರ್ನಿಯೋಗಾದಥ ಸಂಪ್ರಸೂತಾ**
**ಶೇಷಃ ಸುಪರ್ಣಶ್ಚ ತಯೋಃ ಸಹೈವ ॥ ೧೨ ॥**

**ಅರ್ಥ** :- **ದ್ವಿತೀಯಾ** ಎರಡನೆಯವಳು, **ಶ್ರದ್ಧಾ** 'ಶ್ರದ್ಧಾ' ದೇವಿಯು, **ಅಥ** ಅವರಿಬ್ಬರ ಉತ್ಪತ್ತಿಯ ಅನಂತರದಲ್ಲಿ, **ಹರೇಃ** ಪರಮಾತ್ಮನ, **ನಿಯೋಗಾದ್ ಏವ** ಅಪ್ಪಣೆಯಿಂದಲೇ, **ತಯೋಶ್ಚ** ಆ ಪ್ರಧಾನ ಶ್ರದ್ಧಾ ಇಬ್ಬರಿಗೂ, **ಪುಂಸಾ** ಪುರುಷನಾಮಕ ಬ್ರಹ್ಮದೇವರಿಂದ **ಸೂತ್ರನಾಮ್ನಾ ಚ** ಸೂತ್ರನಾಮಕ ವಾಯುದೇವರಿಂದಲೂ, **ಯೋಗಃ** ಸಂಬಂಧವು, **ಬಭೂವ** ಆಯಿತು. **ಅಥ** ಅನಂತರ, **ತಯೋಃ** ಆ ಪುರುಷ ಮತ್ತು ಸೂತ್ರರಿಗೆ, **ಸಹ ಏವ**

ಏಕಕಾಲದಲ್ಲಿಯೇ, **ಶೇಷಃ** ಶೇಷನು, **ಚ** ಮತ್ತು, **ಸುಪರ್ಣಃ** ಗರುಡನು, **ಸಂಪ್ರಸೂತೌ** ಹುಟ್ಟಿದರು.

**ತಾತ್ಪರ್ಯ** :- ಪ್ರದ್ಯುಮ್ನನಿಂದ ಕೃತಿಯಲ್ಲಿ ಹುಟ್ಟಿದ ಎರಡನೆಯವಳು ಶ್ರದ್ಧಾದೇವಿ. ಶ್ರೀಹರಿಯ ಆದೇಶದಂತೆ ನಡೆದ 'ಪ್ರಧಾನ' ಎಂಬ ಹೆಸರಿನ ಸರಸ್ವತೀ, ಮತ್ತು ವಿರಿಂಚರ ಸಹಯೋಗದಿಂದ ಶೇಷನು, ಶ್ರದ್ಧಾನಾಮಕ ಭಾರತೀ ಮತ್ತು ವಾಯುದೇವರ ಸಹಯೋಗದಿಂದ ಗರುಡನು ಏಕಕಾಲದಲ್ಲಿ ಹುಟ್ಟಿದರು. ॥ ೧೨ ॥

**ವಿಶೇಷ ವಿಷಯ** :"ನಾರಾಯಣಾಖ್ಯಃ ಪುರುಷಃ ಶೇತೇ ಲಕ್ಷ್ಮ್ಯಾನ್ವಿತೋ ಲಯೇ । ಸ ಏವ ಪುರುಷಾಖ್ಯಂ ತು ದ್ವಿತೀಯಂ ರೂಪಮಾತ್ಮನಃ ॥ ಕೃತ್ವಾ ರಮಾಯಾಂ ಪುರುಷನಾಮಾನಂ ತು ಚತುರ್ಮುಖಮ್ । ಪ್ರಧಾನಾಖ್ಯಾಂ ಚ ಗಾಯತ್ರೀಂ ಸಸರ್ಜ ಪುರುಷಾತ್ಮಕಃ । ಚತುರ್ಮುಖಃ ಸ ಪುರುಷೋ ಮಹತ್ತತ್ತ್ವಾಭಿಧಾಂ ಪುನಃ । ಪ್ರಧಾನನಾಮ್ನ್ಯಾಂ ಗಾಯತ್ರ್ಯಾಂ ಸಸರ್ಜಾತ್ಮಾನಮೇವ ತು ॥ ಶ್ರದ್ಧಾಭಿಧಾಂ ಚ ಗಾಯತ್ರೀಂ ತಾಭ್ಯಾಂ ಶೇಷೋಽನ್ವಜಾಯತ" ಎಂಬ ಪ್ರಮಾಣ ವಾಕ್ಯದಲ್ಲಿ ಪುರುಷನ ದೆಸೆಯಿಂದ ಬ್ರಹ್ಮ-ಪ್ರಧಾನರ ಸೃಷ್ಟಿಯನ್ನು ಹೇಳಲಾಗಿದೆ. ಪುರುಷನಾಮಕನಾದ ಬ್ರಹ್ಮನ ದೆಸೆಯಿಂದಲೇ 'ಮಹತ್ತತ್ತ್ವ' ಎಂಬ ಹೆಸರುಳ್ಳ ಬ್ರಹ್ಮನ ಸೃಷ್ಟಿಯನ್ನೂ ಹೇಳಲಾಗಿದೆ. ಪ್ರಕೃತದಲ್ಲಿ ವಾಸುದೇವನಿಂದ ಬ್ರಹ್ಮನ ಸೃಷ್ಟಿಯನ್ನು ಪ್ರದ್ಯುಮ್ನನ ದೆಸೆಯಿಂದ ಪ್ರಧಾನಳ ಸೃಷ್ಟಿಯನ್ನು ಅನಿರುದ್ಧನಿಂದ ಮಹತ್ತತ್ತ್ವ ಎಂದು ಹೆಸರಿನ ಬ್ರಹ್ಮನ ಸೃಷ್ಟಿಯನ್ನು ಹೇಳಲಾಗಿದೆ. ಆದುದರಿಂದ ವಿರೋಧವಿದೆ ಎಂದು ತೋರಬಹುದು. ಆದರೆ ವಾಸ್ತವಿಕವಾಗಿ ವಿರೋಧವಿಲ್ಲ. ಬ್ರಹ್ಮ ತರ್ಕದಲ್ಲಿ "ಯತ್ತಸ್ಯ ವ್ಯಾಪಕಂ ರೂಪಂ ಪರಂ ನಾರಾಯಣಾಭಿದಮ್ । ಶೂನ್ಯಂ ಬ್ರಹ್ಮೇತಿ ತಂ ಪ್ರಾಹುಃ ದ್ವಿತೀಯಂ ಸ್ರಷ್ಟೃ ಯತ್ತತಃ । ಪರಮಃ ಪುರುಷೋ ನಾಮಾಮಿತಂ ತದ್ದೇಶತೋ ವಿಭೋಃ ॥" ಎಲ್ಲೆಡೆ ವ್ಯಾಪಕನಾದ ಭಗವಂತನ ರೂಪದ ಹೆಸರು ನಾರಾಯಣ. ಪ್ರಲಯಕಾಲದಲ್ಲಿ ಶೂನ್ಯ ಎಂಬುದಾಗಿಯೂ ಆತನ ಹೆಸರು. ಸೃಷ್ಟಿಮಾಡುವ ಎರಡನೆಯ ರೂಪ ಪುರುಷ ಎಂದು. ಏಕೆಂದರೆ ಆ ರೂಪದಿಂದ ವಿಪುಲವಾಗಿ ಸೃಷ್ಟಿಮಾಡುತ್ತಾನೆ. ಸೃಷ್ಟಿಮಾಡುವ ಸಲುವಾಗಿ ಭಗವಂತನು ತೆಗೆದುಕೊಂಡ ವಾಸುದೇವಾದಿ ರೂಪಗಳನ್ನು ಪುರುಷ ಎಂದು ಕರೆಯಲಾಗಿದೆ.

ಆದುದರಿಂದ ಪುರುಷನಿಂದ ಸೃಷ್ಟಿ ವಾಸುದೇವಾದಿಗಳಿಂದ ಸೃಷ್ಟಿ ಎಂದರೆ ಎರಡರ ಅಭಿಪ್ರಾಯ ಒಂದೇ ಆಗುವುದರಿಂದ ವಿರೋಧವಿಲ್ಲ. ॥ ೧೨ ॥

**ಶೇಷಸ್ತಯೋರೇವ ಹಿ ಜೀವನಾಮಾ**
**ಕಾಲಾತ್ಮಕಃ ಸೋಽಥ ಸುಪರ್ಣ ಆಸೀತ್ ।**
**ತೌ ವಾಹನಂ ಶಯನಂ ಚೈವ ವಿಷ್ಣೋಃ**
**ಕಾಲಾ ಜಯಾದ್ಯಾಶ್ಚ ತತಃ ಪ್ರಸೂತಾಃ ॥ ೧೩ ॥**

**ಅರ್ಥ :-** **ತಯೋಃ** ಆ ಶೇಷಗರುಡರ ಮಧ್ಯದಲ್ಲಿ, **ಶೇಷಃ ಏವ** ಶೇಷನೆ, **ಜೀವ ನಾಮಾ** 'ಜೀವ' ಎಂಬ ಹೆಸರುಳ್ಳವನು, **ಅಥ** ಅನಂತರ, **ಸಃ** ಆ, **ಸುಪರ್ಣಃ** ಗರುಡನು, **ಕಾಲಾತ್ಮಕಃ** ಕಾಲ ಎಂಬ ಸ್ವರೂಪವುಳ್ಳವನು, **ಆಸೀತ್** ಆದನು, **ತೌಚ** ಅವರಿಬ್ಬರೂ ಕೂಡ, **ವಿಷ್ಣೋಃ ಏವ** ವಿಷ್ಣುವಿಗೆ ಕ್ರಮವಾಗಿ, **ವಾಹನಂ** ವಾಹನವು, **ಶಯನಂ** ಹಾಸಿಗೆಯು, ಆದರು, **ತತಃ** ಅವರಿಬ್ಬರ ದೆಸೆಯಿಂದ, **ಕಾಲಾಃ** ಕಾಲನಾಮಕರು, **ಚ** ಮತ್ತು, **ಜಯಾದ್ಯಾಃ** ಜಯ ವಿಜಯಾದಿಗಳು, **ಪ್ರಸೂತಾಃ** ಹುಟ್ಟಿದರು, ಶೇಷನಿಂದ ಕಾಲನಾಮಕರು ಗರುಡನಿಂದ ಜಯಾದಿಗಳು ಹುಟ್ಟಿದರು.

**ತಾತ್ಪರ್ಯ :**ಆ ಶೇಷ, ಗರುಡರಲ್ಲಿ ಶೇಷನಿಗೆ ಜೀವ ಎಂದು ಹೆಸರು. ಗರುಡನು ಕಾಲ ಎಂಬ ಸ್ವರೂಪವುಳ್ಳವನಾದನು. ಶೇಷನು ಶ್ರೀಹರಿಯ ಹಾಸಿಗೆ ಯಾದನು. ಗರುಡನು ವಾಹನನಾದನು. ಕಾಲನಾಮಕ ಹರಿಪಾರ್ಷದರು ಶೇಷನಿಂದಲೂ ಜಯವಿಜಯಾದಿಗಳು ಗರುಡನಿಂದಲೂ ಹುಟ್ಟಿದರು.॥೧೩॥

ಕಾಲನಾಮಕರು, ಜಯಾದಿಗಳು ಯಾರೆಂದು ತಿಳಿಸುತ್ತ ರುದ್ರಾದಿದೇವತೆ ಗಳಿಗಿಂತ ಮೊದಲು ಹುಟ್ಟಿದ ಕಾರಣ ಅವರಿಗಿಂತಲೂ ಉತ್ತಮರು ಎಂಬ ಶಂಕೆಯನ್ನು ಪರಿಹರಿಸುವರು -

**ಕಾಲಾ ಜಯಾದ್ಯಾ ಅಪಿ ವಿಷ್ಣುಪಾರ್ಷದಾಃ**
**ಯಸ್ಮಾದಂಡಾತ್ ಪರತಃ ಸಂಪ್ರಸೂತಾಃ ।**
**ನೀಚಾಃ ಸುರೇಭ್ಯಸ್ತತ ಏವ ತೇಽಖಿಲಾಃ**
**ವಿಷ್ವಕ್ಸೇನೋ ವಾಯುಜಃ ಖೇನ ತುಲ್ಯಃ ॥ ೧೪ ॥**

**ಅರ್ಥ :- ವಿಷ್ಣುಪಾರ್ಷದಾಃ** ಭಗವಂತನ ಪಾರ್ಷದರಾದ, **ಕಾಲಾಃ** ಕಾಲ ನಾಮಕರು, **ಜಯಾದ್ಯಾ ಅಪಿ** ಜಯವಿಜಯಾದಿಗಳೂ ಕೂಡ, **ಯಸ್ಮಾತ್** ಯಾವ ಕಾರಣದಿಂದ, **ಅಂಡಾತ್** ಬ್ರಹ್ಮಾಂಡದ ದೆಸೆಯಿಂದ, **ಪರತಃ** ಹೊರಗೆ, **ಪ್ರಸೂತಾಃ** ಹುಟ್ಟಿದರೋ, **ತತಃ** ಏವ ಆ ಕಾರಣದಿಂದಲೇ, **ತೇ ಅಖಿಲಾಃ** ಆ ಎಲ್ಲರೂ, **ಸುರೇಭ್ಯಃ** ರುದ್ರಾದಿದೇವತೆಗಳಿಗಿಂತಲೂ, **ನೀಚಾಃ** ಅಧಮರು, ಬ್ರಹ್ಮಾಂಡದ ಒಳಗೆ ಮಾಡಿರುವ ಸೃಷ್ಟಿಯು ತಾರತಮ್ಯಕ್ಕೆ ಜ್ಞಾಪಕ, ಬ್ರಹ್ಮಾಂಡದ ಹೊರಗಿನ ಸೃಷ್ಟಿಯು ಜ್ಞಾಪಕವಲ್ಲ, ಆದರೆ ಅದಕ್ಕೆ ಒಂದು ಅಪವಾದ **ವಾಯುಜಃ** ವಾಯುದೇವರಿಂದ ಹುಟ್ಟಿದ, **ವಿಷ್ವಕ್ಸೇನಃ** ವಿಷ್ವಕ್ಸೇನನು, **ಖೇನ** ಆಕಾಶಾಭಿಮಾನಿಯಾದ ವಿನಾಯಕನಿಂದ **ತುಲ್ಯಃ** ಸಮಾನನು.

**ತಾತ್ಪರ್ಯ :-** ವಿಷ್ಣು ಪಾರ್ಷದರಾದ ಕಾಲಾದಿಗಳು ಮತ್ತು ಜಯಾದಿಗಳು ಬ್ರಹ್ಮಾಂಡದ ಹೊರಗೆ ಬ್ರಹ್ಮಾಂಡದ ಸೃಷ್ಟಿಗಿಂತಲೂ ಮುಂಚೆ ಸೃಷ್ಟಿಗೊಂಡಿರುವವರಾದುದರಿಂದಲೇ ಬ್ರಹ್ಮರುದ್ರಾದಿಗಳಿಗಿಂತಲೂ ಅಧಮರು. ಬ್ರಹ್ಮಾಂಡದ ಒಳಗಿನ ಸೃಷ್ಟಿಯೇ ತಾರತಮ್ಯಜ್ಞಾಪಕ, ಹೊರಗಿನ ಸೃಷ್ಟಿಯಲ್ಲ, ಆದುದರಿಂದ ರುದ್ರಾದಿಗಳಿಗಿಂತ ಮೊದಲು ಉತ್ಪನ್ನರಾದವರಾದರೂ ಕಾಲಾದಿಗಳು ರುದ್ರಾದಿಗಳಿಗಿಂತ ಶ್ರೇಷ್ಠರಲ್ಲ. ಲೋಕದಲ್ಲಿಯೂ ತನ್ನ ಸೇವೆಗಾಗಿ ಮೊದಲು ಗೃಹೀತರಾದ ಭೃತ್ಯ ಜನರಿಗಿಂತಲು ಅನಂತರ ರಾಜ್ಯದ ಆಡಳಿತ ನಿರ್ವಹಣೆಗಾಗಿ ನೇಮಿಸಲ್ಪಟ್ಟ ಅಧಿಕಾರಿ ಪುರುಷರೇ ಶ್ರೇಷ್ಠರೆಂದು ಕಂಡಿದೆ.

**ವಿಶೇಷ ವಿಷಯ :-** ಶ್ರೀವಾದಿರಾಜರು ಈ ಶ್ಲೋಕದ ಅಭಿಪ್ರಾಯವನ್ನು ಮತ್ತೊಂದು ಬಗೆಯಿಂದ ತಿಳಿಸಿರುವರು. ಅದರಂತೆ "ಅಂಡಾತ್ ಪರತಃ ಸಂಪ್ರಸೂತಾಃ" ಎಂಬ ಮಾತಿನ ಅರ್ಥ ಹೀಗಿದೆ — ಅಂಡಾತ್ ಪರತಃ ಬ್ರಹ್ಮಾಂಡ ಸೃಷ್ಟಿಯ ಅನಂತರದ ದ್ವಾರಪಾಲನೆಯೇ ಮೊದಲಾದ ಪ್ರಯೋಜನಕ್ಕಾಗಿ, ಸಂಪ್ರಸೂತಾಃ ಜಯಾದಿಗಳು ಸೃಷ್ಟರಾಗಿದ್ದಾರೆ. ಬ್ರಹ್ಮರುದ್ರಾದಿ ತತ್ವಾಭಿಮಾನಿದೇವತೆಗಳಂತೆ ಬ್ರಹ್ಮಾಂಡದ ಸೃಷ್ಟಿಯ ಉಪಯೋಗಕ್ಕಾಗಿಯೇ ಅಲ್ಲ, ಆದುದರಿಂದ ಆ ಜಯಾದಿಗಳು ಬ್ರಹ್ಮರುದ್ರಾದಿ ತತ್ವಾಭಿಮಾನಿ ದೇವತೆಗಳಿಗಿಂತಲೂ ಅಧಮರಾಗಿರುವರು.

ಅನಿರುದ್ಧನಿಂದಾದ ಸ್ಥೂಲಸೃಷ್ಟಿಯನ್ನು ಹೇಳುವರು -

**ವ್ಯೂಹಾತ್ ತೃತೀಯಾತ್ ಪುನರೇವ ವಿಷ್ಣೋಃ**
**ದೇವಾಂಶ್ಚತುರ್ವರ್ಣಗತಾನ್ ಸಮಸ್ತಾನ್ ।**
**ಸಂಗೃಹ್ಯ ಬೀಜಾತ್ಮತಯಾऽನಿರುದ್ಧೋ**
**ನ್ಯಧತ್ತ ಶಾಂತ್ಯಾಂ ತ್ರಿಗುಣಾತ್ಮಿಕಾಯಾಮ್ ॥ ೧೫ ॥**

**ಅರ್ಥ** :- **ಅನಿರುದ್ಧಃ** ಅನಿರುದ್ಧನು, **ವಿಷ್ಣೋಃ** ಶ್ರೀ ವಿಷ್ಣುವಿನ, **ತೃತೀಯಾತ್** ಮೂರನೆಯ, **ವ್ಯೂಹಾತ್** ಏವ ಅವತಾರವಾದ ಪ್ರದ್ಯುಮ್ನನ ದೆಸೆಯಿಂದಲೆ, **ಸಮಸ್ತಾನ್** ಎಲ್ಲ **ಚತುರ್ವರ್ಣಗತಾನ್** ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ನಾಲ್ಕು ವರ್ಣಗಳಲ್ಲಿರುವ, **ದೇವಾನ್** ದೇವತೆಗಳನ್ನು, **ಪುನಃ** ಮತ್ತೊಮ್ಮೆ **ಸಂಗೃಹ್ಯ** ಸಂಗ್ರಹಿಸಿ, **ತ್ರಿಗುಣಾತ್ಮಿಕಾಯಾಂ** ಸತ್ವರಜಸ್ತಮೋ ಗುಣಗಳಿಗೆ ಅಭಿಮಾನಿನಿಯಾದ, **ಶಾಂತ್ಯಾಂ** ಶಾಂತಿ ದೇವಿಯಲ್ಲಿ **ಬೀಜಾತ್ಮತಯಾ** ರೇತೋರೂಪದಿಂದ, **ನ್ಯಧತ್ತ** ಇಟ್ಟನು.

**ತಾತ್ಪರ್ಯ** :- ಅನಿರುದ್ಧನು ಭಗವಂತನ ತೃತೀಯರೂಪವಾದ ಪ್ರದ್ಯುಮ್ನನ ದೆಸೆಯಿಂದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ನಾಲ್ಕು ವರ್ಣದ ದೇವತೆಗಳನ್ನು ಸಂಗ್ರಹಿಸಿ ಸತ್ವಾದಿ ಗುಣತ್ರಯಗಳ ಅಭಿಮಾನಿನಿಯಾದ ಶಾಂತಿದೇವಿಯಲ್ಲಿ ರೇತೋ ರೂಪವಾಗಿ ಸ್ಥಾಪನೆ ಮಾಡಿದನು. ॥ ೧೫ ॥

**ವಿಶೇಷ ವಿಷಯ** :- ಹಿಂದೆ ಪ್ರಥಮಾಧ್ಯಾಯದಲ್ಲಿ "ಪ್ರದ್ಯುಮ್ನಸಂಜ್ಞಕ ಇಮಾನ್ ಚರಮಾತ್ಮನೇಽದಾತ್" ಪ್ರದ್ಯುಮ್ನನು ತನ್ನ ಹೊಟ್ಟೆಯಲ್ಲಿರುವ ಜೀವರನ್ನು ಅನಿರುದ್ಧನ ಉದರದಲ್ಲಿ ಪ್ರವೇಶಮಾಡಿಸಿದನೆಂದಿದೆ. ಈಗ ಇಲ್ಲಿ ಅನಿರುದ್ಧನು ಪ್ರದ್ಯುಮ್ನನಿಂದ ಸಂಗ್ರಹಿಸಿ ಎಂದು ಹೇಳಿದುದು ಹೇಗೆ? ಎಂದು ಶಂಕೆ ಬರುತ್ತದೆ.

ಸಮಾಧಾನ ಹೀಗಿದೆ — ಪ್ರದ್ಯುಮ್ನನು ಜೀವರನ್ನು ಅನಿರುದ್ಧನ ಉದರದಲ್ಲಿ ಸ್ಥಾಪನೆ ಮಾಡಿಸಿ ಅತ್ಯಂತ ಸೂಕ್ಷ್ಮದೇಹ ಸಹಿತರನ್ನಾಗಿಸಿ ಪುನಃ ತನ್ನ ಉದರದಲ್ಲಿಯೇ ಆ ಜೀವರನ್ನು ಇರಿಸಿಕೊಂಡನೆಂಬ ಕಥೆಯನ್ನು ಆಚಾರ್ಯರು ಇಲ್ಲಿ ಸೂಚಿಸಿದ್ದಾರೆ. ಆ ಪ್ರದ್ಯುಮ್ನನಿಂದ ಅನಿರುದ್ಧನು ಈಗ ಸಂಗ್ರಹಿಸಿದನು.

'ತ್ರಿಗುಣಾತ್ಮಿಕಾಯಾಂ' ಎಂದುದರಿಂದ ಶಾಂತಿದೇವಿಗೂ ಮೂರು ರೂಪಗಳುಂಟೆಂದು ಸೂಚಿತವಾಯಿತು. ದೇವತೆಗಳಲ್ಲಿಯೂ ಬ್ರಾಹ್ಮಣ ಕ್ಷತ್ರಿಯಾದಿವರ್ಣಭೇದ ಇದೆ. ಆದುದರಿಂದಲೇ ಕ್ಷತ್ರಿಯವಂಶಗಳ ಉತ್ಪತ್ತಿಯು ಕ್ಷತ್ರಿಯರಾದ ಸೂರ್ಯ, ಚಂದ್ರರಿಂದ ಉಂಟಾಗಿದೆ. ಭೃಗುವೇ ಮೊದಲಾದ ಬ್ರಾಹ್ಮಣರ ವಂಶ ವಿರಿಂಚರಿಂದ ಉತ್ಪನ್ನವಾಗಿದೆ. ॥ ೧೫ ॥

**ತತೋ ಮಹತ್ತತ್ತ್ವತನುರ್ವಿರಿಂಚಃ**
**ಸ್ಥೂಲಾತ್ಮನೈವಾಜನಿ ವಾಕ್ ಚ ದೇವೀ ।**
**ತಸ್ಯಾಮಹಂಕಾರತನುಂ ಸ ರುದ್ರಂ**
**ಸಸರ್ಜ ಬುದ್ಧಿಂ ಚ ತದರ್ಧದೇಹಾಮ್ ॥ ೧೬ ॥**

**ಅರ್ಥ** :- **ತತಃ** ಆ ಶಾಂತಿದೇವಿಯ ದೆಸೆಯಿಂದ, **ಮಹತ್ತತ್ತ್ವತನುಃ** ಮಹತ್ತತ್ತ್ವಕ್ಕೆ ಅಭಿಮಾನಿಯಾದ, **ವಿರಿಂಚಃ** ಬ್ರಹ್ಮನು, **ಸ್ಥೂಲಾತ್ಮನಾ ಏವ** ಸ್ಥೂಲರೂಪದಿಂದಲೇ, **ಅಜನಿ** ಹುಟ್ಟಿದನು, **ವಾಕ್** ವಾಗಭಿಮಾನಿನಿಯಾದ, **ದೇವೀ ಚ** ಸರಸ್ವತಿಯೂ ಕೂಡ, **ಅಜನಿ** ಹುಟ್ಟಿದಳು, **ತಸ್ಯಾಂ** ಆ ವಾಗ್ದೇವಿಯಲ್ಲಿ, **ಸಃ** ಆ ಬ್ರಹ್ಮನು, **ಅಹಂಕಾರತನುಂ** ಅಹಂಕಾರತತ್ತ್ವಕ್ಕೆ ಅಭಿಮಾನಿಯಾದ, **ರುದ್ರಂ** ರುದ್ರನನ್ನು **ತದರ್ಧದೇಹಾಂ** ಆ ರುದ್ರನ ಅರ್ಧಾಂಗಿಯಾದ, **ಬುದ್ಧಿಂ ಚ** ಬುದ್ಧಿಗೆ ಅಭಿಮಾನಿಯಾದ ಪಾರ್ವತಿಯನ್ನೂ **ಸಸರ್ಜ** ಸೃಷ್ಟಿಮಾಡಿದನು.

**ತಾತ್ಪರ್ಯ** :- ಅನಿರುದ್ಧನ ಪತ್ನಿಯಾದ ಶಾಂತಿದೇವಿಯಲ್ಲಿ ಮಹತ್ತತ್ತ್ವಕ್ಕೆ ಅಭಿಮಾನಿಯಾದ ಬ್ರಹ್ಮದೇವರು ಸ್ಥೂಲಶರೀರ ಸಹಿತರಾಗಿಯೇ ಹುಟ್ಟಿದರು. ಹಾಗೆಯೇ ವಾಗಭಿಮಾನಿನಿಯಾದ ಸರಸ್ವತಿಯೂ ಹುಟ್ಟಿದಳು. ಬ್ರಹ್ಮನು ಸರಸ್ವತಿಯಲ್ಲಿ ಅಹಂಕಾರತತ್ತ್ವವೇ ಶರೀರವಾಗಿ ಉಳ್ಳ ರುದ್ರದೇವರನ್ನು ಬುದ್ಧಿಗೆ ಅಭಿಮಾನಿನಿಯಾದ ಪಾರ್ವತಿಯನ್ನೂ ಸೃಷ್ಟಿಸಿದರು. ॥ ೧೬ ॥

**ಬುದ್ಧ್ಯಾಮುಮಾಯಾಂ ಸ ಶಿವಸ್ತ್ರಿರೂಪೋ**
**ಮನಶ್ಚ ವೈಕಾರಿಕದೇವಸಂಘಾನ್ ।**
**ದಶೇಂದ್ರಿಯಾಣ್ಯೇವ ಚ ತೈಜಸಾನಿ**
**ಕ್ರಮೇಣ ಖಾದೀನ್ ವಿಷಯೈಶ್ಚ ಸಾರ್ಧಮ್ ॥ ೧೭ ॥**

**ಅರ್ಥ** :- **ತ್ರಿರೂಪಃ** ವೈಕಾರಿಕ, ತೈಜಸ, ತಾಮಸಗಳೆಂದು ಮೂರು ವಿಧವಾದ ಅಹಂಕಾರತತ್ವದ ಪ್ರೇರಣೆಗೋಸ್ಕರ ಮೂರು ರೂಪಗಳುಳ್ಳ, **ಸಃ ಶಿವಃ** ಆ ರುದ್ರನು, **ಬುದ್ಧ್ಯಾಂ** ಬುದ್ಧಿಗೆ ಅಭಿಮಾನಿನಿಯಾದ, **ಉಮಾಯಾಂ** ಪಾರ್ವತಿಯಲ್ಲಿ **ವೈಕಾರಿಕದೇವಸಂಘಾನ್** ಮನಸ್ಸು ಮೊದಲಾದ ಹನ್ನೊಂದು ಇಂದ್ರಿಯಗಳ ಅಭಿಮಾನಿದೇವತೆಗಳ ಸಮೂಹಗಳನ್ನು, **ಮನಃ ಚ** ಮನಸ್ಸನ್ನೂ ಕೂಡ, **ತೈಜಸಾನಿ ಏವ** ತೈಜಸಗಳೇ ಆದ (ಭೌತಿಕಗಳಲ್ಲ), **ದಶ ಇಂದ್ರಿಯಾಣಿ ಚ** ಹತ್ತು ಇಂದ್ರಿಯಗಳನ್ನೂ, **ಖಾದೀನ್** ಆಕಾಶಾದಿ ಪಂಚಮಹಾ ಭೂತಗಳನ್ನು, **ವಿಷಯೈಃ** ಶಬ್ದವೇ ಮೊದಲಾದ ವಿಷಯಗಳಿಂದ, **ಸಾರ್ಧಂ** ಕೂಡಿಕೊಂಡು, **ಕ್ರಮೇಣ** ಕ್ರಮದಿಂದ, **ಸಸರ್ಜ** ತಾಮಸ ಅಹಂಕಾರದಿಂದ ಸೃಷ್ಟಿಮಾಡಿದನು.

**ತಾತ್ಪರ್ಯ** :- ವೈಕಾರಿಕ, ತೈಜಸ, ತಾಮಸ ಎಂದು ಅಹಂಕಾರ ತತ್ವವು ಮೂರು ವಿಧ. ಇವುಗಳಿಗೆ ಅಭಿಮಾನಿಯಾದ ಶಿವನೂ ಮೂರು ರೂಪಗಳನ್ನು ಧರಿಸಿರುವನು. ಬುದ್ಧಿಗಭಿಮಾನಿನಿಯಾದ ಪಾರ್ವತಿಯಲ್ಲಿ ಶಿವನು ವೈಕಾರಿಕ ರೂಪದಿಂದ ಮನಸ್ಸನ್ನು ಮತ್ತು ಮನಸ್ಸು ಮೊದಲಾದ ಹನ್ನೊಂದು ಇಂದ್ರಿಯ ಗಳ ಅಭಿಮಾನಿ ದೇವತೆಗಳ ದೇಹವನ್ನು ಸೃಷ್ಟಿಮಾಡಿದನು.

ತೈಜಸ ರೂಪದಿಂದ ಹತ್ತು ಇಂದ್ರಿಯಗಳನ್ನು ಸೃಷ್ಟಿಮಾಡಿದನು. ತಾಮಸ ರೂಪದಿಂದ ಶಬ್ದದಿಂದ ಸ್ಪರ್ಶ, ಸ್ಪರ್ಶದಿಂದ ರೂಪ. ರೂಪದಿಂದ ರಸವನ್ನು, ರಸದಿಂದ ಗಂಧವನ್ನು ಈ ಕ್ರಮವಾಗಿ ಮೊದಲು ಪಂಚ ಭೂತಸೂಕ್ಷ್ಮಗಳನ್ನೂ ಮಾತ್ರೆಗಳನ್ನು ಸೃಷ್ಟಿಮಾಡಿ, ಬಳಿಕ ಆಕಾಶದಿಂದ ವಾಯು, ವಾಯುವಿನಿಂದ ಅಗ್ನಿ, ಅಗ್ನಿಯಿಂದ ಜಲವನ್ನು, ಜಲದಿಂದ ಪೃಥಿವಿಯನ್ನು ಈ ಕ್ರಮವಾಗಿ ಪಂಚಭೂತಗಳನ್ನು ಸೃಷ್ಟಿ ಮಾಡಿದನು.

**ವಿಶೇಷ ವಿಷಯ** :- 'ಮಾತ್ರಾ ಭೂತಾನಿ ಪಂಚ ಚ' ಎಂದು ತತ್ವಸಂಖ್ಯಾನದಲ್ಲಿ ಆಚಾರ್ಯರು ಹೇಳಿರುವಂತೆ ಮೊದಲು ಪಂಚತನ್ಮಾತ್ರಗಳ ಸೃಷ್ಟಿ ಬಳಿಕವೇ ಪಂಚ ಭೂತಗಳ ಸೃಷ್ಟಿ ಎಂದು ತಿಳಿಯಬೇಕು. ॥ ೧೭ ॥

**ಪುಂಸಃ ಪ್ರಕೃತ್ಯಾಂ ಚ ಪುನರ್ವಿರಿಂಚಾತ್**
**ಶಿವೋಽಥ ತಸ್ಮಾದಖಿಲಾಃ ಸುರೇಶಾಃ ।**
**ಜಾತಾಃ ಸಶಕ್ರಾಃ ಪುನರೇವ ಸೂತ್ರಾತ್**
**ಶ್ರದ್ಧಾ ಸುತಾನಾಪ ಸುರಪ್ರವೀರಾನ್ ।**
**ಶೇಷಂ ಶಿವಂ ಚೇಂದ್ರಮಥೇಂದ್ರತಶ್ಚ**
**ಸರ್ವೇ ಸುರಾ ಯಜ್ಞಗಣಾಶ್ಚ ಜಾತಾಃ ॥ ೧೮ ॥**

**ಅರ್ಥ** :- **ಅಥ** ಅನಂತರ, **ಪುಂಸಃ** ಪುರುಷನಾಮಕರಾದ, **ವಿರಿಂಚಾತ್** ಬ್ರಹ್ಮದೇವರ ದೆಸೆಯಿಂದ, **ಪ್ರಕೃತ್ಯಾಂ** ಪ್ರಕೃತಿನಾಮಕ ಅವ್ಯಕ್ತ ತತ್ವಕ್ಕೆ ಅವಾಂತರಾಭಿಮಾನಿನಿಯಾದ ಸರಸ್ವತೀದೇವಿಯಲ್ಲಿ, **ಶಿವಃ** ಶಿವನು, **ಪುನಃ** ಮತ್ತೊಮ್ಮೆ **ಜಾತಃ** ಹುಟ್ಟಿದನು, **ತಸ್ಮಾತ್** ಆ ರುದ್ರನ ದೆಸೆಯಿಂದ, **ಸಶಕ್ರಾಃ** ಇಂದ್ರನಿಂದ ಕೂಡಿದ, **ಅಖಿಲಾಃ** ಎಲ್ಲ, **ಸುರೇಶಾಃ** ದೇವಶ್ರೇಷ್ಠರು, **ಜಾತಾಃ** ಹುಟ್ಟಿದರು, **ಪುನಃ** ಮತ್ತೆ, **ಸೂತ್ರಾತ್** ಸೂತ್ರನಾಮಕವಾಯುದೇವರಿಂದ, **ಶ್ರದ್ಧಾ** ಶ್ರದ್ಧಾ ಎಂಬ ಹೆಸರಿನ ಭಾರತಿಯು, **ಸುರಪ್ರವೀರಾನ್** ದೇವಶ್ರೇಷ್ಠರಾದ, **ಸುತಾನ್** ಮಕ್ಕಳನ್ನು **ಶೇಷಂ** ಶೇಷನನ್ನು **ಶಿವಂ** ಶಿವನನ್ನು **ಚ** ಮತ್ತು, **ಇಂದ್ರಂ** ಇಂದ್ರನನ್ನು **ಆಪ** ಹೊಂದಿದಳು, **ಅಥ** ಅನಂತರ, **ಇಂದ್ರತಃ ಚ** ಇಂದ್ರನ ದೆಸೆಯಿಂದಲೂ, **ಸರ್ವೇ ಸುರಾಃ ಯಜ್ಞಗಣಾಃ ಚ** ಅಶ್ವಮೇಧ, ಜ್ಯೋತಿಷ್ಟೋಮ, ಅಗ್ನಿಷ್ಟೋಮಾದಿ ಯಜ್ಞಗಳ ಅಭಿಮಾನಿದೇವತೆಗಳ ಸಮುದಾಯವೂ, **ಜಾತಾಃ** ಹುಟ್ಟಿದವು.

**ತಾತ್ಪರ್ಯ** :- ಅನಂತರ ಪುರುಷನಾಮಕ ವಿರಿಂಚರಿಂದ ಅವ್ಯಕ್ತ ತತ್ವದ ಅವಾಂತರ ಅಭಿಮಾನಿನಿಯಾದ ಪ್ರಕೃತಿನಾಮಕ ಸರಸ್ವತೀದೇವಿಯಲ್ಲಿ ರುದ್ರದೇವರು ಹುಟ್ಟಿದರು. ಆ ರುದ್ರದೇವರ ದೆಸೆಯಿಂದ ಇಂದ್ರಸಹಿತರಾದ ಎಲ್ಲ ದೇವತೆಗಳು ಹುಟ್ಟಿದರು. ಸೂತ್ರನಾಮಕರಾದ ವಾಯುದೇವರ ದೆಸೆಯಿಂದ ಶ್ರದ್ಧಾನಾಮಕ ಭಾರತಿಯಲ್ಲಿ ದೇವತಾಶ್ರೇಷ್ಠರು, ಶೇಷ, ಶಿವ, ಇಂದ್ರರು ಹುಟ್ಟಿದರು. ಇಂದ್ರನಿಂದ ಯಜ್ಞಾಭಿಮಾನಿ ದೇವತೆಗಳು ಹುಟ್ಟಿದರು. ॥ ೧೮ ॥

**ಪುನಶ್ಚ ಮಾಯಾ ತ್ರಿವಿಧಾ ಬಭೂವ**
**ಸತ್ವಾದಿರೂಪೈರಥ ವಾಸುದೇವಾತ್ ।**
**ಸತ್ವಾತ್ಮಿಕಾಯಾಂ ಸ ಬಭೂವ ತಸ್ಮಾತ್**
**ಸ ವಿಷ್ಣುನಾಮ್ನೈವ ನಿರಂತರೋಽಪಿ ॥ ೧೯ ॥**

**ಅರ್ಥ** :- **ಪುನಃ ಚ** ಮತ್ತೆ ಕೂಡ ಸೃಷ್ಟಿಮಾಡಲು, **ಮಾಯಾ** ವಾಸುದೇವನ ಪತ್ನಿಯಾದ ಮಾಯಾದೇವಿಯು, **ಸತ್ತ್ವಾದಿ ರೂಪೈಃ** ಸತ್ತ್ವಾದಿ ಗುಣಗಳ ಅಭಿಮಾನಿ ರೂಪದಿಂದ, **ತ್ರಿವಿಧಾ** ಶ್ರೀ, ಭೂ, ದುರ್ಗಾ ಎಂಬ ಮೂರು ರೂಪವುಳ್ಳವಳು, **ಬಭೂವ** ಆದಳು, **ಅಥ** ಅನಂತರ, **ತಸ್ಮಾತ್** ಆ, **ವಾಸುದೇವಾತ್** ವಾಸುದೇವನ ದೆಸೆಯಿಂದ, **ಸತ್ತ್ವಾತ್ಮಿಕಾಯಾಂ** ಸತ್ತ್ವಗುಣದ ಅಭಿಮಾನಿನಿಯಾದ ಶ್ರೀದೇವಿಯಲ್ಲಿ, **ಸ ಏವ** ಆ ವಾಸುದೇವನೆ, **ನಿರಂತರಃ ಅಪಿ** ಭೇದವಿಲ್ಲದವನಾದರೂ, **ವಿಷ್ಣುನಾಮಾ** 'ವಿಷ್ಣು' ಎಂಬ ಹೆಸರುಳ್ಳವನಾಗಿ, **ಬಭೂವ** ರೂಪಾಂತರದಿಂದ ಅವತರಿಸಿದನು.

**ತಾತ್ಪರ್ಯ** :- ಮತ್ತೊಮ್ಮೆ ಸೃಷ್ಟಿಗಾಗಿ ವಾಸುದೇವನ ಪತ್ನಿಯಾದ ಮಾಯಾದೇವಿಯು ಸತ್ತ್ವಾದಿಗುಣಗಳ ಅಭಿಮಾನಿಗಳಾದ ಶ್ರೀ, ಭೂ, ದುರ್ಗಾ ಎಂಬ ಮೂರು ರೂಪಗಳನ್ನು ಹೊಂದಿದಳು. ವಾಸುದೇವನು 'ಶ್ರೀ'ದೇವಿಯಲ್ಲಿ ತಾನೇ 'ವಿಷ್ಣು' ಎಂಬ ಹೆಸರಿನಿಂದ ಅವತರಿಸಿದನು. ವಿಷ್ಣು ಮತ್ತು ವಾಸುದೇವ ರೂಪಗಳಿಗೆ ಭೇದವಿಲ್ಲದಿದ್ದರೂ ಭಗವಂತನು ಹೀಗೆ ಅವತರಿಸಿದನು. ॥ ೧೯ ॥

**ರಜಸ್ತನೌ ಚೈವ ವಿರಿಂಚ ಆಸೀತ್**
**ತಮಸ್ತನೌ ಶರ್ವ ಇತಿ ತ್ರಯೋಽಸ್ಮಾತ್ ।**
**ಏತೇ ಹಿ ದೇವಾಃ ಪುನರಂಡಸೃಷ್ಟೌ**
**ಅಶಕ್ನುವಂತೋ ಹರಿಮೇತ್ಯ ತುಷ್ಟುವುಃ ॥ ೨೦ ॥**

**ಅರ್ಥ** :- ವಾಸುದೇವನಿಂದ, **ರಜಸ್ತನೌ** ರಜೋಗುಣಕ್ಕೆ ಅಭಿಮಾನಿನಿಯಾದ ಭೂದೇವಿಯಲ್ಲಿ, **ವಿರಿಂಚಃ** ಚತುರ್ಮುಖಬ್ರಹ್ಮನ ಅಂತರ್ಯಾಮಿ-ಯಾದ ವಿರಿಂಚನೆಂಬ ಹೆಸರುಳ್ಳವನಾಗಿ, **ಆಸೀತ್** ಪ್ರಾದುರ್ಭಾವಗೊಂಡನು. **ತಮಸ್ತನೌ** ತಮೋಗುಣದ ಅಭಿಮಾನಿನಿಯಾದ ದುರ್ಗಾದೇವಿಯಲ್ಲಿ, **ಶರ್ವಃ** ರುದ್ರಾಂತರ್ಯಾಮಿಯಾಗಿ ರುದ್ರನೆಂಬ ಹೆಸರುಳ್ಳವನಾಗಿ, **ಆಸೀತ್** ಪ್ರಾದುರ್ಭಾವಗೊಂಡನು, **ಇತಿ** ಈ ರೀತಿಯಾಗಿ, **ಅಸ್ಮಾತ್** ಈ ವಾಸುದೇವನ ದೆಸೆಯಿಂದ, **ತ್ರಯಃ** ವಿಷ್ಣು ಬ್ರಹ್ಮ ರುದ್ರರೂಪಗಳು, **ಬಭೂವುಃ** ಆವಿರ್ಭಾವಗೊಂಡವು, **ಏತೇ ದೇವಾಃ** ಈ ತತ್ತ್ವಾಭಿಮಾನಿದೇವತೆಗಳು, **ಅಂಡಸೃಷ್ಟೌ** ಬ್ರಹ್ಮಾಂಡದ ಸೃಷ್ಟಿಯಲ್ಲಿ, **ಅಶಕ್ನುವಂತಃ ಪುನಃ** ಅಸಮರ್ಥರಾಗಿಯೇ, **ಹರಿಂ** ಪರಬ್ರಹ್ಮನನ್ನು, ಏತ್ಯ ಹೊಂದಿ, **ತುಷ್ಟುವುಃ** ಸ್ತೋತ್ರ ಮಾಡಿದರು.

**ತಾತ್ಪರ್ಯ** :- ಆ ವಾಸುದೇವನು ರಜೋಗುಣದ ಅಭಿಮಾನಿನಿಯಾದ 'ಭೂ'ದೇವಿಯಲ್ಲಿ ವಿರಿಂಚಾಂತರ್ಗತವಾದ 'ಬ್ರಹ್ಮ' ಎಂಬ ರೂಪದಿಂದ ಅವತರಿಸಿದನು. ತಮೋಗುಣದ ಅಭಿಮಾನಿನಿಯಾದ 'ದುರ್ಗೆ'ಯಲ್ಲಿ ರುದ್ರಾಂತರ್ಗತವಾದ ರುದ್ರರೂಪದಿಂದ ಪ್ರಾದುರ್ಭವಿಸಿದನು. ಎಲ್ಲ ತತ್ವಾಭಿ ಮಾನಿದೇವತೆಗಳು ಬ್ರಹ್ಮಾಂಡದ ಸೃಷ್ಟಿಗೆ ಅಸಮರ್ಥರಾಗಿ ಭಗವಂತನ ಸಮೀಪಕ್ಕೆ ಹೋಗಿ ಸ್ತುತಿಸಿದರು.

ಇದುವರೆಗೆ ಹೇಳಿದ ಭಗವದ್ರೂಪದಿಂದ ನಡೆದ ಸೃಷ್ಟಿಯವಿವರ ಹೀಗಿದೆ –

ಶ್ರೀಮನ್ನಾರಾಯಣನು ಸೃಷ್ಟಿಮಾಡಲು ಬಯಸಿ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ಎಂಬ ರೂಪಗಳನ್ನು ಧರಿಸಿದನು. ಲಕ್ಷ್ಮಿಯೂ ಮಾಯಾ, ಜಯಾ, ಕೃತಿ, ಶಾಂತಿ ಎಂಬ ನಾಲ್ಕು ರೂಪಗಳನ್ನು ಧರಿಸಿರುವಳು. ವಾಸುದೇವನಿಂದ ಮಾಯೆಯು ವಿರಿಂಚನನ್ನು, ಸಂಕರ್ಷಣ ನಿಂದ ಜಯಾದೇವಿಯು ವಾಯುವನ್ನು, ಪ್ರದ್ಯುಮ್ನನಿಂದ ಕೃತಿದೇವಿಯು ಪ್ರಕೃತಿ ಮತ್ತು ಶ್ರದ್ಧಾ ಎಂಬ ಅವಳಿ ಜವಳಿ ಹೆಣ್ಣುಮಕ್ಕಳನ್ನೂ ಹಡೆದರು.

ಶ್ರೀಹರಿಯ ಆದೇಶದಂತೆ ನಡೆದ ಪ್ರಧಾನನಾಮಕಳಾದ ಸರಸ್ವತೀ ಮತ್ತು ಪುರುಷನಾಮಕ ವಿರಿಂಚ ಇವರಿಬ್ಬರ ಸಹಯೋಗದಿಂದ ಹಾಗೆಯೇ ಶ್ರದ್ಧಾ ನಾಮಕ ಭಾರತೀ ಮತ್ತು ಸೂತ್ರನಾಮಕ ವಾಯುದೇವರ ಸಹಯೋಗದಿಂದ ಏಕಕಾಲದಲ್ಲಿ ಶೇಷಗರುಡರು ಹುಟ್ಟಿದರು. ಆ ಶೇಷನು ಶ್ರೀಹರಿಗೆ ಹಾಸಿಗೆಯು, ಗರುಡನು ವಾಹನನೂ ಆದರು. ಆ ಗರುಡ ಶೇಷರ ದೆಸೆಯಿಂದ ಕಾಲ ನಾಮಕರು ಮತ್ತು ಹರಿ ಪಾರ್ಷದರಾಗಲಿರುವ ಜಯಾದಿಗಳೂ ಹುಟ್ಟಿದರು.

ಅನಿರುದ್ಧನು ಪ್ರದ್ಯುಮ್ನನ ದೆಸೆಯಿಂದ ನಾಲ್ಕು ವರ್ಣಗಳನ್ನು ಹೊಂದಿರುವ ದೇವತೆಗಳನ್ನು ಸಂಗ್ರಹಿಸಿ ತ್ರಿಗುಣಾಭಿಮಾನಿಯಾದ ಶಾಂತಿಯಲ್ಲಿ ರೇತೋರೂಪವಾಗಿ ಸ್ಥಾಪಿಸಿದನು.

ಆ ಶಾಂತಿದೇವಿಯ ದೆಸೆಯಿಂದ ಮಹತ್ತತ್ವಾಭಿಮಾನಿಯಾದ ವಿರಿಂಚನು ಸ್ಥೂಲ ರೂಪದಿಂದಲೆ ಹುಟ್ಟಿದನು. ವಾಗಭಿಮಾನಿನಿಯಾದ ಸರಸ್ವತಿಯೂ ಕೂಡ ಹುಟ್ಟಿದಳು. ಆ ವಿರಿಂಚನು ಸರಸ್ವತಿಯಲ್ಲಿ ಅಹಂಕಾರತತ್ವಾಭಿಮಾನಿ ಯಾದ ಶಿವನನ್ನು ಅವನ ಅರ್ಧದೇಹಳಾದ ಉಮೆಯನ್ನು ಸೃಷ್ಟಿಮಾಡಿದನು.

ವೈಕಾರಿಕ, ತೈಜಸ, ತಾಮಸ ಎಂದು ಮೂರು ವಿಧವಾದ ಅಹಂಕಾರದ ಪ್ರೇರಣೆಗೋಸ್ಕರ ಮೂರು ರೂಪಗಳನ್ನು ಧರಿಸಿದ ರುದ್ರದೇವರು ಉಮೆಯಲ್ಲಿ ಮನಸ್ಸು ಮೊದಲಾದ ಹನ್ನೊಂದು ಇಂದ್ರಿಯಗಳನ್ನು ಅವುಗಳ ಅಭಿಮಾನಿ ದೇವತೆಗಳನ್ನು, ಪಂಚಮಹಾಭೂತಗಳನ್ನು, ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳನ್ನೂ ಕ್ರಮವಾಗಿ ಸೃಷ್ಟಿಮಾಡಿದನು.

ಪುರುಷನಾಮಕ ವಿರಿಂಚನಿಂದ ಪ್ರಕೃತಿಗೆ ಅವಾಂತರಾಭಿಮಾನಿನಿಯಾದ ಸರಸ್ವತಿಯಲ್ಲಿ ಪುನಃ ಶಿವನು ಹುಟ್ಟಿದನು. ಆ ರುದ್ರನಿಂದ ಇಂದ್ರಾದಿ ಸಕಲ ದೇವತೆಗಳು ಹುಟ್ಟಿದರು. ವಾಯುದೇವರಿಂದ ಭಾರತೀದೇವಿಯಲ್ಲಿ ದೇವ ಶ್ರೇಷ್ಠರುಗಳು, ಶೇಷ, ಶಿವ, ಇಂದ್ರರುಗಳೂ ಹುಟ್ಟಿದರು. ಇಂದ್ರನಿಂದ ಅಶ್ವಮೇಧಾದಿ ಯಜ್ಞಾನಿಮಾನಿದೇವತೆಗಳು ಹುಟ್ಟಿದರು.

ಮತ್ತೊಮ್ಮೆ ವಾಸುದೇವನ ಭಾರ್ಯೆಯಾದ ಮಾಯಾದೇವಿಯು ತ್ರಿಗುಣಾಭಿಮಾನಿಗಳಾದ ಮೂರು ರೂಪಗಳನ್ನು ಹೊಂದಿದಳು. ಈ ವಾಸು ದೇವನೆ ಸತ್ವಾಭಿಮಾನಿನಿಯಾದ ಶ್ರೀದೇವಿಯಲ್ಲಿ 'ವಿಷ್ಣು' ಎಂಬ ಹೆಸರಿನಿಂದ ಅವತರಿಸಿದನು. ರಜೋಗುಣಾಭಿಮಾನಿನಿಯಾದ ಭೂದೇವಿಯಲ್ಲಿ ವಿರಿಂಚ ನಾಮಕನಾದ ವಿರಿಂಚಾಂತರ್ಗತರೂಪದಿಂದ ಆವಿರ್ಭಾವಗೊಂಡನು. ತಮೋ ಗುಣಾಭಿಮಾನಿನಿಯಾದ ದುರ್ಗಾದೇವಿಯಲ್ಲಿ ರುದ್ರಾಂತರ್ಗತನಾದ 'ಶಿವ' ಎಂಬ ರೂಪದಿಂದ ಶ್ರೀಹರಿಯು ಅವತರಿಸುವನು.

ಈ ಹಿಂದೆ ಸೃಷ್ಟಿಗೊಂಡ ತತ್ವಾಭಿಮಾನಿದೇವತೆಗಳು ಸ್ವಯಂ ಬ್ರಹ್ಮಾಂಡ ಸೃಷ್ಟಿಯಲ್ಲಿ ಅಸಮರ್ಥರಾಗಿ ಭಗವಂತನನ್ನು ಸ್ತೋತ್ರ ಮಾಡಿದರು.

**ವಿಶೇಷ ವಿಷಯ** :- ಇಲ್ಲಿ ಬ್ರಹ್ಮರುದ್ರರಲ್ಲಿ ಅಂತರ್ಗತನಾಗಿ ಸೃಷ್ಟಿಸಂಹಾರ ಮಾಡಲು ಮತ್ತು ಪೃಥಕ್ಕಾಗಿ ಜಗತ್ತನ್ನು ರಕ್ಷಣೆಮಾಡುವುದಕ್ಕಾಗಿಯೂ ಬ್ರಹ್ಮ ವಿಷ್ಣು ಶಿವ ರೂಪಗಳನ್ನು ಧರಿಸಿ ಶ್ರೀಹರಿ ತನ್ನ ವಾಸುದೇವರೂಪದಿಂದಲೆ ಆವಿರ್ಭಾವಗೊಂಡಿರುವನು. ಈ ವಿಚಾರವು 'ಸೃಜಾಮಿ ತನ್ನಿಯುಕ್ತೋಽ ಹಮ್' ಆ ಭಗವಂತನಿಂದ ನಿಯುಕ್ತನಾಗಿ ಸೃಷ್ಟಿಮಾಡುತ್ತೇನೆ ಎಂಬ ಬ್ರಹ್ಮವಚನ ದಿಂದಲೂ, ''ಬ್ರಹ್ಮಣಿ ಬ್ರಹ್ಮರೂಪೋಽಸೌ ಶಿವರೂಪೀ ಶಿವೇ ಸ್ಥಿತಃ'' ಎಂಬ ಪ್ರಮಾಣದಿಂದಲೂ ಸಿದ್ಧವಾಗಿದೆ.

ಪ್ರಧಾನ ಎಂಬ ಹೆಸರಿನ ಸರಸ್ವತೀ ಪುರುಷನಾಮಕ ವಿರಿಂಚರಲ್ಲಿ ಮೊದಲು ಶೇಷ ಜನ್ಮ ಪಡೆದದ್ದು ಭಗವಂತನ ಹಾಸಿಗೆಯಾಗಲು. ಶ್ರದ್ಧಾನಾಮಕ ಭಾರತೀ ಸೂತ್ರನಾಮಕವಾಯುದೇವರಲ್ಲಿ ಗರುಡ ಮೊದಲು ಜನ್ಮ ಪಡೆದದ್ದು ಭಗವಂತನ ವಾಹನವಾಗಲು. ಶೇಷ ಇನ್ನೊಮ್ಮೆ ವಾಯುದೇವರಿಂದ ಭಾರತೀ ದೇವಿಯಲ್ಲಿ ಜನ್ಮ ಪಡೆದದ್ದು ಅಹಂಕಾರತತ್ವದ ಅವಾಂತರ ಅಭಿಮಾನಿಯಾಗಿ. ಹೀಗೆಯೇ ಅಹಂಕಾರ ತತ್ವದ ಅವಾಂತರ ಅಭಿಮಾನಿಯಾಗಿ ಗರುಡನೂ ಉತ್ಪತ್ತಿಯಾಗಿರುವನೆಂದು ತಿಳಿಯಬೇಕು. ರುದ್ರನು ತ್ರಿವಿಧ ಅಹಂಕಾರತತ್ವಗಳ ಅಭಿಮಾನಿಯಾಗಲು ಮೂರು ರೂಪಗಳಿಂದ ಸೃಷ್ಟಿಯಾಗಿರುವನು. ಇತರ ದೇವತೆಗಳು ಎರಡು ಬಾರಿ ಸೃಷ್ಟಿಯಾಗಿರುವುದು ತಮ್ಮ ತತ್ವಗಳ ಅಭಿಮಾನಿಗಳಾಗಲು ಮತ್ತು ಬ್ರಹ್ಮಾಂಡದ ಒಳಗೆ ಪ್ರವೇಶಿಸಲು. ಹೀಗೆಯೇ ಬ್ರಹ್ಮಾಂಡ ಪ್ರವೇಶಗೋಸುಗವೇ ಶೇಷ ರುದ್ರ, ಸುಪರ್ಣರ ರೂಪಾಂತರಗಳಿವೆ ಎಂಬುದನ್ನು ತಿಳಿದುಕೊಳ್ಳಬೇಕು.

ದೇವತೆಗಳು ವಿರಿಂಚಪತ್ನಿಯಾದ ಪ್ರಕೃತಿನಾಮಕ ಸರಸ್ವತಿಯಲ್ಲಿ ಮತ್ತು ಶ್ರದ್ಧಾನಾಮಕ ಭಾರತಿಯಲ್ಲಿ ಎರಡು ಬಾರಿ ಸೃಷ್ಟಿಯಾಗಿರುವರು. ಅವರ ಉದ್ದೇಶ ತಮ್ಮ ತಮ್ಮ ಸ್ವರೂಪಗತ ಆನಂದಾವಾಪ್ತಿ ಮತ್ತು ವೇದ ಶಾಸ್ತ್ರಗಳಲ್ಲಿ ಅತಿಶಯ ಶ್ರದ್ಧೆ ಹೊಂದುವುದು. ಪ್ರಕೃತಿ ಶಬ್ದಕ್ಕೆ ಸ್ವರೂಪ ಎಂಬ ಅರ್ಥವಿರುವುದರಿಂದ ಮೇಲಿನ ಉದ್ದೇಶವನ್ನು ಊಹಿಸಿಕೊಳ್ಳಬಹುದು. ಬ್ರಹ್ಮದೇವರು ಶಾಂತಿ ದೇವಿಯಲ್ಲಿ ಶಾಂತಿಗುಣವನ್ನು ಹೊಂದಲು ಮತ್ತೊಮ್ಮೆ ಜನ್ಮ ಹೊಂದಿರುವರು. ವಾಯುದೇವರು ಜಯಾದೇವಿಯಲ್ಲಿ ಹುಟ್ಟಿದುದರಿಂದಲೆ ಸಕಲಕಾರ್ಯಗಳಲ್ಲಿ ಜಯ ಲಭಿಸಿತು. ಆದುದರಿಂದ ವಾಯುದೇವರಿಗೆ ಪುನಃಪುನರ್ಜನ್ಮ ಹೇಳಿಲ್ಲ, ಆದರೆ ಮಹತತ್ತ್ವಾಭಿಮಾನಿಯಾಗಿ ವಾಯುದೇವರೂ ಶಾಂತಿಯಲ್ಲಿ ಎರಡನೆ ಬಾರಿ ಹುಟ್ಟಿರುವರೆಂದೂ ತಿಳಿಯಬೇಕು. ಗುಣಲುಬ್ಧರಾದ ದೇವತೆಗಳು ಭಗವಂತನ ಬೇರೆ ಬೇರೆ ರೂಪಗಳಿಂದ ಹಾಗೆಯೆ ಲಕ್ಷ್ಮೀದೇವಿಯ ಬೇರೆ ಬೇರೆ ರೂಪಗಳಿಂದಲೂ ಪಿತೃಮಾತೃಗಳ ಮೂಲಕ ಅನೇಕ ಶುಭಗುಣಗಳನ್ನು ಹೊಂದಲು ಮತ್ತೆ ಮತ್ತೆ ಜನ್ಮವನ್ನು ಬಯಸುವರು.

ತ್ವನ್ನೋ ಜಗಚ್ಚಿತ್ರವಿಚಿತ್ರಸರ್ಗ
ನಿಸ್ಸೀಮಶಕ್ತಿಃ ಕುರು ಸನ್ನಿಕೇತಮ್ ।
ಇತಿ ಸ್ತುತಸ್ತೈಃ ಪುರುಷೋತ್ತಮೋऽಸೌ
ಸ ವಿಷ್ಣುನಾಮಾ ಶ್ರಿಯಮಾಪ ಸೃಷ್ಟಯೇ ॥ ೨೧ ॥

**ಅರ್ಥ** :- **ಜಗಚ್ಚಿತ್ರವಿಚಿತ್ರಸರ್ಗನಿಸ್ಸೀಮಶಕ್ತಿಃ** ಜಗತ್ತಿನ ಆಶ್ಚರ್ಯಕರ ಗಳಾದ ಮತ್ತು ನಾನಾಪ್ರಕಾರಗಳಾದ ಸೃಷ್ಟಿಗಳಲ್ಲಿ ಅಪರಿಮಿತವಾದ ಸಾಮರ್ಥ್ಯ ವುಳ್ಳ, **ತ್ವಂ** ನೀನು, **ನಃ** ನಮಗೆ, **ಸನ್ನಿಕೇತಂ** ಸಮಾಚೀನವಾದ ಮಂದಿರವನ್ನು, **ಕುರು** ರಚನೆಮಾಡು, **ಇತಿ** ಎಂದು, **ತೈಃ** ಆ ದೇವತೆಗಳಿಂದ, **ಸ್ತುತಃ** ಸ್ತೋತ್ರಮಾಡಿಸಿ ಕೊಳ್ಳಲ್ಪಟ್ಟ, **ಸಃ ಅಸೌ ಪುರುಷೋತ್ತಮಃ** ಆ ಪುರುಷೋತ್ತಮ ನಾದ ನಾರಾಯಣನು, **ವಿಷ್ಣುನಾಮಾ** ವಿಷ್ಣು ಎಂಬ ಹೆಸರುಳ್ಳವನಾಗಿ, **ಸೃಷ್ಟಯೇ** ಸೃಷ್ಟಿಗಾಗಿ, **ಶ್ರಿಯಂ** ಲಕ್ಷ್ಮಿಯನ್ನು **ಆಪ** ಹೊಂದಿದನು.

ಸುಷಾವ ಸೈವಾಂಡಮಧೋಕ್ಷಜಸ್ಯ
ಶುಷ್ಮಂ ಹಿರಣ್ಯಾತ್ಮಕಮಂಬುಮಧ್ಯೇ
ತಸ್ಮಿನ್ ಪ್ರವಿಷ್ಟಾ ಹರಿಣೈವ ಸಾರ್ಧಂ
ಸರ್ವೇ ಸುರಾಸ್ತಸ್ಯ ಬಭೂವ ನಾಭೇಃ ।
ಲೋಕಾತ್ಮಕಂ ಪದ್ಮಮಮುಷ್ಯ ಮಧ್ಯೇ
ಪುನರ್ವಿರಿಂಚೋऽಜನಿ ಸದ್ಗುಣಾತ್ಮಾ ॥ ೨೨ ॥

**ಅರ್ಥ** :- **ಸಾ ಏವ** ಆ ಶ್ರೀದೇವಿಯೇ, **ಅಧೋಕ್ಷಜಸ್ಯ** ನಾರಾಯಣನ, **ಶುಷ್ಮಂ** ರೇತೋರೂಪವಾದ, **ಹಿರಣ್ಯಾತ್ಮಕಂ** ಬಂಗಾರಮಯವಾದ, **ಅಂಡಂ** ಬ್ರಹ್ಮಾಂಡವನ್ನು, **ಅಂಬುಮಧ್ಯೇ** ನೀರಿನ ಮಧ್ಯದಲ್ಲಿ, **ಸುಷಾವ** ಹಡೆದಳು, **ತಸ್ಮಿನ್** ಆ ಬ್ರಹ್ಮಾಂಡದಲ್ಲಿ, **ಹರಿಣಾ ಏವ** ಶ್ರೀಹರಿಯಿಂದಲೇ, **ಸಾರ್ಧಂ** ಕೂಡಿಕೊಂಡು, **ಸರ್ವೇ ಸುರಾಃ** ಎಲ್ಲ ದೇವತೆಗಳು, **ಪ್ರವಿಷ್ಟಾಃ** ಪ್ರವೇಶಿಸಿದರು. **ಅಸ್ಯ** ಈ ಹರಿಯ, **ನಾಭೇಃ** ಹೊಕ್ಕಳ ದೆಸೆಯಿಂದ, **ಲೋಕಾತ್ಮಕಂ** ಲೋಕಗಳಿಗೆ ಆಧಾರ ರೂಪವಾದ, **ಪದ್ಮಂ** ಕಮಲವು, **ಬಭೂವ** ಉಂಟಾಯಿತು, **ಅಮುಷ್ಯ** ಈ ಪದ್ಮದ, **ಮಧ್ಯೇ** ಮಧ್ಯದಲ್ಲಿ, **ಪುನಃ** ಮತ್ತೊಮ್ಮೆ, **ಸದ್ಗುಣಾತ್ಮಾ** ಸದ್ಗುಣಗಳ ಸ್ವಾಮಿಯಾದ, **ವಿರಿಂಚಃ** ಚತುರ್ಮುಖ ಬ್ರಹ್ಮನು, **ಅಜನಿ** ಹುಟ್ಟಿದನು.

ದೇವತೆಗಳು, "ನಾನಾ ಪ್ರಕಾರವಾದ ಸೃಷ್ಟಿಮಾಡುವಲ್ಲಿ ಅಮಿತವಾದ ಸಾಮರ್ಥ್ಯವುಳ್ಳ ಶ್ರೀಹರಿಯೇ! ನಮಗೆ ಒಂದು ಮಂದಿರವನ್ನು ನಿರ್ಮಿಸಿ ಕೊಡು" ಎಂದು ಪ್ರಾರ್ಥಿಸಿದರು. ಸುರರಿಂದ ಸ್ತುತ್ಯನಾದ ಶ್ರೀವಿಷ್ಣುವು ಇದಕ್ಕಾಗಿ ರಮೆಯನ್ನು ಸೇರಿದನು. ಶ್ರೀದೇವಿಯು ಭಗವಂತನಿಂದ ರೇತೋ ರೂಪವಾದ ಬಂಗಾರಮಯವಾದ ಬ್ರಹ್ಮಾಂಡವೊಂದನ್ನು ನೀರಿನ ಮಧ್ಯೆ ಪ್ರವೇಶಿಸಿದಳು. ಆ ಬ್ರಹ್ಮಾಂಡದಲ್ಲಿ ಶ್ರೀಹರಿಯಿಂದ ಕೂಡಿದ ಸಕಲದೇವತೆಗಳು ಅದರಲ್ಲಿ ಪ್ರಸವಿಸಿದರು. ಶ್ರೀ ನಾರಾಯಣನ ನಾಭಿಯಿಂದ ಲೋಕಾಧಾರವಾದ ಕಮಲವು, ಅದರ ಮಧ್ಯದಲ್ಲಿ ಚತುರ್ಮುಖ ಬ್ರಹ್ಮನು ಹುಟ್ಟಿದನು.

॥ ೨೧-೨೨ ॥

**ವಿಶೇಷ ವಿಷಯ** :- ಬ್ರಹ್ಮಾಂಡದ ಸೃಷ್ಟಿಯ ಮುಂಚೆ ದೇವತೆಗಳು ಎರಡು ಬಾರಿ ಜನ್ಮ ಪಡೆದ ವಿವರ ಹಿಂದೆ ಬಂದಿದೆ. ಮುಂದೆಯೂ ಬ್ರಹ್ಮಾಂಡದ ಒಳಗೆ ಪುನಃ ದೇವತೆಗಳು ಹುಟ್ಟುವರೆಂದು ತಿಳಿಸುವರು. ಇಲ್ಲಿ ಮೊದಲ ಶರೀರಗಳು ನಾಶವಾಗಿ ಮುಂದಿನ ಶರೀರಗಳು ಬರುತ್ತವೆ ಎಂದು ಭಾವಿಸಬಾರದು. ಹಿಂದೆ ಸೃಷ್ಟಿಗೊಂಡ ಸೂಕ್ಷ್ಮ ಶರೀರವೇ ಕ್ರಮಕ್ರಮವಾಗಿ ವೃದ್ಧಿಯನ್ನು ಹೊಂದುತ್ತದೆಯಷ್ಟೆ ಆದುದರಿಂದಲೆ ಈ ಸೃಷ್ಟಿಗಳನ್ನು ಸೂಕ್ಷ್ಮಸೃಷ್ಟಿ ಸ್ಥೂಲಸೃಷ್ಟಿ ಎಂದು ಹೆಸರಿಸುವುದು.

ಬ್ರಹ್ಮದೇವರ ಆಯುಷ್ಯದ ಐವತ್ತೊಂದನೆಯ ವರ್ಷದ ಪಾದ್ಮಕಲ್ಪದ (ದೇವರ ನಾಭಿಕಮಲದೊಳಗಿನಿಂದ ಉದಿಸಿದ ಬ್ರಹ್ಮನು ಹರಿಯ ಆಜ್ಞೆಯಿಂದ ನಡೆಸುವ) ಸೃಷ್ಟಿಯನ್ನು ಆಚಾರ್ಯರು ಇಲ್ಲಿ ಹೇಳುತ್ತಿದ್ದಾರೆ. ಅಂದರೆ ಇದರ ಹಿಂದೆ ಐವತ್ತು ವರ್ಷದವರೆಗೆ ಸೃಷ್ಟಿಯೇ ಆಗಿರಲಿಲ್ಲ ಎಂದು ಇದರ ಅರ್ಥ ಅಲ್ಲ. ಬ್ರಹ್ಮದೇವರ ಪ್ರತಿದಿವಸದಲ್ಲಿಯೂ ಪುರುಷಸೂಕ್ತದಲ್ಲಿ ತಿಳಿಸಿದಂತೆ ಪುರುಷನಾಮಕ ಶ್ರೀಹರಿಯಿಂದ ಸೃಷ್ಟಿ ಆಗುತ್ತಲೇ ಇರುತ್ತದೆ. ಆದರೆ ಆ ಸೃಷ್ಟಿ ತಾರತಮ್ಯಕ್ಕೆ ಉಪಯೋಗಿ ಅಲ್ಲ. "ಮುಖಾದಿಶ್ಚಾಂದ್ರಗ್ನಿಶ್ಚ ಪ್ರಾಣಾದ್ವಾ ಯುರಜಾಯತ" ಎಂದು ಪ್ರಾಣನಿಗಿಂತಲೂ ಕೆಳಗಿನವರಾದ ಅಗ್ನಿ ಮತ್ತು ಇಂದ್ರರಿಗೆ ಪ್ರಾಣನಿಗಿಂತ ಮೊದಲು ಸೃಷ್ಟಿ ಹೇಳಿದೆ. ಆದರೆ ಇದು ತಾರತಮ್ಯಾನುಗುಣವಲ್ಲವಷ್ಟೆ ಐವತ್ತು ವರ್ಷದ ಮೇಲೆ ಮಾಡುವ ಪಾದ್ಮಕಲ್ಪದ ಸೃಷ್ಟಿಯೇ ತಾರತಮ್ಯೋಪಯೋಗಿ. ಆದ್ದರಿಂದಲೇ ತಾರತಮ್ಯ ಪ್ರತಿಷ್ಠಾಪಕರಾದ ಶ್ರೀಮಧ್ವರು ತಾರತಮ್ಯೋಪಯೋಗಿಯಾದ ಪಾದ್ಮಕಲ್ಪದ ಸೃಷ್ಟಿಯನ್ನೆ ಇಲ್ಲಿ ಉಲ್ಲೇಖಿಸಿರುವರು.

ಬ್ರಹ್ಮದೇವರು ಈ ಹಿಂದೆಯೂ ಭಗವಂತನ ನಾಭಿಕಮಲದಲ್ಲಿ ಹುಟ್ಟಿದರು. ಆದರೆ ಆಗ ಬ್ರಹ್ಮದೇವರಿಗೆ ಸೃಷ್ಟಿಯಲ್ಲಿ ಅಧಿಕಾರವಿರಲಿಲ್ಲ. ಭಗವಂತನೆ ಎಲ್ಲವನ್ನು ತನ್ನ ಅವಯವಗಳಿಂದಲೆ ಲೀಲಾಮಾತ್ರದಿಂದ ಸೃಷ್ಟಿ ಮಾಡುವನು. ಬ್ರಹ್ಮದೇವರು ಆಗ ಭಗವಂತನ ಅವಯವಗಳಿಂದ ಉತ್ಪನ್ನ ಗಳಾದ ಯಜ್ಞಸಾಮಗ್ರಿಗಳಿಂದ ಭಗವಂತನ ಪೂಜೆಯನ್ನೆ ಮಾಡುವರಷ್ಟೆ

**ತಸ್ಮಾತ್ಪುನಃ ಸರ್ವಸುರಾಃ ಪ್ರಸೂತಾಃ**
**ತೇ ಜಾನಮಾನಾ ಅಪಿ ನಿರ್ಣಯಾಯ ।**
**ನಿಸ್ಸೃತ್ಯ ಕಾಯಾದುತ ಪದ್ಮಯೋನೇಃ**
**ಸಂಪ್ರಾವಿಶನ್ ಕ್ರಮಶೋ ಮಾರುತಾಂತಾಃ ॥ ೨೪ ॥**

**ಅರ್ಥ :-** **ತಸ್ಮಾತ್** ಆ ಬ್ರಹ್ಮದೇವರ ದೆಸೆಯಿಂದ, **ಪುನಃ** ಮತ್ತೊಮ್ಮೆ ಬ್ರಹ್ಮಾಂಡದ ಒಳಗೆ, **ಸರ್ವಸುರಾಃ** ಎಲ್ಲ ದೇವತೆಗಳು, **ಪ್ರಸೂತಾಃ** ಹುಟ್ಟಿದರು, **ತೇ** ಆ ದೇವತೆಗಳು, **ಜಾನಮಾನಾಃ ಅಪಿ** ವಾಯುದೇವರಿಗೆ ಉತ್ತಮತ್ವವನ್ನು ತಿಳಿದವರಾದರೂ, **ಮಾರುತಾಂತಾಃ** ವಾಯುದೇವರೆ ಕೊನೆಯಾಗಿ ಉಳ್ಳ ದೇವತೆಗಳು, **ನಿರ್ಣಯಾಯ** ಲೋಕದ ಜನರ ನಿರ್ಣಯಕ್ಕೋಸ್ಕರ, **ಪದ್ಮಯೋನೇಃ** ಪದ್ಮದಲ್ಲಿ ಉದಿಸಿದ ಬ್ರಹ್ಮನ, **ಕಾಯಾತ್** ಶರೀರದಿಂದ, **ಕ್ರಮಶಃ** ವಾಗಭಿಮಾನಿಕ್ರಮದಿಂದ, **ನಿಃಸೃತ್ಯ** ಹೊರಗೆ ಬಂದು, **ಉತ** ಅನಂತರ, **ಸಂಪ್ರಾವಿಶನ್** ಅದೇ ಕ್ರಮದಿಂದ ಪ್ರವೇಶಿಸಿದರು.

**ತಾತ್ಪರ್ಯ :-** ಬ್ರಹ್ಮದೇವರ ದೆಸೆಯಿಂದ ಬ್ರಹ್ಮಾಂಡದ ಒಳಗೆ ಮತ್ತೊಮ್ಮೆ ಜನ್ಮಪಡೆದ ದೇವತೆಗಳು ತಾವು ವಾಯುದೇವರ ಶ್ರೇಷ್ಠತೆಯನ್ನು ಬಲ್ಲವ ರಾದರೂ ಲೋಕದ ಜನರಿಗೆ ನಿರ್ಣಯವಾಗಲೆಂದು ತಾವು ಶ್ರೇಷ್ಠ ತಾವು ಶ್ರೇಷ್ಠ ಎಂದು ಸ್ಪರ್ಧಿಸಿದರು. ಬ್ರಹ್ಮದೇವರು ಶ್ರೇಷ್ಠರು ಯಾರೆಂದು ಸಾಬೀತು ಪಡಿಸಲು ತಮ್ಮ ಶರೀರವನ್ನು ಪರೀಕ್ಷೆಗೆ ಕೊಟ್ಟು ಇಂತೆಂದರು ಯಾವ ದೇವತೆಯ ನಿರ್ಗಮನದಿಂದ ಈ ಶರೀರವು ಕುಸಿದು ಬೀಳುವುದೋ ಯಾವ ದೇವತೆಯ ಪ್ರವೇಶದಿಂದ ಪುನಃ ಎದ್ದು ನಿಲ್ಲುವುದೋ ಅವರೇ ನಿಮ್ಮಲ್ಲಿ ಶ್ರೇಷ್ಠರು ಎಂದು. ಬ್ರಹ್ಮದೇವರ ಆಜ್ಞೆಯಂತೆ ದೇವತೆಗಳು ಬ್ರಹ್ಮ ಶರೀರದಿಂದ ನಿರ್ಗಮಿಸಿದರು ಮತ್ತು ಪ್ರವೇಶಿಸಿದರು.

**ವಿಶೇಷ ವಿಷಯ** :- ಬ್ರಹ್ಮದೇವರ ಶರೀರದಿಂದ ಎಲ್ಲ ದೇವತೆಗಳು ಹೊರ ಬಂದ ಮೇಲೆ ವಾಯುದೇವರು ಹೊರಗೆ ಬಂದರು. ಎಲ್ಲ ದೇವತೆಗಳು ಪ್ರವೇಶ ಮಾಡಿದ ಬಳಿಕ ಕೊನೆಯಲ್ಲಿ ತಾವು ಪ್ರವೇಶಿಸಿದರು ಎಂಬ ಅಂಶವನ್ನು ಸೂಚನೆ ಮಾಡಲು ''ಮಾರುತಾಂತಾಃ'' ಎಂದು ಹೇಳಿರುವುದು. ನಿರ್ಗಮನ, ಪ್ರವೇಶ ಎರಡು ಸಮಯದಲ್ಲಿಯೂ ವಾಯುದೇವರೇ ಕೊನೆಯಾಗಿ ಉಳ್ಳವರು ಎಂದು ಇದರ ಅಭಿಪ್ರಾಯ.

**ವಾಯೋಃ** ವಾಯುದೇವರ, **ಗಮನಾತ್** ಏವ ಹೊರಬರುವಿಕೆ ಯಿಂದಲೇ, **ಶರೀರಂ** ಬ್ರಹ್ಮದೇವರ ಶರೀರವು, **ಪಪಾತ** ಬಿದ್ದಿತು, **ತಸ್ಯ** ಆ ವಾಯುದೇವರ, **ಆವೇಶತಃ ಏವ** ಪ್ರವೇಶದಿಂದಲೆ, **ಪುನಃ** ಮತ್ತೆ, **ಉತ್ಥಿತಂ** ಎದ್ದಿತು, **ತಸ್ಮಾತ್** ವಾಯುದೇವರ ನಿರ್ಗಮನ, ಪ್ರವೇಶಗಳಿಂದಲೇ ಶರೀರದ ಪಾತ, ಉತ್ಥಾನಗಳು ಆದುದರಿಂದ, **ಸಃ ಏಕಃ** ಆ ಮುಖ್ಯಪ್ರಾಣರೊಬ್ಬರೇ, **ವಿಬುಧಪ್ರಧಾನಃ** ದೇವ ಶ್ರೇಷ್ಠರು, **ಇತಿ** ಎಂದು, **ದೇವಗಣಾಃ** ದೇವತಾ ಸಮೂಹಗಳು, **ತಮೇವ** ಆ ವಾಯುದೇವರನ್ನೇ, **ಆಶ್ರಿತಾಃ** ಆಶ್ರಯಿಸಿದವು, **ಹರೇಃ** ಶ್ರೀಹರಿಯ, **ಚ** ಮತ್ತು, **ವಿರಿಂಚಸ್ಯ** ಬ್ರಹ್ಮನ, **ಮಧ್ಯಸಂಸ್ಥಿತೇಃ** ಪರೀಕ್ಷಾರ್ಥವಾಗಿ ಮಧ್ಯಸ್ಥರಾಗಿ ಅಂದರೆ ಉದಾಸೀನರಾಗಿ ಇರುವಿಕೆಯ ಕಾರಣದಿಂದ, **ಸಃ** ಆ, **ಮಾರುತಃ** ವಾಯುದೇವರು, **ತದನ್ಯದೇವಾಧಿಪತಿಃ** ಆ ಹರಿ, ಬ್ರಹ್ಮರಿಗಿಂತ ಇತರ ದೇವತೆಗಳಿಗೆ ಸ್ವಾಮಿಯು.

ಎಲ್ಲ ದೇವತೆಗಳು ಹೊರ ಹೊರಟರೂ ಬೀಳದ ಆ ಬ್ರಹ್ಮದೇವರ ಶರೀರ ವಾಯುದೇವರ ನಿರ್ಗಮನದಿಂದಲೆ ಬಿದ್ದಿತು. ಎಲ್ಲ ದೇವತೆಗಳು ಪ್ರವೇಶಿಸಿ ದರೂ ಏಳದ ಆ ಶರೀರ ವಾಯುದೇವರ ಪ್ರವೇಶದಿಂದಲೇ ಎದ್ದಿತು.

ಹರಿ, ವಿರಿಂಚರು ಇದ್ದರೂ ವಾಯುದೇವರ ನಿರ್ಗಮನ ಪ್ರವೇಶ ಗಳಿಂದಲೇ ಉತ್ಥಾನ ಪತನಗಳಾದವು ಎಂದರೆ ಅವರಿಬ್ಬರಿಗಿಂತಲೂ ವಾಯು ದೇವರು ಹಿರಿಯರು ಎಂದು ಭಾವಿಸಬಾರದು. ವಾಯುದೇವರ ಮಹಿಮೆ ಯನ್ನು ಜಗತ್ತಿಗೆ ತಿಳಿಸುವುದಕ್ಕೋಸ್ಕರ ಹರಿವಿರಿಂಚರು ಉದಾಸೀನರಾಗಿದ್ದರಷ್ಟೆ. ಆದುದರಿಂದಲೇ ಹರಿವಿರಿಂಚರಿಗಿಂತ ಇತರ ದೇವತೆಗಳಿಗೆ ವಾಯು ದೇವರು ಸ್ವಾಮಿಯು.

ತತೋ ವಿರಿಂಚೋ ಭುವನಾನಿ ಸಪ್ತ
ಸಸಪ್ತಕಾನ್ಯಾಶು ಚಕಾರ ಸೋऽಬ್ಜಾತ್ ।
ತಸ್ಮಾಚ್ಚ ದೇವಾ ಋಷಯಃ ಪುನಶ್ಚ
ವೈಕಾರಿಕಾದ್ಯಾಃ ಸಶಿವಾ ಬಭೂವುಃ ॥ ೨೬ ॥

**ಅರ್ಥ** :- **ತತಃ** ಆ ಪರೀಕ್ಷಾ ನಂತರ, **ವಿರಿಂಚಃ** ಬ್ರಹ್ಮನು, **ಸಸಪ್ತಕಾನಿ** ಏಳರಿಂದ ಕೂಡಿದ, **ಸಪ್ತ** ಏಳು ಅಂದರೆ ಹದಿನಾಲ್ಕು, **ಭುವನಾನಿ** ಲೋಕ ಗಳನ್ನು, **ಆಶು** ಕೂಡಲೆ, **ಅಬ್ಜಾತ್** ಕಮಲದ ದೆಸೆಯಿಂದ, **ಚಕಾರ** ಸೃಷ್ಟಿ ಮಾಡಿದನು. **ತಸ್ಮಾಚ್ಚ** ಆ ಬ್ರಹ್ಮದೇವರ ದೆಸೆಯಿಂದಲೆ, **ವೈಕಾರಿಕಾದ್ಯಾಃ** ವೈಕಾರಿಕ ಅಹಂಕಾರದಿಂದ ಉತ್ಪನ್ನರಾದ ಇಂದ್ರಿಯಾಭಿಮಾನಿಗಳು, ತೈಜಸ ಅಹಂಕಾರದಿಂದ ಉತ್ಪನ್ನರಾದ ಪ್ರಾಣಾದಿಗಳು, ತಾಮಸ ಅಹಂಕಾರದಿಂದ ಉತ್ಪನ್ನರಾದ ಗಣೇಶನೇ ಮೊದಲಾದ, **ಸಶಿವಾಃ** ರುದ್ರದೇವರಿಂದ ಸಹಿತರಾದ, **ದೇವಾಃ** ದೇವತೆಗಳು, **ಋಷಯಶ್ಚ** ಋಷಿಗಳೂ ಕೂಡ, **ಪುನಃ ಬಭೂವುಃ** ಮತ್ತೆ ಹುಟ್ಟಿದರು.

ಅಗ್ರೇ ಶಿವೋऽಹಂಭವ ಏವ ಬುದ್ಧೇಃ
ಉಮಾ ಮನೋಜಾ ಸಹ ಶಕ್ರಕಾಮೌ ।
ಗುರುರ್ಮನುರ್ದಕ್ಷ ಉತಾನಿರುದ್ಧಃ
ಸಹೈವ ಪಶ್ಚಾನ್ಮನಸಃ ಪ್ರಸೂತಾಃ ॥ ೨೭ ॥

**ಅರ್ಥ** :- **ಅಗ್ರೇ** ಆದಿಯಲ್ಲಿ, **ಶಿವಃ ಏವ** ರುದ್ರದೇವರೇ (ಗರುಡ, ಶೇಷರೂ), **ಅಹಂಭವಃ** ಬ್ರಹ್ಮದೇವರ 'ದಾಸೋಹಂ' ಎಂಬ ಅಹಂಮತಿ ಯಿಂದ ಹುಟ್ಟಿದರು, **ಬುದ್ಧೇಃ** ಬುದ್ಧಿಯಿಂದ, **ಉಮಾ** ಪಾರ್ವತಿಯು ಹುಟ್ಟಿದಳು, **ಅಗ್ರೇ** ಮನಸ್ಸಿನಿಂದ ಹುಟ್ಟುವ ಬೃಹಸ್ಪತ್ಯಾಚಾರ್ಯಾದಿಗಳಿ ಗಿಂತಲೂ ಮೊದಲು, **ಶಕ್ರಕಾಮೌ** ಇಂದ್ರ, ಮನ್ಮಥರು, **ಸಹ** ಒಟ್ಟಿಗೆ (ಅವಳಿ ಗಳಾಗಿ), **ಮನೋಜೌ** ಬ್ರಹ್ಮದೇವರ ಮನಸ್ಸಿನಿಂದ ಹುಟ್ಟಿದವರು, **ಪಶ್ಚಾತ್** ಅನಂತರ, **ಮನಸಃ** ಬ್ರಹ್ಮದೇವರ ಮನಸ್ಸಿನ ದೆಸೆಯಿಂದ, **ಗುರುಃ** ಬೃಹಸ್ಪತ್ಯಾ ಚಾರ್ಯರು, **ಮನುಃ** ಮನುವು, **ದಕ್ಷಃ** ದಕ್ಷಪ್ರಜಾಪತಿಯು, **ಅನಿರುದ್ಧಃ ಉತ** ಅನಿರುದ್ಧನೂ ಕೂಡ, **ಸಹೈವ** ಒಮ್ಮೆಲೇ, **ಪ್ರಸೂತಾಃ** ಹುಟ್ಟಿದರು.

**ತಾತ್ಪರ್ಯ** :ಬ್ರಹ್ಮದೇವರ 'ದಾಸೋಽಹಂ' ಎಂಬ 'ಅಹಂಮತಿ'ಯಿಂದ ಮೊದಲು ರುದ್ರ, ಶೇಷ, ಗರುಡರು ಉತ್ಪನ್ನರಾದರು. ಬ್ರಹ್ಮದೇವರ ಬುದ್ಧಿಯಿಂದ ಪಾರ್ವತೀ, ಸುಪರ್ಣೀ, ವಾರುಣೀಯರು, ಮನಸ್ಸಿನಿಂದ ಮೊದಲು ಇಂದ್ರ-ಕಾಮರು, ಅನಂತರ ಬೃಹಸ್ಪತಿ, ಮನು, ದಕ್ಷ, ಅನಿರುದ್ಧರು ಏಕಕಾಲದಲ್ಲಿ ಹುಟ್ಟಿದರು.

**ಚಕ್ಷುಃ ಶ್ರುತಿಭ್ಯಾಂ ಸ್ಪರ್ಶಾತ್ಸಹೈವ**
**ರವಿಃ ಶಶೀ ಧರ್ಮ ಇಮೇ ಪ್ರಸೂತಾಃ ।**
**ಜಿಹ್ವಾಭವೋ ವಾರಿಪತಿರ್ನಸೋಶ್ಚ**
**ನಾಸತ್ಯದಸ್ರೌ ಕ್ರಮಶಃ ಪ್ರಸೂತಾಃ ॥ ೨೮ ॥**

**ಅರ್ಥ** :- **ಚಕ್ಷುಃಶ್ರುತಿಭ್ಯಾಂ** ಕಣ್ಣು ಕಿವಿಗಳಿಂದ, **ಸ್ಪರ್ಶಾತ್** ತ್ವಗಿಂದ್ರಿಯ ದಿಂದ, **ಕ್ರಮಶಃ** ಕ್ರಮವಾಗಿ, **ರವಿಃ** ಸೂರ್ಯನು, **ಶಶೀ** ಚಂದ್ರನು, **ಧರ್ಮಃ** ಯಮನು, **ಇಮೇ** ಇವರು, **ಸಹೈವ** ಏಕಕಾಲದಲ್ಲಿಯೇ, **ಪ್ರಸೂತಾಃ** ಹುಟ್ಟಿದರು, **ವಾರಿಪತಿಃ** ವರುಣನು, **ಜಿಹ್ವಾಭವಃ** ನಾಲಿಗೆಯಿಂದ ಹುಟ್ಟಿದ ವನು, **ನಸ್ರೋಃ** ಎರಡು ಮೂಗಿನ ಹೊಳ್ಳೆಗಳಿಂದ, **ನಾಸತ್ಯದಸ್ರೌ** ನಾಸತ್ಯ ಮತ್ತು ದಸ್ರ ಎಂಬ ಅಶ್ವಿನೀ ದೇವತೆಗಳು ಕ್ರಮವಾಗಿ ಹುಟ್ಟಿದರು.

**ತಾತ್ಪರ್ಯ** :ಬ್ರಹದೇವರ ಕಣ್ಣು ಕಿವಿ, ತ್ವಗಿಂದ್ರಿಯಗಳಿಂದ ಕ್ರಮವಾಗಿ ಸೂರ್ಯ, ಚಂದ್ರ, ಯಮಧರ್ಮ ಇವರುಗಳು ಒಮ್ಮೆಲೇ ಹುಟ್ಟಿದರು. ವರುಣನು ನಾಲಿಗೆಯಿಂದ, ಮೂಗಿನಿಂದ ಅಶ್ವಿನೀದೇವತೆಗಳು ಕ್ರಮವಾಗಿ ಹುಟ್ಟಿದರು.

**ತತಃ ಸನಾದ್ಯಾಶ್ಚ ಮರೀಚಿಮುಖ್ಯಾಃ**
**ದೇವಾಶ್ಚ ಸರ್ವೇ ಕ್ರಮಶಃ ಪ್ರಸೂತಾಃ ।**
**ತತೋಽಸುರಾದ್ಯಾ ಋಷಯೋ ಮನುಷ್ಯಾಃ**
**ಜಗತ್ ವಿಚಿತ್ರಂ ಚ ವಿರಿಂಚತೋಽಭೂತ್ ॥ ೨೯ ॥**

**ಅರ್ಥ** :- **ತತಃ** ಅನಂತರ, **ಸನಾದ್ಯಾಃ** 'ಸನ' ಶಬ್ದವೇ ಆದಿಯಲ್ಲಿ ಉಳ್ಳ ಸನಕ, ಸನಂದನ, ಸನತ್ಸುಜಾತರು, **ಮರೀಚಿಮುಖ್ಯಾಃ** ಮರೀಚಿಯೇ ಮೊದಲಾದವರು, **ಸರ್ವೇ** ಎಲ್ಲಾ, **ದೇವಾಶ್ಚ** ದೇವತೆಗಳೂ ಕೂಡ, **ಕ್ರಮಶಃ**

ನಾರದಾದಿ ಉತ್ಪತ್ತಿ ಕ್ರಮದಿಂದ, **ಪ್ರಸೂತಾಃ** ಹುಟ್ಟಿದರು, **ತತಃ** ಅನಂತರ, **ಅಸುರಾದ್ಯಾಃ** ಅಸುರ, ರಾಕ್ಷಸರೇ ಮೊದಲಾದವರು, **ಋಷಯಃ** ಋಷಿಗಳು, **ಮನುಷ್ಯಾಃ** ಮನುಷ್ಯರು, **ಪ್ರಸೂತಾಃ** ಹುಟ್ಟಿದರು, **ತತಃ** ಅನಂತರ, **ಅಸುರಾದ್ಯಾಃ** ಅಸುರ ರಾಕ್ಷಸರೇ ಮೊದಲಾದವರು **ಮನುಷ್ಯಾಃ** ಮನುಷ್ಯರು, **ಪ್ರಸೂತಾಃ** ಹುಟ್ಟಿದರು, **ವಿಚಿತ್ರಂ** ಗೋಗಜಾಶ್ವ ಪಕ್ಷಿವೃಕ್ಷಾದಿ ನಾನಾ ಪ್ರಭೇದಗಳಿಂದ ಕೂಡಿದ, **ಜಗತ್ ಚ** ಪ್ರಪಂಚವು ಕೂಡ, **ಅಭೂತ್** ಹುಟ್ಟಿತು.

**ವಿಶೇಷ ವಿಷಯ** :'ಮರೀಚಿಮುಖ್ಯಾಃ' ಎಂಬ ಶಬ್ದಕ್ಕೆ ವಸುಪುತ್ರರಾದ, ಸೂರ್ಯನ ರಶ್ಮಿಯಲ್ಲಿರುವ ದೇವತೆಗಳು ಎಂಬ ಅಭಿಪ್ರಾಯವು ಶ್ರೀಜನಾರ್ದನ ಭಟ್ಟೀಯ ವ್ಯಾಖ್ಯಾನದಲ್ಲಿದೆ. ಇದಕ್ಕೆ ಆಧಾರವಾಗಿ ''ತತ್ ಪುತ್ರಾಸ್ತು ಮರೀಚ್ಯಾದ್ಯಾಃ ಸೂರ್ಯರಶ್ಮಿಷು ಸಂಸ್ಥಿತಾಃ'' ಎಂಬ ಛಾಂದೋಗ್ಯ ಭಾಷ್ಯವನ್ನು ಉದಾಹರಿಸಲಾಗಿದೆ. ಶ್ರೀವಾದಿರಾಜೀಯ ವ್ಯಾಖ್ಯಾನದಲ್ಲಿ 'ಮರೀಚಿಮುಖ್ಯಾಃ' ಎಂಬ ಪದಕ್ಕೆ ಅರ್ಥ ಬರೆದಿಲ್ಲ, ಆದರೆ 'ಕ್ರಮಶಃ' ಎಂಬ ಪದಕ್ಕೆ ನಾರದಾದ್ಯುತ್ಪತ್ತಿಕ್ರಮೇಣ' 'ನಾರದಾದಿ ಉತ್ಪತ್ತಿಕ್ರಮದಿಂದ' ಎಂದು ಅರ್ಥ ಬರೆದಿರುವುದರಿಂದ ಬ್ರಹ್ಮದೇವರ ಅಂಗುಷ್ಠದಿಂದ ನಾರದರ ಉತ್ಪತ್ತಿಯನ್ನು ಹೇಳುವ ಸಂದರ್ಭವು ಭಾಗವತದಲ್ಲಿ ಮರೀಚಿ, ಅತ್ರಿ, ಅಂಗಿರಸ್ ಮುಂತಾದವರ ಉತ್ಪತ್ತಿಯನ್ನು ತಿಳಿಸುವಾಗ ಬರುತ್ತದೆ. ಆದುದರಿಂದ 'ಮರೀಚಿಮುಖ್ಯಾಃ' ಎಂಬ ಪದಕ್ಕೆ ಮರೀಚಿ ಮೊದಲಾದ ಋಷಿಗಳು ಎಂದು ಅವರ ಅಭಿಪ್ರಾಯವಿದೆಯೆಂದು ತಿಳಿಯಬೇಕು.

**ಉಕ್ತಕ್ರಮಾತ್ ಪೂರ್ವಭವಸ್ತು ಯೋ ಯಃ**
**ಶ್ರೇಷ್ಠಃ ಸ ಸ ಹ್ಯಾಸುರಕಾನ್ವಿತೇ ಚ**
**ಪೂರ್ವಸ್ತು ಪಶ್ಚಾತ್ ಪುನರೇವ ಜಾತೋ**
**ನಾಽಶ್ರೇಷ್ಠತಾಮೇತಿ ಕಥಂಚಿದಸ್ಯ ।**
**ಗುಣಾಸ್ತು ಕಾಲಾತ್ ಪಿತೃಮಾತೃದೋಷಾತ್**
**ಸ್ವಕರ್ಮತೋ ವಾಽಭಿಭವಂ ಪ್ರಯಾಂತಿ ॥ ೩೦ ॥**

**ಅರ್ಥ** :- **ಉಕ್ತಕ್ರಮಾತ್** ಇದುವರೆಗೆ ಹೇಳಿದ ಕ್ರಮದಿಂದ, **ಯಃ ಯಃ** ಯಾರು, ಯಾರು, **ಪೂರ್ವಭವಃ ತು** ಪಾದ್ಮ ಸೃಷ್ಟಿಯಲ್ಲಿ ಮೊದಲು ಹುಟ್ಟಿದರೋ, **ಸಃ ಸಃ** ಅವರು ಅವರೇ, **ಆಸುರಕಾನ್ ಚ** ಅಸುರರನ್ನಾದರೂ,

**ಋತೇ** ಬಿಟ್ಟು **ಶ್ರೇಷ್ಠಃ** ಶ್ರೇಷ್ಠರು, **ಹಿ** ಇದು ಪ್ರಮಾಣಸಿದ್ಧವು, **ಪೂರ್ವಸ್ತು ಪಾದ್ಮ** ಸೃಷ್ಟಿಯಲ್ಲಿ ಮೊದಲು ಹುಟ್ಟಿದವನಾದರೋ, **ಪುನಃ** ಯಾವದಾದರೂ ಕಾರಣದಿಂದ ಮತ್ತೊಂದು ಜನ್ಮದಲ್ಲಿ ಅಥವಾ ತಾರತಮ್ಯದ ವಿವಕ್ಷೆಯಿಲ್ಲದ ಬೇರೊಂದು ಅವಾಂತರ ಸೃಷ್ಟಿಯಲ್ಲಿ, **ಪಶ್ಚಾತ್ ಜಾತಃ** ಹಿಂದೆ ತಿಳಿಸಿದ ಕ್ರಮಕ್ಕೆ ವ್ಯತ್ಯಾಸವಾಗಿ (ತನಗಿಂತಲು ಕೆಳಗಿನವನ ಅನಂತರವನಾಗಿ) ಹುಟ್ಟಿದರೆ, **ಕಥಂಚಿತ್** ಯಾವ ರೀತಿಯಾಗಿಯೂ, **ಅಶ್ರೇಷ್ಠತಾಂ** ಉತ್ತಮತ್ವಾಭಾವವನ್ನು **ನ ಏತಿ** ಹೊಂದುವುದಿಲ್ಲ, **ಅಸ್ಯ** ಅವಾಂತರಸೃಷ್ಟಿಯಲ್ಲಿ ಮತ್ತೆ ಹುಟ್ಟಿದವನ, **ಗುಣಾಃ ತು** ಜ್ಞಾನಾನಂದಾದಿಗುಣಗಳಾದರೋ, **ಕಾಲಾತ್** ದ್ವಾಪರ, ಕಲಿಯುಗಾದಿ ಕಾಲಬಲದಿಂದ, **ಪಿತೃಮಾತೃದೋಷಾತ್** ಮನುಷ್ಯಾನ್ನದಿಂದ ಪರಿಣತವಾದ ರೇತೋಯೋನಿ ಸಂಬಂಧವೇ ಮೊದಲಾದ ದೋಷದಿಂದ, ವಾ ಅಥವಾ, **ಸ್ವಕರ್ಮತಃ** ತಾನು ಸಂಪಾದಿಸಿದ ಪ್ರಾರಬ್ಧ ಕರ್ಮದಿಂದ, **ಅಭಿಭವಂ** ಅನಭಿವ್ಯಕ್ತಿಯನ್ನು, **ಪ್ರಯಾಂತಿ** ಹೊಂದುತ್ತವೆ.

**ತಾತ್ಪರ್ಯ** :- ಈ ಹಿಂದೆ ನಿರೂಪಿತವಾದ ಪಾದ್ಮಸೃಷ್ಟಿಯಲ್ಲಿ ಮೊದಲು ಯಾರು ಹುಟ್ಟಿರುವರೋ, ಅವರೇ ಶ್ರೇಷ್ಠರು. ಆದರೆ ಈ ನಿಯಮ ಅಸುರರ ವಿಷಯದಲ್ಲಿ ಅನ್ವಯಿಸುವುದಿಲ್ಲ. ಪಾದ್ಮಸೃಷ್ಟಿಯಲ್ಲಿ ಮೊದಲು ಹುಟ್ಟಿದವನು ತನ್ನ ಅನಂತರ ಹುಟ್ಟಿದವನಿಗಿಂತ ನಂತರದವನಾಗಿ ಮತ್ತೊಂದು ಜನ್ಮದಲ್ಲಿ ಹುಟ್ಟಿದರೂ ಅವನ ಶ್ರೇಷ್ಠತೆ ಹೊಗುವುದಿಲ್ಲ. ಉದಾಹರಣೆಗೆ ಧರ್ಮರಾಜನಿಗಿಂತಲೂ ಸ್ವರೂಪತಃ ಶ್ರೇಷ್ಠರಾದ ವಾಯುದೇವರು ಅವನಿಗೆ ತಮ್ಮನಾಗಿ ಹುಟ್ಟಿದ ಮಾತ್ರಕ್ಕೆ ತಮ್ಮ ಶ್ರೇಷ್ಠತೆಯನ್ನು ಕಳೆದುಕೊಳ್ಳುವುದಿಲ್ಲ. ಅಂತೆಯೆ ದ್ರೋಣಪುತ್ರರಾದ ಅಶ್ವತ್ಥಾಮರೂ ಕೂಡ. ಇದೇರೀತಿ ತಾರತಮ್ಯಕ್ಕೆ ಆಧಾರವಲ್ಲದ ಇತರ ಅವಾಂತರ ಸೃಷ್ಟಿಯಲ್ಲಿ ಪಾದ್ಮಕಲ್ಪದಲ್ಲಿ ಜನ್ಮತಃ ಹರಿಯನಾದವನು ಜನ್ಮತಃ ಕಿರಿಯನಿಗಿಂತ ಕೆಳಗಿನವನಾಗಿ ಹುಟ್ಟಿದರೂ ಅವನ ಶ್ರೇಷ್ಠತೆಗೆ ಧಕ್ಕೆ ಇಲ್ಲ.

ಕೆಲವೊಮ್ಮೆ ಪಾದ್ಮಸೃಷ್ಟಿಯ ಕ್ರಮದಲ್ಲಿ ಶ್ರೇಷ್ಠನಾದವನು ಮತ್ತೊಮ್ಮೆ ಸ್ವ ಅವರಿಗಿಂತ ಕನಿಷ್ಠವಾಗಿ ಹುಟ್ಟಿದಾಗ ಅವನ ಶ್ರೇಷ್ಠತೆಗೆ ಧಕ್ಕೆಯಿಲ್ಲದಿದ್ದರೂ ಅವನ ಜ್ಞಾನಾನಂದಾದಿ ವಿಶೇಷಗುಣಗಳು ಪ್ರಕಾಶಕ್ಕೆ ಬರದಿರುವ ಸಂದರ್ಭವೂ ಇದೆ. ಅದಕ್ಕೆ ಕಾರಣ ದ್ವಾಪರ, ಕಲಿ, ಮೊದಲಾದ ಕಾಲ. ಮನುಷ್ಯಾನ್ನದಿಂದ ಪರಿಣತವಾದ ರೇತೊಯೋನಿಸಂಬಂಧ, ಅವನ ಪ್ರಾರಬ್ಧಕರ್ಮ.

**ಲಯೋ ಭವೇದ್ ವ್ಯುತ್ಕ್ರಮತೋ ಹಿ ತೇಷಾಂ**
**ತತೋ ಹರಿಃ ಪ್ರಲಯೇ ಶ್ರೀಸಹಾಯಃ ।**
**ಶೇತೇ ನಿಜಾನಂದಮಮಂದಸಾಂದ್ರ**
**ಸಂದೋಹಮೇಕೋऽನುಭವನ್ನನಂತಃ ॥ ೩೧ ॥**

**ಅರ್ಥ** :- **ಹಿ** ಯಾವ ಕಾರಣದಿಂದ, **ತೇಷಾಂ** ಆ ದೇವತೆಗಳ, **ಲಯಃ** ಸಂಹಾರವು, **ವ್ಯುತ್ಕ್ರಮತಃ** ಸೃಷ್ಟಿಕ್ರಮಕ್ಕೆ ವಿಪರೀತವಾಗಿ ಅಂದರೆ ಮೊದಲು ಹುಟ್ಟಿದವನ ಸಂಹಾರವು ಕೊನೆಗೂ ಕೊನೆಗೆ ಹುಟ್ಟಿದವನ ಸಂಸಾರವು ಮೊದಲಿಗೆ, **ಭವೇತ್** ಆಗುವುದೋ, **ತತಃ** ಆದುದರಿಂದ, ಉತ್ಪತ್ತಿ ಕ್ರಮವೇ ತಾರತಮ್ಯಕ್ಕೆ ನಿಯಾಮಕವು, ಲಯಕ್ರಮವಲ್ಲ, **ಪ್ರಲಯೇ** ಪ್ರಲಯಕಾಲದಲ್ಲಿ **ಶ್ರೀಸಹಾಯಃ** ಲಕ್ಷ್ಮೀಸಹಿತನಾದ, **ಅನಂತಃ** ದೇಶ, ಕಾಲ, ಗುಣಗಳಿಂದ ಮಿತಿ ಇಲ್ಲದ ನಾಶರಹಿತನಾದ, **ಹರಿಃ** ಶ್ರೀಹರಿಯು, **ಅಮಂದಸಾಂದ್ರ ಸಂದೋಹಂ** ಪೂರ್ಣವಾದ, ನಿಬಿಡವಾದ, ಸಮುದಾಯ ರೂಪವಾದ, **ನಿಜಾನಂದಂ** ಸ್ವರೂಪಸುಖವನ್ನು, **ಏಕಃ** ಒಬ್ಬನೇ, **ಅನುಭವನ್** ಅನುಭವಿಸುವವನಾಗಿ, **ಶೇತೇ** ಮಲಗುತ್ತಾನೆ.

**ತಾತ್ಪರ್ಯ** :- ವ್ಯಕ್ತಿಯ ಶ್ರೇಷ್ಠತೆಗೆ ಉತ್ಪತ್ತಿಕ್ರಮವೇ ನಿಯಾಮಕವು ಲಯಕ್ರಮವಲ್ಲ. ಲಯಕ್ರಮವು ನೀಚರಿಂದ ಆರಂಭಗೊಳ್ಳುವುದರಿಂದ ಅದು ಶ್ರೇಷ್ಠತೆಗೆ ನಿಯಾಮಕ ಎನ್ನುವಂತಿಲ್ಲ. ದೇವತೆಗಳ ಲಯವಾದ ಬಳಿಕ ಶ್ರೀಹರಿಯೊಬ್ಬನೆ ತನ್ನ ಸ್ವರೂಪಭೂತವಾದ ಪೂರ್ಣಸುಖವನ್ನು ಅನುಭವಿಸುತ್ತ ಮಲಗುವನು. ಶ್ರೀಹರಿಯ ಶಯನವೆಂದರೆ ಕಣ್ಣು ಮುಚ್ಚುವುದೆಂದಷ್ಟೆ ಲಕ್ಷ್ಮೀ ದೇವಿಗೆ ಶಯನವೆಂದರೆ ಭಗವಂತನಿಂದ ಬೇರೆಡೆಯಲ್ಲಿ ಅನಾಸ್ಥೆ, ಭಗವಂತನಲ್ಲಿ ಅತಿಶಯವಾದ ಆಸಕ್ತಿ. 'ವ್ಯೋಮ ಸಂಹಿತೆ'ಯಲ್ಲಿ ಇದನ್ನು ತಿಳಿಸಲಾಗಿದೆ—

**''ಸುಪ್ತಿಸ್ತು ಪ್ರಕೃತೇಃ ಪ್ರೋಕ್ತಾ ಅತೀವ ಭಗವದ್ರತಿಃ ।**
**ಅನಾಸ್ಥಾऽನ್ಯತ್ರ ಚ ಪ್ರೋಕ್ತಾ ವಿಷ್ಣೋಶ್ಚಕ್ಷುರ್ನಿಮೀಲನಮ್'' ॥**

ದೇವರು ಮಲಗುವನೆಂದರೆ ಅವನಿಗೂ ನಮ್ಮಂತೆ ಅಜ್ಞಾನದ ಸಂಬಂಧ ಇರುವುದೆಂಬ ಶಂಕೆಯನ್ನು ಮಾಡಬಾರದು. ಶ್ರೀಹರಿಯು ಸ್ವರೂಪ ಸುಖವನ್ನು ಅನುಭವಿಸಿಕೊಂಡಿರುವನು. ಅವನಿಗೆ ಅಜ್ಞಾನದ ಬಂಧ ಇಲ್ಲ.

ಅನಂತನಾದುದರಿಂದ ಅಂದರೆ ಕಾಲದ ಮಿತಿಯಿಲ್ಲದವನಾದುದರಿಂದ ಪ್ರಲಯಕಾಲದಲ್ಲಿಯೂ ಪರಮಾತ್ಮನು ಇರುವನು. ಮೊದಲು 'ಶ್ರೀಸಹಾಯಃ' ಲಕ್ಷ್ಮೀಸಹಿತನಾಗಿ ಎಂದು ಹೇಳಿ ಕೊನೆಗೆ 'ಏಕಃ' ಒಬ್ಬನೆ ಎಂದು ಹೇಳಿರುವುದು ಶ್ರೀಹರಿಯ ಅತ್ಯಂತ ಸಾಮೀಪ್ಯವೆ ಲಕ್ಷ್ಮೀದೇವಿಯ ಲಯ ಎಂದು ತಿಳಿಸಲು "ಹರೇರತ್ಯಂತಸಾಮೀಪ್ಯಂ ಲಯೋ ಲಕ್ಷ್ಮ್ಯಾಃ ಪ್ರಕೀರ್ತಿತಃ".

**ಅನಂತಶೀರ್ಷಾಸ್ಯಕರೋರುಪಾದಃ**
**ಸೋಽನಂತಮೂರ್ತಿಃ ಸ್ವಗುಣಾನನಂತಾನ್ ।**
**ಅನಂತಶಕ್ತಿಃ ಪರಿಪೂರ್ಣಭೋಗೋ**
**ಭುಂಜನ್ನಜಸ್ರಂ ನಿಜರೂಪ ಆಸ್ತೇ ॥ ೩೨ ॥**

**ಅರ್ಥ :- ಅನಂತಶೀರ್ಷಾಸ್ಯಕರೋರುಪಾದಃ** ಅಪರಿಮಿತಗಳಾದ ಶಿರಸ್ಸುಗಳು ಮುಖಗಳು, ಉತ್ಕೃಷ್ಟಗಳಾದ ಪಾದಗಳು ಇವುಗಳುಳ್ಳ, **ಅನಂತ ಮೂರ್ತಿಃ** ಅನಂತ ಅವತಾರಗಳುಳ್ಳ, ನಾಶರಹಿತವಾದ ಆಕಾರವುಳ್ಳ, **ಅನಂತ ಶಕ್ತಿಃ** ಅಪರಿಮಿತವಾದ ಸಾಮರ್ಥ್ಯವುಳ್ಳ, **ಪರಿಪೂರ್ಣಭೋಗಃ** ಪರಿಪೂರ್ಣ ಭೋಗಗಳುಳ್ಳ, **ಸಃ** ಆ ನಾರಾಯಣನು, **ಅನಂತಾನ್** ಅಪರಿಮಿತಗಳಾದ, **ಸ್ವಗುಣಾನ್** ತನ್ನ ಸ್ವರೂಪಭೂತವಾದ ಜ್ಞಾನಾನಂದಾದಿಗುಣಗಳನ್ನು **ಭುಂಜನ್** ಅನುಭವಿಸುವವನಾಗಿ, **ಅಜಸ್ರಂ** ಯಾವಾಗಲೂ, **ನಿಜರೂಪಃ** ತನ್ನ ಸ್ವರೂಪದಿಂದಲೇ, **ಆಸ್ತೇ** ಇರುವನು.

**ತಾತ್ಪರ್ಯ :-** ಯಾರೂ ಇಲ್ಲದಿರುವುದರಿಂದ ಪ್ರಲಯದಲ್ಲಿ ಮಾತ್ರ ಪರಮಾತ್ಮನು ಪೂರ್ಣಾನಂದವನ್ನು ಅನುಭವಿಸಿಕೊಂಡಿರುವನೆಂದೇನೂ ಅಲ್ಲ. ಯಾವಾಗಲೂ ಅನಂತ ಅವಯವಗಳು, ಅವತಾರಗಳು ಇರುವ ಶ್ರೀಹರಿ ಅಪ್ರತಿಹತವಾದ ಸಾಮರ್ಥ್ಯದಿಂದ ಕೂಡಿದವನಾಗಿ ಯಾವಾಗಲೂ ತನ್ನ ಅನಂತಗುಣಗಳನ್ನು ಅನುಭವಿಸುತ್ತ ಪೂರ್ಣಾನಂದನಾಗಿ ಇರುವನು.

**ಏವಂ ಪುನಃ ಸೃಜತೇ ಸರ್ವಮೇತದ್**
**ಅನಾದ್ಯನಂತೋ ಹಿ ಜಗತ್ಪ್ರವಾಹಃ ।**
**ನಿತ್ಯಾಶ್ಚ ಜೀವಾಃ ಪ್ರಕೃತಿಶ್ಚ ನಿತ್ಯಾ**
**ಕಾಲಶ್ಚ ನಿತ್ಯಃ ಕಿಮು ದೇವದೇವಃ ॥ ೩೩ ॥**

ಪ್ರಲಯಕಾಲದಲ್ಲಿ ಎಲ್ಲವೂ ಲಯ ಹೊಂದಿರುವುದರಿಂದ ಪುನಃ ಸೃಷ್ಟಿ ಇದೆಯೇ ಎಂಬ ಸಂಶಯವನ್ನು ಇಲ್ಲಿ ಪರಿಹರಿಸಲಾಗಿದೆ. ಈ ಜಗತ್ಪ್ರವಾಹ ಅನಾದಿ ಮತ್ತು ಅನಂತ. ಆದುದರಿಂದ ಸೃಷ್ಟಿ ಲಯಗಳೂ ಆಗುತ್ತಲೆ ಇರುತ್ತವೆ.

**ಅರ್ಥ** :- ಏವಂ ಹಿಂದಿನಂತೆ ಭಗವಂತನು, **ಏತತ್ ಸರ್ವಂ** ಈ ಎಲ್ಲ ಪ್ರಪಂಚವನ್ನು, **ಸೃಜತೇ** ಸೃಷ್ಟಿ ಮಾಡುತ್ತಾನೆ, **ಹಿ** ಯಾವ ಕಾರಣದಿಂದ, **ಜಗತ್ಪ್ರವಾಹಃ** ಜಗತ್ತಿನ ಪ್ರವಾಹವು, **ಅನಾದ್ಯನಂತಃ** ಆದಿ, ಅಂತ್ಯಗಳಿಲ್ಲ ದಿರುವುದು, **ಜೀವಾಃ** ಜೀವರು, **ನಿತ್ಯಾಃ** ಉತ್ಪತ್ತಿ, ನಾಶರಹಿತರು, **ಪ್ರಕೃತಿಃ ಚ** ಪ್ರಕೃತಿಯೂ ಕೂಡ, **ನಿತ್ಯಾ** ನಿತ್ಯವು, **ಕಾಲಶ್ಚ** ಕಾಲವೂ ಕೂಡ, **ನಿತ್ಯಃ** ನಿತ್ಯವು, **ದೇವದೇವಃ** ದೇವತೆಗಳಿಗೂ ದೇವನಾದ ಶ್ರೀಹರಿಯು, **ನಿತ್ಯಃ ಇತಿ ಕಿಮು** ನಿತ್ಯನೆಂದು ಇನ್ನೇನು ಹೇಳಬೇಕು?

**ತಾತ್ಪರ್ಯ** :- ಉಪಾದಾನ ಕಾರಣವಾದ ಪ್ರಕೃತಿ, ನಿಮಿತ್ತ ಕಾರಣನಾದ ಶ್ರೀಹರಿ, ದೇಹಯೋಗವಿಯೋಗರೂಪ ಉತ್ಪತ್ತಿ, ಲಯಗಳುಳ್ಳ ಜೀವ ಎಲ್ಲರೂ ನಿತ್ಯ. ಕಾಲವೂ ನಿತ್ಯ. ಜಗತ್ಪ್ರವಾಹವು ಅನಾದಿ ಅನಂತವೂ ಆಗಿರುವುದರಿಂದ ಸೃಷ್ಟಿ ಲಯಗಳು ಅವ್ಯಾಹತವಾಗಿ ನಡೆದೇ ಇರುತ್ತವೆ.

**ಯಥಾ ಸಮುದ್ರಾತ್ಸರಿತಃ ಪ್ರಜಾತಾಃ**
**ಪುನಸ್ತಮೇವ ಪ್ರವಿಶಂತಿ ಶಶ್ವತ್ ।**
**ಏವಂ ಹರೇರ್ನಿತ್ಯಜಗತ್ಪ್ರವಾಹಃ**
**ತಮೇವ ಚಾಸೌ ಪ್ರವಿಶತ್ಯಜಸ್ರಮ್ ॥ ೩೪ ॥**

**ಅರ್ಥ** :- **ಯಥಾ** ಹೇಗೆ, **ಸಮುದ್ರಾತ್** ಸಾಗರದ ದೆಸೆಯಿಂದ, **ಪ್ರಜಾತಾಃ** ಹುಟ್ಟಿದವುಗಳಾದ, ಸರಿತಃ ನದಿಗಳು, **ಪುನಃ** ಮತ್ತೆ, **ತಮೇವ** ಆ ಸಮುದ್ರವನ್ನೇ, **ಶಶ್ವತ್** ಯಾವಾಗಲೂ, **ಪ್ರವಿಶಂತಿ** ಪ್ರವೇಶಮಾಡುತ್ತವೆಯೋ, **ಏವಂ** ಇದೇ ರೀತಿಯಾಗಿ, **ಹರೇಃ** ಶ್ರೀಹರಿಯ ದೆಸೆಯಿಂದ ಹುಟ್ಟಿದ, **ಅಸೌ** ಈ, **ನಿತ್ಯಜಗತ್ಪ್ರವಾಹಃ** ನಿತ್ಯವಾದ ಜಗತ್ತಿನ ಪ್ರವಾಹವು, **ಚ** ಮತ್ತೆ, **ತಮೇವ** ಆ ಹರಿಯನ್ನೇ, **ಅಜಸ್ರಮ್** ಯಾವಾಗಲೂ, **ಪ್ರವಿಶತಿ** ಪ್ರವೇಶಿಸುತ್ತದೆ.

ಸಮುದ್ರದಿಂದ ಉತ್ಪನ್ನಗಳಾದ ನದಿಗಳು ಪುನಃ ಸಮುದ್ರವನ್ನೇ ಸೇರುವಂತೆ ಶ್ರೀಹರಿಯಿಂದ ಸೃಷ್ಟಿಗೊಂಡ ನಿತ್ಯವಾದ ಜಗತ್ಪ್ರವಾಹವು ಪುನಃ ಶ್ರೀಹರಿಯನ್ನೇ ಸೇರುತ್ತದೆ.

ಸೃಷ್ಟಿಪ್ರಲಯಗಳ ಜ್ಞಾನದ ಫಲವನ್ನು ಹೇಳುತ್ತಾರೆ -

**ಏವಂ ವಿದುರ್ಯೇ ಪರಮಾಮನಂತಾಮ್**
**ಅಜಸ್ಯ ಶಕ್ತಿಂ ಪುರುಷೋತ್ತಮಸ್ಯ ।**
**ತಸ್ಯ ಪ್ರಸಾದಾದಥ ದಗ್ಧದೋಷಾಃ**
**ತಮಾಪ್ನುವಂತ್ಯಾಶು ಪರಂ ಸುರೇಶಮ್ ॥ ೩೫ ॥**

**ಅರ್ಥ** :- **ಏವಂ** ಈ ರೀತಿಯಾಗಿ, **ಅಜಸ್ಯ** ಜನ್ಮರಹಿತನಾದ, **ಪುರುಷೋತ್ತಮಸ್ಯ** ಕ್ಷರಾಕ್ಷರಪುರುಷರಿಗಿಂತ ಉತ್ತಮನಾದ ಪರಮಾತ್ಮನ, **ಅನಂತಾಮ್** ನಾಶವಿಲ್ಲದ, **ಪರಮಾಮ್** ಶ್ರೇಷ್ಠವಾದ, **ಶಕ್ತಿಂ** ಸೃಷ್ಟಿಪ್ರಲಯ ಕರ್ತೃತ್ವ ಸಾಮರ್ಥ್ಯವನ್ನು **ಯೇ** ಯಾರು, **ವಿದುಃ** ತಿಳಿಯುವರೋ, **ತೇ** ಅವರು, **ಅಥ** ವೈರಾಗ್ಯ, ಭಕ್ತಿ, ಅಪರೋಕ್ಷಜ್ಞಾನಗಳ ಅನಂತರದಲ್ಲಿ, **ತಸ್ಯ** ಆ ಹರಿಯ, **ಪ್ರಸಾದಾತ್** ಅನುಗ್ರಹದಿಂದ, **ದಗ್ಧದೋಷಾಃ** ಸುಡಲ್ಪಟ್ಟ ದೋಷವುಳ್ಳವರಾಗಿ, **ಸುರೇಶಂ** ದೇವತೆಗಳಿಗೆಲ್ಲ ಸ್ವಾಮಿಯಾದ, **ಪರಂ** ಸರ್ವೋತ್ತಮನಾದ, **ತಂ** ಆ ಹರಿಯನ್ನು, **ಆಶು** ಕೂಡಲೆ, **ಆಪ್ನುವಂತಿ** ಹೊಂದುತ್ತಾರೆ.

**ತಾತ್ಪರ್ಯ** :- ಹುಟ್ಟು ಸಾವುಗಳಿಂದ ಪುರುಷೋತ್ತಮನ ಅಮಿತವಾದ ಅಪ್ರತಿಹತವಾದ ಜಗತ್ಸೃಷ್ಟಿಲಯ ಕರ್ತೃತ್ವ ಶಕ್ತಿಯನ್ನು ಬಲ್ಲವರು ವೈರಾಗ್ಯ, ಭಕ್ತಿ, ಅಪರೋಕ್ಷ ಜ್ಞಾನಗಳನ್ನು ಪಡೆದು ಅನಂತರದಲ್ಲಿ ತಮ್ಮೆಲ್ಲ ದೋಷಗಳನ್ನು ಕಳೆದುಕೊಂಡು ಆ ಭಗವಂತನನ್ನೇ ಸೇರುತ್ತಾರೆ. ಮೊದಲು ದೇವತೆಗಳನ್ನು ಹೊಂದಿ ಬಳಿಕ ಭಗವಂತನನ್ನು ಹೊಂದುವರೆಂದು ತಿಳಿಸಲು 'ಸುರೇಶಂ' ಎಂದು ವಿಶೇಷಣ ಕೊಡಲಾಗಿದೆ (ಜನಾರ್ದನ ಭಟ್ಟೀಯ.)

**ದೇವಾನಿಮಾನ್ ಮುಕ್ತಸಮಸ್ತದೋಷಾನ್**
**ಸ್ವಸನ್ನಿಧಾನೇ ವಿನಿವೇಶ್ಯ ದೇವಃ ।**
**ಪುನಸ್ತದನ್ಯಾನಧಿಕಾರಯೋಗ್ಯಾಂ-**
**ಸ್ತತ್ತದ್ಗಣಾನೇವ ಪದೇ ನಿಯುಂಕ್ತೇ ॥ ೩೬ ॥**

**ಅರ್ಥ** :- **ದೇವಃ** ಕ್ರೀಡಾದಿಗುಣ ವಿಶಿಷ್ಟನಾದ ಭಗವಂತನು, **ಮುಕ್ತ ಸಮಸ್ತ ದೋಷಾನ್** ಎಲ್ಲ ದೋಷಗಳನ್ನು ಕಳೆದುಕೊಂಡ, **ಇಮಾನ್ ದೇವಾನ್** ಈ ಮುಕ್ತ ದೇವತೆಗಳನ್ನು, **ಸ್ವಸನ್ನಿಧಾನೇ** ತನ್ನ ಸಮೀಪದಲ್ಲಿ,

ವಿನಿವೇಶ್ಯ ಸೇರಿಸಿಕೊಂಡು, **ಪುನಃ** ಮತ್ತೆ, **ತದನ್ಯಾನ್** ಮುಕ್ತರಿಗಿಂತ ಬೇರೆಯಾದ, **ಅಧಿಕಾರಯೋಗ್ಯಾನ್** ಆಯಾ ಅಧಿಕಾರಕ್ಕೆ ಯೋಗ್ಯರಾದ, **ತತ್ತದ್ಗಣಾನ್** ಏವ ಋಜು ಮೊದಲಾದಗುಣದವರನ್ನೇ, **ಪದೇ** ಬ್ರಹ್ಮಾದಿ ಪದವಿಗಳಲ್ಲಿ, **ನಿಯುಂಕ್ತೇ** ನಿಯೋಜಿಸುತ್ತಾನೆ.

**ತಾತ್ಪರ್ಯ :-** ದೇವತೆಗಳು ಮುಕ್ತಿಪಡೆದ ಬಳಿಕ ತೆರವಾದ ಆ ದೇವತೆಗಳ ಪದವಿಗಳನ್ನು ಯಾರು ಹೊಂದುತ್ತಾರೆಂಬ ಆಕಾಂಕ್ಷೆಯನ್ನು ಇಲ್ಲಿ ಪರಿಹರಿಸುತ್ತಾರೆ — ಭಗವಂತನ ಅಪರೋಕ್ಷ ಜ್ಞಾನದಿಂದ ಎಲ್ಲ ಪಾಪಗಳನ್ನು ಕಳೆದುಕೊಂಡ ಮುಕ್ತರನ್ನು ಭಗವಂತನು ತನ್ನ ಸಮೀಪದಲ್ಲಿರಿಸಿಕೊಳ್ಳುವನು. ತರುವಾಯ ಬ್ರಹ್ಮಶೇಷಾದಿಪದವಿಗೆ ಯೋಗ್ಯರಾದ ಆ ಆ ಋಜು ಮೊದಲಾದ ಗಣದವರನ್ನೇ ಆ ಆ ಪದವಿಗೆ ನೇಮಿಸುತ್ತಾನೆ.

**ಪುನಶ್ಚ ಮಾರೀಚತ ಏವ ದೇವಾ**
**ಜಾತಾ ಅದಿತ್ಯಾಮಸುರಾಶ್ಚ ದಿತ್ಯಾಮ್ ।**
**ಗಾವೋ ಮೃಗಾಃ ಪಕ್ಷ್ಯುರಗಾದಿಸತ್ತ್ವಾ**
**ದಾಕ್ಷಾಯಣೀಷ್ವೇವ ಸಮಸ್ತಶೋಽಪಿ ॥ ೩೭ ॥**

**ಅರ್ಥ :- ಪುನಃ ಚ** ಮತ್ತೂ ಕೂಡ, **ಮಾರೀಚತಃ ಏವ** ಮರೀಚಿ ಋಷಿಗಳ ಮಗನಾದ ಕಶ್ಯಪರಿಂದಲೆ, **ಅದಿತ್ಯಾಮ್** ಅದಿತಿ ದೇವಿಯಲ್ಲಿ, **ದೇವಾಃ** ದೇವತೆಗಳು, **ಜಾತಾಃ** ಹುಟ್ಟಿದರು, **ದಿತ್ಯಾಂ** ದಿತಿದೇವಿಯಲ್ಲಿ, **ಅಸುರಾಶ್ಚ** ದೈತ್ಯರೂ ಕೂಡ, **ಜಾತಾಃ** ಹುಟ್ಟಿದರು, **ದಾಕ್ಷಾಯಣೀಷು ಏವ** ದಕ್ಷಪ್ರಜಾಪತಿಯ ಮಕ್ಕಳಾದ ವಿನತಾದಿಗಳಲ್ಲಿಯೇ, **ಸಮಸ್ತಶಃ** ಎಲ್ಲ, **ಗಾವಃ** ದನಗಳು, **ಮೃಗಾಃ** ಮೃಗಗಳು, **ಪಕ್ಷ್ಯುರಗಾದಿಸತ್ತ್ವಾಃ** ಪಕ್ಷಗಳು, ಸರ್ಪಗಳೇ ಮೊದಲಾಗಿ ಉಳ್ಳ ಪ್ರಾಣಿಗಳು, **ಜಾತಾಃ** ಹುಟ್ಟಿದವು.

**ತಾತ್ಪರ್ಯ :-** ಇದುವರೆಗೆ ಹೇಳಿದ ಸೃಷ್ಟಿ 'ಸರ್ಗ'. ಮುಂದೆ, ಬ್ರಹ್ಮದೇವರ ಮಕ್ಕಳಾದ ಮರೀಚಿಋಷಿಗಳ ಪುತ್ರರಾದ ಕಶ್ಯಪರಿಂದ ಬೆಳೆದ ಸೃಷ್ಟಿ 'ಅನುಸರ್ಗ', ದಕ್ಷಪ್ರಜಾಪತಿಯ ಮಕ್ಕಳಾದ ಅದಿತಿ, ದಿತಿ, ವಿನತಾದಿಗಳಲ್ಲಿ ದೇವತೆ, ಅಸುರ, ಗೋ, ಮೃಗ, ಪಕ್ಷಿ ಮೊದಲಾದವುಗಳು ಹುಟ್ಟಿದವು.

ಈಗ ಶ್ರೀಹರಿಯ ಅವತಾರ ಕಥೆಯನ್ನು ಹೇಳುತ್ತಾರೆ —

**ತತಃ ಸ ಮಗ್ನಾಮಲಯೋ ಲಯೋದಧೌ**
**ಮಹೀಂ ವಿಲೋಕ್ಯಾऽऽಶು ಹರಿರ್ವರಾಹಃ ।**
**ಭೂತ್ವಾ ವಿರಿಂಚಾರ್ಥಮಿಮಾಂ ಸಶೈಲಾಮ್**
**ಉದ್ಧೃತ್ಯ ವಾರಾಮುಪರಿ ನ್ಯಧಾತ್ ಸ್ಥಿರಮ್ ॥ ೩೮ ॥**

**ಅರ್ಥ** :- **ತತಃ** ಅನಂತರ, **ಅಲಯಃ** ಪ್ರಲಯ (ನಾಶ) ರಹಿತನಾದ, **ಸಃ** ಆ, **ಹರಿಃ** ಶ್ರೀಹರಿಯು, **ವರಾಹೋ ಭೂತ್ವಾ** ಆದಿವರಾಹನಾಗಿ, **ಲಯೋದಧೌ** ಪ್ರಲಯಸಮುದ್ರದಲ್ಲಿ, **ಮಗ್ನಾಂ** ತಾನಾಗಿಯೇ ಮುಳುಗಿದ, **ಮಹೀಂ** ಭೂಮಿಯನ್ನು, **ವಿಲೋಕ್ಯ** ನೋಡಿ, **ಆಶು** ಬೇಗನೆ, **ವಿರಿಂಚಾರ್ಥಂ** ಬ್ರಹ್ಮನಿಗೋಸ್ಕರ, **ಸಶೈಲಾಮ್** ಪರ್ವತಗಳಿಂದ ಕೂಡಿದ, **ಇಮಾಂ** ಈ ಭೂಮಿಯನ್ನು **ಉದ್ಧೃತ್ಯ** ಮೇಲಕ್ಕೆತ್ತಿ, **ವಾರಾಂ** ನೀರುಗಳ, **ಉಪರಿ** ಮೇಲೆ (ಘನೋದಕ ಸಮುದ್ರದ ಮೇಲೆ), **ಸ್ಥಿರಂ** ದೃಢವಾಗಿರುವಂತೆ, **ನ್ಯಧಾತ್** ಇಟ್ಟನು.

**ವಿಶೇಷ ವಿಷಯ** :- ಮತ್ಸ್ಯಾದಿ ದಶಾವತಾರಗಳಲ್ಲಿ ಮೂರನೆಯದಾದ ವರಾಹಾವತಾರವನ್ನು ಮೊದಲು ವರ್ಣಿಸಿ ಮತ್ಸ್ಯಾವತಾರವನ್ನು ಅನಂತರ ವರ್ಣಿಸಿರುವರು. ಈ ಕ್ರಮಭಂಗ ಏಕೆ? ಎಂಬ ಪ್ರಶ್ನೆಗೆ ಅವಕಾಶವಿಲ್ಲ. ಇಲ್ಲಿ ವರ್ಣಿಸಿರುವ ಮೊದಲ ವರಾಹಾವತಾರ ದಶಾವತಾರಕ್ಕೂ ಮುಂಚೆ ಆದದ್ದು. ಬ್ರಹ್ಮದೇವರ ಉಪಕಾರಕ್ಕೋಸ್ಕರ ಭಗವಂತನು ಶ್ವೇತವರಾಹನಾಗಿ ಅವತರಿಸಿ ಪರ್ವತದಿಂದ ಕೂಡಿದ ಪ್ರಲಯ ಜಲದಲ್ಲಿ ಮುಳುಗಿದ ಭೂಮಿಯನ್ನು ತನ್ನ ದಂಷ್ಟ್ರಗಳಿಂದ ಮೇಲಕ್ಕೆ ಎತ್ತಿ ನೀರಮೇಲೆ ಸ್ಥಿರವಾಗಿ ಇಟ್ಟನು. ಲಕ್ಷಯೋಜನ ಘನೀಭೂತವಾದ ಭೂಮಿಯ ಕೆಳಗೆ ಬ್ರಹ್ಮಾಂಡ ಖರ್ಪರದ ಉತ್ತರದಿಂದ ದಕ್ಷಿಣದವರೆಗೆ ಪೂರ್ವರಿಂದ ಪಶ್ಚಿಮದವರೆಗೆ ಐವತ್ತು ಕೋಟಿ ವಿಸ್ತಾರವುಳ್ಳ ಪ್ರದೇಶದಲ್ಲಿ ಇಪ್ಪತ್ತನಾಲ್ಕು ಕೋಟಿ ತೊಂಬತ್ತೊಂಬತ್ತು ಲಕ್ಷ ಯೋಜನ ಆಳವಾದ 'ಘನೋದಕ'ವೆಂಬ ಮಹಾಸಮುದ್ರವಿದೆ. ಆ ಸಮುದ್ರದಲ್ಲಿ ಸುತ್ತಲೂ ಏಳು ಕೋಟಿಯೋಜನದ ವಿಸ್ತಾರವುಳ್ಳ ಭೂಮಿಯು ಮುಳುಗಿತ್ತು. ಹೀಗೆ ಅಲ್ಪಪರಿಣಾಮವುಳ್ಳಭೂಮಿಯು ಮಹಾಪರಿಮಾಣವುಳ್ಳ ಘನೋದಕದಲ್ಲಿ ಮುಳುಗಿದ್ದು ಆಶ್ಚರ್ಯವೇನಲ್ಲ.

ಮತ್ಸ್ಯಾವತಾರನಾದ ಶ್ರೀಹರಿ ಆರು, ಏಳನೆ ಮನ್ವಂತರಗಳ ಅವಾಂತರ-ಪ್ರಲಯದ ಉದಕದಲ್ಲಿ ನಾನಾವಿಧಗಳಾದ ಓಷಧಿವನಸ್ಪತಿಗಳ ಬೀಜಸಂಗ್ರಹಕ್ಕಾಗಿ ನೌಕೆಯ ರೂಪವನ್ನು ಹೊಂದಿದ್ದ ಭೂಮಿಯನ್ನು ಶೇಷ ಎಂಬ ಹಗ್ಗದಿಂದ ತನ್ನ ಕೊಂಬಿನ ತುದಿಯಲ್ಲಿ ಕಟ್ಟಿಕೊಂಡು ಸಂಚಾರಮಾಡುವನು. ಆ ಮತ್ಸ್ಯಾವತಾರಕ್ಕಿಂತಲೂ ಮೊದಲ ಅವತಾರ ಈ ಶ್ವೇತವರಾಹ.

**ಅಥಾಬ್ಜನಾಭಪ್ರತಿಹಾರಪಾಲೌ**
**ಶಾಪಾತ್ ತ್ರಿಶೋ ಭೂಮಿತಲೇऽಭಿಜಾತೌ ।**
**ದಿತ್ಯಾಂ ಹಿರಣ್ಯಾವಥ ರಾಕ್ಷಸೌ ಚ**
**ಪೈತೃಷ್ವಸೇಯೌ ಚ ಹರೇಃ ಪರಸ್ತಾತ್ ॥ ೩೯ ॥**

**ಅರ್ಥ** :- **ಅಥ** ಅನಂತರ, **ಅಬ್ಜನಾಭಪ್ರತಿಹಾರಪಾಲೌ** ಪದ್ಮನಾಭನ ದ್ವಾರಪಾಲಕರಾದ ಜಯವಿಜಯರು, **ಶಾಪಾತ್** ಸನಕಾದಿಗಳ ಶಾಪದಿಂದ, **ತ್ರಿಶಃ** ಮೂರು ಬಾರಿ, **ದಿತ್ಯಾಂ** ದಿತಿದೇವಿಯಲ್ಲಿ, **ಹಿರಣ್ಯೌ** ಹಿರಣ್ಯಾಕ್ಷ ಹಿರಣ್ಯಕಶಿಪುಗಳಾಗಿ, **ಅಥ** ಅನಂತರ, **ರಾಕ್ಷಸೌ ಚ** ರಾವಣ, ಕುಂಭಕರ್ಣರೆಂಬ ರಾಕ್ಷಸರಾಗಿಯೂ, **ಪರಸ್ತಾತ್** ಅನಂತರ, **ಹರೇಃ** ಶ್ರೀಕೃಷ್ಣನ, **ಪೈತೃಷ್ವಸೇಯೌ ಚ** ತಂದೆಯ ತಂಗಿಯ ಮಕ್ಕಳಾದ ಶಿಶುಪಾಲ ದಂತವಕ್ರರಾಗಿಯೂ, **ಭೂಮಿತಲೇ** ಭೂತಲದಲ್ಲಿ, **ಅಭಿಜಾತೌ** ಹುಟ್ಟಿದರು.

**ತಾತ್ಪರ್ಯ** :- ಶ್ವೇತವರಾಹಾವತಾರದ ಕಥೆಯನ್ನು ನಿರೂಪಣೆಮಾಡಿದ ಆಚಾರ್ಯರು ಅದೇ ಸಂದರ್ಭದಲ್ಲಿ ದಶಾವತಾರದಲ್ಲಿ ಸೇರಿರುವ ನೀಲವರಾಹಾವತಾರದ ಕಥೆಯನ್ನು ಹೇಳುತ್ತಿದ್ದಾರೆ.

ಆ ಭಗವಂತನ ದ್ವಾರಪಾಲಕರಾದ ಜಯವಿಜಯರು ಸನಕಾದಿಗಳ ಶಾಪದಿಂದ ದಿತಿದೇವಿಯ ಮಕ್ಕಳಾಗಿ ಹಿರಣ್ಯಾಕ್ಷ, ಹಿರಣ್ಯಕಶಿಪುಗಳೆಂದು ಒಮ್ಮೆ ಹುಟ್ಟಿದರು. ಇನ್ನೊಮ್ಮೆ ವಿಶ್ರವಸ್ ಎಂಬುವನ ಮಗನಾಗಿ ರಾವಣ ಕುಂಭಕರ್ಣರೆಂದು ಕೇವಲ ರಾಕ್ಷಸರಾಗಿ ದ್ವಿತೀಯಪುತ್ರರಾಗದೆ ದೈತ್ಯರೆನಿಸದೆ ಹುಟ್ಟಿದರು. ಮತ್ತೊಮ್ಮೆ ಶ್ರೀಕೃಷ್ಣನ ತಂದೆ ತಂಗಿಯ ಮಕ್ಕಳಾಗಿ ಶಿಶುಪಾಲ ದಂತವಕ್ತ್ರರಾಗಿ ಹುಟ್ಟಿದರು.

**ವಿಶೇಷ ವಿಷಯ** :- 'ಪ್ರತಿಹಾರ' ಎಂದರೆ ದ್ವಾರ ಎಂದರ್ಥ. ಬಾಗಿಲು ಹೋಗುವ, ಬರುವವರ ಮಧ್ಯೆ ಮುಚ್ಚಿಕೊಳ್ಳುತ್ತದೆ, ತೆರೆದುಕೊಳ್ಳುತ್ತದೆ ಆದುದರಿಂದ ಆದಕ್ಕೆ 'ಪ್ರತಿಹಾರ' ಎಂದು ಹೆಸರು. (ಗಚ್ಛತಃ ಆಗಚ್ಛತಶ್ಚ 'ಪ್ರತಿ' ಅಂತರಾ ಆಹರತಿ, ಹರತಿ ಚ ಇತಿ ಪ್ರತಿಹಾರೋ ದ್ವಾರಮ್ ಶ್ರೀವಾದಿರಾಜೀಯಮ್)

**ಹತೋ ಹಿರಣ್ಯಾಕ್ಷ ಉದಾರವಿಕ್ರಮೋ**
**ದಿತೇಃ ಸುತೋ ಯೋಽಪರಜಃ ಸುರಾರ್ಥೇ ।**
**ಧಾತ್ರಾಽರ್ಥಿತೇನೈವ ವರಾಹರೂಪಿಣಾ**
**ಧರೋದ್ಧೃತೌ ಪೂರ್ವಹತೋಽಬ್ಜಜೋದ್ಭವಃ ॥ ೪೦ ॥**

**ಅರ್ಥ** :- **ಉದಾರವಿಕ್ರಮಃ** ಉತ್ಕೃಷ್ಟಪರಾಕ್ರಮವುಳ್ಳ, **ದಿತೇಃ ಸುತಃ** ಕಶ್ಯಪರಿಂದ ದಿತಿಯಲ್ಲಿ ಹುಟ್ಟಿದ ಮಗನಾದ, **ಅವರಜಃ** ತಮ್ಮನಾದ, **ಯಃ** ಯಾವ, **ಹಿರಣ್ಯಾಕ್ಷಃ** ಹಿರಣ್ಯಾಕ್ಷನೋ, **ಸಃ** ಅವನು, ಸುರಾರ್ಥೇ ದೇವತೆಗಳಿಗಾಗಿ, **ಧಾತ್ರಾ** ಬ್ರಹ್ಮದೇವರಿಂದ, **ಅರ್ಥಿತೇನ** ಪ್ರಾರ್ಥಿಸಲ್ಪಟ್ಟ ವರಾಹ**ರೂಪಿಣಾ** ಏವ ದಶಾವತಾರದಲ್ಲಿ ಸೇರಿದ ವರಾಹಾವತಾರಿಯಾದ ಶ್ರೀಹರಿಯಿಂದಲೇ, **ಧರೋದ್ಧೃತೌ** ಬಲಾತ್ಕಾರದಿಂದ ನೀರಿನಲ್ಲಿ ಮುಳುಗಿಸಿದ ಭೂಮಿಯನ್ನು ಎತ್ತುವ ಸಮಯದಲ್ಲಿ, **ಹತಃ** ಕೊಲ್ಲಲ್ಪಟ್ಟನು. **ಧರೋದ್ಧೃತೌ** ಭಾರದಿಂದಾಗಿ ತಾನಾಗಿಯೇ ಮುಳುಗಿದ ಭೂಮಿಯನ್ನು ಎತ್ತುವಾಗ ಮಾರ್ಗದಲ್ಲಿ ಅಡ್ಡಿ ಪಡಿಸಿದಾಗ, **ಪೂರ್ವಹತಃ** ಮೊದಲು ಶ್ವೇತವರಾಹನಿಂದ ಕೊಲ್ಲಲ್ಪಟ್ಟವನು, **ಅಬ್ಜಜೋದ್ಭವಃ** ಚತುರ್ಮುಖಬ್ರಹ್ಮನ ಪುತ್ರನು.

**ತಾತ್ಪರ್ಯ** :- ಹಿಂದೆ ಭಾರದಿಂದ ತಾನಾಗಿ ಮುಳುಗಿದ ಭೂಮಿಯನ್ನು ಭಗವಂತನು ಶ್ವೇತವರಾಹನಾಗಿ ಎತ್ತಿದನು. ಆಗ ದಾರಿಯಲ್ಲಿ ಭೂಮಿಯನ್ನು ಹೊತ್ತ ಭಗವಂತನನ್ನು ತಡೆಯಲು ಹಿರಣ್ಯಾಕ್ಷನು ಬಂದನು. ಅವನನ್ನು ಶ್ವೇತವರಾಹನು ತನ್ನ ದಂಷ್ಟ್ರದಿಂದ ಹೊಡೆದುಕೊಂದನು. ಆ ಹಿರಣ್ಯಾಕ್ಷನು ಬ್ರಹ್ಮದೇವರ ಪುತ್ರ. ಅದೇ ಹಿರಣ್ಯಾಕ್ಷನು ದ್ವಾರಪಾಲಕರಲ್ಲಿ ಆವಿಷ್ಟನಾಗಿ ಭೂಮಿಯನ್ನು ಮುಳುಗಿಸಿದ. ಆಗ ಭಗವಂತನು ಮತ್ತೊಮ್ಮೆ ದಶಾವತಾರದಲ್ಲಿ ಸೇರಿದ ನೀಲವರಾಹರೂಪದಿಂದ ಆ ಹಿರಣ್ಯಾಕ್ಷನನ್ನು ಕಿವಿಯ ಬದಿಯಲ್ಲಿ ಕೈಯಿಂದ ಹೊಡೆದುಕೊಂದನು. ಈ ಹಿರಣ್ಯಾಕ್ಷನು ದ್ವಿತೀಯಪುತ್ರ.

ಕೊಂದವರಿಬ್ಬರೂ ವರಾಹರೇ. ಸತ್ತವರಿಬ್ಬರ ಹೆಸರೂ ಹಿರಣ್ಯಾಕ್ಷ ಎಂದೆ ಅದರಿಂದ ಎರಡು ಕಥೆಯನ್ನು ಒಟ್ಟಿಗೆ ಇಲ್ಲಿ ಆಚಾರ್ಯರು ತಿಳಿಸಿದ್ದಾರೆ. 'ಭಾಗವತ ತಾತ್ಪರ್ಯ'ದಲ್ಲಿ ಆಚಾರ್ಯರು ಈ ವಿಚಾರವನ್ನು ಸ್ಪಷ್ಟವಾಗಿ ಪ್ರಮಾಣದ ಮೂಲಕತಿಳಿಸಿದ್ದಾರೆ —

''ಬ್ರಹ್ಮಜಸ್ತು ಹಿರಣ್ಯಾಕ್ಷಃ ಪ್ರಥಮಂ ದಂಷ್ಟ್ರಯಾ ಹತಃ ।
ಸ ಏವ ಪಾರ್ಷದಾವಿಷ್ಣೋ ದ್ವಿತೀಯಃ ಕರ್ಣತಾಡನಾತ್ ॥
ಪೂರ್ವಂ ಲಯೋದಧೌ ಮಗ್ನಾಂ ದ್ವಿತೀಯಾಂ ತೇನ ಮಜ್ಜಿತಾಮ್ ।
ಭುವಮುದ್ಧರತ್ಯೆವಾಸೌ ಹರಿಣಾ ಕ್ರೋಡಮೂರ್ತಿನಾ'' ॥

ಅಥೋ ವಿಧಾತುರ್ಮುಖತೋ ವಿನಿಃಸೃತಾನ್
ವೇದಾನ್ ಹಯಾಸ್ಯೋ ಜಗೃಹೇಽಸುರೇಂದ್ರಃ ।
ನಿಹತ್ಯ ತಂ ಮತ್ಸ್ಯವಪುರ್ಜುಗೋಪ
ಮನುಂ ಮುನೀಂಸ್ತಾಂಶ್ಚ ದದೌ ವಿಧಾತುಃ ॥ ೪೧ ॥

**ಅರ್ಥ** :- **ಅಥೋ** ಅನಂತರ, **ಹಯಾಸ್ಯಃ** ಹಯಗ್ರೀವನೆಂಬ, **ಅಸುರೇಂದ್ರಃ** ಅಸುರ ಶ್ರೇಷ್ಠನು, **ವಿಧಾತುಃ** ಬ್ರಹ್ಮನ, **ಮುಖತಃ** ಬಾಯಿಯಿಂದ, **ವಿನಿಃಸೃತಾನ್** ಹೊರಡುವ, **ವೇದಾನ್** ದೇಹಧಾರಿಗಳಾದ ವೇದಾಭಿಮಾನಿ ಗಳನ್ನು **ಜಗೃಹೇ** ಸ್ವೀಕರಿಸಿದನು. **ಮತ್ಸ್ಯವಪುಃ** ಮತ್ಸ್ಯಾವತಾರಿಯಾದ ಶ್ರೀಹರಿಯು, **ತಂ** ಆ ಹಯಗ್ರೀವಾಸುರನನ್ನು **ನಿಹತ್ಯ** ಕೊಂದು, **ಮನುಂ** ವೈವಸ್ವತ ಮನುವನ್ನು **ಮುನೀನ್** ಸಪ್ತಋಷಿಗಳನ್ನು **ಜುಗೋಪ** ರಕ್ಷಿಸಿದನು. **ತಾನ್ ಚ** ಆ ವೇದಗಳನ್ನಾದರೂ, **ವಿಧಾತುಃ** ಬ್ರಹ್ಮನಿಗೆ, **ದದೌ** ಕೊಟ್ಟನು.

**ತಾತ್ಪರ್ಯ** :- ಬ್ರಹ್ಮದೇವರ ಮುಖದಿಂದ ಹೊರಹೊಮ್ಮಿದ ವೇದಗಳನ್ನು ಹಯಗ್ರೀವಾಸುರನು ಅಪಹರಿಸಿದನು. ಮತ್ಸ್ಯಾವತಾರವನ್ನು ಧರಿಸಿದ ಶ್ರೀಹರಿ ಆ ಹಯಗ್ರೀವಾಸುರನನ್ನು ಸಂಹರಿಸಿದನು. ವೈನಸ್ವತಮನುವನ್ನು ಸಪ್ತಋಷಿ ಗಳನ್ನು ರಕ್ಷಿಸಿದನು. ಆ ವೇದಗಳನ್ನು ಬ್ರಹ್ಮನಿಗೆ ಕೊಟ್ಟನು.

ಮನ್ವಂತರಪ್ರಲಯೇ ಮತ್ಸ್ಯರೂಪೋ
ವಿದ್ಯಾಮದಾನ್ಮನವೇ ದೇವದೇವಃ ।
ವೈವಸ್ವತಾಯೋತ್ತಮಸಂವಿದಾತ್ಮಾ
ವಿಷ್ಣೋಃ ಸ್ವರೂಪಪ್ರತಿಪತ್ತಿರೂಪಾಮ್ ॥ ೪೨ ॥

**ಅರ್ಥ :- ಮನ್ವಂತರಪ್ರಲಯೇ** ಮನ್ವಂತರ ಪ್ರಲಯದಲ್ಲಿ, **ದೇವದೇವಃ** ದೇವತೆಗಳಿಗೂ ದೇವನಾದ (ಸರ್ವೋತ್ತಮನಾದ), **ಉತ್ತಮಸಂವಿದಾತ್ಮಾ** ಸರ್ವೋತ್ಕೃಷ್ಟವಾದ ಜ್ಞಾನವೇ ಸ್ವರೂಪವಾಗಿ ಉಳ್ಳ, **ಮತ್ಸ್ಯರೂಪಃ** ಮತ್ಸ್ಯಾವತಾರಧಾರಿಯಾದ ಶ್ರೀಹರಿಯು, **ವೈವಸ್ವತಾಯ** 'ವಿವಸ್ವಾನ್' ಎಂಬ ಸೂರ್ಯನ ಮಗನಾದ, **ಮನವೇ** ಮನುವಿಗೋಸ್ಕರ, **ವಿಷ್ಣೋಃ** ಭಗವಂತನ, **ಸ್ವರೂಪಪ್ರತಿಪತ್ತಿರೂಪಾಮ್** ಸ್ವರೂಪದ ಯಥಾರ್ಥಜ್ಞಾನರೂಪವಾದ, **ವಿದ್ಯಾಂ** ಅಧ್ಯಾತ್ಮ ವಿದ್ಯೆಯನ್ನು, **ಅದಾತ್** ಕೊಟ್ಟನು.

ಮನ್ವಂತರ ಪ್ರಲಯದಲ್ಲಿ ನಷ್ಟವಾದ ಜ್ಞಾನವುಳ್ಳ ಸಜ್ಜನಸಾಧಕರಿಗೆ ಪುನಃ ಭಗವಂತನ ತತ್ವಜ್ಞಾನದ ಸಂಪಾದನೆ ಮಾಡಿಕೊಡಲು ವೈವಸ್ವತಮನುವಿಗೆ ಮತ್ಸ್ಯಾವತಾರಿಯಾದ ಶ್ರೀಹರಿಯು ತನ್ನ ಸ್ವರೂಪದ ಯಥಾರ್ಥಜ್ಞಾನ ರೂಪವಾದ ಅಧ್ಯಾತ್ಮವಿದ್ಯೆಯನ್ನು ಉಪದೇಶಿಸಿದನು. ॥ ೪೨ ॥

**ಅಥೋದಿತೇ ಜ್ಯೇಷ್ಠ ಸುತೇನ ಶಶ್ವತ್**
**ಪ್ರಪೀಡಿತಾ ಬ್ರಹ್ಮವರಾತ್ ಸುರೇಶಾಃ ।**
**ಹರಿಂ ವಿರಿಂಚೇನ ಸಹೋಪಜಗ್ಮುಃ**
**ದೌರಾತ್ಮ್ಯಮಸ್ಯಾಪಿ ಶಶಂಸುರಸ್ಮೈ ॥ ೪೩ ॥**

**ಅರ್ಥ :- ಅಥೋ** ಅನಂತರ, **ದಿತೇಃ** ದಿತಿದೇವಿಯ, **ಜ್ಯೇಷ್ಠಸುತೇನ** ಜ್ಯೇಷ್ಠ ಪುತ್ರನಾದ ಹಿರಣ್ಯಕಶಿಪುವಿನಿಂದ, **ಬ್ರಹ್ಮವರಾತ್** ಬ್ರಹ್ಮದೇವರ ವರದಿಂದ, **ಶಶ್ವತ್** ಯಾವಾಗಲೂ, **ಪ್ರಪೀಡಿತಾಃ** ಚೆನ್ನಾಗಿ ಪೀಡಿಸಲ್ಪಟ್ಟವರಾದ, **ಸುರೇಶಾಃ** ದೇವತಾ ಶ್ರೇಷ್ಠರು, **ವಿರಿಂಚೇನ ಸಹ** ಬ್ರಹ್ಮದೇವರಿಂದ ಕೂಡಿಕೊಂಡು, **ಹರಿಂ** ಶ್ರೀಹರಿಯನ್ನು, **ಉಪಜಗ್ಮುಃ** ಸಮೀಪಿಸಿದರು. **ಅಸ್ಯ** ಈ ಹಿರಣ್ಯಕಶಿಪುವಿನ, **ದೌರಾತ್ಮ್ಯಮಪಿ** ದುಷ್ಟತನವನ್ನು ಕೂಡ, **ಶಶಂಸುಃ** ಹೇಳಿದರು.

**ತಾತ್ಪರ್ಯ :-** ದಿತಿಯ ಜ್ಯೇಷ್ಠಸುತನಾದ ಹಿರಣ್ಯಕಶಿಪು ಬ್ರಹ್ಮದೇವರಿಂದ ವರವನ್ನು ಪಡೆದು ಬಲಿಷ್ಠನಾಗಿ, ಗರ್ವಿಷ್ಠನಾಗಿ ದೇವತೆಗಳಿಗೆ ತುಂಬ ಪೀಡೆಯನ್ನು ಕೊಟ್ಟನು. ಆ ಪೀಡೆಯನ್ನು ಸಹಿಸದೆ ದೇವತೆಗಳು ಬ್ರಹ್ಮದೇವರನ್ನು ಮುಂದೆ ಮಾಡಿಕೊಂಡು ಭಗವಂತನಲ್ಲಿ ಶರಣಾದರು. ಹಿರಣ್ಯಕಶಿಪುವಿನ ದುರುಳತನವನ್ನು ಶ್ರೀಹರಿಯಲ್ಲಿ ಆರುಹಿದರು.

**ವಿಶೇಷ ವಿಷಯ** :- ಮತ್ಸ್ಯಾವತಾರದ ಅನಂತರ ಕೂರ್ಮಾವತಾರದ ಕಥೆಯನ್ನು ಹೇಳುವುದನ್ನು ಬಿಟ್ಟು ನರಸಿಂಹಾವತಾರದ ಕಥೆಯನ್ನು ಇಲ್ಲಿಂದ ಹೇಳುತ್ತಿರುವರು. ಈ ಕ್ರಮಭಂಗಕ್ಕೆ ಒಂದು ಕಾರಣವಿದೆ. ಮತ್ಸ್ಯಾವತಾರದ ಬಳಿಕ ದೇವತೆಗಳು ನಡೆಸಿದ ಅಮೃತ ಮಥನದಲ್ಲಿ ಮಂದರಗಿರಿಯ ಉದ್ಧಾರಕ್ಕಾಗಿ ಒಮ್ಮೆ ಶ್ರೀಹರಿಯು ಕೂರ್ಮ ರೂಪನಾಗಿ ಅವತರಿಸಿದನು. ನರಸಿಂಹಾವತಾರದ ತರುವಾಯವೂ ಒಮ್ಮೆ ದೇವತೆಗಳ ಅಮೃತಮಥನದಲ್ಲಿ ಮಂದರಾದ್ರಿಯ ಉದ್ಧಾರಕ್ಕಾಗಿ ಕೂರ್ಮನಾಗಿ ಅವತರಿಸಿದನು. ಮೊದಲನೆಯ ಕೂರ್ಮಾವತಾರ ರೈವತಮನ್ವಂತರದಲ್ಲಿ, ಎರಡನೆಯ ಕೂರ್ಮಾವತಾರ ವೈವಸ್ವತಮನ್ವಂತರದಲ್ಲಿ. ಈ ವಿಷಯದಲ್ಲಿ ಆಚಾರ್ಯರು ಭಾಗವತ ತಾತ್ಪರ್ಯದಲ್ಲಿ ಉದಾಹರಿಸಿರುವ ಪ್ರಮಾಣವೇ ಆಧಾರ —

**''ಅನಂತೋಢೋ ಮಂದರಸ್ತು ಯದಾ ವೈವಸ್ವತಾಂತರೇ ।**
**ಅಮೃತಾರ್ಥಂ ಸುಪರ್ಣೋಢೋ ರೈವತಸ್ಯಾಂತರೇ ಮನೋಃ ॥''**

ಇದರ ಅಭಿಪ್ರಾಯ ಹೀಗಿದೆ ವೈವಸ್ವತಮನ್ವಂತರದಲ್ಲಿ 'ಅನಂತ' ಎಂಬ ಹೆಸರಿನ ಗರುಡನು ಮಂದರವನ್ನು ಹೊತ್ತು ಸಮುದ್ರದ ಬದಿಗೆ ತಂದನು. ರೈವತ ಮನ್ವಂತರದಲ್ಲಿ 'ಸುವರ್ಣ' ಎಂಬ ಗರುಡನು ಮಂದರವನ್ನು ಹೊತ್ತನು.

ಹೀಗೆ ನರಸಿಂಹಾವತಾರಕ್ಕೆ ಮುಂಚೆ ಮತ್ತು ಅನಂತರ ಎರಡು ಬಾರಿ ಅವತರಿಸಿದ ಕೂರ್ಮಾವತಾರಿ ಹರಿಯ ಚರಿತ್ರೆಯನ್ನು ಮುಂದೆ ಒಟ್ಟಿಗೆ ಹೇಳುವರು. ಈಗ ನರಸಿಂಹಾವತಾರದ ಕಥೆಯನ್ನು ಹೇಳುವರು. ॥ ೪೩ ॥

**ಅಭಿಷ್ಟುತಸ್ತೈರ್ಹರಿರುಗ್ರವೀರ್ಯೋ**
**ನೃಸಿಂಹರೂಪೇಣ ಸ ಆವಿರಾಸೀತ್ ।**
**ಹತ್ವಾ ಹಿರಣ್ಯಂ ಚ ಸುತಾಯ ತಸ್ಯ**
**ದತ್ವಾऽಭಯಂ ದೇವಗಣಾನತೋಷಯತ್ ॥ ೪೪ ॥**

**ಅರ್ಥ** :- **ತೈಃ** ಆ ಬ್ರಹ್ಮಾದಿದೇವತೆಗಳಿಂದ, **ಅಭಿಷ್ಟುತಃ** ಸ್ತುತಿಸಲ್ಪಟ್ಟ **ಉಗ್ರವೀರ್ಯಃ** ಉಗ್ರವಾದ ಪರಾಕ್ರಮವುಳ್ಳ, **ಸಃ** ಆ, **ಹರಿಃ** ಶ್ರೀನಾರಾಯಣನು, **ನೃಸಿಂಹರೂಪೇಣ** ನರಸಿಂಹರೂಪದಿಂದ, **ಆವಿರಾಸೀತ್** ಪ್ರಾದುರ್ಭವಿಸಿದನು, **ಹಿರಣ್ಯಂ** ಹಿರಣ್ಯಕಶಿಪುವನ್ನು, **ಹತ್ವಾ** ಕೊಂದು, **ತಸ್ಯ**

ಅವನ, **ಸುತಾಯ** ಮಗನಾದ ಪ್ರಹ್ಲಾದನಿಗೋಸ್ಕರ, **ಅಭಯಂ ಚ** ಅಭಯ ವನ್ನೂ ಕೂಡ, **ದತ್ವಾ** ಕೊಟ್ಟು **ದೇವಗಣಾನ್** ದೇವತೆಗಳ ಸಮೂಹಗಳನ್ನು **ಅತೋಷಯತ್** ಸಂತೋಷ ಪಡಿಸಿದನು.

**ತಾತ್ಪರ್ಯ** :- ಬ್ರಹ್ಮಾದಿದೇವತೆಗಳ ಸ್ತೋತ್ರದಿಂದ ಪ್ರಸನ್ನನಾದ ಮಹಾ ಪರಾಕ್ರಮಶಾಲಿಯಾದ ಶ್ರೀಮನ್ನಾರಾಯಣನು ನರಸಿಂಹರೂಪನಾಗಿ ಅವತರಿಸಿ ದುಷ್ಟ ಹಿರಣ್ಯಕಶಿಪುವನ್ನು ಸಂಹರಿಸಿದನು. ಹಿರಣ್ಯಕಶಿಪುವಿನ ಮಗನಾದ ಪ್ರಹ್ಲಾದನಿಗೆ ಅಭಯವನ್ನಿತ್ತು ಅಸುರಸಂಹಾರ, ಶಿಷ್ಟಸಂರಕ್ಷಣೆಗಳಿಂದ ದೇವತೆ ಗಳನ್ನು ಸಂತೋಷ ಪಡಿಸಿದನು. ॥ ೪೪ ॥

**ಸುರಾಸುರಾಣಾಮುದಧಿಂ ವಿಮಥ್ನತಾಂ**
**ದಧಾರ ಪೃಷ್ಠೇನ ಗಿರಿಂ ಸ ಮಂದರಮ್ ।**
**ವರಪ್ರದಾನಾದಪರೈರಧಾರ್ಯಂ**
**ಹರಸ್ಯ ಕೂರ್ಮೋ ಬೃಹದಂಡವೋಢಾ ॥ ೪೫ ॥**

**ಅರ್ಥ** :- **ಬೃಹದಂಡವೋಢಾ** ಬ್ರಹ್ಮಾಂಡಧಾರಕನಾದ, **ಸಃ** ಆ, **ಕೂರ್ಮಃ** ಕೂರ್ಮನು **ಉದಧಿಂ** ಸಮುದ್ರವನ್ನು **ಸುರಾಸುರಾಣಾಂ** ದೇವತೆ ಗಳು, ಅಸುರರು, **ವಿಮಥ್ನತಾಂ ಸತಾಂ** ಕಡೆಯುತ್ತಿರಲು, **ಹರಸ್ಯ** ಶಿವನ, **ವರಪ್ರದಾನಾತ್** ವರದ ಕೊಡುವಿಕೆಯಿಂದ, **ಅಪರೈಃ** ಬೇರೆಯವರಿಂದ, **ಅಧಾರ್ಯಂ** ಧರಿಸಿಲು ಅಶಕ್ಯವಾದ, **ಮಂದರಂ ಗಿರಿಂ** ಮಂದರ ಪರ್ವತ ವನ್ನು **ಪೃಷ್ಠೇನ** ಬೆನ್ನಿನಿಂದ, **ದಧಾರ** ಧರಿಸಿದನು.

**ತಾತ್ಪರ್ಯ** :- ಸುರಾಸುರರು ಅಮೃತಮಥನ ಮಾಡುವ ಸಂದರ್ಭದಲ್ಲಿ ಮುಳುಗಿದ ಮಂದರಪರ್ವತವನ್ನು ಶ್ರೀಹರಿಯು ಕೂರ್ಮಾವತಾರವನ್ನು ಧರಿಸಿ ಬೆನ್ನಿನಿಂದ ಧಾರಣೆಮಾಡಿದನು. ಆ ಮಂದರ ಪರ್ವತ ಬಂಗಾರಮಯ. ಆದರೆ ಬಂಗಾರದ ಆಸೆಯಿಂದ ಯಾರೂ ಎತ್ತಿ ಕೊಂಡೊಯ್ಯದ ಹಾಗೆ ರುದ್ರದೇವರ ವರವಿತ್ತು. ಆ ವರ ಬಲದಿಂದ ಯಾರಿಗೂ ಎತ್ತಲು ಅಶಕ್ಯವಾದ ಮಂದರವನ್ನು ಶ್ರೀ ನಾರಾಯಣನು ಕೂರ್ಮನಾಗಿ ಬೆನ್ನಿನಲ್ಲಿ ಹೊತ್ತನು. ವರಬಲದಿಂದಲೇ ಸುರಾಸುರರು ಆ ಮಂದರವನ್ನು ಒಯ್ಯುವಾಗ ಕೆಳಗೆ ಬಿದ್ದು ಅಡಿಯಲ್ಲಿ ಸಿಕ್ಕಿದ ಸುರಾಸುರರನ್ನು ಮಂದರ ಪುಡಿ ಮಾಡಿತು. ಆದರೆ ಬ್ರಹ್ಮಾಂಡವನ್ನೇ ಧರಿಸಿರುವ ಭಗವಂತನಿಗೆ ಮಂದರಧಾರಣೆ ಯಾವ ಲೆಕ್ಕ?

ಕೈಮುತ್ಯವನ್ನು ತಿಳಿಸಲು 'ಬೃಹದಂಡವೋಢಾ' ಎಂಬ ವಿಶೇಷಣವನ್ನು ಕೂರ್ಮನಿಗೆ ಕೊಡಲಾಗಿದೆ. ॥ ೪೫ ॥

**ವರಾದಜೇಯತ್ವಮವಾಪ ದೈತ್ಯರಾಟ್**
**ಚತುರ್ಮುಖಸ್ಯೈವ ಬಲಿರ್ಯದಾ ತದಾ ।**
**ಅಜಾಯತೇಂದ್ರಾವರಜೋಽದಿತೇಃ ಸುತೋ**
**ಮಹಾನಜೋಽಪ್ಯಬ್ಜಭವಾದಿಸಂಸ್ತುತಃ ॥ ೪೬ ॥**

**ಅರ್ಥ :- ದೈತ್ಯರಾಟ್** ದೈತ್ಯರಾಜನಾದ, **ಬಲಿಃ** ಬಲಿಚಕ್ರವರ್ತಿಯು, **ಚತುರ್ಮುಖಸ್ಯ** ಚತುರ್ಮುಖನ, **ವರಾತ್ ಏವ** ವರದಿಂದಲೆ, **ಅಜೇಯತ್ವಂ** ಯಾರಿಂದಲೂ ಗೆಲ್ಲಲು ಶಕ್ಯವಾಗದಿರುವಿಕೆಯನ್ನು, **ಯದಾ** ಯಾವಾಗ, **ಅವಾಪ** ಹೊಂದಿದನೋ, **ತದಾ** ಆಗ, **ಅಬ್ಜಭವಾದಿಸಂಸ್ತುತಃ** ಬ್ರಹ್ಮರುದ್ರಾದಿಗಳಿಂದ ಸ್ತುತಿಸಲ್ಪಟ್ಟವನಾಗಿ, **ಅದಿತೇಃ** ಅದಿತಿಯ, **ಸುತಃ** ಮಗನಾಗಿ, **ಅಜಃ** ಉತ್ಪತ್ತಿಯಿಲ್ಲದವನಾದ ಹರಿಯು, **ಮಹಾನ್ ಅಪಿ** (ಇಂದ್ರನಿಗಿಂತ) ಶ್ರೇಷ್ಠನಾದರೂ, **ಇಂದ್ರಾವರಜಃ ಸನ್** ಇಂದ್ರನ ತಮ್ಮನಾಗಿ, **ಅಜಾಯತ** ಹುಟ್ಟಿದನು.

**ತಾತ್ಪರ್ಯ :-** ವಾಮನಾವತಾರದ ಕಥೆಯನ್ನು ಹೇಳುತ್ತಿದ್ದಾರೆ. ದೈತ್ಯರಾಜನಾದ ಬಲಿಚಕ್ರವರ್ತಿಯು ಬ್ರಹ್ಮದೇವರ ವರದಿಂದ ಅಜೇಯತ್ವವನ್ನು ಪಡೆದಿದ್ದ. ಆಗ ಬ್ರಹ್ಮರುದ್ರಾದಿ ದೇವತೆಗಳಿಂದ ಬಲಿನಿಗ್ರಹಕ್ಕಾಗಿ ಸ್ತುತಿಗೊಂಡ ಶ್ರೀಹರಿ ತಾನು ಜನ್ಮರಹಿತನಾಗಿದ್ದರೂ ಅದಿತಿಯ ಮಗನಾಗಿ ವಾಮನನಾಗಿ ಅವತರಿಸಿದನು. ತಾನು ಸರ್ವೋತ್ತಮನಾಗಿದ್ದರೂ ಇಂದ್ರನ ತಮ್ಮನಾಗಿ ಅವತರಿಸಿದನು. ॥ ೪೬ ॥

**ಸ ವಾಮನಾತ್ಮಾಽಸುರಭೂಭೃತೋಽಧ್ವರಂ**
**ಜಗಾಮ ಗಾಂ ಸನ್ನಮಯನ್ ಪದೇ ಪದೇ ।**
**ಜಹಾರ ಚಾಸ್ಮಾಚ್ಚಲತಸ್ತ್ರಿವಿಷ್ಟಪಂ**
**ತ್ರಿಭಿಃ ಕ್ರಮೈಸ್ತಚ್ಚ ದದೌ ನಿಜಾಗ್ರಜೇ ॥ ೪೭ ॥**

**ಅರ್ಥ :- ವಾಮನಾತ್ಮಾ** ವಾಮನಸ್ವರೂಪನಾದ, **ಸಃ** ಆ ಶ್ರೀಹರಿಯು, **ಪದೇ ಪದೇ** ಹೆಜ್ಜೆ ಹೆಜ್ಜೆಗೆ, **ಗಾಂ** ಭೂಮಿಯನ್ನು **ಸನ್ನಮಯನ್** ಬಗ್ಗಿ

ಸತಕ್ಕವನಾಗಿ, **ಅಸುರಭೂಭೃತಃ** ಅಸುರರಾಜನಾದ ಬಲಿಯ, **ಅಧ್ವರಂ** ಯಾಗ ವನ್ನು ಕುರಿತು, **ಜಗಾಮ** ಹೋದನು, **ಅಸ್ಮಾತ್** ಈ ಬಲಿಯ ದೆಸೆಯಿಂದ, **ತ್ರಿಭಿಃ** ಮೂರು, **ಪಾದೈಃ** ಪಾದಗಳಿಂದ, **ಛಲತಃ** ಕಪಟದಿಂದ, **ತ್ರಿವಿಷ್ಟಪಂ** ಸ್ವರ್ಗವನ್ನು, **ಜಹಾರ ಚ** ಅಪಹರಿಸಿದನು ಕೂಡ, **ತತ್** ಆ ಸ್ವರ್ಗವನ್ನು **ನಿಜಾಗ್ರಜೇ** ತನ್ನ ಅಣ್ಣನಾದ ಇಂದ್ರನಿಗೋಸ್ಕರ, **ದದೌ ಚ** ಕೊಟ್ಟನು ಕೂಡ.

**ತಾತ್ಪರ್ಯ** :- ಬ್ರಹ್ಮವರದಿಂದ ದೃಪ್ತನಾದ ಬಲಿಯು ಇಂದ್ರನ ಸಾಮ್ರಾಜ್ಯವನ್ನು ಅಪಹಾರಮಾಡಿದ್ದನು. ವಾಮನಾವತಾರಿಯಾದ ಶ್ರೀಹರಿಯು ತನ್ನ ಪುಟ್ಟ ಹೆಜ್ಜೆಗಳಿಂದಲೆ ಭೂಮಿಯನ್ನು ಕಂಪಿಸತಕ್ಕವನಾಗಿ ಕೇಳಿ ತನ್ನ ತ್ರಿವಿಕ್ರಮರೂಪದ ಮೂರು ಪಾದಗಳಿಂದ ಮೂರು ಲೋಕವನ್ನು ಅವನಿಂದ ಪಡೆದು ಇಂದ್ರನಿಗೆ ಕೊಟ್ಟನು.

**ವಿಶೇಷ ವಿಷಯ** :- ವಾದದಲ್ಲಿ ಎರಡು ಅರ್ಥಗಳನ್ನು ಹೇಳುವ ಸಾಧಾರಣ ಶಬ್ದವನ್ನು ಪ್ರಯೋಗಮಾಡಿದಾಗ ವಕ್ತೃವಿನ ಅಭಿಪ್ರಾಯ ತಿಳಿಯದೆ ಅವನ ಅಭಿಮತವಲ್ಲದ ಅರ್ಥವನ್ನು ತಿಳಿದುಕೊಂಡು ಪ್ರತಿವಾದಿಯು ವ್ಯವಹರಿಸಿದರೆ ಆಗ ಅಂಥ ಪ್ರತಿವಾದಿಗೆ 'ಛಲ' ಎಂಬ ದೋಷ ಬರುವುದು. 'ಛಲ' ಎಂಬ ಈ ದೋಷಕ್ಕೆ ನಿಗ್ರಹಸ್ಥಾನ ಎಂದು ಹೆಸರು. ಪ್ರತಿವಾದಿಗಳನ್ನು ನಿಗ್ರಹ ಮಾಡುವ ಅವಕಾಶ ಕೊಡುವುದರಿಂದ 'ನಿಗ್ರಹಸ್ಥಾನ' ಎಂದು ಹೆಸರು. ಪ್ರಕೃತದಲ್ಲಿ ಸೂಕ್ಷ್ಮ ಸ್ಥೂಲ ಪಾದಗಳೆರಡನ್ನೂ ತಿಳಿಸುವ 'ಪಾದ' ಎಂಬ ಸಾಧಾರಣ ಶಬ್ದವನ್ನು ಬಳಸಿ ಭಗವಂತನು ಮೂರುಪಾದ ಭೂಮಿಯನ್ನು ಕೊಡೆಂದನು. ಇದನ್ನು ತಿಳಿಯದೆ, ವಾಮನನು ತನ್ನ ಪುಟ್ಟ ಮೂರು ಪಾದಗಳ ಹೆಜ್ಜೆಯನ್ನು ಕೇಳುತ್ತಿರುವನೆಂದು ಭಾವಿಸಿ ಬಲಿಯು ಕೊಡುವೆನೆಂದು ಪ್ರತಿಜ್ಞೆಗೈದ. ಆದರೆ ವಾಮನನು ತ್ರಿವಿಕ್ರಮನಾಗಿ ಬೆಳೆದು ತಾನು ಬಯಸಿದ್ದು ಮೂರು ಸ್ಥೂಲ ಪಾದಗಳ ಭೂಮಿಯನ್ನು ಎಂದು ತೋರಿಸಿದ. ಹೀಗೆ ಬಲಿಯನ್ನು ಛಲರೂಪದೋಷದಿಂದ ಸೋಲಿಸಿ ಸ್ವರ್ಗವನ್ನು ಗೆದ್ದ. ॥ ೪೭ ॥

**ಪಿತಾಮಹೇನಾಸ್ಯ ಪುರಾ ಹಿ ಯಾಚಿತೋ**
**ಬಲೇಃ ಕೃತೇ ಕೇಶವ ಆಹ ಯದ್ವಚಃ ।**
**ನಾಽಯಾಜ್ಞಯಾಽಹಂ ಪ್ರತಿಹನ್ಮಿ ತಂ ಬಲಿಂ**
**ಶುಭಾನನೇತ್ಯೇವ ತತೋಽಭ್ಯಯಾಚತ ॥ ೪೮ ॥**

**ಅರ್ಥ** :- **ಅಸ್ಯ** ಈ ಬಲಿಚಕ್ರವರ್ತಿಯ, **ಪಿತಾಮಹೇನ** ತಂದೆಯ ತಂದೆಯಾದ ಪ್ರಹ್ಲಾದನಿಂದ, **ಪುರಾ** ಹಿಂದೆ, **ಬಲೇಃ ಕೃತೇ** ಬಲಿಗಾಗಿ, **ಯಾಚಿತಃ** ಯಾಚಿಸಲ್ಪಟ್ಟ **ಕೇಶವಃ** ಕೇಶವನು, **ಹೇ ಶುಭಾನನ** ಹೇ ಶೋಭನವಾದ ಮುಖವುಳ್ಳ ಪ್ರಹ್ಲಾದನೆ, **ಅಹಂ** ನಾನು, **ತಂ** ಆ, **ಬಲಿಂ** ಬಲಿಯನ್ನು, **ಅಯಾಚ್ಞಯಾ** ಯಾಚನೆ ಮಾಡದೆ, **ನ ಪ್ರತಿಹನ್ಮಿ** ನಿಗ್ರಹಿಸುವುದಿಲ್ಲ, **ಇತಿ** ಎಂದು, **ಯತ್** ಯಾವ ಕಾರಣದಿಂದ, **ಆಹ** ಹೇಳಿದ್ದನೋ, **ತತಃ ಏವ** ಆದ್ದರಿಂದಲೆ, **ಅಭ್ಯಯಾಚತ** ಯಾಚಿಸಿದರು, **ಹಿ** ಇದು ಪ್ರಮಾಣಸಿದ್ಧವು.

**ತಾತ್ಪರ್ಯ** :- ವಾಮನನು ಬಲಿಯಿಂದ ಬಲಾತ್ಕಾರದಿಂದಲೇ ಸ್ವರ್ಗವನ್ನು ಪಡೆಯಬಹುದಿತ್ತಲ್ಲ, ಬೇಡಿದ್ದು ಯಾಕೆ? ಎಂಬ ಸಂಶಯವನ್ನು ಇಲ್ಲಿ ಪರಿಹರಿಸಲಾಗಿದೆ. ಹಿಂದೆ ನರಸಿಂಹಾವತಾರಕಾಲದಲ್ಲಿ ಪ್ರಹ್ಲಾದನು ತನ್ನ ಮೊಮ್ಮಗನಾದ ಬಲಿಯ ಪರವಾಗಿ ಅನುಗ್ರಹವನ್ನು ಬೇಡಿದ್ದನು. ಆಗ ಅವನನ್ನು ಕುರಿತು ಶ್ರೀಹರಿಯು, ''ಬಲಿಯನ್ನು ಬೇಡದೆ ನಿಗ್ರಹಿಸುವುದಿಲ್ಲ'' ಎಂದು ಭರವಸೆಯನ್ನಿತ್ತನು. ಆದುದರಿಂದ ಈಗ ಯಾಚನೆಮಾಡಿ ಬಲಿಯನ್ನು ವಾಮನನು ನಿಗ್ರಹಿಸಿದನು. ॥ ೪೮ ॥

**ಬಭೂವಿರೇ ಚಂದ್ರಲಲಾಮತೋ ವರಾತ್**
**ಪುರಾ ಹ್ಯಜೇಯಾ ಅಸುರಾ ಧರಾತಲೇ ।**
**ತೈರರ್ದಿತಾ ವಾಸವನಾಯಕಾಃ ಸುರಾಃ**
**ಪುರೋ ನಿಧಾಯಾಬ್ಜಜಮಸ್ತುವನ್ ಹರಿಮ್ ॥ ೪೯ ॥**

**ಅರ್ಥ** :- **ಪುರಾ** ಹಿಂದೆ, **ಚಂದ್ರಲಲಾಮತಃ** ಚಂದ್ರನೇ ಅಲಂಕಾರವಾಗುಳ್ಳ ಶಿವನ, **ವರಾತ್** ವರದಿಂದ, **ಅಜೇಯಾಃ** ಗೆಲ್ಲಲು ಅಶಕ್ಯರಾದ, **ಅಸುರಾಃ** ಅಸುರರು, **ಧರಾತಲೇ** ಭೂತಲದಲ್ಲಿ, **ಬಭೂವಿರೇ ಹಿ** ಕ್ಷತ್ರಿಯರಾಗಿ ಹುಟ್ಟಿದರಷ್ಟೆ, **ತೈಃ** -ಆ ಅಸುರರಿಂದ, **ಅರ್ದಿತಾಃ** ಪೀಡಿತರಾದ, **ವಾಸವನಾಯಕಾಃ** ಇಂದ್ರನೇ ಸ್ವಾಮಿಯಾಗುಳ್ಳ, **ಸುರಾಃ** ದೇವತೆಗಳು, **ಅಬ್ಜಜಮ್** ಚತುರ್ಮುಖ ಬ್ರಹ್ಮದೇವರನ್ನು, **ಪುರಃ** ಮುಂದೆ, **ನಿಧಾಯ** ಇಟ್ಟುಕೊಂಡು, **ಹರಿಮ್** ಶ್ರೀಹರಿಯನ್ನು **ಅಸ್ತುವನ್** ಸ್ತೋತ್ರ ಮಾಡಿದರು.

**ತಾತ್ಪರ್ಯ** :- ಈಗ ಪರಶುರಾಮದೇವ ಅವತಾರದ ಕಥೆಯನ್ನು ಹೇಳುತ್ತಿದ್ದಾರೆ. ಶಿವವರದಿಂದ ಅಜೇಯರಾದ ಅಸುರರು ಈ ಭೂಮಿಯಲ್ಲಿ

ಕ್ಷತ್ರಿಯರಾಗಿ ಹುಟ್ಟಿದರು. ಆ ಅಸುರರಿಂದ ಪೀಡಿತರಾದ ದೇವತೆಗಳು ಬ್ರಹ್ಮದೇವರನ್ನು ಮುಂದೆ ಮಾಡಿಕೊಂಡು ಶ್ರೀಮನ್ನಾರಾಯಣನನ್ನು ಸ್ತೋತ್ರ ಮಾಡಿದರು. ॥ ೪೯ ॥

**ವಿರಿಂಚಸೃಷ್ಟೈರ್ನಿತರಾಮವಧ್ಯೌ**
**ವರಾದ್ ವಿಧಾತುರ್ದಿತಿಜೌ ಹಿರಣ್ಯಕೌ ।**
**ತಥಾ ಹಯಗ್ರೀವ ಉದಾರವಿಕ್ರಮಃ**
**ತ್ವಯಾ ಹತಾ ಬ್ರಹ್ಮಪುರಾತನೇನ ॥ ೫೦ ॥**

**ಅರ್ಥ** :- **ವಿಧಾತುಃ** ಬ್ರಹ್ಮದೇವರ, **ವರಾದ್** ವರದಿಂದ, **ವಿರಿಂಚಸೃಷ್ಟೈಃ** ಬ್ರಹ್ಮ ದೇವರಿಂದ ಸೃಷ್ಟಿಗೊಂಡ ದೇವ, ಮನುಷ್ಯ, ಅಸುರರಿಂದ, **ನಿತರಾಂ** ಅತ್ಯಂತವಾಗಿ, **ಅವಧ್ಯೌ** ಕೊಲ್ಲಲು ಅಶಕ್ಯರಾದ, **ದಿತಿಜೌ** ದಿತಿಯ ಮಕ್ಕಳಾದ, **ಹಿರಣ್ಯಕೌ** ಹಿರಣ್ಯಾಕ್ಷ, ಹಿರಣ್ಯಕಶಿಪುಗಳು, **ತಥಾ** ಹಾಗೆ, **ಉದಾರವಿಕ್ರಮಃ** ಉತ್ಕೃಷ್ಟ ಪರಾಕ್ರಮವುಳ್ಳ, **ಹಯಗ್ರೀವಃ** ಹಯಗ್ರೀವಾಸುರನು, **ಬ್ರಹ್ಮ ಪುರಾತನೇನ** ಚತುರ್ಮುಖ ಬ್ರಹ್ಮದೇವರಿಗಿಂತಲೂ ಮೊದಲಿಗನಾದ, **ತ್ವಯಾ** ನಿನ್ನಿಂದ, **ಹತಾಃ** ಕೊಲ್ಲಲ್ಪಟ್ಟರು.

**ತಾತ್ಪರ್ಯ** :- ಹಿರಣ್ಯಾಕ್ಷ, ಹಿರಣ್ಯ ಕಶಿಪುಗಳು ಬ್ರಹ್ಮದೇವರ ವರದಿಂದ ಬಲಿಷ್ಠರಾಗಿದ್ದರು. ಬ್ರಹ್ಮಸೃಷ್ಟರಾದ ಯಾರಿಂದಲೂ ಅವಧ್ಯರಾಗಿದ್ದರು. ಹಾಗೆಯೇ ಹಯಗ್ರೀವಾಸುರನೂ ಮಹಾಪರಾಕ್ರಮಶಾಲಿಯಾಗಿದ್ದನು. ಚತುರ್ಮುಖ ಬ್ರಹ್ಮದೇವರಿಗೂ ಮೊದಲಿಗನಾದ ನೀನು ವರಾಹರೂಪದಿಂದ ಹಯಗ್ರೀವಾಸುರನನ್ನು ಸಂಹಾರ ಮಾಡಿರುವಿ. ಹರಿಯೇ! ಸಜ್ಜನರ ಉಪಕಾರ ಕ್ಕಾಗಿ ಅಸುರಸಂಹಾರಾರ್ಥವಾಗಿ ಅನೇಕ ಅವತಾರಗಳನ್ನು ಹೊತ್ತು ಬಂದಿರುವ ನೀನು ಈಗ ದುಷ್ಟಕ್ಷತ್ರಿಯರ ಉಪದ್ರವವನ್ನು ಪರಿಹರಿಸು. ॥ ೬೦ ॥

**ಸ ಚಾಸುರಾನ್ ರುದ್ರವರಾದವಧ್ಯಾನ್**
**ಇಮಾನ್ ಸಮಸ್ತೈರಪಿ ದೇವದೇವ ।**
**ನಿಃಶ್ಶೇಷಮಶಕ್ತ್ಯೈವ ನಿಹತ್ಯ ಸರ್ವಾನ್**
**ಹೃದಂಬುಜೇ ನೋ ನಿವಸಾಥ ಶಶ್ವತ್ ॥ ೫೧ ॥**

**ಅರ್ಥ :- ದೇವದೇವ** ದೇವತೆಗಳಿಗೂ ದೇವನಾದ ಹರಿಯೇ!, **ಸಃ ತ್ವಂ** ಅಂಥ ಅಸುರಸಂಹಾರಕನಾದ ನೀನು, **ರುದ್ರವರಾತ್** ರುದ್ರದೇವರ ವರದಿಂದ, **ಸಮಸ್ತೈಃ ಅಪಿ** ಎಲ್ಲರಿಂದಲೂ ಕೂಡ, **ಅವಧ್ಯಾನ್** ಕೊಲ್ಲಲು ಅಶಕ್ಯರಾದ, **ಸರ್ವಾನ್** ಎಲ್ಲ **ಇಮಾನ್** ಈ, **ಅಸುರಾನ್ ಚ** ಅಸುರರನ್ನು ಕೂಡ, ನಿಸ್ಸೀಮಶಕ್ತ್ಯಾ ಏವ ಅಪರಿಮಿತವಾದ ಸಾಮರ್ಥ್ಯದಿಂದಲೆ, **ನಿಹತ್ಯ** ಕೊಂದು, **ಅಥ** ಅನಂತರ, **ನಃ** ನಮ್ಮ, **ಹೃದಂಬುಜೇ** ಹೃದಯಕಮಲದಲ್ಲಿ **ಶಶ್ವತ್** ಯಾವಾಗಲೂ, **ನಿವಸ** ವಾಸಮಾಡು.

**ತಾತ್ಪರ್ಯ :-** ಹಿರಣ್ಯಾಕ್ಷನೇ ಮುಂತಾದ ಅಸುರರನ್ನು ಕೊಂದ ನೀನು ರುದ್ರದೇವರ ವರದಿಂದ ಅವಧ್ಯರಾದ ಈ ಅಸುರರನ್ನು ನಿನ್ನ ಅಪರಿಮಿತ ಸಾಮರ್ಥ್ಯದಿಂದಲೇ ನಿಗ್ರಹಮಾಡು. ನಮ್ಮ ಹೃದಯಕಮಲದಲ್ಲಿ ಸರ್ವಥಾ ವಾಸಮಾಡುವವನಾಗು. ॥ ೫೧ ॥

**ಇತ್ಯಾದರೋಕ್ತಸ್ತ್ರಿದಶೈರಜೇಯಃ**
**ಸ ಶಾರ್ಙ್ಗಧನ್ವಾऽಥ ಭೃಗೂದ್ವಹೋऽಭೂತ್ ।**
**ರಾಮೋ ನಿಹತ್ಯಾಸುರಪೂಗಮುಗ್ರಂ**
**ನದಾನನಾದಿರ್ವಿದಧೇऽಸೃಜೈವ ॥ ೫೨ ॥**

**ಅರ್ಥ :- ತ್ರಿದಶೈಃ** ದೇವತೆಗಳಿಂದ, **ಇತಿ** ಈ ಹಿಂದೆ ತಿಳಿಸಿದ ರೀತಿ ಯಿಂದ, **ಆದರೋಕ್ತಃ** ಆದರ-ಭಕ್ತಿಯಿಂದ, **ಉಕ್ತಃ** ಸ್ತುತಿಸಲ್ಪಟ್ಟ **ಅಜೇಯಃ** ಯಾರಿಂದಲೂ ಸೋಲಿಸಲು ಶಕ್ಯವಿಲ್ಲದ, **ಸಃ** ಆ, **ಶಾರ್ಙ್ಗಧನ್ವಾ** ಶಾರ್ಙ್ಗ ಧನುರ್ಧಾರಿಯಾದ ನಾರಾಯಣನು, **ಭೃಗೂದ್ವಹಃ** ಭೃಗುವಂಶದವರ ರಕ್ಷಕನು (ಭೃಗುವಂಶದಲ್ಲಿ ಪ್ರಾದುರ್ಭೂತನಾದವನು), **ಅಭೂತ್** ಆದನು, **ಅಥ** ಅನಂತರ, **ಅನಾದಿಃ** ಹುಟ್ಟಿರದ, **ರಾಮಃ** ಪರಶುರಾಮನು, **ಉಗ್ರಂ** ಭಯಂಕರ ವಾದ, **ಅಸುರಪೂಗಂ** ಅಸುರರ ಸಮುದಾಯವನ್ನು, **ನಿಹತ್ಯ** ಕೊಂದು, **ಅಸೃಜಾ ಏವ** ಅವರ ರಕ್ತದಿಂದಲೇ, **ನದಾನ್** ಐದು ನದಗಳನ್ನು **ವಿದಧೇ** (ಕುರುಕ್ಷೇತ್ರದಲ್ಲಿ) ನಿರ್ಮಾಣ ಮಾಡಿದನು.

**ತಾತ್ಪರ್ಯ :-** ಈ ಪ್ರಕಾರವಾಗಿ ದೇವತೆಗಳು ಆ ಭಗವಂತನನ್ನು ಸ್ತೋತ್ರ ಮಾಡಿದರು. ದೇವತೆಗಳ ಪ್ರಾರ್ಥನೆಯಿಂದ ಪ್ರಸನ್ನನಾದ ಪರಮಾತ್ಮನು

ಕ್ಷತ್ರಿಯರಾಗಿ ಹುಟ್ಟಿದರು. ಆ ಅಸುರರಿಂದ ಪೀಡಿತರಾದ ದೇವತೆಗಳು ಬ್ರಹ್ಮದೇವರನ್ನು ಮುಂದೆ ಮಾಡಿಕೊಂಡು ಶ್ರೀಮನ್ನಾರಾಯಣನನ್ನು ಸ್ತೋತ್ರ ಮಾಡಿದರು. ॥ ೪೯ ॥

**ವಿರಿಂಚಸೃಷ್ಟೈರ್ನಿತರಾಮವಧ್ಯೌ**
**ವರಾದ್ ವಿಧಾತುರ್ದಿತಿಜೌ ಹಿರಣ್ಯಕೌ ।**
**ತಥಾ ಹಯಗ್ರೀವ ಉದಾರವಿಕ್ರಮಃ**
**ತ್ವಯಾ ಹತಾ ಬ್ರಹ್ಮಪುರಾತನೇನ ॥ ೫೦ ॥**

**ಅರ್ಥ** :- **ವಿಧಾತುಃ** ಬ್ರಹ್ಮದೇವರ, **ವರಾದ್** ವರದಿಂದ, **ವಿರಿಂಚಸೃಷ್ಟೈಃ** ಬ್ರಹ್ಮ ದೇವರಿಂದ ಸೃಷ್ಟಿಗೊಂಡ ದೇವ, ಮನುಷ್ಯ, ಅಸುರರಿಂದ, **ನಿತರಾಂ** ಅತ್ಯಂತವಾಗಿ, **ಅವಧ್ಯೌ** ಕೊಲ್ಲಲು ಅಶಕ್ಯರಾದ, **ದಿತಿಜೌ** ದಿತಿಯ ಮಕ್ಕಳಾದ, **ಹಿರಣ್ಯಕೌ** ಹಿರಣ್ಯಾಕ್ಷ, ಹಿರಣ್ಯಕಶಿಪುಗಳು, **ತಥಾ** ಹಾಗೆ, **ಉದಾರವಿಕ್ರಮಃ** ಉತ್ಕೃಷ್ಟ ಪರಾಕ್ರಮವುಳ್ಳ, **ಹಯಗ್ರೀವಃ** ಹಯಗ್ರೀವಾಸುರನು, **ಬ್ರಹ್ಮ ಪುರಾತನೇನ** ಚತುರ್ಮುಖ ಬ್ರಹ್ಮದೇವರಿಗಿಂತಲೂ ಮೊದಲಿಗನಾದ, **ತ್ವಯಾ** ನಿನ್ನಿಂದ, **ಹತಾಃ** ಕೊಲ್ಲಲ್ಪಟ್ಟರು.

**ತಾತ್ಪರ್ಯ** :- ಹಿರಣ್ಯಾಕ್ಷ, ಹಿರಣ್ಯ ಕಶಿಪುಗಳು ಬ್ರಹ್ಮದೇವರ ವರದಿಂದ ಬಲಿಷ್ಠರಾಗಿದ್ದರು. ಬ್ರಹ್ಮಸೃಷ್ಟರಾದ ಯಾರಿಂದಲೂ ಅವಧ್ಯರಾಗಿದ್ದರು. ಹಾಗೆಯೇ ಹಯಗ್ರೀವಾಸುರನೂ ಮಹಾಪರಾಕ್ರಮಶಾಲಿಯಾಗಿದ್ದನು. ಚತುರ್ಮುಖ ಬ್ರಹ್ಮದೇವರಿಗೂ ಮೊದಲಿಗನಾದ ನೀನು ವರಾಹರೂಪದಿಂದ ಹಯಗ್ರೀವಾಸುರನನ್ನು ಸಂಹಾರ ಮಾಡಿರುವಿ. ಹರಿಯೇ! ಸಜ್ಜನರ ಉಪಕಾರ ಕ್ಕಾಗಿ ಅಸುರಸಂಹಾರಾರ್ಥವಾಗಿ ಅನೇಕ ಅವತಾರಗಳನ್ನು ಹೊತ್ತು ಬಂದಿರುವ ನೀನು ಈಗ ದುಷ್ಟಕ್ಷತ್ರಿಯರ ಉಪದ್ರವವನ್ನು ಪರಿಹರಿಸು. ॥ ೬೦ ॥

**ಸ ಚಾಸುರಾನ್ ರುದ್ರವರಾದವಧ್ಯಾನ್**
**ಇಮಾನ್ ಸಮಸ್ತೈರಪಿ ದೇವದೇವ ।**
**ನಿಸ್ಸೀಮಶಕ್ತ್ಯೈವ ನಿಹತ್ಯ ಸರ್ವಾನ್**
**ಹೃದಂಬುಜೇ ನೋ ನಿವಸಾಥ ಶಶ್ವತ್ ॥ ೫೧ ॥**

**ಅರ್ಥ** :- **ದೇವದೇವ** ದೇವತೆಗಳಿಗೂ ದೇವನಾದ ಹರಿಯೇ!, **ಸಃ ತ್ವಂ** ಅಂಥ ಅಸುರಸಂಹಾರಕನಾದ ನೀನು, **ರುದ್ರವರಾತ್** ರುದ್ರದೇವರ ವರದಿಂದ, **ಸಮಸ್ತೈಃ ಅಪಿ** ಎಲ್ಲರಿಂದಲೂ ಕೂಡ, **ಅವಧ್ಯಾನ್** ಕೊಲ್ಲಲು ಅಶಕ್ಯರಾದ, **ಸರ್ವಾನ್** ಎಲ್ಲ, **ಇಮಾನ್** ಈ, **ಅಸುರಾನ್ ಚ** ಅಸುರರನ್ನು ಕೂಡ, ನಿಸ್ಸೀಮಶಕ್ತ್ಯಾ ಏವ ಅಪರಿಮಿತವಾದ ಸಾಮರ್ಥ್ಯದಿಂದಲೆ, **ನಿಹತ್ಯ** ಕೊಂದು, **ಅಥ** ಅನಂತರ, **ನಃ** ನಮ್ಮ, **ಹೃದಂಬುಜೇ** ಹೃದಯಕಮಲದಲ್ಲಿ **ಶಶ್ವತ್** ಯಾವಾಗಲೂ, **ನಿವಸ** ವಾಸಮಾಡು.

**ತಾತ್ಪರ್ಯ** :- ಹಿರಣ್ಯಾಕ್ಷನೇ ಮುಂತಾದ ಅಸುರರನ್ನು ಕೊಂದ ನೀನು ರುದ್ರದೇವರ ವರದಿಂದ ಅವಧ್ಯರಾದ ಈ ಅಸುರರನ್ನು ನಿನ್ನ ಅಪರಿಮಿತ ಸಾಮರ್ಥ್ಯದಿಂದಲೇ ನಿಗ್ರಹಮಾಡು. ನಮ್ಮ ಹೃದಯಕಮಲದಲ್ಲಿ ಸರ್ವಥಾ ವಾಸಮಾಡುವವನಾಗು. ॥ ೫೧ ॥

**ಇತ್ಯಾದರೋಕ್ತಸ್ತ್ರಿದಶೈರಜೇಯಃ**
**ಸ ಶಾರ್ಙ್ಗಧನ್ವಾಽಥ ಭೃಗೂದ್ವಹೋಽಭೂತ್ ।**
**ರಾಮೋ ನಿಹತ್ಯಾಸುರಪೂಗಮುಗ್ರಂ**
**ನದಾನನಾದಿರ್ವಿದಧೇಽಸೃಜೈವ ॥ ೫೨ ॥**

**ಅರ್ಥ** :- **ತ್ರಿದಶೈಃ** ದೇವತೆಗಳಿಂದ, **ಇತಿ** ಈ ಹಿಂದೆ ತಿಳಿಸಿದ ರೀತಿಯಿಂದ, **ಆದರೋಕ್ತಃ** ಆದರ-ಭಕ್ತಿಯಿಂದ, **ಉಕ್ತಃ** ಸ್ತುತಿಸಲ್ಪಟ್ಟ, **ಅಜೇಯಃ** ಯಾರಿಂದಲೂ ಸೋಲಿಸಲು ಶಕ್ಯವಿಲ್ಲದ, **ಸಃ** ಆ, **ಶಾರ್ಙ್ಗಧನ್ವಾ** ಶಾರ್ಙ್ಗ ಧನುರ್ಧಾರಿಯಾದ ನಾರಾಯಣನು, **ಭೃಗೂದ್ವಹಃ** ಭೃಗುವಂಶದವರ ರಕ್ಷಕನು (ಭೃಗುವಂಶದಲ್ಲಿ ಪ್ರಾದುರ್ಭೂತನಾದವನು), **ಅಭೂತ್** ಆದನು, **ಅಥ** ಅನಂತರ, **ಅನಾದಿಃ** ಹುಟ್ಟಿರದ, **ರಾಮಃ** ಪರಶುರಾಮನು, **ಉಗ್ರಂ** ಭಯಂಕರವಾದ, **ಅಸುರಪೂಗಂ** ಅಸುರರ ಸಮುದಾಯವನ್ನು, **ನಿಹತ್ಯ** ಕೊಂದು, **ಅಸೃಜಾ ಏವ** ಅವರ ರಕ್ತದಿಂದಲೇ, **ನದಾನ್** ಐದು ನದಗಳನ್ನು **ವಿದಧೇ** (ಕುರುಕ್ಷೇತ್ರದಲ್ಲಿ) ನಿರ್ಮಾಣ ಮಾಡಿದನು.

**ತಾತ್ಪರ್ಯ** :- ಈ ಪ್ರಕಾರವಾಗಿ ದೇವತೆಗಳು ಆ ಭಗವಂತನನ್ನು ಸ್ತೋತ್ರ ಮಾಡಿದರು. ದೇವತೆಗಳ ಪ್ರಾರ್ಥನೆಯಿಂದ ಪ್ರಸನ್ನನಾದ ಪರಮಾತ್ಮನು

ಭೃಗುವಂಶದಲ್ಲಿ ಪರಶುರಾಮನಾಗಿ ಅವತರಿಸಿದನು. ಭಯಂಕರರಾದ ಅಸುರರ ಹಿಂಡನ್ನೇ ಕೊಡಲಿಯಿಂದ ತುಂಡರಿಸಿದ ಅನಾದಿಯಾದ ಭಾರ್ಗವ ರಾಮನು ಆ ಅಸುರರ ರಕ್ತದಿಂದಲೇ ಐದು ನದಗಳನ್ನು ಕುರುಕ್ಷೇತ್ರದಲ್ಲಿ ನಿರ್ಮಿಸಿದನು. ॥ ೫೨ ॥

**ತತಃ ಪುಲಸ್ತ್ಯಸ್ಯ ಕುಲೇ ಪ್ರಸೂತೌ**
**ತಾವಾದಿದೈತ್ಯೌ ಜಗದೇಕಶತ್ರೂ ।**
**ಪರ್ರೈರವಧ್ಯೌ ವರತಃ ಪುರಾ ಹರೇಃ**
**ಸುರ್ರೈರಜೇಯೌ ಚ ವರಾದ್ವಿಧಾತುಃ ॥ ೫೩ ॥**

**ಅರ್ಥ :- ತತಃ** ಅನಂತರ, **ತೌ** ಆ, **ಆದಿದೈತ್ಯೌ** ಹಿರಣ್ಯಾಕ್ಷ, ಹಿರಣಕಶಿಪು ಎಂಬ ಮೊದಲ ದಿತಿಪುತ್ರರು, **ಜಗದೇಕಶತ್ರೂ** ಜಗತ್ತಿಗೆ ಮುಖ್ಯ ಶತ್ರುಗಳಾಗಿ, **ಪುರಾ** ಹಿಂದೆ ಶಾಪಕಾಲದಲ್ಲಿ, **ಹರೇಃ** ಶ್ರೀಹರಿಯ, **ವರತಃ** ವರದಿಂದ, **ಪರ್ರೈಃ** ಭಗವಂತನನ್ನು ಹೊರತು ಇತರರಿಂದ, **ಅವಧ್ಯೌ** ಕೊಲ್ಲಲು ಅಶಕ್ಯರಾಗಿ, **ವಿಧಾತುಃ** ಬ್ರಹ್ಮದೇವರ, **ವರಾತ್ ಚ** ವರದಿಂದಲೂ ಕೂಡ, **ಸುರ್ರೈಃ** ದೇವತೆಗಳಿಂದಲೂ, **ಅಜೇಯೌ** ಸೋಲಿಸಲು ಅಶಕ್ಯರಾದವರಾಗಿ, **ಪುಲಸ್ತ್ಯಸ್ಯ** ಪುಲಸ್ತ್ಯಋಷಿಯ, **ಕುಲೇ** ವಂಶದಲ್ಲಿ, **ಪ್ರಸೂತೌ** ಹುಟ್ಟಿದರು.

**ತಾತ್ಪರ್ಯ :** ರಾಮಾವತಾರವನ್ನು ಹೇಳಲು ಅದರ ಪೂರ್ವ ಭೂಮಿಕೆಯನ್ನು ತಿಳಿಸುತ್ತಿರುವರು. ಹಿರಣ್ಯಾಕ್ಷ, ಹಿರಣ್ಯಕಶಿಪುಗಳೆಂದು ದಿತಿಪುತ್ರರಾಗಿ ಹುಟ್ಟಿದ, ಭಗವಂತನ ಮಕ್ಕಳಾಗಿ ಪುನಃ ಹುಟ್ಟಿದರು. ದ್ವಾರಪಾಲಕರಿಗೆ ಸನಕಾದಿಗಳು ಅಸುರಯೋನಿಯಲ್ಲಿ ಹುಟ್ಟುವಂತೆ ಶಾಪವಿತ್ತಾಗ ಭಗವಂತನು ಅವರಿಗೆ, ''ಮೂರು ಜನ್ಮಗಳಲ್ಲಿಯೂ ನಿಮ್ಮನ್ನು ನಾನೇ ಸಂಹರಿಸುವೆ' ಎಂದು ವರವನ್ನು ಕೊಟ್ಟಿದ್ದನು. ಆ ವರದಿಂದ ಅವರು ಭಗವಂತನನ್ನು ಹೊರತು ಇತರರಿಂದ ಅವಧ್ಯರಾಗಿದ್ದರು. ಅಲ್ಲದೆ ರಾವಣ, ಕುಂಭಕರ್ಣರಾಗಿ ಹುಟ್ಟಿದಾಗಲೂ ಬ್ರಹ್ಮದೇವರ ವರದಿಂದಲೂ ದೇವತೆಗಳಿಗೆ ಅಜೇಯರಾಗಿದ್ದರು. ಹೀಗೆ ಜಗತ್ತಿಗೆ ಶತ್ರುಗಳಾಗಿ ಆ ಹಿರಣ್ಯಾಕ್ಷ ಹಿರಣ್ಯಕಶಿಪುಗಳು ಪುನಃ ರಾವಣ, ಕುಂಭಕರ್ಣರಾಗಿ ಹುಟ್ಟಿದರು. ॥ ೫೩ ॥

**ಸರ್ವೈರಜೇಯಃ ಸ ಚ ಕುಂಭಕರ್ಣಃ**
**ಪುರಾತನೇ ಜನ್ಮನಿ ಧಾತುರೇವ ।**
**ಪುರಾನ್ನರಾದೀನೃತ ಏವ ರಾವಣಃ**
**ತದಾತನಾತ್ ತೌ ತ್ರಿದಶಾನಬಾಧತಾಮ್ ॥ ೫೪ ॥**

**ಅರ್ಥ** :- **ಪುರಾತನೇ ಜನ್ಮನಿ** ಹಿಂದಿನ ಹಿರಣ್ಯಾಕ್ಷಜನ್ಮದಲ್ಲಿ, **ಧಾತುಃ ಏವ** ಚತುರ್ಮುಖ ಬ್ರಹ್ಮನದೇ, **ವರಾತ್** ವರದಿಂದ, **ಸ ಚ ಕುಂಭಕರ್ಣಃ** ಆ ಕುಂಭಕರ್ಣನು **ನರಾದೀನ್ ಋತೇ** ನರ, ವಾನರಾದಿಗಳನ್ನು ಹೊರತಾಗಿ, **ಸರ್ವೈಃ** ಎಲ್ಲರಿಂದಲೂ, **ಅಜೇಯಃ** ಸೋಲಿಸಲು ಶಕ್ಯವಿಲ್ಲದವನು, **ರಾವಣಃ** ರಾವಣನು, **ತದಾತನಾತ್** ಆ ರಾವಣ ಜನ್ಮದಲ್ಲಿಯೇ ದೊರೆತ, **ವರಾತ್** ವರದಿಂದ, **ನರಾದೀನ್ ಋತೇ** ನರ, ವಾನರಾದಿಗಳನ್ನು ಹೊರತಾಗಿ, **ಸರ್ವೈಃ** ಎಲ್ಲರಿಂದಲೂ, ಅಜೇಯಃ ಸೋಲಿಸಲು ಸಾಧ್ಯವಿಲ್ಲದವನು, **ತೌ** ಆ ರಾವಣ, ಕುಂಭಕರ್ಣರು, **ತ್ರಿದಶಾನ್** ದೇವತೆಗಳನ್ನು **ಅಬಾಧತಾಮ್** ಪೀಡಿಸಿದರು.

**ತಾತ್ಪರ್ಯ** :- ರಾವಣ ಕುಂಭಕರ್ಣರ ಪೀಡೆ ತಡೆಯಲಾರದ ಇಂದ್ರಾದಿ ದೇವತೆಗಳು ಬ್ರಹ್ಮರುದ್ರರನ್ನು ಮುಂದೆ ಮಾಡಿಕೊಂಡು ಕ್ಷೀರಸಮುದ್ರವನ್ನು ಸೇರಿದರು. ಅಲ್ಲಿ ಶೇಷಶಾಯಿಯನ್ನು ಭಕ್ತಿಯಿಂದ ಸ್ತುತಿಸಿದರು. ॥ ೫೫ ॥

**ತ್ವಮೇಕ ಈಶಃ ಪರಮಃ ಸ್ವತಂತ್ರಃ**
**ತ್ವಮಾದಿರಂತೋ ಜಗತಾಂ ನಿಯೋಕ್ತಾ ।**
**ತ್ವದಾಜ್ಞಯೈವಾಖಿಲಮಂಬುಜೋದ್ಭವಾಃ**
**ವಿತೇನಿರೇಽಗ್ರ್ಯಾಶ್ಚರಮಾಶ್ಚ ಯೇಽನ್ಯೇ ॥ ೫೬ ॥**

**ಅರ್ಥ** :- **ತ್ವಂ** ನೀನು, **ಏಕಃ ಈಶಃ** ಮುಖ್ಯಸ್ವಾಮಿಯು, **ಪರಮಃ** ಸರ್ವೋತ್ತಮನು, **ಸ್ವತಂತ್ರಃ** ಸ್ವತಂತ್ರನು, **ತ್ವಂ** ನೀನು, **ಜಗತಾಂ** ಲೋಕಗಳಿಗೆ, **ಆದಿಃ** ಉತ್ಪಾದಕನು (ಮೊದಲಿಗನು), **ಅಂತಃ** ನಾಶಕನು, (ಕೊನೆಯಲ್ಲಿರುವವನು) **ನಿಯೋಕ್ತಾ** ನಿಯಾಮಕನು, **ತ್ವದಾಜ್ಞಯಾ ಏವ** ನಿನ್ನ ಅಪ್ಪಣೆಯಿಂದಲೆ, **ಅಗ್ರ್ಯಾಃ** ಮೊದಲು ಅಂದರೆ ಅತೀತಕಾಲದಲ್ಲಿದ್ದ **ಅಂಬುಜೋದ್ಭವಾಃ** ಚತುರ್ಮುಖ ಬ್ರಹ್ಮರು, **ಚ** ಮತ್ತು, **ಚರಮಾಃ** ಮುಂದೆ ಬರಲಿರುವ, **ಯೇ ಅನ್ಯೇ** ಯಾವ ಬೇರೆ ಬ್ರಹ್ಮರು ಅವರೆಲ್ಲರು, **ಅಖಿಲಂ** ಈ

ಎಲ್ಲ ವಿಶ್ವವನ್ನು **ಏತೇನಿರೇ** ನಿರ್ಮಾಣ ಮಾಡಿದರು. ಅಂತೆಯೇ ಮಧ್ಯದಲ್ಲಿರುವ ಈಗಿನ ಬ್ರಹ್ಮನೂ ನಿನ್ನ ಅಪ್ಪಣೆಯಿಂದಲೆ ಜಗತ್ತನ್ನು ನಿರ್ಮಾಣ ಮಾಡುತ್ತಿರುವನು.

**ತಾತ್ಪರ್ಯ** :- ನೀನು ಈ ಜಗತ್ತಿಗೆ ಮುಖ್ಯಸ್ವಾಮಿಯು, ಸರ್ವೋತ್ತಮನು, ಸ್ವತಂತ್ರನು, ನೀನು ಈ ಜಗತ್ತಿನ ಆದಿ, ಮಧ್ಯ, ಅಂತ ಎಲ್ಲೆಡೆ ಇರುವವನು. ಈ ವಿಶಾಲ ವಿಶ್ವದ ಸೃಷ್ಟಿ ಸಂಹಾರ, ನಿಯಮನ ಎಲ್ಲವೂ ನಿನ್ನಾಧೀನ. ನಿನ್ನಾಜ್ಞೆಯಿಂದಲೆ ಈ ಹಿಂದಿನ, ಮುಂದಿನ, ಈಗಿನ ಎಲ್ಲ ವಿರಿಂಚರೂ ಈ ಜಗತ್ತಿನ ಸೃಷ್ಟಿ ಕ್ರಿಯೆಯಲ್ಲಿ ಪಾತ್ರವಹಿಸಿರುವರು. ॥ ೫೬ ॥

**ಮನುಷ್ಯಮಾನಾತ್ ತ್ರಿಶತಂ ಸಷಷ್ಟಿಕಂ**
**ದಿವೌಕಸಾಮೇಕಮುಶಂತಿ ವತ್ಸರಮ್ ।**
**ದ್ವಿಷಟ್ ಸಹಸ್ರೈರಪಿ ತೈಶ್ಚತುರ್ಯುಗಂ**
**ತ್ರೇತಾದಿಭಿಃ ಪಾದಶ ಏವ ಹೀನೈಃ ॥ ೫೭ ॥**

**ಅರ್ಥ** :- **ಮನುಷ್ಯಮಾನಾತ್** ಮನುಷ್ಯರ ದಿನಗಣತಿಯಿಂದ, **ಸಷಷ್ಟಿಕಂ** ಅರವತ್ತರಿಂದ ಕೂಡಿದ, **ತ್ರಿಶತಂ** ಮುನ್ನೂರು ವರ್ಷಗಳು, **ದಿವೌಕಸಾಂ** ದೇವತೆಗಳ, **ಏಕಂ** ಒಂದು, **ವತ್ಸರಂ** ವರ್ಷವನ್ನಾಗಿ, **ಉಶಂತಿ** ಜ್ಞಾನಿಗಳು ಇಚ್ಛಿಸುತ್ತಾರೆ, **ಪಾದಶಃ ಏವ** ಒಂದೊಂದು ಪಾದಗಳಿಂದಲೇ, **ಹೀನೈಃ** ರಹಿತಗಳಾದ, **ತ್ರೇತಾದಿಭಿಃ** ತ್ರೇತಾ, ದ್ವಾಪರ, ಕಲಿ, ಕೃತಯುಗಗಳಿಂದ, **ಸಹ** ಕೂಡಿಕೊಂಡು, **ದ್ವಿಷಟ್‌ಸಹಸ್ರೈಃ** ಹನ್ನೆರಡು ಸಾವಿರ ಸಂಖ್ಯಾಕಗಳಾದ, **ತೈಃ** ಆ ದೇವತೆಗಳ ವರ್ಷಗಳಿಂದ, **ಚತುರ್ಯುಗಂ** ನಾಲ್ಕು ಯುಗವನ್ನು **ಉಶಂತಿ** ಇಚ್ಛಿಸುತ್ತಾರೆ.

**ತಾತ್ಪರ್ಯ** :- ಮನುಷ್ಯರ ಮಾನದಂತೆ ಮುನ್ನೂರ ಅರವತ್ತು ವರ್ಷಗಳು ದೇವತೆಗಳಿಗೆ ಒಂದು ವರ್ಷ. ಇಂಥ ದೇವಮಾನದ ಹನ್ನೆರಡು ಸಾವಿರ ವರ್ಷಗಳು ಒಂದು ಚತುರ್ಯುಗ. ಇದರಲ್ಲಿ ಒಂದೊಂದು ಪಾದ ಕಡಿಮೆಯಾಗಿ ಒಂದೊಂದು ಯುಗಗಳ ವರ್ಷಮಾನವನ್ನು ತಿಳಿಯಬೇಕು. ಒಂದು ಸಾವಿರ ವರ್ಷಕ್ಕೆ ಪಾದ ಎಂದು ಇಲ್ಲಿ ಭಾವಿಸಬೇಕು. ನಾಲ್ಕು ಸಾವಿರವರ್ಷ ಕೃತಯುಗ. ಅದರಲ್ಲಿ ಪಾದ ಒಂದು ಸಾವಿರ ವರ್ಷ ಊನವಾದವಾದರೆ ಅಂದರೆ ಮೂರು

ಸಾವಿರ ವರ್ಷ ತ್ರೇತಾಯುಗ. ಹೀಗೆಯೇ ಎರಡು ಸಾವಿರವರ್ಷ ದ್ವಾಪರ ಯುಗ. ಒಂದು ಸಾವಿರವರ್ಷ ಕಲಿಯುಗ. ಈ ರೀತಿ ಒಟ್ಟು ೧೦ ಸಾವಿರ ವರ್ಷಗಳು (೪೧-೩೧೨-೧) ಆದವು. ಈ ಯುಗಗಳ ಸಂಧಿಕಾಲಗಳು ಕೃತದ ಆದ್ಯಂತ ಸಂಧಿಕಾಲ ೮೦೦ ವರ್ಷಗಳು (೪೦೦-೪೦೦), ತ್ರೇತಾ ಆದ್ಯಂತ ಸಂಧಿ ಕಾಲ ೬೦೦ ವರ್ಷಗಳು (೩೦೦-೩೦೦), ದ್ವಾಪರ ಆದ್ಯಂತ ಸಂಧಿಕಾಲ ೪೦೦ ವರ್ಷಗಳು (೨೦೦-೨೦೦), ಕಲಿಯುಗ ಆದ್ಯಂತ ಸಂಧಿಕಾಲ ೨೦೦ ವರ್ಷಗಳು (೧೦೦-೧೦೦). ಇವು ಒಟ್ಟು ೨೦೦೦ ವರ್ಷಗಳು. ಹೀಗೆ ೧೨ ಸಾವಿರ ವರ್ಷಗಳು ಚತುರ್ಯುಗದ ಮಾನ. ॥ ೫೭ ॥

**ಸಹಸ್ರವೃತ್ತಂ ತದಹಃ ಸ್ವಯಂಭುವೋ**
**ನಿಶಾ ಚ ತನ್ಮಾನಮಿತಂ ಶರಚ್ಛತಮ್ ।**
**ತ್ವದಾಜ್ಞಯಾ ಸ್ವಾನನುಭೂಯ ಭೋಗಾನ್**
**ಉಪೈತಿ ಸೋಽಪಿ ತ್ವರಿತಸ್ತ್ವದಂತಿಕಮ್ ॥ ೫೮ ॥**

**ಅರ್ಥ :-** **ಸಹಸ್ರವೃತ್ತಂ** ಒಂದು ಸಾವಿರ ಬಾರಿ ಆವೃತ್ತಿಯನ್ನು ಹೊಂದಿದ, **ತದ್** ಆ ಚತುರ್ಯುಗವು, **ಸ್ವಯಂಭುವಃ** ಬ್ರಹ್ಮನ, **ಅಹಃ** ಒಂದುದಿವಸವು, **ಭವತಿ** ಆಗುತ್ತದೆ, **ನಿಶಾ ಚ** ರಾತ್ರಿಯೂ ಕೂಡ, **ತನ್ಮಾನಮಿತಂ** ಅದೇ ಅಳತೆಯಿಂದ ಪರಿಮಿತವಾದದ್ದು ಅಂದರೆ ಒಂದು ಸಾವಿರಬಾರಿ ನಾಲ್ಕು ಯುಗಗಳು ಆವೃತ್ತಿ ಹೊಂದಿದ್ದರೆ ಅದೇ ಬ್ರಹ್ಮನ ರಾತ್ರಿಯ ಮಾನ, **ಶರಚ್ಛತಂ** ಇಂಥ ನೂರು ವರ್ಷಗಳ ಕಾಲ, **ತ್ವದಾಜ್ಞಯಾ** ನಿನ್ನ ಆಜ್ಞೆಯಿಂದ, **ಸ್ವಾನ್** ತನ್ನ, **ಭೋಗಾನ್** ವಿಷಯ ಭೋಗಗಳನ್ನು **ಅನುಭೂಯ** ಅನುಭವಿಸಿ, **ಸಃ ಅಪಿ** ಆ ಬ್ರಹ್ಮನೂ ಕೂಡ, **ತ್ವರಿತಃ** ವೇಗವುಳ್ಳವನಾಗಿ, **ತ್ವದಂತಿಕಂ** ನಿನ್ನ ಸಮೀಪವನ್ನು **ಉಪೈತಿ** ಹೊಂದುತ್ತಾನೆ.

**ತಾತ್ಪರ್ಯ :-** ದೇವಮಾನದ ಹನ್ನೆರಡು ಸಾವಿರ ವರ್ಷಗಳಿಗೆ ಒಂದು ಚತುರ್ಯುಗವಾದರೆ ಇಂಥ ಚತುರ್ಯುಗಗಳು ಒಂದು ಸಾವಿರ ಬಾರಿ ಆವೃತ್ತಿ ಹೊಂದಿದರೆ ಅದು ಬ್ರಹ್ಮದೇವನ ಒಂದು ದಿವಸ. ಪುನಃ ಇನ್ನೊಂದು ಸಾವಿರ ಬಾರಿ ಆವೃತ್ತಿ ಆದರೆ ಒಂದು ರಾತ್ರಿ. ಇಂಥ ನೂರು ವರ್ಷಕಾಲ ಬ್ರಹ್ಮದೇವನು ನಿನ್ನ ಆಜ್ಞಾನುಸಾರವಾಗಿ ಸ್ವಕೀಯ ಭೋಗಗಳನ್ನು ಅನುಭವಿಸಿ ಶೀಘ್ರವಾಗಿ ನಿನ್ನ ಸಾಮೀಪ್ಯವನ್ನು ಪಡೆಯವನು. ॥ ೫೮ ॥

**ತ್ವಯಾ ಪುರಾ ಕರ್ಣಪುಟಾದ್ವಿನಿರ್ಮಿತೌ**
**ಮಹಾಸುರೌ ತೌ ಮಧುಕೈಟಭಾಖ್ಯೌ ।**
**ಪ್ರಭಂಜನಾವೇಶವಶಾತ್ ತವಾಜ್ಞಯಾ**
**ಬಲೋದ್ಧತಾವಾಶು ಜಲೇ ವ್ಯವರ್ಧತಾಮ್ ॥ ೫೯ ॥**

**ಅರ್ಥ** :- **ಪುರಾ** ದೇವತೆಗಳ ಸೃಷ್ಟಿಯ ಮೊದಲು, **ತ್ವಯಾ** ನಿನ್ನಿಂದ, **ಕರ್ಣ ಪುಟಾತ್** ಕಿವಿಯ ದೆಸೆಯಿಂದ, **ಯೌ** ಯಾವ, **ಮಹಾಸುರೌ** ಶ್ರೇಷ್ಠ ಅಸುರರು, **ವಿನಿರ್ಮಿತೌ** ಸೃಷ್ಟಿಸಲ್ಪಟ್ಟರೋ, **ತೌ** ಆ, **ಮಧುಕೈಟಭಾಖ್ಯೌ** 'ಮಧು, ಕೈಟಭ' ಎಂಬ ಹೆಸರುಳ್ಳ ಅಸುರರು, **ತವ** ನಿನ್ನ **ಆಜ್ಞಯಾ** ಅವರಲ್ಲಿ ಪ್ರವೇಶಿಸಬೇಕೆಂಬ ಆಜ್ಞೆಯಿಂದ, **ಪ್ರಭಂಜನಾವೇಶವಶಾತ್** ವಾಯುದೇವರ ಆವೇಶದಿಂದ, **ಬಲೋದ್ಧತೌ** ಬಲದಿಂದ ಉನ್ಮತ್ತರಾಗಿ, **ಆಶು** ಬೇಗನೆ, **ಜಲೇ** ಪ್ರಲಯದ ನೀರಿನಲ್ಲಿ, **ವ್ಯವರ್ಧತಾಂ** ಬೆಳೆದರು.

**ತಾತ್ಪರ್ಯ** :- ದೇವಸರ್ಗದ ಮುಂಚೆ, ಭಗವಂತ! ನಿನ್ನ ಕಿವಿಗಳಿಂದ ಮಧು, ಕೈಟಭರೆಂಬ ಅಸುರರು ಸೃಷ್ಟಿಗೊಂಡರು. ನಿನ್ನಪ್ಪಣೆಯಿಂದ ವಾಯು ದೇವರು ಅವರಲ್ಲಿ ಸೇರಿದರು. ವಾಯುದೇವರ ಆವೇಶ ಬಲದಿಂದ ದೃಪ್ತರಾದ ಆ ಮಧು ಕೈಟಭರು ಜಲದಲ್ಲಿ ಕೂಡಲೆ ಬೆಳೆದರು. ॥ ೫೯ ॥

**ತ್ವದಾಜ್ಞಯಾ ಬ್ರಹ್ಮವರಾದವಧ್ಯೌ**
**ಚಿಕ್ರೀಡಿಷಾಸಂಭವಯಾ ಮುಖೋದ್ಗತಾನ್ ।**
**ಸ್ವಯಂಭುವೋ ವೇದಗಣಾನಹಾರ್ಷತಾಂ**
**ತದಾಽಭವಸ್ತ್ವಂ ಹಯಶೀರ್ಷ ಈಶ್ವರಃ ॥ ೬೦ ॥**

**ಅರ್ಥ** :- **ಚಿಕ್ರೀಡಿಷಾಸಂಭವಯಾ** ಕ್ರೀಡಿಸುವ ಇಚ್ಛೆಯಿಂದ ಉತ್ಪನ್ನ ವಾದ, **ತ್ವದಾಜ್ಞಯಾ** ನಿನ್ನ ಅಪ್ಪಣೆಯಿಂದ, **ಬ್ರಹ್ಮವರಾತ್** ಬ್ರಹ್ಮನ ವರದಿಂದ, **ಅವಧ್ಯೌ** ಕೊಲ್ಲಲು ಅಶಕ್ಯರಾದ ಮಧುಕೈಟಭರು, **ಸ್ವಯಂಭುವಃ** ಬ್ರಹ್ಮನ, **ಮುಖೋದ್ಗತಾನ್** ಮುಖದಿಂದ ಹೊರಹೊಮ್ಮಿದ, **ವೇದಗಣಾನ್** ದೇಹಧಾರಿಗಳಾದ ವೇದದ ಅವಾಂತರಾಭಿಮಾನಿದೇವತೆಗಳ ಸಮೂಹವನ್ನು, **ಅಹಾರ್ಷತಾಂ** ಅಪಹರಿಸಿದರು, **ತದಾ** ಆಗ, **ತ್ವಂ** ನೀನು, **ಈಶ್ವರಃ ಅಪಿ** ಸಮರ್ಥನಾದರೂ ಕೂಡ, **ಹಯಶೀರ್ಷಃ** ಹಯಗ್ರೀವರೂಪವುಳ್ಳವನು, **ಅಭವಃ** ಆಗಿರುತ್ತಿ.

**ತಾತ್ಪರ್ಯ** :- ಮಧುಕೈಟಭರನ್ನು ಸೃಷ್ಟಿಮಾಡಿದ ನೀನು ಕ್ರೀಡಿಸುವ ಬಯಕೆಯಿಂದ ಅವರು ಅವಧ್ಯರಾಗುವಂತೆ ಬ್ರಹ್ಮದೇವರಿಂದ ವರವನ್ನು ಕೊಡಿಸಿದೆ. ಬ್ರಹ್ಮದೇವರ ಮುಖದಿಂದ ಹೊರಹೊಮ್ಮಿದ ವೇದಗಳ, ದೇಹಧಾರಿಗಳಾದ ಅವಾಂತರ ಅಭಿಮಾನಿದೇವತೆಗಳನ್ನು ಆ ಮಧುಕೈಟಭರು ಅಪಹರಿಸಿದರು. ಆಗ ನೀನು ಸ್ವಯಂ ಸಮರ್ಥನಾಗಿದ್ದರೂ ವೇದದ ಉದ್ಧಾರಕ್ಕಾಗಿ ಹಯಗ್ರೀವರೂಪವನ್ನು ಧಾರಣೆ ಮಾಡಿದಿ. ॥ ೬೦ ॥

**ಆಹೃತ್ಯ ವೇದಾನಖಿಲಾನ್ ಪ್ರದಾಯ**
**ಸ್ವಯಂಭುವೇ ತೌ ಚ ಜಘಂಥ ದಸ್ಯೂ ।**
**ನಿಷ್ಪೀಡ್ಯ ತಾವೂರುತಲೇ ಕರಾಭ್ಯಾಂ**
**ತನ್ಮೇದಸೈವಾಽಶು ಚಕರ್ಥ ಮೇದಿನೀಮ್ ॥ ೬೧ ॥**

**ಅರ್ಥ** :- **ತ್ವಂ** ನೀನು, **ಅಖಿಲಾನ್** ಎಲ್ಲ **ವೇದಾನ್** ವೇದಗಳನ್ನು ಆಹೃತ್ಯ ಮಧುಕೈಟಭರಿಂದ ಕಸಿದು ತಂದು, **ಸ್ವಯಂಭುವೇ** ಬ್ರಹ್ಮನಿಗೋಸ್ಕರ, ಪ್ರದಾಯಕೊಟ್ಟು, **ದಸ್ಯೂ** ವೇದವನ್ನು ಕದ್ದ ಕಳ್ಳರಾದ, **ತೌ** ಆ ಅಸುರರನ್ನು, **ಊರುತಲೇ** ತೊಡೆಯಲ್ಲಿ, **ಕರಾಭ್ಯಾಂ** ಎರಡು ಕೈಗಳಿಂದ **ನಿಷ್ಪೀಡ್ಯ** ಹೊಡೆದು ಪೀಡಿಸಿ, **ಜಘಂಥ** ಕೊಂದಿರುವಿ, **ತನ್ಮೇದಸಾ** ಏವ ಆ ಮಧುಕೈಟಭರ ಮೇದಸ್ಸಿನಿಂದಲೇ, **ಆಶು** ಕೂಡಲೇ, **ಮೇದಿನೀಂ** ಭೂಮಿಯನ್ನು **ಚಕರ್ಥ** ಮಾಡಿದಿ.

**ತಾತ್ಪರ್ಯ** :- ವೇದಾಪಹಾರ ಮಾಡಿದ ಆ ಮಧುಕೈಟಭರನ್ನು ತೊಡೆಯ ಮೇಲೆ ಹೊಡೆದು ಕೊಂದು, ವೇದವನ್ನು ತಂದು ಬ್ರಹ್ಮದೇವರಿಗೆ ಇತ್ತು, ಆ ಮಧು ಕೈಟಭರ ಮೇದಸ್ಸಿನಿಂದಲೇ ಈ ಭೂಮಿಯನ್ನು ನಿರ್ಮಾಣಮಾಡಿರುವಿ. ಅದರಿಂದಲೇ ಭೂಮಿಗೆ ಮೇದಿನೀ ಎಂದು ಹೆಸರು. ॥ ೬೧ ॥

**ಏವಂ ಸುರಾಣಾಂ ಚ ನಿಸರ್ಗಜಂ ಬಲಂ**
**ತಥಾಽಸುರಾಣಾಂ ವರದಾನಸಂಭವಮ್ ।**
**ವಶೇ ತವೈತತ್ ದ್ವಯಮಪ್ಯತೋ ವಯಂ**
**ನಿವೇದಯಾಮಃ ಪಿತುರೇವ ತೇಽಖಿಲಮ್ ॥ ೬೨ ॥**

**ಅರ್ಥ** :- **ಏವಂ** ಈ ರೀತಿಯಾಗಿ, **ಸುರಾಣಾಂ** ದೇವತೆಗಳ, **ನಿಸರ್ಗಜಂ** ಸ್ವಾಭಾವಿಕವಾದ, **ಬಲಂ** ಬಲವು, **ತಥಾ** ಹಾಗೆಯೇ, **ಅಸುರಾಣಾಂ** ಅಸುರರ,

**ವರದಾನಸಂಭವಂ** ವರಪ್ರದಾನದಿಂದ ಉಂಟಾದ, **ಬಲಂ ಚ** ಬಲವೂ ಕೂಡ, **ಏತದ್ ದ್ವಯಮಪಿ** ಈ ಎರಡು ಬಲವೂ ಕೂಡ, **ಯತಃ** ಯಾವ ಕಾರಣದಿಂದ, **ತವ** ನಿನ್ನ **ವಶೇ** ಅಧೀನದಲ್ಲಿವೆಯೋ, **ಅತಃ** ಆದುದರಿಂದ, **ವಯಂ** ನಾವು, **ಪಿತುಃ** ತಂದೆಯಾದ, **ತೇ ಏವ** ನಿನ್ನ ಸಮೀಪದಲ್ಲಿಯೇ, **ಅಖಿಲಂ** ಎಲ್ಲವನ್ನು **ನಿವೇದಯಾಮಃ** ವಿಜ್ಞಾಪಿಸಿಕೊಳ್ಳುತ್ತೇವೆ.

**ತಾತ್ಪರ್ಯ** :- ದೇವತೆಗಳ ಸ್ವಾಭಾವಿಕ ಬಲ, ವರದಿಂದ ಲಬ್ಧವಾದ ಅಸುರರ ಬಲ–ಇವೆರಡೂ ನಿನ್ನಾಧೀನ. ಆದುದರಿಂದ ಎಲ್ಲವನ್ನು ತಂದೆಯಾದ ನಿನ್ನಲ್ಲಿಯೇ ಹೇಳಿಕೊಳ್ಳುತ್ತೇವೆ. ॥ ೬೨ ॥

**ಇಮೌ ಚ ರಕ್ಷೋಧಿಪತೀ ವರೋದ್ಧತೌ**
**ಜಹಿ ಸ್ವವೀರ್ಯೇಣ ನೃಷು ಪ್ರಭೂತಃ ।**
**ಇತೀರಿತೇ ತೈರಖಿಲೈಃ ಸುರೇಶ್ವರೈಃ**
**ಬಭೂವ ರಾಮೋ ಜಗತೀಪತಿಃ ಪ್ರಭುಃ ॥ ೬೩ ॥**

**ಅರ್ಥ** :- **ತ್ವಂ** ನೀನು, **ನೃಷು** ಮಾನವರಲ್ಲಿ, **ಪ್ರಭೂತಃ ಸನ್** ಅವತರಿಸಿದವನಾಗಿ, **ಸ್ವವೀರ್ಯೇಣ** ಸ್ವಾಭಾವಿಕವಾದ ನಿನ್ನ ಸಾಮರ್ಥ್ಯದಿಂದ, **ವರೋದ್ಧತೌ** ವರಬಲದಿಂದ ಉದ್ಧತರಾದ, **ರಕ್ಷೋಧಿಪತೀ** ರಾಕ್ಷಸರಿಗೆ ಒಡೆಯರಾದ, **ಇಮೌ ಚ** ಈ ರಾವಣ ಕುಂಭಕರ್ಣರನ್ನೂ ಕೂಡ, **ಜಹಿ** ಕೊಲ್ಲು, **ಇತಿ** ಈ ರೀತಿಯಾಗಿ, **ಅಖಿಲೈಃ** ಎಲ್ಲ **ಸುರೇಶ್ವರೈಃ** ದೇವಶ್ರೇಷ್ಠರುಗಳಿಂದ, **ಈರಿತೇ ಸತಿ** ಹೇಳಲ್ಪಡುತ್ತಿರಲು, **ಜಗತೀಪತಿಃ** ಜಗತ್ತಿಗೆ ಸ್ವಾಮಿಯಾದ, **ಪ್ರಭುಃ** ಸಮರ್ಥನಾದ ಹರಿಯು, **ರಾಮಃ ಸನ್** ಶ್ರೀರಾಮನಾಗಿ **ಬಭೂವ** ಅವತರಿಸಿದನು.

**ತಾತ್ಪರ್ಯ** :- ''ಶ್ರೀಹರಿಯೇ! ಮಾನವರಲ್ಲಿ ಅವತರಿಸಿ ನಿನ್ನ ಸ್ವಾಭಾವಿಕ ಸಾಮರ್ಥ್ಯದಿಂದ ರಾಕ್ಷಸಶ್ರೇಷ್ಠರಾದ ರಾವಣ ಕುಂಭಕರ್ಣರನ್ನು ಸಂಹರಿಸು''. ಹೀಗೆ ದೇವತೆಗಳು ಪ್ರಾರ್ಥನೆ ಮಾಡಿಕೊಂಡಾಗ ಜಗತ್ಸ್ವಾಮಿಯಾದ ಸರ್ವಸಮರ್ಥನಾದ ಭಗವಂತನು ಶ್ರೀರಾಮನಾಗಿ ಅವತರಿಸಿದನು. ॥ ೬೩ ॥

**ಸ ಕಶ್ಯಪಸ್ಯಾದಿತಿಗರ್ಭಜನ್ಮನೋ**
**ವಿವಸ್ವತಸ್ತಂತುಭವಸ್ಯ ಭೂಭೃತಃ ।**
**ಗೃಹೇ ದಶಸ್ಯಂದನನಾಮಿನೋಽಭೂತ್**
**ಕೌಸಲ್ಯಕಾನಾಮ್ನಿ ತದರ್ಥಿನೇಷ್ಟಃ ॥ ೬೪ ॥**

**ಅರ್ಥ :-** **ತದರ್ಥಿನಾ** ರಾಮನೆಂಬ ಪುತ್ರನ ಬಯಕೆಯುಳ್ಳ ದಶರಥ ನಿಂದ, **ಇಷ್ಟಃ** ಯಾಗದ ಮೂಲಕ ಪೂಜಿಸಲ್ಪಟ್ಟ **ಸಃ** ಆ ರಾಮನು, **ಕಶ್ಯಪಸ್ಯ ಸಕಾಶಾತ್** ಕಶ್ಯಪನ ದೆಸೆಯಿಂದ, **ಅದಿತಿಗರ್ಭಜನ್ಮನಃ** ಅದಿತಿಯ ಗರ್ಭದಿಂದ ಉತ್ಪತ್ತಿಯನ್ನು ಹೊಂದಿದ, **ವಿವಸ್ವತಃ** ಸೂರ್ಯನ, **ತಂತುಭವಸ್ಯ** ವಂಶದಲ್ಲಿ ಹುಟ್ಟಿದ, **ದಶಸ್ಯಂದನ ನಾಮಿನಃ** 'ದಶರಥ' ಎಂಬ ಹೆಸರುಳ್ಳ, **ಭೂಭೃತಃ** ರಾಜನ, **ಕೌಸಲ್ಯಕಾನಾಮ್ನಿ** 'ಕೌಸಲ್ಯಾ' ಎಂಬ ಹೆಸರುಳ್ಳ, **ಗೃಹೇ** ಪತ್ನಿಯಲ್ಲಿ **ಅಭೂತ್** ಅವತರಿಸಿದನು.

**ತಾತ್ಪರ್ಯ :-** ಕಶ್ಯಪರಿಂದ ಅದಿತಿಯಲ್ಲಿ ಸೂರ್ಯ ಹುಟ್ಟಿದನು. ಆ ವಂಶದಲ್ಲಿ ದಶರಥಮಹಾರಾಜನು ಹುಟ್ಟಿದನು. ದಶರಥನು ಪುತ್ರಾರ್ಥಿಯಾಗಿ ಯಾಗಮಾಡಿ ಭಗವಂತನನ್ನು ಸಂತೋಷಪಡಿಸಿದನು. ಪ್ರಸನ್ನನಾದ ಶ್ರೀಹರಿಯು ದಶರಥನ ಕೌಸಲ್ಯೆಯೆಂಬ ಪತ್ನಿಯಲ್ಲಿ ಶ್ರೀರಾಮನಾಗಿ ಅವತರಿಸಿದನು.

**ವಿಶೇಷ ವಿಷಯ :-** ವೈವಸ್ವತಮನುವೇ ದಶರಥನಾಗಿ ಮತ್ತೊಮ್ಮೆ ಹುಟ್ಟಿದನೆಂದು ಕೆಲವೆಡೆ ಪ್ರಮಾಣಗಳು ತಿಳಿಸುತ್ತವೆ. ವಾಮನ ಪುರಾಣದಲ್ಲಿ

**''ಭವಿಷ್ಯದಂತರೇ ಭೂತ್ವಾ ವೈವಸ್ವತೋ ಭವಾನ್ ।**
**ತವ ವಂಶೋ ಭವಾನ್ಯಂಗ ರಾಮೋ ದಾಶರಥಿಃ ಸ್ವಯಮ್ ॥**

**ಪುನರ್ದಶರಥೋ ಭೂತ್ವಾ ತ್ವಮೇವಾಽಸಿ ಪಿತಾ ಮಮ ।**
**ಮದ್ದತ್ತಪಿಂಡದಾನೇನ ಮುಕ್ತಿಸ್ತೇ ಭವಿತಾ ಧ್ರುವಮ್ ॥''**

ಎಂದು ಹೇಳಲಾಗಿದೆ. ಇದರ ಆಶಯ ಹೀಗಿದೆ ವೈವಸ್ವತನಾದ ನೀನೇ ದಶರಥನಾಗಿ ನನ್ನ ತಂದೆಯಾಗುವಿ. ನಾನು 'ರಾಮ' ಎಂಬ ಹೆಸರಿನಿಂದ ನಿನ್ನ ಮಗನಾಗಿ ಅವತಾರ ಮಾಡುವೆ. ನಾನು ನೀಡುವ ಪಿಂಡದಿಂದಾಗಿ ಮುಕ್ತಿ ಯನ್ನು ಸೇರುವಿ. ಇದು ನಿಶ್ಚಯ.

ಪದ್ಮ ಪುರಾಣದಲ್ಲಿಯೂ —

**''ತಸ್ಯಾಭೂತ್ ಪ್ರಥಮಂ ಜನ್ಮ ಮನೋಃ ಸ್ವಾಯಂಭುವಸ್ಯ ಚ ।**
**ರಘೂಣಾಮನ್ವಯೇ ಪೂರ್ವಂ ರಾಜಾ ದಶರಥೋ ಹ್ಯಭೂತ್ ॥**

**ದ್ವಿತೀಯೇ ವಸುದೇವೋಽಭೂದ್ ವೃಷ್ಣೀನಾಮನ್ವಯೇ ಪುನಃ ॥''**

— ಎಂದು ಹೇಳಿದೆ.

ದಶರಥನಾದ ಮನು ಮುಂದೆ ವೃಷ್ಣಿ ವಂಶದಲ್ಲಿ ವಸುದೇವನೂ ಆಗುವನೆಂದು ಇಲ್ಲಿ ತಿಳಿಸಲಾಗಿದೆ. ಈ ವಿಷಯ ಜನಾರ್ಧನ ಭಟ್ಟೀಯ ವ್ಯಾಖ್ಯಾನದಲ್ಲಿದೆ. ॥ ೬೪ ॥

**ತದಾಜ್ಞಯಾ ದೇವಗಣಾ ಬಭೂವಿರೇ**
**ಪುರೈವ ಪಶ್ಚಾದಪಿ ತಸ್ಯ ಭೂಮ್ನಃ ।**
**ನಿಷೇವಣಾಯೋರುಗುಣಸ್ಯ ವಾನರೇಷು**
**ಅಥೋ ನರೇಷ್ವೇವ ಚ ಪಶ್ಚಿಮೋದ್ಭವಾಃ ॥ ೬೫ ॥**

**ಅರ್ಥ :- ಉರುಗುಣಸ್ಯ** ಉತ್ಕೃಷ್ಟಗುಣಗಳುಳ್ಳ, **ಭೂಮ್ನಃ** ಪೂರ್ಣನಾದ, **ತಸ್ಯ** ಆ ರಾಮನ, **ನಿಷೇವಣಾಯ** ಸೇವೆಗೋಸ್ಕರ, **ತದಾಜ್ಞಯಾ** ಆ ಹರಿಯ ಆಜ್ಞೆಯಿಂದ, **ದೇವಗಣಾಃ** ದೇವತೆಗಳ ಸಮೂಹಗಳು, **ಪುರಾ** ಏವ ರಾಮಾವತಾರಕ್ಕಿಂತ ಮುಂಚೆಯೇ, **ವಾನರೇಷು** ಕಪಿಗಳಲ್ಲಿ, **ಬಭೂವಿರೇ** ಹುಟ್ಟಿದರು. **ಅಥೋ** ಅನಂತರ, **ಪಶ್ಚಾದಪಿ** ರಾಮಾವತಾರದ ಬಳಿಕವೂ, **ಬಭೂವಿರೇ** ಹುಟ್ಟಿದರು, **ನರೇಷು** ಮನುಷ್ಯರಲ್ಲಿ, **ಜಾತಾಃ ಚ** ಹುಟ್ಟಿದ ಲಕ್ಷ್ಮಣಾದಿಗಳಾದರೋ, **ಪಶ್ಚಿಮೋದ್ಭವಾಃ** ಏವ ರಾಮಾವತಾರದ ಅನಂತರ ಹುಟ್ಟಿದವರೇ.

**ತಾತ್ಪರ್ಯ :-** ಭಗವಂತನ ಅಪ್ಪಣೆಯಂತೆ ಅವನ ಸೇವೆಗಾಗಿ ದೇವತೆಗಳು ಭೂಮಿಯಲ್ಲಿ ಅವತರಿಸಿದರು. ಕೆಲವರು ಭಗವಂತನು ಅವತರಿಸುವ ಮುನ್ನ ವಾನರರಾಗಿ ಅವತರಿಸಿದರೆ, ಲಕ್ಷ್ಮಣನೇ ಮೊದಲಾದವರು ಭಗವಂತನ ಅನಂತರ ಮಾನವರಾಗಿ ಅವತರಿಸಿದರು. ಅಸುರಜಾತಿಯಲ್ಲಿ ಹುಟ್ಟಿದ ವಿಭೀಷಣನನ್ನು ವ್ಯಾವೃತ್ತಿ ಮಾಡಲು ''ನರೇಷು'' ಎಂದು ಹೇಳಲಾಗಿದೆ. ॥ ೬೫ ॥

ಸ ದೇವತಾನಾಂ ಪ್ರಥಮೋ ಗುಣಾಧಿಕೋ
ಬಭೂವ ನಾಮ್ನಾ ಹನುಮಾನ್ ಪ್ರಭಂಜನಃ ।
ಸ್ವಸಂಭವಃ ಕೇಸರಿಣೋ ಗೃಹೇ ಪ್ರಭುಃ
ಬಭೂವ ವಾಲೀ ಸ್ವತ ಏವ ವಾಸವಃ ॥ ೬೬ ॥

**ಅರ್ಥ** :- **ದೇವತಾನಾಂ** ದೇವತೆಗಳ ಮಧ್ಯದಲ್ಲಿ, **ಪ್ರಥಮಃ** ಮೊದಲಿಗನಾದ **ಗುಣಾಧಿಕಃ** ಗುಣಗಳಿಂದ ಹಿರಿಯನಾದ, **ಪ್ರಭುಃ** ಸಮರ್ಥನಾದ, **ಸಃ** ಆ, **ಪ್ರಭಂಜನಃ** ವಾಯುದೇವನು, **ಕೇಸರಿಣಃ** ಮರುತ್ ಶ್ರೇಷ್ಠನ ಅವತಾರನಾದ 'ಕೇಸರೀ' ಎಂಬ ಕಪಿಯ, **ಗೃಹೇ** ಮಡದಿಯಾದ ಅಂಜನಾದೇವಿಯಲ್ಲಿ, **ಸ್ವಸಂಭವಃ** ತನ್ನ ಇಚ್ಛೆಯಿಂದಲೇ ಉತ್ಪತ್ತಿಯುಳ್ಳವನಾಗಿ ಅಥವಾ ಸ್ವತಂತ್ರನಾದ ಪರಮಾತ್ಮನ ಆಜ್ಞೆಯಿಂದಲೆ ಉತ್ಪತ್ತಿಯುಳ್ಳವನಾಗಿ, **ನಾಮ್ನಾ** ಹೆಸರಿನಿಂದ, **ಹನುಮಾನ್** ಹನುಮಂತನಾಗಿ, **ಬಭೂವ** ಅವತರಿಸಿದನು, **ವಾಸವಃ** ಇಂದ್ರನು, ಸ್ವತ ಏವ ತನ್ನ ಇಚ್ಛೆಯಿಂದಲೆ ಅಥವಾ ಸ್ವತಂತ್ರನಾದ ಹರಿಯ ಆಜ್ಞೆಯಿಂದಲೇ, **ವಾಲೀ** ವಾಲಿಯಾಗಿ, **ಬಭೂವ** ಅವತರಿಸಿದನು.

**ತಾತ್ಪರ್ಯ** :- ದೇವತೆಗಳಲ್ಲಿ ಅಗ್ರಗಣ್ಯನಾದ, ಜ್ಞಾನಾನಂದಾದಿಗುಣಗಳಿಂದ ಅಧಿಕನಾದ ವಾಯುದೇವನು ತನ್ನ ಇಚ್ಛೆಯಿಂದ, ಸ್ವತಂತ್ರನಾದ ಪರಮಾತ್ಮನ ಆಜ್ಞೆಯಿಂದಲೆ ಮರುತ್ ಶ್ರೇಷ್ಠರೊಬ್ಬನ ಅವತಾರನಾದ ಕೇಸರಿಯ ಸತಿಯಾದ ಅಂಜನೆಯಲ್ಲಿ ಹನುಮಂತನೆಂಬ ಹೆಸರಿನಿಂದ ಅವತಾರ ಮಾಡಿದನು : ಇಂದ್ರನು ಸ್ವತಂತ್ರನಾದ ಪರಮಾತ್ಮನ ಇಚ್ಛೆಯಿಂದ ವಾಲಿಯಾಗಿ ಅವತಾರ ಮಾಡಿದನು.

ಸುಗ್ರೀವ ಆಸೀತ್ಪರಮೇಷ್ಠಿತೇಜಸಾ
ಯುತೋ ರವಿಃ ಸ್ವಾತ್ಮತ ಏವ ಜಾಂಬವಾನ್ ।
ಯ ಏವ ಪೂರ್ವಂ ಪರಮೇಷ್ಠಿ ವಕ್ಷಸಃ
ತ್ವಗುದ್ಭವೋ ಧರ್ಮ ಇಹಾऽಸ್ಯತೋऽಭವತ್ ॥ ೬೭ ॥

**ಅರ್ಥ** :- **ರವಿಃ** ಸೂರ್ಯನು, **ಪರಮೇಷ್ಠಿತೇಜಸಾ** ಬ್ರಹ್ಮದೇವರ ತೇಜಸ್ಸಿನಿಂದ, **ಯುತಃ ಸನ್** ಕೂಡಿದವನಾಗಿ, **ಸ್ವಾತ್ಮತಃ ಏವ** ತನ್ನ ಮನಸ್ಸಿನಿಂದಲೆ ಅಥವಾ ಸ್ವತಂತ್ರನಾದ ಪರಮಾತ್ಮನ ಆಜ್ಞೆಯಿಂದಲೆ, **ಸುಗ್ರೀವಃ**

ಸುಗ್ರೀವನಾಗಿ **ಆಸೀತ್** ಹುಟ್ಟಿದನು, **ಯಃ** ಯಾರು, **ಪೂರ್ವಂ** ಮೊದಲು, **ಪರಮೇಷ್ಠಿವಕ್ಷಸಃ** ಬ್ರಹ್ಮದೇವರ ವಕ್ಷಸ್ಥಲದ, **ತ್ವಗುದ್ಭವಃ** ತ್ವಗಿಂದ್ರಿಯದಿಂದ ಉತ್ಪತ್ತಿಯುಳ್ಳ, **ಧರ್ಮಃ** ಯಮಧರ್ಮನು, **ಸಃ ಏವ** ಅವನೇ, **ಇಹ** ಈ ರಾಮಾವತಾರ ಕಾಲದಲ್ಲಿ (ಬ್ರಹ್ಮನ ಆವೇಶದಿಂದ ಕೂಡಿದವನಾಗಿ) **ಆಸ್ಯತಃ** ಬ್ರಹ್ಮದೇವರ ಮುಖದಿಂದ, **ಅಭವತ್** ಹುಟ್ಟಿದನು.

**ತಾತ್ಪರ್ಯ** :- ಸೂರ್ಯನು ಬ್ರಹ್ಮದೇವರ ಆವೇಶದಿಂದ ಕೂಡಿದವನಾಗಿ ಭಗವದಾಜ್ಞಾನುಸಾರವಾಗಿಯೇ ತನ್ನ ಇಚ್ಛೆಯಿಂದ ಸುಗ್ರೀವನಾಗಿ ಹುಟ್ಟಿದನು. ಬ್ರಹ್ಮದೇವರ ವಕ್ಷಸ್ಥಲದ ತ್ವಗಿಂದ್ರಿಯದಿಂದ ಹುಟ್ಟಿದ ಯಮನು ರಾಮಾವತಾರ ಕಾಲದಲ್ಲಿ ಹರಿಯ ಆಜ್ಞೆಯಿಂದ ಬ್ರಹ್ಮದೇವರ ಮುಖದಿಂದ ಅವತರಿಸಿದನು. ॥ ೬೭ ॥

**ಯ ಏವ ಸೂರ್ಯಾತ್ ಪುನರೇವ ಸಂಜ್ಞಯಾ**
**ನಾಮ್ನಾ ಯಮೋ ದಕ್ಷಿಣದಿಕ್ಪ ಆಸೀತ್ ।**
**ಸ ಜಾಂಬವಾನ್ ದೈವತಕಾರ್ಯದರ್ಶಿನಾ**
**ಪುರೈವ ಸೃಷ್ಟೋ ಮುಖತಃ ಸ್ವಯಂಭುವಾ ॥ ೬೮ ॥**

**ಅರ್ಥ** :- **ಯಃ ಏವ** ಯಾವಾತನೇ, **ಸೂರ್ಯಾತ್** ಸೂರ್ಯನ ದೆಸೆಯಿಂದ, **ಸಂಜ್ಞಯಾ** ಸಂಜ್ಞಾದೇವಿಯಿಂದ, **ಪುನರೇವ** ಮತ್ತೊಮ್ಮೆ **ನಾಮ್ನಾ** ಹೆಸರಿನಿಂದ, **ಯಮಃ** ಯಮನಾಗಿ, **ದಕ್ಷಿಣದಿಕ್ಪಃ** ದಕ್ಷಿಣ ದಿಕ್ಪಾಲಕನಾಗಿ, **ಆಸೀತ್** ಆಗಿದ್ದನೋ, **ಸಃ** ಆ, **ಜಾಂಬವಾನ್** ಜಾಂಬವಂತನು, **ದೈವತಕಾರ್ಯದರ್ಶಿನಾ** ದೇವತೆಗಳ ಕಾರ್ಯವನ್ನು ಪರಿಶೀಲಿಸುವ, **ಸ್ವಯಂಭುವಾ** ಬ್ರಹ್ಮದೇವರಿಂದ **ಪುರಾ ಏವ** ಮೊದಲೇ, **ಮುಖತಃ** ಮುಖದಿಂದ, **ಸೃಷ್ಟಃ** ಸೃಷ್ಟಿಸಲ್ಪಟ್ಟನು.

**ತಾತ್ಪರ್ಯ** :- ಬ್ರಹ್ಮದೇವನ ಮುಖದಿಂದ ಒಮ್ಮೆ ಹುಟ್ಟಿದ ಜಾಂಬವಂತನು ಸೂರ್ಯನಿಂದ ಸಂಜ್ಞಾದೇವಿಯಲ್ಲಿ ಮತ್ತೊಮ್ಮೆ ಹುಟ್ಟಿ ಯಮನೆಂದು ಪ್ರಸಿದ್ಧನಾಗಿ ದಕ್ಷಿಣ ದಿಕ್ಪಾಲಕನಾಗಿದ್ದನು.

**ಬ್ರಹ್ಮೋದ್ಭವಃ ಸೋಮ ಉತಾಸ್ಯ ಸೂನೋಃ**
**ಅತ್ರೇರಭೂತ್ ಸೋಽಙ್ಗದ ಏವ ಜಾತಃ ।**

**ಬೃಹಸ್ಪತಿಸ್ತಾರ ಉತೋ ಶಚೀ ಚ**
**ಶಕ್ರಸ್ಯ ಭಾರ್ಯೈವ ಬಭೂವ ತಾರಾ ॥ ೬೯ ॥**

**ಅರ್ಥ :-** **ಯಃ** ಯಾರು, **ಪೂರ್ವಂ** ಮೊದಲು, **ಬ್ರಹ್ಮೋದ್ಭವಃ** ಬ್ರಹ್ಮದೇವರ ಕಿವಿಯಿಂದ ಉತ್ಪತ್ತಿವುಳ್ಳ, **ಸೋಮಃ** ಚಂದ್ರನು, **ಉತ** ಅನಂತರ, **ಅಸ್ಯ** ಈ ಬ್ರಹ್ಮನ, **ಸೂನೋಃ** ಮಗನಾದ, **ಅತ್ರೇಃ** ಅತ್ರಿಋಷಿಯಿಂದಲೂ ಕೂಡ, **ಅಭೂತ್** ಹುಟ್ಟಿದನೋ, **ಸಃ ಏವ** ಆ ಚಂದ್ರನೇ, **ಅಂಗದಃ** ಅಂಗದ ನಾಗಿ, **ಜಾತಃ** ಹುಟ್ಟಿದನು, **ಬೃಹಸ್ಪತಿಃ** ಬೃಹಸ್ಪತಿಯು, **ತಾರಃ** ತಾರ ಎಂಬ ಕಪಿಯು, **ಉತೋ** ಮತ್ತು, **ಶಕ್ರಸ್ಯ ಏವ** ಇಂದ್ರನದ್ದೇ **ಭಾರ್ಯಾ** ಹೆಂಡತಿಯಾದ **ಶಚೀ ಚ** ಶಚಿಯಾದರೋ, **ತಾರಾ** ತಾರಾ ಎಂಬುದಾಗಿ, **ಬಭೂವ** ಹುಟ್ಟಿದಳು.

**ತಾತ್ಪರ್ಯ :-** ಬ್ರಹ್ಮನ ಕಿವಿಯಿಂದ ಹುಟ್ಟಿದ ಸೋಮ ಬ್ರಹ್ಮನ ಮಗನಾದ ಅತ್ರಿಋಷಿಗಳ ಮಗನಾಗಿಯೂ ಹುಟ್ಟಿರುವನು. ಆ ಸೋಮನೇ ಈಗ ಅಂಗದ ನಾಗಿ ಹುಟ್ಟಿದನು. ಬೃಹಸ್ಪತಿಯು 'ತಾರ' ಎಂಬ ಕಪಿಯಾಗಿ ಹುಟ್ಟಿದನು. ಶಕ್ರನ ಪತ್ನಿಯಾದ ಶಚೀದೇವಿಯೇ ತಾರೆಯಾಗಿ ಹುಟ್ಟಿದಳು.

**ಬೃಹಸ್ಪತಿರ್ಬ್ರಹ್ಮಸುತೋಽಪಿ ಪೂರ್ವಂ**
**ಸಹೈವ ಶಚ್ಯಾ ಮನಸೋಽಭಿಜಾತಃ ।**
**ಬ್ರಹ್ಮೋದ್ಭವಸ್ಯಾಽಗಿರಸಃ ಸುತೋಽಭೂನ್**
**ಮಾರೀಚಜಸ್ಯೈವ ಶಚೀ ಪುಲೋಮ್ನಃ ॥ ೭೦ ॥**

**ಅರ್ಥ :-** **ಬೃಹಸ್ಪತಿಃ** ಬೃಹಸ್ಪತಿಯು, **ಪೂರ್ವಂ** ಮೊದಲು, **ಶಚ್ಯಾ ಸಹ** ಶಚೀದೇವಿಯಿಂದ ಕೂಡಿಕೊಂಡು, **ಮನಸಃ** ಬ್ರಹ್ಮದೇವರ ಮನಸ್ಸಿನಿಂದ, **ಜಾತಃ** ಹುಟ್ಟಿದನು, **ಇತಿ ಹೇತೋಃ** ಈ ಕಾರಣದಿಂದ, **ಬ್ರಹ್ಮಸುತಃ ಅಪಿ** ಬ್ರಹ್ಮದೇವರ ಮಗನಾಗಿದ್ದರೂ, **ಬ್ರಹ್ಮೋದ್ಭವಸ್ಯ** ಬ್ರಹ್ಮನಿಂದ ಹುಟ್ಟಿದ, **ಅಂಗಿರಸಃ** ಅಂಗಿರಸ್ ಋಷಿಗೆ, **ಸುತಃ** ಮಗನು, **ಅಭೂತ್** ಆದನು, **ಮಾರೀಚಜಸ್ಯ** ಮರೀಚಿಗಳ ಮಕ್ಕಳಾದ ಕಶ್ಯಪರಿಂದ ಹುಟ್ಟಿದ, **ಪುಲೋಮ್ನಃ** 'ಪುಲೋಮ' ಎಂಬ ಋಷಿಗೆ, **ಶಚೀ ಏವ** ಶಚೀದೇವಿಯೇ, **ಪೌಲೋಮೀ ಇತಿ** 'ಪೌಲೋಮೀ' ಎಂದು, **ಜಾತಾ** ಹುಟ್ಟಿದಳು.

**ತಾತ್ಪರ್ಯ** :ಮೊದಲು ಬೃಹಸ್ಪತಿಗಳು ಶಚೀದೇವಿಯಿಂದ ಕೂಡಿಕೊಂಡು ಬ್ರಹ್ಮದೇವರ ಮನಸ್ಸಿನಿಂದ ಹುಟ್ಟಿದರು. ಮತ್ತೊಮ್ಮೆ ಬ್ರಹ್ಮದೇವರ ಮಕ್ಕಳಾದ ಅಂಗೀರಸರ ಮಗನಾಗಿ ಹುಟ್ಟಿದರು. ಶಚೀದೇವೀ ಕಶ್ಯಪರ ಮಗನಾದ 'ಪುಲೋಮ' ಎಂಬ ಋಷಿಗಳ ಮಗಳಾಗಿ ಪೌಲೋಮೀ ಎಂಬ ಹೆಸರಿನಿಂದ ಹುಟ್ಟಿದಳು.

**ಸ ಏವ ಶಚ್ಯಾ ಸಹ ವಾನರೋಽಭೂತ್**
**ಸ್ವಸಂಭವೋ ದೇವಗುರುರ್ಬೃಹಸ್ಪತಿಃ ।**
**ಅಭೂತ್ ಸುಷೇಣೋ ವರುಣೋಽಶ್ವಿನೌ ಚ**
**ಬಭೂವತುಸ್ತೌ ವಿವಿದಶ್ಚ ಮೈಂದಃ ॥ ೭೧ ॥**

**ಅರ್ಥ** :- **ದೇವಗುರುಃ** ದೇವತೆಗಳ ಗುರುವಾದ, **ಸಃ ಏವ ಬೃಹಸ್ಪತಿಃ** ಅದೇ ಬೃಹಸ್ಪತಿಯು, **ಸ್ವಸಂಭವಃ ಸನ್** ಸ್ವೇಚ್ಛೆಯಿಂದ ಅಥವಾ ಸ್ವತಂತ್ರ ಪರಮಾತ್ಮನ ಆಜ್ಞೆಯಿಂದ ಉತ್ಪತ್ತಿವುಳ್ಳವನಾಗಿ, **ಶಚ್ಯಾ** ಶಚೀದೇವಿಯಿಂದ, **ಸಹ** ಕೂಡಿಕೊಂಡು, **ವಾನರಃ** ಕಪಿಯು, **ಅಭೂತ್** ಆದನು. **ವರುಣಃ** ವರುಣನು, **ಸುಷೇಣಃ** ಸುಷೇಣನು, **ಅಭೂತ್** ಆದನು, **ತೌ** ಆ, **ಅಶ್ವಿನೌ ಚ** ಅಶ್ವಿನೀದೇವತೆಗಳಾದರೋ, **ಮೈಂದಃ ವಿವಿದಃ ಚ** ವಿವಿದ ಮತ್ತು ಮೈಂದ ಎಂಬ ಕಪಿಗಳಾಗಿ, **ಬಭೂವತುಃ** ಆದರು.

**ತಾತ್ಪರ್ಯ** :- ದೇವಗುರುವಾದ ಬೃಹಸ್ಪತಿಯು ಶಚೀದೇವಿಯಿಂದ ಕೂಡಿಕೊಂಡು ಸ್ವೇಚ್ಛೆಯಿಂದ ಭಗವದಾಜ್ಞಾನುಸಾರಿಗಳಾಗಿ ಕಪಿಗಳಾಗಿ ಅವತರಿಸಿದರು. ವರುಣನು ಸುಷೇಣನಾದನು. ಅಶ್ವಿನೀದೇವತೆಗಳು ಮೈಂದ, ವಿವಿದವಾಗಿ ಹುಟ್ಟಿದರು.

**ಬ್ರಹ್ಮೋದ್ಭವೌ ತೌ ಪುನರೇವ ಸೂರ್ಯಾದ್**
**ಬಭೂವತುಸ್ತತ್ರ ಕನೀಯಸಸ್ತು ।**
**ಆವೇಶ ಐಂದ್ರೋ ವರದಾನತೋಽಭೂತ್**
**ತತೋ ಬಲೀಯಾನ್ ವಿವಿದೋ ಹಿ ಮೈಂದಾತ್ ॥ ೭೨ ॥**

**ಅರ್ಥ** :- **ಬ್ರಹ್ಮೋದ್ಭವೌ** ಬ್ರಹ್ಮನ ಮೂಗಿನ ಹೊಳ್ಳೆಗಳಿಂದ ಹುಟ್ಟಿದ, **ತೌ** ಆ ಅಶ್ವಿನೀದೇವತೆಗಳು, **ಪುನರೇವ** ಮತ್ತೊಮ್ಮೆ **ಸೂರ್ಯಾತ್**

ಸೂರ್ಯನ ದೆಸೆಯಿಂದ ಹೆಣ್ಣು ಕುದುರೆಯ ರೂಪದ ಸಂಜ್ಞಾದೇವಿಯಲ್ಲಿ, **ಬಭೂವತುಃ** ಹುಟ್ಟಿದರು, **ತತ್ರ** ಅವರಿಬ್ಬರ ಮಧ್ಯದಲ್ಲಿ, **ಕನೀಯಸಃ ತು** ಕನಿಷ್ಠನಾದ ವಿವಿದನಿಗಾದರೋ, **ವರದಾನತಃ** ವರಪ್ರದಾನದಿಂದ, **ಐಂದ್ರಃ** ಇಂದ್ರ ಸಂಬಂಧಿಯಾದ, **ಆವೇಶಃ** ಆವೇಶವು, **ಅಭೂತ್** ಇತ್ತು, **ತತಃ** ಆ ಇಂದ್ರಾವೇಶದಿಂದ, **ವಿವಿದಃ** ವಿವಿದನು, **ಮೈಂದಾತ್** ಮೈಂದನಿಗಿಂತಲೂ **ಬಲಿಯಾನ್** ಬಲಿಷ್ಠನು, ಹಿ ಕೃಷ್ಣಾವತಾರ ಕಾಲದಲ್ಲಿ ನರಕಾಸುರನ ಸಹಾಯ ದಲ್ಲಿ ಬಹಳ ಪರಾಕ್ರಮವನ್ನು ತೋರಿಸಿದ್ದರಿಂದ ಬಲಿಷ್ಠತೆಯು ಪ್ರಸಿದ್ಧವು.

**ತಾತ್ಪರ್ಯ** :- ಮೊದಲು ಬ್ರಹ್ಮದೇವರ ಮೂಗಿನಿಂದ ಉತ್ಪನ್ನರಾದ ಅಶ್ವಿನೀದೇವತೆಗಳು ಸೂರ್ಯನಿಂದ, ಕುದುರೆ ರೂಪವನ್ನು ಧರಿಸಿದ್ದ ಆತನ ಪತ್ನಿಯಾದ ಸಂಜ್ಞಾದೇವಿಯಲ್ಲಿ ಇನ್ನೊಮ್ಮೆ ಹುಟ್ಟಿದರು. ಅವರೇ ಈಗ ಮೈಂದ ವಿವಿದರಾಗಿ ಹುಟ್ಟಿದರು. ಅದರಲ್ಲಿ ವಿವಿದನಿಗೆ ವಲಬಲದಿಂದ ಇಂದ್ರಾವೇಶ ವಿತ್ತು. ಆದುದರಿಂದಲೆ ಅಣ್ಣನಾದ ಮೈಂದನಿಗಿಂತ ವಿವಿದನು ಬಲಿಷ್ಠನು.

**ನೀಲೋಽಗ್ನಿರಾಸೀತ್ ಕಮಲೋದ್ಭವೋತ್ಥಃ**
**ಕಾಮಃ ಪುನಃ ಶ್ರೀರಮಣಾದ್ ರಮಾಯಾಮ್ ।**
**ಪ್ರದ್ಯುಮ್ನನಾಮಾಽಭವದೇವಮೀಶಾತ್**
**ಸ ಸ್ಕಂದತಾಮಾಪ ಸ ಚಕ್ರತಾಂ ಚ ॥ ೭೩ ॥**

**ಅರ್ಥ** :- **ಕಮಲೋದ್ಭವೋತ್ಥಃ** ಬ್ರಹ್ಮನ ಮುಖದಿಂದ ಹುಟ್ಟಿದ, **ಅಗ್ನಿಃ** ಅಗ್ನಿಯು, **ನೀಲಃ** ನೀಲನಾಮಕ ಕಪಿಯು, **ಆಸೀತ್** ಆದನು, **ಕಮಲೋದ್ಭ ವೋತ್ಥಃ** ಬ್ರಹ್ಮದೇವರ ಮನಸ್ಸಿನಿಂದ ಹುಟ್ಟಿದ, **ಕಾಮಃ** ಕಾಮನು, **ಪುನಃ** ಮತ್ತೊಮ್ಮೆ **ಶ್ರೀರಮಣಾತ್** ಶ್ರೀಕೃಷ್ಣನ ದೆಸೆಯಿಂದ, **ರಮಾಯಾಂ** ರಮಾದೇವಿಯ ಅವತಾರಳಾದ ರುಕ್ಮಿಣೀದೇವಿಯಲ್ಲಿ, **ಪ್ರದ್ಯುಮ್ನನಾಮಾ** ಪ್ರದ್ಯುಮ್ನ ಎಂಬ ಹೆಸರುಳ್ಳವನಾಗಿ, **ಅಭವತ್** ಹುಟ್ಟಿದನು, **ಏವಂ** ಹೀಗೆಯೇ, **ಸಃ** ಆ ಕಾಮನು, **ಈಶಾತ್** ರುದ್ರದೇವರಿಂದ, **ಸ್ಕಂದತಾಂ** ಸ್ಕಂದತ್ವವನ್ನು, **ಆಪ** ಹೊಂದಿದನು, **ಸಃ** ಅದೇ ಕಾಮನು, **ಚಕ್ರತಾಂ ಚ** ಹರಿಯ ಚಕ್ರಾಭಿಮಾನಿತ್ವ ವನ್ನು ಕೂಡ, **ಆಪ** ಹೊಂದಿದನು.

**ತಾತ್ಪರ್ಯ** :- ಬ್ರಹ್ಮದೇವರ ಮುಖದಿಂದ ಹುಟ್ಟಿದ ಅಗ್ನಿ 'ನೀಲ' ಎಂಬ ಕಪಿಯಾಗಿ ಅವತರಿಸಿದನು. ಬ್ರಹ್ಮದೇವರ ಮನಸ್ಸಿನಿಂದ ಹುಟ್ಟಿದ ಕಾಮ

ಶ್ರೀಕೃಷ್ಣನಿಂದ ರುಗ್ಮಿಣಿಯಲ್ಲಿ ಪ್ರದ್ಯುಮ್ನನಾಗಿ ಹುಟ್ಟಿದನು. ಹೀಗೆಯೇ ರುದ್ರದೇವರಿಂದ ಸ್ಕಂದನಾಗಿ ಹುಟ್ಟಿದನು. ಹಾಗೆಯೇ ಶ್ರೀಹರಿಯ ಚಕ್ರಕ್ಕೆ ಅಭಿಮಾನಿಯೂ ಆದನು. ಚಕ್ರಪದವಾಚ್ಯನೂ ಆದನು.

**ಪೂರ್ವಂ ಹರೇಶ್ಚಕ್ರಮಭೂದ್ಧಿ ದುರ್ಗಾ**
**ತಮಸ್ಥಿತಾ ಶ್ರೀರಿತಿ ಯಾಂ ವದಂತಿ ।**
**ಸತ್ತ್ವಾತ್ಮಿಕಾ ಶಙ್ಖಮಥೋ ರಜಸ್ಥಾ**
**ಭೂರ್ನಾಮಿಕಾ ಪದ್ಮಮಭೂದ್ಧರೇರ್ಹಿ ॥ ೭೪ ॥**

**ಅರ್ಥ** :- **ಪೂರ್ವಂ** ಮೊದಲು, **ತಮಃಸ್ಥಿತಾ** ತಮೋಗುಣಕ್ಕೆ ಅಭಿಮಾನಿನಿಯಾದ, **ದುರ್ಗಾ** ದುರ್ಗೆಯು, **ಹರೇಃ** ಶ್ರೀಹರಿಯ, **ಚಕ್ರಂ** ಚಕ್ರಾಭಿಮಾನಿನಿಯು, ಚಕ್ರಶಬ್ದವಾಚ್ಯಳು, **ಅಭೂತ್ ಹಿ** ಆದಳಷ್ಟೆ **ಯಾಂ** ಯಾರನ್ನು, **ಶ್ರೀಃ ಇತಿ** 'ಶ್ರೀ' ಎಂದು, **ವದಂತಿ** ಹೇಳುವರೋ, **ಸಾ** ಅವಳು, **ಸತ್ತ್ವಾತ್ಮಿಕಾ ಸತೀ** ಸತ್ತ್ವಾತ್ಮಕಳಾಗಿ (ಸತ್ತ್ವಗುಣಾಭಿಮಾನಿನಿಯಾಗಿ), **ಶಂಖಂ** ಶಂಖಾಭಿಮಾನಿನಿಯು ಶಂಖಶಬ್ದವಾಚ್ಯಳೂ, **ಅಭೂತ್** ಆದಳು, **ರಜಸ್ಥಾ** ರಜೋಗುಣಕ್ಕೆ ಅಭಿಮಾನಿನಿಯಾದ, **ಭೂರ್ನಾಮಿಕಾ** 'ಭೂಃ' ಎಂಬ ಹೆಸರಿನವಳಾಗಿ, **ಹರೇಃ** ಶ್ರೀಹರಿಯ, **ಪದ್ಮಂ** ಪದ್ಮಕ್ಕೆ ಅಭಿಮಾನಿನಿಯು ಪದ್ಮಶಬ್ದ ವಾಚ್ಯಳು, **ಅಭೂತ್** ಆದಳು, **ಹಿ** ಇದು ಪ್ರಮಾಣಪ್ರಸಿದ್ಧವು.

**ತಾತ್ಪರ್ಯ** :- ಮೊದಲು ತಮೋಗುಣಕ್ಕೆ ಅಭಿಮಾನಿನಿಯಾದ ದುರ್ಗಾ ದೇವಿಯೆಂಬ ಹೆಸರಿನ ಲಕ್ಷ್ಮೀದೇವಿಯು ಭಗವಂತನ ಚಕ್ರಕ್ಕೆ ಅಭಿಮಾನಿನಿ ಯಾದಳು. ಚಕ್ರದಲ್ಲಿ ಇದ್ದವಳಾಗಿ 'ಚಕ್ರ' ಎಂಬ ಹೆಸರುಳ್ಳವಳಾದಳು. ಆ ಲಕ್ಷ್ಮೀದೇವಿಯೇ ಸತ್ತ್ವಗುಣದ ಅಭಿಮಾನಿನಿಯಾಗಿ 'ಶ್ರೀ' ಎಂಬ ಹೆಸರಿನಿಂದ ಪ್ರಸಿದ್ಧಳಾಗಿ ಶ್ರೀಹರಿಯ ಶಂಖಕ್ಕೆ ಅಭಿಮಾನಿನಿಯಾಗಿ ಶಂಖದಲ್ಲಿ ಸನ್ನಿಹಿತಳಾಗಿ ಶಂಖ ಎಂಬ ಹೆಸರಿನವಳಾದಳು. ರಜೋಗುಣಕ್ಕೆ ಅನಿಮಾನಿನಿಯಾಗಿ 'ಭೂ' ನಾಮಕಳಾದ ಲಕ್ಷ್ಮೀದೇವಿಯು ಭಗವಂತನ ಕೈಯಲ್ಲಿರುವ ಪದ್ಮದ ಅಭಿಮಾನಿ ನಿಯಾಗಿ ಪದ್ಮದಲ್ಲಿ ಸನ್ನಿಹಿತಳಾಗಿ 'ಪದ್ಮ' ಎಂಬ ಪದದಿಂದ ವಾಚ್ಯಳಾದಳು.

**ವಿಶೇಷ ವಿಷಯ** :- ಹಿಂದೆ ಕಾಮನು ಭಗವಂತನ ಚಕ್ರಕ್ಕೆ ಅಭಿಮಾನಿ ಎಂದು ತಿಳಿಸಲಾಯಿತು. ಬ್ರಹ್ಮಪ್ರಲಯದಲ್ಲಿ ಕಾಮನೇ ಇರದ ಕಾರಣ

ಅವನಿಂದ ಅಭಿಮನ್ಯವಾದ ಚಕ್ರವೂ ಇರುವುದಿಲ್ಲವೇ ಎಂಬ ಶಂಕೆಯನ್ನು ಈ ಶ್ಲೋಕದಲ್ಲಿ ಪರಿಹರಿಸಲಾಗಿದೆ. ಮೊದಲು ಲಕ್ಷ್ಮೀದೇವಿಯು ಚಕ್ರಕ್ಕೆ ಅಭಿಮಾನಿನಿಯಾದುದರಿಂದ, ಪ್ರಲಯ ಕಾಲದಲ್ಲಿ ಲಕ್ಷ್ಮೀದೇವಿಗೆ ನಾಶವಿರದ ಕಾರಣ ಆಗ ಚಕ್ರವೂ ಇರುತ್ತದೆ.

ಭಗವಂತನ ಚಕ್ರಕ್ಕೆ ಲೌಕಿಕವಾದ ಕಬ್ಬಿಣದ ಚಕ್ರದ ನೀಲವರ್ಣದ ಹೋಲಿಕೆಯು ಹೊಂದಲು ನೀಲ (ಕಪ್ಪು) ವರ್ಣದ ತಮೋಗುಣದ ಅಭಿಮಾನಿನಿಯಾದ ದುರ್ಗೆಯನ್ನೇ ಅಭಿಮಾನಿನಿಯನ್ನಾಗಿ ತಿಳಿಸಲಾಗಿದೆ. ಹಾಗೆಯೇ ಶಂಖವು ಬಿಳಿಯ ಬಣ್ಣವಾದುದರಿಂದ ಬಿಳಿಯ ಬಣ್ಣದ ಸತ್ತ್ವಗುಣದ ಅಭಿಮಾನಿನಿಯಾದ ಶ್ರೀದೇವಿಯನ್ನೇ ಶಂಖಕ್ಕೆ ಅಭಿಮಾನಿನಿಯನ್ನಾಗಿ ತಿಳಿಸಿದೆ. ಅದರಂತೆ ಪದ್ಮವು ಕೆಂಪು ಬಣ್ಣವುಳ್ಳದ್ದಾದುರಿಂದ ಕೆಂಪು ಬಣ್ಣದ ರಜೋಗುಣದ ಅಭಿಮಾನಿನಿಯಾದ 'ಭೂ' ದೇವಿಯನ್ನೇ ಪದ್ಮಕ್ಕೆ ಅಭಿಮಾನಿನಿಯನ್ನಾಗಿ ಹೇಳಲಾಗಿದೆ.

**ಗತಾ ತು ವಾಯುರ್ಬಲಸಂವಿದಾತ್ಮಾ**
**ಶಾರ್ಙ್ಗಶ್ಚ ವಿದ್ಯೇತಿ ರಮೈವ ಖಡ್ಗಃ ।**
**ದುರ್ಗಾತ್ಮಿಕಾ ಸೈವ ಚ ಚರ್ಮನಾಮ್ನೀ**
**ಪಂಚಾತ್ಮಕೋ ಮಾರುತ ಏವ ಬಾಣಾಃ ॥ ೭೫ ॥**

**ಅರ್ಥ : ಬಲಸಂವಿದಾತ್ಮಾ** ಬಲ, ಜ್ಞಾನಸ್ವರೂಪರಾದ, **ವಾಯುಃ ತು** ವಾಯುದೇವನಾದರೋ, **ಗದಾ** ಗದೆಗೆ ಅಭಿಮಾನಿಯು, ಗದಾಶಬ್ದವಾಚ್ಯನು, **ಯಾ** ಯಾರು, 'ವಿದ್ಯಾ' ಇತಿ ವಿದ್ಯೆಗೆ ಅಭಿಮಾನಿನಿಯಾಗಿ ವಿದ್ಯೆ ಎಂದು ಪ್ರಸಿದ್ಧಳಾಗಿರುವಳೋ, **ಸಾ** ಆ, **ರಮಾ ಏವ** ಲಕ್ಷ್ಮೀದೇವಿಯೇ, **ಶಾರ್ಙ್ಗಃ ಚ** ಶಾರ್ಙ್ಗಧನುಸ್ಸಿಗೆ ಅಭಿಮಾನಿನಿಯು, ಶಾರ್ಙ್ಗಶಬ್ದವಾಚ್ಯಳು, **ದುರ್ಗಾತ್ಮಿಕಾ** ದುರ್ಗಾರೂಪಳಾದ, **ರಮಾ ಏವ** ಲಕ್ಷ್ಮೀದೇವಿಯೇ, **ಖಡ್ಗಃ** ಖಡ್ಗಕ್ಕೆ ಅಭಿಮಾನಿನಿಯು 'ಖಡ್ಗ'ದಲ್ಲಿದ್ದು ಖಡ್ಗಶಬ್ದವಾಚ್ಯಳಾಗಿರುವಳು, **ಸಾ ಏವ** ಆ ದುರ್ಗೆಯೇ, **ಚರ್ಮನಾಮ್ನೀ ಚ** ಚರ್ಮಕ್ಕೆ ಅಭಿಮಾನಿಯು, ಚರ್ಮ ನಾಮಕಳು, **ಪಂಚಾತ್ಮಕಃ** ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ ಎಂದು ಐದು ರೂಪನಾದ, **ಮಾರುತಃ ಏವ** ವಾಯುದೇವನೆ, **ಬಾಣಾಃ** ಬಾಣಗಳಲ್ಲಿರುವವನು, ಬಾಣಶಬ್ದವಾಚ್ಯನು, ಬಾಣಗಳಿಗೆ ಅಭಿಮಾನಿಯು.

ಶ್ರೀಕೃಷ್ಣನಿಂದ ರುಗ್ಮಿಣಿಯಲ್ಲಿ ಪ್ರದ್ಯುಮ್ನನಾಗಿ ಹುಟ್ಟಿದನು. ಹೀಗೆಯೇ ರುದ್ರದೇವರಿಂದ ಸ್ಕಂದನಾಗಿ ಹುಟ್ಟಿದನು. ಹಾಗೆಯೇ ಶ್ರೀಹರಿಯ ಚಕ್ರಕ್ಕೆ ಅಭಿಮಾನಿಯೂ ಆದನು. ಚಕ್ರಪದವಾಚ್ಯನೂ ಆದನು.

**ಪೂರ್ವಂ ಹರೇಶ್ಚಕ್ರಮಭೂದ್ಧಿ ದುರ್ಗಾ**
**ತಮಸ್ಥಿತಾ ಶ್ರೀರಿತಿ ಯಾಂ ವದಂತಿ ।**
**ಸತ್ತ್ವಾತ್ಮಿಕಾ ಶಙ್ಖಮಥೋ ರಜಸ್ಥಾ**
**ಭೂರ್ನಾಮಿಕಾ ಪದ್ಮಮಭೂದ್ಧರೇರ್ಹಿ ॥ ೭೪ ॥**

**ಅರ್ಥ** :- **ಪೂರ್ವಂ** ಮೊದಲು, **ತಮಃಸ್ಥಿತಾ** ತಮೋಗುಣಕ್ಕೆ ಅಭಿಮಾನಿನಿಯಾದ, **ದುರ್ಗಾ** ದುರ್ಗೆಯು, **ಹರೇಃ** ಶ್ರೀಹರಿಯ, **ಚಕ್ರಂ** ಚಕ್ರಾಭಿಮಾನಿನಿಯು, ಚಕ್ರಶಬ್ದವಾಚ್ಯಳು, **ಅಭೂತ್ ಹಿ** ಆದಳಷ್ಟೆ **ಯಾಂ** ಯಾರನ್ನು **ಶ್ರೀಃ ಇತಿ** 'ಶ್ರೀ' ಎಂದು, **ವದಂತಿ** ಹೇಳುವರೋ, **ಸಾ** ಅವಳು, **ಸತ್ತ್ವಾತ್ಮಿಕಾ ಸತೀ** ಸತ್ತ್ವಾತ್ಮಕಳಾಗಿ (ಸತ್ತ್ವಗುಣಾಭಿಮಾನಿನಿಯಾಗಿ), **ಶಂಖಂ** ಶಂಖಾಭಿಮಾನಿನಿಯು ಶಂಖಶಬ್ದವಾಚ್ಯಳೂ, **ಅಭೂತ್** ಆದಳು, **ರಜಸ್ಥಾ** ರಜೋಗುಣಕ್ಕೆ ಅಭಿಮಾನಿನಿಯಾದ, **ಭೂರ್ನಾಮಿಕಾ** 'ಭೂಃ' ಎಂಬ ಹೆಸರಿನವಳಾಗಿ, **ಹರೇಃ** ಶ್ರೀಹರಿಯ, **ಪದ್ಮಂ** ಪದ್ಮಕ್ಕೆ ಅಭಿಮಾನಿನಿಯು ಪದ್ಮಶಬ್ದ ವಾಚ್ಯಳು, **ಅಭೂತ್** ಆದಳು, **ಹಿ** ಇದು ಪ್ರಮಾಣಪ್ರಸಿದ್ಧವು.

**ತಾತ್ಪರ್ಯ** :- ಮೊದಲು ತಮೋಗುಣಕ್ಕೆ ಅಭಿಮಾನಿನಿಯಾದ ದುರ್ಗಾ ದೇವಿಯೆಂಬ ಹೆಸರಿನ ಲಕ್ಷ್ಮೀದೇವಿಯು ಭಗವಂತನ ಚಕ್ರಕ್ಕೆ ಅಭಿಮಾನಿನಿ ಯಾದಳು. ಚಕ್ರದಲ್ಲಿ ಇದ್ದವಳಾಗಿ 'ಚಕ್ರ' ಎಂಬ ಹೆಸರುಳ್ಳವಳಾದಳು. ಆ ಲಕ್ಷ್ಮೀದೇವಿಯೇ ಸತ್ತ್ವಗುಣದ ಅಭಿಮಾನಿನಿಯಾಗಿ 'ಶ್ರೀ' ಎಂಬ ಹೆಸರಿನಿಂದ ಪ್ರಸಿದ್ಧಳಾಗಿ ಶ್ರೀಹರಿಯ ಶಂಖಕ್ಕೆ ಅಭಿಮಾನಿನಿಯಾಗಿ ಶಂಖದಲ್ಲಿ ಸನ್ನಿಹಿತಳಾಗಿ ಶಂಖ ಎಂಬ ಹೆಸರಿನವಳಾದಳು. ರಜೋಗುಣಕ್ಕೆ ಅನಿಮಾನಿನಿಯಾಗಿ 'ಭೂ' ನಾಮಕಳಾದ ಲಕ್ಷ್ಮೀದೇವಿಯು ಭಗವಂತನ ಕೈಯಲ್ಲಿರುವ ಪದ್ಮದ ಅಭಿಮಾನಿ ನಿಯಾಗಿ ಪದ್ಮದಲ್ಲಿ ಸನ್ನಿಹಿತಳಾಗಿ 'ಪದ್ಮ' ಎಂಬ ಪದದಿಂದ ವಾಚ್ಯಳಾದಳು.

**ವಿಶೇಷ ವಿಷಯ** :- ಹಿಂದೆ ಕಾಮನು ಭಗವಂತನ ಚಕ್ರಕ್ಕೆ ಅಭಿಮಾನಿ ಎಂದು ತಿಳಿಸಲಾಯಿತು. ಬ್ರಹ್ಮಪ್ರಲಯದಲ್ಲಿ ಕಾಮನೇ ಇರದ ಕಾರಣ

ಅವನಿಂದ ಅಭಿಮನ್ಯವಾದ ಚಕ್ರವೂ ಇರುವುದಿಲ್ಲವೇ ಎಂಬ ಶಂಕೆಯನ್ನು ಈ ಶ್ಲೋಕದಲ್ಲಿ ಪರಿಹರಿಸಲಾಗಿದೆ. ಮೊದಲು ಲಕ್ಷ್ಮೀದೇವಿಯು ಚಕ್ರಕ್ಕೆ ಅಭಿಮಾನಿನಿಯಾದುದರಿಂದ, ಪ್ರಲಯ ಕಾಲದಲ್ಲಿ ಲಕ್ಷ್ಮೀದೇವಿಗೆ ನಾಶವಿರದ ಕಾರಣ ಆಗ ಚಕ್ರವೂ ಇರುತ್ತದೆ.

ಭಗವಂತನ ಚಕ್ರಕ್ಕೆ ಲೌಕಿಕವಾದ ಕಬ್ಬಿಣದ ಚಕ್ರದ ನೀಲವರ್ಣದ ಹೋಲಿಕೆಯು ಹೊಂದಲು ನೀಲ (ಕಪ್ಪು) ವರ್ಣದ ತಮೋಗುಣದ ಅಭಿಮಾನಿನಿಯಾದ ದುರ್ಗೆಯನ್ನೇ ಅಭಿಮಾನಿನಿಯನ್ನಾಗಿ ತಿಳಿಸಲಾಗಿದೆ. ಹಾಗೆಯೇ ಶಂಖವು ಬಿಳಿಯ ಬಣ್ಣವಾದುದರಿಂದ ಬಿಳಿಯ ಬಣ್ಣದ ಸತ್ತ್ವಗುಣದ ಅಭಿಮಾನಿನಿಯಾದ ಶ್ರೀದೇವಿಯನ್ನೇ ಶಂಖಕ್ಕೆ ಅಭಿಮಾನಿನಿಯನ್ನಾಗಿ ತಿಳಿಸಿದೆ. ಅದರಂತೆ ಪದ್ಮವು ಕೆಂಪು ಬಣ್ಣವುಳ್ಳದ್ದಾದುರಿಂದ ಕೆಂಪು ಬಣ್ಣದ ರಜೋಗುಣದ ಅಭಿಮಾನಿನಿಯಾದ 'ಭೂ' ದೇವಿಯನ್ನೇ ಪದ್ಮಕ್ಕೆ ಅಭಿಮಾನಿನಿಯನ್ನಾಗಿ ಹೇಳಲಾಗಿದೆ.

**ಗತಾ ತು ವಾಯುರ್ಬಲಸಂವಿದಾತ್ಮಾ**
**ಶಾರ್ಙ್ಗಶ್ಚ ವಿದ್ಯೇತಿ ರಮೈವ ಖಡ್ಗಃ ।**
**ದುರ್ಗಾತ್ಮಿಕಾ ಸೈವ ಚ ಚರ್ಮನಾಮ್ನೀ**
**ಪಂಚಾತ್ಮಕೋ ಮಾರುತ ಏವ ಬಾಣಾಃ ॥ ೭೫ ॥**

**ಅರ್ಥ :** **ಬಲಸಂವಿದಾತ್ಮಾ** ಬಲ, ಜ್ಞಾನಸ್ವರೂಪರಾದ, **ವಾಯುಃ ತು** ವಾಯುದೇವನಾದರೋ, **ಗದಾ** ಗದೆಗೆ ಅಭಿಮಾನಿಯು, ಗದಾಶಬ್ದವಾಚ್ಯನು, **ಯಾ** ಯಾರು, **'ವಿದ್ಯಾ'** ಇತಿ ವಿದ್ಯೆಗೆ ಅಭಿಮಾನಿನಿಯಾಗಿ ವಿದ್ಯೆ ಎಂದು ಪ್ರಸಿದ್ಧಳಾಗಿರುವಳೋ, **ಸಾ** ಆ, **ರಮಾ ಏವ** ಲಕ್ಷ್ಮೀದೇವಿಯೇ, **ಶಾರ್ಙ್ಗಃ ಚ** ಶಾರ್ಙ್ಗಧನುಸ್ಸಿಗೆ ಅಭಿಮಾನಿನಿಯು, ಶಾರ್ಙ್ಗಶಬ್ದವಾಚ್ಯಳು, **ದುರ್ಗಾತ್ಮಿಕಾ** ದುರ್ಗಾರೂಪಳಾದ, **ರಮಾ ಏವ** ಲಕ್ಷ್ಮೀದೇವಿಯೇ, **ಖಡ್ಗಃ** ಖಡ್ಗಕ್ಕೆ ಅಭಿಮಾನಿನಿಯು 'ಖಡ್ಗ'ದಲ್ಲಿದ್ದು ಖಡ್ಗಶಬ್ದವಾಚ್ಯಳಾಗಿರುವಳು, **ಸಾ ಏವ** ಆ ದುರ್ಗೆಯೇ, **ಚರ್ಮನಾಮ್ನೀ ಚ** ಚರ್ಮಕ್ಕೆ ಅಭಿಮಾನಿಯು, ಚರ್ಮನಾಮಕಳು, **ಪಂಚಾತ್ಮಕಃ** ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ ಎಂದು ಐದು ರೂಪನಾದ, **ಮಾರುತಃ ಏವ** ವಾಯುದೇವನೆ, **ಬಾಣಾಃ** ಬಾಣಗಳಲ್ಲಿರುವವನು, ಬಾಣಶಬ್ದವಾಚ್ಯನು, ಬಾಣಗಳಿಗೆ ಅಭಿಮಾನಿಯು.

**ತಾತ್ಪರ್ಯ** :ಬಲಜ್ಞಾನಸ್ವರೂಪರಾದ ವಾಯುದೇವರು ಶ್ರೀಹರಿಯು ಗದೆಗೆ ಅಭಿಮಾನಿಯು. ಯಾ ದೇವೀ ಸರ್ವಭೂತೇಷು ವಿದ್ಯಾರೂಪೇಣ ಸಂಸ್ಥಿತಾ'' ಎಲ್ಲರಲ್ಲಿ ವಿದ್ಯಾರೂಪಳಾಗಿರುವಳೆಂದು 'ವಿದ್ಯಾ' ನಾಮಕಳಾಗಿ ಪ್ರಸಿದ್ಧಳಾದ ರಮಾದೇವಿಯೇ ಶ್ರೀಹರಿಯ ಶಾರ್ಙ್ಗಧನುಸ್ಸಿನ ಅಭಿಮಾನಿನಿಯು. ದುರ್ಗಾತ್ಮಕಳಾದ ರಮೆಯೇ ಹರಿಯ ಖಡ್ಗಕ್ಕೆ ಅಭಿಮಾನಿನಿ. ಆ ದುರ್ಗೆಯೇ ಚರ್ಮ (ಗುರಾಣಿ)ಕ್ಕೆ, ಅಭಿಮಾನಿನಿಯು. ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ ಎಂಬ ಐದು ರೂಪದ ವಾಯುದೇವನೆ ಹರಿಯ ಬಾಣಕ್ಕೆ ಅಭಿಮಾನಿಯು.

**ಏವಂ ಸ್ಥಿತೇಷ್ವೇವ ಪುರಾತನೇಷು**
**ವರಾದ್ ರಥಾಙ್ಗತ್ವಮವಾಪ ಕಾಮಃ ।**
**ತತ್ಸೂನುತಾಮಾಪ ಚ ಸೋಽನಿರುದ್ಧೋ**
**ಬ್ರಹ್ಮೋದ್ಭವಃ ಶಙ್ಖತನುಃ ಪುಮಾತ್ಮಾ ॥ ೭೬ ॥**

**ಅರ್ಥ** :- **ಏವಂ** ಈ ವರೆಗೆ ಹೇಳಿದ ರೀತಿಯಿಂದ, **ಪುರಾತನೇಷು** ಹಿಂದಿನವರು, **ಸ್ಥಿತೇಷು ಏವ** ಅಭಿಮಾನಿಗಳಾಗಿರುವಾಗಲೆ, **ಕಾಮಃ** ಕಾಮನು, **ವರಾತ್** ವರದಿಂದ, **ರಥಾಙ್ಗತ್ವಂ** ಚಕ್ರಾಭಿಮಾನಿತ್ವವನ್ನು, **ಅವಾಪ** ಹೊಂದಿದನು, **ಬ್ರಹ್ಮೋದ್ಭವಃ** ಬ್ರಹ್ಮದೇವರಿಂದ ಉತ್ಪನ್ನವಾದ, **ಯಃ** ಯಾವ, **ಅನಿರುದ್ಧಃ** ಅನಿರುದ್ಧನೋ, **ಸಃ** ಅವನು **ತತ್ಸೂನುತಾಂ** (ಕೃಷ್ಣಾವತಾರದಲ್ಲಿ) ಪ್ರದ್ಯುಮ್ನನ ಸುತತ್ವವನ್ನು ಕೂಡ, **ಆಪ** ಪಡೆದನು, **ಪುಮಾತ್ಮಾ** ಪುರುಷರ (ಜೀವರ) ಅಭಿಮಾನಿಯಾದ, **ಸಃ** ಆ ಅನಿರುದ್ಧನು, **ಶಙ್ಖತನುಃ** ಶಙ್ಖದ ಅಭಿಮಾನಿಯು, **ಅಭೂತ್** ಆದನು.

**ತಾತ್ಪರ್ಯ** :- ರಮಾ, ಪ್ರಾಣರೆಲ್ಲ ಭಗವಂತನ ಚಕ್ರಾದಿ ಆಯುಧಗಳಿಗೆ ಅಭಿಮಾನಿಯಾಗಿರುವಾಗಲೇ ಕಾಮನು ವರದಿಂದ ಚಕ್ರಕ್ಕೆ ಅಭಿಮಾನಿಯಾದನು ಬ್ರಹ್ಮದೇವರಿಂದ ಉತ್ಪನ್ನನಾದ ಅನಿರುದ್ಧನು ಕೃಷ್ಣಾವತಾರ ಕಾಲದಲ್ಲಿ ಶ್ರೀಕೃಷ್ಣನ ಮಗನಾದ ಪ್ರದ್ಯುಮ್ನನ ಮಗನಾಗುವನು. ಆ ಅನಿರುದ್ಧನೇ ಜೀವರ ಅಭಿಮಾನಿಯೂ ಆಗಿರುವನು. (ಜೀವರ ಮುಖ್ಯ ಅಭಿಮಾನಿಯು ಜೀವ ನಾಮಕನೂ ಅನಿರುದ್ಧ ನಾಮಕನೂ ಆದ ಶ್ರೀಹರಿಯೇ.) ಆ ಅನಿರುದ್ಧನೇ ಭಗವಂತನ ಶಙ್ಖದ ಅಭಿಮಾನಿಯೂ ಆಗಿರುವನು.

ತಾವೇವ ಜಾತೌ ಭರತಶ್ಚ ನಾಮ್ನಾ
ಶತ್ರುಘ್ನ ಇತ್ಯೇವ ಚ ರಾಮತೋಽನು
ಪೂರ್ವಂ ಸುಮಿತ್ರಾತನಯಶ್ಚ ಶೇಷಃ
ಸ ಲಕ್ಷ್ಮಣೋ ನಾಮ ರಘೂತ್ತಮಾದನು ॥ ೭೭ ॥

**ಅರ್ಥ** :- **ತೌ** ಏವ ಆ ಪ್ರದ್ಯುಮ್ನ ಅನಿರುದ್ಧರೇ, **ನಾಮ್ನಾ** ಹೆಸರಿನಿಂದ, **ಭರತಃ ಚ** ಭರತ ಎಂದೂ, **ಶತ್ರುಘ್ನಃ** **ಇತಿ ಏವ ಚ** ಶತ್ರುಘ್ನನೆಂಬುದಾಗಿಯೂ, **ರಾಮತಃ** ರಾಮನ ದೆಸೆಯಿಂದ, **ಅನು** ಅನಂತರದಲ್ಲಿ, **ಜಾತೌ** ಹುಟ್ಟಿದರು, **ಪೂರ್ವಂ** ಪೂರ್ವದಲ್ಲಿ, **ಯಃ** ಯಾರು, **ಶೇಷಃ** ಶೇಷನೋ, **ಸಃ** ಅವನು, **ಸುಮಿತ್ರಾತನಯಃ ಸನ್** ಸುಮಿತ್ರೆಯ ಮಗನಾಗಿ, **ಲಕ್ಷ್ಮಣೋ ನಾಮ** 'ಲಕ್ಷ್ಮಣ' ಎಂದು ಪ್ರಸಿದ್ಧನಾಗಿ, **ಜಾತಃ** ಹುಟ್ಟಿದನು.

**ತಾತ್ಪರ್ಯ** :- ಆ ಪ್ರದ್ಯುಮ್ನ ಅನಿರುದ್ಧರು ರಾಮದೇವರ ಅನಂತರ ಭರತ, ಶತ್ರುಘ್ನರೆಂದು ಹುಟ್ಟಿದರು. ಶೇಷದೇವನು ಸುಮಿತ್ರೆಯ ಮಗನಾಗಿ ಲಕ್ಷ್ಮಣನೆಂದು ಪ್ರಸಿದ್ಧನಾಗಿ, ರಾಮದೇವರ ತರುವಾಯ ಅವತರಿಸಿದನು.

**ವಿಶೇಷ ವಿಷಯ** :- ರಾಮದೇವರ ಅವತಾರದ ಬಳಿಕ ಕೈಕೇಯಿಗೆ ಭರತನು ಹುಟ್ಟಿದನು. ಶತ್ರುಘ್ನ, ಲಕ್ಷ್ಮಣರು ಸುಮಿತ್ರೆಯಲ್ಲಿ ಹುಟ್ಟಿದರು. ಭರತನ ಬಳಿಕ ಶತ್ರುಘ್ನ ಲಕ್ಷ್ಮಣರು ಹುಟ್ಟಿದುದರಿಂದ ರಾಮನ ಅನಂತರ ಹುಟ್ಟಿದವರೇ. ಭರತನು ರಾಮನಿಗೆ ಸಾಕ್ಷಾದನುಜ. ಶತ್ರುಘ್ನ ಲಕ್ಷ್ಮಣರು ಪರಂಪರೆಯಾಗಿ ಅನುಜರು. ಭರತನು ರಾಮನ ಅನಂತರದವನಲ್ಲದಿದ್ದರೆ ರಾಮನು ವನವಾಸಕ್ಕೆ ತೆರಳಲು ಭರತನಿಗೆ ರಾಜ್ಯ ಬರುವುದೆಂಬ ಕೈಕೇಯಿಯ ಆಸೆ ಕೂಡುವುದು ಹೇಗೆ? — ಇದು ಶ್ರೀ ವಾದಿರಾಜ ಗುರುಗಳ ಟಿಪ್ಪಣಿಯಲ್ಲಿ ಕಂಡು ಬರುವ ಅಭಿಪ್ರಾಯ.

ಶ್ರೀ ಜನಾರ್ದನ ಭಟ್ಟರ ವ್ಯಾಖ್ಯಾನದಲ್ಲಿ ಹೀಗಿದೆ ಶ್ಲೋಕದಲ್ಲಿ ಅನ್ವಯ ಕ್ರಮ–ಸಃ ಆ, ಶೇಷಃ ಶೇಷನು, ಪೂರ್ವಂ ಭರತ, ಶತ್ರುಘ್ನರಿಗಿಂತ ಮೊದಲು, ರಘೂತ್ತಮಾತ್ ಅನು ರಾಮದೇವರ ಅನಂತರ ಸುಮಿತ್ರಾತನಯನಾಗಿ ಲಕ್ಷ್ಮಣನೆಂಬ ಹೆಸರಿನಿಂದ ಅವತರಿಸಿದನು. ರಾಮದೇವರ ಸಾಕ್ಷಾತ್ ಅನುಜ ಲಕ್ಷ್ಮಣ. ಭರತ-ಶತ್ರುಘ್ನರು ಅನಂತರದ ತಮ್ಮಂದಿರು. ಲಕ್ಷ್ಮಣರು ಭರತನಿಗಿಂತ ಜ್ಯೇಷ್ಠ

ಎನ್ನಲು ಸಂಗ್ರಹ ರಾಮಾಯಣದ ಸಂವಾದ ಇದೆ — "ಸೀತಾಯಾಃ ಲಕ್ಷ್ಮಣಸ್ಯಾಪಿ ವವಂದೇ ಚರಣಾವಸೌ" ಭರತನು ಸೀತೆಯ ಪಾದಗಳಿಗೆ ಮತ್ತು ಲಕ್ಷ್ಮಣನ ಪಾದಗಳಿಗೆ ಕೂಡ ನಮಿಸಿದನು ಎಂದು.

**ಕೌಸಲ್ಯಕಾಪುತ್ರ ಉರುಕ್ರಮೋಽಸೌ**
**ಏಕಸ್ತಥೈಕೋ ಭರತಸ್ಯ ಮಾತುಃ ।**
**ಉಭೌ ಸುಮಿತ್ರಾತನಯೌ ನೃಪಸ್ಯ**
**ಚತ್ವಾರ ಏತೇ ಹ್ಯಮರೋತ್ತಮಾಃ ಸುತಾಃ ॥ ೭೮ ॥**

**ಅರ್ಥ :-** **ಉರುಕ್ರಮಃ** ಉತ್ಕೃಷ್ಟ ಪರಾಕ್ರಮವುಳ್ಳ, **ಅಸೌ** ಈ ರಾಮನು, **ಏಕಃ** ಒಬ್ಬ, **ಕೌಸಲ್ಯಾಪುತ್ರಃ** ಕೌಸಲ್ಯಾಪುತ್ರನು, **ತಥಾ** ಹಾಗೆಯೇ, **ಭರತಸ್ಯ** ಭರತನ, **ಮಾತುಃ** ತಾಯಿಯಾದ ಕೈಕೇಯಿಗೆ, **ಏಕಃ** ಒಬ್ಬನು, **ಉಭೌ** ಲಕ್ಷ್ಮಣ, ಶತ್ರುಘ್ನರು ಇಬ್ಬರು, **ಸುಮಿತ್ರಾ ತನಯೌ** ಸುಮಿತ್ರೆಯ ಮಕ್ಕಳು, **ನೃಪಸ್ಯ** ರಾಜನಾದ ದಶರಥನಿಗೆ, **ಏತೇ** ಈ, **ಅಮರೋತ್ತಮಾಃ** ದೇವಶ್ರೇಷ್ಠರು, **ಚತ್ವಾರಃ** ನಾಲ್ವರು, **ಸುತಾಃ** ಮಕ್ಕಳು, **ಹಿ** ದೇವಶ್ರೇಷ್ಠರು ಇವರು ಎಂಬುದು ಪ್ರಮಾಣ ಪ್ರಸಿದ್ಧವು.

**ತಾತ್ಪರ್ಯ :-** ಉತ್ಕೃಷ್ಟ ಪರಾಕ್ರಮವುಳ್ಳ ಕೌಸಲ್ಯಾ ನಂದನನಾದ ಶ್ರೀ ರಾಮಚಂದ್ರನು ಒಬ್ಬನು. ಹಾಗೆಯೇ ಕೈಕೇಯಿಯ ಮಗನಾದ ಭರತನೊಬ್ಬ, ಲಕ್ಷ್ಮಣ ಶತ್ರುಘ್ನರೆಂದು ಸುಮಿತ್ರೆಗೆ ಇಬ್ಬರು. ಹೀಗೆ ದೇವಶ್ರೇಷ್ಠರಾದ ನಾಲ್ವರು ಮಕ್ಕಳು ಒಬ್ಬ ದಶರಥ ರಾಜನಿಗೆ.

**ಸಂಕರ್ಷಣಾದ್ಯೈ ಸ್ತ್ರಿಭಿರೇವ ರೂಪೈಃ**
**ಆವಿಷ್ಟ ಆಸೀತ್ ತ್ರಿಷು ತೇಷು ವಿಷ್ಣುಃ ।**
**ಇಂದ್ರೋಽಙ್ಗದೇ ಚೈವ ತತೋಽಙ್ಗದೋ ಹಿ**
**ಬಲೀ ನಿತಾಂತಂ ಸ ಬಭೂವ ಶಶ್ವತ್ ॥ ೭೯ ॥**

**ಅರ್ಥ :-** **ವಿಷ್ಣುಃ** ಏವ ನಾರಾಯಣನೇ, **ತೇಷು** ಆ, **ತ್ರಿಷು** ಲಕ್ಷ್ಮಣ, ಭರತ, ಶತ್ರುಘ್ನರೆಂಬ ಮೂವರಲ್ಲಿ **ತ್ರಿಭಿಃ ರೂಪೈಃ** ಸಂಕರ್ಷಣ, ಪ್ರದ್ಯುಮ್ನ ಅನಿರುದ್ಧ ಎಂಬ ಮೂರು ರೂಪಗಳಿಂದ, **ಆವಿಷ್ಟಃ** ಪ್ರವೇಶಿಸಲ್ಪಟ್ಟವನು, **ಆಸೀತ್** ಆದನು, **ಅಙ್ಗದೇ ಚ** ಅಂಗದನಲ್ಲಿಯಾದರೋ, **ಇಂದ್ರಃ** ಏವ

ಇಂದ್ರನೇ, **ಆವಿಷ್ಟಃ** ಪ್ರವೇಶಿಸಲ್ಪಟ್ಟವನು, **ಆಸೀತ್** ಆದನು, **ತತಃ** ಇಂದ್ರಾವೇಶ ದಿಂದ, **ಸಃ** ಆ, **ಅಙ್ಗದಃ** ಅಂಗದನು, **ಶಶ್ವತ್** ಯಾವಾಗಲೂ, **ನಿತಾಂತಂ** ಅತ್ಯಂತವಾಗಿ, **ಬಲೀ** ಬಲಿಷ್ಠನು, **ಬಭೂವ ಹಿ** ಆಗಿದ್ದನಷ್ಟೆ

**ತಾತ್ಪರ್ಯ :** ಭಗವಂತನೇ ಲಕ್ಷ್ಮಣ, ಭರತ, ಶತ್ರುಘ್ನರಲ್ಲಿ ಸಂಕರ್ಷಣ, ಪ್ರದ್ಯುಮ್ನ ಅನಿರುದ್ಧ ಎಂಬ ಮೂರು ರೂಪಗಳಿಂದ ಆವಿಷ್ಟನಾಗಿರುವನು. ಇಂದ್ರನು ಅಂಗದನಲ್ಲಿ ಆವಿಷ್ಟನಾಗಿದ್ದಾನೆ. ಆದುದರಿಂದಲೇ ಅಙ್ಗದನು ಯಾವಾಗಲೂ ಅತ್ಯಂತ ಬಲಿಷ್ಠನಾಗಿದ್ದನು.

**ವಿಶೇಷ ವಿಷಯ :**ವಿಷ್ಣು ಧರ್ಮೋತ್ತರ ಪುರಾಣದಲ್ಲಿ ಈ ವಿಷಯ ಬಂದಿದೆ —

**''ದುಷ್ಟಾನಾಂ ನಿಗ್ರಹಾರ್ಥಾಯ ಚತುರ್ಮೂರ್ತಿರ್ಜನಾರ್ದನಃ ।**
**ಜಾತೋ ರಘುಕುಲೇ ರಾಜನ್ ಪುತ್ರೋ ದಶರಥಸ್ಯ ತು ।**
**ಅಂಶೇನ ವಾಸುದೇವಸ್ಯ ಜಾತೋ ರಾಮೋ ಮಹಾಯಶಾಃ ।**
**ಸಂಕರ್ಷಣಸ್ಯ ಚಾಂಶೇನ ಲಕ್ಷ್ಮಣಃ ಪರವೀರಹಾ ।**
**ಪ್ರದ್ಯುಮ್ನಸ್ಯ ತಥಾಂಶೇನ ಭರತೋ ಧರ್ಮವತ್ಸಲಃ ।**
**ಅನಿರುದ್ಧಸ್ಯ ಚಾಂಶೇನ ಶತ್ರುಘ್ನಸ್ತು ಮಹಾಬಲಃ ॥''**

ದುಷ್ಟರ ನಿಗ್ರಹಕ್ಕಾಗಿ ಶ್ರೀಹರಿಯು ನಾಲ್ಕು ರೂಪಗಳಿಂದ ರಘುವಂಶದಲ್ಲಿ ಅವತರಿಸಿದನು. ವಾಸುದೇವ ರೂಪದಿಂದ ಶ್ರೀರಾಮನಾಗಿಯೂ, ಸಂಕರ್ಷಣನ ಅಂಶದಿಂದ ಲಕ್ಷ್ಮಣನಲ್ಲಿ ಪ್ರದ್ಯುಮ್ನ ಅಂಶದಿಂದ ಭರತನಲ್ಲಿ ಅನಿರುದ್ಧ ಅಂಶದಿಂದ ಶತ್ರುಘ್ನನಲ್ಲಿ ಸನ್ನಿಹಿತನಾದನು.

**ಯೇಽನ್ಯೇ ಚ ಭೂಪಾಃ ಕೃತವೀರ್ಯಜಾದ್ಯಾಃ**
**ಬಲಾಧಿಕಾಃ ಸಂತಿ ಸಹಸ್ರಶೋಽಪಿ ।**
**ಸರ್ವೇ ಹರೇಃ ಸನ್ನಿಧಿಭಾವಯುಕ್ತಾಃ**
**ಧರ್ಮಪ್ರಧಾನಾಶ್ಚ ಗುಣಪ್ರಧಾನಾಃ ॥ ೮೦ ॥**

**ಅರ್ಥ :-** **ಯೇ** ಯಾವ, **ಅನ್ಯೇ** ಬೇರೆ, **ಬಲಾಧಿಕಾಃ** ಬಲದಿಂದ ಅಧಿಕರಾದ, **ಧರ್ಮಪ್ರಧಾನಾಃ** ಧರ್ಮವೇ ಪ್ರಧಾನವಾಗಿ ಉಳ್ಳ, **ಚ** ಮತ್ತು,

**ಗುಣಪ್ರಧಾನಾಃ** ಭಕ್ತ್ಯಾದಿಗುಣಗಳೇ ಪ್ರಧಾನವಾಗಿ ಉಳ್ಳ, **ಕೃತವೀರ್ಯ ಜಾದ್ಯಾಃ** ಕೃತವೀರ್ಯನಿಂದ ಹುಟ್ಟಿದ ಕಾರ್ತವೀರ್ಯಾರ್ಜುನನೇ ಮೊದ ಲಾದ, **ಸಹಸ್ರಶಃ ಅಪಿ** ಸಾವಿರಾರೂ, **ಭೂಪಾಃ ಚ** ರಾಜರುಗಳೂ ಕೂಡ, **ಸಂತಿ** ಇರುವರೋ, **ತೇ ಸರ್ವೇ** ಅವರೆಲ್ಲರೂ, **ಹರೇಃ** ಶ್ರೀಹರಿಯ, **ಸನ್ನಿಧಿ ಭಾವ ಯುಕ್ತಾಃ** ಶ್ರೀಹರಿಯ ಸನ್ನಿಧಾನದಿಂದ ಭಕ್ತಿಯುಕ್ತರು.

**ತಾತ್ಪರ್ಯ** :- ಆವೇಶವನ್ನು ಹೇಳುತ್ತಿರುವ ಸಂದರ್ಭವಾದುದರಿಂದ ಶ್ರೀಹರಿಯ ವಿಶೇಷಾವೇಶವುಳ್ಳ ಎಲ್ಲರನ್ನು ಒಂದೇ ಹೇಳಿಕೆಯಿಂದ ನಿಮಿತ್ತ ಪುರಸ್ಸರವಾಗಿ ಇಲ್ಲಿ ತಿಳಿಸುತ್ತಿದ್ದಾರೆ.

ಧರ್ಮ, ಭಕ್ತ್ಯಾದಿಗುಣಗಳೇ ಪ್ರಧಾನಗಳಾಗಿ ಉಳ್ಳ ಬಲಾಧಿಕರಾದ ಕಾರ್ತ ವೀರ್ಯಾರ್ಜುನಾದಿ ಎಲ್ಲ ರಾಜರೂ ಭಗವಂತನ ವಿಶೇಷಾವೇಶದಿಂದ ಕೂಡಿರುವರು. ಭಗವಂತನ ಸನ್ನಿಧಾನ ಬಲದಿಂದಲೆ ಆವರಲ್ಲಿ ಭಗವದ್ಭಕ್ತಿಯು ವಿಶೇಷವಾಗಿ ಕಂಡು ಬರುವುದು. ಅವರ ಭಗವದ್ಭಕ್ತಿಯೇ ಹರಿ ಸನ್ನಿಧಾನ ಸೂಚಕ.

ರಾಮದೇವರ ಅವತಾರವನ್ನು ಹೇಳಿದ ಬಳಿಕ ರಾಮನೊಡನೆ ಅವಿಯೋಗಿನಿಯಾದ ಲಕ್ಷ್ಮಿಯ ಅವತಾರವನ್ನು ಹೇಳುತ್ತಿದ್ದಾರೆ —

**ಸ್ವಯಂ ರಮಾ ಸೀರತ ಏವ ಜಾತಾ**
**ಸೀತೇತಿ ರಾಮಾರ್ಥಮನೂಪಮಾ ಯಾ ।**
**ವಿದೇಹರಾಜಸ್ಯ ಹಿ ಯಜ್ಞಭೂಮೌ**
**ಸುತೇತಿ ತಸ್ಯೈವ ತತಸ್ತು ಸಾऽಭೂತ್ ॥ ೮೧ ॥**

**ಅರ್ಥ** :- **ಅನೂಪಮಾ** ಉತ್ಕೃಷ್ಟರಾದ ಸದೃಶರಿಲ್ಲದ, **ಸ್ವಯಂರಮಾ** ಸ್ವತಂತ್ರನಾದ ಪರಮಾತ್ಮನಿಂದ ತಾನೇ ಯಾವಾಗಲೂ ಕ್ರೀಡಿಸುವ, **ಯಾ** ಯಾವ ಲಕ್ಷ್ಮಿಯು, **ವಿದೇಹರಾಜಸ್ಯ** ವಿದೇಹ (ಜನಕ) ರಾಜನ, **ಯಜ್ಞಭೂಮೌ** ಯಜ್ಞಕ್ಕಾಗಿ ಶೋಧನೆಮಾಡುತ್ತಿದ್ದ ಭೂಮಿಯಲ್ಲಿ, **ಸೀರತಃ ಏವ** ನೇಗಿಲಿನಿಂದಲೇ, **ರಾಮಾರ್ಥಂ** ಶ್ರೀರಾಮನಿಗೋಸ್ಕರ **ಸೀತಾ, ಇತಿ** 'ಸೀತೆ' ಎಂದು, **ಜಾತಾ** ಅವತರಿಸಿದಳೋ, **ಸಾ** ಆ ಸೀತೆಯು, **ತತಃ** ಅಂದಿನಿಂದಲೇ, **ತಸ್ಯಏವ** ಆ ಜನಕರಾಜನದ್ದೇ, **ಸುತಾ ಇತಿ** ಮಗಳೆಂಬುದಾಗಿ, **ಅಭೂತ್ ಹಿ** ಪ್ರಸಿದ್ಧಳಾದಳಷ್ಟೆ

**ತಾತ್ಪರ್ಯ** :ಸ್ವತಂತ್ರನಾದ ಪರಮಾತ್ಮನಿಂದ ತಾನೇ ಕ್ರೀಡಿಸುವ ಲಕ್ಷ್ಮಿಯು ಜನಕರಾಜನು ಯಜ್ಞಭೂಮಿಯಲ್ಲಿ ನೇಗಿಲಿನಿಂದ ಶೋಧನೆ ಮಾಡಿಸುತ್ತಿದ್ದಾಗ ಪ್ರಾದುರ್ಭಾವಗೊಂಡು ರಾಜನಿಗೆ ದೊರಕಿದಳು. ಸೀತಾ ಎಂದು ಪ್ರಸಿದ್ಧಳಾದ ಆ ರಮಾದೇವಿಯು ಅಂದಿನಿಂದ ಜನಕರಾಜನ ಮಗಳೆಂದೇ ಪ್ರಖ್ಯಾತಳಾದಳು. ಭಗವಂತನು ರಾಮನಾಗಿ ಅವತರಿಸಿದುದರಿಂದ ಅವನ ಆಜ್ಞೆಯಿಂದ, ಅಸದೃಶ ಳಾದ ಲಕ್ಷ್ಮೀದೇವಿಯು ಶ್ರೀರಾಮನಿಗೋಸ್ಕರ ಸೀತೆಯಾಗಿ ಅವತರಿಸಿದಳು.

**ವಿಶೇಷ ವಿಷಯ** :- ಸ್ತ್ರೀತ್ವ ಜಾತಿಯಿಂದ ಸದೃಶರಿರಬಹುದಾದರೂ ದಿವ್ಯ ಸೌಂದರ್ಯಾದಿ ಮಹಾಗುಣಗಳಿಂದ ರಮೆಗೆ ಸದೃಶರು ಯಾರೂ ಇಲ್ಲ ಎಂದು ತಿಳಿಸಲು ಅನೂಪಮಾ ಎಂದು ವಿಶೇಷಣವನ್ನು ರಮೆಗೆ ಕೊಡಲಾಗಿದೆ. (ಉತ್ಕೃಷ್ಟಾ ಉಪಮಾ ಊಪಮಾ । ಊಪಮಾ ನ ವಿದ್ಯತೇ ಯಸ್ಯಾಃ ಸಾ ಅನೂಪಮಾ)

**ಇತ್ಯಾದಿಕಲ್ಪೋತ್ಥಿತ ಏಷ ಸರ್ಗೋ**
**ಮಯಾ ಸಮಸ್ತಾಗಮನಿರ್ಣಯಾತ್ಮಕಃ ।**
**ಸಹಾನುಸರ್ಗಃ ಕಥಿತೋಽತ್ರ ಪೂರ್ವೋ**
**ಯೋ ಯೋ ಗುಣೈರ್ನಿತ್ಯಮಸೌ ವರೋ ಹಿ ॥ ೮೨ ॥**

**ಅರ್ಥ** :- ಇತಿ ಈ ರೀತಿಯಾಗಿ, **ಆದಿಕಲ್ಪೋತ್ಥಿತಃ** ಮೊದಲನೆಯ ಕಲ್ಪದಲ್ಲಿ ಉತ್ಪನ್ನವಾದ, **ಸಮಸ್ತಾಗಮನಿರ್ಣಯಾತ್ಮಕಃ** ಎಲ್ಲ ಆಗಮಗಳ ಅರ್ಥಗಳ ನಿರ್ಣಯರೂಪವಾದ, **ಸಹಾನುಸರ್ಗಃ** ಬ್ರಹ್ಮಾಂಡದ ಒಳಗೆ ಬ್ರಹ್ಮನಿಂದ ಮಾಡಲ್ಪಟ್ಟ ಅನುಸರ್ಗದಿಂದ ಕೂಡಿದ, **ಏಷಃ** ಈ, **ಸರ್ಗಃ** ಬ್ರಹ್ಮಾಂಡದ ಹೊರಗೆ ಭಗವಂತನು ಮಾಡಿರುವ ತತ್ವಸೃಷ್ಟಿಯು, **ಮಯಾ** ನನ್ನಿಂದ, **ಕಥಿತಃ** ಹೇಳಲ್ಪಟ್ಟಿತು. **ಅತ್ರ** ಈ ಪಾದ್ಮ ಸೃಷ್ಟಿಯಲ್ಲಿ, **ಯಃ ಯಃ** ಯಾರು ಯಾರು, **ಪೂರ್ವಃ** ಮೊದಲು ಹುಟ್ಟಿದವರೋ, **ಅಸೌ** ಅವರು, **ಗುಣೈಃ** ಜ್ಞಾನಭಕ್ತ್ಯಾದಿಗುಣಗಳಿಂದ, **ನಿತ್ಯಂ** ಯಾವಾಗಲೂ, **ವರಃ ಹಿ** ಶ್ರೇಷ್ಠನಷ್ಟೆ

**ತಾತ್ಪರ್ಯ** :- ಸಮಸ್ತ ಆಗಮಗಳ ನಿರ್ಣಯರೂಪವಾಗಿ ಇದುವರೆಗೆ ಪಾದ್ಮಕಲ್ಪದ ಸರ್ಗ, ಅನುಸರ್ಗಗಳನ್ನು ಹೇಳಿದ್ದೇನೆ. ಬ್ರಹ್ಮಾಂಡದ ಹೊರಗೆ ಭಗವಂತನು ಮಾಡುವ ತತ್ವಸೃಷ್ಟಿಯು ಸರ್ಗ ಎನಿಸಿದರೆ ಬ್ರಹ್ಮಾಂಡದ ಒಳಗೆ

ಬ್ರಹ್ಮನಿಂದ ಮಾಡಲ್ಪಡುವ ಸೃಷ್ಟಿಯು ಅನುಸರ್ಗ ಎನಿಸುವುದು. ಇಲ್ಲಿ ತಿಳಿಸಿದ ಪಾದ್ಮಕಲ್ಪದ ಸೃಷ್ಟಿಯಲ್ಲಿ ಮೊದಲು ಹುಟ್ಟಿದವರು ನಿತ್ಯವೂ ಗುಣಗಳಿಂದ ಶ್ರೇಷ್ಠರು.

**ಪಾಶ್ಚಾತ್ಯಕಲ್ಪೇಷ್ವಪಿ ಸರ್ಗಭೇದಾಃ**
**ಶ್ರುತೌ ಪುರಾಣೇಷ್ವಪಿ ಚಾನ್ಯಥೋಕ್ತಾಃ ।**
**ನೋತ್ಕರ್ಷಹೇತುಃ ಪ್ರಥಮತ್ವಮೇಷು**
**ವಿಶೇಷವಾಕ್ಯೈರವಗಮ್ಯಮೇತತ್ ॥ ೮೩ ॥**

**ಅರ್ಥ** :- **ಪಾಶ್ಚಾತ್ಯ ಕಲ್ಪೇಷು ಅಪಿ** ಪಾದ್ಮಕಲ್ಪದ ಮೊದಲು ಮತ್ತು ಅನಂತರದ ಕಲ್ಪಗಳಲ್ಲಿಯೂ ಕೂಡ, **ಶ್ರುತೌ** ವೇದದಲ್ಲಿ, **ಪುರಾಣೇಷು ಅಪಿ** ಪುರಾಣಗಳಲ್ಲಿಯೂ ಕೂಡ, **ಸರ್ಗಭೇದಾಃ** ಸೃಷ್ಟಿಯ ಪ್ರಭೇದಗಳು, **ಅನ್ಯಥಾ** ಆದಿಕಲ್ಪೋಕ್ತಸೃಷ್ಟಿಗೆ ವ್ಯತ್ಯಾಸವಾಗಿ, **ಉಕ್ತಾಃ** ಹೇಳಲ್ಪಟ್ಟಿವೆ, **ಏಷು** ಈ ಕಲ್ಪಗಳಲ್ಲಿ, **ಪ್ರಥಮತ್ವಂ** ಮೊದಲು ಉತ್ಪತ್ತಿಯನ್ನು ಹೊಂದಿರುವಿಕೆಯು, **ಉತ್ಕರ್ಷಹೇತುಃ** ಉತ್ಕರ್ಷಕ್ಕೆ ಕಾರಣವು, **ನ** ಆಗುವುದಿಲ್ಲ, **ಏತತ್** ಈ ಪ್ರಮೇಯವು, **ವಿಶೇಷ ವಾಕ್ಯೈಃ** ವಿಶೇಷ ಪ್ರಮಾಣವಾಕ್ಯಗಳಿಂದ, **ಅವಗಮ್ಯಂ** ತಿಳಿಯಲ್ಪಡಬೇಕು.

**ತಾತ್ಪರ್ಯ** :- ಶ್ರುತಿ, ಪುರಾಣಗಳಲ್ಲಿ ಪಾದ್ಮಕಲ್ಪದ ಹಿಂದಿನ ಮತ್ತು ಮುಂದಿನ ಕಲ್ಪಗಳಲ್ಲಿನ ಸೃಷ್ಟಿಪ್ರಭೇದಗಳನ್ನು ತಿಳಿಸಲಾಗಿದೆ. ಅವುಗಳಲ್ಲಿ ಪಾದ್ಮ ಕಲ್ಪದ ಸೃಷ್ಟಿಗಿಂತ ವ್ಯತ್ಯಾಸಗಳಿವೆ. ಆ ಕಲ್ಪಗಳಲ್ಲಿ ಮೊದಲು ಹುಟ್ಟಿದವರು ಶ್ರೇಷ್ಠರೆಂಬ ನಿಯಮವಿಲ್ಲ. ಆದರೆ ವಿಶೇಷ ಪ್ರಮಾಣಗಳಿಂದ ಆ ಕಲ್ಪಗಳ ಸೃಷ್ಟಿಯಲ್ಲಿ ತಾರತಮ್ಯವನ್ನು ತಿಳಿಯಬೇಕು.

**ಇತಿ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ ವಿರಚಿತೇ**
**ಶ್ರೀ ಮಹಾಭಾರತ ತಾತ್ಪರ್ಯ ನಿರ್ಣಯೇ**
**ಸರ್ಗಾನುಸರ್ಗಲಯ ಪ್ರಾದುರ್ಭಾವನಿರ್ಣಯೋ ನಾಮ**
**ತೃತೀಯೋಽಧ್ಯಾಯಃ ॥**

# ಅಧ್ಯಾಯ - 4

## ಮಕ್ಕಳು ಬೆಳೆದರು

ಅಥಾಭ್ಯವರ್ಧಂಶ್ಚತುರಾಃ ಕುಮಾರಾ
ನೃಪಸ್ಯ ಗೇಹೇ ಪುರುಷೋತ್ತಮಾದ್ಯಾಃ ।
ನಿತ್ಯಪ್ರವೃದ್ಧಸ್ಯ ಚ ತಸ್ಯ ವೃದ್ಧಿ-
ರಪೇಕ್ಷ್ಯ ಲೋಕಸ್ಯ ಹಿ ಮಂದದೃಷ್ಟಿಮ್ ॥ ೧ ॥

ಪದಚ್ಛೇದ : ಅಥ ಅಭ್ಯವರ್ಧನ್ ಚತುರಾಃ ಕುಮಾರಾಃ ನೃಪಸ್ಯ ಗೇಹೇ ಪುರುಷೋತ್ತಮಾದ್ಯಾಃ । ನಿತ್ಯಪ್ರವೃದ್ಧಸ್ಯ ಚ ತಸ್ಯ ವೃದ್ಧಿಃ ಅಪೇಕ್ಷ್ಯ ಲೋಕಸ್ಯ ಹಿ ಮಂದದೃಷ್ಟಿಮ್ ॥

**ಅರ್ಥ :- ಅಥ** ಅವತಾರಾನಂತರದಲ್ಲಿ, **ಚತುರಾಃ** ಕುಶಲರಾದ, **ಪುರುಷೋತ್ತಮಾದ್ಯಾಃ** ಪುರುಷೋತ್ತಮನಾದ ಶ್ರೀರಾಮನೇ ಮೊದಲಾದ, **ಕುಮಾರಾಃ** ಮಕ್ಕಳು (ಲಕ್ಷ್ಮಣ, ಭರತ, ಶತ್ರುಘ್ನರು), **ನೃಪಸ್ಯ** ದಶರಥ ರಾಜನ, **ಗೇಹೇ** ಮನೆಯಲ್ಲಿ, **ಅಭ್ಯವರ್ಧನ್** ಅಭಿವೃದ್ಧಿಯನ್ನು ಹೊಂದಿದರು (ಬೆಳೆದರು) **ನಿತ್ಯಪ್ರವೃದ್ಧಸ್ಯ** ಯಾವಾಗಲೂ ದೇಶ-ಕಾಲ-ಗುಣಗಳಿಂದ ಪರಿಪೂರ್ಣನಾದ, **ತಸ್ಯ** ಶ್ರೀರಾಮನ, **ವೃದ್ಧಿಶ್ಚ** ಬೆಳವಣಿಗೆಯಾದರೂ, **ಲೋಕಸ್ಯ** ಸಾಮಾನ್ಯ ಜನರ, **ಮಂದದೃಷ್ಟಿಂ** ಅಪ್ರಬುದ್ಧ ದರ್ಶನವನ್ನು **ಅಪೇಕ್ಷ್ಯ** ಅವಲಂಬಿಸಿ, (**ಭವತಿ** ಆಗುತ್ತದೆ), **ಹಿ** ಪ್ರಸಿದ್ಧವು.

**ತಾತ್ಪರ್ಯ :-** ಶ್ರೀವಿಷ್ಣುವು ಸಾಕ್ಷಾದ್ರೂಪ ಹಾಗೂ ಆವೇಶರೂಪಗಳಿಂದ ಅವತರಿಸಿದ ನಂತರ, ಚಾತುರ್ಯಾದಿ ಗುಣವಿಶಿಷ್ಟರಾದ ಶ್ರೀರಾಮನೇ ಮೊದಲಾದ ಕುಮಾರರು ಬೆಳೆದರು. ಎಂದೆಂದೂ ಏಕರೂಪನಾದ ('ನ ಕರ್ಮಣಾ ವರ್ಧತೇ' ಎಂಬ ಶ್ರುತಿ ಹೇಳುವಂತೆ ಕರ್ಮನಿಮಿತ್ತಕವಾದ ಬೆಳವಣಿಗೆ ಇಲ್ಲದ) ಶ್ರೀರಾಮ ಬೆಳೆದನೆನ್ನುವುದು ಅಪ್ರಾಕೃತ ಹಾಗೂ ವ್ಯಾಪ್ತವಾದ ಭಗವದ್ರೂಪವನ್ನು ಕಾಣಲಾಗದ ಅಜ್ಞಜನರನ್ನು ಗಮನದಲ್ಲಿರಿಸಿ ಕೊಂಡು ಹೇಳಿದ ಮಾತು.

**ವಿವರಣೆ** : 'ಕುಶಲರಾದ ಕುಮಾರರು ಬೆಳೆದರು' ಎಂದರೆ ಅವರ ಶರೀರಬೆಳವಣಿಗೆ ಮಾತ್ರವಲ್ಲ, ಚಾತುರ್ಯ, ಬುದ್ಧಿಶಕ್ತಿಗಳೂ ಬೆಳೆದವೆಂದು ಅಭಿಪ್ರಾಯ. ಇಂತಹ ಬೆಳವಣಿಗೆ ಎಂಬ ಫಲ ಅನ್ಯರಿಗೆ ಮಾತ್ರ ಹೊರತು ಭಗವಂತನಿಗೆ ಅಲ್ಲ ಎಂಬುದನ್ನು ಪರಸ್ಮೈಪದದ 'ಅಭ್ಯವರ್ಧನ್' ಎಂಬ ಕ್ರಿಯಾಪದವು ಸೂಚಿಸುತ್ತದೆ ॥ ೧ ॥

**ನಿರೀಕ್ಷ್ಯ ನಿತ್ಯಂ ಚತುರಃ ಕುಮಾರಾನ್**
**ಪಿತಾ ಮುದಂ ಸಂತತಮಾಪ ಚೋಚ್ಚಮ್ ।**
**ವಿಶೇಷತೋ ರಾಮಮುಖೇಂದುಬಿಂಬ-**
**ಮವೇಕ್ಷ್ಯ ರಾಜಾ ಕೃತಕೃತ್ಯ ಆಸೀತ್ ॥ ೨ ॥**

ಪದಚ್ಛೇದ : **ನಿರೀಕ್ಷ್ಯ ನಿತ್ಯಂ ಚತುರಃ ಕುಮಾರಾನ್ ಪಿತಾ ಮುದಂ ಸಂತತಮ್ ಆಪ ಚ ಉಚ್ಚಮ್ । ವಿಶೇಷತಃ ರಾಮಮುಖೇಂದುಬಿಂಬಮ್ ಅವೇಕ್ಷ್ಯ , ರಾಜಾ ಕೃತಕೃತ್ಯಃ ಆಸೀತ್ ॥**

**ಅರ್ಥ** :- **ಪಿತಾ** ತಂದೆಯಾದ ದಶರಥನು, **ನಿತ್ಯಂ** ಯಾವಾಗಲೂ, **ಚತುರಃ ಕುಮಾರಾನ್** ನಾಲ್ಕು ಮಕ್ಕಳನ್ನು **ನಿರೀಕ್ಷ್ಯ** ನೋಡಿ, **ಸಂತತಂ** ಅವಿಚ್ಛಿನ್ನವಾದ, **ಉಚ್ಚಂ** ಉತ್ಕೃಷ್ಟವಾದ, **ಮುದಂ** ಸಂತೋಷವನ್ನು **ಆಪ** ಹೊಂದಿದನು. **ರಾಜಾ** ದಶರಥರಾಜನು, **ವಿಶೇಷತಃ** ಹೆಚ್ಚಾಗಿ, **ರಾಮ ಮುಖೇಂದುಬಿಂಬಂ** ಚಂದ್ರನಂತೆ ಕಂಗೊಳಿಸುವ ಶ್ರೀರಾಮನ ಮುಖವನ್ನು **ಅವೇಕ್ಷ್ಯ** ನೋಡಿ, **ಕೃತಕೃತ್ಯಃ** ಸುತೃಪ್ತನು, **ಆಸೀತ್** ಆಗಿದ್ದನು.

**ತಾತ್ಪರ್ಯ** :- ತಂದೆಯಾದ ದಶರಥನು ಯಾವಾಗಲೂ ನಾಲ್ಕು ಮಕ್ಕಳನ್ನು ನೋಡಿ ಅಪಾರವಾದ ಆನಂದವನ್ನು ಹೊಂದಿದನು. ಶ್ರೀರಾಮನ ಮುಖವೆಂಬ ಚಂದ್ರಬಿಂಬವನ್ನು ನೋಡಿ ರಾಜನು ವಿಶೇಷವಾಗಿ ಧನ್ಯತಾ ಭಾವವನ್ನು ಹೊಂದಿದನು ॥ ೨ ॥

**ತನ್ಮಾತರಃ ಪೌರಜನಾ ಅಮಾತ್ಯಾ**
**ಅಂತಃಪುರಾ ವೈಷಯಿಕಾಶ್ಚ ಸರ್ವೇ ।**
**ಅವೇಕ್ಷಮಾಣಾಃ ಪರಮಂ ಪುಮಾಂಸಂ**
**ಸ್ವಾನಂದತೃಪ್ತಾ ಇವ ಸಂಬಭೂವುಃ ॥ ೩ ॥**

ಪದಚ್ಛೇದ : ತನ್ಮಾತರಃ ಪೌರಜನಾಃ ಅಮಾತ್ಯಾಃ ಅಂತಃಪುರಾಃ ವೈಷಯಿಕಾಃ ಚ ಸರ್ವೇ । ಅವೇಕ್ಷಮಾಣಾಃ ಪರಮಂ ಪುಮಾಂಸಂ ಸ್ವಾನಂದತೃಪ್ತಾಃ ಇವ ಸಂಬಭೂವುಃ ॥

**ಅರ್ಥ** :- **ತನ್ಮಾತರಃ ತತ್** ಶ್ರೀರಾಮಚಂದ್ರನ, **ಮಾತರಃ** ತಾಯಿಯಾದ ಕೌಸಲ್ಯಾ ದೇವಿ, ಸುಮಿತ್ರಾ ಕೈಕೇಯೀ ದೇವಿಯರು, **ಪೌರಜನಾಃ** ಊರಲ್ಲಿ ರುವ ಎಲ್ಲ ಜನರು, **ಅಮಾತ್ಯಾಃ** ಮಂತ್ರಿಗಳು, **ಅಂತಃಪುರಾಃ** ಅಂತಃಪುರದಲ್ಲಿ ಇರುವ ಸ್ತ್ರೀಯರೇ ಮೊದಲಾದವರು, **ವೈಷಯಿಕಾಃ** ದೇಶದಲ್ಲಿರುವ, **ಸರ್ವೇ** ಎಲ್ಲರೂ, **ಪರಮಂ ಪುಮಾಂಸಂ** ಸರ್ವೋತ್ತಮ ನಾದ ಶ್ರೀರಾಮಚಂದ್ರನನ್ನು **ಅವೇಕ್ಷ್ಯಮಾಣಾಃ** ನೋಡತಕ್ಕವರಾಗಿ, **ಸ್ವಾನಂದತೃಪ್ತಾಃ** ಇವ ಸ್ವರೂಪಭೂತ ಆನಂದದಿಂದ ಸಂತುಷ್ಟರಾದ ಮುಕ್ತರಂತೆ, **ಸಂಬಭೂವುಃ** ಇದ್ದರು.

**ತಾತ್ಪರ್ಯ** :- ಶ್ರೀರಾಮನ ತಾಯಂದಿರು, ಅಯೋಧ್ಯಾಪುರ ವಾಸಿಗಳು, ಯಾವಾಗಲೂ ರಾಜನ ಸಮೀಪದಲ್ಲಿಯೇ ವಾಸಿಸುವ ಸುಮಂತ್ರ ಮುಂತಾದ ಅಮಾತ್ಯರು, ಅಂತಃಪುರದಲ್ಲಿ ವಾಸಿಸುವ ದಾಸಿಯರು, ಕೋಸಲದೇಶದ ವಾಸಿ ಗಳು, ಎಲ್ಲರೂ ಸಹ ಪರಮಪುರುಷ ಶ್ರೀರಾಮನನ್ನು ನೋಡುತ್ತ ಸ್ವರೂಪಾ ನಂದದಿಂದ ತೃಪ್ತರಾದಂತೆ (ಮುಕ್ತರಂತೆ) ಆದರು ॥೩॥

ವಿಶ್ವಾಮಿತ್ರರ ಆಗಮನ

**ತತಃ ಸುವಂಶೇ ಶಶಿನಃ ಪ್ರಸೂತೋ**
**ಗಾಧೀತಿ ಶಕ್ರಸ್ತನುಜೋಽಸ್ಯ ಚಾಸೀತ್ ।**
**ವರೇಣ ವಿಪ್ರತ್ವಮವಾಪ ಯೋಽಸೌ**
**ವಿಶ್ವಸ್ಯ ಮಿತ್ರಂ ಸ ಇಹಾಽಜಗಾಮ ॥ ೪ ॥**

ಪದಚ್ಛೇದ : ತತಃ ಸುವಂಶೇ ಶಶಿನಃ ಪ್ರಸೂತಃ ಗಾಧೀ ಇತಿ ಶಕ್ರಃ ತನುಜಃ ಅಸ್ಯ ಚ ಆಸೀತ್ । ವರೇಣ ವಿಪ್ರತ್ವಮ್ ಅವಾಪ ಯಃ ಅಸೌ ವಿಶ್ವಸ್ಯ ಮಿತ್ರಂ ಸಃ ಇಹ ಆಜಗಾಮ ॥

**ಅರ್ಥ** :- **ಶಕ್ರಃ** ದೇವೇಂದ್ರನು, **ಶಶಿನಃ** ಚಂದ್ರನ, **ಸುವಂಶೇ** ಸದ್ವಂಶ ದಲ್ಲಿ, **ಗಾಧೀ ಇತಿ** ಗಾಧಿ ಎಂಬ ಹೆಸರಿನಿಂದ, **ಪ್ರಸೂತಃ** ಹುಟ್ಟಿದನು, **ಅಸ್ಯ** ಈ

ಗಾಧಿ ರಾಜನಿಗೆ, **ಯಃ** ಯಾವನು, **ತನುಜಃ** ಮಗನು, **ಆಸೀತ್** ಇದ್ದನೋ, **ಅಸೌ** ಇವನು, **ವರೇಣ** ಚತುರ್ಮುಖ ಬ್ರಹ್ಮದೇವರ ವರದಿಂದ, **ವಿಪ್ರತ್ವಂ** ಬ್ರಾಹ್ಮಣ್ಯವನ್ನು **ಅವಾಪ** ಹೊಂದಿದನು. **ಸಃ** ಅಂತಹ, **ವಿಶ್ವಸ್ಯ** ಸುಜನ ಸಮುದಾಯಕ್ಕೆ, **ಮಿತ್ರಂ** ಗೆಳೆಯನಂತೆ ಇರತಕ್ಕ ವಿಶ್ವಾಮಿತ್ರ ಋಷಿಯು, **ತತಃ** ಶ್ರೀರಾಮದೇವರ ಪ್ರಾದುರ್ಭಾವಾನಂತರದಲ್ಲಿ, **ಇಹ** ಈ ದಶರಥ ರಾಜನ ಮನೆಯನ್ನು ಕುರಿತು, **ಅಜಗಾಮ** ಬಂದನು.

**ತಾತ್ಪರ್ಯ** :- ಉತ್ತಮವಾದ ಚಂದ್ರವಂಶದಲ್ಲಿ ದೇವೇಂದ್ರ 'ಗಾಧಿ' ಎಂಬ ಹೆಸರಿನಿಂದ ಅವತರಿಸಿದ್ದ, ಬ್ರಹ್ಮವರದಿಂದ ಬ್ರಾಹ್ಮಣ್ಯ ಸಂಪಾದಿಸಿದ. ಸುಜನಹಿತ ಕಾರಿಯಾದ ವಿಶ್ವಾಮಿತ್ರ ಆ ಗಾಧಿಯ ಪುತ್ರ. ಇವನು ರಾಮನು ಪೌಗಂಡವ ಯಸ್ಸನ್ನು ದಾಟಿದಾಗ ಆಯೋಧ್ಯೆಗೆ ಆಗಮಿಸಿದ.

**ವಿವರಣೆ** :- ವಿಶ್ವಾಮಿತ್ರ ಎಂಬ ಪದವನ್ನು ಆಚಾರ್ಯರು ಬಿಡಿಸಿ 'ವಿಶ್ವಸ್ಯ ಮಿತ್ರಂ' ಎಂದು ವಿವರಿಸಿದ್ದಾರೆ. ವಿಶ್ವಾಮಿತ್ರ ಎಂಬುದನ್ನು 'ವಿಶ್ವಸ್ಯ ಅಮಿತ್ರಂ' ಎಂದು ವಿಗ್ರಹ ಮಾಡಿ ಜಗತ್ತಿಗೆ ಶತ್ರು ಎಂಬ ತಪ್ಪು ಅರ್ಥ ತೆಗೆಯುವ ಸಂಭವ ಇದೆ. 'ವಿಶ್ವಸ್ಯ "ಆ" ಸಮಂತಾತ್ ಮಿತ್ರಂ' ಎಂದು ವಿವರಿಸಿದಾಗ ಸಜ್ಜನರು ಮತ್ತು ಅಸಜ್ಜನರನ್ನು ಒಳಗೊಂಡ ಎಲ್ಲ ಪ್ರಪಂಚಕ್ಕೂ ಮಿತ್ರ ಎಂದು ತಿಳಿಯುವ ಸಂಭವ ಇದೆ. ಆದರೆ ಸುಬಾಹು ಮಾರೀಚರಂಥ ದುಷ್ಟರನ್ನು ಶ್ರೀರಾಮನ ಮೂಲಕ ಸಂಹರಿಸಲು ಬಂದ ಈ ಋಷಿ ಎಲ್ಲರಿಗೂ ಮಿತ್ರನಲ್ಲ. ಆದರೆ ದುಷ್ಟನಿಗ್ರಹ ಕಾರ್ಯದ ಮೂಲಕ ಸುಜನಜಗತ್ತಿಗೆ ಉಪಕಾರ ಮಾಡಲು ಬಂದವನು ಎಂದು ತಿಳಿಸಲು 'ವಿಶ್ವಸ್ಯ ಮಿತ್ರಂ' ಎಂದು ಬಿಡಿಸಿ ಹೇಳಿದ್ದಾರೆ. ಈ ಪ್ರಕರಣದಲ್ಲಿ ಯಥಾಯೋಗ್ಯ ಜ್ಞಾನಾದಿಪೂರ್ಣರಾದ ಸುಜೀವರನ್ನೂ ವಿಶ್ವಪದದಿಂದ ತೆಗೆದುಕೊಳ್ಳಬೇಕು. ॥ ೪ ॥

**ತೇನಾರ್ಥಿತೋ ಯಜ್ಞರಿರಕ್ಷಯೈವ**
**ಕೃಚ್ಛ್ರೇಣ ಪಿತ್ರಾಽಸ್ಯ ಭಯಾದ್ವಿಸೃಷ್ಟಃ ।**
**ಜಗಾಮ ರಾಮಃ ಸಹ ಲಕ್ಷ್ಮಣೇನ**
**ಸಿದ್ಧಾಶ್ರಮಂ ಸಿದ್ಧಜನಾಭಿವಂದ್ಯಃ ॥ ೫ ॥**

ಪದಚ್ಛೇದ : ತೇನ ಅರ್ಥಿತಃ ಯಜ್ಞರಿರಕ್ಷಯಾ ಏವ ಕೃಚ್ಛ್ರೇಣ ಪಿತ್ರಾ ಅಸ್ಯ ಭಯಾತ್ ವಿಸೃಷ್ಟಃ । ಜಗಾಮ ರಾಮಃ ಸಹ ಲಕ್ಷ್ಮಣೇನ ಸಿದ್ಧಾಶ್ರಮಂ ಸಿದ್ಧಜನಾಭಿವಂದ್ಯಃ ॥

**ಅರ್ಥ** :- **ಯಜ್ಞರಿರಕ್ಷಯೈವ** ಯಜ್ಞರಕ್ಷಣಕ್ಕಾಗಿಯೇ, **ತೇನ** ಆ ವಿಶ್ವಾಮಿತ್ರನಿಂದ, **ಅರ್ಥಿತಃ** ಪ್ರಾರ್ಥಿತನಾದ ದಶರಥನು, **ಅಸ್ಯ** ಈ ವಿಶ್ವಾಮಿತ್ರನ, **ಭಯಾತ್** ಭಯದಿಂದ, **ಪಿತ್ರಾ** ತಂದೆಯಾದ ದಶರಥ ಮಹಾ ರಾಜನಿಂದ, **ಕೃಚ್ಛ್ರಾತ್** ಕಷ್ಟದಿಂದ, **ವಿಸೃಷ್ಟಃ** ಕಳಿಸಲ್ಪಟ್ಟ, **ಸಿದ್ಧಜನಾಭಿವಂದ್ಯಃ** ಯೋಗಿಜನರಿಂದ ವಂದ್ಯನಾದ, **ರಾಮಃ** ಶ್ರೀರಾಮದೇವನು, **ಲಕ್ಷ್ಮಣೇನ ಸಹ** ಲಕ್ಷ್ಮಣನಿಂದ ಕೂಡಿಕೊಂಡು, **ಸಿದ್ಧಾಶ್ರಮಂ** ವಿಶ್ವಾಮಿತ್ರ ಋಷಿಗಳ ಆಶ್ರಮ ವನ್ನು, **ಜಗಾಮ** ಹೊರಟನು ॥ ೫ ॥

**ತಾತ್ಪರ್ಯ** :- ವಿಶ್ವಾಮಿತ್ರರು ತಾನು ಮಾಡುತ್ತಿದ್ದ ಯಜ್ಞಕ್ಕೆ ಸುಬಾಹು ಮುಂತಾದ ದೈತ್ಯರಿಂದ ಆಗುವ ಹಾನಿಯನ್ನು ತಡೆಯಲು ದಶರಥನ ಬಳಿ ಶ್ರೀರಾಮನನ್ನು ಕಳುಹಿಸಿಕೊಡಲು ಬೇಡಿದರು. ತಂದೆ ದಶರಥನು ಬಹಳ ಕಷ್ಟದಿಂದ ಕಳುಹಿಸಿಕೊಟ್ಟ. ಸಿದ್ಧಪುರುಷರಿಂದ ಸೇವಿತನಾದ ಶ್ರೀರಾಮನು ಲಕ್ಷ್ಮಣನೊಂದಿಗೆ ಸಿದ್ಧಾಶ್ರಮವನ್ನು ಕುರಿತು ಆಗಮಿಸಿದನು.

**ವಿವರಣೆ** :- ಶ್ರೀರಾಮನ ವಿಯೋಗದುಃಖ ದಶರಥನಿಗೆ ಸಹಿಸಲಸಾಧ್ಯ. ಆದರೂ ವಸಿಷ್ಠರು ಶ್ರೀರಾಮನ ಮಹಿಮೆ, ಅವತಾರದ ಉದ್ದೇಶ, ವಿಶ್ವಾಮಿತ್ರರ ಪ್ರಭಾವಗಳನ್ನು ಉಪದೇಶಿಸಿದಾಗ ಕಷ್ಟದಿಂದ ಕಳುಹಿಸಿದ. ಜೊತೆಗೆ ವಿಶ್ವಾಮಿತ್ರರ ಶಾಪಭಯವೂ ಇತ್ತು. ॥ ೫ ॥

ರಾಮನಿಗೆ ಅಸ್ತ್ರವಿದ್ಯೋಪದೇಶ

**ಅನುಗ್ರಹಾರ್ಥಂ ಸ ಋಷೇರವಾಪ**
**ಸಲಕ್ಷ್ಮಣೋಽಸ್ತ್ರಂ ಮುನಿತೋ ಹಿ ಕೇವಲಮ್ ।**
**ವವಂದಿರೇ ಬ್ರಹ್ಮಮುಖಾಃ ಸುರೇಶಾ-**
**ಸ್ತಮಸ್ತ್ರರೂಪಾಃ ಪ್ರಕಟಾಃ ಸಮೇತ್ಯ ॥ ೬ ॥**

ಪದಚ್ಛೇದ : ಅನುಗ್ರಹಾರ್ಥಂ ಸಃ ಋಷೇಃ ಅವಾಪ ಸಲಕ್ಷ್ಮಣಃ ಅಸ್ತ್ರಂ ಮುನಿತಃ ಹಿ ಕೇವಲಮ್ । ವವಂದಿರೇ ಬ್ರಹ್ಮಮುಖಾಃ ಸುರೇಶಾಃ ತಮ್ ಅಸ್ತ್ರರೂಪಾಃ ಪ್ರಕಟಾಃ ಸಮೇತ್ಯ ॥

**ಅರ್ಥ** :- **ಸಲಕ್ಷ್ಮಣಃ** ಲಕ್ಷ್ಮಣನಿಂದ ಸಹಿತನಾದ, **ಸಃ** ಆ ಶ್ರೀರಾಮನು, ಮುನಿತಃ ಬ್ರಹ್ಮನಿಷ್ಠನಾದ, **ಋಷೇಃ** ವಿಶ್ವಾಮಿತ್ರನಿಂದ, **ಅಸ್ತ್ರಂ** ಅಸ್ತ್ರ ವಿದ್ಯೆಯನ್ನು, **ಕೇವಲಂ ಅನುಗ್ರಹಾರ್ಥಂ** ಅನುಗ್ರಹ ಮಾಡುವುದಕ್ಕೋಸ್ಕರವೇ, **ಅವಾಪ** ಹೊಂದಿದನು, ಹಿ ಪ್ರಮಾಣಸಿದ್ಧವು, **ಅಸ್ತ್ರರೂಪಾಃ** ಅಸ್ತ್ರಾಭಿಮಾನಿಗಳಾದ, **ಬ್ರಹ್ಮಮುಖಾಃ** ಬ್ರಹ್ಮದೇವರೇ ಮೊದಲಾದ, **ಸುರೇಶಾಃ** ದೇವತೆಗಳು, **ಪ್ರಕಟಾಃ** ಕಾಣಿಸಿದವರಾಗಿ, **ತಂ** ಆ ಶ್ರೀರಾಮನನ್ನು, **ಸಮೇತ್ಯ** ಆಗಮಿಸಿ, **ವವಂದಿರೇ** ಭಕ್ತಿಪೂರ್ವಕ ನಮಸ್ಕರಿಸಿದರು.

**ತಾತ್ಪರ್ಯ** :- ವಿಶ್ವಾಮಿತ್ರರು ರಾಮ-ಲಕ್ಷ್ಮಣರಿಗೆ ಅಸ್ತ್ರಗಳನ್ನು ಉಪದೇಶಿಸಿದರು. ಶ್ರೀರಾಮನು ವಿಶ್ವಾಮಿತ್ರರಿಗೆ ಅನುಗ್ರಹಿಸುವುದಕ್ಕಾಗಿಯೇ ಅಸ್ತ್ರವಿದ್ಯೆಯನ್ನು ಸ್ವೀಕರಿಸಿದನು. ಆಗ ಅಸ್ತ್ರಾಭಿಮಾನಿಗಳಾದ ಬ್ರಹ್ಮಾದಿದೇವತೆಗಳು ಮೂರ್ತಿಮತ್ತಾಗಿ ಬಂದು ಶ್ರೀರಾಮನನ್ನು ನಮಸ್ಕರಿಸಿದರು.

**ವಿವರಣೆ** :- ೧. ಬ್ರಾಹ್ಮಣನಾದ ವಿಶ್ವಾಮಿತ್ರ ಅಸ್ತ್ರಗಳನ್ನು ಬಳಸಿ ಅಸುರ ನಿಗ್ರಹವನ್ನು ಮಾಡುವಂತಿಲ್ಲ. ದುಷ್ಟರ ನಿಗ್ರಹಕ್ಕಾಗಿ ಅವತರಿಸಿದ ಶ್ರೀರಾಮನಿಗೇ ಅಸ್ತ್ರವಿದ್ಯೆಯನ್ನು ಅರ್ಪಿಸಿದ.

೨. ಸರ್ವಶಕ್ತನಾದ ರಾಮನಾಗಲೀ, ಉಪಸಾಧಕ ಶೇಷಾವತಾರಿ ಲಕ್ಷ್ಮಣನಾಗಲೀ ಉಪದೇಶ ಪಡೆಯಬೇಕಿಲ್ಲ. ಆದರೂ ಮಂತ್ರದೇವತೆಗಳಿಗೆ ದುಷ್ಟ ನಿಗ್ರಹದ ಫಲ ಕೊಡುವುದಕ್ಕಾಗಿ, ಅವರ ಮೇಲಿನ ಅನುಗ್ರಹದೃಷ್ಟಿಯಿಂದ ಮಂತ್ರೋಪದೇಶ ಪಡೆದರು.

೩.. 'ಅನಂತಂ ವಿಷ್ಣುಸನ್ನಿಧೌ' ಎಂಬಂತೆ ಶ್ರೀರಾಮನಿಗೆ ಉಪದೇಶದ ಮೂಲಕ ಅವನ ಮುಂದೆ ಮಂತ್ರ ಜಪಿಸಿದ ಕಾರಣ ವಿಶ್ವಾಮಿತ್ರರಿಗೆ ಅನಂತ ಫಲ ಬರಲಿ ಎಂದೂ, ಗುರುಮುಖದಿಂದ ಮಂತ್ರೋಪದೇಶ ಪಡೆದಾಗ ಮಾತ್ರ ಜ್ಞಾನಿಯಾದ ಶಿಷ್ಯನಿಗೆ ಮಂತ್ರ ಫಲಿಸುವುದು ಎಂದೂ ಲೋಕಕ್ಕೆ ತೋರಿಸಲು ಶ್ರೀರಾಮ ಉಪದೇಶ ಪಡೆದ. ॥ ೬ ॥

### ತಾಟಕೆ-ಸುಬಾಹುವಿನ ಸಂಹಾರ

**ಅಥೋ ಜಘಾನಾಶು ಶರೇಣ ತಾಟಕಾಂ**
**ವರಾದ್ವಿಧಾತುಸ್ತದನನ್ಯವಧ್ಯಾವ್ ।**
**ರರಕ್ಷ ಯಜ್ಞಂ ಚ ಮುನೇರ್ನಿಹತ್ಯ**
**ಸುಬಾಹುಮೀಶಾನಗಿರಾ ವಿಮೃತ್ಯುವ್ ॥ ೭ ॥**

ಪದಚ್ಛೇದ : **ಅಥೋ ಜಘಾನ ಆಶು ಶರೇಣ ತಾಟಕಾಂ ವರಾತ್ ವಿಧಾತುಃ ತದನನ್ಯವಧ್ಯಾವ್ । ರರಕ್ಷ ಯಜ್ಞಂ ಚ ಮುನೇಃ ನಿಹತ್ಯ ಸುಬಾಹುವ್ ಈಶಾನಗಿರಾ ವಿಮೃತ್ಯುವ್॥**

**ಅರ್ಥ :- ಅಥೋ** ಅನಂತರದಲ್ಲಿ, **ವಿಧಾತುಃ** ಬ್ರಹ್ಮದೇವನ, **ವರಾತ್** ವರದಿಂದ, **ತದನನ್ಯವಧ್ಯಾಂ** ಶ್ರೀಹರಿಯನ್ನು ಹೊರತುಪಡಿಸಿ ಯಾರಿಂದಲೂ ಸಂಹರಿಸಲಾಗದ, **ತಾಟಕಾಂ** ತಾಟಕಾ ಎಂಬ ರಾಕ್ಷಸಿಯನ್ನು, **ಆಶು** ಶೀಘ್ರದಲ್ಲಿ, **ಶರೇಣ** ಒಂದೇ ಬಾಣದಿಂದ, **ಜಘಾನ** ಕೊಂದನು, **ಚ** ಮತ್ತು, **ಈಶಾನಗಿರಾ** ಈಶಾನ ರುದ್ರದೇವರ, **ಗಿರಾ** ವಾಕ್ಯ(ವರ)ದಿಂದ, **ವಿಮೃತ್ಯುಂ** ಅವಧ್ಯನಾದ, **ಸುಬಾಹುಂ** ಸುಬಾಹು ಎಂಬ ರಾಕ್ಷಸನನ್ನು, **ನಿಹತ್ಯ** ಕೊಂದು, **ಮುನೇಃ** ವಿಶ್ವಾಮಿತ್ರ ಋಷಿಗಳ, **ಯಜ್ಞಂ** ಯಜ್ಞವನ್ನು, **ರರಕ್ಷ** ರಕ್ಷಿಸಿದನು.

**ತಾತ್ಪರ್ಯ** : ಮಂತ್ರೋಪದೇಶದ ನಂತರ ಶ್ರೀರಾಮ ತಾಟಕೆಯನ್ನು ಸಂಹರಿಸಿದ. ಅವಳು ರಾಮನ ಹೊರತು ಅನ್ಯರಿಂದ ಅವಧ್ಯಳಾಗಿದ್ದಳು. ಹಾಗೆ ಬ್ರಹ್ಮವರ ಇತ್ತು. ಒಂದೇ ಬಾಣದಿಂದ ಶ್ರೀರಾಮ ಅವಳನ್ನು ಸಂಹರಿಸಿದ. ರುದ್ರವರದಿಂದ ಸಾವಿಲ್ಲದವನಾಗಿದ್ದ ಸುಬಾಹುವನ್ನು ಸಂಹರಿಸಿ, ವಿಶ್ವಾಮಿತ್ರ ಮುನಿಯ ಯಜ್ಞವನ್ನು ರಕ್ಷಿಸಿದ. ॥ ೭ ॥

**ಶರೇಣ ಮಾರೀಚಮಥಾರ್ಣವೇಽಕ್ಷಿಪದ್**
**ವಚೋ ವಿರಿಂಚಸ್ಯ ತು ಮಾನಯಾನಃ ।**
**ಅವಧ್ಯತಾ ತೇನ ಹಿ ತಸ್ಯ ದತ್ತಾ**
**ಜಘಾನ ಚಾನ್ಯಾನ್ ರಜನೀಚರಾನಥ ॥ ೮ ॥**

ಪದಚ್ಛೇದ : **ಶರೇಣ ಮಾರೀಚವ್ ಅಥ ಅರ್ಣವೇ ಅಕ್ಷಿಪತ್ ವಚಃ ವಿರಿಂಚಸ್ಯ ತು ಮಾನಯಾನಃ । ಅವಧ್ಯತಾ ತೇನ ಹಿ ತಸ್ಯ ದತ್ತಾ ಜಘಾನ ಚ ಅನ್ಯಾನ್ ರಜನೀಚರಾನ್ ಅಥ ॥**

**ಅರ್ಥ** :- **ಅಥ** ತಾಟಕಿ-ಸುಬಾಹುವಿನ ಸಂಹಾರದ ನಂತರ, **ವಿರಿಂಚಸ್ಯ** ಬ್ರಹ್ಮದೇವರ, **ವಚಃ** ವಚನವನ್ನು **ಮಾನಯಾನಃ** ಸತ್ಯವನ್ನಾಗಿ ಮಾಡತಕ್ಕ ಶ್ರೀರಾಮನು, **ಮಾರೀಚಂ ತು** ಮಾರೀಚ ಎಂಬ ರಾಕ್ಷಸನನ್ನು ಮಾತ್ರ, **ಶರೇಣ** ಬಾಣದಿಂದ, **ಅರ್ಣವೇ** ಸಮುದ್ರದಲ್ಲಿ, **ಅಕ್ಷಿಪತ್** ಎಸೆದನು. **ತಸ್ಯ** ಆ ಮಾರೀಚನಿಗೆ, **ತೇನ** ಬ್ರಹ್ಮದೇವರಿಂದ, **ಅವಧ್ಯತಾ** ಅವಧ್ಯತ್ವವರವು, **ದತ್ತಾ** ಕೊಡಲ್ಪಟ್ಟಿತ್ತು, **ಚ** ಮತ್ತು, **ಅಥ** ಅನಂತರದಲ್ಲಿ, **ಅನ್ಯಾನ್** ಇತರರಾದ, **ರಜನೀಚರಾನ್** ರಾತ್ರಿಯಲ್ಲಿ ಸಂಚರಿಸತಕ್ಕ ರಾಕ್ಷಸರನ್ನು, **ಜಘಾನ** ಕೊಂದನು.

**ತಾತ್ಪರ್ಯ** :- ಸುಬಾಹುವಿನ ಸಂಹಾರದ ನಂತರ ಶ್ರೀರಾಮನು, ಬ್ರಹ್ಮವರದಿಂದ ಅವಧ್ಯನಾಗಿದ್ದ ಮಾರೀಚನನ್ನು ಬ್ರಹ್ಮವರವನ್ನು ಮಾನ್ಯ ಮಾಡಲು ಒಂದು ಬಾಣದಿಂದ ಸಮುದ್ರಕ್ಕೆ ಎಸೆದ. ನಂತರ ಉಳಿದ ರಾಕ್ಷಸರನ್ನು ಸಂಹರಿಸಿದ.

**ವಿವರಣೆ** :- ಶ್ರೀರಾಮನಿಗೆ ಬ್ರಹ್ಮವರಕ್ಕೆ ಮಾನ್ಯತೆ ಕೊಡುವ ಉದ್ದೇಶ ಸಾರ್ವಕಾಲಿಕವಲ್ಲ. ಹಾಗಿದ್ದಲ್ಲಿ ಅವನನ್ನು ಮುಂದೆಯೂ ಸಂಹರಿಸಬಾರದು. ಮುಂದೆ ಅವನಿಗೆ ಮಾಯಾಜಿಂಕೆ ರೂಪದಿಂದ ಪಾಪಕಾರ್ಯಸಾಧನೆಗೆ ಅವಕಾಶ ದೊರಕಲಿ ಎಂಬ ಉದ್ದೇಶದಿಂದ ಸಂಹರಿಸಲಿಲ್ಲ. ಹಾಗಾಗಿ ಇದು ತಾತ್ಕಾಲಿಕ ಮಾನ್ಯತೆ. ಈ ಅಂಶವನ್ನು 'ತು' ಎಂಬ ಶಬ್ದದಿಂದ ಆಚಾರ್ಯರು ತೋರಿಸಿದ್ದಾರೆ. ॥ ೮ ॥

ಸೀತಾ ಸ್ವಯಂವರ

**ತದಾ ವಿದೇಹೇನ ಸುತಾಸ್ವಯಂವರೋ**
**ವಿಘೋಷಿತೋ ದಿಕ್ಷು ವಿದಿಕ್ಷು ಸರ್ವಶಃ ।**
**ನಿಧಾರ್ಯ ತದ್ಗಾಧಿಸುತಾನುಯಾಯೀ**
**ಯಯೌ ವಿದೇಹಾನನುಜಾನುಯಾತಃ ॥ ೯ ॥**

ಪದಚ್ಛೇದ :- ತದಾ ವಿದೇಹೇನ ಸುತಾಸ್ವಯಂವರಃ ವಿಘೋಷಿತಃ ದಿಕ್ಷು ವಿದಿಕ್ಷು ಸರ್ವಶಃ । ನಿಧಾರ್ಯ ತತ್ ಗಾಧಿಸುತಾನುಯಾಯೀ ಯಯೌ ವಿದೇಹಾನ್ ಅನುಜಾನುಯಾತಃ ॥

**ಅರ್ಥ** :- **ತದಾ** ವಿಶ್ವಾಮಿತ್ರ ಋಷಿಗಳ ಯಜ್ಞ ಮುಗಿದಾಗ, **ವಿದೇಹೇನ** ಜನಕ ರಾಜನಿಂದ, **ಸರ್ವಶಃ** ಎಲ್ಲ, **ದಿಕ್ಷು** ದಿಕ್ಕುಗಳಲ್ಲಿ **ಚ** ಮತ್ತು, **ವಿದಿಕ್ಷು**

ಉಪದಿಕ್ಕುಗಳಲ್ಲಿ, **ಸುತಾಸ್ವಯಂವರಃ** ಸುತಾ ಮಗಳಾದ ಸೀತಾದೇವಿಯ, **ಸ್ವಯಂವರಃ** ಸ್ವಯಂವರವು, **ವಿಘೋಷಿತಃ** ಘೋಷಿಸಲ್ಪಟ್ಟಿತು, **ತತ್** ಆ ಘೋಷಣೆಯನ್ನು, **ನಿಧಾರ್ಯ** ತಿಳಿದು ಕೊಂಡು, **ಗಾಧಿಸುತಾನುಯಾಯೀ** ವಿಶ್ವಾಮಿತ್ರ ಋಷಿಗಳ ಆದೇಶವನ್ನು ಅನುಸರಿಸಿ, **ಅನುಜಾನುಯಾತಃ** ಹಿಂಬಾಲಿಸಿದ ಲಕ್ಷ್ಮಣನೊಡನೆ ಶ್ರೀರಾಮದೇವನು, **ವಿದೇಹಾನ್** ವಿದೇಹರಾಜ್ಯ ವನ್ನು ಕುರಿತು, **ಯಯೌ** ಹೊರಟನು.

**ತಾತ್ಪರ್ಯ** :- ಅದೇ ಸಮಯದಲ್ಲಿ ವಿದೇಹದ ದೊರೆ ಜನಕ, ತನ್ನ ಮಗಳಾದ ಸೀತೆಯ ಸ್ವಯಂವರದ ಘೋಷಣೆಯನ್ನು ಹತ್ತು ದಿಕ್ಕುಗಳಲ್ಲಿಯೂ ಪ್ರಸಿದ್ಧಿಪಡಿಸಿದ. ಅದನ್ನು ಕೇಳಿದ ಶ್ರೀರಾಮ ಲಕ್ಷ್ಮಣನೊಂದಿಗೆ ವಿಶ್ವಾಮಿತ್ರನ್ನು ಅನುಸರಿಸುತ್ತ ವಿದೇಹನಗರಕ್ಕೆ ಹೊರಟ. ॥ ೯ ॥

### ಅಹಲ್ಯೋದ್ಧಾರ

**ಅಥೋ ಅಹಲ್ಯಾಂ ಪತಿನಾಭಿಶಪ್ತಾಂ**
**ಪ್ರಧರ್ಷಣಾದಿಂದ್ರಕೃತಾಚ್ಛಿಲೀಕೃತಾಮ್ ।**
**ಸ್ವದರ್ಶನಾನ್ಮಾನುಷತಾಮುಪೇತಾಂ**
**ಸುಯೋಜಯಾಮಾಸ ಸ ಗೌತಮೇನ ॥ ೧೦ ॥**

ಪದಚ್ಛೇದ : ಅಥೋ ಅಹಲ್ಯಾಂ ಪತಿನಾಭಿಶಪ್ತಾಂ ಪ್ರಧರ್ಷಣಾತ್ ಇಂದ್ರಕೃತಾತ್ ಶಿಲೀಕೃತಾಮ್ । ಸ್ವದರ್ಶನಾತ್ ಮಾನುಷತಾಮ್ ಉಪೇತಾಂ ಸುಯೋಜಯಾ ಮಾಸ ಸಃ ಗೌತಮೇನ ॥

**ಅರ್ಥ** :- **ಅಥೋ** ವಿಶ್ವಾಮಿತ್ರ ಋಷಿಗಳ ಆಶ್ರಮದಿಂದ ಪಯಣಿಸಿದ ನಂತರ, **ಸಃ** ಆ ಶ್ರೀರಾಮದೇವನು, **ಇಂದ್ರಕೃತಾತ್** ದೇವೇಂದ್ರನಿಂದ ಮಾಡಲ್ಪಟ್ಟ **ಪ್ರಧರ್ಷಣಾತ್** ಸಂಪರ್ಕದ ದೆಸೆಯಿಂದ, **ಪತಿನಾಭಿಶಪ್ತಾಂ** ಪತಿಯಾದ ಗೌತಮ ಋಷಿಯಿಂದ ಶಾಪಗ್ರಸ್ತಳಾದ, **ಶಿಲೀಕೃತಾಂ** ಕಲ್ಲಿನಂತಿ ರುವ, **ಅಹಲ್ಯಾಂ** ಅಹಲ್ಯಾದೇವಿಯನ್ನು **ಸ್ವದರ್ಶನಾತ್** = **ಸ್ವ** ತನ್ನ **ದರ್ಶನಾತ್** ದರ್ಶನದಿಂದ, **ಮಾನುಷತಾಂ** ಮನುಷ್ಯತ್ವವನ್ನು **ಉಪೇತಾಂ** ಹೊಂದುವಂತೆ ಮಾಡಿ, **ಗೌತಮೇನ** ಗೌತಮ ಋಷಿಗಳಿಂದ, **ಸುಯೋಜ ಯಾಮಾಸ** ಸೇರಿಸಿದನು.

**ತಾತ್ಪರ್ಯ** :- ವಿದೇಹ ಪಟ್ಟಣಕ್ಕೆ ತೆರಳುವ ದಾರಿಯಲ್ಲಿ ಶ್ರೀರಾಮ ಗೌತಮರ ಆಶ್ರಮ ಪ್ರವೇಶಿಸಿದ. ಇಂದ್ರನ ಬಲಾತ್ಕಾರದಿಂದ ದೂಷಿತಳಾಗಿ, ಪತಿಯಾದ ಗೌತಮರ ಶಾಪದಿಂದ ಕಲ್ಲಿನಂತೆ ಬಿದ್ದಿರುವ ಅಹಲ್ಯೆಯನ್ನು ಕಂಡ. ತನ್ನ ದರ್ಶನದಿಂದ ನಿಜರೂಪ ಕರುಣಿಸಿದ. ಪತಿ-ಪತ್ನಿಯರನ್ನು ಒಗ್ಗೂಡಿಸಿದ.

**ವಿವರಣೆ** :- ಅಹಲ್ಯೆ ಗೌತಮರ ಮಡದಿ. ಗೌತಮರು ಮಹಾತಪಸ್ವಿಗಳು. ಅವರ ತಪಸ್ಸು ಯೋಗ್ಯತೆ ಮೀರಿ ಬೆಳೆಯಿತು. ಯೋಗ್ಯತೆ ಮೀರಿದ ಪುಣ್ಯದ ಗಳಿಕೆಯಿಂದ ಇವರಿಗೆ ಮದ ಆವರಿಸಿ ಉತ್ತಮದೇವತೆಗಳಿಗೆ ಅಪಚಾರವಾಗಿ ಯೋಗ್ಯತಾನುಗುಣ ಪುಣ್ಯವನ್ನು ಕಳೆದುಕೊಳ್ಳುವ ಅಪಾಯವನ್ನು ಇಂದ್ರ ಗುರುತಿಸಿದ. ಅವರ ಮುದ್ದಿನ ಮಡದಿಯ ಸಂಗದ ನೆಪದಿಂದ ಅವರಿಂದ ತಾನು ಶಾಪ ಪಡೆದ. ತಪ್ಪಿಲ್ಲದ ಅಹಲ್ಯೆಯೂ ಪತಿಯಿಂದ ಶಪ್ತಳಾಗಿ ಕಲ್ಲಿನಂತಾದಳು. ದೇವತೆಯಾದ ಇಂದ್ರನಿಗೆ, ಅಹಲ್ಯೆ ಉತ್ತಮ ಸ್ತ್ರೀಯಲ್ಲ (ತನಗಿಂತ ಯೋಗ್ಯತೆಯಲ್ಲಿ ಉತ್ತಮಳಾದವಳಲ್ಲ). ಅವಳ ಸಂಗದಿಂದ ಅವನಿಗೆ ಪಾಪವಿಲ್ಲ. ಆಸೆಯಿಂದ ಇಂದ್ರ ಅವಳನ್ನು ಸೇರಿದವನೂ ಅಲ್ಲ. ಅಂತರಂಗದಲ್ಲಿ ಗೌತಮರ ಹಿತದೃಷ್ಟಿ ಅಡಗಿತ್ತು. ಆದ್ದರಿಂದಲೇ ವೇದವೂ ಅಹಲ್ಯೆಯ ಸಂಪರ್ಕದಿಂದ ಇಂದ್ರನ ಲೋಮವೂ ಮಕ್ಕಾಗಲಿಲ್ಲವೆಂದು ಹಿರಿಮೆ ಹಾಡಿತು. ಆದರೂ ವಿಷ್ಣುಭಕ್ತಳಾದ ಅಹಲ್ಯೆ ಶಾಪಗ್ರಸ್ತಳಾದುದು ಇಂದ್ರನಿಗೆ ಸಂತಾಪ ನೀಡಿತು. ಹರಿಭಕ್ತಳಿಗೆ ದುಃಖ ತನ್ನಿಂದ ಒದಗಿದ್ದಕ್ಕಾಗಿ ಇಂದ್ರನಿಗೂ, ಅಂಬರೀಶನ ಪ್ರಕರಣದಲ್ಲಿ ದೂರ್ವಾಸರಿಗೆ ಆದಂತೆ ಪಾಪಲೇಪವಾಯಿತು. ಹರಿಯಲ್ಲಿ ಅವಳ ಮೋಚನೆಗೆ ಮೊರೆ ಇಟ್ಟ. ಅಹಲ್ಯೆಯೂ ಅದೃಶ್ಯಳಾಗಿ ಶ್ರೀಹರಿಯನ್ನು ಆರಾಧಿಸಿದಳು. ಅಜ್ಞಾನ ಮೂಲಕವಾದ ಅವಳ ಇಂದ್ರಸಂಗದ ಪಾಪ ಮತ್ತು ಜನ್ಮಾಂತರದ ಪಾಪವನ್ನು ಶ್ರೀರಾಮ ಪರಿಹರಿಸಿದ. ಭಕ್ತನಾದ ಇಂದ್ರನ ಬೇಡಿಕೆ ಈಡೇರಿಸಿದ. ಅಹಲ್ಯೆ ಪತಿಯೊಂದಿಗೆ ಪ್ರೀತಿಯಿಂದ ಬೆರೆಯುವಂತೆ ಮಾಡಿ ಮುನ್ನಡೆದ. ॥ ೧೦ ॥

**ಬಲಂ ಸ್ವಭಕ್ತೇರಧಿಕಂ ಪ್ರಕಾಶಯನ್**
**ಅನುಗ್ರಹಂ ಚ ತ್ರಿದಶೇಷ್ವತುಲ್ಯಮ್ ।**
**ಅನನ್ಯ ಭಕ್ತಾಂ ಚ ಸುರೇಶಕಾಂಕ್ಷಯಾ**
**ವಿಧಾಯ ನಾರೀಂ ಪ್ರಯಯೌ ತಯಾಽರ್ಚಿತಃ ॥ ೧೧ ॥**

ಪದಚ್ಛೇದ : ಬಲಂ ಸ್ವಭಕ್ತೇಃ ಅಧಿಕಂ ಪ್ರಕಾಶಯನ್ ಅನುಗ್ರಹಂ ಚ ತ್ರಿದಶೇಷು ಅತುಲ್ಯವ್ । ಅನನ್ಯಭಕ್ತಾಂ ಚ ಸುರೇಶಕಾಂಕ್ಷಯಾ ವಿಧಾಯ ನಾರೀಂ ಪ್ರಯಯೌ ತಯಾ ಅರ್ಚಿತಃ ॥

**ಅರ್ಥ** :- **ಸ್ವಭಕ್ತೇಃ** ತನ್ನಲ್ಲಿ ಮಾಡತಕ್ಕ ಭಕ್ತಿಗೆ, **ಅಧಿಕಂ** ಪ್ರಾಯಶ್ಚಿತ್ತಕ್ಕಿಂತ ಹೆಚ್ಚಿನ, **ಬಲಂ** ಸಾಮರ್ಥ್ಯವು ಇದೆ ಎಂದು, **ಪ್ರಕಾಶಯನ್** ತಿಳಿಸಿಕೊಡುವವನಾಗಿ, **ಚ** ಮತ್ತು, **ತ್ರಿದಶೇಷು** ದೇವತೆಗಳಲ್ಲಿ, **ಅತುಲ್ಯಂ** ಸಾಟಿಯಿಲ್ಲದ, **ಅನುಗ್ರಹಂ** ಪ್ರಸಾದವನ್ನು, **ಪ್ರಕಾಶಯನ್** ತಿಳಿಸಿಕೊಡತಕ್ಕವನಾಗಿ, **ಅನನ್ಯಭಕ್ತಾಂ** ಶ್ರೀಹರಿಯಲ್ಲಿಯೇ ಪರಮಭಕ್ತಿಯನ್ನು ಮಾಡತಕ್ಕ ಅಹಲ್ಯಾದೇವಿಯನ್ನು, **ಸುರೇಶಕಾಂಕ್ಷಯಾ** ದೇವೇಂದ್ರನ ಪ್ರಾರ್ಥನೆಯಂತೆ, **ನಾರೀಂ** ಸ್ತ್ರೀಯನ್ನಾಗಿ, **ವಿಧಾಯ** ಮಾಡಿ, **ಚ** ಮತ್ತು, **ತಯಾ** ಅವಳಿಂದ, **ಅರ್ಚಿತಃ** ಪೂಜಿತನಾಗಿ, ಸಃ ಶ್ರೀರಾಮದೇವನು, **ಪ್ರಯಯೌ** ಹೊರಟನು.

**ತಾತ್ಪರ್ಯ** :- ಭಕ್ತಿಯ ಹಿರಿಮೆ ಮತ್ತು ದೇವತೆಗಳಲ್ಲಿ ತನಗಿರುವ ಪ್ರೀತಿಯನ್ನು ಪ್ರಕಟಪಡಿಸುತ್ತ ಶ್ರೀರಾಮ,ಭಕ್ತಳಾದ ಅಹಲ್ಯೆಯನ್ನು ದೇವೇಂದ್ರನ ಪ್ರಾರ್ಥನೆಯಂತೆ ಉದ್ಧರಿಸಿದ. ಅವಳಿಂದ ಪೂಜಿತನಾಗಿ ಮುಂದೆ ಪಯಣಿಸಿದ. ॥ ೧೧ ॥

### ವಿದೇಹನಗರಿಯಲ್ಲಿ ಸಂಭ್ರಮ

**ಶ್ಯಾಮಾವದಾತೇ ಜಗದೇಕಸಾರೇ**
**ಸ್ವನಂತಚಂದ್ರಾಧಿಕಕಾಂತಿಕಾಂತೇ ।**
**ಸಹಾನುಜೇ ಕಾರ್ಮುಕಬಾಣಪಾಣೌ**
**ಪುರೀಂ ಪ್ರವಿಷ್ಟೇ ತುತುಷುರ್ವಿದೇಹಜಾಃ ॥ ೧೨ ॥**

ಪದಚ್ಛೇದ : ಶ್ಯಾಮಾವದಾತೇ ಜಗದೇಕಸಾರೇ ಸ್ವನಂತಚಂದ್ರಾಧಿಕಕಾಂತಿಕಾಂತೇ । ಸಹಾನುಜೇ ಕಾರ್ಮುಕಬಾಣಪಾಣೌ ಪುರೀಂ ಪ್ರವಿಷ್ಟೇ ತುತುಷುಃ ವಿದೇಹಜಾಃ ॥

**ಅರ್ಥ** :- **ಶ್ಯಾಮಾವದಾತೇ** = **ಶ್ಯಾಮ** ನೀಲವರ್ಣವುಳ್ಳ, **ಅವದಾತೇ** ನಿರ್ಮಲನಾದ, **ಜಗದೇಕಸಾರೇ** = **ಜಗತಿ** ಜಗತ್ತಿನಲ್ಲಿ, **ಏಕಸಾರೇ** ಸರ್ವೋತ್ತಮನಾದ, **ಸ್ವನಂತಚಂದ್ರಾಧಿಕಕಾಂತಿಕಾಂತೇ** ಸುಕಳಂಕರಹಿತರಾದ, **ಅನಂತ** ಅಸಂಖ್ಯರಾದ, **ಚಂದ್ರ** ಚಂದ್ರರಿಗಿಂತಲೂ, **ಅಧಿಕ** ಹೆಚ್ಚಿನ, **ಕಾಂತಿ**

ಕಾಂತಿಯಿಂದ, **ಕಾಂತೇ** ಮನೋಹರನಾದ, **ಸಹಾನುಜೇ** ತಮ್ಮನಾದ ಲಕ್ಷ್ಮಣನಿಂದ ಕೂಡಿದ, **ಕಾರ್ಮುಕಬಾಣಪಾಣೌ** ಕೈಯಲ್ಲಿ ಬಿಲ್ಲು ಬಾಣಗಳನ್ನು ಧರಿಸಿದ ಶ್ರೀರಾಮಚಂದ್ರ ದೇವನು, **ಪುರೀಂ** ಮಿಥಿಲಾನಗರವನ್ನು **ಪ್ರವಿಷ್ಟೇ** ಪ್ರವೇಶಿಸುತ್ತಿರಲು, **ವಿದೇಹಜಾಃ** ವಿದೇಹ ರಾಜ್ಯದ ಪ್ರಜೆಗಳು, **ತುತುಷುಃ** ಸಂತೋಷ ಹೊಂದಿದರು.

**ತಾತ್ಪರ್ಯ** :-ನೀಲವರ್ಣನೂ, ನಿರ್ಮಲನೂ ಸರ್ವೋತ್ತಮನೂ ಅನಂತ ಚಂದ್ರರ ಕಾಂತಿಯಿಂದ ಕಂಗೊಳಿಸುವವನೂ ಆದ, ಬಿಲ್ಲುಬಾಣಗಳನ್ನು ಧರಿಸಿದ ಶ್ರೀರಾಮನು ಲಕ್ಷ್ಮಣನೊಡನೆ ಮಿಥಿಲಾನಗರವನ್ನು ಪ್ರವೇಶಿಸಿದಾಗ, ಆ ನಗರದ ಜನರೆಲ್ಲ ಸಂತಸಭರಿತ ರಾದರು. ॥ ೧೨ ॥

**ಪಪುರ್ನಿತಾಂತಂ ಸರಸಾಕ್ಷಿಭೃಂಗೈ-**
**ರ್ವರಾನನಾಬ್ಜಂ ಪುರುಷೋತ್ತಮಸ್ಯ ।**
**ವಿದೇಹನಾರೀನರವರ್ಯಸಂಘಾ**
**ಯಥಾ ಮಹಾಪೌರುಷಿಕಾಸ್ತದಂಘ್ರಿಮ್ ॥ ೧೩ ॥**

**ಪದಚ್ಛೇದ** : **ಪಪುಃ ನಿತಾಂತಂ ಸರಸಾಕ್ಷಿಭೃಂಗೈಃ ವರಾನನಾಬ್ಜಂ ಪುರುಷೋತ್ತಮಸ್ಯ । ವಿದೇಹನಾರೀನರವರ್ಯಸಂಘಾಃ ಯಥಾ ಮಹಾಪೌರುಷಿಕಾಃ ತದಂಘ್ರಿಮ್ ॥**

**ಅರ್ಥ** :- **ಮಹಾಪೌರುಷಿಕಾಃ** ಮಹಾತ್ಮರಾದ ಶುಕ-ನಾರದಾದಿಗಳು, **ತದಂಘ್ರಿಂ ಯಥಾ** ಶ್ರೀಹರಿಯ ಪಾದಗಳನ್ನು (ಆರಾಧಿಸುವಂತೆ), **ವಿದೇಹ ನಾರೀನರವರ್ಯಸಂಘಾಃ** = ವಿದೇಹ ವಿದೇಹದೇಶದ, ನಾರೀ ಸ್ತ್ರೀಯರು, ನರ ಪುರುಷರು ಇವರಲ್ಲಿ, **ವರ್ಯ** ಶ್ರೇಷ್ಠರಾದವರ, **ಸಂಘಾಃ** ಸಮುದಾಯವು, **ಪುರುಷೋತ್ತಮಸ್ಯ** ಪುರುಷೋತ್ತಮನಾದ ಶ್ರೀರಾಮ ದೇವನ, **ವರಾನನಾಬ್ಜಂ** ಶ್ರೇಷ್ಠವಾದ ಮುಖಕಮಲವನ್ನು, **ಸರಸಾಕ್ಷಿಭೃಂಗೈಃ** = **ಸರಸ** ಸ್ನೇಹ ಪೂರ್ಣವಾದ, **ಅಕ್ಷಿ** (ತಮ್ಮ) ಕಣ್ಣುಗಳೆಂಬ, **ಭೃಂಗೈಃ** ದುಂಬಿ ಗಳಿಂದ, **ನಿತಾಂತಂ** ಅತ್ಯಂತವಾಗಿ, **ಪಪೌ** ಆಸ್ವಾದನ ಮಾಡಿದರು.

**ತಾತ್ಪರ್ಯ** :- ಮಹಾಭಾಗವತರಾದ ಶುಕ-ನಾರದರು ಹರಿಚರಣಗಳನ್ನು ಆರಾಧಿಸುವಂತೆ, ವಿದೇಹನಗರದ ಸುಜನಸಮೂಹವು ಪುರುಷೋತ್ತಮನಾದ ಶ್ರೀರಾಮನ ಮುಖ ಕಮಲವನ್ನು ತಮ್ಮ ಕಣ್ಣುಗಳೆಂಬ ದುಂಬಿಗಳಿಂದ ಆಸ್ವಾದಿಸಿತು. ॥ ೧೩ ॥

**ತದಾ ವಿದೇಹಃ ಪ್ರತಿಲಭ್ಯ ರಾಮಂ**
**ಸಹಸ್ರನೇತ್ರಾವರಜಂ ಗವಿಷ್ಠಮ್ ।**
**ಸಮರ್ಚಯಾಮಾಸ ಸಹಾನುಜಂ ತ-**
**ಮೃಷಿಂ ಚ ಸಾಕ್ಷಾತ್ ಜ್ವಲನಪ್ರಕಾಶವ್ ॥ ೧೪ ॥**

ಪದಚ್ಛೇದ : ತದಾ ವಿದೇಹಃ ಪ್ರತಿಲಭ್ಯ ರಾಮಂ ಸಹಸ್ರನೇತ್ರಾವರಜಂ ಗವಿಷ್ಠಮ್ । ಸಮರ್ಚಯಾಮಾಸ ಸಹಾನುಜಂ ತಮ್ ಋಷಿಂ ಚ ಸಾಕ್ಷಾತ್ ಜ್ವಲನಪ್ರಕಾಶಮ್॥

**ಅರ್ಥ :-** **ತದಾ** ಶ್ರೀರಾಮದೇವನು ಪುರಪ್ರವೇಶ ಮಾಡುವ ಕಾಲದಲ್ಲಿ **ವಿದೇಹಃ** ಜನಕ ಮಹಾರಾಜನು, **ಗವಿಷ್ಠಂ** ಭೂಮಿಯಲ್ಲಿ ಅವತರಿಸಿದ, **ಸಹಾನುಜಂ** ತಮ್ಮನಾದ ಲಕ್ಷ್ಮಣನಿಂದ ಸಹಿತನಾದ, **ಸಹಸ್ರನೇತ್ರಾವರಜಂ** = **ಸಹಸ್ರನೇತ್ರ** ದೇವೇಂದ್ರನ, **ಅವರಜಂ** ತಮ್ಮನಾಗಿ ಅವತರಿಸಿದ ಶ್ರೀವಾಮನ ದೇವರಂತೆ ಮಹಾ ಸುಂದರಾಂಗನಾದ (ಶ್ರೀವಾಮನದೇವರೇ ಶ್ರೀರಾಮ ದೇವನು), **ಸಾಕ್ಷಾತ್ ಜ್ವಲನಪ್ರಕಾಶಂ** ಅಗ್ನಿಯಂತೆ ತೇಜೋಮಯನಾದ, **ತಂ** ಆ, **ರಾಮಂ** ಶ್ರೀರಾಮಚಂದ್ರನನ್ನು **ಪ್ರತಿಲಭ್ಯ** ಕಂಡು, **ಸಮರ್ಚಯಾಮಾಸ** ಭಕ್ತಿಯಿಂದ ಪೂಜಿಸಿದನು, **ಚ** ಮತ್ತು, **ತಂ** ಜೊತೆಗೆ ಬಂದ, **ಜ್ವಲನಪ್ರಕಾಶಂ** ಅಗ್ನಿಯಂತೆ ಪೊಳೆಯುವ, **ಋಷಿಂ** ವಿಶ್ವಾಮಿತ್ರ ಋಷಿಯನ್ನು ಕೂಡ, **ಸಮರ್ಚಯಾಮಾಸ** ಅವರ ಯೋಗ್ಯತೆಗೆ ಅನುಗುಣವಾಗಿ ಪೂಜಿಸಿದನು.

**ತಾತ್ಪರ್ಯ :-** ಆಗ ಜನಕರಾಜನು, ಧರೆಗಿಳಿದ ಇಂದ್ರನ ತಮ್ಮನಾದ ಅಗ್ನಿಯಂತೆ ಪೊಳೆಯುವ ಶ್ರೀರಾಮನನ್ನು ಲಕ್ಷ್ಮಣನೊಡನೆ ಸ್ವಾಗತಿಸಿ ಸತ್ಕರಿಸಿದನು. ಜೊತೆಗೆ ತೇಜಸ್ವಿಗಳಾದ ವಿಶ್ವಾಮಿತ್ರಮುನಿಗಳನ್ನು ಕೂಡ ಆದರಿಸಿದನು. ॥ ೧೪ ॥

**ಮೇನೇ ಚ ಜಾಮಾತರಮಾತ್ಮಕನ್ಯಾ-**
**ಗುಣೋಚಿತಂ ರೂಪನವಾವತಾರಮ್ ।**
**ಉವಾಚ ಚಾಸ್ಮಾ ಋಷಿರುಗ್ರತೇಜಾಃ**
**ಕುರುಷ್ವ ಜಾಮಾತರಮೇನಮಾಶ್ವಿತಿ ॥ ೧೫ ॥**

ಪದಚ್ಛೇದ : ಮೇನೇ ಚ ಜಾಮಾತರಮ್ ಆತ್ಮಕನ್ಯಾಗುಣೋಚಿತಂ ರೂಪನ ವಾವತಾರವ್ । ಉವಾಚ ಚ ಅಸ್ಮೈ ಋಷಿಃ ಉಗ್ರತೇಜಾಃ ಕುರುಷ್ವ ಜಾಮಾತರಮ್ ಏನಮ್ ಆಶು ಇತಿ ॥

ಕಾಂತಿಯಿಂದ, **ಕಾಂತೇ** ಮನೋಹರನಾದ, **ಸಹಾನುಜೇ** ತಮ್ಮನಾದ ಲಕ್ಷ್ಮಣನಿಂದ ಕೂಡಿದ, **ಕಾರ್ಮುಕಬಾಣಪಾಣೌ** ಕೈಯಲ್ಲಿ ಬಿಲ್ಲು ಬಾಣಗಳನ್ನು ಧರಿಸಿದ ಶ್ರೀರಾಮಚಂದ್ರ ದೇವನು, **ಪುರೀಂ** ಮಿಥಿಲಾನಗರವನ್ನು **ಪ್ರವಿಷ್ಟೇ** ಪ್ರವೇಶಿಸುತ್ತಿರಲು, **ವಿದೇಹಜಾಃ** ವಿದೇಹ ರಾಜ್ಯದ ಪ್ರಜೆಗಳು, **ತುತುಷುಃ** ಸಂತೋಷ ಹೊಂದಿದರು.

**ತಾತ್ಪರ್ಯ** :-ನೀಲವರ್ಣನೂ, ನಿರ್ಮಲನೂ ಸರ್ವೋತ್ತಮನೂ ಅನಂತ ಚಂದ್ರರ ಕಾಂತಿಯಿಂದ ಕಂಗೊಳಿಸುವವನೂ ಆದ, ಬಿಲ್ಲುಬಾಣಗಳನ್ನು ಧರಿಸಿದ ಶ್ರೀರಾಮನು ಲಕ್ಷ್ಮಣನೊಡನೆ ಮಿಥಿಲಾನಗರವನ್ನು ಪ್ರವೇಶಿಸಿದಾಗ, ಆ ನಗರದ ಜನರೆಲ್ಲ ಸಂತಸಭರಿತ ರಾದರು. ॥ ೧೨ ॥

**ಪಪುರ್ನಿತಾಂತಂ ಸರಸಾಕ್ಷಿಭೃಂಗೈ-**
**ರ್ವರಾನನಾಬ್ಜಂ ಪುರುಷೋತ್ತಮಸ್ಯ ।**
**ವಿದೇಹನಾರೀನರವರ್ಯಸಂಘಾ**
**ಯಥಾ ಮಹಾಪೌರುಷಿಕಾಸ್ತದಂಘ್ರಿಮ್ ॥ ೧೩ ॥**

ಪದಚ್ಛೇದ : **ಪಪುಃ ನಿತಾಂತಂ ಸರಸಾಕ್ಷಿಭೃಂಗೈಃ ವರಾನನಾಬ್ಜಂ ಪುರುಷೋತ್ತಮಸ್ಯ । ವಿದೇಹನಾರೀನರವರ್ಯಸಂಘಾಃ ಯಥಾ ಮಹಾಪೌರುಷಿಕಾಃ ತದಂಘ್ರಿಮ್ ॥**

**ಅರ್ಥ** :- **ಮಹಾಪೌರುಷಿಕಾಃ** ಮಹಾತ್ಮರಾದ ಶುಕ-ನಾರದಾದಿಗಳು, **ತದಂಘ್ರಿಂ ಯಥಾ** ಶ್ರೀಹರಿಯ ಪಾದಗಳನ್ನು (ಆರಾಧಿಸುವಂತೆ), **ವಿದೇಹ ನಾರೀನರವರ್ಯಸಂಘಾಃ** = **ವಿದೇಹ** ವಿದೇಹದೇಶದ, **ನಾರೀ** ಸ್ತ್ರೀಯರು, **ನರ** ಪುರುಷರು ಇವರಲ್ಲಿ, **ವರ್ಯ** ಶ್ರೇಷ್ಠರಾದವರ, **ಸಂಘಾಃ** ಸಮುದಾಯವು, **ಪುರುಷೋತ್ತಮಸ್ಯ** ಪುರುಷೋತ್ತಮನಾದ ಶ್ರೀರಾಮ ದೇವನ, **ವರಾನನಾಬ್ಜಂ** ಶ್ರೇಷ್ಠವಾದ ಮುಖಕಮಲವನ್ನು, **ಸರಸಾಕ್ಷಿಭೃಂಗೈಃ** = **ಸರಸ** ಸ್ನೇಹ ಪೂರ್ಣವಾದ, **ಅಕ್ಷಿ** (ತಮ್ಮ) ಕಣ್ಣುಗಳೆಂಬ, **ಭೃಂಗೈಃ** ದುಂಬಿ ಗಳಿಂದ, **ನಿತಾಂತಂ** ಅತ್ಯಂತವಾಗಿ, **ಪಪೌ** ಆಸ್ವಾದನ ಮಾಡಿದರು.

**ತಾತ್ಪರ್ಯ** :- ಮಹಾಭಾಗವತರಾದ ಶುಕ-ನಾರದರು ಹರಿಚರಣಗಳನ್ನು ಆರಾಧಿಸುವಂತೆ, ವಿದೇಹನಗರದ ಸುಜನಸಮೂಹವು ಪುರುಷೋತ್ತಮನಾದ ಶ್ರೀರಾಮನ ಮುಖ ಕಮಲವನ್ನು ತಮ್ಮ ಕಣ್ಣುಗಳೆಂಬ ದುಂಬಿಗಳಿಂದ ಆಸ್ವಾದಿಸಿತು. ॥ ೧೩ ॥

ತದಾ ವಿದೇಹಃ ಪ್ರತಿಲಭ್ಯ ರಾಮಂ
ಸಹಸ್ರನೇತ್ರಾವರಜಂ ಗವಿಷ್ಠಮ್ ।
ಸಮರ್ಚಯಾಮಾಸ ಸಹಾನುಜಂ ತ-
ಮೃಷಿಂ ಚ ಸಾಕ್ಷಾತ್ ಜ್ವಲನಪ್ರಕಾಶವ್ ॥ ೧೪ ॥

ಪದಚ್ಛೇದ : ತದಾ ವಿದೇಹಃ ಪ್ರತಿಲಭ್ಯ ರಾಮಂ ಸಹಸ್ರನೇತ್ರಾವರಜಂ ಗವಿಷ್ಠಮ್ । ಸಮರ್ಚಯಾಮಾಸ ಸಹಾನುಜಂ ತಮ್ ಋಷಿಂ ಚ ಸಾಕ್ಷಾತ್ ಜ್ವಲನಪ್ರಕಾಶಮ್॥

**ಅರ್ಥ** :- ತದಾ ಶ್ರೀರಾಮದೇವನು ಪುರಪ್ರವೇಶ ಮಾಡುವ ಕಾಲದಲ್ಲಿ, **ವಿದೇಹಃ** ಜನಕ ಮಹಾರಾಜನು, **ಗವಿಷ್ಠಂ** ಭೂಮಿಯಲ್ಲಿ ಅವತರಿಸಿದ, **ಸಹಾನುಜಂ** ತಮ್ಮನಾದ ಲಕ್ಷ್ಮಣನಿಂದ ಸಹಿತನಾದ, **ಸಹಸ್ರನೇತ್ರಾವರಜಂ** = **ಸಹಸ್ರನೇತ್ರ** ದೇವೇಂದ್ರನ, **ಅವರಜಂ** ತಮ್ಮನಾಗಿ ಅವತರಿಸಿದ ಶ್ರೀವಾಮನ ದೇವರಂತೆ ಮಹಾ ಸುಂದರಾಂಗನಾದ (ಶ್ರೀವಾಮನದೇವರೇ ಶ್ರೀರಾಮ ದೇವನು), **ಸಾಕ್ಷಾತ್ ಜ್ವಲನಪ್ರಕಾಶಂ** ಅಗ್ನಿಯಂತೆ ತೇಜೋಮಯನಾದ, **ತಂ** ಆ, **ರಾಮಂ** ಶ್ರೀರಾಮಚಂದ್ರನನ್ನು **ಪ್ರತಿಲಭ್ಯ** ಕಂಡು, **ಸಮರ್ಚಯಾಮಾಸ** ಭಕ್ತಿಯಿಂದ ಪೂಜಿಸಿದನು, **ಚ** ಮತ್ತು, **ತಂ** ಜೊತೆಗೆ ಬಂದ, **ಜ್ವಲನಪ್ರಕಾಶಂ** ಅಗ್ನಿಯಂತೆ ಪೊಳೆಯುವ, **ಋಷಿಂ** ವಿಶ್ವಾಮಿತ್ರ ಋಷಿಯನ್ನು ಕೂಡ, **ಸಮರ್ಚಯಾಮಾಸ** ಅವರ ಯೋಗ್ಯತೆಗೆ ಅನುಗುಣವಾಗಿ ಪೂಜಿಸಿದನು.

**ತಾತ್ಪರ್ಯ** :- ಆಗ ಜನಕರಾಜನು, ಧರೆಗಿಳಿದ ಇಂದ್ರನ ತಮ್ಮನಾದ ಅಗ್ನಿಯಂತೆ ಪೊಳೆಯುವ ಶ್ರೀರಾಮನನ್ನು ಲಕ್ಷ್ಮಣನೊಡನೆ ಸ್ವಾಗತಿಸಿ ಸತ್ಕರಿಸಿದನು. ಜೊತೆಗೆ ತೇಜಸ್ವಿಗಳಾದ ವಿಶ್ವಾಮಿತ್ರಮುನಿಗಳನ್ನು ಕೂಡ ಆದರಿಸಿದನು. ॥ ೧೪ ॥

ಮೇನೇ ಚ ಜಾಮಾತರಮಾತ್ಮಕನ್ಯಾ-
ಗುಣೋಚಿತಂ ರೂಪನವಾವತಾರಮ್ ।
ಉವಾಚ ಚಾಸ್ಮಾ ಋಷಿರುಗ್ರತೇಜಾಃ
ಕುರುಷ್ವ ಜಾಮಾತರಮೇನಮಾಶ್ವಿತಿ ॥ ೧೫ ॥

ಪದಚ್ಛೇದ : ಮೇನೇ ಚ ಜಾಮಾತರಮ್ ಆತ್ಮಕನ್ಯಾಗುಣೋಚಿತಂ ರೂಪನ ವಾವತಾರವ್ । ಉವಾಚ ಚ ಅಸ್ಮೈ ಋಷಿಃ ಉಗ್ರತೇಜಾಃ ಕುರುಷ್ವ ಜಾಮಾತರಮ್ ಏನಮ್ ಆಶು ಇತಿ ॥

**ಅರ್ಥ** :- **ಚ** ಮತ್ತು, (ಆ ಜನಕರಾಜನು), **ರೂಪನವಾವತಾರಂ** ರಾಮನೆಂಬ ಹೊಸ ಅವತಾರ ತಳೆದ, **ಆತ್ಮಕನ್ಯಾಗುಣೋಚಿತಂ** = **ಆತ್ಮ** ತನ್ನ **ಕನ್ಯಾ** ಮಗಳಾದ ಸೀತಾದೇವಿಯ, **ಗುಣ** ಗುಣಗಳಿಗೆ, **ಉಚಿತಂ** ಯೋಗ್ಯನಾದ, **ಜಾಮಾತರಂ** ಅಳಿಯನನ್ನಾಗಿ, **ಮೇನೇ** ತಿಳಿದನು, **ಚ** ಮತ್ತು, **ಉಗ್ರತೇಜಾಃ** ಮಹಾತೇಜಸ್ವಿಯಾದ, **ಋಷಿಃ** ವಿಶ್ವಾಮಿತ್ರ ಋಷಿಯು, **ಏನಂ** ಶ್ರೀರಾಮ ದೇವನನ್ನು, **ಆಶು** ಶೀಘ್ರದಲ್ಲಿ, **ಜಾಮಾತರಂ** ಅಳಿಯನನ್ನಾಗಿ, **ಕುರುಷ್ವ** ಮಾಡಿಕೋ, **ಇತಿ** ಹೀಗೆ, **ಅಸ್ಮೈ** ಈ ಜನಕ ಮಹಾರಾಜನಿಗೆ, **ಉವಾಚ** ಹೇಳಿದನು.

**ತಾತ್ಪರ್ಯ** :- ಹೊಸ ಅವತಾರ ತಾಳಿದ ಪರಮಸುಂದರನಾದ ಶ್ರೀರಾಮನನ್ನು, ಜನಕ ಮಹಾರಾಜನು ತನ್ನ ಮಗಳಿಗೆ ಸಕಲವಿಧದಿಂದಲೂ ಅನುರೂಪನಾದ ಅಳಿಯನೆಂದು ಬಗೆದನು. ವಿಶ್ವಾಮಿತ್ರರೂ ರಾಮನನ್ನು ನಿನ್ನ ಅಳಿಯನನ್ನಾಗಿ ಸ್ವೀಕರಿಸು ಎಂದರು. ॥ ೧೫ ॥

ಬಿಲ್ಲಿನ ಇತಿಹಾಸ

**ಸ ಆಹ ಚೈನಂ ಪರಮಂ ವಚಸ್ತೇ**
**ಕರೋಮಿ ನಾತ್ರಾಸ್ತಿ ವಿಚಾರಣಾ ಮೇ ।**
**ಶೃಣುಷ್ವ ಮೇಽಥಾಪಿ ಯಥಾ ಪ್ರತಿಜ್ಞಾ**
**ಸುತಾಪ್ರದಾನಾಯ ಕೃತಾ ಪುರಸ್ತಾತ್ ॥ ೧೬ ॥**

ಪದಚ್ಛೇದ : ಸಃ ಆಹ ಚ ಏನಂ ಪರಮಂ ವಚಃ ತೇ ಕರೋಮಿ ನ ಅತ್ರ ಅಸ್ತಿ ವಿಚಾರಣಾ ಮೇ । ಶೃಣುಷ್ವ ಮೇ ಅಥ ಅಪಿ ಯಥಾ ಪ್ರತಿಜ್ಞಾ ಸುತಾಪ್ರದಾನಾಯ ಕೃತಾ ಪುರಸ್ತಾತ್ ॥

**ಅರ್ಥ** :- **ಸಃ** ಆ ಜನಕ ಮಹಾರಾಜನು, **ಏನಂ** ಈ ವಿಶ್ವಾಮಿತ್ರ ಋಷಿಯನ್ನು ಕುರಿತು, **ತೇ** ನಿಮ್ಮ, **ಪರಮಂ** ಶ್ರೇಷ್ಠವಾದ, **ವಚನಂ** ವಾಕ್ಯವನ್ನು, **ಕರೋಮಿ** ಪಾಲಿಸುತ್ತೇನೆ, **ಅತ್ರ** ಈ ವಿಷಯದಲ್ಲಿ, **ಮೇ** ನನಗೆ, **ವಿಚಾರಣಾ** ವಿಚಾರ ಮಾಡಬೇಕಾದುದು, **ನ ಅಸ್ತಿ** ಇರುವುದಿಲ್ಲ, **ಅಥಾಪಿ** ಹಾಗಿದ್ದರೂ ಕೂಡ, **ಮೇ** ನನ್ನ, **ಸುತಾಪ್ರದಾನಾಯ** ಮಗಳ ವಿವಾಹಕ್ಕೆ ಸಂಬಂಧಿಸಿದಂತೆ, **ಪುರಸ್ತಾತ್** ಈ ಹಿಂದೆ, **ಪ್ರತಿಜ್ಞಾ** ಪ್ರತಿಜ್ಞೆಯು, **ಯಥಾ** ಹೇಗೆ, **ಕೃತಾ** ಮಾಡಲ್ಪಟ್ಟಿದೆ, **ಶೃಣುಷ್ವ** ಕೇಳಿರಿ, **ಇತಿ** ಹೀಗೆ, **ಆಹ** ಹೇಳಿದನು.

**ತಾತ್ಪರ್ಯ** :- ಜನಕಮಹಾರಾಜ ಮರುನುಡಿದ - ತಮ್ಮ ಶ್ರೇಷ್ಠವಾದ ಸಲಹೆಯು ಸ್ವೀಕಾರಾರ್ಹವಾಗಿದೆ. ಶ್ರೀರಾಮನು ಸಕಲವಿಧದಿಂದಲೂ ನನ್ನ ಮಗಳಿಗೆ ಯೋಗ್ಯ ವರನೆಂಬ ಬಗ್ಗೆ ಸಂದೇಹವಿಲ್ಲ. ನನ್ನ ಮಗಳನ್ನು ವಿವಾಹ ಮಾಡಿಕೊಡುವ ಬಗ್ಗೆ ನಾನು ಹಿಂದೆ ಒಂದು ಪ್ರತಿಜ್ಞೆ ಮಾಡಿರುತ್ತೇನೆ ಅದನ್ನು ತಮಗೆ ತಿಳಿಸಬಯಸುತ್ತೇನೆ. ॥ ೧೬ ॥

**ತಪೋ ಮಯಾ ಚೀರ್ಣಮುಮಾಪತೇಃ ಪುರಾ**
**ವರಾಯುಧಾವಾಪ್ತಿಧೃತೇನ ಚೇತಸಾ ।**
**ಸ ಮೇ ದದೌ ದಿವ್ಯಮಿದಂ ಧನುಸ್ತದಾ**
**ಕಥಂಚನಾಚಾಲ್ಯಮೃತೇ ಪಿನಾಕಿನಮ್ ॥ ೧೭ ॥**

ಪದಚ್ಛೇದ : ತಪಃ ಮಯಾ ಚೀರ್ಣಂ ಉಮಾಪತೇಃ ಪುರಾ ವರಾಯುಧಾ ವಾಪ್ತಿಧೃತೇನ ಚೇತಸಾ । ಸಃ ಮೇ ದದೌ ದಿವ್ಯಂ ಇದಂ ಧನುಃ ತದಾ ಕಥಂಚನ ಅಚಾಲ್ಯಂ ಋತೇ ಪಿನಾಕಿನಮ್ ॥

**ಅರ್ಥ** : **ಪುರಾ** ಹಿಂದೆ, **ಉಮಾಪತೇಃ** ರುದ್ರದೇವರ ದೆಸೆಯಿಂದ, **ವರಾಯುಧಾವಾಪ್ತಿಧೃತೇನ** ಶ್ರೇಷ್ಠವಾದ ಆಯುಧವನ್ನು ಹೊಂದಬೇಕೆಂದು ನಿಶ್ಚಯಿಸಿದ, **ಚೇತಸಾ** ಮನಸ್ಸಿನಿಂದ, **ಮಯಾ** ನನ್ನಿಂದ, **ತಪಃ** ತಪಸ್ಸು **ಚೀರ್ಣಂ** ಮಾಡಲ್ಪಟ್ಟಿತು, **ತದಾ** ಆವಾಗ, **ಸಃ** ಆ ತಪಸ್ಸಿನಿಂದ ಪ್ರೀತರಾದ ರುದ್ರದೇವನು, **ಪಿನಾಕಿನಂ** ತನ್ನನ್ನು, **ಋತೇ** ಹೊರತಾಗಿ, **ಕಥಂಚನ ಅಪಿ** ಯಾವ ರೀತಿಯಿಂದಲೂ ಯಾರಿಂದಲೂ ಕೂಡ, **ಅಚಾಲ್ಯಂ** ಅಲುಗಾಡಿಸಲು ಆಗದಂತಹ, **ಇದಂ** ಈ ಮುಂದೆ ಇರುವ, **ದಿವ್ಯಂ** ಶ್ರೇಷ್ಠವಾದ, **ಧನುಃ** ಧನುಸ್ಸನ್ನು, **ಮೇ** ನನಗೆ, **ದದೌ** ಕೊಟ್ಟನು.

**ತಾತ್ಪರ್ಯ** :- ಹಿಂದೆ ನಾನು ಶ್ರೇಷ್ಠವಾದ ಆಯುಧವನ್ನು ಬಯಸಿ ರುದ್ರದೇವರನ್ನು ಕುರಿತು ತಪಸ್ಸನ್ನು ಮಾಡಿದೆನು. ತಮ್ಮಿಂದ ಹೊರತಾಗಿ ಬೇರೆಯವರಿಂದ ಅಲುಗಾಡಿಸಲು ಸಾಧ್ಯವಿಲ್ಲದ ಈ ದಿವ್ಯವಾದ ಬಿಲ್ಲನ್ನು ಅವರು ನನಗೆ ಕರುಣಿಸಿದರು.

**ಅರ್ಥ** :- **ಚ** ಮತ್ತು, (ಆ ಜನಕರಾಜನು), **ರೂಪನವಾವತಾರಂ** ರಾಮನೆಂಬ ಹೊಸ ಅವತಾರ ತಳೆದ, **ಆತ್ಮಕನ್ಯಾಗುಣೋಚಿತಂ** = **ಆತ್ಮ** ತನ್ನ **ಕನ್ಯಾ** ಮಗಳಾದ ಸೀತಾದೇವಿಯ, **ಗುಣ** ಗುಣಗಳಿಗೆ, **ಉಚಿತಂ** ಯೋಗ್ಯ ನಾದ, **ಜಾಮಾತರಂ** ಅಳಿಯನನ್ನಾಗಿ, **ಮೇನೇ** ತಿಳಿದನು, **ಚ** ಮತ್ತು, **ಉಗ್ರತೇಜಾಃ** ಮಹಾತೇಜಸ್ವಿಯಾದ, **ಋಷಿಃ** ವಿಶ್ವಾಮಿತ್ರ ಋಷಿಯು, **ಏನಂ** ಶ್ರೀರಾಮ ದೇವನನ್ನು, **ಆಶು** ಶೀಘ್ರದಲ್ಲಿ, **ಜಾಮಾತರಂ** ಅಳಿಯನನ್ನಾಗಿ, **ಕುರುಷ್ವ** ಮಾಡಿಕೋ, **ಇತಿ** ಹೀಗೆ, **ಅಸ್ಮೈ** ಈ ಜನಕ ಮಹಾರಾಜನಿಗೆ, **ಉವಾಚ** ಹೇಳಿದನು.

**ತಾತ್ಪರ್ಯ** :- ಹೊಸ ಅವತಾರ ತಾಳಿದ ಪರಮಸುಂದರನಾದ ಶ್ರೀರಾಮನನ್ನು ಜನಕ ಮಹಾರಾಜನು ತನ್ನ ಮಗಳಿಗೆ ಸಕಲವಿಧದಿಂದಲೂ ಅನುರೂಪನಾದ ಅಳಿಯನೆಂದು ಬಗೆದನು. ವಿಶ್ವಾಮಿತ್ರರೂ ರಾಮನನ್ನು ನಿನ್ನ ಅಳಿಯನನ್ನಾಗಿ ಸ್ವೀಕರಿಸು ಎಂದರು. ॥ ೧೫ ॥

ಬಲ್ಲಿಸ ಇತಿಹಾಸ

**ಸ ಆಹ ಚೈನಂ ಪರಮಂ ವಚಸ್ತೇ**
**ಕರೋಮಿ ನಾತ್ರಾಸ್ತಿ ವಿಚಾರಣಾ ಮೇ ।**
**ಶೃಣುಷ್ವ ಮೇಽಥಾಪಿ ಯಥಾ ಪ್ರತಿಜ್ಞಾ**
**ಸುತಾಪ್ರದಾನಾಯ ಕೃತಾ ಪುರಸ್ತಾತ್ ॥ ೧೬ ॥**

ಪದಚ್ಛೇದ : ಸಃ ಆಹ ಚ ಏನಂ ಪರಮಂ ವಚಃ ತೇ ಕರೋಮಿ ನ ಅತ್ರ ಅಸ್ತಿ ವಿಚಾರಣಾ ಮೇ । ಶೃಣುಷ್ವ ಮೇ ಅಥ ಅಪಿ ಯಥಾ ಪ್ರತಿಜ್ಞಾ ಸುತಾಪ್ರದಾನಾಯ ಕೃತಾ ಪುರಸ್ತಾತ್ ॥

**ಅರ್ಥ** :- **ಸಃ** ಆ ಜನಕ ಮಹಾರಾಜನು, **ಏನಂ** ಈ ವಿಶ್ವಾಮಿತ್ರ ಋಷಿಯನ್ನು ಕುರಿತು, **ತೇ** ನಿಮ್ಮ, **ಪರಮಂ** ಶ್ರೇಷ್ಠವಾದ, **ವಚನಂ** ವಾಕ್ಯವನ್ನು **ಕರೋಮಿ** ಪಾಲಿಸುತ್ತೇನೆ, **ಅತ್ರ** ಈ ವಿಷಯದಲ್ಲಿ, **ಮೇ** ನನಗೆ, **ವಿಚಾರಣಾ** ವಿಚಾರ ಮಾಡಬೇಕಾದುದು, **ನ ಅಸ್ತಿ** ಇರುವುದಿಲ್ಲ, **ಅಥಾಪಿ** ಹಾಗಿದ್ದರೂ ಕೂಡ, **ಮೇ** ನನ್ನ, **ಸುತಾಪ್ರದಾನಾಯ** ಮಗಳ ವಿವಾಹಕ್ಕೆ ಸಂಬಂಧಿಸಿದಂತೆ, **ಪುರಸ್ತಾತ್** ಈ ಹಿಂದೆ, **ಪ್ರತಿಜ್ಞಾ** ಪ್ರತಿಜ್ಞೆಯು, **ಯಥಾ** ಹೇಗೆ, **ಕೃತಾ** ಮಾಡಲ್ಪಟ್ಟಿದೆ, **ಶ್ರುಣುಷ್ವ** ಕೇಳಿರಿ, **ಇತಿ** ಹೀಗೆ, **ಆಹ** ಹೇಳಿದನು.

**ತಾತ್ಪರ್ಯ** :- ಜನಕಮಹಾರಾಜ ಮರುನುಡಿದ - ತಮ್ಮ ಶ್ರೇಷ್ಠವಾದ ಸಲಹೆಯು ಸ್ವೀಕಾರಾರ್ಹವಾಗಿದೆ. ಶ್ರೀರಾಮನು ಸಕಲವಿಧದಿಂದಲೂ ನನ್ನ ಮಗಳಿಗೆ ಯೋಗ್ಯ ವರನೆಂಬ ಬಗ್ಗೆ ಸಂದೇಹವಿಲ್ಲ. ನನ್ನ ಮಗಳನ್ನು ವಿವಾಹ ಮಾಡಿಕೊಡುವ ಬಗ್ಗೆ ನಾನು ಹಿಂದೆ ಒಂದು ಪ್ರತಿಜ್ಞೆ ಮಾಡಿರುತ್ತೇನೆ ಅದನ್ನು ತಮಗೆ ತಿಳಿಸಬಯಸುತ್ತೇನೆ. ॥ ೧೬ ॥

**ತಪೋ ಮಯಾ ಚೀರ್ಣಮುಮಾಪತೇಃ ಪುರಾ**
**ವರಾಯುಧಾವಾಪ್ತಿಧೃತೇನ ಚೇತಸಾ ।**
**ಸ ಮೇ ದದೌ ದಿವ್ಯಮಿದಂ ಧನುಸ್ತದಾ**
**ಕಥಂಚನಾಚಾಲ್ಯಮೃತೇ ಪಿನಾಕಿನಮ್ ॥ ೧೭ ॥**

ಪದಚ್ಛೇದ : ತಪಃ ಮಯಾ ಚೀರ್ಣಂ ಉಮಾಪತೇಃ ಪುರಾ ವರಾಯುಧಾ ವಾಪ್ತಿಧೃತೇನ ಚೇತಸಾ । ಸಃ ಮೇ ದದೌ ದಿವ್ಯಂ ಇದಂ ಧನುಃ ತದಾ ಕಥಂಚನ ಅಚಾಲ್ಯಂ ಋತೇ ಪಿನಾಕಿನಮ್ ॥

**ಅರ್ಥ** : **ಪುರಾ** ಹಿಂದೆ, **ಉಮಾಪತೇಃ** ರುದ್ರದೇವರ ದೆಸೆಯಿಂದ, **ವರಾಯುಧಾವಾಪ್ತಿಧೃತೇನ** ಶ್ರೇಷ್ಠವಾದ ಆಯುಧವನ್ನು ಹೊಂದಬೇಕೆಂದು ನಿಶ್ಚಯಿಸಿದ, **ಚೇತಸಾ** ಮನಸ್ಸಿನಿಂದ, **ಮಯಾ** ನನ್ನಿಂದ, **ತಪಃ** ತಪಸ್ಸು **ಚೀರ್ಣಂ** ಮಾಡಲ್ಪಟ್ಟಿತು, **ತದಾ** ಆವಾಗ, **ಸಃ** ಆ ತಪಸ್ಸಿನಿಂದ ಪ್ರೀತರಾದ ರುದ್ರದೇವನು, **ಪಿನಾಕಿನಂ** ತನ್ನನ್ನು **ಋತೇ** ಹೊರತಾಗಿ, **ಕಥಂಚನ ಅಪಿ** ಯಾವ ರೀತಿಯಿಂದಲೂ ಯಾರಿಂದಲೂ ಕೂಡ, **ಅಚಾಲ್ಯಂ** ಅಲುಗಾಡಿಸಲು ಆಗದಂತಹ, **ಇದಂ** ಈ ಮುಂದೆ ಇರುವ, **ದಿವ್ಯಂ** ಶ್ರೇಷ್ಠವಾದ, **ಧನುಃ** ಧನುಸ್ಸನ್ನು, **ಮೇ** ನನಗೆ, **ದದೌ** ಕೊಟ್ಟನು.

**ತಾತ್ಪರ್ಯ** :- ಹಿಂದೆ ನಾನು ಶ್ರೇಷ್ಠವಾದ ಆಯುಧವನ್ನು ಬಯಸಿ ರುದ್ರದೇವರನ್ನು ಕುರಿತು ತಪಸ್ಸನ್ನು ಮಾಡಿದೆನು. ತಮ್ಮಿಂದ ಹೊರತಾಗಿ ಬೇರೆಯವರಿಂದ ಅಲುಗಾಡಿಸಲು ಸಾಧ್ಯವಿಲ್ಲದ ಈ ದಿವ್ಯವಾದ ಬಿಲ್ಲನ್ನು ಅವರು ನನಗೆ ಕರುಣಿಸಿದರು.

ನ ದೇವದೈತ್ಯೋರಗದೇವಗಾಯಕಾ
ಅಲಂ ಧನುಶ್ಚಾಲಯಿತುಂ ಸವಾಸವಾಃ ।
ಕುತೋ ನರಾಸ್ತದ್ವರತೋ ಹಿ ಕಿಂಕರಾಃ
ಸಹಾನಸೈವಾತ್ರ ಕೃಷಂತಿ ಕೃಚ್ಛ್ರತಃ ॥ ೧೮ ॥

ಪದಚ್ಛೇದ : ನ ದೇವದೈತ್ಯೋರಗದೇವಗಾಯಕಾಃ ಅಲಂ ಧನುಃ ಚಾಲಯಿತುಂ ಸವಾಸವಾಃ । ಕುತಃ ನರಾಃ ತದ್ವರತಃ ಹಿ ಕಿಂಕರಾಃ ಸಹಾನಸಾ ಏವ ಅತ್ರ ಕೃಷಂತಿ ಕೃಚ್ಛ್ರತಃ॥

**ಅರ್ಥ** :- **ಸವಾಸವಾಃ** ದೇವೇಂದ್ರನಿಂದ ಸಹಿತರಾದ, **ದೇವದೈತ್ಯೋರಗ ದೇವಗಾಯಕಾಃ** ದೇವತೆಗಳು, ದೈತ್ಯರು, ಸರ್ಪಗಳು ಮತ್ತು ದೇವತೆಗಳ ಗಾಯಕರಾದ ಗಂಧರ್ವರು, **ಧನುಃ** ಈ ಧನುಸ್ಸನ್ನು **ಚಾಲಯಿತುಂ** ಚಲಿಸಲು (ಅಲುಗಾಡಿಸಲು ಕಾರ್ಯೋನ್ಮುಖವನ್ನಾಗಿ ಮಾಡಲು), **ನ ಅಲಂ** ಸಮರ್ಥರಲ್ಲ, **ನರಾಃ** ಮನುಷ್ಯರು, **ಕುತಃ** ಹೇಗೆ ಅದನ್ನು ಉಪಯೋಗ ಮಾಡಲು ಶಕ್ಯ?, **ಕಿಂಕರಾಃ** (ನನ್ನ) ಭೃತ್ಯರು, **ಅತ್ರ** ಈ (ನನ್ನ) ಮನೆಯಲ್ಲಿ, **ತದ್ವರತಃ** ಆ ರುದ್ರದೇವರ ವರದಿಂದ, **ಸಹಾನಸಾ ಏವ** ಬಂಡಿಯ ಸಹಾಯ ದಿಂದಲೇ, **ಕೃಚ್ಛ್ರತಃ** ಬಹಳ ಕಷ್ಟದಿಂದ, **ಕೃಷಂತಿ** ಎಳೆಯುತ್ತಾರೆ, **ಹಿ** ನಿಶ್ಚಯವು.

**ತಾತ್ಪರ್ಯ** :- ದೇವೇಂದ್ರನಿಂದ ಕೂಡಿದ ದೇವತೆಗಳ ಸಮೂಹವಾಗಲೀ ದೈತ್ಯರಾಗಲೀ ಸರ್ಪಗಳಾಗಲೀ ಗಂಧರ್ವರೇ ಮೊದಲಾದ ದೇವಭೃತ್ಯರಾಗಲೀ ಈ ಬಿಲ್ಲನ್ನು ಅಲುಗಾಡಿಸಲೂ ಕೂಡ ಸಮರ್ಥರಲ್ಲ. ಹೀಗಿರುವಾಗ ಅಲ್ಪ ಬಲವುಳ್ಳ ನರರ ಮಾತೇನು? ಬಂಡಿಯ ಮೇಲಿರುವ ಈ ಬಿಲ್ಲನ್ನು ರುದ್ರದೇವರ ವರಬಲದಿಂದಲೇ ನನ್ನ ಭೃತ್ಯರು ಬಹುಶ್ರಮದಿಂದ ಎಳೆಯುತ್ತಾರೆ. ॥ ೧೮ ॥

ಅಥಾರ್ಯಮೇತದ್ಧನುರಾಪ್ಯ ಶಂಕರಾ-
ದಹಂ ನೃಣಾಂ ವೀರ್ಯಪರೀಕ್ಷಣೇ ಧೃತಃ ।
ಸುತಾರ್ಥಮೇತಾಂ ಚಕರ ಪ್ರತಿಜ್ಞಾಂ
ದದಾಮಿ ಕನ್ಯಾಂ ಯ ಇದಂ ಹಿ ಪೂರಯೇತ್ ॥ ೧೯ ॥

ಪದಚ್ಛೇದ : ಅಧಾರ್ಯಮ್ ಏತತ್ ಧನುಃ ಆಪ್ಯ ಶಂಕರಾತ್ ಅಹಂ ನೃಣಾಂ ವೀರ್ಯಪರೀಕ್ಷಣೇ ಧೃತಃ । ಸುತಾರ್ಥಂ ಏತಾಂ ಚಕರ ಪ್ರತಿಜ್ಞಾಂ ದದಾಮಿ ಕನ್ಯಾಂ ಯಃ ಇದಂ ಹಿ ಪೂರಯೇತ್ ॥

**ಅರ್ಥ** :- **ಶಂಕರಾತ್** ರುದ್ರದೇವರಿಂದ, **ಅಹಂ** ನಾನು, **ಅಧಾರ್ಯಂ** ಧರಿಸಲು ಅಶಕ್ಯವಾದ, **ಏತತ್** ಈ, **ಧನುಃ** ಧನುಸ್ಸನ್ನು **ಆಪ್ಯ** ಹೊಂದಿ, **ನೃಣಾಂ** ಮಾನವರ, **ಪರೀಕ್ಷಣೇ** ಪರಾಕ್ರಮಪರೀಕ್ಷೆಯಲ್ಲಿ **ಧೃತಃ** ಸನ್ನದ್ಧನಾದೆ. **ಯಃ** ಯಾವನು, **ಇದಂ** ಈ ಧನುಸ್ಸನ್ನು **ಪೂರಯೇತ್** ಸಜ್ಜುಗೊಳಿಸುತ್ತಾನೋ, **ಕನ್ಯಾಂ** ಮಗಳಾದ, **ಏತಾಂ** ಈ ಸೀತಾದೇವಿಯನ್ನು **ದದಾಮಿ** ಕೊಡುತ್ತೇನೆ, **ಸುತಾರ್ಥಂ** ನನ್ನ ಮಗಳಿಗಾಗಿ, **ಏತಾಂ** ಈ, **ಪ್ರತಿಜ್ಞಾಂ** ಪ್ರತಿಜ್ಞೆಯನ್ನು **ಚಕರ** ಮಾಡಿದೆನು, **ಹಿ** ನಿಶ್ಚಯವು.

**ತಾತ್ಪರ್ಯ** :- ಇನ್ನೊಬ್ಬರಿಂದ ಅಲುಗಾಡಿಸಲು ಸಾಧ್ಯವಿಲ್ಲದ ಈ ಬಿಲ್ಲನ್ನು ಪಡೆದ ನಾನು, ವ್ಯಕ್ತಿಗಳ ಬಲಪರೀಕ್ಷೆಗಾಗಿ ಹೀಗೆ ಪ್ರತಿಜ್ಞೆಮಾಡಿದೆನು– 'ಯಾರು ಈ ಬಿಲ್ಲನ್ನು ಎತ್ತಿ ಹೆದೆ ಏರಿಸುವನೋ ಅವನಿಗೆ ನನ್ನ ಮಗಳನ್ನು ಕೊಟ್ಟು ವಿವಾಹ ಮಾಡುತ್ತೇನೆ ॥ ೧೯ ॥

**ಇತೀರಿತಾಂ ಮೇ ಗಿರಮಭ್ಯವೇತ್ಯ**
**ದಿತೇಃ ಸುತಾ ದಾನವಯಕ್ಷರಾಕ್ಷಸಾಃ ।**
**ಸಮೇತ್ಯ ಭೂಪಾಶ್ಚ ಸಮೀಪಮಾಶು**
**ಪ್ರಗೃಹ್ಯ ತಚ್ಚಾಲಯಿತುಂ ನ ಶೇಕುಃ ॥ ೨೦ ॥**

ಪದಚ್ಛೇದ : ಇತಿ ಈರಿತಾಂ ಮೇ ಗಿರಮ್ ಅಭ್ಯವೇತ್ಯ ದಿತೇಃ ಸುತಾಃ ದಾನವ ಯಕ್ಷರಾಕ್ಷಸಾಃ। ಸಮೇತ್ಯ ಭೂಪಾಃ ಚ ಸಮೀಪಮ್ ಆಶು ಪ್ರಗೃಹ್ಯ ತತ್ ಚಾಲಯಿತುಂ ನ ಶೇಕುಃ ॥

**ಅರ್ಥ** :- **ಇತಿ** ಈ ರೀತಿಯಾಗಿ, **ಈರಿತಾಂ** ಹೇಳಲ್ಪಟ್ಟ, **ಮೇ** ನನ್ನ, **ಗಿರಂ** ವಾಕ್ಯವನ್ನು, **ಅಭ್ಯವೇತ್ಯ** ಮನನಗೈದು, **ದಿತೇಃ** ದಿತಿದೇವಿಯ, **ಸುತಾಃ** ಮಕ್ಕಳಾದ, **ದಾನವಯಕ್ಷರಾಕ್ಷಸಾಃ** ದೈತ್ಯರು, ಯಕ್ಷರು ಮತ್ತು ರಾಕ್ಷಸರು, **ಚ** ಮತ್ತು, **ಭೂಪಾಃ** ರಾಜರು, **ಆಶು** ಶೀಘ್ರದಲ್ಲಿ, **ಸಮೀಪಂ** ಈ ಧನುಸ್ಸಿನ ಸಮೀಪವನ್ನು ಕುರಿತು, **ಸಮೇತ್ಯ** ಬಂದು, **ತತ್** ಆ ಧನುಸ್ಸನ್ನು **ಪ್ರಗೃಹ್ಯ** ಸ್ವೀಕರಿಸಿ, **ಚಾಲಯಿತುಂ** ಅಲುಗಾಡಿಸಲು, **ನ ಶೇಕುಃ** ಸಮರ್ಥರಾಗಲಿಲ್ಲ ॥

**ತಾತ್ಪರ್ಯ** : ಈ ತೆರನಾದ ನನ್ನ ಪ್ರತಿಜ್ಞೆಯನ್ನು ಕೇಳಿದ ದಾನವ -ಯಕ್ಷ-ರಾಕ್ಷಸರು ಬಲಿಷ್ಠರಾದ ರಾಜರು ಬಿಲ್ಲಿನ ಬಳಿ ಬಂದರು. ಆದರೆ ಅವರು ಅದನ್ನು ಅಲುಗಾಡಿಸಲು ಕೂಡ ಸಮರ್ಥರಾಗಲಿಲ್ಲ. ॥ ೨೦ ॥

**ರಾವಣ ಬಿದ್ದ**

**ಸಂಸ್ವಿನ್ನಗಾತ್ರಾಃ ಪರಿವೃತ್ತನೇತ್ರಾ**
**ದಶಾನನಾದ್ಯಾಃ ಪತಿತಾ ವಿಮೂರ್ಛಿತಾಃ ।**
**ತಥಾऽಪಿ ಮಾಂ ಧರ್ಷಯಿತುಂ ನ ಶೇಕುಃ**
**ಸುತಾಕೃತೇ ತೇ ವಚನಾತ್ ಸ್ವಯಂಭುವಃ ॥ ೨೧ ॥**

ಪದಚ್ಛೇದ : ಸಂಸ್ವಿನ್ನಗಾತ್ರಾಃ ಪರಿವೃತ್ತನೇತ್ರಾಃ ದಶಾನನಾದ್ಯಾಃ ಪತಿತಾಃ ವಿಮೂರ್ಛಿತಾಃ । ತಥಾ ಅಪಿ ಮಾಂ ಧರ್ಷಯಿತುಂ ನ ಶೇಕುಃ ಸುತಾಕೃತೇ ತೇ ವಚನಾತ್ ಸ್ವಯಂಭುವಃ ॥

**ಅರ್ಥ** :- **ದಶಾನನಾದ್ಯಾಃ** ರಾವಣನೇ ಮೊದಲಾದ ಬಲಿಷ್ಠರು, (ಈ ಶಿವ ಧನುಸ್ಸನ್ನು ಎತ್ತಲು ಪ್ರಯತ್ನಿಸಿ), **ಸಂಸ್ವಿನ್ನಗಾತ್ರಾಃ** ಬಹಳವಾಗಿ ಬೆವರಿದ ದೇಹವುಳ್ಳವರು, **ಪರಿವೃತ್ತನೇತ್ರಾಃ** ತಿರುಗಿದ ಕಣ್ಣುಗಳುಳ್ಳವರು, **ಪತಿತಾಃ** (ಭೂಮಿಯಲ್ಲಿ) ಬಿದ್ದವರಾಗಿ, **ವಿಮೂರ್ಛಿತಾಃ** ಪ್ರಜ್ಞೆ ಕಳೆದುಕೊಂಡರು. **ತಥಾಪಿ** ಹಾಗಿದ್ದರೂ ಕೂಡ, **ತೇ** ಅವರು, **ಸುತಾಕೃತೇ** ಮಗಳಾದ ಸೀತಾ ದೇವಿಯ ವಿಷಯದಲ್ಲಿ, **ಸ್ವಯಂಭುವಃ** ಚತುರ್ಮುಖ ಬ್ರಹ್ಮದೇವರ, **ವಚನಾತ್** ವರವಿರುವುದರಿಂದ, **ಮಾಂ** ನನ್ನನ್ನು, **ಧರ್ಷಯಿತುಂ** ಅತಿಕ್ರಮಿಸಲು (ಬಲಾತ್ಕಾರದಿಂದ ಸೀತೆಯನ್ನು ಕೊಂಡೊಯ್ಯಲು) **ನ ಶೇಕುಃ** ಸಮರ್ಥರಾಗಲಿಲ್ಲ.

**ತಾತ್ಪರ್ಯ** :- ರಾವಣನೇ ಮೊದಲಾದ ಬಲಿಷ್ಠರಾಜರು ಬಿಲ್ಲನ್ನು ಎತ್ತಲು ಪ್ರಯತ್ನಿಸಿ ಚೆನ್ನಾಗಿ ಬೆವತುಹೋದರು.ಕಣ್ಣು ತಿರುಗಿಸುತ್ತ ಧರೆಗುರುಳಿ ಮೂರ್ಛೆಹೋದರು. ಮಗಳ ರಕ್ಷಣೆಯ ಬಗ್ಗೆ ಚತುರ್ಮುಖ ಬ್ರಹ್ಮದೇವರ ವರ ನನಗಿರುವ ಕಾರಣ ಯಾರೂ ನನ್ನನ್ನು ಸೋಲಿಸಿ ಸೀತೆಯನ್ನು ಕೊಂಡೊಯ್ಯುವ ಯತ್ನ ಮಾಡಲಿಲ್ಲ. ॥ ೨೧ ॥

**ಪುರಾ ಹಿ ಮೇऽದಾತ್ ಪ್ರಭುರಬ್ಜಜೋ ವರಂ**
**ಪ್ರಸಾದಿತೋ ಮೇ ತಪಸಾ ಕಥಂಚನ ।**
**ಬಲಾನ್ನ ತೇ ಕಶ್ಚಿದುಪೈತಿ ಕನ್ಯಕಾಂ**
**ತದಿಚ್ಛುಭಿಸ್ತೇ ನ ಚ ಧರ್ಷಣೇತಿ ॥ ೨೨ ॥**

ಪದಚ್ಛೇದ : ಪುರಾ ಹಿ ಮೇ ಅದಾತ್ ಪ್ರಭುಃ ಅಬ್ಜಜಃ ವರಂ ಪ್ರಸಾದಿತಃ ಮೇ ತಪಸಾ ಕಥಂಚನ । ಬಲಾತ್ ನ ತೇ ಕಶ್ಚಿತ್ ಉಪೈತಿ ಕನ್ಯಕಾಂ ತದಿಚ್ಛುಭಿಃ ತೇ ನ ಚ ಧರ್ಷಣಾ ಇತಿ ॥

**ಅರ್ಥ** :- **ಪುರಾ** ಹಿಂದೆ, **ಮೇ** ನನ್ನ **ತಪಸಾ** ತಪಸ್ಸಿನಿಂದ, **ಪ್ರಸಾದಿತಃ** ಸಂತುಷ್ಟನಾದ, **ಪ್ರಭುಃ** ಸರ್ವಸಮರ್ಥನಾದ, **ಅಬ್ಜಜಃ** ಬ್ರಹ್ಮದೇವರು, **ತೇ** ನಿನ್ನ **ಕನ್ಯಕಾಂ** ಮಗಳನ್ನು **ಕಶ್ಚಿತ್** ಯಾವನೂ ಕೂಡ, **ಕಥಂಚನ** ಯಾವ ರೀತಿಯಿಂದಲೂ, **ಬಲಾತ್** ಬಲಾತ್ಕಾರದಿಂದ, **ನ ಉಪೈತಿ** ಹೊಂದುವುದಿಲ್ಲ, **ತದಿಚ್ಛುಭಿಃ** ನಿನ್ನ ಕನ್ಯೆಯ, ಅಪೇಕ್ಷೆಯುಳ್ಳವರಿಂದ, **ತೇ** ನಿನಗೆ, **ಧರ್ಷಣಾ** ಬಲಾತ್ಕಾರವು (ಅಪಾಯವು), **ನ ಚ** ಇಲ್ಲ **ಇತಿ** ಇಂತೆಂದು, **ವರಂ** ವರವನ್ನು **ಮೇ** ನನಗೆ, **ಅದಾತ್** ಕೊಟ್ಟನು.

**ತಾತ್ಪರ್ಯ** : ಹಿಂದೆ, ನನ್ನ ತಪಸ್ಸಿನಿಂದ ಸಂತುಷ್ಟನಾದ ಸರ್ವಸಮರ್ಥನಾದ ಚತುರ್ಮುಖ ಬ್ರಹ್ಮನು ನನಗೆ ವರವನ್ನು ನೀಡಿದ್ದನು – ನಿನ್ನ ಮಗಳ ನಿಮಿತ್ತದಿಂದ ನಿನಗೆ ಯಾವ ವಿಪತ್ತೂ (ಪರಾಭವ ಅಥವಾ ದುಃಖ) ಒದಗದಿರಲಿ. ॥ ೨೨ ॥

**ತತಸ್ತು ತೇ ನಷ್ಟಮದಾ ಇತೋ ಗತಾಃ**
**ಸಮಸ್ತಶೋ ಹ್ಯಸ್ತನ ಏವ ಪಾರ್ಥಿವಾಃ ।**
**ತತೋ ಮಮಾಯಂ ಪರಿಪೂರ್ಯ ಮಾನಸಂ**
**ವೃಣೋತು ಕನ್ಯಾಮಯಮೇವ ಮೇಽರ್ಥಿತಃ ॥ ೨೩ ॥**

ಪದಚ್ಛೇದ : ತತಃ ತು ತೇ ನಷ್ಟಮದಾಃ ಇತಃ ಗತಾಃ ಸಮಸ್ತಶಃ ಹ್ಯಸ್ತನೇ ಏವ ಪಾರ್ಥಿವಾಃ । ತತಃ ಮಮ ಅಯಂ ಪರಿಪೂರ್ಯ ಮಾನಸಂ ವೃಣೋತು ಕನ್ಯಾಂ ಅಯಮ್ ಏವ ಮೇ ಅರ್ಥಿತಃ ॥

**ಅರ್ಥ** :- **ತತಸ್ತು** ಪತನಾನಂತರದಲ್ಲಿ ಮಾತ್ರ, **ತೇ** ಆ, **ಪಾರ್ಥಿವಾಃ** ರಾವಣಾದಿಗಳು, **ನಷ್ಟಮದಾಃ** ಮದವಳಿದವರಾಗಿ, **ಸಮಸ್ತಶಃ** ಎಲ್ಲರೂ, **ಹ್ಯಸ್ತನೇ ಏವ** ನಿನ್ನೆಯ ದಿನವೇ, **ಇತಃ** ಇಲ್ಲಿಂದ, **ಗತಾಃ** ಹೋದರು, **ತತಃ** ಆದ್ದರಿಂದ, **ಮೇ** (ಮಯಾ) ನನ್ನಿಂದ, **ಅರ್ಥಿತಃ** ಪ್ರಾರ್ಥಿತನಾದ, **ಅಯಂ** ಈ ಶ್ರೀರಾಮದೇವನು, **ಮಮ** ನನ್ನ **ಮಾನಸಂ** ಮನಸ್ಸನ್ನು (ಇಚ್ಛೆಯನ್ನು), **ಪರಿಪೂರ್ಯ** ಪೂರ್ಣಮಾಡಿ, **ಕನ್ಯಾಂ** ಮಗಳನ್ನು **ವೃಣೋತು** ಸ್ವೀಕರಿಸಲಿ.

**ತಾತ್ಪರ್ಯ** :- ಬಿಲ್ಲನ್ನು ಎತ್ತಲಾಗದ ರಾಜರು ಮದವಳಿದು ಅವರಿಲ್ಲಿಂದ ತೆರಳಿದ್ದಾರೆ. ಶ್ರೀರಾಮನು ಇದನ್ನು ಹೆದೆ ಏರಿಸಿ (ನನ್ನ ಅಭಿಲಾಷೆ ಪೂರೈಸಿ) ಜಾನಕಿಯನ್ನು ಸ್ವೀಕರಿಸಲಿ. ನನ್ನ ಪ್ರಾರ್ಥನೆಯನ್ನು ಸಾರ್ಥಕಗೊಳಿಸಲಿ. ಎಂದು ಜನಕನು ವಿಶ್ವಾಮಿತ್ರನಿಗೆ ಬಿನ್ನವಿಸಿದನು. ॥೨೩॥

**ಶಿವಧನುರ್ಭಂಗ**

**ತಥೇತಿ ಚೋಕ್ತೋ ಮುನಿನಾ ಸ ಕಿಂಕರೈ-**
**ರನಂತಭೋಗೋಪಮಮಾಶ್ವಥಾನಯತ್ ।**
**ಸಮೀಕ್ಷ್ಯ ತದ್ವಾಮಕರೇಣ ರಾಘವಃ**
**ಸಲೀಲಮುದ್ಧೃತ್ಯ ಹಸನ್ನಪೂರಯತ್ ॥ ೨೪ ॥**

**ಪದಚ್ಛೇದ : ತಥಾ ಇತಿ ಚ ಉಕ್ತಃ ಮುನಿನಾ ಸಃ ಕಿಂಕರೈಃ ಅನಂತಭೋಗೋಪ ಮಮ್ ಆಶು ಅಥ ಆನಯತ್ । ಸಮೀಕ್ಷ್ಯ ತತ್ ವಾಮಕರೇಣ ರಾಘವಃ ಸಲೀಲಮ್ ಉದ್ಧೃತ್ಯ ಹಸನ್ ಅಪೂರಯತ್ ॥**

**ಅರ್ಥ** :- **ತಥಾ** ಹಾಗೇ ಆಗಲಿ, **ಇತಿ** ಇಂತೆಂದು, **ಮುನಿನಾ** ವಿಶ್ವಾಮಿತ್ರ ಋಷಿಗಳಿಂದ, **ಉಕ್ತಃ** ಹೇಳಲ್ಪಟ್ಟಂತಹ, **ಸಃ** ಆ ಜನಕ ಮಹಾರಾಜನು, **ಅಥ** ಅನಂತರ, **ಕಿಂಕರೈಃ** ತನ್ನ ಸೇವಕರಿಂದ, **ಅನಂತಭೋಗೋಪಮಂ** ಅನಂತ ಶೇಷನ, ಭೋಗ ದೇಹದಿಂದ, **ಉಪಮಂ** ಸದೃಶವಾದ ಧನುಸ್ಸನ್ನು **ಆನಯತ್** ತಂದನು, **ತತ್** ಆ ಧನುಸ್ಸನ್ನು, **ಸಮೀಕ್ಷ್ಯ** ನೋಡಿ, **ರಾಘವಃ** ಶ್ರೀರಾಮ ದೇವನು, **ವಾಮಕರೇಣ** ಎಡಗೈಯಿಂದ, **ಸಲೀಲಂ** ಅನಾಯಾಸವಾಗಿ, **ಉದ್ಧೃತ್ಯ** ಎತ್ತಿ, **ಹಸನ್** ಮೆಲುನಗೆಯಿಂದ, **ಆಪೂರಯತ್** (ಜನಕನ ಮನೋರಥವನ್ನು) ಪೂರೈಸಿದನು.

**ತಾತ್ಪರ್ಯ** :- ಜನಕನ ಮಾತನ್ನು ವಿಶ್ವಾಮಿತ್ರರು ಹಾಗೇ ಆಗಲೆಂದು ಅನುಮೋದಿಸಿದರು. ಜನಕನು ಸೇವಕರ ಮೂಲಕ ಶಿವಧನುಸ್ಸನ್ನು ತರಿಸಿದನು. ಅದನ್ನು ನೋಡಿದ ಶ್ರೀರಾಮ ಅನಾಯಾಸವಾಗಿ ಅದನ್ನೆತ್ತಿ ಹೆದೆ ಏರಿಸಿದನು. ॥ ೨೪ ॥

ವಿಕೃಷ್ಯಮಾಣಂ ತದನಂತರಾಧಸಾ
ಪರೇಣ ನಿಃಸೀಮಬಲೇನ ಲೀಲಯಾ ।
ಅಭಜ್ಯತಾಸಹ್ಯಮಮುಷ್ಯ ತದ್ಬಲಂ
ಪ್ರಸೋಢುಮೀಶಂ ಕುತ ಏವ ತದ್‌ಭವೇತ್ ॥ ೨೫ ॥

ಪದಚ್ಛೇದ : ವಿಕೃಷ್ಯಮಾಣಂ ತತ್ ಅನಂತರಾಧಸಾ ಪರೇಣ ನಿಃಸೀಮಬಲೇನ ಲೀಲಯಾ । ಅಭಜ್ಯತ ಅಸಹ್ಯಮ್ ಅಮುಷ್ಯ ತದ್ಬಲಂ ಪ್ರಸೋಢುವ್ ಈಶಂ ಕುತಃ ಏವ ತತ್ ಭವೇತ್ ॥

ಅರ್ಥ :- ಅನಂತರಾಧಸಾ ಅನಂತ ಅಭೀಷ್ಟಸಿದ್ಧಿಪ್ರದನಾದ, ನಿಃಸೀಮ ಬಲೇನ ನಿರವಧಿಕ ಶಕ್ತಿಯುಳ್ಳ, ಪರೇಣ ಸರ್ವೋತ್ತಮನಾದ ಶ್ರೀ ರಾಮ ಚಂದ್ರನಿಂದ, ಲೀಲಯಾ ಅನಾಯಾಸವಾಗಿ, ವಿಕೃಷ್ಯಮಾಣಂ ಹೆದೆಯೇರಿಸಲು ಹಗ್ಗವನ್ನು ಎಳೆಯುವಾಗ, ತತ್ ಆ ಧನಸ್ಸು ಅಭಜ್ಯತ ಮುರಿಯಿತು, ಅಮುಷ್ಯ ಈ ಶ್ರೀರಾಮದೇವನ, ಅಸಹ್ಯಂ ಸಹಿಸಲಸಾಧ್ಯವಾದ, ತದ್ಬಲಂ = ತತ್ ಆ ಪ್ರಸಿದ್ಧವಾದ, ಬಲಂ ಬಲವನ್ನು ಪ್ರಸೋಢುಂ ಚೆನ್ನಾಗಿ ಸಹಿಸಲು, ತತ್ ಆ ಬಿಲ್ಲು ಈಶಂ ಸಮರ್ಥವು, ಕುತ ಏವ ಹೇಗೆ, ಭವೇತ್ ಆದೀತು ?

ತಾತ್ಪರ್ಯ : ಇಚ್ಛಾಮಾತ್ರದಿಂದೇ ಎಲ್ಲ ಕಾರ್ಯಗಳನ್ನು ನೆರವೇರಿಸಬಲ್ಲ ಅಮಿತಶಕ್ತಿಯುಳ್ಳ ಶ್ರೀರಾಮನು ಬಿಲ್ಲನ್ನು ಅನಾಯಾಸವಾಗಿ ಹೆದೆ ಏರಿಸುವಾಗ ಅದು ಮುರಿಯಿತು. ಯಾರಿಂದಲೂ ಸಹಿಸಲಸಾಧ್ಯವಾದ ರಾಮನ ಬಲವನ್ನು ಅದು ಹೇಗೆ ತಾನೆ ಸಹಿಸಬಲ್ಲದು ? ॥ ೨೫ ॥

ಸ ಮಧ್ಯತಸ್ತತ್ ಪ್ರವಿಭಜ್ಯ ಲೀಲಯಾ
ಯಥೇಕ್ಷುದಂಡಂ ಶತಮನ್ಯುಕುಂಜರಃ ।
ವಿಲೋಕಯನ್ ವಕ್ತ್ರಮೃಷೇರವಸ್ಥಿತಃ
ಸಲಕ್ಷ್ಮಣಃ ಪೂರ್ಣತನುರ್ಯಥಾ ಶಶೀ ॥ ೨೬ ॥

ಪದಚ್ಛೇದ : ಸಃ ಮಧ್ಯತಃ ತತ್ ಪ್ರವಿಭಜ್ಯ ಲೀಲಯಾ ಯಥಾ ಇಕ್ಷುದಂಡಂ ಶತಮನ್ಯುಕುಂಜರಃ । ವಿಲೋಕಯನ್ ವಕ್ತ್ರಮ್ ಋಷೇಃ ಅವಸ್ಥಿತಃ ಸಲಕ್ಷ್ಮಣಃ ಪೂರ್ಣತನುಃ ಯಥಾ ಶಶೀ ॥

**ತಾತ್ಪರ್ಯ** :- ಬಿಲ್ಲನ್ನು ಎತ್ತಲಾಗದ ರಾಜರು ಮದವಳಿದು ಅವರಿಲ್ಲಿಂದ ತೆರಳಿದ್ದಾರೆ. ಶ್ರೀರಾಮನು ಇದನ್ನು ಹೆದೆ ಏರಿಸಿ (ನನ್ನ ಅಭಿಲಾಷೆ ಪೂರೈಸಿ) ಜಾನಕಿಯನ್ನು ಸ್ವೀಕರಿಸಲಿ. ನನ್ನ ಪ್ರಾರ್ಥನೆಯನ್ನು ಸಾರ್ಥಕಗೊಳಿಸಲಿ. ಎಂದು ಜನಕನು ವಿಶ್ವಾಮಿತ್ರನಿಗೆ ಬಿನ್ನವಿಸಿದನು. ॥೨೩॥

**ಶಿವಧನುರ್ಭಂಗ**

**ತಥೇತಿ ಚೋಕ್ತೋ ಮುನಿನಾ ಸ ಕಿಂಕರೈ-**
**ರನಂತಭೋಗೋಪಮಮಾಶ್ವಥಾನಯತ್ ।**
**ಸಮೀಕ್ಷ್ಯ ತದ್ವಾಮಕರೇಣ ರಾಘವಃ**
**ಸಲೀಲಮುದ್ಧೃತ್ಯ ಹಸನ್ನಪೂರಯತ್ ॥ ೨೪ ॥**

**ಪದಚ್ಛೇದ : ತಥಾ ಇತಿ ಚ ಉಕ್ತಃ ಮುನಿನಾ ಸಃ ಕಿಂಕರೈಃ ಅನಂತಭೋಗೋಪ ಮಮ್ ಆಶು ಅಥ ಆನಯತ್ । ಸಮೀಕ್ಷ್ಯ ತತ್ ವಾಮಕರೇಣ ರಾಘವಃ ಸಲೀಲಮ್ ಉದ್ಧೃತ್ಯ ಹಸನ್ ಅಪೂರಯತ್ ॥**

**ಅರ್ಥ** :- **ತಥಾ** ಹಾಗೇ ಆಗಲಿ, **ಇತಿ** ಇಂತೆಂದು, **ಮುನಿನಾ** ವಿಶ್ವಾಮಿತ್ರ ಋಷಿಗಳಿಂದ, **ಉಕ್ತಃ** ಹೇಳಲ್ಪಟ್ಟಂತಹ, **ಸಃ** ಆ ಜನಕ ಮಹಾರಾಜನು, **ಅಥ** ಅನಂತರ, **ಕಿಂಕರೈಃ** ತನ್ನ ಸೇವಕರಿಂದ, **ಅನಂತಭೋಗೋಪಮಂ** ಅನಂತ ಶೇಷನ, ಭೋಗ ದೇಹದಿಂದ, **ಉಪಮಂ** ಸದೃಶವಾದ ಧನುಸ್ಸನ್ನು **ಆನಯತ್** ತಂದನು, **ತತ್** ಆ ಧನುಸ್ಸನ್ನು, **ಸಮೀಕ್ಷ್ಯ** ನೋಡಿ, **ರಾಘವಃ** ಶ್ರೀರಾಮ ದೇವನು, **ವಾಮಕರೇಣ** ಎಡಗೈಯಿಂದ, **ಸಲೀಲಂ** ಅನಾಯಾಸವಾಗಿ, **ಉದ್ಧೃತ್ಯ** ಎತ್ತಿ, **ಹಸನ್** ಮೆಲುನಗೆಯಿಂದ, **ಆಪೂರಯತ್** (ಜನಕನ ಮನೋರಥವನ್ನು) ಪೂರೈಸಿದನು.

**ತಾತ್ಪರ್ಯ** :- ಜನಕನ ಮಾತನ್ನು ವಿಶ್ವಾಮಿತ್ರರು ಹಾಗೇ ಆಗಲೆಂದು ಅನುಮೋದಿಸಿದರು. ಜನಕನು ಸೇವಕರ ಮೂಲಕ ಶಿವಧನುಸ್ಸನ್ನು ತರಿಸಿದನು. ಅದನ್ನು ನೋಡಿದ ಶ್ರೀರಾಮ ಅನಾಯಾಸವಾಗಿ ಅದನ್ನೆತ್ತಿ ಹೆದೆ ಏರಿಸಿದನು. ॥ ೨೪ ॥

ವಿಕೃಷ್ಯಮಾಣಂ ತದನಂತರಾಧಸಾ
ಪರೇಣ ನಿಃಸೀಮಬಲೇನ ಲೀಲಯಾ ।
ಅಭಜ್ಯತಾಸಹ್ಯಮಮುಷ್ಯ ತದ್ಬಲಂ
ಪ್ರಸೋಢುಮೀಶಂ ಕುತ ಏವ ತದ್‌ಭವೇತ್ ॥ ೨೫ ॥

ಪದಚ್ಛೇದ : ವಿಕೃಷ್ಯಮಾಣಂ ತತ್ ಅನಂತರಾಧಸಾ ಪರೇಣ ನಿಃಸೀಮಬಲೇನ ಲೀಲಯಾ । ಅಭಜ್ಯತ ಅಸಹ್ಯಮ್ ಅಮುಷ್ಯ ತದ್ಬಲಂ ಪ್ರಸೋಢುವ್ ಈಶಂ ಕುತಃ ಏವ ತತ್ ಭವೇತ್ ॥

**ಅರ್ಥ** :- **ಅನಂತರಾಧಸಾ** ಅನಂತ ಅಭೀಷ್ಟಸಿದ್ಧಿಪ್ರದನಾದ, **ನಿಃಸೀಮ ಬಲೇನ** ನಿರವಧಿಕ ಶಕ್ತಿಯುಳ್ಳ, **ಪರೇಣ** ಸರ್ವೋತ್ತಮನಾದ ಶ್ರೀ ರಾಮ ಚಂದ್ರನಿಂದ, **ಲೀಲಯಾ** ಅನಾಯಾಸವಾಗಿ, **ವಿಕೃಷ್ಯಮಾಣಂ** ಹೆದೆಯೇರಿಸಲು ಹಗ್ಗವನ್ನು ಎಳೆಯುವಾಗ, **ತತ್** ಆ ಧನಸ್ಸು **ಅಭಜ್ಯತ** ಮುರಿಯಿತು, **ಅಮುಷ್ಯ** ಈ ಶ್ರೀರಾಮದೇವನ, **ಅಸಹ್ಯಂ** ಸಹಿಸಲಸಾಧ್ಯವಾದ, **ತದ್ಬಲಂ** = **ತತ್** ಆ ಪ್ರಸಿದ್ಧವಾದ, **ಬಲಂ** ಬಲವನ್ನು, **ಪ್ರಸೋಢುಂ** ಚೆನ್ನಾಗಿ ಸಹಿಸಲು, **ತತ್** ಆ ಬಿಲ್ಲು **ಈಶಂ** ಸಮರ್ಥವು, **ಕುತ ಏವ** ಹೇಗೆ, **ಭವೇತ್** ಆದೀತು ?

**ತಾತ್ಪರ್ಯ** : ಇಚ್ಛಾಮಾತ್ರದಿಂದೇ ಎಲ್ಲ ಕಾರ್ಯಗಳನ್ನು ನೆರವೇರಿಸಬಲ್ಲ ಅಮಿತಶಕ್ತಿಯುಳ್ಳ ಶ್ರೀರಾಮನು ಬಿಲ್ಲನ್ನು ಅನಾಯಾಸವಾಗಿ ಹೆದೆ ಏರಿಸುವಾಗ ಅದು ಮುರಿಯಿತು. ಯಾರಿಂದಲೂ ಸಹಿಸಲಸಾಧ್ಯವಾದ ರಾಮನ ಬಲವನ್ನು ಅದು ಹೇಗೆ ತಾನೆ ಸಹಿಸಬಲ್ಲದು ? ॥ ೨೫ ॥

ಸ ಮಧ್ಯತಸ್ತತ್ ಪ್ರವಿಭಜ್ಯ ಲೀಲಯಾ
ಯಥೇಕ್ಷುದಂಡಂ ಶತಮನ್ಯುಕುಂಜರಃ ।
ವಿಲೋಕಯನ್ ವಕ್ತ್ರಮೃಷೇರವಸ್ಥಿತಃ
ಸಲಕ್ಷ್ಮಣಃ ಪೂರ್ಣತನುರ್ಯಥಾ ಶಶೀ ॥ ೨೬ ॥

ಪದಚ್ಛೇದ : ಸಃ ಮಧ್ಯತಃ ತತ್ ಪ್ರವಿಭಜ್ಯ ಲೀಲಯಾ ಯಥಾ ಇಕ್ಷುದಂಡಂ ಶತಮನ್ಯುಕುಂಜರಃ । ವಿಲೋಕಯನ್ ವಕ್ತ್ರಮ್ ಋಷೇಃ ಅವಸ್ಥಿತಃ ಸಲಕ್ಷ್ಮಣಃ ಪೂರ್ಣತನುಃ ಯಥಾ ಶಶೀ ॥

**ಅರ್ಥ** :- **ಶತಮನ್ಯುಕುಂಜರಃ** = **ಶತಮನ್ಯು** ದೇವೇಂದ್ರನ, **ಕುಂಜರಃ** ಆನೆಯಾದ ಐರಾವತವು, **ಇಕ್ಷುದಂಡಂ** ಕಬ್ಬಿನ ಜಲ್ಲೆಯನ್ನು **ಯಥಾ** ಹೇಗೆ ಮುರಿಯುತ್ತದೋ ಅದರಂತೆ, **ಸಃ** ಆ ಶ್ರೀ ರಾಮದೇವನು, **ತತ್** ಆ ಬಿಲ್ಲನ್ನು **ಮಧ್ಯತಃ** ಮಧ್ಯಭಾಗದಲ್ಲಿ, **ಲೀಲಯಾ** ಅನಾಯಾಸವಾಗಿ, **ಪ್ರವಿಭಜ್ಯ** ಮುರಿದು, **ಸಲಕ್ಷ್ಮಣಃ** ಲಕ್ಷ್ಮಣನಿಂದ ಸಹಿತನಾಗಿ, **ಯಥಾ** ಹೇಗೆ, **ಪೂರ್ಣತನುಃ** ಪರಿಪೂರ್ಣನಾದ, (ಪೌರ್ಣಮೆಯ), **ಶಶೀ** ಚಂದ್ರನು ಆಹ್ಲಾದ ನೀಡುವಂತೆ ಎಲ್ಲರಿಗೆ ಸಂತೋಷ ನೀಡುತ್ತ, **ಋಷೇಃ** ವಿಶ್ವಾಮಿತ್ರ ಋಷಿಗಳ, **ವಕ್ತ್ರಂ** ಮುಖವನ್ನು **ವಿಲೋಕಯನ್** ನೋಡುತ್ತ, **ಅವಸ್ಥಿತಃ** ನಿಂತನು.

**ತಾತ್ಪರ್ಯ** : ಐರಾವತವು ಕಬ್ಬಿನ ಜಲ್ಲೆಯನ್ನು ತುಂಡರಿಸುವಂತೆ ಶ್ರೀರಾಮನು ಶಿವಧನುಸ್ಸನ್ನು ಲೀಲಾಜಾಲವಾಗಿ ಮುರಿದನು. ನಿಷ್ಕಲಂಕ-ಪರಿಪೂರ್ಣ ಚಂದ್ರಬಿಂಬದಂತೆ ಕಂಗೊಳಿಸುತ್ತ, ಲಕ್ಷ್ಮಣಸಹಿತನಾಗಿ ವಿಶ್ವಾಮಿತ್ರರ ಮುಖ ನೋಡುತ್ತ ನಿಂದ. ॥ ೨೬ ॥

**ತಮಬ್ಜನೇತ್ರಂ ಪೃಥುತುಂಗವಕ್ಷಸಂ**
**ಶ್ಯಾಮಾವದಾತಂ ಚಲಕುಂಡಲೋಜ್ಜ್ವಲಮ್ ।**
**ಶಶಕ್ಷತೋತ್ಥೋಪಮಚಂದನೋಕ್ಷಿತಂ**
**ದದರ್ಶ ವಿದ್ಯುದ್ವಸನಂ ನೃಪಾತ್ಮಜಾ ॥ ೨೭ ॥**

**ಪದಚ್ಛೇದ** : **ತಮ್ ಅಬ್ಜನೇತ್ರಂ ಪೃಥುತುಂಗವಕ್ಷಸಂ ಶ್ಯಾಮಾವದಾತಂ ಚಲಕುಂಡ-ಲೋಜ್ಜ್ವಲಮ್ । ಶಶಕ್ಷತೋತ್ಥೋಪಮಚಂದನೋಕ್ಷಿತಂ ದದರ್ಶ ವಿದ್ಯುದ್ವಸನಂ ನೃಪಾತ್ಮಜಾ॥**

**ಅರ್ಥ** :- **ಪೃಥುತುಂಗವಕ್ಷಸಂ** = **ಪೃಥು** ವಿಶಾಲವಾದ, **ತುಂಗ** ಎತ್ತರವಾದ, **ವಕ್ಷಸಂ** ಎದೆಯುಳ್ಳ, **ಶ್ಯಾಮಾವದಾತಂ** ನೀಲವರ್ಣನೂ ಮತ್ತು ನಿರ್ಮಲನೂ ಆದ, **ಚಲಕುಂಡಲೋಜ್ವಲಂ** = **ಚಲ** ಚಲಿಸತಕ್ಕ, **ಕುಂಡಲ** ಕರ್ಣಕುಂಡಲಗಳಿಂದ, **ಉಜ್ವಲಂ** ಶೋಭಾಯಮಾನನಾದ, **ಶಶಕ್ಷತೋತ್ಥೋಪಮಚಂದನೋಕ್ಷಿತಂ**, **ಶಶ** ಮೊಲದ, **ಕ್ಷತ** ಶಸ್ತ್ರಾದಿ ಛೇದದಿಂದ ಆದ ಗಾಯದಿಂದ, **ಉತ್ಥ** ಉತ್ಪನ್ನವಾದ ರಕ್ತಕ್ಕೆ, **ಉಪಮ** ಸದೃಶವಾದಂತಹ, **ಚಂದನ** ಕೆಂಬಣ್ಣದಿಂದ, **ಉಕ್ಷಿತಂ** ಲೇಪಿತನಾದಂತಹ, **ಅಬ್ಜನೇತ್ರಂ** ಕಮಲದಂತೆ

ಕಣ್ಣುಗಳುಳ್ಳ, ವಿದ್ಯುದ್ವಸನಂ ಮಿಂಚಿನಂತೆ ಹೊಳೆಯುವ ವಸ್ತ್ರವುಳ್ಳ, ತಂ ಆ ಶ್ರೀರಾಮದೇವನನ್ನು, ನೃಪಾತ್ಮಜಾ ಜನಕ ಮಹಾರಾಜನ ಮಗಳಾದ ಸೀತಾ ದೇವಿಯು, ದದರ್ಶ ನೋಡಿದಳು.

**ತಾತ್ಪರ್ಯ** :- ವಿಶಾಲ ಹಾಗೂ ಎತ್ತರದ ಎದೆಯುಳ್ಳ, ನೀಲವರ್ಣನೂ ನಿರ್ಮಲನೂ ಆದ, ಚಲಿಸುವ ಕರ್ಣಕುಂಡಲಗಳಿಂದ ಶೋಭಿಸುವ, ಮೊಲದ ರಕ್ತದಂತೆ ಕೆಂಬಣ್ಣವುಳ್ಳ ಗಂಧವನ್ನು ಲೇಪಿಸಿಕೊಂಡ, ಮಿಂಚಿನಂತೆ ಹೊಳೆಯುವ ವಸ್ತ್ರಧಾರಿಯಾದ ಕಮಲದಂತೆ ಅರಳಿದ ಕಂಗಳುಳ್ಳ ಶ್ರೀರಾಮನನ್ನು ಜಾನಕಿ ಕಂಡಳು. ॥ ೨೭ ॥

**ಬಾಡದ ಮಾಲೆ ರಾಮನ ಕೊರಳಿಗೆ**

**ಅಥೋ ಕರಾಭ್ಯಾಂ ಪ್ರತಿಗೃಹ್ಯ ಮಾಲಾ-**
**ಮಮ್ಲಾನಪದ್ಮಾಂ ಜಲಜಾಯತಾಕ್ಷೀ ।**
**ಉಪೇತ್ಯ ಮಂದಂ ಲಲಿತೈಃ ಪದೈಸ್ತಾಂ**
**ತದಂಸ ಆಸಜ್ಯ ಚ ಪಾರ್ಶ್ವತೋಽಭವತ್ ॥ ೨೮ ॥**

ಪದಚ್ಛೇದ : ಅಥೋ ಕರಾಭ್ಯಾಂ ಪ್ರತಿಗೃಹ್ಯ ಮಾಲಾವ್ ಅಮ್ಲಾನಪದ್ಮಾಂ ಜಲಜಾಯತಾಕ್ಷೀ । ಉಪೇತ್ಯ ಮಂದಂ ಲಲಿತೈಃ ಪದೈಃ ತಾಂ ತದಂಸೇ ಆಸಜ್ಯ ಚ ಪಾರ್ಶ್ವತಃ ಅಭವತ್ ॥

**ಅರ್ಥ** :- **ಅಥೋ** ಅನಂತರದಲ್ಲಿ, **ಜಲಜಾಯತಾಕ್ಷೀ** ಕಮಲದಂತೆ ವಿಸ್ತೃತವಾದ ಕಣ್ಣುಗಳುಳ್ಳ ಸೀತಾದೇವಿಯು, **ಅಮ್ಲಾನಪದ್ಮಾಂ** = **ಅಮ್ಲಾನ** ಬಾಡದೇ ಇರುವ, **ಪದ್ಮಾಂ** ಕಮಲಗಳುಳ್ಳ, **ಮಾಲಾಂ** ಮಾಲೆಯನ್ನು **ಕರಾಭ್ಯಾಂ** ಕೈಗಳಿಂದ, **ಪ್ರತಿಗೃಹ್ಯ** ತಂದು, **ಲಲಿತೈಃ** ಮನೋಹರವಾದ, **ಪದೈಃ** ಹೆಜ್ಜೆಗಳಿಂದ, **ಮಂದಂ** ಸಾವಕಾಶವಾಗಿ, **ಉಪೇತ್ಯ** ಶ್ರೀ ರಾಮ ದೇವರ ಸಮೀಕ್ಕೆ ಬಂದು, **ತಾಂ** ಆ ಮಾಲೆಯನ್ನು **ತದಂಸೇ** ಶ್ರೀರಾಮದೇವರ ಹೆಗಲಿನಲ್ಲಿ (ಕೊರಳಲ್ಲಿ), **ಆಸಜ್ಯ** ಸಮರ್ಪಿಸಿ, **ಚ** ಮತ್ತು, **ಪಾರ್ಶ್ವತಃ** ಶ್ರೀರಾಮ ದೇವರ ಎಡಭಾಗದಲ್ಲಿ **ಅಭವತ್** ನಿಂತಳು.

**ತಾತ್ಪರ್ಯ** :- ಅನಂತರ ಕಮಲದಂತೆ ವಿಸ್ತೃತವಾದ ಕಂಗಳುಳ್ಳ ಸೀತಾದೇವಿಯು ಬಾಡದ ಕಮಲದ ಮಾಲೆಯನ್ನು ಕೈಯಲ್ಲಿ ಪಿಡಿದುಕೊಂಡು,

ಮನೋಹರವಾದ ಹೆಜ್ಜೆ ಇಡುತ್ತ ಶ್ರೀರಾಮನ ಬಳಿ ಸಾರಿ ಕೊರಳಿಗೆ ಮಾಲೆ ಹಾಕಿ ಪಕ್ಕದಲ್ಲಿ ನಿಂದಳು. ॥ ೨೮ ॥

**ತತಃ ಪ್ರಮೋದೋ ನಿತರಾಂ ಜನಾನಾಂ**
**ವಿದೇಹಪುರ್ಯಾಮಭವತ್ ಸಮಂತಾತ್ ।**
**ರಾಮಂ ಸಮಾಲೋಕ್ಯ ನರೇಂದ್ರಪುತ್ರ್ಯಾ**
**ಸಮೇತಮಾನಂದನಿಧಿಂ ಪರೇಶಮ್ ॥ ೨೯ ॥**

ಪದಚ್ಛೇದ : ತತಃ ಪ್ರಮೋದೋ ನಿತರಾಂ ಜನಾನಾಂ ವಿದೇಹಪುರ್ಯಾಂ **ಅಭವತ್ ಸಮಂತಾತ್** । ರಾಮಂ ಸಮಾಲೋಕ್ಯ ನರೇಂದ್ರಪುತ್ರ್ಯಾ ಸಮೇತಂ **ಆನಂದನಿಧಿಂ ಪರೇಶಮ್** ॥

**ಅರ್ಥ** :- **ತತಃ** ಆ ನಂತರದಲ್ಲಿ, **ನರೇಂದ್ರಪುತ್ರ್ಯಾ** ಜನಕರಾಜನ ಮಗಳಾದ ಸೀತಾ ದೇವಿಯಿಂದ, **ಸಮೇತಂ** ಕೂಡಿದಂತಹ, **ಪರೇಶಂ** ಸರ್ವೋತ್ತಮನಾದ, **ಆನಂದನಿಧಿಂ** ಆನಂದದಿಂದ ಸಮುದ್ರದಂತೆ ಇರತಕ್ಕಂತಹ (ಆನಂದ ಪರಿಪೂರ್ಣನಾದ), **ರಾಮಂ** ಶ್ರೀರಾಮನನ್ನು, **ಸಮಾಲೋಕ್ಯ** ಹತ್ತಿರದಿಂದ ನೋಡಿ, **ವಿದೇಹಪುರ್ಯಾಂ** ಮಿಥಿಲಾ ಪಟ್ಟಣದಲ್ಲಿ, **ಜನಾನಾಂ** ಜನರಿಗೆ, **ಸಮಂತಾತ್** ಎಲ್ಲರಿಗೂ, **ನಿತರಾಂ** ಅತ್ಯಂತವಾದ, **ಪ್ರಮೋದಃ** ಸಂತೋಷವು, **ಅಭವತ್** ಆಯಿತು.

**ತಾತ್ಪರ್ಯ** :- ಸೀತಾದೇವಿಯಿಂದ ಸಹಿತನಾದ ಆನಂದಪೂರ್ಣನೂ ಸರ್ವೋತ್ತಮನೂ ಆದ ಶ್ರೀರಾಮನನ್ನು ಹತ್ತಿರದಿಂದ ಕಂಡ ಮೈಥಿಲರು ಅಮಿತಾನಂದವನ್ನು ಅನುಭವಿಸಿದರು. ॥ ೨೯ ॥

**ಲಕ್ಷ್ಮ್ಯಾ ಸಮೇತೇ ಪ್ರಕಟಂ ರಮೇಶೇ**
**ಸಂಪ್ರೇಷಯಾಮಾಸ ತದಾಶು ಪಿತ್ರೇ ।**
**ವಿದೇಹರಾಜೋ ದಶದಿಗ್ರಥಾಯ**
**ಸ ತನ್ನಿಶಮ್ಯಾಶು ತುತೋಷ ಭೂಮಿಪಃ ॥ ೩೦ ॥**

ಪದಚ್ಛೇದ : ಲಕ್ಷ್ಮ್ಯಾ ಸಮೇತೇ ಪ್ರಕಟಂ ರಮೇಶೇ ಸಂಪ್ರೇಷಯಾಮಾಸ ತದಾ ಆಶು ಪಿತ್ರೇ । ವಿದೇಹರಾಜೋ ದಶದಿಗ್ರಥಾಯ ಸಃ ತತ್ ನಿಶಮ್ಯ ಆಶು ತುತೋಷ ಭೂಮಿಪಃ ॥

**ಅರ್ಥ** :- **ರಮೇಶೇ** ಲಕ್ಷ್ಮೀಪತಿಯಾದ ಶ್ರೀಮನ್ನಾರಾಯಣನು, **ಪ್ರಕಟಂ** ಮನುಷ್ಯರಿಗೆ ಹೇಗೆ ಕಾಣಿಸಬೇಕೋ ಹಾಗೆ, **ಲಕ್ಷ್ಮ್ಯಾ** ಸೀತಾದೇವಿಯಿಂದ, **ಸಮೇತೇ** ಕೂಡಿದವ ನಾಗುತ್ತಿರಲು, **ವಿದೇಹರಾಜಃ** ಜನಕ ಮಹಾರಾಜನು, **ತದಾ** ಆವಾಗ, **ಪಿತ್ರೇ** (ಶ್ರೀರಾಮ ದೇವರ) ತಂದೆಯಾದ, **ದಶದಿಗ್ರಥಾಯ** ದಶರಥ ರಾಜನಿಗೋಸ್ಕರ, **ಆಶು** ಶೀಘ್ರದಲ್ಲಿಯೇ, **ದೂತಂ** ಸೇವಕನನ್ನು, **ಸಂಪ್ರೇಷಯಾಮಾಸ** ಕಳಿಸಿದನು, **ಸಃ** ಆ, **ಭೂಮಿಪಃ** ರಾಜನಾದ ದಶರಥ ರಾಜನು, **ತಂ** ವೃತ್ತಾಂತವನ್ನು, **ನಿಶಮ್ಯ** ಕೇಳಿ, **ಆಶು** ಕೂಡಲೇ, **ತುತೋಷ** ಸಂತೋಷಪಟ್ಟನು.

**ತಾತ್ಪರ್ಯ** :- ನಾರಾಯಣ (ಶ್ರೀರಾಮನು) ಲಕ್ಷ್ಮೀದೇವಿ (ಸೀತೆ)ಯೊಡನೆ ಸೇರಿದಾಗ ಜನಕರಾಜನು ಕೂಡಲೇ ರಾಮನ ತಂದೆಯಾದ ದಶರಥ ರಾಜನಿಗೆ ದೂತರ ಮೂಲಕ ಸಂತಸವಾರ್ತೆಯನ್ನರುಹಿದನು. ಇದನ್ನಾಲಿಸಿದ ದಶರಥನು ಆನಂದ ತುಂದಿಲನಾದನು. ॥ ೩೦ ॥

ಮದುವೆಗೆ ದಿಬ್ಬಣ

**ಅಥಾತ್ಮಜಾಭ್ಯಾಂ ಸಹಿತಃ ಸಭಾರ್ಯೋ**
**ಯಯೌ ಗಜಸ್ಯಂದನಪತ್ತಿಯುಕ್ತಯಾ ।**
**ಸ್ವಸೇನಯಾಽಗ್ರೇ ಪ್ರಣಿಧಾಯ ಧಾತೃಜಂ**
**ವಸಿಷ್ಠಮಾಶ್ವೇವ ಸ ಯತ್ರ ಮೈಥಿಲಃ ॥ ೩೧ ॥**

ಪದಚ್ಛೇದ : ಅಥ ಆತ್ಮಜಾಭ್ಯಾಂ ಸಹಿತಃ ಸಭಾರ್ಯಃ ಯಯೌ ಗಜಸ್ಯಂದನಪತ್ತಿ–ಯುಕ್ತಯಾ । ಸ್ವಸೇನಯಾ ಅಗ್ರೇ ಪ್ರಣಿಧಾಯ ಧಾತೃಜಂ ವಸಿಷ್ಠಮ್ ಆಶು ಏವ ಸಃ ಯತ್ರ ಮೈಥಿಲಃ ॥

**ಅರ್ಥ** :- **ಅಥ** ಈ ಶುಭ ಸಂದೇಶವನ್ನು ಕೇಳಿದ ನಂತರ, **ಆತ್ಮಜಾಭ್ಯಾಂ** ತನ್ನ (ಇನ್ನಿಬ್ಬರು ಮಕ್ಕಳಾದ) ಭರತ ಶತ್ರುಘ್ನರಿಂದ, ಸಹಿತಃ ಕೂಡಿಕೊಂಡು, **ಗಜಸ್ಯಂದನಪತ್ತಿಯುಕ್ತಯಾ** ಆನೆ ರಥ ಪದಾತಿಗಳಿಂದ ಕೂಡಿದ, **ಸ್ವಸೇನಯಾ** ತನ್ನ ಸೇನೆಯಿಂದ, **ಸಹಿತಃ** ಕೂಡಿಕೊಂಡು, **ಸಭಾರ್ಯಃ** (ತನ್ನ) ಹೆಂಡಂದಿರಿಂದ ಸಹಿತನಾಗಿ, **ಸಃ** ಆ ದಶರಥ ರಾಜನು, **ಧಾತೃಜಂ** ಬ್ರಹ್ಮದೇವರ ಮಗನಾದ, **ವಸಿಷ್ಠಂ** ವಸಿಷ್ಠ ಋಷಿಗಳನ್ನು, **ಅಗ್ರೇ** ಮುಂದೆ, **ಪ್ರಣಿಧಾಯ** ಇಟ್ಟುಕೊಂಡು,

**ಯತ್ರ** ಎಲ್ಲಿ **ಮೈಥಿಲಃ** ಜನಕ ಮಹಾರಾಜನಿದ್ದನೋ, (ತತ್ರ ಅಲ್ಲಿ), **ಆಶು** ಶೀಘ್ರದಲ್ಲಿ **ಯಯೌ** ಹೋದನು.

**ತಾತ್ಪರ್ಯ** :- ಸಂತೋಷ ವಾರ್ತೆಯನ್ನು ಕೇಳಿದ ದಶರಥನು, ಪತ್ನಿ ಹಾಗೂ ಪುತ್ರರಿಂದ ಕೂಡಿಕೊಂಡು ಆನೆ-ರಥ-ಪದಾತಿಗಳಿಂದ ಕೂಡಿದ ಸೇನೆಯೊಂದಿಗೆ (ರಾಜವೈಭವ ದೊಂದಿಗೆ) ಬ್ರಹ್ಮಪುತ್ರನಾದ ವಸಿಷ್ಠರನ್ನು ಮುಂದಿರಿಸಿಕೊಂಡು ಜನಕರಾಜನ ಪಟ್ಟಣಕ್ಕೆ ವೇಗವಾಗಿ ತೆರಳಿದನು. ॥೩೧॥

**ಸೀತಾ-ರಾಮರ ಕಲ್ಯಾಣೋತ್ಸವ**

**ಸ ಮೈಥಿಲೇನಾತಿತರಾಂ ಸಮರ್ಚಿತೋ**
**ವಿವಾಹಯಾಮಾಸ ಸುತಂ ಮುದಂಭರಃ ।**
**ಪುರೋಹಿತೋ ಗಾಧಿಸುತಾನುಮೋದಿತೋ**
**ಜುಹಾವ ವಹ್ನಿಂ ವಿಧಿನಾ ವಸಿಷ್ಠಃ ॥ ೩೨ ॥**

ಪದಚ್ಛೇದ : ಸಃ ಮೈಥಿಲೇನ ಅತಿತರಾಂ ಸಮರ್ಚಿತಃ ವಿವಾಹಯಾಮಾಸ ಸುತಂ ಮುದಂಭರಃ । ಪುರೋಹಿತಃ ಗಾಧಿಸುತಾನುಮೋದಿತಃ ಜುಹಾವ ವಹ್ನಿಂ ವಿಧಿನಾ ವಸಿಷ್ಠಃ ॥

**ಅರ್ಥ** :- **ಮೈಥಿಲೇನ** ಜನಕ ರಾಜನಿಂದ, **ಅತಿತರಾಂ** ಅತ್ಯಂತವಾಗಿ, **ಸಮರ್ಚಿತಃ** ಪೂಜಿತನಾದ, **ಮುದಂಭರಃ** ಸಂತೋಷಭರಿತನಾದ, **ಸಃ** ಆ ದಶರಥ ಮಹಾರಾಜನು, **ಸುತಂ** ಮಗನಾದ ಶ್ರೀರಾಮದೇವನನ್ನು, **ವಿವಾಹಯಾಮಾಸ** ವಿವಾಹಿತನನ್ನಾಗಿ ಮಾಡಿದನು, **ಪುರೋಹಿತಃ** ಪುರೋಹಿತನಾದ, **ವಸಿಷ್ಠಃ** ವಸಿಷ್ಠ ಋಷಿಯು, **ಗಾಧಿಸುತಾನುಮೋದಿತಃ** ಗಾಧಿ ರಾಜನ ಮಗನಾದ ವಿಶ್ವಾಮಿತ್ರರಿಂದ ಅನುಮೋದಿತನಾಗಿ, **ವಿಧಿನಾ** ಶಾಸ್ತ್ರೋಕ್ತ ಕ್ರಮಾನುಸಾರವಾಗಿ, **ವಹ್ನಿಂ** ಅಗ್ನಿಯಲ್ಲಿ **ಜುಹಾವ** (ಲಾಜಾ) ಹೋಮವನ್ನು ಮಾಡಿಸಿದನು ಅಥವಾ, **ವಹ್ನಿಂ** ಅಗ್ನಿದೇವನನ್ನು, **ಜುಹಾವ** ಸಂತೋಷಪಡಿಸಿದನು.

**ತಾತ್ಪರ್ಯ** :- ದಶರಥಮಹಾರಾಜನು ಜನಕನ ವೈಭವಯುತ ಸತ್ಕಾರದಿಂದ ಸಂತಸ ಭರಿತನಾದ. ಶ್ರೀರಾಮನ ವಿವಾಹವು ನೆರವೇರಿತು. ಕುಲ ಪುರೋಹಿತರಾದ ವಸಿಷ್ಠರು. ವಿಶ್ವಾಮಿತ್ರರ ಅನುಮೋದನೆ ಪಡೆದು

(ಲಾಜಾಹೋಮ ಮೊದಲಾದ) ವಿವಾಹಾಂಗವಾದ ಕಾರ್ಯಗಳನ್ನು ನೆರವೇರಿಸಿದರು. ॥ ೩೨ ॥

**ತದಾ ವಿಮಾನಾವಲಿಭಿರ್ನಭಸ್ತಲಂ**
**ದಿದೃಕ್ಷತಾಂ ಸಂಕುಲಮಾಸ ನಾಕಿನಾಮ್ ।**
**ಸುರಾನಕಾ ದುಂದುಭಯೋ ವಿನೇದಿರೇ**
**ಜಗುಶ್ಚ ಗಂಧರ್ವವರಾಃ ಸಹಸ್ರಶಃ ॥ ೩೩ ॥**

ಪದಚ್ಛೇದ : ತದಾ ವಿಮಾನಾವಲಿಭಿಃ ನಭಸ್ತಲಂ ದಿದೃಕ್ಷತಾಂ ಸಂಕುಲಮ್ ಆಸ ನಾಕಿನಾಮ್ । ಸುರಾನಕಾಃ ದುಂದುಭಯಃ ವಿನೇದಿರೇ ಜಗುಃ ಚ ಗಂಧರ್ವವರಾಃ ಸಹಸ್ರಶಃ ॥

**ಅರ್ಥ** :- **ತದಾ** ವಿವಾಹದ ಹೋಮಕಾಲದಲ್ಲಿ, **ದಿದೃಕ್ಷತಾಂ** ಈ ಮಹೋತ್ಸವವನ್ನು ನೋಡಲು ಆಗಮಿಸಿದ, **ನಾಕಿನಾಂ** ದೇವತೆಗಳ, **ವಿಮಾನಾವಲಿಭಿಃ** ವಿಮಾನಗಳ ಸಮೂಹದಿಂದ, **ನಭಸ್ತಲಂ** ಆಕಾಶವು, **ಸಂಕುಲಂ** ತುಂಬಿದಂತಹುದು, **ಆಸ** ಆಯಿತು, **ಚ** ಮತ್ತು, **ಸುರಾನಕಾಃ** = **ಸುರ** ದೇವತೆಗಳ, **ಆನಕಾಃ** ಪಟಹ ಅಥವಾ ಢಕ್ಕೆ ಎಂಬ ವಾದ್ಯಗಳು, **ದುಂದುಭಯಃ** ನಗಾರಿಗಳು, **ವಿನೇದಿರೇ** ಮೊಳಗಿದವು, **ಚ** ಮತ್ತು, **ಸಹಸ್ರಶಃ** ಸಾವಿರಾರು, **ಗಂಧರ್ವವರಾಃ** ಗಂಧರ್ವಶ್ರೇಷ್ಠರು, **ಜಗುಃ** ಗಾನ ಮಾಡಿದರು.

**ತಾತ್ಪರ್ಯ** :- ಸೀತಾ-ರಾಮರ ಕಲ್ಯಾಣೋತ್ಸವ ಕಾಣಬಯಸಿ ಬಂದ ದೇವತೆಗಳ ವಿಮಾನಗಳಿಂದ ಆಗಸ ತುಂಬಿ ಹೋಯಿತು. ದೇವತೆಗಳ ಪಟಹ-ನಗಾರಿ ಮೊದಲಾದ ವಾದ್ಯಗಳು ಮೊಳಗಿದವು. ಗಂಧರ್ವರು ಸಂತಸದಿಂದ ಹಾಡಿ ನರ್ತಿಸಿದರು. ॥ ೩೩ ॥

**ವಿಜಾನಮಾನಾ ಜಗತಾಂ ಹಿ ಮಾತರಂ**
**ಪುರಾಽರ್ಥಿತುಂ ನಾಯಯುರತ್ರ ದೇವತಾಃ ।**
**ತದಾ ತು ರಾಮಂ ರಮಯಾ ಯುತಂ ಪ್ರಭುಂ**
**ದಿದೃಕ್ಷವಶ್ಚಕ್ರುರಲಂ ನಭಸ್ತಲಮ್ ॥ ೩೪ ॥**

ಪದಚ್ಛೇದ : ವಿಜಾನಮಾನಾಃ ಜಗತಾಂ ಹಿ ಮಾತರಂ ಪುರಾ ಅರ್ಥಿತುಂ ನ ಆಯಯುಃ ಅತ್ರ ದೇವತಾಃ । ತದಾ ತು ರಾಮಂ ರಮಯಾ ಯುತಂ ಪ್ರಭುಂ ದಿದೃಕ್ಷವಃ ಚಕ್ರುಃ ಅಲಂ ನಭಸ್ತಲಮ್ ॥

**ಅರ್ಥ** :- **ಪುರಾ** ಧನುಸ್ಸನ್ನು ಎತ್ತುವ ಸ್ಪರ್ಧೆ ನಡೆಯುವಾಗ, **ದೇವತಾಃ** ದೇವತೆಗಳು, (ಸೀತಾದೇವಿಯನ್ನು) **ಜಗತಾಂ** ಸಕಲ ಜಗತ್ತುಗಳಿಗೆ, **ಮಾತರಂ** ತಾಯಿ ಎಂಬುದಾಗಿ, **ವಿಜಾನಮಾನಾಃ** ಸರಿಯಾಗಿ ತಿಳಿದವರಾಗಿ, **ಅತ್ರ** ಈ ಸ್ವಯಂವರ ಕಾಲದಲ್ಲಿ, **ಅರ್ಥಿತುಂ** ಸೀತಾದೇವಿಯನ್ನು ಪಡೆಯಲು, **ನ ಆಯಯುಃ** ಬರಲಿಲ್ಲ, **ಹಿ** ಇದು ಪ್ರಸಿದ್ಧವು. **ತದಾ ತು** ಆ ವಿವಾಹ ಮಹೋತ್ಸವ ಕಾಲದಲ್ಲಿ ಮಾತ್ರ, **ರಮಯಾ** ಶ್ರೀಸೀತಾದೇವಿಯಿಂದ, **ಯುತಂ** ಕೂಡಿದ, **ಪ್ರಭುಂ** ಸಮರ್ಥನಾದ, **ರಾಮಂ** ಶ್ರೀರಾಮನನ್ನು, **ದಿದೃಕ್ಷವಃ** ನೋಡಲು ಇಚ್ಛಿಸಿದವರಾಗಿ, **ನಭಸ್ತಲಂ** ಆಕಾಶವನ್ನು, **ಅಲಂಚಕ್ರುಃ** ಪೂರ್ಣವನ್ನಾಗಿ ಮಾಡಿದರು.

**ತಾತ್ಪರ್ಯ** :- ಸೀತೆಯು ಜಗದಂಬೆಯೆಂದು ಚೆನ್ನಾಗಿ ತಿಳಿದ ದೇವತೆಗಳು ಅವಳನ್ನು ಪಡೆಯಲೋಸುಗ ಸ್ಪರ್ಧೆಯಲ್ಲಿ ಭಾಗವಹಿಸಲಿಲ್ಲ. ಆದರೆ ಸೀತಾ ರಾಮರ ಕಲ್ಯಾಣೋತ್ಸವದಲ್ಲಿ ಅವರ ಸಂದರ್ಶನ ಮಾಡಬಯಸಿ ಆಗಸವನ್ನೆಲ್ಲ ವ್ಯಾಪಿಸಿದರು. ॥೩೪॥

**ಯಥಾ ಪುರಾ ಸಾಗರಜಾಸ್ವಯಂವರೇ**
**ಸುಮಾನಸಾನಾಮಭವತ್ ಸಮಾಗಮಃ ।**
**ತಥಾ ಹ್ಯಭೂತ್ ಸರ್ವದಿವೌಕಸಾಂ ತದಾ**
**ತಥಾ ಮುನೀನಾಂ ಸಹ ಭೂಭೃತಾಂ ಭುವಿ ॥ ೩೫ ॥**

ಪದಚ್ಛೇದ : **ಯಥಾ ಪುರಾ ಸಾಗರಜಾಸ್ವಯಂವರೇ ಸುಮಾನಸಾನಾಂ ಅಭವತ್ ಸಮಾಗಮಃ । ತಥಾ ಹಿ ಅಭೂತ್ ಸರ್ವದಿವೌಕಸಾಂ ತದಾ ತಥಾ ಮುನೀನಾಂ ಸಹ ಭೂಭೃತಾಂ ಭುವಿ ॥**

**ಅರ್ಥ** :- **ಯಥಾ** ಹೇಗೆ, **ಪುರಾ** ಹಿಂದೆ, **ಸಾಗರಜಾ ಸ್ವಯಂವರೇ** ಸಮುದ್ರದ ಮಥನ ಕಾಲಕ್ಕೆ ಅಭಿವ್ಯಕ್ತಳಾದ ಮಹಾಲಕ್ಷ್ಮೀದೇವಿಯ ಸ್ವಯಂವರ ಕಾಲದಲ್ಲಿ, **ಸುಮಾನಸಾನಾಂ** ದೇವತೆಗಳ, **ಸಮಾಗಮಃ** ಸಮಾಗಮವು, **ಅಭವತ್** ಆಯಿತೋ, **ತಥಾ** ಅದರಂತೆ, **ತದಾ** ಶ್ರೀ ಸೀತಾರಾಮರ ವಿವಾಹ ಕಾಲದಲ್ಲಿ, **ಸರ್ವದಿವೌಕಸಾಂ** ಎಲ್ಲ ದೇವತೆಗಳ, **ತಥಾ** ಹಾಗೂ, **ಮುನೀನಾಂ** ಮುನಿಗಳ (ಋಷಿಗಳ), **ಭೂಭೃತಾಂ** ರಾಜರ, **ಸಮಾಗಮಃ** ಸಮಾಗಮವು, **ಸಹ** ಒಮ್ಮೆಲೆ, **ಭುವಿ** ಭೂಮಿಯಲ್ಲಿ, **ಅಭವತ್** ಆಯಿತು.

**ತಾತ್ಪರ್ಯ** :- ಅಮೃತಮಥನಕಾಲದಲ್ಲಿ ಲಕ್ಷ್ಮಿಯು ಪ್ರಾದುರ್ಭವಿಸಿದಾಗ ನಡೆದ, ಲಕ್ಷ್ಮೀ-ನಾರಾಯಣರ ಕಲ್ಯಾಣೋತ್ಸವದಲ್ಲಿ ಹೇಗೆ ಕ್ಷೀರಸಾಗರದಲ್ಲಿ ಎಲ್ಲ ದೇವತೆಗಳು-ಋಷಿಗಳು-ರಾಜರ್ಷಿಗಳು ಭಾಗವಹಿಸಿದರೋ ಹಾಗೆಯೇ ಸೀತಾರಾಮರ ಕಲ್ಯಾಣ ಮಹೋತ್ಸವ ಕಾಲದಲ್ಲಿ ಭೂಮಿಯಲ್ಲಿ ಎಲ್ಲ ದೇವತೆಗಳು-ಋಷಿಗಳು ರಾಜರುಗಳು ಭಾಗವಹಿಸಿದರು. ॥ ೩೫ ॥

**ಪ್ರಗೃಹ್ಯ ಪಾಣಿಂ ಚ ನೃಪಾತ್ಮಜಾಯಾ**
**ರರಾಜ ರಾಜೀವಸಮಾನನೇತ್ರಃ ।**
**ಯಥಾ ಪುರಾ ಸಾಗರಜಾಸಮೇತಃ**
**ಸುರಾಸುರಾಣಾಮಮೃತಾಬ್ಧಿಮಂಥನೇ ॥ ೩೬ ॥**

ಪದಚ್ಛೇದ : ಪ್ರಗೃಹ್ಯ ಪಾಣಿಂ ಚ ನೃಪಾತ್ಮಜಾಯಾಃ ರರಾಜ ರಾಜೀವ ಸಮಾನನೇತ್ರಃ । ಯಥಾ ಪುರಾ ಸಾಗರಜಾಸಮೇತಃ ಸುರಾಸುರಾಣಾಂ ಅಮೃತಾಬ್ಧಿಮಂಥನೇ ॥

**ಅರ್ಥ** :- **ಯಥಾ** ಹೇಗೆ, **ಪುರಾ** ಹಿಂದೆ, **ಸುರಾಸುರಾಣಾಂ** ದೇವತೆಗಳ ಮತ್ತು ದೈತ್ಯರ (ಪ್ರಯೋಜನಕ್ಕಾಗಿ), **ಅಮೃತಾಬ್ಧಿಮಂಥನೇ** ಸಮುದ್ರ ಮಥನ ಕಾಲದಲ್ಲಿ, **ಸಾಗರಜಾಸಮೇತಃ** ಸಮುದ್ರದಲ್ಲಿ ವ್ಯಕ್ತಳಾದ ಶ್ರೀ ಲಕ್ಷ್ಮೀ ದೇವಿಯಿಂದ ಸಹಿತನಾಗಿ ಶ್ರೀಹರಿಯು, **ರರಾಜ** ಶೋಭಿಸಿದನೋ, (ತಥಾ ಹಾಗೆ), **ರಾಜೀವಸಮಾನನೇತ್ರಃ** ಕಮಲದಂತೆ ಕಣ್ಣುಗಳುಳ್ಳ ಶ್ರೀ ರಾಮನು, **ನೃಪಾತ್ಮಜಾಯಾಃ** ಶ್ರೀ ಸೀತಾದೇವಿಯ, **ಪಾಣಿಂ ಚ** ಹಸ್ತವನ್ನು ಕೂಡ, **ಪ್ರಗೃಹ್ಯ** ಹಿಡಿದು, **ರರಾಜ** ಶೋಭಿಸಿದನು.

**ತಾತ್ಪರ್ಯ** :- ಅಮೃತಕ್ಕಾಗಿ ದೇವ-ದಾನವರು ಕ್ಷೀರಸಾಗರದಲ್ಲಿ ನಿರ್ಮಥನ ನಡೆಸಿದಾಗ ಅಭಿವ್ಯಕ್ತಳಾದ ರಮೆಯೊಡನೆ ನಾರಾಯಣನು ಹೇಗೆ ಶೋಭಿಸಿದನೋ ಅದರಂತೆ ರಾಜೀವನೇತ್ರನಾದ ರಾಮನು ಸೀತೆಯ ಪಾಣಿಗ್ರಹಣಕಾಲದಲ್ಲಿ ಶೋಭಿಸಿದನು. ॥ ೩೬॥

**ಸ್ವಲಂಕೃತಾಸ್ತತ್ರ ವಿಚೇರುರಂಗನಾ**
**ವಿದೇಹರಾಜಸ್ಯ ಹಿ ಯಾಶ್ಚ ಯೋಷಿತಃ ।**
**ಮುದಾ ಸಮೇತಂ ರಮಯಾ ರಮಾಪತಿಂ**
**ವಿಲೋಕ್ಯ ರಾಮಾಯ ದದೌ ಧನಂ ನೃಪಃ ॥ ೩೭ ॥**

ಪದಚ್ಛೇದ : ಸ್ವಲಂಕೃತಾಃ ತತ್ರ ವಿಚೇರುಃ ಅಂಗನಾಃ ವಿದೇಹರಾಜಸ್ಯ ಹಿ ಯಾಃ ಚ ಯೋಷಿತಃ । ಮುದಾ ಸಮೇತಂ ರಮಯಾ ರಮಾಪತಿಂ ವಿಲೋಕ್ಯ ರಾಮಾಯ ದದೌ ಧನಂ ನೃಪಃ ॥

**ಅರ್ಥ** :- **ತತ್ರ** ಆ ವಿವಾಹ ಮಹೋತ್ಸವದಲ್ಲಿ, **ಯಾಃ** ಯಾರು, **ವಿದೇಹರಾಜಸ್ಯ** ಜನಕ ಮಹಾರಾಜನ, **ಯೋಷಿತಃ** ಸ್ತ್ರೀಯರಿರುವರೋ, **ಚ** ಮತ್ತು, **ಅಂಗನಾಃ** ಇತರ ಸ್ತ್ರೀಯರೂ ಕೂಡ, **ಸ್ವಲಂಕೃತಾಃ** ಚೆನ್ನಾಗಿ ಸಿಂಗರಿಸಿಕೊಂಡು, **ವಿಚೇರುಃ** ಅಲೆದಾಡಿದರು, **ನೃಪಃ** ಜನಕ ಮಹಾರಾಜನು, **ರಮಯಾ** ಶ್ರೀಸೀತಾದೇವಿಯಿಂದ, **ಸಮೇತಂ** ಕೂಡಿದ, **ರಮಾಪತಿಂ** ಶ್ರೀರಾಮದೇವನನ್ನು **ವಿಲೋಕ್ಯ** ನೋಡಿ, **ಮುದಾ** ಸಂತೋಷದಿಂದ, **ರಾಮಾಯ** ಶ್ರೀರಾಮದೇವರಿಗೋಸ್ಕರ, **ಧನಂ** ಸಂಪತ್ತನ್ನು **ದದೌ** ಕೊಟ್ಟನು.

**ತಾತ್ಪರ್ಯ** : ವಿವಾಹ ಸಂಭ್ರಮದಲ್ಲಿ ಜನಕರಾಜನ ಸ್ತ್ರೀಯರು ಮತ್ತು ಪಟ್ಟಣದ ಎಲ್ಲ ಸುಮಂಗಲಿಯರು ಚೆನ್ನಾಗಿ ಅಲಂಕರಿಸಿಕೊಂಡು ಎಲ್ಲೆಡೆ ಸಂಚರಿಸಿದರು. ರಮೆಯಿಂದ (ಸೀತೆಯಿಂದ) ಕೂಡಿದ ರಮಾರಮಣ (ರಾಮ)ನನ್ನೂ ಕಂಡು ಜನಕಮಹಾರಾಜನು ಸಂತಸದಿಂದ ಧನರಾಶಿಯನ್ನು ಸಮರ್ಪಿಸಿದನು. ॥ ೩೭ ॥

### ಸಹೋದರರ ವಿವಾಹ

**ಪ್ರಿಯಾಣಿ ವಸ್ತ್ರಾಣಿ ರಥಾನ್ ಸಕುಂಜರಾನ್**
**ಪರಾರ್ಘ್ಯರತ್ನಾನ್ಯಖಿಲಸ್ಯ ಚೇಶಿತುಃ ।**
**ದದೌ ಚ ಕನ್ಯಾತ್ರಯಮುತ್ತಮಂ ಮುದಾ**
**ತದಾ ಸ ರಾಮಾವರಜೇಭ್ಯ ಏವ ॥ ೩೮ ॥**

ಪದಚ್ಛೇದ : ಪ್ರಿಯಾಣಿ ವಸ್ತ್ರಾಣಿ ರಥಾನ್ ಸಕುಂಜರಾನ್ ಪರಾರ್ಘ್ಯರತ್ನಾನಿ ಅಖಿಲಸ್ಯ ಚ ಈಶಿತುಃ । ದದೌ ಚ ಕನ್ಯಾತ್ರಯಂ ಉತ್ತಮಂ ಮುದಾ ತದಾ, ಸಃ ರಾಮಾವರಜೇಭ್ಯಃ ಏವ ॥

**ಅರ್ಥ** :- **ಸಃ** ಆ ಜನಕ ಮಹಾರಾಜನು, **ಅಖಿಲಸ್ಯ** ಸಕಲ ಜಗತ್ತಿಗೆ, **ಈಶಿತುಃ** ನಿಯಾಮಕನಾದ ಶ್ರೀರಾಮನಿಗೆ, **ಪ್ರಿಯಾಣಿ** ಪ್ರಿಯವಾದ, **ವಸ್ತ್ರಾಣಿ** ವಸ್ತ್ರಗಳನ್ನು, **ಸಕುಂಜರಾನ್** ಆನೆಗಳಿಂದ ಸಹಿತವಾದ, **ರಥಾನ್** ರಥಗಳನ್ನು

ಪರಾರ್ಘ್ಯರತ್ನಾನಿ ಬೆಲೆಬಾಳುವ ರತ್ನಗಳನ್ನು, **ಮುದಾ** ಸಂತೋಷದಿಂದ, **ತದಾ** ಆ ವಿವಾಹ ಮಹೋತ್ಸವ ಕಾಲದಲ್ಲಿ, **ದದೌ** ಕೊಟ್ಟನು, **ಚ** ಮತ್ತು, **ತದಾ** ಅದೇ ಕಾಲದಲ್ಲಿಯೇ, **ಉತ್ತಮಂ** ಶ್ರೇಷ್ಠವಾದ, **ಕನ್ಯಾತ್ರಯಂ** ಮೂರು ಜನ ಕನ್ಯೆಯರನ್ನು, **ರಾಮಾವರಜೇಭ್ಯಃ** ಶ್ರೀರಾಮದೇವರ ತಮ್ಮಂದಿರಾದ ಲಕ್ಷ್ಮಣ ಭರತ ಶತ್ರುಘ್ನ ಇವರಿಗೆ, **ದದೌ** ಕೊಟ್ಟನು.

**ತಾತ್ಪರ್ಯ** :- ವಿಶ್ವದ ಒಡೆಯನಾದ ಶ್ರೀರಾಮನಿಗೆ ಜನಕರಾಜನು ಪ್ರಿಯವಾದ ವಸ್ತ್ರಗಳನ್ನು ರಥಗಳನ್ನು ಆನೆಗಳನ್ನು ಅಮೂಲ್ಯ ರತ್ನಗಳನ್ನೂ ಉಡುಗೊರೆಯಾಗಿ ಅರ್ಪಿಸಿದನು. ಇದರಂತೆ ತನ್ನ ಮಗಳಾದ ಊರ್ಮಿಳೆಯನ್ನು ಲಕ್ಷ್ಮಣನಿಗೂ, ತಮ್ಮನಾದ ಕುಶಧ್ವಜನ ಕುಮಾರಿಯರಾದ ಮಾಲವಿ-ಶ್ರುತಕೀರ್ತಿಯರನ್ನು ಕ್ರಮವಾಗಿ ಭರತ - ಶತ್ರುಘ್ನರಿಗೂ ವಿವಾಹ ಮಾಡಿಕೊಟ್ಟನು. ॥ ೩೮ ॥

**ಮಹೋತ್ಸವಂ ತಂ ತ್ವನುಭೂಯ ದೇವತಾ**
**ನರಾಶ್ಚ ಸರ್ವೇ ಪ್ರಯಯುರ್ಯಥಾಽಽಗತಮ್ ।**
**ಪಿತಾ ಚ ರಾಮಸ್ಯ ಸುತೈಃ ಸಮನ್ವಿತೋ**
**ಯಯಾವಯೋಧ್ಯಾಂ ಸ್ವಪುರೀಂ ಮುದಾ ತತಃ ॥ ೩೯ ॥**

ಪದಚ್ಛೇದ : ಮಹೋತ್ಸವಂ ತಂ ತು ಅನುಭೂಯ ದೇವತಾಃ ನರಾಃ ಚ ಸರ್ವೇ ಪ್ರಯಯುಃ ಯಥಾಽಽಗತಮ್ । ಪಿತಾ ಚ ರಾಮಸ್ಯ ಸುತೈಃ ಸಮನ್ವಿತಃ ಯಯೌ ಅಯೋಧ್ಯಾಂ ಸ್ವಪುರೀಂ ಮುದಾ ತತಃ ॥

**ಅರ್ಥ** :- **ತಂ** ಆ ರೀತಿಯಾಗಿ ನೆರವೇರಿದ, **ಮಹೋತ್ಸವಂ** ವಿವಾಹ ಮಹೋತ್ಸವವನ್ನು, **ಅನುಭೂಯ** ಅನುಭವಿಸಿ, **ಸರ್ವೇ** ಎಲ್ಲ, **ದೇವತಾಃ** ದೇವತೆಗಳು, **ಚ** ಮತ್ತು, **ನರಾಃ** ಮನುಷ್ಯರು, **ಯಥಾಗತಂ** = **ಯಥಾ** ಹೇಗೆ ಸಂತೋಷದಿಂದ, **ಆಗತಂ** ಬಂದಿದ್ದರೋ, (ತಥಾ ಹಾಗೆ), **ಪ್ರಯಯುಃ** ಹೋದರು, **ತತಃ** ಅನಂತರದಲ್ಲಿ, **ರಾಮಸ್ಯ** ಶ್ರೀರಾಮನ, **ಪಿತಾ ಚ** ತಂದೆಯಾದ ದಶರಥರಾಜನೂ ಸಹ, **ಸುತೈಃ** ತನ್ನ ಮಕ್ಕಳಿಂದ, **ಸಮನ್ವಿತಃ** ಕೂಡಿದವನಾಗಿ, **ಮುದಾ** ಸಂತೋಷದಿಂದ, **ಸ್ವಪುರೀಂ** ತನ್ನ ನಗರವಾದ, **ಅಯೋಧ್ಯಾಂ** ಅಯೋಧ್ಯಾಪಟ್ಟಣವನ್ನು ಕುರಿತು, **ಯಯೌ** ಹೋದನು.

**ತಾತ್ಪರ್ಯ** : ವಿವಾಹಮಹೋತ್ಸವದಲ್ಲಿ ಭಾಗವಹಿಸಲು ಆಗಮಿಸಿದ ದೇವತೆಗಳು - ಋಷಿಗಳು - ರಾಜರು ಬರುವಾಗ ಸಂತಸದಿಂದ ಬಂದಂತೆ ಆನಂದದಿಂದಲೇ ತಮ್ಮ ಸ್ಥಳಗಳಿಗೆ ಪಯಣಿಸಿದರು. ದಶರಥಮಹಾರಾಜನು ತನ್ನ ಮಕ್ಕಳೊಡನೆ ಅಯೋಧ್ಯೆಗೆ ಪ್ರಯಾಣ ಮಾಡಿದನು. ॥ ೩೯ ॥

**ಪರಶುರಾಮ ಸಮಾಗಮ**

**ತದಂತರೇ ಸೋಽಥ ದದರ್ಶ ಭಾರ್ಗವಂ**
**ಸಹಸ್ರಲಕ್ಷಾಮಿತಭಾನುದೀಧಿತಿಮ್ ।**
**ವಿಭಾಸಮಾನಂ ನಿಜರಶ್ಮಿಮಂಡಲೇ**
**ಧನುರ್ಧರಂ ದೀಪ್ತಪರಶ್ವಧಾಯುಧಮ್ ॥ ೪೦ ॥**

**ಪದಚ್ಛೇದ : ತದಂತರೇ ಸಃ ಅಥ ದದರ್ಶ ಭಾರ್ಗವಂ ಸಹಸ್ರಲಕ್ಷಾಮಿತ-ಭಾನುದೀಧಿತಿಮ್ । ವಿಭಾಸಮಾನಂ ನಿಜರಶ್ಮಿಮಂಡಲೇ ಧನುರ್ಧರಂ ದೀಪ್ತ-ಪರಶ್ವಧಾ ಯುಧಮ್ ॥**

**ಅರ್ಥ** :- **ಅಥ** ಮಿಥಿಲಾ ಪಟ್ಟಣದಿಂದ ಹೊರಟ ನಂತರ, **ಸಃ** ಆ ದಶರಥರಾಜನು, **ತದಂತರೇ** ವಿದೇಹ ಅಯೋಧ್ಯಾಗಳ ಮಾರ್ಗಮಧ್ಯದಲ್ಲಿ, **ಸಹಸ್ರಲಕ್ಷಾಮಿತಭಾನುದೀಧಿತಿಂ** ಸಾವಿರ ಲಕ್ಷ (ಅನಂತ)ಸಂಖ್ಯಾಕರಾದ ಸೂರ್ಯರ ಕಾಂತಿಯಂತೆ ಕಾಂತಿಯುಳ್ಳಂತಹ, **ನಿಜರಶ್ಮಿಮಂಡಲೇ** ತನ್ನ ಜ್ಞಾನವೆಂಬ ಕಿರಣಗಳ ಸಮೂಹದಲ್ಲಿ, **ವಿಭಾಸಮಾನಂ** ಶೋಭಾಯಮಾನ ನಾದ, **ಧನುರ್ಧರಂ** ಶಾರ್ಙ್ಗಧನುಸ್ಸನ್ನು ಧರಿಸಿದಂತಹ, **ದೀಪ್ತಪರಶ್ವಧಾ ಯುಧಂ ದೀಪ್ತ** ಪ್ರಕಾಶಮಾನವಾದ, **ಪರಶ್ವಧ** ಕೊಡಲಿಯೇ, **ಆಯುಧಂ** ಆಯುಧವಾಗಿ ಉಳ್ಳ, **ಭಾರ್ಗವಂ** ಭೃಗು ಕುಲದಲ್ಲಿ ಅವತರಿಸಿದ ಶ್ರೀ ಪರಶು ರಾಮ ದೇವರನ್ನು, **ದದರ್ಶ** ನೋಡಿದನು.

**ತಾತ್ಪರ್ಯ** :- ಅಯೋಧ್ಯೆಗೆ ಮರಳುವ ದಾರಿಯಲ್ಲಿ ಭಕ್ತರ ಯೋಗ್ಯತೆಗೆ ತಕ್ಕಂತೆ ಸಾವಿರ-ಲಕ್ಷ-ಅನಂತ ಸೂರ್ಯರ ಕಾಂತಿಯಿಂದ ತನ್ನನ್ನೂ ತೋರಿಸಿ ಕೊಳ್ಳುವ, ತನ್ನ ಪ್ರಭಾ ಮಂಡಲದಲ್ಲಿ ಶೋಭಿಸುತ್ತಿರುವ ಧನುರ್ಧಾರಿಯಾದ ಹೊಳೆಯುವ ಕೊಡಲಿಯನ್ನು ಧರಿಸಿದ ಪರಶುರಾಮನನ್ನು ದಶರಥನು ಕಂಡನು. ॥ ೪೦ ॥

ಅಜಾನತಾಂ ರಾಘವಮಾದಿಪೂರುಷಂ
ಸಮಾಗತಂ ಜ್ಞಾಪಯಿತುಂ ನಿದರ್ಶನೈಃ ।
ಸಮಾಹ್ವಯಂತಂ ರಘುಪಂ ಸ್ಪೃಧೇವ
ನೃಪೋ ಯಯಾಚೇ ಪ್ರಣಿಪತ್ಯ ಭೀತಃ ॥ ೪೧ ॥

ಪದಚ್ಛೇದ : ಅಜಾನತಾಂ ರಾಘವವ್ ಆದಿಪೂರುಷಂ ಸಮಾಗತಂ ಜ್ಞಾಪಯಿತುಂ ನಿದರ್ಶನೈಃ । ಸಮಾಹ್ವಯಂತಂ ರಘುಪಂ ಸ್ಪೃಧಾ ಇವ ನೃಪಃ ಯಯಾಚೇ ಪ್ರಣಿಪತ್ಯ ಭೀತಃ ॥

**ಅರ್ಥ :-** **ರಾಘವಂ** ಶ್ರೀರಾಮದೇವನನ್ನು, **ಆದಿಪೂರುಷಂ** ಮೂಲ ರೂಪೀ ಶ್ರೀ ನಾರಾಯಣನೆಂದು, **ಅಜಾನತಾಂ** ತಿಳಿಯದಂತಹ ಜನರಿಗೆ, **ನಿದರ್ಶನೈಃ** ದೃಷ್ಟಾಂತಗಳಿಂದ, **ಜ್ಞಾಪಯಿತುಂ** ತಿಳಿಸುವುದಕ್ಕೋಸ್ಕರ, **ರಘುಪಂ** ಶ್ರೀರಾಮದೇವನನ್ನು, **ಸ್ಪೃಧಾ ಇವ** ಸ್ಪರ್ಧೆಯಿಂದ ಬಂದಂತೆ, **ಸಮಾಹ್ವಯಂತಂ** ಯುದ್ಧಕ್ಕೆ ಆಹ್ವಾನಿಸುತ್ತಿದ್ದಂತಹ ಶ್ರೀ ಪರಶು ರಾಮದೇವನನ್ನು **ಪ್ರಣಿಪತ್ಯ** ನಮಸ್ಕರಿಸಿ, **ಭೀತಃ** ಹೆದರಿದಂತಹ, **ನೃಪಃ** ದಶರಥ ರಾಜನು, **ಯಯಾಚೇ** ಪ್ರಾರ್ಥಿಸಿದನು.

**ತಾತ್ಪರ್ಯ :-** ಶ್ರೀರಾಮ,ಧರೆಗಿಳಿದ ಆದಿಪುರುಷ ನಾರಾಯಣನೆಂಬ ಸತ್ಯವನ್ನು ತಿಳಿಯದ ಸುಜನರಿಗೆ ಅನೇಕ ಉದಾಹರಣೆಗಳಿಂದ ಅದನ್ನು ಮನವರಿಕೆ ಮಾಡಿಕೊಡಲು ಸ್ಪರ್ಧೆ ಯಿಂದ (ಅಸಹನೆಯಿಂದ) ಬಂದವನಂತೆ ಪರಶುರಾಮ, ರಾಮನನ್ನು ಯುದ್ಧಕ್ಕೆ ಆಹ್ವಾನಿಸಿದ. ಆಗ ದಶರಥನು ಭಯವಿಹ್ವಲನಾಗಿ ಪರಶುರಾಮನನ್ನು ಪ್ರಾರ್ಥಿಸಿದನು. ॥೪೧॥

ನ ಮೇ ಸುತಂ ಹಂತುಮಿಹಾರ್ಹಸಿ ಪ್ರಭೋ
ವಯೋಗತಸ್ಯೇತ್ಯುದಿತಃ ಸ ಭಾರ್ಗವಃ ।
ಸುತತ್ರಯಂ ತೇ ಪ್ರದದಾಮಿ ರಾಘವಂ
ರಣೇ ಸ್ಥಿತಂ ದ್ರಷ್ಟುಮಿಹಾಗತೋಽಸ್ಮ್ಯಹಮ್ ॥ ೪೨ ॥

ಪದಚ್ಛೇದ : ನ ಮೇ ಸುತಂ ಹಂತುಂ ಇಹ ಅರ್ಹಸಿ ಪ್ರಭೋ ವಯೋಗತಸ್ಯ ಇತಿ ಉದಿತಃ ಸಃ ಭಾರ್ಗವಃ । ಸುತತ್ರಯಂ ತೇ ಪ್ರದದಾಮಿ ರಾಘವಂ ರಣೇ ಸ್ಥಿತಂ ದ್ರಷ್ಟುವ್ ಇಹ ಆಗತಃ ಅಸ್ಮಿ ಅಹಮ್ ॥

**ಅರ್ಥ** :- **ಪ್ರಭೋ** ಸಮರ್ಥನಾದ ಶ್ರೀ ಪರಶುರಾಮದೇವನೇ, **ಇಹ** ಈಗ, **ವಯೋಗತಸ್ಯ** ವಯಸ್ಸಾದಂತಹ (ಮುಪ್ಪಿನವನಾದ), **ಮೇ** ನನ್ನ **ಸುತಂ** ಮಗನನ್ನು **ಹಂತುಂ** ಕೊಲ್ಲಲು, **ನ ಅರ್ಹಸಿ** ಅರ್ಹನಲ್ಲ **ಇತಿ** ಈ ರೀತಿಯಾಗಿ, **ಉದಿತಃ** ಹೇಳಲ್ಪಟ್ಟಂತಹ (ಪ್ರಾರ್ಥಿಸಲ್ಪಟ್ಟಂತಹ), **ಸಃ** ಆ, **ಭಾರ್ಗವಃ** ಶ್ರೀ ಪರಶುರಾಮದೇವನು, **ತೇ** ನಿನಗೆ, **ಸುತತ್ರಯಂ** ಮೂರು ಮಕ್ಕಳನ್ನು **ಪ್ರದದಾಮಿ** ಕೊಟ್ಟಿದ್ದೇನೆ, **ರಾಘವಂ** ಶ್ರೀರಾಮನನ್ನು, **ರಣೇ** ಯುದ್ಧದಲ್ಲಿ **ಸ್ಥಿತಂ** ಇದ್ದವನನ್ನಾಗಿ, **ದ್ರಷ್ಟುಂ** ನೋಡುವುದಕ್ಕೋಸ್ಕರ, **ಇಹ** ಇಲ್ಲಿಗೆ, **ಅಹಂ** ನಾನು, **ಆಗತೋಽಸ್ಮಿ** ಬಂದಿರುತ್ತೇನೆ.

**ತಾತ್ಪರ್ಯ** : ಪ್ರಭೋ ಪರಶುರಾಮ ! ಮುಪ್ಪಿನಿಂದ ಜರ್ಜರಿತನಾದ ನನಗೆ, ಪುತ್ರವಿಯೋಗ ದುಃಖವನ್ನು ನೀಡದಿರು. ದಶರಥನ ಬೇಡಿಕೆಗೆ ಪರಶುರಾಮ ಮಾರ್ನುಡಿದ – 'ನಿನ್ನ ಮೂರು ಮಕ್ಕಳನ್ನೂ ಬಿಟ್ಟುಕೊಡುವೆ, ಆದರೆ ರಾಮ ನನ್ನೊಡನೆ ಯುದ್ಧಕ್ಕೆ ಸನ್ನದ್ಧನಾಗಲಿ.' ॥ ೪೨ ॥

**ರಾಮನ ಮಹಿಮೆಯ ಆವಿಷ್ಕಾರ**

**ಸ ಇತ್ಥಮುಕ್ತ್ವಾ ನೃಪತಿಂ ರಘೂತ್ತಮಂ**
**ಭೃಗೂತ್ತಮಃ ಪ್ರಾಹ ನಿಜಾಂ ತನುಂ ಹರಿಃ ।**
**ಅಭೇದಮಜ್ಞೇಷ್ವಪಿ ದರ್ಶಯನ್ ಪರಂ**
**ಪುರಾತನೋಽಹಂ ಹರಿರೇಷ ಇತ್ಯಪಿ ॥ ೪೩ ॥**

ಪದಚ್ಛೇದ : **ಸಃ ಇತ್ಥಮ್ ಉಕ್ತ್ವಾ ನೃಪತಿಂ ರಘೂತ್ತಮಂ ಭೃಗೂತ್ತಮಃ ಪ್ರಾಹ ನಿಜಾಂ ತನುಂ ಹರಿಃ । ಅಭೇದಮ್ ಅಜ್ಞೇಷು ಅಪಿ ದರ್ಶಯನ್ ಪರಂ ಪುರಾತನಃ ಅಹಂ ಹರಿಃ ಏಷಃ ಇತಿ ಅಪಿ ॥**

**ಅರ್ಥ** :- **ಇತ್ಥಂ** ಹೀಗೆ, **ನೃಪತಿಂ** ದಶರಥ ರಾಜನನ್ನು ಕುರಿತು, **ಉಕ್ತ್ವಾ** ಹೇಳಿ, **ಸಃ** ಪರಶುರಾಮನು, **ಅಜ್ಞೇಷ್ವಪಿ** ಅಜ್ಞಾನಿಗಳಲ್ಲೂ ಕೂಡ, **ಅಹಂ** ನಾನು, **ಪುರಾತನಃ** ಮೂಲರೂಪೀ ನಾರಾಯಣನು, **ಏಷಃ ಅಪಿ** ಈ ಶ್ರೀರಾಮನೂ ಕೂಡ, **ಹರಿಃ** ಮೂಲರೂಪೀ ನಾರಾಯಣನು **ಇತಿ** ಹೀಗೆ, **ಪರಂ** ಸ್ಫುಟವಾಗಿ, **ಅಭೇದಂ** ರೂಪಗಳಲ್ಲಿರುವ ಅಭೇದವನ್ನು, **ದರ್ಶಯನ್** ತಿಳಿಸುವವನಾಗಿ, **ನಿಜಾಂ ತನುಂ** ತನ್ನದೇ ಇನ್ನೊಂದು ರೂಪವುಳ್ಳ

(ಜ್ಞಾನಾನಂದರೂಪಿಯಾದ) ರಾಮನನ್ನು, **ಭೃಗೂತ್ತಮಃ** ಭೃಗು ಋಷಿಗಳ ವಂಶದಲ್ಲಿ ಜನಿಸಿದ **ಹರಿಃ** ಪರಶುರಾಮನು, **ಪ್ರಾಹ** ಹೇಳಿದನು.

**ತಾತ್ಪರ್ಯ** :- ದಶರಥನನ್ನು ಕುರಿತು ಹೀಗೆ ಮಾತನಾಡಿದ ಪರಶು ರಾಮನು, ತಾನು ಮತ್ತು ರಾಮನು ಮೂಲರೂಪಿಯಾದ ನಾರಾಯಣನ ಎರಡು ಅವತಾರಗಳು; ತಮ್ಮಲ್ಲಿ ಇನಿತೂ ಭೇದವಿಲ್ಲವೆಂಬ ತತ್ವವನ್ನು ಅಜ್ಞಜನರಿಗೂ ಜ್ಞಾಪಿಸಲೋಸುಗ ತನ್ನದೇ ಇನ್ನೊಂದು ರೂಪವುಳ್ಳ ರಾಮನಿಗೆ ಹೀಗೆ ನುಡಿದ. ॥ ೪೩ ॥

### ಧನುಸ್ಸಿನ ಇತಿಹಾಸ

**ಶೃಣುಷ್ವ ರಾಮ ತ್ವಮಿಹೋದಿತಂ ಮಯಾ**
**ಧನುರ್ದ್ವಯಂ ಪೂರ್ವಮಭೂನ್ಮಹಾದ್ಭುತಮ್ ।**
**ಉಮಾಪತಿಸ್ತ್ವೇಕಮಧಾರಯತ್ ತತೋ**
**ರಮಾಪತಿಶ್ಚಾಪರಮುತ್ತಮೋತ್ತಮಮ್ ॥ ೪೪ ॥**

ಪದಚ್ಛೇದ : ಶೃಣುಷ್ವ ರಾಮ ತ್ವಮ್ ಇಹ ಉದಿತಂ ಮಯಾ ಧನುರ್ದ್ವಯಂ ಪೂರ್ವಂ ಅಭೂತ್ ಮಹಾದ್ಭುತಮ್ । ಉಮಾಪತಿಃ ತು ಏಕಮ್ ಅಧಾರಯತ್ ತತಃ ರಮಾಪತಿಃ ಚ ಅಪರಮ್ ಉತ್ತಮೋತ್ತಮಮ್ ॥

**ಅರ್ಥ** :- **ಇಹ** ಇಲ್ಲಿ, **ಮಯಾ** ನನ್ನಿಂದ, **ಉದಿತಂ** ಹೇಳಲ್ಪಟ್ಟದ್ದನ್ನು, **ರಾಮ** ಶ್ರೀರಾಮನೇ ! **ತ್ವಂ** ನೀನು, **ಶೃಣುಷ್ವ** ಕೇಳು, **ಪೂರ್ವಂ** ಈ ಹಿಂದೆ, **ಮಹಾದ್ಭುತಂ** ಅತ್ಯಾಶ್ಚರ್ಯಕರವಾದ, **ಧನುರ್ದ್ವಯಂ** ಎರಡು ಬಿಲ್ಲುಗಳು, **ಅಭೂತ್** ಇದ್ದವು, **ತತಃ** ಅವೆರಡರಲ್ಲಿ, **ಏಕಂ** ಒಂದನ್ನು, **ಉಮಾಪತಿಃ** ಶ್ರೀರುದ್ರದೇವನು, **ಅಧಾರಯತ್** ಧರಿಸಿದನು (ಸ್ವೀಕರಿಸಿದನು), **ರಮಾಪತಿಶ್ಚ** ಶ್ರೀಹರಿಯು, **ಅಪರಂ** ಇನ್ನೊಂದು **ಉತ್ತಮೋತ್ತಮಂ** ಅತ್ಯಂತ (ಸರ್ವ) ಶ್ರೇಷ್ಠವಾದ ಧನುಸ್ಸನ್ನು, **ಅಧಾರಯತ್** ಧರಿಸಿದನು (ಸ್ವೀಕರಿಸಿದನು).

**ತಾತ್ಪರ್ಯ** : ಓ ರಾಮನೇ! ನಾನು ಹೇಳುವುದನ್ನೂ ಆಲಿಸು - ಹಿಂದೆ ಅದ್ಭುತವಾದ ಎರಡು ಬಿಲ್ಲುಗಳಿದ್ದವು. ಅವುಗಳಲ್ಲಿ ಒಂದನ್ನು ಉಮಾಪತಿ ಧರಿಸಿದ. ಅತ್ಯುತ್ತಮವಾದ ಇನ್ನೊಂದು ಬಿಲ್ಲನ್ನು ರಮಾಪತಿ ಧರಿಸಿದನು.॥೪೪॥

**ತದಾ ತು ಲೋಕಸ್ಯ ನಿದರ್ಶನಾರ್ಥಿಭಿಃ**
**ಸಮರ್ಥಿತೌ ತೌ ಹರಿಶಂಕರೌ ಸುರೈಃ ।**
**ರಣೇ ಸ್ಥಿತೌ ವಾಂ ಪ್ರಸಮೀಕ್ಷಿತುಂ ವಯಂ**
**ಸಮರ್ಥಯಾಮೋಽತ್ರ ನಿದರ್ಶನಾರ್ಥಿನಃ ॥ ೪೫ ॥**

ಪದಚ್ಛೇದ : ತದಾ ತು **ಲೋಕಸ್ಯ ನಿದರ್ಶನಾರ್ಥಿಭಿಃ ಸಮರ್ಥಿತೌ ತೌ ಹರಿಶಂಕರೌ ಸುರೈಃ ।** ರಣೇ ಸ್ಥಿತೌ ವಾಂ ಪ್ರಸಮೀಕ್ಷಿತುಂ ವಯಂ ಸಮರ್ಥಯಾಮಃ ಅತ್ರ ನಿದರ್ಶನಾರ್ಥಿನಃ ॥

**ಅರ್ಥ :-** **ತದಾ ತು** ಹೀಗೆ ಬಿಲ್ಲನ್ನು ಧರಿಸಿದ ಕಾಲದಲ್ಲಿ, **ಲೋಕಸ್ಯ** ಸಜ್ಜನ ಸಮುದಾಯಕ್ಕೆ, **ನಿದರ್ಶನಾರ್ಥಿಭಿಃ** ಯಾರು ಸರ್ವೋತ್ತಮರೆಂದು ನಿರ್ಧರಿಸಲು, **ಸುರೈಃ** ದೇವತೆಗಳಿಂದ, **ತೌ ಹರಿಶಂಕರೌ** ಶ್ರೀಹರಿಯು ಮತ್ತು ಶಂಕರನು, **ಸಮರ್ಥಿತೌ** ಪ್ರಾರ್ಥಿಸಲ್ಪಟ್ಟರು, **ತತ್ರ** ಈಗ ಇಲ್ಲಿ, **ನಿದರ್ಶನಾರ್ಥಿನಃ** ಪರತತ್ತ್ವಜ್ಞಾನಾಪೇಕ್ಷಿಗಳಾದ, **ವಯಂ** ನಾವು, **ರಣೇ** ಯುದ್ಧದಲ್ಲಿ, **ಸ್ಥಿತೌ** ನಿಂತಂತಹ, **ವಾಂ** ನಿಮ್ಮಿಬ್ಬರನ್ನು, **ಪ್ರಸಮೀಕ್ಷಿತುಂ** ಸರಿಯಾದ ಸ್ವರೂಪ ಜ್ಞಾನಕ್ಕೋಸ್ಕರ (ಪ್ರಸಮೀಕ್ಷಯಿತುಂ), **ಸಮರ್ಥಯಾಮಃ** ನಮ್ರತೆಯಿಂದ ಪ್ರಾರ್ಥಿಸುತ್ತೇವೆ.

**ತಾತ್ಪರ್ಯ :-** ಆಗ ದೇವತೆಗಳು, ಹರಿಸರ್ವೋತ್ತಮತ್ವದ ಬಗ್ಗೆ ಸುಜನರಿಗೆ ನಿರ್ಣಯಾತ್ಮಕ ಜ್ಞಾನ ಬರಲೆಂದು ಹರಿ - ಹರರನ್ನು ವಿನಂತಿಸಿದರು- ನಿಮ್ಮಲ್ಲಿ ಸರ್ವೋತ್ತಮರಾರೆಂದು ನಿರ್ಧರಿಸಲು ನೀವಿಬ್ಬರು ಯುದ್ಧ ಮಾಡಬೇಕೆಂದು ಪ್ರಾರ್ಥಿಸುತ್ತೇವೆ. ॥ ೪೫ ॥

### ಶಿಲೆಯಾದ ಶಂಕರ

**ತತೋ ಹಿ ಯುದ್ಧಾಯ ರಮೇಶಶಂಕರೌ**
**ವ್ಯವಸ್ಥಿತೌ ತೌ ಧನುಷೀ ಪ್ರಗೃಹ್ಯ ।**
**ಯತೋಽಂತರಸ್ಯೈಷ ನಿಯಾಮಕೋ ಹರಿ-**
**ಸ್ತತೋ ಹರೋಽಗ್ರೇಽಸ್ಯ ಶಿಲೋಪಮೋಽಭೂತ್ ॥ ೪೬ ॥**

ಪದಚ್ಛೇದ : ತತಃ ಹಿ ಯುದ್ಧಾಯ ರಮೇಶಶಂಕರೌ ವ್ಯವಸ್ಥಿತೌ ತೌ ಧನುಷೀ ಪ್ರಗೃಹ್ಯ । ಯತಃ ಅಂತಃ ಅಸ್ಯ ಏಷಃ ನಿಯಾಮಕಃ ಹರಿಃ ತತಃ ಹರಃ ಅಗ್ರೇ ಅಸ್ಯ ಶಿಲೋಪಮಃ ಅಭೂತ್ ॥

**ಅರ್ಥ** :- **ತತಃ** ಈ ರೀತಿ ದೇವತೆಗಳು ಪ್ರಾರ್ಥಿಸಿದ ನಂತರ, **ರಮೇಶಶಂಕರೌ** ಶ್ರೀಹರಿಯು ಮತ್ತು ಶ್ರೀರುದ್ರದೇವನು, **ಯುದ್ಧಾಯ** ಯುದ್ಧಕ್ಕೋಸ್ಕರ, **ತೌ** ಪ್ರಸಿದ್ಧವಾದ ವೈಷ್ಣವ ಮತ್ತು ಪಿನಾಕ ಎಂಬ, **ಧನುಷೀ** ಧನುಸ್ಸುಗಳನ್ನು, **ಪ್ರಗೃಹ್ಯ** ಹಿಡಿದುಕೊಂಡು, **ವ್ಯವಸ್ಥಿತೌ** ನಿಂತರು (ಆದರೆ), **ಯತಃ** ಯಾವ ಕಾರಣದಿಂದ, **ಅಸ್ಯ** ಈ ರುದ್ರದೇವನಿಗೆ, **ಏಷಃ ಹರಿಃ** ಈ ಶ್ರೀಹರಿಯು, **ಅಂತಃ ನಿಯಾಮಕಃ** ಅಂತರ್ನಿಯಾಮಕನೋ, **ತತಃ** ಆ ಕಾರಣ ದಿಂದ, **ಅಸ್ಯ** ಈ ಶ್ರೀಹರಿಯ, **ಅಗ್ರೇ** ಮುಂದೆ, **ಹರಃ** ಶ್ರೀರುದ್ರದೇವನು, **ಶಿಲೋಪಮಃ** ಕಲ್ಲಿನಂತೆ ನಿಶ್ಚಲನು, **ಅಭೂತ್** ಆದನು, **ಹಿ** ನಿಶ್ಚಯವು.

**ತಾತ್ಪರ್ಯ** :- ಹರಿ-ಹರರು ತಮ್ಮ ಬಿಲ್ಲನ್ನು ಹಿಡಿದುಕೊಂಡು ಯುದ್ಧಕ್ಕೆ ನಿಂತರು. ಶ್ರೀಹರಿಯು ಹರನೊಳಗೂ ನಿಯಾಮಕನಾದುದರಿಂದ ಅವನ ಮುಂದೆ ಹರ ಕಲ್ಲಿನಂತೆ ಜಡನಾಗಿ ನಿಂತ. ॥ ೪೬ ॥

**ಶಶಾಕ ನೈವಾಥ ಯದಾऽಭಿವೀಕ್ಷಿತುಂ**
**ಪ್ರಸ್ಪಂದಿತುಂ ವಾ ಕುತ ಏವ ಯೋದ್ಧುಮ್ ।**
**ಶಿವಸ್ತದಾ ದೇವಗಣಾಃ ಸಮಸ್ತಾಃ**
**ಶಶಂಸುರುಚ್ಚೈರ್ಜಗತೋ ಹರೇರ್ಬಲಮ್ ॥ ೪೭ ॥**

ಪದಚ್ಛೇದ : ಶಶಾಕ ನ ಏವ ಅಥ ಯದಾ ಅಭಿವೀಕ್ಷಿತುಂ ಪ್ರಸ್ಪಂದಿತುಂ ವಾ ಕುತಃ ಏವ ಯೋದ್ಧುಮ್ । ಶಿವಃ ತದಾ ದೇವಗಣಾಃ ಸಮಸ್ತಾಃ ಶಶಂಸುಃ ಉಚ್ಚೈಃ ಜಗತಃ ಹರೇಃ ಬಲಮ್ ॥

**ಅರ್ಥ** :- **ಅಥ** ಹೀಗೆ ಕಲ್ಲಿನಂತೆ ನಿಶ್ಚಲನಾದ, **ಶಿವಃ** ಶಿವನು, **ಯದಾ** ಯಾವಾಗ, **ಅಭಿವೀಕ್ಷಿತುಂ** ಸರಿಯಾಗಿ ನೋಡಲು, **ಪ್ರಸ್ಪಂದಿತುಂ ವಾ** ಚಲಿಸಲಿಕ್ಕಾಗಲೀ, **ನೈವ ಶಶಾಕ** ಸಮರ್ಥನಾಗಲಿಲ್ಲವೋ ಆದ್ದರಿಂದ, **ಯೋದ್ಧುಂ** ಶ್ರೀಹರಿಯ ಎದುರಿನಲ್ಲಿ ಯುದ್ಧ ಮಾಡಲು, **ಕುತ ಏವ** ಹೇಗೆ ಸಮರ್ಥನಾದಾನು ? **ತದಾ** ರುದ್ರದೇವನು ಸುಮ್ಮನೆ (ನಿಷ್ಕ್ರಿಯವಾಗಿ) ನಿಂತಿರುವಾಗ, **ಸಮಸ್ತಾಃ** ಎಲ್ಲ, **ದೇವಗಣಾಃ** ದೇವತೆಗಳು, **ಹರೇಃ** ಶ್ರೀಹರಿಯ, **ಬಲಂ** ಪರಾಕ್ರಮವನ್ನು, **ಉಚ್ಚೈಃ** ಉಚ್ಚ ಸ್ವರದಿಂದ, **ಶಶಂಸುಃ** ಸ್ತೋತ್ರ ಮಾಡಿದರು.

ತಾತ್ಪರ್ಯ : ಯಾವಾಗ ಹರನು ಶ್ರೀಹರಿಯನ್ನು ನೋಡಲು, ಅಥವಾ ಸ್ವತಂತ್ರವಾಗಿ ಚಲಿಸಲು ಶಕ್ತನಾಗಲಿಲ್ಲವೋ ಆಗ ಹೇಗೆ ತಾನೇ ಯುದ್ಧ ಮಾಡಿಯಾನು? ಆಗ ದೇವತೆಗಳೆಲ್ಲ ಹರನಿಗಿಂತ ಹರಿಯ ಸಾಮರ್ಥ್ಯ ಹಿರಿದಾದುದೆಂದು ಸುಜನರಿಗೆ ಸ್ಫುಟವಾಗಿ ಸಾರಿದರು. ॥ ೪೭ ॥

ಯದೀರಣೇನೈವ ವಿನೈಷ ಶಂಕರಃ
ಶಶಾಕ ನ ಪ್ರಶ್ವಸಿತುಂ ಚ ಕೇವಲಮ್ ।
ಕಿಮತ್ರ ವಕ್ತವ್ಯಮತೋ ಹರೇರ್ಬಲಂ
ಹರಾತ್ ಪರಂ ಸರ್ವತ ಏವ ಚೇತಿ ॥ ೪೮ ॥

ಪದಚ್ಛೇದ : ಯದೀರಣೇನ ಏವ ವಿನಾ ಏಷಃ ಶಂಕರಃ ಶಶಾಕ ನ ಪ್ರಶ್ವಸಿತುಂ ಚ ಕೇವಲಮ್ । ಕಿಂ ಅತ್ರ ವಕ್ತವ್ಯಮ್ ಅತಃ ಹರೇಃ ಬಲಂ ಹರಾತ್ ಪರಂ ಸರ್ವತಃ ಏವ ಚ ಇತಿ ॥

ಅರ್ಥ :- ಯದೀರಣೇನ ವಿನೈವ = ಯತ್ ಯಾವ ಶ್ರೀಹರಿಯ, ಈರಣೇನ ವಿನೈವ ಪ್ರೇರಣೆ ಇಲ್ಲದಲೇ, ಏಷಃ ಈ, ಶಂಕರಃ ಶಂಕರನು, ಕೇವಲಂ ಪ್ರಶ್ವಸಿತುಂ ಚ ಶ್ವಾಸೋಚ್ಛ್ವಾಸವನ್ನು ಮಾಡಲು ಕೂಡ, ನ ಶಶಾಕ ಸಮರ್ಥನಾಗಲಿಲ್ಲವೋ, ಅತಃ ಆದ್ದರಿಂದ, ಅತ್ರ ಈ ವಿಷಯದಲ್ಲಿ, ಹರೇಃ ಶ್ರೀಹರಿಯ, ಬಲಂ ಬಲವು, ಹರಾತ್ ಶ್ರೀರುದ್ರದೇವನಿಗಿಂತ, ಸರ್ವತ ಏವ ಎಲ್ಲ ವಿಧದಿಂದ, ಪರಂ ಶ್ರೇಷ್ಠವಾಗಿದೆ, ಇತಿ ಹೀಗೆ, ಕಿಂ ವಕ್ತವ್ಯಂ ಏನು ಹೇಳತಕ್ಕದ್ದಿದೆ?

ತಾತ್ಪರ್ಯ :- ಯಾವ ಶ್ರೀಹರಿಯ ಪ್ರೇರಣೆ ಇಲ್ಲದೆಯೇ ಹರನು ಉಸಿರಾಡಲೂ ಶಕ್ತನಲ್ಲವೋ ಅಂತಹ ಹರಿಯ ಬಲವು ಹರನ ಬಲಕ್ಕಿಂತ ಶ್ರೇಷ್ಠವೆಂದು ಹೇಳಬೇಕಾದುದೇನಿದೆ?

ತತಃ ಪ್ರಣಮ್ಯಾಶು ಜನಾರ್ದನಂ ಹರಃ
ಪ್ರಸನ್ನದೃಷ್ಟ್ಯಾ ಹರಿಣಾಽಭಿವೀಕ್ಷಿತಃ ।
ಜಗಾಮ ಕೈಲಾಸಮಮುಷ್ಯ ತದ್ಧನು-
ಸ್ತ್ವಯಾ ಪ್ರಭಗ್ನಂ ಕಿಲ ಲೋಕಸನ್ನಿಧೌ ॥ ೪೯ ॥

ಪದಚ್ಛೇದ : ತತಃ ಪ್ರಣಮ್ಯ ಆಶು ಜನಾರ್ದನಂ ಹರಃ ಪ್ರಸನ್ನದೃಷ್ಟ್ಯಾ ಹರಿಣಾ ಅಭಿವೀಕ್ಷಿತಃ । ಜಗಾಮ ಕೈಲಾಸಮ್ ಅಮುಷ್ಯ ತದ್ಧನುಃ ತ್ವಯಾ ಪ್ರಭಗ್ನಂ ಕಿಲ ಲೋಕಸನ್ನಿಧೌ ॥

**ಅರ್ಥ** :- **ತತಃ** ಅನಂತರದಲ್ಲಿ **ಹರಃ** ಶಿವನು, **ಜನಾರ್ದನಂ** ಶ್ರೀವಿಷ್ಣುವನ್ನು **ಆಶು** ಶೀಘ್ರದಲ್ಲಿ **ಪ್ರಣಮ್ಯ** ಭಕ್ತಿಪೂರ್ವಕ ನಮಸ್ಕರಿಸಿ, **ಹರಿಣಾ** ಶ್ರೀಹರಿಯಿಂದ, **ಪ್ರಸನ್ನದೃಷ್ಟ್ಯಾ** ಸಂತೋಷಯುಕ್ತವಾದ ನೋಟ ದಿಂದ, **ಅಭಿವೀಕ್ಷಿತಃ** ನೋಡಲ್ಪಟ್ಟವನಾಗಿ, **ಕೈಲಾಸಂ** ಕೈಲಾಸ ಲೋಕವನ್ನು **ಜಗಾಮ** ಹೋದನು, **ಅಮುಷ್ಯ** ಈ ರುದ್ರದೇವನ, **ತದ್ಧನುಃ** ಆ ಧನುಸ್ಸು (ಬಿಲ್ಲು), **ತ್ವಯಾ** ನಿನ್ನಿಂದ, **ಲೋಕಸನ್ನಿಧೌ** ಎಲ್ಲ ಜನರ ಸಮಕ್ಷಮದಲ್ಲಿ **ಪ್ರಭಗ್ನಂ** ತುಂಡರಿಸಲ್ಪಟ್ಟಿತು, **ಕಿಲ** ನಿಶ್ಚಯವು.

**ತಾತ್ಪರ್ಯ** :- ಅನಂತರ ಹರನು ಹರಿಗೆ ಭಕ್ತಿಯಿಂದ ನಮಿಸಿ ಅವನ ಅನುಗ್ರಹವನ್ನು ಪಡೆದು ಕೈಲಾಸಕ್ಕೆ ಪಯಣಿಸಿದನು. ರಾಮ! ನೀನೀಗ ಎಲ್ಲರ ಮುಂದೆ ಮುರಿದ ಬಿಲ್ಲು ಭಗವಾನ್ ಶಂಕರನದು. ॥ ೪೯ ॥

**ಧನುರ್ಯದನ್ಯದ್ಧರಿಹಸ್ತಯೋಗ್ಯಂ**
**ತತ್ಕಾರ್ಮುಕಾತ್ ಕೋಟಿಗುಣಂ ಪುನಶ್ಚ ।**
**ವರಂ ಹಿ ಹಸ್ತೇ ತದಿದಂ ಗೃಹೀತಂ**
**ಮಯಾ ಗೃಹಾಣೈತದತೋ ಹಿ ವೈಷ್ಣವಮ್ ॥ ೫೦ ॥**

ಪದಚ್ಛೇದ : ಧನುಃ ಯತ್ ಅನ್ಯತ್ ಹರಿಹಸ್ತಯೋಗ್ಯಂ ತತ್ಕಾರ್ಮುಕಾತ್ ಕೋಟಿಗುಣಂ ಪುನಃ ಚ । ವರಂ ಹಿ ಹಸ್ತೇ ತತ್ ಇದಂ ಗೃಹೀತಂ ಮಯಾ ಗೃಹಾಣ ಏತತ್ ಅತಃ ಹಿ ವೈಷ್ಣವಮ್ ॥

**ಅರ್ಥ** :- **ಯತ್** ಯಾವ ಧನುಸ್ಸು **ಅನ್ಯತ್** ಶಿವಧನುಸ್ಸಿಗಿಂತ ಬೇರೆ ಯದೋ, **ಹರಿಹಸ್ತಯೋಗ್ಯಂ** ಶ್ರೀಹರಿಯ ಕೈಯಲ್ಲಿ (ಇರಲು) ಯೋಗ್ಯ ವಾಗಿದೆಯೋ, **ತತ್ ಕಾರ್ಮುಕಾತ್** ರುದ್ರದೇವರ ಬಿಲ್ಲಿನ ದೆಸೆಯಿಂದ, **ಕೋಟಿಗುಣಂ** ಕೋಟಿ ಪಟ್ಟು ಹೆಚ್ಚಿನ ಸಾಮರ್ಥ್ಯವುಳ್ಳದ್ದು **ಪುನಶ್ಚ** ಇಷ್ಟೇ ಅಲ್ಲ ಇನ್ನೂ ಹೆಚ್ಚಾಗಿ, **ವರಂ** ಶ್ರೇಷ್ಠವಾಗಿದೆಯೋ, **ತದಿದಂ** ಅಂತಹ ಈ ಧನುಸ್ಸು **ಹಸ್ತೇ** ಕೈಯಲ್ಲಿ, **ಮಯಾ** ನನ್ನಿಂದ, **ಗೃಹೀತಂ** ಹಿಡಿಯಲ್ಪಟ್ಟಿರುತ್ತದೆ, **ಅತಃ** ಆ

ಕಾರಣದಿಂದ, **ಏತತ್** ಈ, **ವೈಷ್ಣವಂ** ವಿಷ್ಣು ಸಂಬಂಧಿ ಯಾದ ಬಿಲ್ಲನ್ನು **ಗೃಹಾಣ** ಸ್ವೀಕರಿಸು.

**ತಾತ್ಪರ್ಯ** :- ಅಂದು ಹರಿ ಧರಿಸಿದ ಬಿಲ್ಲು, ಶಿವಧರಿಸಿದ ಪಿನಾಕವೆಂಬ ಬಿಲ್ಲಿಗಿಂತ ಕೋಟಿಪಟ್ಟು ಮಿಗಿಲಾದುದು. ಅದನ್ನಿಂದು ನಾನು ಧರಿಸಿರುವೆ. ಈ ವೈಷ್ಣವಧನುಸ್ಸನ್ನು ನೀನು ಹೆದೆ ಏರಿಸು ! ॥ ೫೦ ॥

**ವೈಷ್ಣವಧನುಸ್ಸು ರಾಮನ ಹೆಗಲೇರಿತು**

**ಯದೀದಮಾಗೃಹ್ಯ ವಿಕರ್ಷಸಿ ತ್ವಂ**
**ತದಾ ಹರಿರ್ನಾತ್ರ ವಿಚಾರ್ಯಮಸ್ತಿ ।**
**ಇತಿ ಬ್ರುವಾಣಃ ಪ್ರದದೌ ಧನುರ್ವರಂ**
**ಪ್ರದರ್ಶಯನ್ ವಿಷ್ಣುಬಲಂ ಹರಾದ್ವರಮ್ ॥ ೫೧ ॥**

ಪದಚ್ಛೇದ : **ಯದಿ ಇದಮ್ ಆಗೃಹ್ಯ ವಿಕರ್ಷಸಿ ತ್ವಂ ತದಾ ಹರಿಃ ನ ಅತ್ರ ವಿಚಾರ್ಯಮ್ ಅಸ್ತಿ । ಇತಿ ಬ್ರುವಾಣಃ ಪ್ರದದೌ ಧನುಃ ವರಂ ಪ್ರದರ್ಶಯನ್ ವಿಷ್ಣುಬಲಂ ಹರಾತ್ ವರಮ್ ॥**

**ಅರ್ಥ** :- ಹೇ **ರಾಮ** ಶ್ರೀರಾಮನೇ, **ಯದಿ** ಒಂದು ವೇಳೆ, **ತ್ವಂ** ನೀನು, **ಇದಂ** ಈ ಧನುಸ್ಸನ್ನು, **ಆಗೃಹ್ಯ** ಹಿಡಿದುಕೊಂಡು, **ವಿಕರ್ಷಸಿ** ಹೆದೆಯೇರಿಸಿದರೆ, **ತದಾ** ಆವಾಗ, **ತ್ವಂ** ನೀನು, **ಹರಿಃ** ಶ್ರೀಹರಿಯೇ ಆಗಿರುವಿ, **ಅತ್ರ** ಈ ವಿಷಯದಲ್ಲಿ, **ವಿಚಾರ್ಯಂ** ವಿಚಾರ ಮಾಡಬೇಕಾದ ವಿಷಯವು, **ನ ಅಸ್ತಿ** ಇರುವುದಿಲ್ಲ, **ಇತಿ** ಹೀಗೆ, **ಬ್ರುವಾಣಃ** ಹೇಳತಕ್ಕವನಾಗಿ, **ಹರಾತ್** ಶ್ರೀ ರುದ್ರದೇವರ ಬಲಕ್ಕಿಂತ, **ವಿಷ್ಣುಬಲಂ** ಶ್ರೀಹರಿಯ ಬಲವು, **ವರಂ** ಶ್ರೇಷ್ಠವೆಂದು, **ಪ್ರದರ್ಶಯನ್** ತೋರಿಸತಕ್ಕಂತಹ ಶ್ರೀ ಪರಶುರಾಮ ದೇವನು, **ವರಂ** ಶ್ರೇಷ್ಠವಾದ, **ಧನುಃ** ಧನುಸ್ಸನ್ನು, **ಪ್ರದದೌ** ಕೊಟ್ಟನು.

**ತಾತ್ಪರ್ಯ** :- ನೀನು ಈ ಬಿಲ್ಲನ್ನು ಹೆದೆಯೇರಿಸಿದರೆ ಹರಿಯೆಂಬುದು ನಿಶ್ಚಿತ. ಹೀಗೆ ನುಡಿದ ಪರಶುರಾಮನು ಹರನ ಬಲಕ್ಕಿಂತ ಹರಿಯ ಬಲ ಸರ್ವ ಶ್ರೇಷ್ಠವೆಂದು ತೋರಿಸಲು ಉತ್ತಮವಾದ ತನ್ನ ಬಿಲ್ಲನ್ನು ರಾಮನ ಕೈಗಿತ್ತ. ॥೫೧॥

**ಪ್ರಗೃಹ್ಯ ತಚ್ಚಾಪವರಂ ಸ ರಾಘವ-**
**ಶ್ಚಕಾರ ಸಜ್ಯಂ ನಿಮಿಷೇಣ ಲೀಲಯಾ ।**
**ಚಕರ್ಷ ಸಂಧಾಯ ಶರಂ ಚ ಪಶ್ಯತಃ**
**ಸಮಸ್ತಲೋಕಸ್ಯ ಚ ಸಂಶಯಂ ನುದನ್ ॥ ೫೨ ॥**

ಪದಚ್ಛೇದ : ಪ್ರಗೃಹ್ಯ ತತ್ ಚಾಪವರಂ ಸಃ ರಾಘವಃ ಚಕಾರ ಸಜ್ಯಂ ನಿಮಿಷೇಣ **ಲೀಲಯಾ । ಚಕರ್ಷ ಸಂಧಾಯ ಶರಂ ಚ ಪಶ್ಯತಃ ಸಮಸ್ತಲೋಕಸ್ಯ ಚ** ಸಂಶಯಂ ನುದನ್ ॥

**ಅರ್ಥ :-** **ಸಃ** ಆ, **ರಾಘವಃ** ಶ್ರೀರಾಮದೇವನು, **ತತ್** ಆ, **ಚಾಪವರಂ** ಶ್ರೇಷ್ಠ ಬಿಲ್ಲನ್ನು, **ಪ್ರಗೃಹ್ಯ** ಸ್ವೀಕರಿಸಿ, **ನಿಮಿಷೇಣ** ಒಂದು ಕ್ಷಣದಲ್ಲಿ, **ಲೀಲಯಾ** ಅನಾಯಾಸವಾಗಿ, **ಸಜ್ಯಂ** ಜ್ಯಾದಿಂದ ಸಹಿತವನ್ನಾಗಿ (ಬಿಲ್ಲನ್ನು ಮಣಿಸಿ ದಾರದಿಂದ ಬಂಧಿತವನ್ನಾಗಿ), **ಚಕಾರ** ಮಾಡಿದನು, **ಚ** ಮತ್ತು, **ಪಶ್ಯತಃ** ಇದೆಲ್ಲವನ್ನೂ ನೋಡತಕ್ಕ, **ಸಮಸ್ತಲೋಕಸ್ಯ** ಎಲ್ಲ ಜನರ, **ಸಂಶಯಂ** ಶ್ರೀರಾಮನು ಶ್ರೀಹರಿಯ ಅವತಾರ ಅಹುದೋ ಅಲ್ಲವೋ ಎಂಬ ಸಂಶಯವನ್ನು, **ನುದನ್** (ಸನ್) ಪರಿಹರಿಸತಕ್ಕವರಾಗಿ, **ಶರಂ ಚ** ಬಾಣವನ್ನು ಸಹ, **ಸಂಧಾಯ** (ಬಿಲ್ಲಿಗೆ) ಹೂಡಿ, **ಚಕರ್ಷ** (ಕಿವಿಯ ವರೆಗೆ) ಎಳೆದನು.

**ತಾತ್ಪರ್ಯ :-** ಶ್ರೀರಾಮ ಪರಶುರಾಮನು ನೀಡಿದ ವೈಷ್ಣವ ಧನುಸ್ಸನ್ನು ಅನಾಯಾಸವಾಗಿ ಒಂದು ನಿಮಿಷದಲ್ಲಿ ಹೆದೆ ಏರಿಸಿದ. ವೀಕ್ಷಿಸುತ್ತಿದ್ದ ಸಮಸ್ತ ಸುಜನರ ಸಂಶಯವನ್ನು ನಿವಾರಿಸುತ್ತ ಬಾಣವನ್ನು ಹೂಡಿದ ॥ ೫೨ ॥

**ಪ್ರದರ್ಶಿತೇ ವಿಷ್ಣುಬಲೇ ಸಮಸ್ತಶೋ**
**ಹರಾಚ್ಚ ನಿಃಸಂಖ್ಯತಯಾ ಮಹಾಧಿಕೇ ।**
**ಜಗಾದ ಮೇಘೌಘಗಭೀರಯಾ ಗಿರಾ**
**ಸ ರಾಘವಂ ಭಾರ್ಗವ ಆದಿಪೂರುಷಃ ॥ ೫೩ ॥**

ಪದಚ್ಛೇದ : ಪ್ರದರ್ಶಿತೇ ವಿಷ್ಣುಬಲೇ ಸಮಸ್ತಶಃ ಹರಾತ್ ಚ ನಿಃಸಂಖ್ಯತಯಾ ಮಹಾಧಿಕೇ । ಜಗಾದ ಮೇಘೌಘಗಭೀರಯಾ ಗಿರಾ ಸಃ ರಾಘವಂ ಭಾರ್ಗವಃ ಆದಿಪೂರುಷಃ ॥

**ಅರ್ಥ :-** (ರಾಮೇಣ ಶ್ರೀರಾಮನಿಂದ), **ಹರಾತ್** ಶ್ರೀರುದ್ರದೇವರ (ಬಲದ) ದೆಸೆಯಿಂದ, **ಸಮಸ್ತಶಃ ಚ** ಶ್ರೀ ರಮಾ ಬ್ರಹ್ಮಾದಿ ಸಮಸ್ತರಿಗಿಂತ, **ನಿಃಸಂಖ್ಯತಯಾ** ಗಣನೆಗೆ ಸಿಗದಷ್ಟು, **ಮಹಾಧಿಕೇ** ಅತ್ಯಧಿಕವಾದ, **ವಿಷ್ಣುಬಲೇ** ಶ್ರೀಹರಿಯ ಬಲವು, **ಪ್ರದರ್ಶಿತೇ** ಪ್ರಕಾಶಿತವಾಗುತ್ತಿರಲು, **ಸಃ** ಆ, **ಭಾರ್ಗವಃ ಆದಿಪೂರುಷಃ** ಮೂಲರೂಪಿ ಶ್ರೀಹರಿಯಿಂದ ಅಭಿನ್ನನಾದ ಶ್ರೀ ಪರಶುರಾಮ

ದೇವನು, **ಮೇಘೌಘಗಭೀರಯಾ** ಮೇಘಗಳ ಸಮುದಾಯದ ಧ್ವನಿಯಂತೆ ಗಂಭೀರವಾದ, **ಗಿರಾ** ಮಾತಿನಿಂದ, **ರಾಘವಂ** ಶ್ರೀರಾಮನನ್ನು ಕುರಿತು, **ಜಗಾದ** ಹೇಳಿದನು.

**ತಾತ್ಪರ್ಯ** :- ಶಿವನಿಗಿಂತಲೂ, ರಮಾ-ಬ್ರಹ್ಮಾದಿದೇವತೆಗಳಿಗಿಂತಲೂ ಗಣನೆಗೆ ನಿಲುಕದಷ್ಟು ವಿಷ್ಣುಬಲವು ಶ್ರೇಷ್ಠವೆಂದು ಶ್ರೀರಾಮನು ಸಾಬೀತು ಪಡಿಸಿದಾಗ, ಪರಶುರಾಮನು ಮೇಘಗರ್ಜನೆಯಂತೆ ಗಂಭೀರವಾದ ಧ್ವನಿಯಿಂದ ಮಾತನಾಡಿದನು. ॥ ೫೩ ॥

**ಅಲಂ ಬಲಂ ತೇ ಜಗತೋಽಖಿಲಾದ್ವರಂ**
**ಪರೋಽಸಿ ನಾರಾಯಣ ಏವ ನಾನ್ಯಥಾ ।**
**ವಿಸರ್ಜಯಸ್ವೇಹ ಶರಂ ತಪೋಮಯೇ**
**ಮಹಾಸುರೇ ಲೋಕಮಯೇ ವರಾದ್ವಿಭೋಃ ॥ ೫೪ ॥**

**ಪದಚ್ಛೇದ : ಅಲಂ ಬಲಂ ತೇ ಜಗತಃ ಅಖಿಲಾತ್ ವರಂ ಪರಃ ಅಸಿ ನಾರಾಯಣಃ ಏವ ನ ಅನ್ಯಥಾ । ವಿಸರ್ಜಯಸ್ವ ಇಹ ಶರಂ ತಪೋಮಯೇ ಮಹಾಸುರೇ ಲೋಕಮಯೇ ವರಾತ್ ವಿಭೋಃ ॥**

**ಅರ್ಥ** :- **ತೇ** ನಿನ್ನ **ಬಲಂ** ಬಲವು, **ಅಖಿಲಾತ್** ಸಮಸ್ತವಾದ, **ಜಗತಃ** ಜಗತ್ತಿನ ದೆಸೆಯಿಂದ, **ಅಲಂ** ಅತ್ಯಂತವಾಗಿ, **ವರಂ** ಶ್ರೇಷ್ಠವಾಗಿದೆ, (ತ್ವಂ ನೀನು), **ಪರಃ** ಸರ್ವೋತ್ತಮನಾದ, **ನಾರಾಯಣಃ** ನಾರಾಯಣನು, **ಅಸಿ** ಇರುತ್ತೀ, **ಅನ್ಯಥಾ** ಇದಕ್ಕೆ ವಿರುದ್ಧವಾಗಿ, **ನ** ಇಲ್ಲ (ಅಂದರೆ ನಿನಗೂ ಶ್ರೀ ನಾರಾಯಣನಿಗೂ ಅಭೇದವೇ ಇದೆ), **ಇಹ** (ನನ್ನ) ಉದರದಲ್ಲಿರುವ, **ವಿಭೋಃ** ಬ್ರಹ್ಮ ದೇವರ, **ವರಾತ್** ವರದಿಂದ, **ಲೋಕಮಯೇ** ಈ ಜಗತ್ತನ್ನು ವ್ಯಾಪಿಸಿದ, **ತಪೋಮಯೇ** ತಪಃ ಪ್ರಧಾನವಾಗಿ ಉಳ್ಳ, **ಮಹಾಸುರೇ** ಈ ದೈತ್ಯನ ಮೇಲೆ, **ಶರಂ** ಬಾಣವನ್ನು, **ವಿಸರ್ಜಯಸ್ವ** ಪ್ರಯೋಗಿಸು.

**ತಾತ್ಪರ್ಯ** :- ನಿನ್ನ ಬಲ ಪರಿಪೂರ್ಣ. ನೀನು ಸರ್ವೋತ್ತಮ ನಾರಾಯಣ ಎಂಬ ಬಗ್ಗೆ ಸಂಶಯವಿಲ್ಲ. ಚತುರ್ಮುಖನ ವರಬಲದಿಂದ ಲೋಕವ್ಯಾಪ್ತನಾಗಿ ನನ್ನ ಹೊಟ್ಟೆಯೊಳಡಗಿದ ತಪೋಮಯನಾದ ಅಸುರನ ಮೇಲೆ ನೀನು ಹೂಡಿದ ಬಾಣವನ್ನು ಪ್ರಯೋಗಿಸು. ॥ ೫೪ ॥

ಅತುಲಸಂಹಾರ

**ಪುರಾಽತುಲೋ ನಾಮ ಮಹಾಸುರೋಽಭೂತ್**
**ವರಾತ್ ಸ ತು ಬ್ರಹ್ಮಣ ಆಪ ಲೋಕತಾಮ್ ।**
**ಪುನಶ್ಚ ತಂ ಪ್ರಾಹ ಜಗದ್ಗುರುರ್ಯದಾ**
**ಹರಿರ್ಜಿತಃ ಸ್ಯಾದ್ಧಿ ತದೈವ ವಧ್ಯಸೇ ॥ ೫೫ ॥**

ಪದಚ್ಛೇದ : ಪುರಾ ಅತುಲಃ ನಾಮ ಮಹಾಸುರಃ ಅಭೂತ್ ವರಾತ್ ಸಃ ತು ಬ್ರಹ್ಮಣಃ ಆಪ ಲೋಕತಾಮ್ । ಪುನಃ ಚ ತಂ ಪ್ರಾಹ ಜಗದ್ಗುರುಃ ಯದಾ ಹರಿಃ ಜಿತಃ ಸ್ಯಾತ್ ಹಿ ತದಾ ಏವ ವಧ್ಯಸೇ ॥

**ಅರ್ಥ** :- **ಪುರಾ** ಹಿಂದೆ, **ಅತುಲಃ** ನಾಮ ಅತುಲ ಎಂಬ ಹೆಸರಿನಿಂದ ಪ್ರಸಿದ್ಧನಾದ, **ಮಹಾಸುರಃ** ದೊಡ್ಡ ದೈತ್ಯನು, **ಅಭವತ್** ಇದ್ದನು, **ಸ ತು** ಆ ದೈತ್ಯನೇ, **ಬ್ರಹ್ಮಣಃ** ಚತುರ್ಮುಖ ಬ್ರಹ್ಮದೇವರ, **ವರಾತ್** ವರದಿಂದ, **ಲೋಕತಾಂ** ಈ ಎಲ್ಲ ಲೋಕದಲ್ಲಿ ವ್ಯಾಪ್ತಿಯನ್ನು **ಆಪ** ಹೊಂದಿದನು, **ಜಗದ್ಗುರುಃ** ಜಗದ್ಗುರುವಾದ ಬ್ರಹ್ಮದೇವನು, **ತಂ** ಆ ದೈತ್ಯನನ್ನು ಕುರಿತು, **ಯದಾ** ಯಾವಾಗ, **ಹರಿಃ** ಶ್ರೀಹರಿಯು, **ಜಿತಃ ಸ್ಯಾತ್** (ಇನ್ನೊಬ್ಬರಿಂದ) ಗೆಲ್ಲಲ್ಪಟ್ಟಿದ್ದಾನೆ (ಎಂದು ತಿಳಿಯುವಿಯೋ), **ತದೈವ** ಆವಾಗಲೇ, **ವಧ್ಯಸೇ** ಹತನಾಗುತ್ತೀ **ಹಿ** ನಿಶ್ಚಯವು, (ಇತಿ ಹೀಗೆ), **ಪುನಶ್ಚ** ಮತ್ತು ಕೂಡ, **ಪ್ರಾಹ** ಹೇಳಿದನು.

**ತಾತ್ಪರ್ಯ** :- ಹಿಂದೆ ಅತುಲನೆಂಬ ದೈತೇಯನು ಚತುರ್ಮುಖನನ್ನು ಕುರಿತು ತಪಸ್ಸನ್ನು ಮಾಡಿ ಲೋಕದಲ್ಲೆಲ್ಲ ವ್ಯಾಪ್ತಿಯನ್ನು ಅವಧ್ಯತ್ವ ವರವನ್ನು ಬೇಡಿದನು. ಬ್ರಹ್ಮದೇವರು ಅವಧ್ಯತ್ವವರವನ್ನು ನೀಡಲಿಲ್ಲ. ಅವನ ವಿನಂತಿಯಂತೆ ಹರಿಯು ಪರಾಜಿತನಾದರೆ ಮರಣ ಬರಲಿ ಎಂದು ಹೇಳಿದರು. ಪರಶುರಾಮನ ಹೊಟ್ಟೆಯಲ್ಲಿ ಈ ಅತುಲ ಆಸರೆ ಪಡೆದನು. ಪರಶುರಾಮನಿಗೆ ಅಪಜಯವಿಲ್ಲ ತನಗೆ ಎಂದೂ ಮರಣವಿಲ್ಲ ಎಂಬುದು ಅವನ ನಂಬಿಕೆಯಾಗಿತ್ತು. ॥ ೫೫ ॥

**ಅತೋ ವಧಾರ್ಥಂ ಜಗದಂತಕಸ್ಯ**
**ಸರ್ವಾಜಿತೋಽಹಂ ಜಿತವದ್ವ್ಯವಸ್ಥಿತಃ ।**
**ಇತೀರಿತೇ ಲೋಕಮಯೇ ಸ ರಾಘವೋ**
**ಮುಮೋಚ ಬಾಣಂ ಜಗದಂತಕೇಽಸುರೇ ॥ ೫೬ ॥**

ಪದಚ್ಛೇದ : **ಅತಃ ವಧಾರ್ಥಂ ಜಗದಂತಕಸ್ಯ ಸರ್ವಾಜಿತಃ ಅಹಂ ಜಿತವತ್ ವ್ಯವಸ್ಥಿತಃ। ಇತಿ ಈರಿತೇ ಲೋಕಮಯೇ ಸಃ ರಾಘವಃ ಮುಮೋಚ ಬಾಣಂ ಜಗದಂತಕೇ ಅಸುರೇ ॥**

**ಅರ್ಥ :- ಅತಃ** ಆದುದರಿಂದ, **ಜಗದಂತಕಸ್ಯ** ಜಗನ್ನಾಶಕನಾದ ಈ ದೈತ್ಯನ, **ವಧಾರ್ಥಂ** ಸಂಹಾರಕ್ಕೋಸ್ಕರ, **ಸರ್ವಾಜಿತಃ** ಸರ್ವರಿಂದಲೂ ಗೆಲ್ಲಲು ಅಶಕ್ಯನಾದ, **ಅಹಂ** ನಾನು, **ಜಿತವತ್** ಗೆಲ್ಲಲ್ಪಟ್ಟವನಂತೆ (ಪರಾಜಿತನಾದವ ನಂತೆ), **ವ್ಯವಸ್ಥಿತಃ** ನಿಂತಿರುತ್ತೇನೆ, ಹಿ ನಿಶ್ಚಯವು, **ಇತಿ** ಈ ರೀತಿಯಾಗಿ, **ಈರಿತೇ** (ಶ್ರೀ ಪರಶುರಾಮದೇವನಿಂದ) ಹೇಳಲ್ಪಡುತ್ತಿರಲಿಕ್ಕೆ, **ಸಃ ರಾಘವಃ** ಆ ಶ್ರೀರಾಮದೇವನು, **ಲೋಕಮಯೇ** ಜಗತ್ತಿನಲ್ಲಿ ವ್ಯಾಪ್ತನಾದ, **ಜಗದಂತಕೇ** ಜಗನ್ನಾಶಕನಾದ, **ಅಸುರೇ** ದೈತ್ಯನಲ್ಲಿ (ದೈತ್ಯನ ಮೇಲೆ), **ಬಾಣಂ** ಬಾಣವನ್ನು **ಮುಮೋಚ** ಬಿಟ್ಟನು.

**ತಾತ್ಪರ್ಯ :-** 'ಆದ್ದರಿಂದ ಲೋಕಕಂಟಕನಾದ ಅಸುರನ ವಿನಾಶಕ್ಕಾಗಿ ಯಾರಿಗೂ ಪರಾಜಿತನಾಗದ ನಾನು ಪರಾಜಿತನಂತೆ ತೋರಿಸಿಕೊಂಡಿದ್ದೇನೆ' ಎಂದು ಪರಶುರಾಮ ನುಡಿದಾಗ ಶ್ರೀರಾಮನು ಲೋಕಕಂಟಕನಾದ ಅತುಲನ ಮೇಲೆ ಬಾಣ ಪ್ರಯೋಗ ಮಾಡಿದನು. ॥ ೫೬ ॥

**ಪುರಾ ವರೋಽನೇನ ಶಿವೋಪಲಂಭಿತೋ**
**ಮುಮುಕ್ಷಯಾ ವಿಷ್ಣುತನುಪ್ರವೇಶನಮ್ ।**
**ಸ ತೇನ ರಾಮೋದರಗೋ ಬಹಿರ್ಗತ-**
**ಸ್ತದಾಜ್ಞಯೈವಾಶು ಬಭೂವ ಭಸ್ಮಸಾತ್ ॥ ೫೭ ॥**

ಪದಚ್ಛೇದ : **ಪುರಾ ವರಃ ಅನೇನ ಶಿವೋಪಲಂಭಿತಃ ಮುಮುಕ್ಷಯಾ ವಿಷ್ಣು-ತನುಪ್ರವೇಶನಮ್ । ಸಃ ತೇನ ರಾಮೋದರಗಃ ಬಹಿರ್ಗತಃ ತದಾಜ್ಞಯಾ ಏವ ಆಶು ಬಭೂವ ಭಸ್ಮಸಾತ್ ॥**

**ಅರ್ಥ :- ಪುರಾ** ಹಿಂದೆ, **ಮುಮುಕ್ಷಯಾ** ಮೋಕ್ಷದ ಇಚ್ಛೆಯಿಂದ, **ವಿಷ್ಣುತನು ಪ್ರವೇಶನಂ** ಶ್ರೀಹರಿಯ ದೇಹಪ್ರವೇಶವೆಂಬ, **ವರಃ** ವರವು, **ಅನೇನ** ಈ ದೈತ್ಯನಿಂದ, **ಶಿವೋಪಲಂಭಿತಃ** = **ಶಿವ** ರುದ್ರದೇವರ ದೆಸೆಯಿಂದ, **ಉಪಲಂಭಿತಃ** ಪ್ರಾಪ್ತವಾಯಿತು, **ಸಃ** ಆ ದೈತ್ಯನು, **ತೇನ** ಆ ವರದ

ನಿಮಿತ್ತವಾಗಿ, **ರಾಮೋದರಗಃ** ಪರಶುರಾಮ ದೇವರ ಉದರದಲ್ಲಿ ಇದ್ದನು, **ತದಾಜ್ಞಯೈವ** ಆ ಪರಶುರಾಮ ದೇವರ ಆಜ್ಞೆಯಿಂದಲೇ, **ಬಹಿರ್ಗತಃ** ಆ ದೇಹದಿಂದ ಹೊರಗೆ ಬಂದವನಾಗಿ, **ಆಶು** ಶೀಘ್ರದಲ್ಲಿ, **ಭಸ್ಮಸಾತ್ ಬಭೂವ** ಬೂದಿಯಾದನು.

**ತಾತ್ಪರ್ಯ** :- ಅತುಲ ಹಿಂದೆ ರುದ್ರದೇವರನ್ನು ಮುಕ್ತಿಯ ಬಯಕೆ ಯಿಂದ ಆರಾಧಿಸಿ ವರಬಲದಿಂದ ಶ್ರೀಹರಿಯ ಉದರವನ್ನು ಪ್ರವೇಶಿಸಿದ್ದನು. ಪರಶುರಾಮನ ಸೂಚನೆಯಂತೆ ಅವನು ಪರಶುರಾಮ ಸೋತನೆಂಬ ಭಾವನೆಯಿಂದ ತನಗೆ ಇಲ್ಲಿ ರಕ್ಷಣೆ ದೂರಕದೆನಿಸಿ ಹೊರಬಂದ. ಶ್ರೀರಾಮನ ಬಾಣಕ್ಕೆ ಸಿಲುಕಿ ಸುಟ್ಟು ಬೂದಿಯಾದ ॥ ೫೭ ॥

**ಇತೀವ ರಾಮಾಯ ಸ ರಾಘವಃ ಶರಂ**
**ವಿಕರ್ಷಮಾಣೋ ವಿನಿಹತ್ಯ ಚಾಸುರಮ್ ।**
**ತಪಸ್ತದೀಯಂ ಪ್ರವದನ್ ಮುಮೋದ**
**ತದೀಯಮೇವ ಹ್ಯಭವತ್ ಸಮಸ್ತಮ್ ॥ ೫೮ ॥**

**ಪದಚ್ಛೇದ : ಇತಿ ಇವ ರಾಮಾಯ ಸಃ ರಾಘವಃ ಶರಂ ವಿಕರ್ಷಮಾಣಃ ವಿನಿಹತ್ಯ ಚ ಅಸುರಮ್ । ತಪಃ ತದೀಯಂ ಪ್ರವದನ್ ಮುಮೋದ ತದೀಯಮ್ ಏವ ಹಿ ಅಭವತ್ ಸಮಸ್ತಮ್ ॥**

**ಅರ್ಥ** :- **ಇತಿ** ಈ ಕಾರಣದಿಂದ (ಆ ಅಸುರನನ್ನು ಸಂಹರಿಸಬೇಕಾದ್ದ ರಿಂದ), **ಸಃ ರಾಘವಃ** ಆ ಶ್ರೀರಾಮದೇವನು, **ರಾಮಾಯ ಇವ** ಶ್ರೀಪರಶು ರಾಮದೇವನಿಗೋಸ್ಕರ ಎಂಬಂತೆ (ಆ ಪರಶುರಾಮ ದೇವರ ದೇಹದ ಮೇಲೆ ಇರುವ ದೈತ್ಯನಿಗೋಸ್ಕರ), **ಶರಂ** ಬಾಣವನ್ನು, **ವಿಕರ್ಷಮಾಣಃ** ಬಿಡತಕ್ಕವ ನಾಗಿ, **ಅಸುರಂ** ಆ ಅತುಲ ಎಂಬ ಅಸುರನನ್ನು, **ವಿನಿಹತ್ಯ** ಸಂಹರಿಸಿ, **ತದೀಯಂ** ಆ ಪರಶುರಾಮದೇವರ ಸಂಬಂಧಿಯಾದ (ವಾಸ್ತವಿಕವಾಗಿ ಆ ದೈತ್ಯನ ಸಂಬಂಧಿಯಾದ), **ತಪಃ** ತಪಸ್ಸು (ಮಯಾ ನನ್ನಿಂದ, ನಾಶಿತಂ ನಾಶ ಮಾಡಲ್ಪಟ್ಟಿತು), **ಇತಿ** ಹೀಗೆ, **ಪ್ರವದನ್** ಹೇಳತಕ್ಕವನಾಗಿ, **ಮುಮೋದ** ಸಂತೋಷ ಪಟ್ಟನು, **ಹಿ** ಯಾವ ಕಾರಣದ ದೆಸೆಯಿಂದ, **ಸಮಸ್ತಂ** ಈ ಸಮಸ್ತ ಬ್ರಹ್ಮಾಂಡವು, ಅದರೊಳಗಿನ ಈ ದೈತ್ಯನ ತಪಸ್ಸು, **ತದೀಯಂ** ಶ್ರೀಹರಿಯದೇ, **ಅಭವತ್** ಆಗಿರುವುದು.

**ತಾತ್ಪರ್ಯ** : ಪರಶುರಾಮನ ಮೇಲೆ ಬಾಣವನ್ನು ಹೊಡಿದಂತೆ ಪ್ರದರ್ಶಿಸಿದ ಶ್ರೀರಾಮ ಅಸುರನನ್ನು ಸಂಹರಿಸಿ, ಪರಶುರಾಮನ ತಪನಾಶ ಗೈದನೆನ್ನುತ್ತ ಸಂತೋಷವ್ಯಕ್ತಪಡಿಸಿದ. ನಿಜವಾಗಿ ಅತುಲನ ಪುಣ್ಯವನ್ನು ಶ್ರೀರಾಮ ಸೂರೆಗೊಂಡದ್ದು. ಎಲ್ಲದರ ಒಡೆಯ ಪರಶುರಾಮನಲ್ಲವೆ ? ಅವನಿಲ್ಲದೇ ಯಾರ ಕ್ರಿಯೆ ನಡೆಯಬಲ್ಲದು? ಈ ಹಿನ್ನಲೆಯಲ್ಲಿ ಇದು ಪರಶುರಾಮನ ತಪವೆಂಬ ಹೇಳಿಕೆ ಅನುಚಿತವಲ್ಲ. ॥ ೫೮ ॥

**ನಿರಂತರಾನಂದವಿಬೋಧಸಾರಃ**
**ಸ ಜಾನಮಾನೋಽಖಿಲಮಾದಿಪೂರುಷಃ ।**
**ವದನ್ ಶೃಣೋತೀವ ವಿನೋದತೋ ಹರಿಃ**
**ಸ ಏಕ ಏವ ದ್ವಿತನುರ್ಮುಮೋದ ॥ ೫೯ ॥**

**ಪದಚ್ಛೇದ : ನಿರಂತರಾನಂದವಿಬೋಧಸಾರಃ ಸಃ ಜಾನಮಾನಃ ಅಖಿಲಮ್ ಆದಿ-ಪೂರುಷಃ । ವದನ್ ಶೃಣೋತಿ ಇವ ವಿನೋದತಃ ಹರಿಃ ಸಃ ಏಕಃ ಏವ ದ್ವಿತನುಃ ಮುಮೋದ ॥**

**ಅರ್ಥ** :- **ನಿರಂತರಾನಂದವಿಬೋಧಸಾರಃ,** ನಿರಂತರ ಭೇದರಹಿತ ವಾದ, **ಆನಂದ** ಆನಂದವು, **ವಿಬೋಧ** ಜ್ಞಾನವು ಇವುಗಳೇ, **ಸಾರಃ** ಸ್ವರೂಪ ವಾಗಿರುವ, **ಅಖಿಲಂ** ಸಕಲವನ್ನು, **ಜಾನಮಾನಃ** ತಿಳಿದ, **ಆದಿಪೂರುಷಃ** ಮೂಲರೂಪೀ ನಾರಾಯಣನಿಂದ ಅಭಿನ್ನನಾದ, **ಸಃ ಹರಿಃ** ಆ ಶ್ರೀಹರಿಯು, **ವದನ್ ಇವ** (ಶ್ರೀ ಪರಶುರಾಮ ರೂಪದಿಂದ) ಹೇಳತಕ್ಕವನಂತೆ, **ಶೃಣೋತಿ** ಶ್ರೀ ರಾಮಚಂದ್ರ ರೂಪದಿಂದ ಕೇಳುತ್ತಾನೆ ಎಂಬಂತೆ, **ದ್ವಿತನುಃ** ಎರಡು ರೂಪಗಳಿಂದ, **ಏಕ ಏವ** ಒಬ್ಬನೇ ಆದ ಶ್ರೀಹರಿಯು, **ಮುಮೋದ** ಸಂತೋಷಪಟ್ಟನು.

**ತಾತ್ಪರ್ಯ** :- ಎಂದೆಂದಿಗೂ ಕೊನೆಯಿಲ್ಲದ-ಕುಂದದ ಅರಿವು ಆನಂದಗಳ ತವರಾದ ಶ್ರೀಹರಿಯು ಎಲ್ಲವನ್ನು ಅರಿತವನಾದರೂ ಒಬ್ಬ ಹೇಳು ವಂತೆ ಮತ್ತೊಬ್ಬ ಕೇಳುವಂತೆ ಎರಡು ರೂಪಗಳಿಂದ ವಿನೋದವಾಡುವನು. ॥ ೫೯ ॥

ಸ ಚೇಷ್ಟಿತಂ ಚೈವ ನಿಜಾಶ್ರಯಸ್ಯ
ಜನಸ್ಯ ಸತ್ತತ್ವವಿಬೋಧಕಾರಣಮ್ ।
ವಿಮೋಹಕಂ ಚಾನ್ಯತಮಸ್ಯ ಕುರ್ವನ್
ಚಿಕ್ರೀಡ ಏಕೋಽಪಿ ನರಾಂತರೇ ಯಥಾ ॥ ೬೦ ॥

ಪದಚ್ಛೇದ : ಸಃ ಚೇಷ್ಟಿತಂ ಚ ಏವ ನಿಜಾಶ್ರಯಸ್ಯ ಜನಸ್ಯ ಸತ್ತತ್ವವಿಬೋಧ-ಕಾರಣಮ್। ವಿಮೋಹಕಂ ಚ ಅನ್ಯತಮಸ್ಯ ಕುರ್ವನ್ ಚಿಕ್ರೀಡ ಏಕಃ ಅಪಿ ನರಾಂತರೇ ಯಥಾ ॥

**ಅರ್ಥ** :- ಸಃ ಆ ಪರಶುರಾಮನು, **ಚೇಷ್ಟಿತಂ** (ತನ್ನ) ಕಾರ್ಯ ಸಮುದಾಯವು, **ನಿಜಾಶ್ರಯಸ್ಯ**, ನಿಜ ಸ್ವಕೀಯವಾದ, **ಆಶ್ರಯಸ್ಯ** ಆಶ್ರಯ ಉಳ್ಳ, **ಜನಸ್ಯ** ಜನರಿಗೆ, **ಸತ್ತತ್ವವಿಬೋಧಕಾರಣಂ** ಸರಿಯಾದ ತತ್ತ್ವಜ್ಞಾನಕ್ಕೆ ಕಾರಣವು, **ಚ** ಮತ್ತು, **ಅನ್ಯತಮಸ್ಯ** (ತನ್ನ ಭಕ್ತರಿಂದ ಭಿನ್ನರಾದ) ಅಧಮ ಜೀವರಿಗೆ (ಅಭಕ್ತರಿಗೆ), **ವಿಮೋಹಕಂ** ಮೋಹಜನಕವು ಆಗುವಂತೆ **ಕುರ್ವನ್** ಮಾಡತಕ್ಕವನಾಗಿ, **ಏಕೋಪಿ** ಒಬ್ಬನೇ ಇದ್ದರೂ ಕೂಡ, **ಯಥಾ** ಹೇಗೆ, **ನರಾಂತರೇ** ಇಬ್ಬರು ಮನುಷ್ಯರು ಇದ್ದರೆ ಮಾಡಬೇಕೋ ಹಾಗೆ, **ಚಿಕ್ರೀಡ** ಆಟವನ್ನಾಡಿದನು.

**ತಾತ್ಪರ್ಯ** :- ಈ ಪರಶುರಾಮ - ದಾಶರಥಿರಾಮರ ವಿನೋದ ಪೂರ್ಣ ಕಾರ್ಯಗಳು ಸುಜನರಿಗೆ ತತ್ತ್ವಜ್ಞಾನ ಹುಟ್ಟಿಸುವವು. ಅಜ್ಞಾನಿಗಳಿಗೆ (ತಾಮಸರಿಗೆ) ಭಿನ್ನ ವ್ಯಕ್ತಿಗಳ ನಡುವಣ ವ್ಯವಹಾರವಿದೆಂಬುದಾಗಿ ಪರಮಾತ್ಮನ ರೂಪಗಳಲ್ಲಿ ಭೇದಜ್ಞಾನ ಹುಟ್ಟಿಸುವಂತಹವುಗಳು. ಹೀಗೆ ಶ್ರೀರಾಮನೊಡನೆ ಪರಶುರಾಮ ವಿಹರಿಸಿದ. ॥ ೬೦ ॥

ತತಃ ಸ ಕಾರುಣ್ಯನಿಧಿರ್ನಿಜೇ ಜನೇ
ನಿತಾಂತಮೈಕ್ಯಂ ಸ್ವಗತಂ ಪ್ರಕಾಶಯನ್ ।
ದ್ವಿಧೇವ ಭೂತ್ವಾ ಭೃಗುವರ್ಯ ಆತ್ಮನಾ
ರಘೂತ್ತಮೇನೈಕ್ಯಮಗಾತ್ ಸಮಕ್ಷಮ್ ॥ ೬೧ ॥

ಪದಚ್ಛೇದ : ತತಃ ಸಃ ಕಾರುಣ್ಯನಿಧಿಃ ನಿಜೇ ಜನೇ ನಿತಾಂತಂ ಐಕ್ಯಂ ಸ್ವಗತಂ ಪ್ರಕಾಶಯನ್ । ದ್ವಿಧಾ ಇವ ಭೂತ್ವಾ ಭೃಗುವರ್ಯಃ ಆತ್ಮನಾ ರಘೂತ್ತಮೇನ ಐಕ್ಯಂ ಅಗಾತ್ ಸಮಕ್ಷಮ್ ॥

**ಅರ್ಥ** :- **ತತಃ** ಹೀಗೆ ಜ್ಞಾನಾಜ್ಞಾನಪ್ರಾಪಕ ಕಾರ್ಯಗಳ ನಂತರ, **ಕಾರುಣ್ಯನಿಧಿಃ** ಕೃಪಾಸಮುದ್ರನಾದ, **ಸಃ** ಆ, **ಭೃಗುವರ್ಯಃ** ಶ್ರೀ ಪರಶು ರಾಮದೇವನು, **ನಿಜೇ** ಸ್ವಕೀಯರಾದ, **ಜನೇ** ಜನರಲ್ಲಿ, **ಸ್ವಗತಂ** ತನ್ನಲ್ಲಿರುವ, **ನಿತಾಂತಂ** ಅತ್ಯಂತವಾದ, **ಐಕ್ಯಂ** (ಶ್ರೀರಾಮನಿಂದ) ಐಕ್ಯವನ್ನು **ಪ್ರಕಾಶಯನ್** ತಿಳಿಸತಕ್ಕವನಾಗಿ (ಮೊದಲಿಗೆ), **ದ್ವಿಧಾ** ಇವ ಇಬ್ಬರಿದ್ದಂತೆ, **ಭೂತ್ವಾ** ಆಗಿ ನಂತರ, **ಆತ್ಮನಾ** ತನ್ನಿಂದ, **ರಘೂತ್ತಮೇನ** ಶ್ರೀರಾಮದೇವನಿಂದ (ಇವರಿಬ್ಬರಿಗೂ ಪರಸ್ಪರ), **ಐಕ್ಯಂ** ಅಭೇದವನ್ನು, **ಸಮಕ್ಷಂ** ಎಲ್ಲರ ಸಮಕ್ಷಮದಲ್ಲಿ, **ಅಗಾತ್** ಹೊಂದಿದನು.

**ತಾತ್ಪರ್ಯ** :- ಅನಂತರ, ತನ್ನ ಭಕುತರಲ್ಲಿ ಕರುಣೆತೋರುವ (ಕರುಣಾ ಸಾಗರನಾದ) ಪರಶುರಾಮನು, ತನಗೂ ರಾಮನಿಗೂ ಇರುವ ಐಕ್ಯವನ್ನು ಸುಜನರಿಗೆ ಸ್ಫುಟಪಡಿಸಲು ಮೊದಲು ತಾನು ರಾಮನಿಂದ ಭಿನ್ನನಂತೆ ತೋರಿಸಿ ಕೊಂಡು ಮತ್ತೆ ಎಲ್ಲರೂ ನೋಡುತ್ತಿರುವಂತೆ ಶ್ರೀರಾಮನಲ್ಲಿ ಲೀನನಾದನು.

॥ ೬೧ ॥

**ಸಮೇತ್ಯ ಚೈಕ್ಯಂ ಜಗತೋಽಭಿಪಶ್ಯತಃ**
**ಪ್ರಣುದ್ಯ ಶಂಕಾಮಖಿಲಾಂ ಜನಸ್ಯ ।**
**ಪ್ರದಾಯ ರಾಮಾಯ ಧನುರ್ವರಂ ತದಾ**
**ಜಗಾಮ ರಾಮಾನುಮತೋ ರಮಾಪತಿಃ ॥ ೬೨ ॥**

**ಪದಚ್ಛೇದ :** ಸಮೇತ್ಯ ಚ ಐಕ್ಯಂ ಜಗತಃ ಅಭಿಪಶ್ಯತಃ ಪ್ರಣುದ್ಯ ಶಂಕಾಂ ಅಖಿಲಾಂ ಜನಸ್ಯ । ಪ್ರದಾಯ ರಾಮಾಯ ಧನುಃ ವರಂ ತದಾ ಜಗಾಮ ರಾಮಾನುಮತಃ ರಮಾಪತಿಃ ॥

**ಅರ್ಥ** :- **ತದಾ** ಆಗ ಈ ರೀತಿಯಾಗಿ, **ಐಕ್ಯಂ** ಅಭೇದವನ್ನು **ಸಮೇತ್ಯ** ಹೊಂದಿ, **ಅಭಿಪಶ್ಯತಃ** ಈ ಮಹಾಮಹಿಮೆಯನ್ನು ನೋಡುತ್ತಿದ್ದ **ಜಗತಃ** ಜಗತ್ತಿನ, **ಜನಸ್ಯ** ಜನರ, **ಅಖಿಲಾಂ** ಎಲ್ಲ **ಶಂಕಾಂ** ಪ್ರಶ್ನೆಗಳನ್ನು (ಶ್ರೀಹರಿ ವಿಷಯದಲ್ಲಿ ಗುಣಗುಣಿಭೇದ ಶಂಕಾ, ಮೂಲರೂಪಕ್ಕೂ ಅವತಾರಗಳಿಗೂ ಪರಸ್ಪರ ಭೇದಶಂಕಾ, ಅಲ್ಪಶಕ್ತಿತ್ವಶಂಕಾ, ಇತ್ಯಾದಿ), **ಪ್ರಣುದ್ಯ** ನಾಶ ಮಾಡಿ, **ಚ** ಮತ್ತು, **ಧನುರ್ವರಂ** ಶ್ರೇಷ್ಠವಾದ ಧನುಸ್ಸನ್ನು, **ರಾಮಾಯ** ಶ್ರೀರಾಮ ದೇವನಿಗೋಸ್ಕರ, **ಪ್ರದಾಯ** ಕೊಟ್ಟು, **ರಮಾಪತಿಃ** ರಮೆಯರಸನಾದ

ಶ್ರೀ ಪರಶುರಾಮದೇವನು, **ರಾಮಾನುಮತಃ** ಶ್ರೀರಾಮದೇವನಿಂದ ಹೊರಡುವ ಬಗ್ಗೆ ಅನುಮತಿಯನ್ನು ಪಡೆದು, **ಜಗಾಮ** ಪಯಣಿಸಿದನು.

**ತಾತ್ಪರ್ಯ** : ಎಲ್ಲ ಜನ ನೋಡುತ್ತಿರುವಂತೆ ಪರಶುರಾಮನು ದಾಶರಥಿ ರಾಮನಲ್ಲಿ ಲೀನನಾಗಿ, ರೂಪಗಳಲ್ಲಿ ಸಹಜವಾಗಿ ತೋರುವ ಭೇದವು ಇಲ್ಲವೆಂದು ಜ್ಞಾಪಿಸುತ್ತ, ಶ್ರೀರಾಮನಿಗೆ ಉತ್ತಮವಾದ ಬಿಲ್ಲನ್ನು ನೀಡಿ, ಅವನ ಅನುಮತಿ ಪಡೆದು ಅಲ್ಲಿಂದ ತೆರಳಿದನು. ॥ ೬೨ ॥

### ಸೀತಾ-ರಾಮರ ಮಧುರ ಮಿಲನ

**ತತೋ ನೃಪೋಽತ್ಯರ್ಥಮುದಾಽಭಿಪೂರಿತಃ**
**ಸುತೈಃ ಸಮಸ್ತೈಃ ಸ್ವಪುರೀಮವಾಪ ಹ ।**
**ರೇಮೇಽಥ ರಾಮೋಽಪಿ ರಮಾಸ್ವರೂಪಯಾ**
**ತಥೈವ ರಾಜಾತ್ಮಜಯಾ ಹಿ ಸೀತಯಾ ॥ ೬೩ ॥**

**ಪದಚ್ಛೇದ** : ತತಃ ನೃಪಃ ಅತ್ಯರ್ಥಮುದಾ ಅಭಿಪೂರಿತಃ ಸುತೈಃ ಸಮಸ್ತೈಃ ಸ್ವಪುರೀಮ್ ಅವಾಪ ಹ । ರೇಮೇ ಅಥ ರಾಮಃ ಅಪಿ ರಮಾಸ್ವರೂಪಯಾ ತಥಾ ಏವ ರಾಜಾತ್ಮಜಯಾ ಹಿ ಸೀತಯಾ ॥

**ಅರ್ಥ** :- **ತತಃ** ಅನಂತರದಲ್ಲಿ **ನೃಪಃ** ದಶರಥ ಮಹಾರಾಜನು, **ಅತ್ಯರ್ಥ ಮುದಾ, ಅತ್ಯರ್ಥ** ಅತ್ಯಂತವಾಗಿ, **ಮುದಾ** ಸಂತೋಷದಿಂದ, **ಅಭಿಪೂರಿತಃ** ಕೂಡಿದವನಾಗಿ, **ಸಮಸ್ತೈಃ** ಎಲ್ಲ, **ಸುತೈಃ** ಮಕ್ಕಳಿಂದ, **ಪುರೀಂ** ಅಯೋಧ್ಯಾ ನಗರವನ್ನು, **ಅವಾಪ** ಹೊಂದಿದನು, **ಹ** ನಿಶ್ಚಯವು, **ಅಥ** ಅನಂತರದಲ್ಲಿ, **ರಾಮಃ ಅಪಿ** ಶ್ರೀರಾಮದೇವನೂ ಕೂಡ, **ರಮಾಸ್ವರೂಪಯಾ** ಶ್ರೀಲಕ್ಷ್ಮೀ ದೇವಿಯಿಂದ ಅಭಿನ್ನಳಾದ, **ರಾಜಾತ್ಮಜಯಾ** ಜನಕ ಮಹಾರಾಜನ ಮಗಳಾಗಿ ಅವತರಿಸಿದ, **ತಯಾ** ಆ ಪ್ರಸಿದ್ಧಳಾದ, **ಸೀತಯಾ ಏವ** ಶ್ರೀಸೀತಾದೇವಿಯಿಂದಲೇ (ಕೂಡಿಕೊಂಡು), **ರೇಮೇ** ಕ್ರೀಡಿಸಿದನು.

**ತಾತ್ಪರ್ಯ** :- ಎರಗಿದ ವಿಪತ್ತು ಪರಿಹೃತವಾದಾಗ ಆನಂದ ತುಂದಿಲನಾದ ದಶರಥನು ಎಲ್ಲ ಮಕ್ಕಳೊಂದಿಗೆ ಅಯೋಧ್ಯೆಗೆ ಪಯಣಿಸಿದನು. ಶ್ರೀರಾಮನು ರಮೆಯ ಅವತಾರಳಾದ ಜಾನಕಿಯೊಂದಿಗೆ ಸುಖವಾಗಿ ವಿಹರಿಸಿದನು. ॥ ೬೩ ॥

ಯಥಾ ಪುರಾ ಶ್ರೀರಮಣಃ ಶ್ರಿಯಾ ತಯಾ
ರತೋ ನಿತಾಂತಂ ಹಿ ಪಯೋಧಿಮಧ್ಯೇ ।
ತಥಾ ತ್ವಯೋಧ್ಯಾಪುರಗೋ ರಘೂತ್ತಮೋಽ-
ಪ್ಯುವಾಸ ಕಾಲಂ ಸುಚಿರಂ ರತಸ್ತಯಾ ॥ ೬೪ ॥

ಪದಚ್ಛೇದ : ಯಥಾ ಪುರಾ ಶ್ರೀರಮಣಃ ಶ್ರಿಯಾ ತಯಾ ರತಃ ನಿತಾಂತಂ ಹಿ ಪಯೋಧಿಮಧ್ಯೇ । ತಥಾ ತು ಅಯೋಧ್ಯಾಪುರಗಃ ರಘೂತ್ತಮಃ ಅಪಿ ಉವಾಸ ಕಾಲಂ ಸುಚಿರಂ ರತಃ ತಯಾ ॥

**ಅರ್ಥ** :- **ಯಥಾ** ಹೇಗೆ, **ಪುರಾ** ಹಿಂದೆ, **ಶ್ರೀರಮಣಃ** ಶ್ರೀಮನ್ನಾರಾಯಣನು, **ತಯಾ** ಆ ಪ್ರಸಿದ್ಧಳಾದ, **ಶ್ರಿಯಾ** ಶ್ರೀಮನ್ಮಹಾಲಕ್ಷ್ಮೀದೇವಿಯಿಂದ, (ಸಹ ಕೂಡಿಕೊಂಡು), **ನಿತಾಂತಂ** ಅತ್ಯಂತವಾಗಿ, **ಪಯೋಧಿಮಧ್ಯೇ** ಕ್ಷೀರ ಸಮುದ್ರದ ಮಧ್ಯದಲ್ಲಿ, **ರತಃ** ಕ್ರೀಡಿಸಿದನೋ, **ತಥಾ ತು** ಅದರಂತೆಯೇ, **ಅಯೋಧ್ಯಾಪುರಗಃ** ಅಯೋಧ್ಯಾ ಪಟ್ಟಣದಲ್ಲಿ ವಾಸ ಮಾಡಿದ, **ರಘೂತ್ತಮಃ ಅಪಿ** ಶ್ರೀರಾಮದೇವನೂ ಕೂಡ, **ತಯಾ** ಆ ಸೀತಾದೇವಿಯಿಂದ, **ರತಃ** ಕ್ರೀಡಿಸತಕ್ಕವನಾಗಿ, **ಸುಚಿರಂ ಕಾಲಂ** ಬಹು ದೀರ್ಘ ಕಾಲದಲ್ಲಿ, **ಉವಾಸ** ವಾಸ ಮಾಡಿದರು.

**ತಾತ್ಪರ್ಯ** :- ಹೇಗೆ ಅಮೃತಮಥನಕಾಲದಲ್ಲಿ ಲಕ್ಷ್ಮೀಶನಾದ ನಾರಾಯಣನು ಕ್ಷೀರಸಾಗರದಲ್ಲಿ ಲಕ್ಷ್ಮೀದೇವಿಯೊಡನೆ ರಮಿಸಿದನೋ ಹಾಗೆಯೇ ಅಯೋಧ್ಯಾ ಪುರವಾಸಿಯಾದ ಶ್ರೀರಾಮನು ಸೀತೆಯೊಡನೆ ವಿಹರಿಸುತ್ತ ಬಹುಕಾಲ ಕಳೆದನು. ॥೬೪॥

ಇಮಾನಿ ಕರ್ಮಾಣಿ ರಘೂತ್ತಮಸ್ಯ
ಹರೇರ್ವಿಚಿತ್ರಾಣ್ಯಪಿ ನಾದ್ಭುತಾನಿ ।
ದುರಂತಶಕ್ತೇರಥ ಚಾಸ್ಯ ವೈಭವಂ
ಸ್ವಕೀಯಕರ್ತವ್ಯತಯಾಽನುವರ್ಣ್ಯತೇ ॥ ೬೫ ॥

ಪದಚ್ಛೇದ : ಇಮಾನಿ ಕರ್ಮಾಣಿ ರಘೂತ್ತಮಸ್ಯ ಹರೇಃ ವಿಚಿತ್ರಾಣಿ ಅಪಿ ನ ಅದ್ಭುತಾನಿ । ದುರಂತಶಕ್ತೇಃ ಅಥ ಚ ಅಸ್ಯ ವೈಭವಂ ಸ್ವಕೀಯಕರ್ತವ್ಯತಯಾ ಅನುವರ್ಣ್ಯತೇ ॥

**ಅರ್ಥ** :- **ಇಮಾನಿ** ಈ ಹಿಂದೆ ಹೇಳಿದ, **ಕರ್ಮಾಣಿ** ಕರ್ಮಗಳು (ಶ್ರೀರಾಮದೇವರ ಚರಿತ್ರೆಗಳು), **ವಿಚಿತ್ರಾಣ್ಯಪಿ** ಆಶ್ಚರ್ಯಜನಕಗಳಾಗಿದ್ದರೂ ಕೂಡ, **ರಘೂತ್ತಮಸ್ಯ** ರಾಮಾವತಾರವನ್ನು ಸ್ವೀಕರಿಸಿದ, **ಹರೇಃ** ಶ್ರೀಹರಿಗೆ, **ನ ಅದ್ಭುತಾನಿ** ಆಶ್ಚರ್ಯಜನಕಗಳಲ್ಲ, **ಅಥ** ಹಾಗಿದ್ದರೂ ಸಹ, **ದುರಂತಶಕ್ತೇಃ** ನಿಸ್ಸೀಮ ಶಕ್ತಿಪೂರ್ಣನಾದ, **ಅಸ್ಯ** ಈ ಶ್ರೀಹರಿಯ, **ವೈಭವಂ** ಗುಣಕರ್ಮ ಸಾಮರ್ಥ್ಯ ನಿರೂಪಣೆಯು, **ಸ್ವಕೀಯಕರ್ತವ್ಯತಯಾ** ನಮ್ಮ ಅವಶ್ಯ ಕರ್ತವ್ಯ ವೆಂಬ ಭಾವದಿಂದ, **ಅನುವರ್ಣ್ಯತೇ** ಶಾಸ್ತ್ರಾನುಸಾರವಾಗಿ ವರ್ಣಿಸಲ್ಪಡುತ್ತದೆ.

**ತಾತ್ಪರ್ಯ** :- ಈ ಎಲ್ಲ ರಾಮನ ಲೀಲೆಗಳು ಅತ್ಯಂತ ಆಶ್ಚರ್ಯಕರ ವೆನಿಸಿದರೂ ಅವನ ಅನಂತಶಕ್ತಿಯ ಬಿಂದುವಿನ ಅಭಿವ್ಯಕ್ತಿ ಮಾತ್ರವಿದು. ಅದನ್ನು ಪೂರ್ಣವಾಗಿ ಯಾರೂ ವಿವರಿಸಲಾರರು. ಆದರೂ ನಾವು ಕರ್ತವ್ಯ ದೃಷ್ಟಿಯಿಂದ ಚರಿತೆಯನ್ನು ವರ್ಣಿಸಿದ್ದೇವೆ. ||೬೫||

**|| ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ**

**ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯೇ**

**ಚತುರ್ಥೋಽಧ್ಯಾಯಃ ||**

# ಅಧ್ಯಾಯ - 5

ರಾಮ ರಾಜನಾಗಲಿ

**ಓಂ ॥ ಇತ್ಥಂ ವಿಶ್ವೇಶ್ವರೇಽಸ್ಮಿನ್ನಿಖಿಲಜಗದವಸ್ಥಾಪ್ಯ ಸೀತಾಸಹಾಯೇ**
**ಭೂಮಿಷ್ಠೇ ಸರ್ವಲೋಕಾಸ್ತುತುಷುರನುದಿನಂ ವೃದ್ಧಭಕ್ತ್ಯಾ ನಿತಾಂತಂ ।**
**ರಾಜಾ ರಾಜ್ಯಾಭಿಷೇಕೇ ಪ್ರಕೃತಿಜನವಚೋ ಮಾನಯನ್ನಾತ್ಮನೋಽರ್ಥ್ಯಂ**
**ದಧ್ರೇ ತನ್ಮಂಥರಾಯಾಃ ಶ್ರುತಿಪಥಮಗಮದ್ಭೂಮಿಗಾಯಾ ಅಲಕ್ಷ್ಮ್ಯಾಃ ॥೧॥**

**ಪದಚ್ಛೇದ : ಇತ್ಥಂ ವಿಶ್ವೇಶ್ವರೇ ಅಸ್ಮಿನ್ ನಿಖಿಲಜಗತ್ ಅವಸ್ಥಾಪ್ಯ ಸೀತಾಸಹಾಯೇ ಭೂಮಿಷ್ಠೇ ಸರ್ವಲೋಕಾಃ ತುತುಷುಃ ಅನುದಿನಂ ವೃದ್ಧಭಕ್ತ್ಯಾ ನಿತಾಂತಂ ರಾಜಾ ರಾಜ್ಯಾಭಿಷೇಕೇ ಪ್ರಕೃತಿಜನವಚಃ ಮಾನಯನ್ ಆತ್ಮನಃ ಅರ್ಥ್ಯಂ ದಧ್ರೇ ತತ್ ಮಂಥರಾಯಾಃ ಶ್ರುತಿಪಥಂ ಅಗಮತ್ ಭೂಮಿಗಾಯಾಃ ಅಲಕ್ಷ್ಮ್ಯಾಃ ॥**

**ಅರ್ಥ :-** **ಇತ್ಥಂ** ಈ ಹಿಂದೆ ವರ್ಣಿಸಿದಂತೆ (ರಘುಕುಲದಲ್ಲಿ ಅವತರಿಸಿ, ತಾಟಕಿಯನ್ನು ಸಂಹರಿಸಿ, ವಿಶ್ವಾಮಿತ್ರನ ಯಜ್ಞದ ವಿಘ್ನವನ್ನು ಪರಿಹರಿಸಿ, ಅಹಲ್ಯೆಯ ಶಾಪವಿಮೋಚನೆಯನ್ನು ಮಾಡಿ, ರುದ್ರನ ಧನುಸ್ಸನ್ನು ಮುರಿದು, ಸೀತೆಯ ಪಾಣಿಗ್ರಹಣವನ್ನು ಮಾಡಿಕೊಂಡು, ಲೋಕಕಂಟಕರಾದ ಅಸುರರನ್ನು ಸುಟ್ಟು, ತನ್ನದಾದ ವಿಷ್ಣುಸಂಬಂಧಿಯಾದ ಧನುಸ್ಸನ್ನು ಪರಶುರಾಮನಿಂದ ಪಡೆದ, ಅಯೋಧ್ಯೆಯಲ್ಲಿರುವ ಎಲ್ಲಾ ಜನರ ಮನಸ್ಸನ್ನು ಸಂತೋಷ ಗೊಳಿಸಿದ), **ಸೀತಾಸಹಾಯೇ** ಸೀತಾದೇವಿಗೆ ·· ಯಕನಾದ, **ವಿಶ್ವೇಶ್ವರೇ** ಎಲ್ಲಾ ಜಗತ್ತಿನ ಸ್ವಾಮಿಯಾದ, **ಅಸ್ಮಿನ್** ? ಈ ರಾಮನು, **ನಿಖಿಲಜಗತ್** ಎಲ್ಲಾ ಲೋಕವನ್ನು **ಅವಸ್ಥಾಪ್ಯ** ಭಕ್ತಿಮಾರ್ಗದಲ್ಲಿರಿಸಿ, **ಭೂಮಿಷ್ಠೇ ಸತಿ** ಭೂಮಿಯಲ್ಲಿರುತ್ತಿರಲು, **ಸರ್ವಲೋಕಾಃ** ಎಲ್ಲಾ ಜನರು, **ಅನುದಿನಂ** ಪ್ರತಿನಿತ್ಯವು, **ನಿತಾಂತಂ** ಚೆನ್ನಾಗಿ, **ವೃದ್ಧಭಕ್ತ್ಯಾ** ಅಭಿವೃದ್ಧವಾದ ಭಕ್ತಿಯಿಂದ, **ತುತುಷುಃ** ಸಂತೋಷಪಟ್ಟರು, **ರಾಜಾ** ದಶರಥ ರಾಜನು, **ಆತ್ಮನಃ** ತನಗೆ, **ಅರ್ಥ್ಯಂ** ಇಷ್ಟವಾದ, **ರಾಜ್ಯಾಭಿಷೇಕೇ** ರಾಮನ ಪಟ್ಟಾಭಿಷೇಕ ವಿಷಯದಲ್ಲಿ, **ಪ್ರಕೃತಿಜನವಚಃ** ಮಂತ್ರಿಗಳು ಮತ್ತು ಗಣ್ಯವ್ಯಕ್ತಿಗಳ ಆಶಯವನ್ನು, **ಮಾನಯನ್** ಗೌರವಿಸುವವನಾಗಿ, **ದಧ್ರೇ** ರಾಮನಿಗೆ ಪಟ್ಟಾಭಿಷೇಕ ಮಾಡಲು ಮನಸ್ಸಿನಲ್ಲಿ ನಿರ್ಧರಿಸಿದನು, **ತತ್** ಆ ಸಂಗತಿಯು, **ಅಲಕ್ಷ್ಮ್ಯಾಃ** ದಾರಿದ್ರ್ಯಕ್ಕೆ

ಅಭಿಮಾನಿನಿಯಾದ ಕಲಿಯ ಹೆಂಡತಿಯಾದ ಜ್ಯೇಷ್ಠಾನಾಮಕಳಾದ ಅಮಂಗಲಸ್ವರೂಪಳಾದ, **ಭೂಮಿಗಾಯಾಃ** ಭೂಮಿಯಲ್ಲಿ ಹುಟ್ಟಿರುವ, **ಮಂಥರಾಯಾಃ** ಕೈಕಯಿಯ ದಾಸಿಯಾದ ಮಂಥರೆಯ, **ಶ್ರುತಿಪಥಂ** ಕಿವಿಗೆ, **ಅಗಮತ್** ತಲುಪಿತು.

**ತಾತ್ಪರ್ಯ** :- ಹೀಗೆ ಸರ್ವೇಶ್ವರನಾದ ಶ್ರೀರಾಮನು ವಿಶ್ವರಕ್ಷಣೆಯಲ್ಲಿ ತೊಡಗಿ ಸೀತೆಗೆ ಮುದ ನೀಡುತ್ತ ಅಯೋಧ್ಯೆಯಲ್ಲಿ ನೆಲೆಸಿದಾಗ, ಅವನ ಮಹಿಮೆಯನ್ನನುಭವಿಸಿದ ಸುಜನರು ಭಕ್ತಿಯನ್ನು ತಮ್ಮಲ್ಲಿ ಹೆಚ್ಚಿಸಿಕೊಂಡವರಾಗಿ ಸಂತೋಷ ಹೊಂದಿದರು. ರಾಮನಿಗೆ ಪಟ್ಟಾಭಿಷೇಕ ಮಾಡುವ ಬಗ್ಗೆ ದಶರಥನು ಕರೆದ ಸಭೆಯಲ್ಲಿ ಮಂತ್ರಿಗಳು ಮತ್ತು ನಾಡಿನ ಪ್ರತಿನಿಧಿಗಳು ಎಲ್ಲ ಗಣ್ಯರೂ ಅದನ್ನು ಅನುಮೋದಿಸಿದರು. ಈ ಸಂಗತಿಯು ಭೂಮಿಯಲ್ಲಿ ಹುಟ್ಟಿದ ಮಂಥರೆಯ (ಅಲಕ್ಷ್ಮಿಯ) ಕಿವಿಗೆ ತಲುಪಿತು. ॥೧॥

ಮಂಥರೆಯ ನಿಜರೂಪ

**ಪೂರ್ವಂ ಕ್ಷೀರಾಬ್ಧಿಜಾತಾ ಕಥಮಪಿ ತಪಸೈವಾಪ್ಸರಸ್ತ್ವಂ ಪ್ರಯಾತಾ**
**ತಾಂ ನೇತುಂ ತತ್ತಮೋಽಂಧಂ ಕಮಲಜನಿರುವಾಚಾಶು ರಾಮಾಭಿಷೇಕಮ್ ।**
**ಭೂತ್ವಾ ದಾಸೀ ವಿಲುಂಪ ಸ್ವಗತಿಮಪಿ ತತಃ ಕರ್ಮಣಾ ಪ್ರಾಪ್ಸ್ಯಸೇ ತ್ವಂ**
**ಸೇತ್ಯುಕ್ತಾ ಮಂಥರಾಽಽಸೀತ್ ತದನು ಕೃತವತ್ಯೇವ ಚೈತತ್ ಕುಕರ್ಮ ॥ ೨ ॥**

ಪದಚ್ಛೇದ : ಪೂರ್ವಂ ಕ್ಷೀರಾಬ್ಧಿಜಾತಾ ಕಥಮ್ ಅಪಿ ತಪಸಾ ಏವ ಅಪ್ಸರಸ್ತ್ವಂ ಪ್ರಯಾತಾ ತಾಂ ನೇತುಂ ತತ್ ತಮಃ ಅಂಧಂ ಕಮಲಜನಿಃ ಉವಾಚ ಆಶು ರಾಮಾಭಿಷೇಕಮ್ । ಭೂತ್ವಾ ದಾಸೀ ವಿಲುಂಪ ಸ್ವಗತಿಮ್ ಅಪಿ ತತಃ ಕರ್ಮಣಾ ಪ್ರಾಪ್ಸ್ಯಸೇ ತ್ವಂ ಸಾ ಇತಿ ಉಕ್ತಾ ಮಂಥರಾ ಆಸೀತ್ ತದನು ಕೃತವತೀ ಏವ ಚ ಏತತ್ ಕುಕರ್ಮ ॥

**ಅರ್ಥ** :- **ಪೂರ್ವಂ** ದೇವಾಸುರರ ಸಮುದ್ರಮಥನ ಕಾಲದಲ್ಲಿ **ಕ್ಷೀರಾಬ್ಧಿಜಾತಾ** ಕ್ಷೀರ ಸಮುದ್ರದಿಂದ ಹುಟ್ಟಿದಳು, **ಕಥಮಪಿ** ಯಾವುದೋ ಪ್ರಯಾಸದಿಂದ (ಸ್ವರೂಪ - ಯೋಗ್ಯತೆಯಿಂದಲ್ಲ), **ಅಪ್ಸರಸ್ತ್ವಂ** ಅಪ್ಸರಸ್ತ್ರೀತ್ವವನ್ನು **ಪ್ರಯಾತಾ** ಹೊಂದಿದವಳಾದಳು, **ಯತ್** ಯಾವ ಕಾರಣದಿಂದ ಸ್ವರೂಪದಿಂದ ದುಷ್ಟಳೋ, **ತತ್** ಆದ್ದರಿಂದ, **ಕಮಲಜನಿಃ** ಬ್ರಹ್ಮದೇವನು,

# ಅಧ್ಯಾಯ - 5

ರಾಮ ರಾಜನಾಗಲಿ

ಓಂ ॥ ಇತ್ಥಂ ವಿಶ್ವೇಶ್ವರೇಽಸ್ಮಿನ್ನಿಖಿಲಜಗದವಸ್ಥಾಪ್ಯ ಸೀತಾಸಹಾಯೇ
ಭೂಮಿಷ್ಠೇ ಸರ್ವಲೋಕಾಸ್ತುತುಷುರನುದಿನಂ ವೃದ್ಧಭಕ್ತ್ಯಾ ನಿತಾಂತಂ ।
ರಾಜಾ ರಾಜ್ಯಾಭಿಷೇಕೇ ಪ್ರಕೃತಿಜನವಚೋ ಮಾನಯನ್ನಾತ್ಮನೋಽರ್ಥ್ಯಂ
ದಧ್ರೇ ತನ್ಮಂಥರಾಯಾಃ ಶ್ರುತಿಪಥಮಗಮದ್ಭೂಮಿಗಾಯಾ ಅಲಕ್ಷ್ಮ್ಯಾಃ ॥೧॥

ಪದಚ್ಛೇದ : ಇತ್ಥಂ ವಿಶ್ವೇಶ್ವರೇ ಅಸ್ಮಿನ್ ನಿಖಿಲಜಗತ್ ಅವಸ್ಥಾಪ್ಯ ಸೀತಾಸಹಾಯೇ ಭೂಮಿಷ್ಠೇ ಸರ್ವಲೋಕಾಃ ತುತುಷುಃ ಅನುದಿನಂ ವೃದ್ಧಭಕ್ತ್ಯಾ ನಿತಾಂತಂ ರಾಜಾ ರಾಜ್ಯಾಭಿಷೇಕೇ ಪ್ರಕೃತಿಜನವಚಃ ಮಾನಯನ್ ಆತ್ಮನಃ ಅರ್ಥ್ಯಂ ದಧ್ರೇ ತತ್ ಮಂಥರಾಯಾಃ ಶ್ರುತಿಪಥಂ ಅಗಮತ್ ಭೂಮಿಗಾಯಾಃ ಅಲಕ್ಷ್ಮ್ಯಾಃ ॥

**ಅರ್ಥ :-** **ಇತ್ಥಂ** ಈ ಹಿಂದೆ ವರ್ಣಿಸಿದಂತೆ (ರಘುಕುಲದಲ್ಲಿ ಅವತರಿಸಿ, ತಾಟಕಿಯನ್ನು ಸಂಹರಿಸಿ, ವಿಶ್ವಾಮಿತ್ರನ ಯಜ್ಞದ ವಿಘ್ನವನ್ನು ಪರಿಹರಿಸಿ, ಅಹಲ್ಯೆಯ ಶಾಪವಿಮೋಚನೆಯನ್ನು ಮಾಡಿ, ರುದ್ರನ ಧನುಸ್ಸನ್ನು ಮುರಿದು, ಸೀತೆಯ ಪಾಣಿಗ್ರಹಣವನ್ನು ಮಾಡಿಕೊಂಡು, ಲೋಕಕಂಟಕರಾದ ಅಸುರರನ್ನು ಸುಟ್ಟು, ತನ್ನದಾದ ವಿಷ್ಣುಸಂಬಂಧಿಯಾದ ಧನುಸ್ಸನ್ನು ಪರಶುರಾಮನಿಂದ ಪಡೆದ, ಅಯೋಧ್ಯೆಯಲ್ಲಿರುವ ಎಲ್ಲಾ ಜನರ ಮನಸ್ಸನ್ನು ಸಂತೋಷ ಗೊಳಿಸಿದ), **ಸೀತಾಸಹಾಯೇ** ಸೀತಾದೇವಿಗೆ ನಾಯಕನಾದ, **ವಿಶ್ವೇಶ್ವರೇ** ಎಲ್ಲಾ ಜಗತ್ತಿನ ಸ್ವಾಮಿಯಾದ, **ಅಸ್ಮಿನ್** ? ಈ ರಾಮನು, **ನಿಖಿಲಜಗತ್** ಎಲ್ಲಾ ಲೋಕವನ್ನು, **ಅವಸ್ಥಾಪ್ಯ** ಭಕ್ತಿಮಾರ್ಗದಲ್ಲಿರಿಸಿ, **ಭೂಮಿಷ್ಠೇ ಸತಿ** ಭೂಮಿಯಲ್ಲಿರುತ್ತಿರಲು, **ಸರ್ವಲೋಕಾಃ** ಎಲ್ಲಾ ಜನರು, **ಅನುದಿನಂ** ಪ್ರತಿನಿತ್ಯವು, **ನಿತಾಂತಂ** ಚೆನ್ನಾಗಿ, **ವೃದ್ಧಭಕ್ತ್ಯಾ** ಅಭಿವೃದ್ಧವಾದ ಭಕ್ತಿಯಿಂದ, **ತುತುಷುಃ** ಸಂತೋಷಪಟ್ಟರು, **ರಾಜಾ** ದಶರಥ ರಾಜನು, **ಆತ್ಮನಃ** ತನಗೆ, **ಅರ್ಥ್ಯಂ** ಇಷ್ಟವಾದ, **ರಾಜ್ಯಾಭಿಷೇಕೇ** ರಾಮನ ಪಟ್ಟಾಭಿಷೇಕ ವಿಷಯದಲ್ಲಿ, **ಪ್ರಕೃತಿ ಜನವಚಃ** ಮಂತ್ರಿಗಳು ಮತ್ತು ಗಣ್ಯವ್ಯಕ್ತಿಗಳ ಆಶಯವನ್ನು, **ಮಾನಯನ್** ಗೌರವಿಸುವವನಾಗಿ, **ದಧ್ರೇ** ರಾಮನಿಗೆ ಪಟ್ಟಾಭಿಷೇಕ ಮಾಡಲು ಮನಸ್ಸಿನಲ್ಲಿ ನಿರ್ಧರಿಸಿದನು, **ತತ್** ಆ ಸಂಗತಿಯು, **ಅಲಕ್ಷ್ಮ್ಯಾಃ** ದಾರಿದ್ರ್ಯಕ್ಕೆ

ಅಭಿಮಾನಿನಿಯಾದ ಕಲಿಯ ಹೆಂಡತಿಯಾದ ಜ್ಯೇಷ್ಠಾನಾಮಕಳಾದ ಅಮಂಗಲಸ್ವರೂಪಳಾದ, **ಭೂಮಿಗಾಯಾಃ** ಭೂಮಿಯಲ್ಲಿ ಹುಟ್ಟಿರುವ, **ಮಂಥರಾಯಾಃ** ಕೈಕಯಿಯ ದಾಸಿಯಾದ ಮಂಥರೆಯ, **ಶ್ರುತಿಪಥಂ** ಕಿವಿಗೆ, **ಅಗಮತ್** ತಲುಪಿತು.

**ತಾತ್ಪರ್ಯ** :- ಹೀಗೆ ಸರ್ವೇಶ್ವರನಾದ ಶ್ರೀರಾಮನು ವಿಶ್ವರಕ್ಷಣೆಯಲ್ಲಿ ತೊಡಗಿ ಸೀತೆಗೆ ಮುದ ನೀಡುತ್ತ ಅಯೋಧ್ಯೆಯಲ್ಲಿ ನೆಲೆಸಿದಾಗ, ಅವನ ಮಹಿಮೆಯನ್ನನುಭವಿಸಿದ ಸುಜನರು ಭಕ್ತಿಯನ್ನು ತಮ್ಮಲ್ಲಿ ಹೆಚ್ಚಿಸಿಕೊಂಡವರಾಗಿ ಸಂತೋಷ ಹೊಂದಿದರು. ರಾಮನಿಗೆ ಪಟ್ಟಾಭಿಷೇಕ ಮಾಡುವ ಬಗ್ಗೆ ದಶರಥನು ಕರೆದ ಸಭೆಯಲ್ಲಿ ಮಂತ್ರಿಗಳು ಮತ್ತು ನಾಡಿನ ಪ್ರತಿನಿಧಿಗಳು ಎಲ್ಲ ಗಣ್ಯರೂ ಅದನ್ನು ಅನುಮೋದಿಸಿದರು. ಈ ಸಂಗತಿಯು ಭೂಮಿಯಲ್ಲಿ ಹುಟ್ಟಿದ ಮಂಥರೆಯ (ಅಲಕ್ಷ್ಮಿಯ) ಕಿವಿಗೆ ತಲುಪಿತು. ॥೧॥

### ಮಂಥರೆಯ ನಿಜರೂಪ

**ಪೂರ್ವಂ ಕ್ಷೀರಾಬ್ಧಿಜಾತಾ ಕಥಮಪಿ ತಪಸೈವಾಪ್ಸರಸ್ತ್ವಂ ಪ್ರಯಾತಾ**
**ತಾಂ ನೇತುಂ ತತ್ತಮೋಽಂಧಂ ಕಮಲಜನಿರುವಾಚಾಶು ರಾಮಾಭಿಷೇಕಮ್ ।**
**ಭೂತ್ವಾ ದಾಸೀ ವಿಲುಂಪ ಸ್ವಗತಿಮಪಿ ತತಃ ಕರ್ಮಣಾ ಪ್ರಾಪ್ಸ್ಯಸೇ ತ್ವಂ**
**ಸೇತ್ಯುಕ್ತಾ ಮಂಥರಾಽಽಸೀತ್ ತದನು ಕೃತವತ್ಯೇವ ಚೈತತ್ ಕುಕರ್ಮ ॥ ೨ ॥**

ಪದಚ್ಛೇದ : ಪೂರ್ವಂ ಕ್ಷೀರಾಬ್ಧಿಜಾತಾ ಕಥಮ್ ಅಪಿ ತಪಸಾ ಏವ ಅಪ್ಸರಸ್ತ್ವಂ ಪ್ರಯಾತಾ ತಾಂ ನೇತುಂ ತತ್ ತಮಃ ಅಂಧಂ ಕಮಲಜನಿಃ ಉವಾಚ ಆಶು ರಾಮಾಭಿಷೇಕಮ್ । ಭೂತ್ವಾ ದಾಸೀ ವಿಲುಂಪ ಸ್ವಗತಿಮ್ ಅಪಿ ತತಃ ಕರ್ಮಣಾ ಪ್ರಾಪ್ಸ್ಯಸೇ ತ್ವಂ ಸಾ ಇತಿ ಉಕ್ತಾ ಮಂಥರಾ ಆಸೀತ್ ತದನು ಕೃತವತೀ ಏವ ಚ ಏತತ್ ಕುಕರ್ಮ ॥

**ಅರ್ಥ** :- **ಪೂರ್ವಂ** ದೇವಾಸುರರ ಸಮುದ್ರಮಥನ ಕಾಲದಲ್ಲಿ **ಕ್ಷೀರಾಬ್ಧಿಜಾತಾ** ಕ್ಷೀರ ಸಮುದ್ರದಿಂದ ಹುಟ್ಟಿದಳು, **ಕಥಮಪಿ** ಯಾವುದೋ ಪ್ರಯಾಸದಿಂದ (ಸ್ವರೂಪ - ಯೋಗ್ಯತೆಯಿಂದಲ್ಲ), **ಅಪ್ಸರಸ್ತ್ವಂ** ಅಪ್ಸರಸ್ತ್ರೀತ್ವವನ್ನು **ಪ್ರಯಾತಾ** ಹೊಂದಿದವಳಾದಳು, **ಯತ್** ಯಾವ ಕಾರಣದಿಂದ ಸ್ವರೂಪದಿಂದ ದುಷ್ಟಳೋ, **ತತ್** ಆದ್ದರಿಂದ, **ಕಮಲಜನಿಃ** ಬ್ರಹ್ಮದೇವನು,

**ತಾಂ** ಅಪ್ಸರಸ್ತ್ರೀತ್ವವನ್ನು ಹೊಂದಿದ ಅಲಕ್ಷ್ಮಿಯನ್ನು, **ಆಶು** ಬೇಗನೆ, **ಅಂಧಂ ತಮಃ** ಅಂಧಂತಮಸ್ಸನ್ನು, **ನೇತುಂ** ಒಯ್ಯಲು, **ತ್ವಂ** ನೀನು, **ದಾಸೀ ಭೂತ್ವಾ** ಕೈಕೇಯಿಯ ದಾಸಿಯಾಗಿ, **ರಾಮಾಭಿಷೇಕಂ** ರಾಮನ ಪಟ್ಟಾಭಿಷೇಕ ವನ್ನು **ವಿಲುಂಪ** ತಡೆಯೊಡ್ಡು **ತತಃ** ಆ ರಾಮಾಭಿಷೇಕವನ್ನು ತಡೆದ ಕಾರಣ, **ಸ್ವಗತಿಮಪಿ** ನಿನಗೆ ಯೋಗ್ಯವಾದ ಗತಿಯನ್ನು (ಅಂಧಂತಮಸ್ಸನ್ನು), **ಪ್ರಾಪ್ಸ್ಯಸೇ** ಹೊಂದುವಿ, **ಇತಿ** ಹೀಗೆ, **ಉವಾಚ** ಹೇಳಿದನು, **ಇತ್ಯುಕ್ತಾ** ಈ ರೀತಿಯಾಗಿ ಹೇಳಿಸಿ ಕೊಳ್ಳಲ್ಪಟ್ಟ **ಸಾ** ಅಲಕ್ಷ್ಮಿಯೇ, **ಮಂಥರಾ** ಮಂಥರೆಯೆಂದು ಹೆಸರುಳ್ಳ ದಾಸಿಯು, **ಆಸೀತ್** ಆದಳು, **ತದನು** ರಾಮಾಭಿಷೇಕ ಪ್ರಸಂಗದಲ್ಲಿ, **ಏತತ್** ಈ ಅಭಿಷೇಕಕ್ಕೆ ತಡೆಯೊಡ್ಡುವ, **ಕುಕರ್ಮ** ನಿಂದ್ಯವಾದ ಕೆಲಸವನ್ನು **ಕೃತವತ್ಯೇವ** ಉತ್ಸಾಹದಿಂದ ಮಾಡಿದಳು.

**ತಾತ್ಪರ್ಯ** :- ದಾರಿದ್ರ್ಯಾಭಿಮಾನಿನಿಯಾದ ಸಂಪತ್ತಿನ ವಿನಾಶಕಾರಣ ಳಾದ ಈ ಅಲಕ್ಷ್ಮಿಯು ಹಿಂದೆ ಕ್ಷೀರಸಾಗರದಲ್ಲಿ ಹುಟ್ಟಿದವಳು. ಸ್ವರೂಪತಃ ಅಪ್ಸರಾ ಸ್ತ್ರೀಯಲ್ಲದಿದ್ದರೂ ತಪಸ್ಸಿನಿಂದ ಅಪ್ಸರಾಸ್ತ್ರೀಯರಲ್ಲಿ ಪರಿಗಣಿತಳಾದಳು. ಘೋರ ತಪಸ್ಸಿನಿಂದ ಬ್ರಹ್ಮನ ಸಾಕ್ಷಾತ್ಕಾರ ಪಡೆದು ತನಗೆ ಗತಿ (ಮುಕ್ತಿ) ಹೇಗೆ ? ಎಂದು ಪ್ರಶ್ನಿಸಿದಳು. ಅಂಧಂತಮಸ್ಸಿಗೆ ಯೋಗ್ಯಳಾದ, ಸ್ವಾಭಾವಿಕವಾಗಿ ದುಷ್ಟಳಾದ ಅವಳನ್ನು ನಿತ್ಯನರಕಕ್ಕೆ ಕಳಿಸಲು ಬ್ರಹ್ಮ ನುಡಿದನು– 'ಭೂಮಿಯಲ್ಲಿ ದಾಸಿಯಾಗಿ ಹುಟ್ಟಿ ಶ್ರೀರಾಮನ ಪಟ್ಟಾಭಿಷೇಕವನ್ನು ನಿಲ್ಲಿಸು. ಇದರಿಂದ ನಿನಗೆ ಯೋಗ್ಯ ಗತಿಯಾಗುವುದು'. ಮಂಥರೆಯು ಈ ಕಾರ್ಯವನ್ನು ಉತ್ಸಾಹದಿಂದ ನೆರವೇರಿಸಿದಳು. ॥ ೨ ॥

### ಕೈಕೇಯಿ ಕಾಡಿಗಟ್ಟಿದಳು

**ತದ್ವಾಕ್ಯಾತ್ ಕೈಕಯೀ ಸಾ ಪತಿಗವರಬಲಾದಾಜಹಾರೈವ ರಾಜ್ಯಂ**
**ರಾಮಸ್ತದ್ಗೌರವೇಣ ತ್ರಿದಶಮುನಿಕೃತೇಽರಣ್ಯಮೇವಾವಿವೇಶ ।**
**ಸೀತಾಯುಕ್ತೋಽನುಜೇನ ಪ್ರತಿದಿನಸುವಿವೃದ್ಧೋರುಭಕ್ತ್ಯಾ ಸಮೇತಃ**
**ಸಂಸ್ಥಾಪ್ಯಾಶೇಷಜಂತೂನ್ ಸ್ವವಿರಹಜಶುಚಾ ತ್ಯಕ್ತಸರ್ವೇಷಣಾರ್ಥಾನ್ ॥೩॥**

ಪದಚ್ಛೇದ : ತದ್ವಾಕ್ಯಾತ್ ಕೈಕಯೀ ಸಾ ಪತಿಗವರಬಲಾತ್ ಆಜಹಾರ ಏವ ರಾಜ್ಯಂ ರಾಮಃ ತದ್ಗೌರವೇಣ ತ್ರಿದಶಮುನಿಕೃತೇ ಅರಣ್ಯಮ್ ಏವ ಆವಿವೇಶ । ಸೀತಾಯುಕ್ತಃ ಅನುಜೇನ ಪ್ರತಿದಿನಸುವಿವೃದ್ಧೋರುಭಕ್ತ್ಯಾ ಸಮೇತಃ ಸಂಸ್ಥಾಪ್ಯ ಅಶೇಷಜಂತೂನ್ ಸ್ವವಿರಹಜಶುಚಾ ತ್ಯಕ್ತಸರ್ವೇಷಣಾರ್ಥಾನ್ ॥

**ಅರ್ಥ :- ತದ್ವಾಕ್ಯಾತ್** ರಾಮನಿಗೆ ವನವಾಸವನ್ನು ಭರತನಿಗೆ ರಾಜ್ಯವನ್ನು ಬೇಡು ಎಂಬ ಮಂಥರೆಯ ಮಾತಿನಿಂದ, **ಸಾ** ಭರತನ ತಾಯಿಯಾದ, **ಕೈಕಯೀ** ಕೈಕೇಯಿಯು, **ಪತಿಗವರಬಲಾತ್** ಗಂಡನಾದ ದಶರಥರಾಜನು ಕೊಟ್ಟಿರುವ ವರಗಳ ಸಾಮರ್ಥ್ಯದಿಂದ, **ರಾಜ್ಯಂ** ರಾಮನಿಗೆ ಕೊಡಲ್ಪಟ್ಟ ರಾಜ್ಯವನ್ನು, **ಆಜಹಾರೈವ** ಭರತನಿಗಾಗಿ ಅಪಹರಿಸಿದಳು, **ರಾಮಃ** ಶ್ರೀರಾಮನು, **ತದ್ಗೌರವೇಣ** ತಂದೆತಾಯಿಗಳಲ್ಲಿರುವ ಆದರಭಾವದಿಂದ, **ತ್ರಿದಶಮುನಿಕೃತೇ** ಏವ ದೇವತೆಗಳ ಮತ್ತು ಮುನಿಗಳ ಕಾರ್ಯವನ್ನು ಸಾಧಿಸುವುದಕ್ಕೋಸ್ಕರವೇ, **ಸೀತಾಯುಕ್ತಃ** ಸೀತೆಯಿಂದ ಕೂಡಿದವನಾಗಿ **ಪ್ರತಿದಿನಸುವಿವೃದ್ಧೋರುಭಕ್ತ್ಯಾ** ಯಾವಾಗಲೂ ಚೆನ್ನಾಗಿ ಅಭಿವೃದ್ಧವಾದ ಪರಮಾತ್ಮನ ಭಕ್ತಿಯಿಂದ, **ಯುಕ್ತೇನ** ಕೂಡಿದ, **ಅನುಜೇನ** ತಮ್ಮನಾದ ಲಕ್ಷ್ಮಣ ನಿಂದ, **ಸಮೇತಃ** ಕೂಡಿದವನಾಗಿ ಸ್ವವಿರಹಜಶುಚಾ ತನ್ನ ವಿಯೋಗದಿಂದ ಉಂಟಾದ ದುಃಖದಿಂದ, **ತ್ಯಕ್ತಸರ್ವೇಷಣಾರ್ಥಾನ್** ಎಲ್ಲ ಆಸೆಗಳನ್ನು ಮತ್ತು ಭೋಗವಸ್ತುಗಳನ್ನು ತೊರೆದ, **ಅಶೇಷಜಂತೂನ್** ತನ್ನ ಜತೆಯಲ್ಲಿ ಬಂದಿರುವ ಎಲ್ಲಾ ಪಶುಪಕ್ಷ್ಯಾದಿ ಪ್ರಾಣಿಗಳನ್ನು **ಸಂಸ್ಥಾಪ್ಯ** ನಿಲ್ಲಿಸಿ, **ಅರಣ್ಯಂ** ಕಾಡನ್ನು, **ಆವಿವೇಶ** ಪ್ರವೇಶಿಸಿದನು.

**ತಾತ್ಪರ್ಯ :-** ರಾಮಪಟ್ಟಾಭಿಷೇಕದ ಸಂತಸ ಸಮಯದಲ್ಲಿ ಮಂಥರೆಯು ಕೈಕೇಯಿಯ ಮನಸ್ಸನ್ನು ದುರ್ಬೋಧನೆಯಿಂದ ಕೆಡಿಸಿದಳು. ಅವಳಿಗೆ ಹಿಂದೆ ದಶರಥ ನೀಡಿದ ವರಗಳನ್ನು ಜ್ಞಾಪಿಸಿಕೊಟ್ಟಳು. ಕೈಕೇಯಿಯು ಆ ಎರಡು ವರಗಳಿಂದ ರಾಮನ ವನವಾಸ ಮತ್ತು ಭರತನ ಪಟ್ಟಾಭಿಷೇಕವನ್ನು ಯಾಚಿಸಿದಳು. ಶ್ರೀರಾಮನು ತಂದೆ-ತಾಯಿಯ ಮೇಲಿನ ಗೌರವದಿಂದ ಮತ್ತು ದೇವತೆಗಳ ಹಾಗೂ ಋಷಿಗಳ ಇಷ್ಟಾರ್ಥಸಿದ್ಧಿಗಾಗಿ ಸೀತೆಯೊಡನೆ ಅರಣ್ಯಕ್ಕೆ ತೆರಳಿದನು. ಅವನೊಡನೆ ಪ್ರತಿದಿನವೂ ಸೇವೆಯಿಂದ ಭಕ್ತಿಯನ್ನು ಅಭಿವೃದ್ಧಿಪಡಿಸಿಕೊಳ್ಳುತ್ತಾ ಅನುಜನಾದ ಲಕ್ಷ್ಮಣನೂ ಹಿಂಬಾಲಿಸಿದನು. ತನ್ನ ವಿಯೋಗ ದುಃಖವನ್ನು ತಾಳದೆಯೇ ವಿರಕ್ತರಾಗಿ ಸಕಲ ಭೋಗವಸ್ತುಗಳನ್ನು ತೊರೆದು ತನ್ನನ್ನು ಅನುಸರಿಸಿ ಬಂದ ಅಯೋಧ್ಯೆಯ ಎಲ್ಲ ಪಶು-ಪಕ್ಷಿ-ಮಾನವರನ್ನು ತಮಸಾನದೀ ತೀರದಲ್ಲಿ ತೊರೆದು ಕಾಡನ್ನು ಪ್ರವೇಶಿಸಿದನು.

॥ ೩ ॥

**ಚಿತ್ರಕೂಟದಲ್ಲಿ ಸೀತಾ-ರಾಮರು**

**ವೃಕ್ಷಾನ್‌ಪಕ್ಷೀಭ ಕೀಟಾನ್ ಪಿತರಮಥ ಸಖೀನ್**
**ಮಾತೃಪೂರ್ವಾನ್ವಿಸೃಜ್ಯ ಪ್ರೋತ್ಥಾಂ ಗಂಗಾಂ ಸ್ವಪಾದಾದ್ಧರ**
**ಇವ ಚ ಗುಹೇನಾರ್ಚಿತಃ ಸೋಽಥ ತೀರ್ತ್ವಾ ।**
**ದೇವಾರ್ಚ್ಯಸ್ಯಾಪಿ ಪುತ್ರಾದೃಷಿಗಣಸಹಿತಾತ್ಪ್ರಾಪ್ಯ ಪೂಜಾಂ ಪ್ರಯಾತಃ**
**ಶೈಲೇಶಂ ಚಿತ್ರಕೂಟಂ ಕತಿಪಯದಿವಸಾನತ್ರ ಮೋದನ್ನುವಾಸ ॥೪ ॥**

**ಪದಚ್ಛೇದ : ವೃಕ್ಷಾನ್ ಪಕ್ಷೀಭಕೀಟಾನ್ ಪಿತರವ್ ಅಥ ಸಖೀನ್ ಮಾತೃಪೂರ್ವಾನ್ ವಿಸೃಜ್ಯ ಪ್ರೋತ್ಥಾಂ ಗಂಗಾಂ ಸ್ವಪಾದಾತ್ ಹರಃ ಇವ ಚ ಗುಹೇನ ಅರ್ಚಿತಃ ಸಃ ಅಥ ತೀರ್ತ್ವಾ । ದೇವಾರ್ಚ್ಯಸ್ಯ ಅಪಿ ಪುತ್ರಾತ್ ಋಷಿಗಣಸಹಿತಾತ್ ಪ್ರಾಪ್ಯ ಪೂಜಾಂ ಪ್ರಯಾತಃ ಶೈಲೇಶಂ ಚಿತ್ರಕೂಟಂ ಕತಿಪಯದಿವಸಾನ್ ಅತ್ರ ಮೋದನ್ ಉವಾಸ ॥**

**ಅರ್ಥ :- ವೃಕ್ಷಾನ್** ಮನಸ್ಸಿನಿಂದ ಅನುಸರಿಸಿ ಬಂದಿರುವ ವೃಕ್ಷ ಜೀವರನ್ನು, **ಪಕ್ಷೀಭಕೀಟಾನ್** ಹಕ್ಕಿಗಳು, ಆನೆಗಳು, ಹುಳಗಳೂ ಇವುಗಳನ್ನು, **ಪಿತರಂ** ತಂದೆಯನ್ನು, **ಸಖೀನ್** ಮಿತ್ರರನ್ನು, **ಮಾತೃಪೂರ್ವಾನ್** ತಾಯಿಯೇ ಮೊದಲಾದವರನ್ನು, **ವಿಸೃಜ್ಯ** ತಮಸಾನದೀ ತೀರದಲ್ಲಿ ತೊರೆದು, **ಅಥ** ಅನಂತರ, **ಗಂಗಾಂ** ಗಂಗೆಯನ್ನು, **ಪ್ರಾಪ್ಯ** ಹೊಂದಿ, **ಗುಹೇನ** ಷಣ್ಮುಖನಿಂದ, **ಹರ ಇವ** ರುದ್ರನು ಹೇಗೋ ಹಾಗೆ, **ಗುಹೇನ** ಗುಹನೆಂಬ ನಾವಿಕನಿಂದ, **ಅರ್ಚಿತಃ** ಪೂಜಿಸಿಕೊಳ್ಳಲ್ಪಟ್ಟ, **ಸಃ** ಆ ರಾಮನು, **ಸ್ವಪಾದಾತ್** ತನ್ನ ಚರಣದಿಂದ, **ಪ್ರೋತ್ಥಾಂ** ಹುಟ್ಟಿರುವ, **ಗಂಗಾಂ** ಭಾಗೀರಥಿಯನ್ನು, **ತೀರ್ತ್ವಾ** ದಾಟಿ, **ಅಥ** ಅನಂತರ, **ಋಷಿಗಣಸಹಿತಾತ್** ಋಷಿಗಳ ಸಮುದಾಯದಿಂದ ಕೂಡಿದ, **ದೇವಾರ್ಚಸ್ಯ** ದೇವತೆಗಳಿಂದ ಗೌರವಿಸಲ್ಪಡುವ ಬೃಹಸ್ಪತ್ಯಾಚಾರ್ಯರ, **ಪುತ್ರಾತ್** ಮಗನಾದ ಭರದ್ವಾಜರಿಂದ, **ಪೂಜಾಂ** ಪೂಜೆಯನ್ನು (ಪ್ರಯಾಗ ಕ್ಷೇತ್ರದಲ್ಲಿ), **ಪ್ರಾಪ್ಯ** ಸ್ವೀಕರಿಸಿ, **ಶೈಲೇಶಂ** ಪ್ರಯಾಗದಿಂದ ನೈಋತ್ಯ ದಿಕ್ಕಿನಲ್ಲಿರುವ ಪರ್ವತ ಶ್ರೇಷ್ಠವಾದ, **ಚಿತ್ರಕೂಟಂ** ಚಿತ್ರಕೂಟವೆಂಬ ಪರ್ವತವನ್ನು, **ಪ್ರಯಾತಃ** ಹೊಂದಿದವನಾಗಿ, **ಅತ್ರ** ಈ ಚಿತ್ರಕೂಟ ಪರ್ವತದಲ್ಲಿ, **ಕತಿಪಯದಿವಸಾನಿ** ಕೆಲವು ದಿನಗಳನ್ನು, **ಮೋದನ್** ಸಂತೋಷಪಡುತ್ತಾ, **ಉವಾಸ** ವಾಸಮಾಡಿದನು.

**ತಾತ್ಪರ್ಯ** : ಶ್ರೀರಾಮನು ಮನಸ್ಸಿನಿಂದ ತನ್ನನನುಸರಿಸಿದ ವೃಕ್ಷಗಳನ್ನು ಪಕ್ಷಿಗಳು – ಆನೆಗಳು – ಕೀಟಗಳು – ತಂದೆ – ಗೆಳೆಯರು – ತಾಯಂದಿರು ಮೊದಲಾದ ಅಯೋಧ್ಯಾ ಪಟ್ಟಣದ ಆತ್ಮೀಯರನ್ನು ತಮಸಾನದೀತೀರದಲ್ಲಿ ತೊರೆದು ಪಯಣಗೈದನು. ಶಂಕರನನ್ನು ಷಣ್ಮುಖ ಆರಾಧಿಸುವಂತೆ ತನ್ನನ್ನು ಭಕ್ತಿಯಿಂದ ಆರಾಧಿಸುವ ಗುಹನೆಂಬ ನಾವಿಕನಿಂದ ಪೂಜೆಯನ್ನು ಸ್ವೀಕರಿಸಿದನು. ತನ್ನ ಪಾವನಪಾದದಿಂದ ಪುಟ್ಟಿದ ಗಂಗಾನದಿಯನ್ನು ದಾಟಿ, ದೇವಗುರುಗಳಾದ ಬೃಹಸ್ಪತ್ಯಾಚಾರ್ಯರ ಮಗನಾದ ಭರದ್ವಾಜರ ಆಶ್ರಮಕ್ಕೆ ಬಂದನು. ಇತರ ಮುನಿಗಳೊಂದಿಗೆ ಅವರಿಂದ ಪೂಜಿತನಾದನು. ಅವರ ಸೂಚನೆಯಂತೆ ಏಕಾಂತವಾದ ಚಿತ್ರಕೂಟ ಪರ್ವತವನ್ನು ಸೇರಿ ಕೆಲದಿನ ಸಂತೋಷದಿಂದ ವಾಸ ಮಾಡಿದನು. ॥೪॥

### ದಶರಥ ದೇಹ ತೊರೆದ

**ಏತಸ್ಮಿನ್ನೇವ ಕಾಲೇ ದಶರಥನೃಪತಿಃ ಸ್ವರ್ಗತೋಽಭೂದ್ವಿಯೋಗಾದ್**
**ರಾಮಸ್ಯೈವಾಥ ಪುತ್ರೌ ವಿಧಿಸುತಸಹಿತೈರ್ಮಂತ್ರಿಭಿಃ ಕೇಕಯೇಭ್ಯಃ ।**
**ಆನೀತೌ ತಸ್ಯ ಕೃತ್ವಾ ಶ್ರುತಿಗಣವಿಹಿತಪ್ರೇತಕಾರ್ಯಾಣಿ ಸದ್ಯಃ**
**ಶೋಚಂತೌ ರಾಮಮಾರ್ಗಂ ಪುರಜನಸಹಿತೌ ಜಗ್ಮತುರ್ಮಾತೃಭಿಶ್ಚ ॥೫॥**

ಪದಚ್ಛೇದ : ಏತಸ್ಮಿನ್ ಏವ ಕಾಲೇ ದಶರಥನೃಪತಿಃ ಸ್ವರ್ಗತಃ ಅಭೂತ್ ವಿಯೋಗಾತ್ ರಾಮಸ್ಯ ಏವ ಅಥ ಪುತ್ರೌ ವಿಧಿಸುತಸಹಿತೈಃ ಮಂತ್ರಿಭಿಃ ಕೇಕಯೇಭ್ಯಃ । ಆನೀತೌ ತಸ್ಯ ಕೃತ್ವಾ ಶ್ರುತಿಗಣವಿಹಿತಪ್ರೇತಕಾರ್ಯಾಣಿ ಸದ್ಯಃ ಶೋಚಂತೌ ರಾಮಮಾರ್ಗಂ ಪುರಜನಸಹಿತೌ ಜಗ್ಮತುಃ ಮಾತೃಭಿಃ ಚ ॥

**ಅರ್ಥ** :- **ಏತಸ್ಮಿನ್ನೇವ ಕಾಲೇ** ಚಿತ್ರಕೂಟಪರ್ವತದಲ್ಲಿ ವಾಸಿಸಿ ಕೊಂಡಿರುವ ಸಮಯ ದಲ್ಲಿಯೇ, **ದಶರಥನೃಪತಿಃ** ದಶರಥ ರಾಜನು, **ರಾಮಸ್ಯ** ಶ್ರೀರಾಮಚಂದ್ರನ, **ವಿಯೋಗಾದೇವ** ಅಗಲುವಿಕೆಯಿಂದಲೇ, **ಸ್ವಃ** ಸ್ವರ್ಗಲೋಕವನ್ನು, **ಗತಃ** ಹೊಂದಿದವನಾಗಿ, **ಅಭೂತ್** ಆದನು, **ಅಥ** ಮರಣಾನಂತರ, **ಪುತ್ರೌ** ಭರತಶತ್ರುಘ್ನರು, **ವಿಧಿಸುತಸಹಿತೈಃ** ಬ್ರಹ್ಮನ ಮಗ ನಾದ ವಸಿಷ್ಠರಿಂದ ಸಹಿತರಾದ, **ಮಂತ್ರಿಭಿಃ** ಮಂತ್ರಿಗಳಿಂದ, **ಕೈಕಯೇಭ್ಯಃ** ಕೇಕಯ ದೇಶದಿಂದ, **ಆನೀತೌ** ಅಯೋಧ್ಯೆಯನ್ನು ಕುರಿತು ಕರೆಸಲ್ಪಟ್ಟರು, **ತಸ್ಯ**

ಆ ದಶರಥನಿಗೆ, **ಶ್ರುತಿಗಣವಿಹಿತಪ್ರೇತಕಾರ್ಯಾಣಿ** ವೇದಸಮೂಹಗಳಲ್ಲಿ ಹೇಳಲ್ಪಟ್ಟ ಸತ್ತವರಿಗೆ ಮಾಡತಕ್ಕ ಸಂಸ್ಕಾರ ಕರ್ಮಗಳನ್ನು **ಕೃತ್ವಾ** ಮಾಡಿ, **ಸದ್ಯಃ** ಪ್ರೇತಸಂಸ್ಕಾರ ಮಾಡಿದ ಅನಂತರವೇ, **ಶೋಚಂತೌ** ದುಃಖಿತರಾದ ಭರತ ಶತ್ರುಘ್ನರು, **ಪುರಜನಸಹಿತೌ** ಪಟ್ಟಣದ ಸುಜನರಿಂದ ಕೂಡಿದವರಾಗಿ, **ಮಾತೃಭಿಶ್ಚ** ತಾಯಂದಿರಿಂದಲೂ ಕೂಡಿ, **ರಾಮಮಾರ್ಗಂ** ರಾಮನು ಪಯಣಿಸಿದ ದಾರಿಯನ್ನು ಅನುಸರಿಸಿ, **ಜಗ್ಮತುಃ** ಹೋದರು.

**ತಾತ್ಪರ್ಯ** :- ರಾಮನು ಕಾಡಿಗೆ ತೆರಳಿದ ದುಃಖವನ್ನು ತಾಳಲಾಗದೆ ದಶರಥನು ದಿವಂಗತನಾದನು. ವೇದ-ಪುರಾಣಗಳಲ್ಲಿ ತಿಳಿಸಿದ ಮೃತರಿಗೆ ನಡೆಸಬೇಕಾದ ಸಂಸ್ಕಾರಗಳನ್ನು ದಶರಥನಿಗೆ ಮಾಡಿಸಲು ಭರತ-ಶತ್ರುಘ್ನರನ್ನು ಕರೆತರಲು ವಶಿಷ್ಠರು ಆದೇಶಿಸಿದರು. ಮಂತ್ರಿಗಳಿಂದ ಕಳುಹಲ್ಪಟ್ಟ ದೂತರ ವಿನಂತಿಯಂತೆ ಭರತ-ಶತ್ರುಘ್ನರು ಆಗಮಿಸಿ ಪ್ರೇತಸಂಸ್ಕಾರ ಕಾರ್ಯಗಳನ್ನು ಶ್ರದ್ಧೆಯಿಂದ ನೆರವೇರಿಸಿದರು. ರಾಮನೇ ರಾಜ್ಯವಾಳಬೇಕೆಂಬ ಮನೀಷೆಯಿಂದ ಭರತ – ಶತ್ರುಘ್ನರು, ಅವನ ವಿರಹ ತಾಳದೆಯೇ ಪೌರಜನತೆ ಹಾಗೂ ತಾಯಂದಿರನ್ನು ಕರೆದುಕೊಂಡು ರಾಮನನ್ನು ಮರಳಿ ಕರೆತರಲು ಅರಣ್ಯಕ್ಕೆ ಪಯಣಿಸಿದರು. ॥ ೫ ॥

### ಭರತನ ಭಕ್ತಿ

**ಧಿಕ್ಕುರ್ವಂತೌ ನಿತಾಂತಂ ಸಕಲದುರಿತಗಾಂ ಮಂಥರಾಂ ಕೈಕಯೀಂ ಚ**
**ಪ್ರಾಪ್ತೌ ರಾಮಸ್ಯ ಪಾದೌ ಮುನಿಗಣಸಹಿತೌ ತತ್ರ ಚೋವಾಚ ನತ್ವಾ।**
**ರಾಮಂ ರಾಜೀವನೇತ್ರಂ ಭರತ ಇಹ ಪುನಃ ಪ್ರೀತಯೇಽಸ್ಮಾಕಮೀಶ**
**ಪ್ರಾಪ್ಯಾಶು ಸ್ವಾಮಯೋಧ್ಯಾಮವರಜಸಹಿತಃ ಪಾಲಯೇಮಾಂ ಧರಿತ್ರೀಮ್ ॥೬॥**

ಪದಚ್ಛೇದ : ಧಿಕ್ಕುರ್ವಂತೌ ನಿತಾಂತಂ ಸಕಲದುರಿತಗಾಂ ಮಂಥರಾಂ ಕೈಕಯೀಂ ಚ ಪ್ರಾಪ್ತೌ ರಾಮಸ್ಯ ಪಾದೌ ಮುನಿಗಣಸಹಿತೌ ತತ್ರ ಚ ಉವಾಚ ನತ್ವಾ। ರಾಮಂ ರಾಜೀವನೇತ್ರಂ ಭರತಃ ಇಹ ಪುನಃ ಪ್ರೀತಯೇ ಅಸ್ಮಾಕಂ ಈಶ ಪ್ರಾಪ್ಯ ಆಶು ಸ್ವಾಂ ಅಯೋಧ್ಯಾಮ್ ಅವರಜಸಹಿತಃ ಪಾಲಯ ಇಮಾಂ ಧರಿತ್ರೀಮ್ ॥

**ಅರ್ಥ** :- **ಸಕಲದುರಿತಗಾಂ** ವಿಷ್ಣು-ವೈಷ್ಣವ ದ್ವೇಷಾದಿ ಸರ್ವಪಾಪಗಳಿಗೆ ಅಭಿಮಾನಿನಿಯೂ ಆಶ್ರಯಳೂ ಆದ, **ಮಂಥರಾಂ** ಮಂಥರೆಯನ್ನು

**ನಿತಾಂತಂ** ಚೆನ್ನಾಗಿ, **ಧಿಕ್ಕುರ್ವಂತೌ** ತಿರಸ್ಕಾರ ಮಾಡತಕ್ಕವರಾಗಿ, **ಸಕಲ ದುರಿಗಾಂ ಕೈಕಯೀಂ ಚ** ಸರ್ವದೋಷಸ್ವರೂಪಳಾದ ನಿಕೃತಿ ಎಂಬವಳಿಂದ ಆವಿಷ್ಟಳಾದ ಕೈಕೇಯಿಯನ್ನೂ ಕೂಡ, **ಧಿಕ್ಕುರ್ವಂತೌ** ತಿರಸ್ಕರಿಸತಕ್ಕ ಭರತ ಶತ್ರುಘ್ನರು, **ಮುನಿಗಣ ಸಹಿತೌ** ಮುನಿಗಳ ಸಮೂಹದಿಂದ ಕೂಡಿದವರಾಗಿ, **ರಾಮಸ್ಯ** ರಾಮನ, **ಪಾದೌ** ಚರಣಗಳನ್ನು, **ಪ್ರಾಪ್ತೌ** ಹೊಂದಿದರು, **ತತ್ರ** ಚಿತ್ರಕೂಟ ಪರ್ವತದಲ್ಲಿ, **ಭರತಃ** ಭರತನು, **ರಾಜೀವನೇತ್ರಂ** ಕಮಲದಂತೆ ಕಣ್ಣುಗಳುಳ್ಳ, **ರಾಮಂ** ಶ್ರೀರಾಮನನ್ನು, **ನತ್ವಾ** ನಮಸ್ಕರಿಸಿ, **ಹೇ ಈಶ** ಓ ಸ್ವಾಮಿಯಾದ ರಾಮಚಂದ್ರನೇ, **ತ್ವಂ** ನೀನು, **ಅವರಜಸಹಿತಃ** ತಮ್ಮನಾದ ಲಕ್ಷ್ಮಣನಿಂದ ಕೂಡಿದವನಾಗಿ, **ಅಸ್ಮಾಕಂ** ನಮ್ಮ, **ಪ್ರೀತಯೇ** ಸಂತೋಷ ಕ್ಕೋಸ್ಕರ, **ಇಹ** ಅರಣ್ಯದಿಂದ, **ಪುನಃ** ಹಿಂತಿರುಗಿ, **ಸ್ವಾಂ** ನಿನ್ನದ್ದಾದ, **ಅಯೋಧ್ಯಾಂ** ಅಯೋಧ್ಯಾನಗರವನ್ನು, **ಆಶು** ಶೀಘ್ರವಾಗಿ, **ಪ್ರಾಪ್ಯ** ಹೊಂದಿ, **ಇಮಾಂ ಧರಿತ್ರೀಂ** ಈ ಭೂಮಿಯನ್ನು, **ಪಾಲಯ** ರಕ್ಷಿಸು, (ಇತಿ ಹೀಗೆ) **ಉವಾಚ** ಪ್ರಾರ್ಥಿಸಿದನು.

**ತಾತ್ಪರ್ಯ** :- ವಿಷ್ಣು-ವೈಷ್ಣವದ್ವೇಷ ಕಾರ್ಯಗಳಿಗೆ ಪ್ರಚೋದಕಳಾದ ಮತ್ತು ಅಂತಹ ಪಾಪಭಾಜನಳಾದ ಮಂಥರೆಯ ಕುಕೃತ್ಯವನ್ನು ಮತ್ತು 'ನಿಕೃತಿ' ಎಂಬ ದಾನವಸ್ತ್ರೀಯ ಆವೇಶದಿಂದ ನಿಂದ್ಯಕಾರ್ಯವನ್ನು ನೆರವೇರಿಸಿದ ಕೈಕೇಯಿಯನ್ನೂ ತಿರಸ್ಕರಿಸುತ್ತಾ, ಭರತ-ಶತ್ರುಘ್ನರು ಪೌರ-ಜಾನಪದರು ಮತ್ತು ಮುನಿಗಳಿಂದ ಸಹಿತರಾಗಿ ಚಿತ್ರಕೂಟದಲ್ಲಿರುವ ಶ್ರೀರಾಮನ ಬಳಿ ಬಂದರು. ಭರತನು, ಶ್ರೀರಾಮನಿಗೆ ನಮಿಸಿ ಓ ಒಡೆಯನೇ ! ನೀನು ತಮ್ಮನಾದ ಲಕ್ಷ್ಮಣನೊಡನೆ ಅಯೋಧ್ಯೆಗೆ ಆಗಮಿಸಿ ನಿನಗೇ ಸೇರಬೇಕಾದ ಆಧಿಪತ್ಯವನ್ನು ನಮ್ಮೆಲ್ಲರ ಆನಂದಕ್ಕಾಗಿ ಸ್ವೀಕರಿಸಿ ಭೂಮಂಡಲವನ್ನು ರಕ್ಷಿಸು ಎಂದು ಪ್ರಾರ್ಥಿಸಿದನು. ॥ ೬ ॥

**ಇತ್ಯುಕ್ತಃ ಕರ್ತುಮೀಶಃ ಸಕಲಸುರಗಣಾಪ್ಯಾಯನಂ ರಾಮದೇವಃ**
**ಸತ್ಯಾಂ ಕರ್ತುಂ ಚ ವಾಣೀಮವದದತಿತರಾಂ ನೇತಿ ಸದ್ಭಕ್ತಿನಮ್ರಮ್ ।**
**ಭೂಯೋ ಭೂಯೋಽರ್ಥಯಂತಂ ದ್ವಿಗುಣಿತಶರದಾಂ ಸಪ್ತಕೇ ತ್ವಬ್ಧ್ಯತೀತೇ**
**ಕರ್ತೃತ್ತೇ ವಚೋಽಹಂ ಸುದೃಢಮೃತಮಿದಂ ಮೇ ವಚೋ ನಾತ್ರ ಶಂಕಾ ॥ ೭ ॥**

**ಪದಚ್ಛೇದ : ಇತ್ಯುಕ್ತಃ ಕರ್ತುಂ ಈಶಃ ಸಕಲಸುರಗಣಾಪ್ಯಾಯನಂ ರಾಮದೇವಃ ಸತ್ಯಾಂ ಕರ್ತುಂ ಚ ವಾಣೀಮ್ ಅವದತ್ ಅತಿತರಾಂ ನ ಇತಿ ಸದ್ಭಕ್ತಿನಮ್ರಮ್ । ಭೂಯಃ ಭೂಯಃ ಅರ್ಥಯಂತಂ ದ್ವಿಗುಣಿತಶರದಾಂ ಸಪ್ತಕೇ ತು ಅಭ್ಯತೀತೇ ಕರ್ತಾ ಏತತ್ ತೇ ವಚಃ ಅಹಂ ಸುದೃಢಂ ಋತಮ್ ಇದಂ ಮೇ ವಚಃ ನ ಅತ್ರ ಶಂಕಾ ॥**

**ಅರ್ಥ :-** **ಇತ್ಯುಕ್ತಃ** ರಾಜ್ಯವನ್ನು ಸ್ವೀಕರಿಸಬೇಕೆಂದು ಪ್ರಾರ್ಥಿತನಾದ, **ಸಕಲಸುರಗಣಾಪ್ಯಾಯನಂ** ಎಲ್ಲಾ ದೇವತೆಗಳಿಗೆ (ರಾಕ್ಷಸರಿಂದ ಉಂಟಾಗತಕ್ಕ ಬಾಧೆಯನ್ನು ಪರಿಹರಿಸಿ) ರಕ್ಷಣೆಯನ್ನು, **ಕರ್ತುಂ** ಮಾಡಲು, **ಈಶಃ** ಸಮರ್ಥನಾದ, **ರಾಮದೇವಃ** ರಾಮಚಂದ್ರನು, **ವಾಣೀಂ** ತನ್ನ (ರಾಕ್ಷಸರನ್ನು ಸಂಹರಿಸುವೆನು ಎಂಬ) ಮಾತನ್ನು, **ಸತ್ಯಾಂ** ಯಥಾರ್ಥವನ್ನಾಗಿ, **ಕರ್ತುಂ ಚ** ಮಾಡುವುದಕ್ಕೋಸ್ಕರವೂ ಕೂಡ, **ಅತಿತರಾಂ** ಚೆನ್ನಾಗಿ, **ಸದ್ಭಕ್ತಿನಮ್ರಂ** ಶುದ್ಧವಾದ ಭಕ್ತಿಯಿಂದ ನಮ್ರೀಭೂತನಾದ ಭರತನನ್ನು, **ನೇತಿ** ಅಯೋಧ್ಯೆಗೆ ಬಾರೆನು ಎಂಬುದಾಗಿ, **ಅವದತ್** ಹೇಳಿದನು, **ಭೂಯೋ ಭೂಯಃ** ಮತ್ತೂ ಮತ್ತು, **ಅರ್ಥಯಂತಂ** ಪ್ರಾರ್ಥಿಸತಕ್ಕ ಭರತನನ್ನು, **ದ್ವಿಗುಣಿತಶರದಾಂ ಸಪ್ತಕೇ** ಎರಡರಿಂದ ಗುಣಿಸಲ್ಪಟ್ಟ ಏಳು ಸಂವತ್ಸರಗಳು, **ಅಭ್ಯತೀತೇ** ಕಳೆಯಲು, **ಅಹಂ** ನಾನು, **ತೇ** ನಿನ್ನ, **ಏತದ್ವಚಃ** ಅಯೋಧ್ಯೆಯನ್ನು ಕುರಿತು ಬಾ ಎಂಬ ಪ್ರಾರ್ಥನಾ ರೂಪವಾದ ಈ ಮಾತನ್ನು, **ಕರ್ತಾಸ್ಮಿ** ನಡೆಸಿಕೊಡುತ್ತೇನೆ, **ಮೇ ವಚಃ** ನನ್ನ ಈ ಮಾತು, **ಸುದೃಢಂ** ನಿಶ್ಚಿತವಾದದ್ದು, **ಋತಂ** ಯಥಾರ್ಥವಾದದ್ದು, **ಅತ್ರ** ಈ ವಿಷಯದಲ್ಲಿ, **ಶಂಕಾ** ಸಂದೇಹವು, ನ ಅನಗತ್ಯವೆಂದು, **ಅವದತ್** ಹೇಳಿದನು.

**ತಾತ್ಪರ್ಯ :-** ಅಯೋಧ್ಯೆಗೆ ಬಂದು ನಮ್ಮೆಲ್ಲರ ಅರಸನಾಗೆಂಬ ಭರತನ ಬಿನ್ನಹವನ್ನು ಶ್ರೀರಾಮ ಅಂಗೀಕರಿಸಲಿಲ್ಲ. ತಂದೆ-ತಾಯಿಗಳಿಗೆ ನೀಡಿದ ಮಾತನ್ನು ಸತ್ಯವಾಗಿಸುವುದು, ಮತ್ತು ದೇವತೆಗಳ ಅನುಗ್ರಹಕ್ಕಾಗಿ ದೈತ್ಯ ಸಂಹಾರ ಕಾರ್ಯವೂ ಆಗಬೇಕಿದ್ದಿತು. ಇವೆರಡರ ಹಿನ್ನೆಲೆಯಲ್ಲಿ ಭರತನಿಗೆ ರಾಮನು 'ನ' ಕಾರಾತ್ಮಕ ಉತ್ತರವನ್ನೇ ನೀಡಿದನು. ತುಂಬ ಭಕ್ತಿಯಿಂದ ಮತ್ತೆ ಮತ್ತೆ ಅಯೋಧ್ಯೆಗೆ ಬರಲೇಬೇಕೆಂದು ಭರತನು ಆಗ್ರಹಿಸಿದಾಗ ಹದಿನಾಲ್ಕು ಸಂವತ್ಸರಗಳ ನಂತರ ನಿನ್ನ ಬೇಡಿಕೆ ಈಡೇರಿಸುವುದಾಗಿ ಆಶ್ವಾಸನೆ ನೀಡಿದ. ಇದು ನಿಶ್ಚಿತವೆಂದು ಭರತನನ್ನು ಸಮಾಧಾನಪಡಿಸಿದ. ॥ ೭ ॥

ಪಾದುಕಾ ಪಟ್ಟಾಭಿಷೇಕ

**ಶ್ರುತ್ವೈತದ್ರಾಮವಾಕ್ಯಂ ಹುತಭುಜಿ ಪತನೇ ಸ ಪ್ರತಿಜ್ಞಾಂ ಚ ಕೃತ್ವಾ**
**ರಾಮೋಕ್ತಸ್ಯಾನ್ಯಥಾತ್ವೇ ನ ತು ಪುರಮಭಿವೇಕ್ಷ್ಯೇऽಹಮಿತ್ಯೇವ ತಾವತ್ ।**
**ಕೃತ್ವಾऽನ್ಯಾಂ ಸುಪ್ರತಿಜ್ಞಾಮವಸದಥ ಬಹಿರ್ಗ್ರಾಮಕೇ ನಂದಿನಾಮ್ನಿ**
**ಶ್ರೀಶಸ್ಯೈವಾಸ್ಯ ಕೃತ್ವಾ ಶಿರಸಿ ಪರಮಕಂ ಪೌರಟಂ ಪಾದಪೀಠಮ್ ॥ ೮ ॥**

ಪದಚ್ಛೇದ : ಶ್ರುತ್ವಾ ಏತತ್ ರಾಮವಾಕ್ಯಂ ಹುತಭುಜಿ ಪತನೇ ಸಃ ಪ್ರತಿಜ್ಞಾಂ ಚ ಕೃತ್ವಾ ರಾಮೋಕ್ತೌ ಅಸ್ಯ ಅನ್ಯಥಾತ್ವೇ ನ ತು ಪುರಮ್ ಅಭಿವೇಕ್ಷ್ಯೇ ಅಹಮ್ ಇತಿ ಏವ ತಾವತ್ । ಕೃತ್ವಾ ಅನ್ಯಾಂ ಸುಪ್ರತಿಜ್ಞಾಂ ಅವಸತ್ ಅಥ ಬಹಿಃ , ಗ್ರಾಮಕೇ ನಂದಿನಾಮ್ನಿ ಶ್ರೀಶಸ್ಯ ಏವ ಅಸ್ಯ ಕೃತ್ವಾ ಶಿರಸಿ ಪರಮಕಂ ಪೌರಟಂ ಪಾದಪೀಠಮ್ ॥

**ಅರ್ಥ** :- **ಸಃ** ಆ ಭರತನು, **ಏತತ್** ಈ ಪೂರ್ವೋಕ್ತವಾದ, **ರಾಮವಾಕ್ಯಂ** ರಾಮನ ಮಾತನ್ನು **ಶ್ರುತ್ವಾ** ಕೇಳಿ, **ರಾಮೋಕ್ತಸ್ಯ** ರಾಮನು ಹೇಳಿದ್ದಕ್ಕೆ, **ಅನ್ಯಥಾತ್ವೇ** ವ್ಯತ್ಯಾಸವಾದಲ್ಲಿ **ಹುತಭುಜಿಪತನೇ** ಅಗ್ನಿಯಲ್ಲಿ ಪ್ರವೇಶ ಮಾಡುವೆನೆಂದು, **ಪ್ರತಿಜ್ಞಾಂ** ಪ್ರತಿಜ್ಞೆಯನ್ನು **ಕೃತ್ವಾ** ಮಾಡಿ, **ತಾವತ್** ರಾಮನು ಬರುವ ತನಕ, **ಸುಪ್ರತಿಜ್ಞಾಂ** ಭೂಶಯನ, ಬ್ರಹ್ಮಚರ್ಯ, ಒಮ್ಮೆ ಊಟ, ಜಟಾವಲ್ಕಲಧಾರಣ ಮೊದಲಾದ ಪ್ರತಿಜ್ಞೆಗಳಿಂದ ಕೂಡಿದ, **ಅಹಂ ತು** ನಾನು, **ಪುರಂ** ಅಯೋಧ್ಯೆಯನ್ನು **ನೈವ ಅಭಿವೇಕ್ಷ್ಯೇ** ಪ್ರವೇಶಿಸಲಾರೆನು, **ಇತಿ** ಎಂಬುದಾಗಿ, **ಅನ್ಯಾಂ ಪ್ರತಿಜ್ಞಾಂ** ಬೇರೆ ಪ್ರತಿಜ್ಞೆಯನ್ನು ಕೂಡ, **ಕೃತ್ವಾ** ಮಾಡಿ, **ಅಥ** ಪ್ರತಿಜ್ಞಾದ್ವಯಾನಂತರ, **ಶ್ರೀಶಸ್ಯ** ಲಕ್ಷ್ಮೀಪತಿಯಾದ, **ಅಸ್ಯ** ಈ ರಾಮನ, **ಪರಮಕಂ** ಉತ್ತಮವಾದ, **ಪೌರಟಂ** ಬಂಗಾರಮಯವಾದ, **ಪಾದಪೀಠಂ** ಎರಡು ಪಾದುಕೆಗಳನ್ನು, **ಶಿರಸಿ** ತಲೆಯಲ್ಲಿ, **ಕೃತ್ವಾ** ಇಟ್ಟುಕೊಂಡು, **ಬಹಿಃ** ಅಯೋಧ್ಯೆಯ ಹೊರಗಿರುವ, **ನಂದಿನಾಮ್ನಿ** ನಂದಿಯೆಂದು ಹೆಸರುಳ್ಳ, **ಗ್ರಾಮಕೇ** ಅಪ್ರಸಿದ್ಧ ಗ್ರಾಮದಲ್ಲಿ **ಅವಸತ್** ವಾಸಮಾಡಿದನು.

**ತಾತ್ಪರ್ಯ** : ಶ್ರೀರಾಮನ ಸಂದೇಶವನ್ನು ಆಲಿಸಿದ ಭರತನು, ರಾಮನು ತಿಳಿಸಿದಂತೆ ಹದಿನಾಲ್ಕು ವರ್ಷಗಳು ಕಳೆದಾಗ ಬಾರದಿರುವಲ್ಲಿ ತಾನು ಬೆಂಕಿ ಯಲ್ಲಿ ಪ್ರಾಣ ಬಿಡುವುದಾಗಿಯೂ ಮತ್ತು ಶ್ರೀರಾಮ ಬರುವ ತನಕ ಋಷಿ ಗಳಂತೆ ನಾರುಮಡಿ ತೊಟ್ಟು ಗೆಡ್ಡೆ-ಗೆಣಸು ತಿನ್ನುತ್ತ ಸಕಲ ಭೋಗಗಳನ್ನೂ

ಪರಿತ್ಯಜಿಸಿ ಅಯೋಧ್ಯೆಯಿಂದ ದೂರದಲ್ಲಿರುವ ನಂದಿಗ್ರಾಮದಲ್ಲಿದ್ದೇ ಆಡಳಿತ ವನ್ನು ನಡೆಸುವೆನೆಂದು ಪ್ರತಿಜ್ಞೈಗೈದನು. ಶ್ರೀರಾಮನು ಬರುವವರೆಗೆ ಸಿಂಹಾಸನ ದಲ್ಲಿ ಅವನ ಪಾದುಕೆಗಳನ್ನಿರಿಸಿ ಅವುಗಳೇ ರಾಜ್ಯಾಂಗವನ್ನು ನೋಡಿಕೊಳ್ಳುತ್ತವೆ ಎಂಬ ಸದ್‌ಭಾವನೆಯೊಂದಿಗೆ ಶ್ರೀರಾಮನ ಪ್ರತಿನಿಧಿಯಾಗಿ ರಾಜ್ಯವನ್ನು ಪಾಲಿಸುವೆನೆಂದನು. ॥ ೮ ॥

**ಜಯಂತನೊಡನೆ ಕುರಂಗ**

**ಸಮಸ್ತಪೌರಾನುಗತೇಽನುಜೇ ಗತೇ**
**ಸ ಚಿತ್ರಕೂಟೇ ಭಗವಾನುವಾಸ ಹ ।**
**ಅಥಾಜಗಾಮೇಂದ್ರಸುತೋಽಪಿ ವಾಯಸೋ**
**ಮಹಾಸುರೇಣಾತ್ಮಗತೇನ ಚೋದಿತಃ ॥ ೯ ॥**

**ಪದಚ್ಛೇದ : ಸಮಸ್ತಪೌರಾನುಗತೇ ಅನುಜೇ ಗತೇ ಸಃ ಚಿತ್ರಕೂಟೇ ಭಗವಾನ್ ಉವಾಸ ಹ । ಅಥ ಆಜಗಾಮ ಇಂದ್ರಸುತಃ ಅಪಿ ವಾಯಸಃ ಮಹಾಸುರೇಣ ಆತ್ಮಗತೇನ ಚೋದಿತಃ ॥**

**ಅರ್ಥ :- ಸಮಸ್ತಪೌರಾನುಗತೇ** ಎಲ್ಲಾ ಅಯೋಧ್ಯಾ ಪಟ್ಟಣಿಗರಿಂದ ಕೂಡಿದ, **ಅನುಜೇ** ತಮ್ಮನಾದ ಭರತನು, **ಗತೇ** ಹಿಂದಿರುಗಲು, **ಸಃ ಭಗವಾನ್** ಆ ಷಡ್ಗುಣೈಶ್ವರ್ಯ ಸಂಪನ್ನನಾದ ರಾಮಚಂದ್ರನು, **ಚಿತ್ರಕೂಟೇ** ಚಿತ್ರಕೂಟ ಪರ್ವತದಲ್ಲಿ, **ಉವಾಸ ಹ** ವಾಸಮಾಡಿದನು, **ಅಥ** ಅನಂತರ, **ಆತ್ಮಗತೇನ** ತನ್ನಲ್ಲಿ ಪ್ರವಿಷ್ಟನಾದ, **ಮಹಾಸುರೇಣ** ಕುರಂಗನೆಂಬ ಅಸುರನಿಂದ, **ಚೋದಿತಃ** ಪ್ರೇರಿಸಲ್ಪಟ್ಟ, **ಇಂದ್ರಸುತೋಽಪಿ** ಇಂದ್ರನ ಮಗನಾದ ಜಯಂತನು, **ವಾಯಸಃ ಸನ್** ಕಾಗೆಯಾಗಿ, **ಆಜಗಾಮ** ಬಂದನು.

**ತಾತ್ಪರ್ಯ :-** ಪೌರ-ಜಾನಪದರೊಂದಿಗೆ ಭರತನು ಅಯೋಧ್ಯೆಗೆ ಮರಳಿದ ನಂತರ ಶ್ರೀರಾಮನು ಚಿತ್ರಕೂಟದಲ್ಲಿಯೇ ವಾಸಿಸಿದನು. ಆಗ 'ಕುರಂಗ' ಎಂಬ ಅಸುರನ ಪ್ರವೇಶದಿಂದ ಮಲಿನವಾದ ಮನಸ್ಸುಳ್ಳ ಇಂದ್ರಸುತ ನಾದ ಜಯಂತನು ಸೀತಾರಾಮರ ಬಳಿ ಆಗಮಿಸಿದನು ॥ ೯ ॥

**ಸ ಚಾಸುರಾವೇಶವಶಾದ್ರಮಾಸ್ತನೇ**
**ಯದಾ ವ್ಯಧಾತ್ ತುಂಡಮಥಾಭಿವೀಕ್ಷಿತಃ ।**

ಜನಾರ್ದನೇನಾಶು ತೃಣೇ ಪ್ರಯೋಜಿತೇ
ಚಚಾರ ತೇನ ಜ್ವಲತಾಽನುಯಾತಃ ॥ ೧೦ ॥

ಪದಚ್ಛೇದ : ಸಃ ಚ ಅಸುರಾವೇಶವಶಾತ್ ರಮಾಸ್ತನೇ ಯದಾ ವ್ಯಧಾತ್ ತುಂಡಮ್ ಅಥ ಅಭಿವೀಕ್ಷಿತಃ । ಜನಾರ್ದನೇನ ಆಶು ತೃಣೇ ಪ್ರಯೋಜಿತೇ ಚಚಾರ ತೇನ ಜ್ವಲತಾ ಅನುಯಾತಃ ॥

**ಅರ್ಥ** :- **ಸ ಚ** ಆ ಕಾಗೆಯ ರೂಪ ಧರಿಸಿದ ಜಯಂತನು, **ಅಸುರಾವೇಶವಶಾತ್** ಕುರಂಗ ನಾಮಕ ಅಸುರನ ಆವೇಶಬಲದಿಂದ, **ಯದಾ** ಯಾವಾಗ, **ರಮಾಸ್ತನೇ** ಸೀತಾದೇವಿಯ ಕುಚದ ಮೇಲೆ, **ತುಂಡಂ** ಕೊಕ್ಕನ್ನು **ವ್ಯಧಾತ್** ಇಟ್ಟನೋ, **ತದಾ** ಆಗ, **ಜನಾರ್ದನೇನ** ಶ್ರೀರಾಮನಿಂದ, **ಅಭಿವೀಕ್ಷಿತಃ** ಕಾಣಿಸಿ ಕೊಳ್ಳಲ್ಪಟ್ಟವನಾಗಿ **ಆಶು** ಕೂಡಲೇ, **ತೃಣೇ** (ಮಂತ್ರಿತವಾದ) ಹುಲ್ಲು **ಪ್ರಯೋಜಿತೇ ಸತಿ** ಬೀಸಲ್ಪಡುತ್ತಿರಲು, **ಜ್ವಲತಾ** ಅಗ್ನಿಯಂತೆ ಜ್ವಲಿಸುವ, **ತೇನ** ಆ ತೃಣದಿಂದ, **ಅನುಯಾತಃ ಸನ್** ಹಿಂಬಾಲಿಸಲ್ಪಟ್ಟವನಾಗಿ, **ಚಚಾರ** ಲೋಕಾಂತರಗಳಲ್ಲಿ ಸಂಚರಿಸಿದನು.

**ತಾತ್ಪರ್ಯ** :- ಅಸುರಾವೇಶದ ಪ್ರಭಾವದಿಂದ ಜಯಂತನು ಸೀತಾ ಮಾತೆಯ ಸ್ತನದ ಮೇಲೆ ತನ್ನ ಕೊಕ್ಕಿನಿಂದ ಗಾಯವನ್ನು ಮಾಡಿದನು. ಸೀತೆಯ ತೊಡೆಯ ಮೇಲೆ ವಿಶ್ರಮಿಸಿದ ಶ್ರೀರಾಮನು ಕೂಡಲೇ ಇದನ್ನು ಕಂಡು ಅವನ ಮೇಲೆ ಬ್ರಹ್ಮಾಸ್ತ್ರವನ್ನು ಅಭಿಮಂತ್ರಿಸಿ ಹುಲ್ಲುಕಡ್ಡಿಯನ್ನು ಪ್ರಯೋಗಿಸಿದನು. ಅದು ಅವನನ್ನು ಬೆಂಕಿಯುಗುಳುತ್ತ ಹಿಂಬಾಲಿಸಿತು. ಆಗ ಜಯಂತ ಧಾವಿಸತೊಡಗಿದ. ॥ ೧೦ ॥

ಸ್ವಯಂಭುಶರ್ವೇಂದ್ರಮುಖಾನ್ ಸುರೇಶ್ವರಾನ್
ಜಿಜೀವಿಷುಸ್ತಾನ್ ಶರಣಂ ಗತೋಽಪಿ ।
ಬಹಿಷ್ಕೃತಸ್ತೈರ್ಹರಿಭಕ್ತಿಭಾವತೋ
ಹ್ಯಲಂಘ್ಯಶಕ್ತ್ಯಾ ಪರಮಸ್ಯ ಚಾಕ್ಷಮೈಃ ॥ ೧೧ ॥

ಪದಚ್ಛೇದ : ಸ್ವಯಂಭುಶರ್ವೇಂದ್ರಮುಖಾನ್ ಸುರೇಶ್ವರಾನ್ ಜಿಜೀವಿಷುಃ ತಾನ್ ಶರಣಂ ಗತಃ ಅಪಿ । ಬಹಿಷ್ಕೃತಃ ತೈಃ ಹರಿಭಕ್ತಿಭಾವತಃ ಹಿ ಅಲಂಘ್ಯಶಕ್ತ್ಯಾ ಪರಮಸ್ಯ ಚ ಅಕ್ಷಮೈಃ ॥

**ಅರ್ಥ :- ತಾನ್** ಹರಿಭಕ್ತ್ಯಾದಿಸದ್ಗುಣಗಳಿಂದ ಪ್ರಸಿದ್ಧರಾದ, **ಸ್ವಯಂಭು ಶರ್ವೇಂದ್ರಮುಖಾನ್** ಬ್ರಹ್ಮ ರುದ್ರ ಇಂದ್ರನೇ ಮೊದಲಾಗಿ ಉಳ್ಳ, **ಸುರೇಶ್ವರಾನ್** ದೇವಶ್ರೇಷ್ಠರನ್ನು, **ಜಿಜೀವಿಷುಃ** ಬದುಕಲು ಇಚ್ಛೆ ಉಳ್ಳ ಕಾಗೆಯ ರೂಪಿಯಾದ ಜಯಂತನು, **ಶರಣಂ ಗತೋಽಪಿ** ಮೊರೆ ಹೊಂದಿದವನಾದರೂ ಕೂಡ, **ಹರಿಭಕ್ತಿಭಾವತಃ** ಹರಿಭಕ್ತನಾದ್ದರಿಂದ, **ಪರಮಸ್ಯ** ಸರ್ವೋತ್ತಮನಾದ ರಾಮನ, **ಅಲಂಘ್ಯಶಕ್ತ್ಯಾ** ಅತಿಕ್ರಮಿಸಲಶಕ್ಯವಾದ ಸಾಮರ್ಥ್ಯದ ಅರಿವಿನಿಂದ, **ಅಕ್ಷಮೈಃ** ಅಸಮರ್ಥರಾದ ಬ್ರಹ್ಮಾದಿಗಳಿಂದ, **ಬಹಿಷ್ಕೃತಃ** ನಿರಾಕರಿಸಲ್ಪಟ್ಟನು.

**ತಾತ್ಪರ್ಯ :** ಪ್ರಾಣಸಂರಕ್ಷಣೆಗಾಗಿ ಜಯಂತನು ಬ್ರಹ್ಮರುದ್ರಾದಿ ಪ್ರಧಾನ ದೇವತೆಗಳಿಗೆ ಶರಣಾದನು. ಆದರೆ ಶ್ರೀರಾಮನ ಅಮಿತವಿಕ್ರಮವನ್ನರಿತ ಹರಿಭಕ್ತರಾದ ಅವರು ಜಯಂತನಿಗೆ ರಕ್ಷಣೆ ನೀಡಲಿಲ್ಲ. ॥ ೧೧ ॥

**ಪುನಃ ಪ್ರಯಾತಃ ಶರಣಂ ರಘೂತ್ತಮಂ**
**ವಿಸರ್ಜಿತಸ್ತೇನ ನಿಹತ್ಯ ಚಾಸುರಮ್ ।**
**ತದಕ್ಷಿಗಂ ಸಾಕ್ಷಿಕಮಪ್ಯವಧ್ಯಂ**
**ಪ್ರಸಾದತಶ್ಚಂದ್ರವಿಭೂಷಣಸ್ಯ ॥ ೧೨ ॥**

ಪದಚ್ಛೇದ : ಪುನಃ ಪ್ರಯಾತಃ ಶರಣಂ ರಘೂತ್ತಮಂ ವಿಸರ್ಜಿತಃ ತೇನ ನಿಹತ್ಯ ಚ ಅಸುರಮ್ । ತದಕ್ಷಿಗಂ ಸಾಕ್ಷಿಕಂ ಅಪಿ ಅವಧ್ಯಂ ಪ್ರಸಾದತಃ ಚಂದ್ರವಿಭೂಷಣಸ್ಯ ॥

**ಅರ್ಥ :- ಪುನಃ** ಮತ್ತೆ, **ರಘೂತ್ತಮಂ** ಶ್ರೀರಾಮಚಂದ್ರನನ್ನು, **ಶರಣಂ** ಆಸರೆಯಾಗಿ, **ಪ್ರಯಾತಃ** ಹೊಂದಿದನು, **ಚಂದ್ರವಿಭೂಷಣಸ್ಯ** ಚಂದ್ರನು ಅಲಂಕಾರನಾಗಿ ಉಳ್ಳ ರುದ್ರನ, **ಪ್ರಸಾದತಃ** ಅನುಗ್ರಹ ರೂಪವಾದ ವರದಿಂದ, **ಅವಧ್ಯಮಪಿ** ಮರಣವಿಲ್ಲದ, **ತದಕ್ಷಿಗಂ** ಕಾಗೆಯ ಇಂದ್ರಿಯದಲ್ಲಿರತಕ್ಕ, **ಅಸುರಂ** ಕುರಂಗಾಸುರನನ್ನು, **ಸಾಕ್ಷಿಕಂ** ಆಸರೆಯಾದ ಚಕ್ಷುರಿಂದ್ರಿಯದ ಜೊತೆಗೆ, **ತೇನ** ಜ್ವಲಿಸುವ ಹುಲ್ಲಿನಿಂದ, **ನಿಹತ್ಯ** ಕೊಂದು, **ವಿಸರ್ಜಿತಃ** ಕಾಗೆಯ ರೂಪಿಯಾದ ಜಯಂತನು ಬಿಡಲ್ಪಟ್ಟನು.

**ತಾತ್ಪರ್ಯ :-** ಜಯಂತನು ಪರಿಹಾರ ಕಾಣದೇ ಶ್ರೀರಾಮನಿಗೇ ಶರಣಾದ. ಶಿವನ ವರದಿಂದ ಕಾಗೆಯ ಕಂಗಳಲ್ಲಿ ಸ್ಥಾನ ಪಡೆದು ಅವಧ್ಯನಾಗಿದ್ದ ಕುರಂಗಾಸುರನ್ನು ಕಾಗೆಯ ಒಂದು ಇಂದ್ರಿಯಶಕ್ತಿಯ ಜೊತೆಗೆ ಸಂಹರಿಸಿದ.

ಭಕ್ತನಾದ ತತ್ಕಾಲದಲ್ಲಿ ತಪ್ಪೆಸಗಿ ಭಕ್ತಿಯಿಂದ ಶರಣಾದ ಜಯಂತನನ್ನು ಬದುಕಿಸಿದ. ॥ ೧೨ ॥

### ಕುರಂಗ ಸಂಹಾರ

ಸ ವಾಯಸಾನಾಮಸುರೋಽಖಿಲಾನಾಂ
ವರಾದುಮೇಶಸ್ಯ ಬಭೂವ ಚಾಕ್ಷಿಗಃ ।
ನಿಪಾತಿತೋಽಸೌ ಸಹ ವಾಯಸಾಕ್ಷಿಭಿ-
ಸ್ತೃಣೇನ ರಾಮಸ್ಯ ಬಭೂವ ಭಸ್ಮಸಾತ್ ॥ ೧೩ ॥

ಪದಚ್ಛೇದ : ಸಃ ವಾಯಸಾನಾವ್ ಅಸುರಃ ಅಖಿಲಾನಾಂ ವರಾತ್ ಉಮೇಶಸ್ಯ ಬಭೂವ ಚ ಅಕ್ಷಿಗಃ । ನಿಪಾತಿತಃ ಅಸೌ ಸಹ ವಾಯಸಾಕ್ಷಿಭಿಃ ತೃಣೇನ ರಾಮಸ್ಯ ಬಭೂವ ಭಸ್ಮಸಾತ್ ॥

**ಅರ್ಥ** :- ಸಃ ಅಸುರಃ ಆ ಕುರಂಗನು, ಉಮೇಶಸ್ಯ ರುದ್ರನ, ವರಾತ್ ವರದಿಂದ, ಅಖಿಲಾನಾಂ ಎಲ್ಲಾ, ವಾಯಸಾನಾಂ ಕಾಗೆಗಳ, ಅಕ್ಷಿಗಃ ಕಣ್ಣಿನಲ್ಲಿರ ತಕ್ಕವನು, ಬಭೂವ ಆಗಿದ್ದನು, ರಾಮಸ್ಯ ಶ್ರೀರಾಮನ, ತೇನ ಮಂತ್ರಿತವಾದ ಆ ಹುಲ್ಲಿನಿಂದ, ವಾಯಸಾಕ್ಷಿಭಿಃ ಕಾಗೆಗಳ ಕಣ್ಣುಗಳಿಂದ, ಸಹ ಕೂಡಿಕೊಂಡು, ಅಸೌ ಈ ಅಸುರನು, ನಿಪಾತಿತಃ ಬೀಳಲ್ಪಟ್ಟನು, ತೇನ ಆ ಹುಲ್ಲಿನಿಂದ, ಭಸ್ಮಸಾತ್ ಭಸ್ಮವಾಗಿ, ಬಭೂವ ಆದನು.

**ತಾತ್ಪರ್ಯ** : ಕುರಂಗನೆಂಬ ಅಸುರ ರುದ್ರದೇವರ ವರಬಲದಿಂದ ಎಲ್ಲ ಕಾಗೆಗಳ ಕಂಗಳಲ್ಲಿ ನೆಲೆಸಿದ್ದ. ರಾಮನು ಪ್ರಯೋಗಿಸಿದ ಪ್ರಜ್ವಲಿಸುವ ಹುಲ್ಲು ಕಡ್ಡಿಯಿಂದ ಎಲ್ಲ ಕಾಗೆಗಳ ಒಂದು ಕಣ್ಣಿನೊಂದಿಗೆ ಭಸ್ಮನಾದ. ॥ ೧೩ ॥

### ದುಷ್ಟರಕ್ಷಕರಿಗೆ ತಪ್ಪದು ಶಿಕ್ಷೆ

ದದುರ್ಹಿ ತಸ್ಮೈ ವಿವರಂ ಬಲಾರ್ಥಿನೋ
ಯದ್ವಾಯಸಾಸ್ತೇನ ತದಕ್ಷಿಪಾತನಮ್ ।
ಕೃತಂ ರಮೇಶೇನ ತದೇಕನೇತ್ರಾ
ಬಭೂವುರನ್ಯೇಽಪಿ ತು ವಾಯಸಾಃ ಸದಾ ॥ ೧೪ ॥

ಪದಚ್ಛೇದ : ದದುಃ ಹಿ ತಸ್ಮೈ ವಿವರಂ ಬಲಾರ್ಥಿನಃ ಯತ್ ವಾಯಸಾಃ ತೇನ ತತ್ ಅಕ್ಷಿಪಾತನಮ್ । ಕೃತಂ ರಮೇಶೇನ ತದೇಕನೇತ್ರಾಃ ಬಭೂವುಃ ಅನ್ಯೇ ಅಪಿ ತು ವಾಯಸಾಃ ಸದಾ ॥

**ಅರ್ಥ :- ಯತ್** ಯಾವ ಕಾರಣದಿಂದ, **ವಾಯಸಾಃ** ಕಾಗೆಗಳು, **ತಸ್ಮೈ** ರುದ್ರನ ವರದಿಂದ ಎಲ್ಲಾ ಕಾಗೆಗಳ ಕಣ್ಣುಗಳಲ್ಲಿ ಪ್ರವೇಶಿಸಿರತಕ್ಕ ಕುರಂಗ ನಿಗೋಸ್ಕರ, **ಬಲಾರ್ಥಿನಃ** ಬಲಿಷ್ಠನಾದ ಅಸುರನು ನಮ್ಮ ಕಣ್ಣುಗಳಲ್ಲಿ ಇದ್ದರೆ ನಮಗೆ ಬಲ ಬರುವುದು ಎಂಬುದಾಗಿ, **ವಿವರಂ** ಅವಕಾಶವನ್ನು, **ದದುಃ** ಮನಃಪೂರ್ವಕವಾಗಿ ಕೊಟ್ಟವೋ, **ತೇನ** ಆ ಕಾರಣದಿಂದ, **ತದಕ್ಷಿಪಾತನಂ** ಆ ಕಾಗೆಗಳ ಕಣ್ಣಿನ ನಾಶವು, **ರಮೇಶೇನ** ಲಕ್ಷ್ಮೀಪತಿಯಾದ ಶ್ರೀರಾಮನಿಂದ, **ಕೃತಂ** ಮಾಡಲ್ಪಟ್ಟಿತು, **ತತ್** ಆ ಕಾರಣದಿಂದ, **ಅನ್ಯೇ** ನಂತರ ಕಾಲದ, **ವಾಯಸಾ ಅಪಿ** ಕಾಗೆಗಳೂ ಕೂಡ, **ಸದಾ** ಯಾವಾಗಲೂ, **ಏಕನೇತ್ರಾಃ** ಒಂದು ಕಣ್ಣು ಉಳ್ಳವುಗಳು, **ಬಭೂವುಃ** ಆದವು.

**ತಾತ್ಪರ್ಯ :-** ಬಲಿಷ್ಠನಾದ ಕುರಂಗಾಸುರ ನಮ್ಮ ಕಣ್ಣಿನಲ್ಲಿದ್ದರೆ ನಮ್ಮನ್ನು ಇತರ ಪ್ರಾಣಿಗಳು ಹೆದರಿಸಲಾರವೆಂಬ ದೃಷ್ಟಿಯಿಂದ ಅಸುರನಿಗೆ ಮನಃ ಪೂರ್ವಕವಾಗಿ ಎಲ್ಲ ಕಾಗೆಗಳು ಆಶ್ರಯ ನೀಡಿದವು. ಆದ್ದರಿಂದಲೇ ಅವುಗಳ ಒಂದು ಕಣ್ಣು ಶ್ರೀರಾಮ ಕಳೆದ. ಅನಂತರ ಎಲ್ಲ ಕಾಗೆಗಳೂ ಒಂದೇ ಕಣ್ಣಿನಿಂದ ಕೂಡಿವೆ. (ಇದರಿಂದ ಅಸುರರಿಗೆ ಆಶ್ರಯ ನೀಡುವವರೂ ಶಿಕ್ಷಾರ್ಹರಾಗುವ ರೆಂಬ ತತ್ವವನ್ನು ಶ್ರೀರಾಮ ಜ್ಞಾಪಿಸಿದ).

**ವಿಶೇಷ :-** ಕಾಗೆಗಳಿಗೆ ಎರಡು ಕಣ್ಣು ಗುಡ್ಡೆಗಳಿವೆ. ಅವುಗಳಲ್ಲಿ ಯಾವ ಅಕ್ಷಿಪಟಲ (ಚಕ್ಷುರಿಂದ್ರಿಯ)ದಿಂದ ಅವುಗಳು ನೋಡಬಯಸುವವೋ ಆ ಒಂದೇ ಕಣ್ಣಿನಿಂದ ನೋಡುತ್ತವೆ. ಏಕಕಾಲದಲ್ಲಿ ಎರಡೂ ಕಣ್ಣು ಗುಡ್ಡೆಗಳಿಂದ ನೋಡಲಾರವು. ಎಡ-ಬಲ ಗುಡ್ಡೆಗಳಲ್ಲಿ ಒಂದರಿಂದ ಮಾತ್ರವೇ ಸಂದರ್ಭೋಚಿತ ವಾಗಿ ನೋಡಬಲ್ಲವು. ಶ್ರೀರಾಮನು ಕಣ್ಣುಗುಡ್ಡೆಯೊಂದನ್ನು ಪೂರ್ಣವಾಗಿ ನಾಶಪಡಿಸಿದನೆಂದು ಪ್ರಕೃತಾರ್ಥವಲ್ಲ. ॥ ೧೪ ॥

**ಭವಿಷ್ಯತಾಮಪ್ಯಥ ಯಾವದೇವ**
**ದ್ವಿನೇತ್ರತಾ ಕಾಕಕುಲೋದ್ಭವಾನಾಮ್ ।**
**ತಾವತ್ ತದಕ್ಷ್ಯಸ್ಯ ಕುರಂಗನಾಮ್ನಃ**
**ಶಿವೇನ ದತ್ತಂ ದಿತಿಜಸ್ಯ ಚಾಕ್ಷಯಮ್ ॥ ೧೫ ॥**

ಪದಚ್ಛೇದ : ಭವಿಷ್ಯತಾಮ್ ಅಪಿ ಅಥ ಯಾವತ್ ಏವ ದ್ವಿನೇತ್ರತಾ ಕಾಕಕುಲೋ ದ್ಭವಾನಾಮ್ । ತಾವತ್ ತದಕ್ಷಿ ಅಸ್ಯ ಕುರಂಗನಾಮ್ನಃ ಶಿವೇನ ದತ್ತಂ ದಿತಿಜಸ್ಯ ಚ ಅಕ್ಷಯಮ್ ॥

**ಅರ್ಥ** :- **ಅಥ** ವರ್ತಮಾನಕಾಲಾನಂತರ, **ಭವಿಷ್ಯತಾಂ** ಉತ್ಪತ್ತಿಯನ್ನು ಹೊಂದುವ, **ಕಾಕಕುಲೋದ್ಭವಾನಾಂ** ಈಗ ಇರತಕ್ಕ ಕಾಕಕುಲದಲ್ಲಿ ಉತ್ಪತ್ತಿಯುಳ್ಳ ಕಾಗೆಗಳಿಗೆ, **ಯಾವದೇವ ದ್ವಿನೇತ್ರತಾ** ಎಷ್ಟರತನಕ ಎರಡು ಕಣ್ಣುಗಳಿರುವವೋ, **ತಾವತ್** ಅಷ್ಟರತನಕ, **ಅಕ್ಷಯಂ** ನಾಶರಹಿತವಾದ, **ತದಕ್ಷಿ** ಆ ಕಾಗೆಗಳ ಕಣ್ಣು **ಅಸ್ಯ** ಈ, **ಕುರಂಗನಾಮ್ನಃ** ಕುರಂಗನೆಂದು ಹೆಸರುಳ್ಳ, **ದಿತಿಜಸ್ಯ** ಅಸುರನಿಗೆ, **ಶಿವೇನ** ರುದ್ರನಿಂದ, **ದತ್ತಂ** ಸ್ಥಾನವಾಗಿ ಕೊಡಲ್ಪಟ್ಟಿದೆ.

**ತಾತ್ಪರ್ಯ** :- ಕಾಗೆಗಳ ಕುಲದಲ್ಲಿ ಜನಿಸುವ ಮುಂದಿನ ಎಲ್ಲ ಕಾಲದ ಕಾಕಗಳಿಗೆ ಎಲ್ಲಿಯವರೆಗೆ ಎರಡು ಕಣ್ಣುಗಳಿರುವವೋ ಅಲ್ಲಿಯ ತನಕ ಅಲ್ಲಿ ಆಸರೆ ಪಡೆದ ಕುರಂಗಾಸುರನಿಗೆ ಮರಣಬರುವುದು ಬೇಡವೆಂದು ಭಗವಾನ್ ಶಂಕರ ನೀಡಿದ ವರವಾಗಿತ್ತು. ॥ ೧೫ ॥

**ಅತಃ ಪುನರ್ಭಾವಮಮುಷ್ಯ ಹಿನ್ವನ್**
**ಭವಿಷ್ಯತಶ್ಚೈಕದೃಶಶ್ಚಕಾರ ।**
**ಸ ವಾಯಸಾನ್ ರಾಘವ ಆದಿಪೂರುಷ-**
**ಸ್ತತೋ ಯಯೌ ಶಕ್ರಸುತಸ್ತದಾಜ್ಞಯಾ ॥ ೧೬ ॥**

ಪದಚ್ಛೇದ : ಅತಃ ಪುನರ್ಭಾವಂ ಅಮುಷ್ಯ ಹಿನ್ವನ್ ಭವಿಷ್ಯತಃ ಚ ಏಕದೃಶಃ ಚಕಾರ । ಸಃ ವಾಯಸಾನ್ ರಾಘವಃ ಆದಿಪೂರುಷಃ ತತಃ ಯಯೌ ಶಕ್ರಸುತಃ ತದಾಜ್ಞಯಾ ॥

**ಅರ್ಥ** :- **ಅತಃ** ಆದ್ದರಿಂದ (ವರ ಸಾಮರ್ಥ್ಯದಿಂದ), **ಅಮುಷ್ಯ** ಈ ಕುರಂಗನಿಗೆ, **ಪುನರ್ಭಾವಂ** ಒಮ್ಮೆ ನಾಶ ಹೊಂದಿದವನಿಗೆ ಪುನರ್ಜನ್ಮವನ್ನು **ಹಿನ್ವನ್** ಪರಿಹರಿಸತಕ್ಕ, **ಆದಿಪೂರುಷಃ** ಆದಿ ಪುರುಷನಾದ, **ಸ ರಾಘವಃ** ಆ ರಾಮಚಂದ್ರನು, **ಭವಿಷ್ಯತಃ** ಮುಂದೆ ಹುಟ್ಟುವ, **ವಾಯಸಾನ್** ಕಾಗೆಗಳನ್ನು **ಏಕದೃಶಃ** ಒಂದು ಕಣ್ಣುಳ್ಳವುಗಳನ್ನಾಗಿ, **ಚಕಾರ** ಮಾಡಿದನು, **ತತಃ** ಪಶ್ಚಾತ್ತಾಪ ಪ್ರಾಯಶ್ಚಿತ್ತಗಳಿಂದ ಶುದ್ಧನಾದ, **ಶಕ್ರಸುತಃ** ಇಂದ್ರನ ಮಗನಾದ ಜಯಂತನು, **ತದಾಜ್ಞಯಾ** ರಾಮನ ಅಪ್ಪಣೆಯಿಂದ, **ಯಯೌ** ತನ್ನ ಲೋಕಕ್ಕೆ ಪಯಣಿಸಿದನು.

**ತಾತ್ಪರ್ಯ** :- ಕುರಂಗಾಸುರ ಮತ್ತೆ ಹುಟ್ಟುವುದನ್ನು ತಡೆಯಲೋಸುಗವೇ ಶ್ರೀರಾಮ ಮುಂದೆ ಹುಟ್ಟಲಿರುವ ಕಾಗೆಗಳನ್ನು ಒಕ್ಕಣ್ಣವಾಗಿಸಿದ,

ಅನಂತರ ಭಕ್ತಿಯಿಂದ ಶುದ್ಧನಾದ ಜಯಂತ, ಶ್ರೀರಾಮನ ಅಪ್ಪಣೆ ಪಡೆದು ಸ್ವರ್ಲೋಕಕ್ಕೆ ತೆರಳಿದ. ॥ ೧೬ ॥

**ದಂಡಕವನ ಪ್ರವೇಶ**

**ರಾಮೋಽಥ ದಂಡಕವನಂ ಮುನಿವರ್ಯನೀತೋ**
**ಲೋಕಾನನೇಕಶ ಉದಾರಬಲೈರ್ನಿರಸ್ತಾನ್ ।**
**ಶ್ರುತ್ವಾ ಖರಪ್ರಭೃತಿಭಿರ್ವರತೋ ಹರಸ್ಯ**
**ಸರ್ವೈರವಧ್ಯತನುಭಿಃ ಪ್ರಯಯೌ ಸಭಾರ್ಯಃ ॥ ೧೭ ॥**

ಪದಚ್ಛೇದ : ರಾಮಃ ಅಥ ದಂಡಕವನಂ ಮುನಿವರ್ಯನೀತಃ **ಲೋಕಾನ್ ಅನೇಕಶಃ ಉದಾರಬಲೈಃ ನಿರಸ್ತಾನ್ । ಶ್ರುತ್ವಾ ಖರಪ್ರಭೃತಿಭಿಃ ವರತಃ ಹರಸ್ಯ ಸರ್ವೈಃ ಅವಧ್ಯತನುಭಿಃ ಪ್ರಯಯೌ ಸಭಾರ್ಯಃ ॥**

**ಅರ್ಥ** :- **ಅಥ** ಕುರಂಗಾಸುರನ ಸಂಹಾರಾನಂತರ, **ಮುನಿವರ್ಯನೀತಃ** ದಂಡಕಾರಣ್ಯದಲ್ಲಿರುವ ಮುನಿಶ್ರೇಷ್ಠರಿಂದ ಕರೆದೊಯ್ಯಲ್ಪಟ್ಟ, **ರಾಮಃ** ಶ್ರೀರಾಮನು, **ಹರಸ್ಯ** ರುದ್ರನ, **ವರತಃ** ವರದಿಂದ, **ಸರ್ವೈಃ** ಎಲ್ಲರಿಂದಲೂ, **ಅವಧ್ಯತನುಭಿಃ** ಕೊಲ್ಲಲಾಗದ ಶರೀರವುಳ್ಳ, **ಉದಾರಬಲೈಃ** ಅಪಾರ ಸಾಮರ್ಥ್ಯವುಳ್ಳ, **ಖರಪ್ರಭೃತಿಭಿಃ** ಖರಾಸುರನೇ ಮೊದಲಾಗಿ ಉಳ್ಳವರಿಂದ, **ಅನೇಕಶಃ ಲೋಕಾನ್** ಎಲ್ಲಾ ಜನರನ್ನು, **ನಿರಸ್ತಾನ್** ಬಾಧಿಸಲ್ಪಟ್ಟವರನ್ನಾಗಿ, **ಶ್ರುತ್ವಾ** ಕೇಳಿ, **ಸಭಾರ್ಯಃ** ಸೀತೆಯಿಂದ ಕೂಡಿದವನಾಗಿ, **ದಂಡಕವನಂ** ದಂಡಕಾರಣ್ಯವನ್ನು, **ಪ್ರಯಯೌ** ಹೋದನು.

**ತಾತ್ಪರ್ಯ** :- ಅನಂತರ ರುದ್ರದೇವರ ವರಬಲದಿಂದ ಅವಧ್ಯರಾದ ಮಹಾ ಬಲಶಾಲಿಗಳಾದ ಖರ-ದೂಷಣ ಮೊದಲಾದ ರಕ್ಕಸರು ದಂಡಕಾರಣ್ಯ ದಲ್ಲಿ ಸುಜನರನ್ನು ಹಿಂಸಿಸುತ್ತಿರುವುದನ್ನು ರಾಮ ಕೇಳಿದ. ಅವರನ್ನು ಸಂಹರಿಸ ಲೋಸುಗ ಸೀತಾಸಹಿತನಾಗಿ ಮುನಿಗಳಿಂದ ತೋರಿದ ಮಾರ್ಗಾನುಸಾರವಾಗಿ ರಕ್ಕಸರ ತಾಣವಾದ ದಂಡಕಾರಣ್ಯ ಪ್ರದೇಶದೆಡೆಗೆ ಪಯಣ ಬೆಳೆಸಿದ. ॥ ೧೭ ॥

**ಶರಭಂಗನಿಗೆ ನಿಜಪದ**

**ಆಸೀಚ್ಚ ತತ್ರ ಶರಭಂಗ ಇತಿ ಸ್ಮ ಜೀರ್ಣೋ**
**ಲೋಕಂ ಹರೇರ್ಜಿಗಮಿಷುರ್ಮುನಿರುಗ್ರತೇಜಾಃ ।**

ತೇನಾಽದರೋಪಹೃತಸಾರ್ಘ್ಯಸಪರ್ಯಯಾ ಸ
ಪ್ರೀತೋ ದದೌ ನಿಜಪದಂ ಪರಮಂ ರಮೇಶಃ ॥ ೧೮ ॥

ಪದಚ್ಛೇದ : ಆಸೀತ್ ಚ ತತ್ರ ಶರಭಂಗಃ ಇತಿ ಸ್ಮ ಜೀರ್ಣಃ ಲೋಕಂ ಹರೇಃ ಜಿಗಮಿಷುಃ ಮುನಿಃ ಉಗ್ರತೇಜಾಃ । ತೇನ ಆದರೋಪಹೃತ ಸಾರ್ಘ್ಯಸಪರ್ಯಯಾ ಸಃ ಪ್ರೀತಃ ದದೌ ನಿಜಪದಂ ಪರಮಂ ರಮೇಶಃ ॥

**ಅರ್ಥ** :- **ತತ್ರ** ಆ ದಂಡಕಾರಣ್ಯದಲ್ಲಿ, **ಹರೇಃ ಲೋಕಂ ಜಿಗಮಿಷುಃ** ಪರಮಾತ್ಮನ ಲೋಕವನ್ನು ಹೊಂದುವ ಇಚ್ಛೆಯುಳ್ಳ, **ಜೀರ್ಣಃ** ವಾರ್ಧಕ್ಯದಿಂದ ಕರ್ಮ ಮಾಡಲು ಅಶಕ್ತನಾದ, **ಉಗ್ರತೇಜಾಃ** ಅತ್ಯಂತ ತೇಜಸ್ವಿಯಾದ, **ಶರಭಂಗ ಇತಿ** ಶರಭಂಗನೆಂಬ, **ಮುನಿಃ** ಮುನಿಯು, **ಆಸೀತ್** ಇದ್ದನು, **ತೇನ** ಆ ಶರಭಂಗನಿಂದ, **ಆದರೋಪಹೃತಸಾರ್ಘ್ಯಸಪರ್ಯಯಾ** ಭಕ್ತಿಯಿಂದ ತರಲ್ಪಟ್ಟ ಅರ್ಘ್ಯಾದ್ಯುಪಚಾರಗಳಿಂದ ಕೂಡಿದ ಪೂಜೆಯಿಂದ, **ಪ್ರೀತಃ** ಸಂತುಷ್ಟನಾದ, **ರಮೇಶಃ** ಲಕ್ಷ್ಮೀಪತಿಯಾದ, **ಸಃ** ಆ ರಾಮಚಂದ್ರನು, **ಪರಮಂ** ಉತ್ತಮವಾದ, **ನಿಜಪದಂ** ತನ್ನ ಸ್ಥಾನವಾದ ವೈಕುಂಠವನ್ನು, **ದದೌ** ಕೊಟ್ಟನು.

**ತಾತ್ಪರ್ಯ** :- ಮಾರ್ಗಮಧ್ಯದಲ್ಲಿ ತಪಸ್ಸಿಗೆ ತೊಡಗಿದ್ದ ಮಹಾತೇಜಸ್ವಿಯಾದ ಶರಭಂಗಮುನಿಯ ಆಶ್ರಮಕ್ಕೆ ಶ್ರೀರಾಮ ಪ್ರವೇಶಿಸಿದ. ಮುಪ್ಪಿನಿಂದ ಜರ್ಝರಿತನಾದ ಮುನಿ ಶ್ರೀರಾಮನ ಪೂಜೆ ನೆರವೇರಿಸಲು ಜೀವ ಧರಿಸಿದ್ದ. ಅವನಿಂದ ಪೂಜೆ ಸ್ವೀಕರಿಸಿದ ಶ್ರೀರಾಮ; ಅವನನ್ನು ತನ್ನ ಲೋಕಕ್ಕೆ ಕಳುಹಿದ. ॥ ೧೮ ॥

ಧರ್ಮೋ ಯತೋಽಸ್ಯ ವನಗಸ್ಯ ನಿತಾಂತಶಕ್ತಿ-
ಹ್ರಾಸೇ ಸ್ವಧರ್ಮಕರಣಸ್ಯ ಹುತಾಶನಾದೌ ।
ದೇಹಾತ್ಯಯಃ ಸ ತತ ಏವ ತನುಂ ನಿಜಾಗ್ನೌ
ಸಂತ್ಯಜ್ಯ ರಾಮಪುರತಃ ಪ್ರಯಯೌ ಪರೇಶಮ್ ॥ ೧೯ ॥

ಪದಚ್ಛೇದ : ಧರ್ಮಃ ಯತಃ ಅಸ್ಯ ವನಗಸ್ಯ ನಿತಾಂತಶಕ್ತಿಹ್ರಾಸೇ ಸ್ವಧರ್ಮಕರಣಸ್ಯ ಹುತಾಶನಾದೌ । ದೇಹಾತ್ಯಯಃ ಸಃ ತತಃ ಏವ ತನುಂ ನಿಜಾಗ್ನೌ ಸಂತ್ಯಜ್ಯ ರಾಮಪುರತಃ, ಪ್ರಯಯೌ ಪರೇಶಮ್ ॥

**ಅರ್ಥ :- ಯತಃ** ಯಾವ ಕಾರಣದಿಂದ, **ವನಗಸ್ಯ** ಅರಣ್ಯದಲ್ಲಿರುವವನಿಗೆ, **ಸ್ವಧರ್ಮಕರಣಸ್ಯ** ತನ್ನ ವರ್ಣಾಶ್ರಮೋಚಿತ ಧರ್ಮಾಚರಣೆಯ ವಿಷಯದಲ್ಲಿ **ನಿತಾಂತಶಕ್ತಿಹ್ರಾಸೇ** ಸರ್ವಪ್ರಕಾರದಿಂದಲೂ ಕರ್ಮ ಮಾಡಲು ಸಾಮರ್ಥ್ಯವು ಪೂರ್ಣವಾಗಿ ಕುಗ್ಗಿದಾಗ, **ಹುತಾಶನಾದೌ** ಅಗ್ನಿ ಜಲ ಮೊದಲಾದವುಗಳಲ್ಲಿ, **ದೇಹಾತ್ಯಯಃ** ಶರೀರದ ತ್ಯಾಗವು, **ಸತತಃ** ನಿತ್ಯವಾದ, **ಧರ್ಮ ಏವ** ಧರ್ಮವೇ, **ಅತಃ** ಆ ಕಾರಣದಿಂದ, **ವನಗಸ್ಯ ಅಸ್ಯ** ವಾನಪ್ರಸ್ಥಾಶ್ರಮದಲ್ಲಿರುವ ಶರಭಂಗನಿಗೆ, **ಸಃ ಧರ್ಮ ಏವ** ಧರ್ಮವೇ ಆಗಿದೆ, **ತತ ಏವ** ಆದುದರಿಂದಲೇ, **ನಿಜಾಗ್ನೌ** ತನ್ನ ಆಹಿತಾಗ್ನಿಯಲ್ಲಿ, **ರಾಮಸ್ಯ** ರಾಮನ, **ಪುರತಃ** ಮುಂಭಾಗದಲ್ಲಿ, **ತನುಂ** ಶರೀರವನ್ನು, **ಸಂತ್ಯಜ್ಯ** ಹರಿಸ್ಮರಣಪೂರ್ವಕ ಸಮೀಚಿನ ಜ್ಞಾನದಿಂದ ಬಿಟ್ಟು **ರಮೇಶಂ** ಲಕ್ಷ್ಮೀಪತಿಯಾದ ಹರಿಯನ್ನು **ಪ್ರಯಯೌ** ಹೊಂದಿದನು.

**ತಾತ್ಪರ್ಯ :-** ವೇದೋಕ್ತಕರ್ಮಾನುಷ್ಠಾನವನ್ನು ಅಲ್ಪ ಪ್ರಮಾಣದಲ್ಲೂ ಆಚರಿಸಲಾಗದಷ್ಟು ನಿಶ್ಶಕ್ತಿಯಾದಾಗ ಅಗ್ನಿ ಮೊದಲಾದವುಗಳಲ್ಲಿ ವಾನಪ್ರಸ್ಥಾಶ್ರಮಿಯು ದೇಹ ಬಿಡಬಹುದು. ಈ ಧರ್ಮಸೂಕ್ಷ್ಮವನ್ನು ಅರಿತ ಶರಭಂಗನು ಶ್ರೀರಾಮನ ಸನಿಹದಲ್ಲಿ ಅವನ ಅನುಮತಿ ಪಡೆದು ತಾನು ರಕ್ಷಿಸಿಕೊಂಡ ಆಹಿತಾಗ್ನಿಯಲ್ಲಿ ದೇಹವನ್ನು ತೊರೆದು ಹರಿಪದ ಸೇರಿದನು.

**ವಿಶೇಷಾಂಶ :-** ವಾನಪ್ರಸ್ಥ ಮಾತ್ರವಲ್ಲದೇ ಸರ್ವವರ್ಣದವರೂ ಸರ್ವಾಶ್ರಮಿಗಳೂ, ಶರೀರವು ವೇದೋಕ್ತ ಕರ್ಮವನ್ನು ಮಾಡುವ ಸಾಮರ್ಥ್ಯ ಕಳೆದುಕೊಂಡಾಗ, ಶರೀರವನ್ನು ಪುಣ್ಯದಾಯಕ ಸ್ಥಳದಲ್ಲಿ ತೊರೆಯಬಹುದೆಂದು ಸ್ಮೃತಿಗ್ರಂಥಗಳು ಅನುಮೋದನೆ ನೀಡಿದ್ದಾವೆ.

**'ದುಶ್ಚಿಕಿತ್ಸೈರ್ಮಹಾರೋಗೈಃ ಪೀಡಿತಸ್ತು ಪುಮಾನಪಿ ।**
**ಅಸಾಧ್ಯವ್ಯಾಧಿನಾ ಯುಕ್ತಃ ಸ್ವವ್ಯಾಪಾರಾಕ್ಷಮಃ ಪುಮಾನ್ ॥**

**ಪ್ರವಿಶೇತ್ ಜ್ವಲನಂ ದೀಪ್ತಂ ಕರೋತ್ಯನಶನಂ ತಥಾ ।**
**ಅಗಾಧತೋಯರಾಶಿಂ ಚ ಭೃಗೋಃ ಪತನಮೇವ ವಾ ॥**

**ಗಚ್ಛೇತ್ ಮಹಾಪಥಂ ವಾಪಿ ತುಷಾರಗಿರಿಕಂಧರಾತ್ ।**
**ಪ್ರಯಾಗವಟಶಾಖಾಗ್ರಾದ್ ದೇಹತ್ಯಾಗಂ ಕರೋತಿ ವಾ ॥**

**ಉತ್ತಮಾನ್ ಪ್ರಾಪ್ನುಯಾಲ್ಲೋಕಾನ್ನಾತ್ಮಘಾತೀ ಭವೇತ್ ಕ್ವಚಿತ್ ।**
**ಮಹಾಪಾಪಕ್ಷಯಾತ್ ಸ್ವರ್ಗೇ ದಿವ್ಯಾನ್ ಭೋಗಾನ್ ಸಮಶ್ನುತೇ ॥**

**ಏತೇಷಾಮಧಿಕಾರೋಽಸ್ತಿ ಸರ್ವೇಷಾಮೇಷು ಸರ್ವಥಾ ।**
**ನರಾಣಾಮಥ ನಾರೀಣಾಂ ಸರ್ವವರ್ಣೇಷು ಸರ್ವದಾ ॥'**

ಅತಿವಾರ್ಧಕ್ಯ ಅಥವಾ ಮಹಾರೋಗಗಳಿಂದ ಸಂತಪ್ತನಾದವನು, ವೇದೋಕ್ತ ಕರ್ಮಾಶಕ್ತನು ಉರಿವ ಬೆಂಕಿಯಲ್ಲಿ ದೇಹ ತೊರೆಯಬಹುದು. ಉಪವಾಸದಿಂದ ದೇಹ ತೊರೆಯಬಹುದು. ಅಗಾಧಜಲರಾಶಿಯಲ್ಲಿ (ಪ್ರಯಾಗದಲ್ಲಿ) ದೇಹ ಬಿಡಬಹುದು. ಭೃಗುಕಚ್ಛದಲ್ಲಿ ದೇಹ ತೊರೆಯಬಹುದು. ಹಿಮಾಲಯದಲ್ಲಿ ಮಹಾಪ್ರಸ್ಥಾನ ಕೈಗೊಳ್ಳಬಹುದು. ಪ್ರಯಾಗದ ವಟವೃಕ್ಷದಿಂದ ಕೆಳಗೆ ಧುಮುಕಿ ದೇಹ ಬಿಡಬಹುದು. ಇದಾವುದೂ ಆತ್ಮಹತ್ಯೆ ಎನಿಸದು. ಇದರಿಂದ ಮಹಾಪಾಪಕ್ಷಯವಾಗಿ ಉತ್ತಮ ಲೋಕಪ್ರಾಪ್ತಿಯಾಗುವುದು. ಎಲ್ಲ ವರ್ಣ ಹಾಗೂ ಆಶ್ರಮಿಗಳಿಗೆ ಹೀಗೆ ದೇಹ ತೊರೆಯಲು ಅವಕಾಶವಿದೆ. ॥ ೧೯ ॥

ವಿರಾಧನಿಗೆ ಸದ್ಗತಿ

**ರಾಮೋಽಪಿ ತತ್ರ ದದೃಶೇ ಧನದಸ್ಯ ಶಾಪಾದ್**
**ಗಂಧರ್ವಮುರ್ವಶೀರತೇರಥ ಯಾತುಧಾನೀಮ್ ।**
**ಪ್ರಾಪ್ತಂ ದಶಾಂ ಸಪದಿ ತುಂಬುರುನಾಮಧೇಯಂ**
**ನಾಮ್ನಾ ವಿರಾಧಮಪಿ ಶರ್ವವರಾದವಧ್ಯಮ್ ॥ ೨೦ ॥**

ಪದಚ್ಛೇದ : ರಾಮಃ ಅಪಿ ತತ್ರ ದದೃಶೇ ಧನದಸ್ಯ ಶಾಪಾತ್ ಗಂಧರ್ವಮ್ ಉರ್ವಶೀರತೇಃ ಅಥ ಯಾತುಧಾನೀಮ್ । ಪ್ರಾಪ್ತಂ ದಶಾಂ ಸಪದಿ ತುಂಬುರು–ನಾಮಧೇಯಂ ನಾಮ್ನಾ ವಿರಾಧಮ್ ಅಪಿ ಶರ್ವವರಾತ್ ಅವಧ್ಯಮ್ ॥

**ಅರ್ಥ :- ಅಥ** ಅನಂತರದಲ್ಲಿ, **ರಾಮೋಪಿ** ರಾಮನಾದರೂ, **ತತ್ರ** ಆ ದಂಡಕಾರಣ್ಯದಲ್ಲಿ, **ಉರ್ವಶೀರತೇಃ** ಊರ್ವಶಿಯ ರಮಣ ನಿಮಿತ್ತದಿಂದ, **ಧನದಸ್ಯ** ಕುಬೇರನ, **ಶಾಪಾತ್** ಶಾಪದಿಂದ, **ಸಪದಿ** ಕೂಡಲೇ, **ಯಾತುಧಾನೀಂ** ರಾಕ್ಷಸ ಸಂಬಂಧಿನಿಯಾದ, **ದಶಾಂ** ಅವಸ್ಥೆಯನ್ನು, **ಪ್ರಾಪ್ತಂ** ಹೊಂದಿರುವ, **ತುಂಬುರುನಾಮಧೇಯಂ** ಮೊದಲು ತುಂಬುರು ಎಂದು

ಹೆಸರುಳ್ಳ, **ಗಂಧರ್ವಂ** ಗಂಧರ್ವನನ್ನು **ಶರ್ವವರಾತ್** ರುದ್ರನ ವರದಿಂದ, **ಅವಧ್ಯಂ** ಸಾಮಾನ್ಯರಿಂದ ಮರಣವಿಲ್ಲದ, **ನಾಮ್ನಾ ವಿರಾಧಮಪಿ** ವಿರಾಧನೆಂಬ ನಾಮಧೇಯವುಳ್ಳವನನ್ನು ಕೂಡ, **ದದೃಶೇ** ನೋಡಿದನು.

**ತಾತ್ಪರ್ಯ :-** ಊರ್ವಶಿಯನ್ನು ಬಲಾತ್ಕರಿಸಿ ತುಂಬುರು ಕುಬೇರನಿಂದ ಶಾಪಗ್ರಸ್ತನಾಗಿ 'ವಿರಾಧ' ಎಂಬ ಹೆಸರಿನಿಂದ ರಕ್ಕಸನಾಗಿ ಜನಿಸಿದ. ಅವನು ರುದ್ರದೇವರ ಒಲುಮೆಯಿಂದ ಅವಧ್ಯತ್ವ ವರವನ್ನು ಪಡೆದಿದ್ದ. ಅವನನ್ನು ಶ್ರೀರಾಮ ದಂಡಕಾರಣ್ಯದಲ್ಲಿ ನೋಡಿದ. ॥ ೨೦ ॥

**ಭಂಕ್ತ್ವಾಽಸ್ಯ ಬಾಹುಯುಗಲಂ ಬಿಲಗಂ ಚಕಾರ**
**ಸಮ್ಮಾನಯನ್ ವಚನಮಂಬುಜಜನ್ಮನೋಽಸೌ ।**
**ಪ್ರಾದಾಚ್ಚ ತಸ್ಯ ಸುಗತಿಂ ನಿಜಗಾಯಕಸ್ಯ**
**ಭಕ್ಷಾರ್ಥಮಂಸಕಮಿತೋಽಪಿ ಸಹಾನುಜೇನ ॥ ೨೧ ॥**

ಪದಚ್ಛೇದ : **ಭಂಕ್ತ್ವಾ ಅಸ್ಯ ಬಾಹುಯುಗಲಂ ಬಿಲಗಂ ಚಕಾರ ಸಮ್ಮಾನಯನ್ ವಚನಮ್ ಅಂಬುಜಜನ್ಮನಃ ಅಸೌ । ಪ್ರಾದಾತ್ ಚ ತಸ್ಯ ಸುಗತಿಂ ನಿಜಗಾಯಕಸ್ಯ ಭಕ್ಷಾರ್ಥಂ ಅಂಸಕಮ್ ಇತಃ ಅಪಿ ಸಹ ಅನುಜೇನ ॥**

**ಅರ್ಥ :- ಅಸೌ** ಈ ರಾಮನು, **ಅಂಬುಜಜನ್ಮನಃ** ಕಮಲದಿಂದ ಜನಿಸಿದ ಬ್ರಹ್ಮನ, **ವಚನಂ** ನಿನ್ನ ಬಾಹುಯುಗಲಮಧ್ಯದಲ್ಲಿ ಯಾವನು ಪ್ರಾಪ್ತನಾಗು- ವನೋ ಅವನು ನಿನ್ನ ವಶವಾಗಲಿ ಎಂಬ ಮಾತನ್ನು, **ಸಮ್ಮಾನಯನ್** ಗೌರವಿಸುವವನಾಗಿ, **ಅನುಜೇನ ಸಹ** ತಮ್ಮನಿಂದ ಕೂಡಿಕೊಂಡು, **ಅಂಸಕಂ** ಭುಜಗಳ ಮಧ್ಯದಲ್ಲಿ, **ಭಕ್ಷಾರ್ಥಂ** ತಿನ್ನುವುದಕ್ಕೋಸ್ಕರ, **ಇತೋಪಿ** ಪ್ರವೇಶಿಸಿ ದರೂ, **ಅಸ್ಯ** ಈ ವಿರಾಧನ, **ಬಾಹುಯುಗಲಂ** ಭುಜಗಳೆರಡನ್ನು **ಭಂಕ್ತ್ವಾ** ತುಂಡರಿಸಿ, **ಬಿಲಗಂ ಚಕಾರ** ದೊಡ್ಡ ಹೊಂಡದಲ್ಲಿ ಹಾಕಿ ಮುಚ್ಚಿದನು, **ನಿಜಗಾಯಕಸ್ಯ** ತನ್ನನ್ನು ಗಾನಮಾಡತಕ್ಕ, **ತಸ್ಯ** ಆ ತುಂಬುರು ನಾಮಕ ಗಂಧರ್ವನಿಗೆ, **ಸುಗತಿಂ** ಒಳ್ಳೇಗತಿಯನ್ನು **ಪ್ರಾದಾತ್** ಕೊಟ್ಟನು.

**ತಾತ್ಪರ್ಯ :-** ನಿನ್ನ ತೋಳಿಗೆ ಸಿಲುಕಿದವರು ನಿನ್ನ ವಶವಾಗಲಿ ಎಂದು ಚತುರ್ಮುಖ ಇವನಿಗೆ ವರವಿತ್ತಿದ್ದ. ಆದ್ದರಿಂದ ತೋಳಿನಲ್ಲಿ ಸಿಲುಕಿದ ರಾಮ ಕ್ಷಣಕಾಲ ಸುಮ್ಮನಿದ್ದ ಖಡ್ಗದಿಂದ ಅವನ ಬಾಹುಗಳನ್ನು ತುಂಡರಿಸಿದ.

ಅವನನ್ನು ಹೊಂಡದಲ್ಲಿ ಹಾಕಿ ಮುಚ್ಚಿದ. ತಿನ್ನಲಿಕ್ಕಾಗಿ ಲಕ್ಷ್ಮಣನೊಡನೆ ತನ್ನನ್ನು ಭುಜದಲ್ಲಿರಿಸಿಕೊಂಡರೂ ಭಕ್ತನಾದ ಕಾರಣ ಆ ಗಂಧರ್ವನನ್ನು ಶಾಪದಿಂದ ವಿಮೋಚನಗೊಳಿಸಿ ಸದ್ಗತಿ ಕರುಣಿಸಿದ. ॥ ೨೧ ॥

ಶಾರ್ಙ್ಗ ಕೈ ಸೇರಿತು

**ಪ್ರೀತಿಂ ವಿಧಿತ್ಸುರಗಮದ್ ಭವನಂ ನಿಜಸ್ಯ**
**ಕುಂಭೋದ್ಭವಸ್ಯ ಪರಮಾದರತೋಽಮುನಾ ಚ ।**
**ಸಂಪೂಜಿತೋ ಧನುರನೇನ ಗೃಹೀತಮಿಂದ್ರಾ-**
**ಚ್ಛಾರ್ಙ್ಗಂ ತದಾದಿಪುರುಷೋ ನಿಜಮಾಜಹಾರ ॥ ೨೨ ॥**

ಪದಚ್ಛೇದ : ಪ್ರೀತಿಂ ವಿಧಿತ್ಸುಃ ಅಗಮತ್ ಭವನಂ ನಿಜಸ್ಯ ಕುಂಭೋದ್ಭವಸ್ಯ ಪರಮಾದರತಃ ಅಮುನಾ ಚ । ಸಂಪೂಜಿತಃ ಧನುಃ ಅನೇನ ಗೃಹೀತಮ್ ಇಂದ್ರಾತ್ ಶಾರ್ಙ್ಗಂ ತತ್ ಆದಿಪುರುಷಃ ನಿಜಮ್ ಆಜಹಾರ ॥

**ಅರ್ಥ** :- ನಿಜಸ್ಯ ತನ್ನ ಭಕ್ತನಾದ, **ಕುಂಭೋದ್ಭವಸ್ಯ** ಘಟದಲ್ಲಿ ಉತ್ಪತ್ತಿ ಉಳ್ಳ ಅಗಸ್ತ್ಯನಿಗೆ, **ಪ್ರೀತಿಂ** ಸಂತೋಷವನ್ನು, **ವಿಧಿತ್ಸುಃ** ಮಾಡಲು ಇಚ್ಛೆಯುಳ್ಳ, **ಆದಿಪೂರುಷಃ** ಆದಿಪುರುಷನಾದ ಶ್ರೀರಾಮನು, **ಕುಂಭೋದ್ಭವಸ್ಯ** ಅಗಸ್ತ್ಯನ, **ಭವನಂ** ಮನೆಯನ್ನು, **ಅಗಮತ್** ಹೋದನು, **ಅಮುನಾ** ಈ ಅಗಸ್ತ್ಯನಿಂದ, **ಪರಮಾದರತಃ** ಶ್ರೇಷ್ಠಭಕ್ತಿಯಿಂದ, **ಸಂಪೂಜಿತಃ** ಪೂಜಿಸಲ್ಪಟ್ಟವನಾಗಿ, **ಇಂದ್ರಾತ್** ಇಂದ್ರನ ದೆಸೆಯಿಂದ, **ಗೃಹೀತಂ** ಸ್ವೀಕರಿಸಲ್ಪಟ್ಟ, **ನಿಜಂ** ತನ್ನದಾದ, **ಶಾರ್ಙ್ಗಂ** ಶಾರ್ಙ್ಗವೆಂಬ, **ತತ್ ಧನುಃ** ಆ ಪ್ರಸಿದ್ಧವಾದ ಧನುಸ್ಸನ್ನು, **ಅನೇನ** ಈ ಅಗಸ್ತ್ಯನಿಂದ, **ಆಜಹಾರ** ಸ್ವೀಕರಿಸಿದನು.

**ತಾತ್ಪರ್ಯ** :- ತನ್ನ ಭಕ್ತನಾದ ಅಗಸ್ತ್ಯಮುನಿಯ ಸಂತೋಷಕ್ಕಾಗಿ ಶ್ರೀರಾಮ ಅವನ ಆಶ್ರಮಕ್ಕೆ ಭೇಟಿ ನೀಡಿದ. ಅವನಿಂದ ಪರಮಾದರದಿಂದ ಸಂಪೂಜಿತನಾಗಿ ಇಂದ್ರ ನಿಂದ ಕೊಡಮಾಡಿದ ತನ್ನದೇ ಆದ ಶಾಂರ್ಗ ಎಂಬ ಬಿಲ್ಲನ್ನು ಅಗಸ್ತ್ಯರಿಂದ ಸ್ವೀಕರಿಸಿದ. ॥ ೨೨ ॥

**ಆತ್ಮಾರ್ಥಮೇವ ಹಿ ಪುರಾ ಹರಿಣಾ ಪ್ರದತ್ತ-**
**ಮಿಂದ್ರೇ ತದಿಂದ್ರ ಉತ ರಾಮಕರಾರ್ಥಮೇವ ।**
**ಪ್ರಾದಾದಗಸ್ತ್ಯಮುನಯೇ ತದವಾಪ್ಯ ರಾಮೋ**
**ರಕ್ಷನ್ ಋಷೀನವಸದೇವ ಸ ದಂಡಕೇಷು ॥ ೨೩ ॥**

ಪದಚ್ಛೇದ : ಆತ್ಮಾರ್ಥಮ್ ಏವ ಹಿ ಪುರಾ ಹರಿಣಾ ಪ್ರದತ್ತಮ್ ಇಂದ್ರೇ ತತ್ ಇಂದ್ರಃ ಉತ ರಾಮಕರಾರ್ಥಮ್ ಏವ । ಪ್ರಾದಾತ್ ಅಗಸ್ತ್ಯಮುನಯೇ ತತ್ ಅವಾಪ್ಯ ರಾಮಃ ರಕ್ಷನ್ ಋಷೀನ್ ಅವಸತ್ ಏವ ಸಃ ದಂಡಕೇಷು ॥

**ಅರ್ಥ** :- **ಪುರಾ** ಹಿಂದೆ, **ಆತ್ಮಾರ್ಥಮೇವ** ತನ್ನ ಅವತಾರನಾದ ರಾಮ ನಿಗೋಸ್ಕರವೇ, **ಹರಿಣಾ** ಶ್ರೀಹರಿಯಿಂದ, **ಇಂದ್ರೇ** ಇಂದ್ರನಲ್ಲಿ, **ಪ್ರದತ್ತಂ** ಕೊಡಲ್ಪಟ್ಟ, **ತತ್** ಆ ಧನುಸ್ಸನ್ನು, **ಇಂದ್ರಃ** ಇಂದ್ರನು, **ಉತ** ಮತ್ತು, **ರಾಮ ಕರಾರ್ಥಮೇವ** ರಾಮನು ಕೈಯಲ್ಲಿ ಧರಿಸುವುದಕ್ಕಾಗಿಯೇ, **ಅಗಸ್ತ್ಯ ಮುನಯೇ** ಅಗಸ್ತ್ಯ ಋಷಿಗೋಸ್ಕರ, **ತತ್** ಆ ಧನುಸ್ಸನ್ನು, **ಪ್ರಾದಾತ್** ಕೊಟ್ಟನು, ಸ **ರಾಮಃ** ಆ ರಾಮನು, **ತತ್** ಆ ಧನುಸ್ಸನ್ನು, **ಅವಾಪ್ಯ** ಹೊಂದಿ, **ಋಷೀನ್** ಋಷಿಗಳನ್ನು, **ರಕ್ಷನ್** ರಕ್ಷಿಸತಕ್ಕವನಾಗಿ, **ದಂಡಕೇಷು** ದಂಡಕಾರಣ್ಯ ಗಳಲ್ಲಿ, **ಅವಸತ್** ವಾಸಮಾಡಿದನು.

**ತಾತ್ಪರ್ಯ** :- ಶ್ರೀಹರಿ, ರಾಮಾವತಾರಕಾಲದಲ್ಲಿ ಧರಿಸಲೇಂದೇ ತನ್ನ ಶಾಂರ್ಗ ಧನಸ್ಸನ್ನು ಇಂದ್ರನಿಗೆ ಕೊಟ್ಟಿದ್ದ. ಸೂಕ್ತಕಾಲದಲ್ಲಿ ಅದನ್ನು ರಾಮನಿಗೆ ತಲುಪಿಸಲೆಂದೇ ಇಂದ್ರ ಅದನ್ನು ಅಗಸ್ತ್ಯರಿಗೆ ನೀಡಿದ. ಹೀಗೆ ತನ್ನ ಬಿಲ್ಲನ್ನೆ ಸ್ವೀಕರಿಸಿದ ರಾಮ ಮುನಿಗಳನ್ನು ರಕ್ಷಿಸುತ್ತ ದಂಡಕಾರಣ್ಯದಲ್ಲಿ ವಾಸ ಮಾಡಿದ. ॥ ೨೩ ॥

### ಶೂರ್ಪನಖಿಗೆ ಶಿಕ್ಷೆ

**ಕಾಲೇ ತದೈವ ಖರದೂಷಣಯೋರ್ಬಲೇನ**
**ರಕ್ಷಃಸ್ವಸಾ ಪತಿನಿಮಾರ್ಗಣತತ್ಪರಾऽऽಸೀತ್ ।**
**ವ್ಯಾಪಾದಿತೇ ನಿಜಪತೌ ಹಿ ದಶಾನನೇನ**
**ಪ್ರಾಮಾದಿಕೇನ ವಿಧಿನಾऽಭಿಸಸಾರ ರಾಮಮ್ ॥ ೨೪ ॥**

ಪದಚ್ಛೇದ : ಕಾಲೇ ತದಾ ಏವ ಖರದೂಷಣಯೋಃ ಬಲೇನ ರಕ್ಷಃಸ್ವಸಾ ಪತಿನಿಮಾರ್ಗಣತತ್ಪರಾ ಆಸೀತ್ । ವ್ಯಾಪಾದಿತೇ ನಿಜಪತೌ ಹಿ ದಶಾನನೇನ ಪ್ರಾಮಾದಿಕೇನ ವಿಧಿನಾ ಅಭಿಸಸಾರ ರಾಮಮ್ ॥

**ಅರ್ಥ** :- **ರಕ್ಷಃಸ್ವಸಾ** ರಾವಣನ ತಂಗಿಯಾದ ಶೂರ್ಪನಖಿಯು, **ದಶಾ ನನೇನ** ರಾವಣನಿಂದ, **ಪ್ರಾಮಾದಿಕೇನ ವಿಧಿನಾ** ಪರರಿಂದ ಕೂಡಿ ಯುದ್ಧ ಮಾಡುವ ಸಮಯದಲ್ಲಿ ಅಜ್ಞಾನದಿಂದ ಶರಪ್ರಯೋಗ ಮಾಡಿ, **ನಿಜಪತೌ** ತನ್ನ

ಗಂಡನು, **ವ್ಯಾಪಾದಿತೇ** ಕೊಲ್ಲಲ್ಪಡುತ್ತಿರಲು, **ರಕ್ಷಃಸ್ವಸಾ** ಶೂರ್ಪನಖಿಯು, **ಖರದೂಷಣಯೋಃ** ಸಹೋದರರಾದ ಖರ ಮತ್ತು ದೂಷಣರ ಬಲೇನ ಸಹಾಯದಿಂದ, **ಪತಿಮಾರ್ಗಣತತ್ಪರಾ** ಗಂಡನನ್ನು ಹುಡುಕುವುದರಲ್ಲಿ ಆಸಕ್ತಳು, **ಆಸೀತ್** ಆಗಿದ್ದಳು, **ತದೈವ ಕಾಲೇ** ರಾಮನು ದಂಡಕಾರಣ್ಯದಲ್ಲಿ ವಾಸ ಮಾಡುವ ಸಮಯದಲ್ಲಿಯೇ, **ರಾಮಂ** ಶ್ರೀರಾಮನನ್ನು, **ಅಭಿಸಸಾರ** ಸಮೀಪಿಸಿದಳು.

**ತಾತ್ಪರ್ಯ :-** ಅದೇ ಸಮಯದಲ್ಲಿ ರಾವಣನ ತಂಗಿಯಾದ ಶೂರ್ಪನಖಿಯು ರಾಮನ ಸೌಂದರ್ಯದಿಂದ ಆಕರ್ಷಿತಳಾಗಿ ಬಂದಳು. ರಾವಣನ ಕಡೆಯವನೇ ಆದ ಶೂರ್ಪನಖಿಯ ಪತಿಯನ್ನು ರಾವಣ ಅಜ್ಞಾನದಿಂದ ಕೊಂದಿದ್ದ. ಬಲಿಷ್ಠರಾದ ಖರ-ದೂಷಣರೆಂಬ ಸಹೋದರರ ಬೆಂಬಲದಿಂದ ಕುಕಾರ್ಯದಲ್ಲಿ ತೊಡಗಿದ ಅವಳು ಹೊಸ ಗಂಡನ ಶೋಧನೆಯಲ್ಲಿದ್ದಳು.
॥ ೨೪ ॥

**ಸಾಽನುಜ್ಞಯೈವ ರಜನೀಚರಭರ್ತುರುಗ್ರಾ**
**ಭ್ರಾತೃದ್ವಯೇನ ಸಹಿತಾ ವನಮಾವಸಂತೀ ।**
**ರಾಮಂ ಸಮೇತ್ಯ ಭವ ಮೇ ಪತಿರಿತ್ಯವೋಚತ್**
**ಭಾನುಂ ಯಥಾ ತಮ ಉಪೇತ್ಯ ಸುಯೋಗಕಾಮಮ್ ॥ ೨೫ ॥**

ಪದಚ್ಛೇದ : ಸಾ ಅನುಜ್ಞಯಾ ಏವ ರಜನೀಚರಭರ್ತುಃ ಉಗ್ರಾ ಭ್ರಾತೃದ್ವಯೇನ ಸಹಿತಾ ವನಮ್ ಆವಸಂತೀ । ರಾಮಂ ಸಮೇತ್ಯ ಭವ ಮೇ ಪತಿಃ ಇತಿ ಅವೋಚತ್ ಭಾನುಂ ಯಥಾ ತಮಃ ಉಪೇತ್ಯ ಸುಯೋಗಕಾಮಮ್ ॥

**ಅರ್ಥ :-** **ಉಗ್ರಾ** ಕ್ರೂರಳಾದ, **ಸಾ** ಆ ಶೂರ್ಪನಖಿಯು, **ರಜನೀಚರಭರ್ತುಃ** ರಾಕ್ಷಸರಿಗೆ ಒಡೆಯನಾದ ರಾವಣನ, **ಅನುಜ್ಞಯೈವ** ಅಪ್ಪಣೆಯಿಂದಲೇ, **ಭ್ರಾತೃದ್ವಯೇನ** ಸಹೋದರರಾದ ಖರ-ದೂಷಣರಿಬ್ಬರಿಂದ, **ಸಹಿತಾ ಸತೀ** ಕೂಡಿದವಳಾಗಿ, **ವನಂ** ದಂಡಕಾರಣ್ಯದಲ್ಲಿ, **ಆವಸಂತೀ ಸತೀ** ವಾಸಮಾಡತಕ್ಕವಳಾಗಿ, **ಸುಯೋಗಕಾಮಂ** ಸಂಬಂಧವನ್ನು ಅಪೇಕ್ಷಿಸತಕ್ಕ, **ತಮಃ** ಕತ್ತಲೆಯು, **ಭಾನುಂ** ಸೂರ್ಯನನ್ನು, **ಸಮೇತ್ಯ** ಹೊಂದಿ, **ಯಥಾ** ಹೇಗೋ, (**ತಥಾ** ಹಾಗೆ,) **ರಾಮಂ** ಶ್ರೀರಾಮನನ್ನು, **ಸಮೇತ್ಯ** ಹೊಂದಿ, **ಮೇ** ನನಗೆ, **ತ್ವಂ** ನೀನು, **ಪತಿಃ** ಗಂಡನು, **ಭವ** ಆಗು, **ಇತಿ** ಎಂದು, **ಅವೋಚತ್** ಹೇಳಿದಳು.

ತಾತ್ಪರ್ಯ : ರಾವಣನ ಅಪ್ಪಣೆಯಿಂದಲೇ ಶೂರ್ಪನಖಿಯು ಖರ ದೂಷಣ ರೊಂದಿಗೆ ದಂಡಕಾರಣ್ಯದಲ್ಲಿ ವಾಸಿಸುತ್ತಿದ್ದಳು. ಕತ್ತಲು ಸೂರ್ಯನ ಸಂಗವನ್ನು ಬಯಸಿದಂತೆ ಶೂರ್ಪನಖಿಯೂ ರಾಮನ ಸಂಗ ವನ್ನು ಬಯಸಿ ಪತಿಯಾಗೆಂದು ಬೇಡಿದಳು. ॥ ೨೫ ॥

ತಾಂ ತತ್ರ ಹಾಸ್ಯಕಥಯಾ ಜನಕಾಸುತಾಗ್ರೇ
ಗಚ್ಛಾನುಜಂ ಮ ಇಹ ಮೇತಿ ವಚಃ ಸ ಉಕ್ತ್ವಾ ।
ತೇನೈವ ದುಷ್ಟಚರಿತಾಂ ಹಿ ವಿಕರ್ಣನಾಸಾಂ
ಚಕ್ರೇ ಸಮಸ್ತರಜನೀಚರನಾಶಹೇತೋಃ ॥ ೨೬ ॥

ಪದಚ್ಛೇದ : ತಾಂ ತತ್ರ ಹಾಸ್ಯಕಥಯಾ ಜನಕಾಸುತಾಗ್ರೇ ಗಚ್ಛ ಅನುಜಂ ಮೇ ಇಹ ಮಾ ಇತಿ ವಚಃ ಸಃ ಉಕ್ತ್ವಾ । ತೇನ ಏವ ದುಷ್ಟಚರಿತಾಂ ಹಿ ವಿಕರ್ಣನಾಸಾಂ ಚಕ್ರೇ ಸಮಸ್ತರಜನೀಚರನಾಶಹೇತೋಃ ॥

ಅರ್ಥ :- ಸಃ ಆ ಶ್ರೀರಾಮನು, ತತ್ರ ಆ ದಂಡಕಾರಣ್ಯದಲ್ಲಿ, ಜನಕಾಸುತಾಗ್ರೇ ಸೀತಾದೇವಿಯ ಮುಂಭಾಗದಲ್ಲಿ, ತಾಂ ಆ ಶೂರ್ಪನಖಿ ಯನ್ನು, ಹಾಸ್ಯಕಥಯಾ ಪರಿಹಾಸದಿಂದ, ಮೇ ನನ್ನ ಅನುಜಂ ತಮ್ಮನಾದ ಲಕ್ಷ್ಮಣನನ್ನು ಕುರಿತು. ಗಚ್ಛ ಹೋಗು, ಇಹ ನನ್ನ ವಿಷಯದಲ್ಲಿ ಮಾ ಪತಿ ಭಾವನೆ ಉಚಿತವಲ್ಲ, ಇತಿ ಈ ರೀತಿಯಾಗಿ, ವಚಃ ಮಾತನ್ನು ಉಕ್ತ್ವಾ ಹೇಳಿ, ಸಮಸ್ತರಜನೀಚರ ನಾಶಹೇತೋಃ ಎಲ್ಲಾ ರಾಕ್ಷಸರ ನಾಶಕ್ಕೋಸ್ಕರ, ತೇನೈವ ಆ ಲಕ್ಷ್ಮಣನಿಂದಲೇ, ದುಷ್ಟಚರಿತಾಂ ಕೆಟ್ಟ ಕೆಸಲವುಳ್ಳ ಶೂರ್ಪನಖಿಯನ್ನು ವಿಕರ್ಣನಾಸಾಂ ಕತ್ತರಿಸಲ್ಪಟ್ಟ ಕಿವಿಮೂಗುಗಳುಳ್ಳವಳನ್ನಾಗಿ, ಚಕ್ರೇ ಮಾಡಿದನು.

ತಾತ್ಪರ್ಯ :- ಸೀತೆಯ ಸನಿಹದಲ್ಲಿ ಹಾಸ್ಯಭಾವದಿಂದ ಶ್ರೀರಾಮ ನುಡಿದ- 'ನನಗೆ ಮದುವೆಯಾಗಿದೆ. ನನ್ನ ತಮ್ಮನ ಬಳಿ ಹೋಗು'. ದುಷ್ಟ ನಡತೆಯ ಶೂರ್ಪನಖಿಯು ಸೀತೆಯನ್ನೇ ತಿನ್ನ ಹೊರಟಾಗ ಲಕ್ಷ್ಮಣ ಅವಳ ಕಿವಿ-ಮೂಗುಗಳನ್ನು ಕತ್ತರಿಸಿದ. ಇದು ಶ್ರೀರಾಮ ಬಯಸಿದ ರಾಕ್ಷಸ ಕುಲ ವಿನಾಶದ ನಾಂದಿ ಘಟನೆಯಾಗಿತ್ತು. ॥ ೨೬ ॥

### ಖರ-ದೂಷಣರ ಸಂಹಾರ

ತತ್ಪ್ರೇರಿತಾನ್ ಸಪದಿ ಭೀಮಬಲಾನ್ ಪ್ರಯಾತಾಂ-
ಸ್ತಸ್ಯಾಃ ಖರತ್ರಿಶಿರದೂಷಣಮುಖ್ಯಬಂಧೂನ್ ।

**ಜಘ್ನೇ ಚತುರ್ದಶಸಹಸ್ರಮವಾರಣೀಯ**
**ಕೋದಂಡಪಾಣಿರಖಿಲಸ್ಯ ಸುಖಂ ವಿಧಾತುಮ್ ॥ ೨೭ ॥**

ಪದಚ್ಛೇದ : ತತ್ಪ್ರೇರಿತಾನ್ ಸಪದಿ ಭೀಮಬಲಾನ್ ಪ್ರಯಾತಾನ್ ತಸ್ಯಾಃ ಖರ-ತ್ರಿಶಿರದೂಷಣಮುಖ್ಯಬಂಧೂನ್ । ಜಘ್ನೇ ಚತುರ್ದಶಸಹಸ್ರಮ್ ಅವಾರಣೀಯ-ಕೋದಂಡಪಾಣಿಃ ಅಖಿಲಸ್ಯ ಸುಖಂ ವಿಧಾತುಮ್ ॥

**ಅರ್ಥ :- ಅವಾರಣೀಯಕೋದಂಡಪಾಣಿಃ** ಇನ್ನೊಬ್ಬರಿಂದ ತಡೆಯಲಾಗದ ಕೋದಂಡವೆಂಬ ಧನುಸ್ಸು ಕೈಯಲ್ಲಿ ಧರಿಸಿದ ಶ್ರೀರಾಮನು, **ಅಖಿಲಸ್ಯ** ಎಲ್ಲಾ ಭಕ್ತರ ಸಮೂಹಕ್ಕೆ, **ಸುಖಂ** ಸಂತೋಷವನ್ನು, **ವಿಧಾತುಂ** ಮಾಡಲು, **ತತ್ಪ್ರೇರಿತಾನ್** ಆ ಶೂರ್ಪನಖಿಯಿಂದ ರಾಮನನ್ನು ಕೊಲ್ಲಲು ಕಳುಹಿಸಲ್ಪಟ್ಟ **ಭೀಮಬಲಾನ್** ಅಪಾರ ಬಲಶಾಲಿಗಳಾದ, **ಸಪದಿ** ಕೂಡಲೇ, **ಪ್ರಯಾತಾನ್** ಯುದ್ಧ ಮಾಡಲು ಬಂದಿರುವ, **ತಸ್ಯಾಃ** ಆ ಶೂರ್ಪನಖಿಯ, **ಚತುರ್ದಶ ಸಹಸ್ರಂ** ಹದಿನಾಲ್ಕುಸಾವಿರ ಸಂಖ್ಯಾಕರಾದ, **ಖರತ್ರಿಶಿರದೂಷಣ ಮುಖ್ಯಬಂಧೂನ್** ಖರ ತ್ರಿಶಿರ ದೂಷಣರೇ ಮೊದಲಾದ ಬಂಧುಗಳನ್ನು, **ಜಘ್ನೇ** ಸಂಹರಿಸಿದನು.

**ತಾತ್ಪರ್ಯ :-** ಶೂರ್ಪನಖಿಯ ಪ್ರಚೋದನೆಯಿಂದ ರಾಮನೊಡನೆ ಯುದ್ಧಕ್ಕೆ ಆಗಮಿಸಿದ, ಖರ - ತ್ರಿಶಿರ - ದೂಷಣಮೊದಲಾದ ಹದಿನಾಲ್ಕು ಸಾವಿರರಕ್ಕಸ ಬಂಧುಗಳನ್ನು ಸುಜನಲೋಕದ ಸಂತಸಕ್ಕಾಗಿ ಅಜೇಯನಾದ ಶ್ರೀರಾಮ ಸಂಹರಿಸಿದನು ॥ ೨೭॥

**ದತ್ತೇಽಭಯೇ ರಘುವರೇಣ ಮಹಾಮುನೀನಾಂ**
**ದತ್ತೇ ಭಯೇ ಚ ರಜನೀಚರಮಂಡಲಸ್ಯ ।**
**ರಕ್ಷಃಪತಿಃ ಸ್ವಸೃಮುಖಾದವಿಕಂಪನಾಚ್ಚ**
**ಶ್ರುತ್ವಾ ಬಲಂ ರಘುಪತೇಃ ಪರಮಾಪ ಚಿಂತಾಮ್ ॥ ೨೮ ॥**

ಪದಚ್ಛೇದ : ದತ್ತೇ ಅಭಯೇ ರಘುವರೇಣ ಮಹಾಮುನೀನಾಂ ದತ್ತೇ ಭಯೇ ಚ ರಜನೀಚರಮಂಡಲಸ್ಯ । ರಕ್ಷಃಪತಿಃ ಸ್ವಸೃಮುಖಾತ್ ಅವಿಕಂಪನಾತ್ ಚ ಶ್ರುತ್ವಾ ಬಲಂ ರಘುಪತೇಃ ಪರಮ್ ಆಪ ಚಿಂತಾಮ್ ॥

**ಅರ್ಥ :- ರಘುವರೇಣ** ಶ್ರೀರಾಮಚಂದ್ರನಿಂದ, **ಮಹಾಮುನೀನಾಂ** ಶ್ರೇಷ್ಠಮುನಿಗಳಿಗೆ, **ಅಭಯೇ** ಅಭಯವು, **ದತ್ತೇ** ಕೊಡಲ್ಪಡುತ್ತಿರಲು, **ತಥಾ**

ಹಾಗೆಯೇ, **ರಜನೀಚರಮಂಡಲಸ್ಯ** ರಾಕ್ಷಸರ ಸಮುದಾಯಕ್ಕೆ, **ಭಯೇ** ಭಯವು, **ದತ್ತೇ** ಕೊಡಲ್ಪಡುತ್ತಿರಲು, **ರಕ್ಷಃಪತಿಃ** ರಾಕ್ಷಸರಿಗೆ ಸ್ವಾಮಿಯಾದ ರಾವಣನು, **ಸ್ವಸೃಮುಖಾತ್** ತಂಗಿಯಾದ ಶೂರ್ಪನಖಿಯ ಮುಖದಿಂದ, **ಅವಿಕಂಪನಾಚ್ಚ** ಅವಿಕಂಪನನೆಂಬ ರಾಕ್ಷಸನಿಂದಲೂ ಕೂಡ, **ರಘುಪತೇಃ** ಶ್ರೀರಾಮಚಂದ್ರನ, **ಪರಂ** ಉತ್ಕೃಷ್ಟವಾದ, **ಬಲಂ** ಸಾಮರ್ಥ್ಯವನ್ನು, **ಶ್ರುತ್ವಾ** ಕೇಳಿ, **ಪರಂ** ಬಹಳವಾದ **ಚಿಂತಾಂ** ವ್ಯಥೆಯನ್ನು, **ಆಪ** ಹೊಂದಿದನು.

**ತಾತ್ಪರ್ಯ** :- ಶ್ರೀರಾಮ, ಭಕ್ತರಾದ ಮುನಿಗಳಿಗೆ ಅಭಯ ನೀಡಿದ. ದುಷ್ಟ ರಕ್ಕಸ ಸಮುದಾಯಕ್ಕೆ ಪ್ರಾಣಭೀತಿ ನೀಡಿದ. ಶೂರ್ಪನಖಿ ಮತ್ತು ಅವಿಕಂಪನನೆಂಬ ರಕ್ಕಸನಿಂದ ಶ್ರೀರಾಮನ ವಿಕ್ರಮ ವರ್ಣನೆ ಕೇಳಿದ ರಾವಣ ಚಿಂತಾಕ್ರಾಂತನಾದ. ॥ ೨೮ ॥

### ಮಾರೀಚನ ಸಹಾಯ ಯಾಚಿಸಿದ ರಾವಣ

**ಶ್ರುತ್ವಾಽಽಶು ಕಾರ್ಯಮವಮೃಶ್ಯ ಜಗಾಮ ತೀರೇ**
**ಕ್ಷೇತ್ರಂ ನದೀನದಪತೇಃ ಶ್ರವಣಂ ಧರಿತ್ರ್ಯಾಃ ।**
**ಮಾರೀಚಮತ್ರ ತಪಸಿ ಪ್ರತಿವರ್ತಮಾನಂ**
**ಭೀತಂ ಶರಾದ್ರಘುಪತೇರ್ನಿತರಾಂ ದದರ್ಶ ॥ ೨೯ ॥**

ಪದಚ್ಛೇದ : ಶ್ರುತ್ವಾ ಆಶು ಕಾರ್ಯಂ ಅವಮೃಶ್ಯ ಜಗಾಮ ತೀರೇ ಕ್ಷೇತ್ರಂ ನದೀನದಪತೇಃ ಶ್ರವಣಂ ಧರಿತ್ರ್ಯಾಃ । ಮಾರೀಚಂ ಅತ್ರ ತಪಸಿ ಪ್ರತಿವರ್ತಮಾನಂ ಭೀತಂ ಶರಾತ್ ರಘುಪತೇಃ ನಿತರಾಂ ದದರ್ಶ ॥

**ಅರ್ಥ** :- **ಶ್ರುತ್ವಾ** ರಾವಣನು ರಾಮನ ಬಲವನ್ನು ಕೇಳಿ, **ಆಶು** ಬೇಗನೇ, **ಕಾರ್ಯಂ** ಕರ್ತವ್ಯವನ್ನು **ಅವಮೃಶ್ಯ** ವಿಚಾರ ಮಾಡಿ, **ನದೀನದಪತೇಃ** ಹೆಣ್ಣು ಗಂಡು ನದಿಗಳಿಗೆ ಸ್ವಾಮಿಯಾದ ಸಮುದ್ರದ, **ತೀರೇ** ಸಮೀಪದಲ್ಲಿ, **ಧರಿತ್ರ್ಯಾಃ** ಗೋರೂಪವಾದ ಭೂಮಿಯ, **ಶ್ರವಣಂ** ಕಿವಿಯ ಸ್ಥಾನವಾದ, **ಕ್ಷೇತ್ರಂ** ಗೋಕರ್ಣ ಕ್ಷೇತ್ರವನ್ನು, **ಜಗಾಮ** ಹೋದನು, **ರಘುಪತೇಃ** ಶ್ರೀರಾಮನ, **ಶರಾತ್** ಬಾಣದಿಂದ, **ನಿತರಾಂ** ಅತ್ಯಂತವಾಗಿ, **ಭೀತಂ** ಹಿಂದೆ ಹೆದರಿದ, **ಅತ್ರ** ಈ ಗೋಕರ್ಣಕ್ಷೇತ್ರದಲ್ಲಿ, **ತಪಸಿ** ತಪಸ್ಸಿನಲ್ಲಿ, **ಪ್ರತಿವರ್ತಮಾನಂ** ಇರತಕ್ಕ, **ಮಾರೀಚಂ** ಮಾರೀಚನೆಂಬ ರಾಕ್ಷಸನನ್ನು, **ದದರ್ಶ** ಸಂಧಿಸಿದನು.

**ತಾತ್ಪರ್ಯ** :- ರಾಮನ ಬಲವನ್ನು ಕೇಳಿದ ರಾವಣ ಮುಂದಿನ ಯೋಜನೆ ರೂಪಿಸಿದ. ಸ್ತ್ರೀದೇವತೆಗಳಿಂದ ಅಭಿಮನ್ಯವಾದ ಗಂಗಾದಿನದಿಗಳ ಮತ್ತು ಪುರುಷ ದೇವತೆಗಳಿಂದ ಅಭಿಮನ್ಯಮಾನವಾದ ಸಿಂಧು ಮೊದಲಾದ ನದಿಗಳ ಒಡೆಯನಾದ ವರುಣದೇವನ ಸನ್ನಿಧಾನ ಪ್ರಾತವಾದ ಗೋಕರ್ಣ ಕ್ಷೇತ್ರದ ಸಾಗರತೀರಕ್ಕೆ ರಾವಣ ಆಗಮಿಸಿದ. ಅಲ್ಲಿ ರಾಮಬಾಣದ ರುಚಿ ಕಂಡು, ಹೆದರಿ ತಪಸ್ಸಿನಲ್ಲಿ ತೊಡಗಿದ್ದ ಮಾರೀಚನನ್ನು ಸಂಧಿಸಿದ. ॥೨೯॥

**ತೇನಾರ್ಥಿತಃ ಸಪದಿ ರಾಘವವಂಚನಾರ್ಥೇ**
**ಮಾರೀಚ ಆಹ ಶರವೇಗಮಮುಷ್ಯ ಜಾನನ್ ।**
**ಶಕ್ಯೋ ನ ತೇ ರಘುವರೇಣ ಹಿ ವಿಗ್ರಹೋಽತ್ರ**
**ಜಾನಾಮಿ ಸಂಸ್ಪರ್ಶಮಸ್ಯ ಶರಸ್ಯ ಪೂರ್ವಮ್ ॥ ೩೦ ॥**

**ಪದಚ್ಛೇದ : ತೇನ ಅರ್ಥಿತಃ ಸಪದಿ ರಾಘವವಂಚನಾರ್ಥೇ ಮಾರೀಚಃ ಆಹ ಶರವೇಗಮ್ ಅಮುಷ್ಯ ಜಾನನ್ । ಶಕ್ಯಃ ನ ತೇ ರಘುವರೇಣ ಹಿ ವಿಗ್ರಹಃ ಅತ್ರ ಜಾನಾಮಿ ಸಂಸ್ಪರ್ಶಮ್ ಅಸ್ಯ ಶರಸ್ಯ ಪೂರ್ವಮ್ ॥**

**ಅರ್ಥ** :- **ತೇನ** ಆ ರಾವಣನಿಂದ, **ರಾಘವವಂಚನಾರ್ಥೇ** ರಾಮನನ್ನು ಮೋಸಗೊಳಿಸುವುದಕ್ಕೋಸ್ಕರ, **ಸಪದಿ** ಕೂಡಲೇ, **ಅರ್ಥಿತಃ** ಪ್ರಾರ್ಥಿಸಿ ಕೊಳ್ಳಲ್ಪಟ್ಟ **ಅಮುಷ್ಯ** ಈ ರಾಮನ, **ಶರಸ್ಯ** ಬಾಣದ, **ವೇಗಂ** ವೇಗವನ್ನು, **ಜಾನನ್** ಮೊದಲೇ ತಿಳಿದಿರುವ, **ಮಾರೀಚಃ** ಮಾರೀಚನು, **ರಘುವರೇಣ** ಶ್ರೀರಾಮನಿಂದ, **ತೇ** ನಿನಗೆ, **ವಿಗ್ರಹಃ** ಕಲಹವು **ನ ಶಕ್ಯಃ** ಸಾಧ್ಯವಿಲ್ಲ, **ಅಸ್ಯ ಶರಸ್ಯ** ರಾಮಬಾಣದ, **ಸಂಸ್ಪರ್ಶಂ** ಆಘಾತವನ್ನು **ಪೂರ್ವಂ** ಮೊದಲೇ, **ಹಿ** ಯಾವ ಕಾರಣದಿಂದ, **ಜಾನಾಮಿ** ತಿಳಿದಿರುತ್ತೇನೆ, (**ಇತಿ** ಹೀಗೆ,) **ಆಹ** ಹೇಳಿದನು.

**ತಾತ್ಪರ್ಯ** : ರಾಮನನ್ನು ವಂಚಿಸಲು ಮಾರೀಚನ ಸಹಾಯ ಯಾಚಿಸಿದ ರಾವಣ. ಮಾರೀಚ ಎಚ್ಚರಿಸಿದ–'ರಾಮನೊಡನೆ ವೈರಬೇಡ. ನಿನಗೆ ಇದರಿಂದ ಸುಖವಾಗದು. ಅವನ ಬಾಣದ ರುಚಿ ನಾನು ಅನುಭವಿಸಿದ್ದೇನೆ.'.

**ವಿವರಣೆ** : ರಾಮಬಾಣದ ಪೆಟ್ಟಿನ ಆಘಾತ ಎಂದೂ ಮರೆಯುವಂತಿಲ್ಲ. ಅದು ಮಾರೀಚನಲ್ಲಿ ಗಾಢವಾದ ಪರಿಣಾಮ - ಭಯಗಳನ್ನು ತುಂಬಿದೆ. ಆದ್ದರಿಂದಲೇ 'ಸಂಸ್ಪರ್ಶವ್' ಎಂದು ತೊದಲುತ್ತಾನೆ, ಎನ್ನುತ್ತಾರೆ ಶ್ರೀವಾದಿರಾಜರು. ॥ ೩೦ ॥

**ಇತ್ಯುಕ್ತವಂತಮಥ ರಾವಣ ಆಹ ಖಡ್ಗಂ**
**ನಿಷ್ಕೃಷ್ಯ ಹನ್ಮಿ ಯದಿ ಮೇ ನ ಕರೋಷಿ ವಾಕ್ಯಮ್ ।**
**ತಚ್ಛುಶ್ರುವಾನ್ ಭಯಯುತೋಽಥ ನಿಸರ್ಗತಶ್ಚ**
**ಪಾಪೋ ಜಗಾಮ ರಘುವರ್ಯಸಕಾಶಮಾಶು ॥ ೩೧ ॥**

**ಪದಚ್ಛೇದ : ಇತಿ ಉಕ್ತವಂತಮ್ ಅಥ ರಾವಣಃ ಆಹ ಖಡ್ಗಂ ನಿಷ್ಕೃಷ್ಯ ಹನ್ಮಿ ಯದಿ ಮೇ ನ ಕರೋಷಿ ವಾಕ್ಯಮ್ । ತತ್ ಶುಶ್ರುವಾನ್ ಭಯಯುತಃ ಅಥ ನಿಸರ್ಗತಃ ಚ ಪಾಪಃ ಜಗಾಮ ರಘುವರ್ಯಸಕಾಶಮ್ ಆಶು ॥**

**ಅರ್ಥ :- ಅಥ** ಮಾರೀಚನು ಹೇಳಿದೊಡನೆಯೇ, **ರಾವಣಃ** ರಾವಣನು, **ಇತ್ಯುಕ್ತವಂತಂ** ಈ ರೀತಿಯಾಗಿ ಹೇಳತಕ್ಕ ಮಾರೀಚನನ್ನು, **ಖಡ್ಗಂ** ಖಡ್ಗವನ್ನು **ನಿಷ್ಕೃಷ್ಯ** ಸೆಳೆದು, **ಮೇ** ನನ್ನ **ವಾಕ್ಯಂ** ಮಾತನ್ನು **ನ ಕರೋಷಿ** ಯದಿ ಮಾಡುವುದಿಲ್ಲವಾದರೆ, ತರ್ಹಿ ಆಗ, ತ್ವಾಂ ನಿನ್ನನ್ನು, ಹನ್ಮಿ ಕೊಲ್ಲುತ್ತೇನೆ, ಇತಿ ಎಂದು, ಆಹ ಹೇಳಿದನು, **ಅಥ** ಅನಂತರ, **ತತ್ ಶುಶ್ರುವಾನ್** ರಾವಣನ ವಾಕ್ಯವನ್ನು ಕೇಳಿದ, **ಭಯಯುತಃ** ಹೆದರಿಕೆಯಿಂದ ಕೂಡಿದ, **ನಿಸರ್ಗತಃ** ಸ್ವಭಾವದಿಂದ, **ಪಾಪಶ್ಚ** ಪಾಪಿಯೂ ವಿಷ್ಣುದ್ವೇಷಿಯೂ ಆದ ಮಾರೀಚನು, **ಆಶು** ಬೇಗನೇ, **ರಘುವರ್ಯಸಕಾಶಂ** ರಾಮಚಂದ್ರನ ಸಮೀಪವನ್ನು **ಜಗಾಮ** ಹೋದನು.

**ತಾತ್ಪರ್ಯ :-** ಮಾರೀಚ ಬುದ್ಧಿಹೇಳಿದಾಗ ರಾವಣ ಕತ್ತಿ ಹಿಡಿದು 'ನನ್ನ ಮಾತನ್ನು ನಡೆಸದಿದ್ದರೆ ಸಂಹರಿಸುವೆನು' ಎಂದ. ಭೀತನಾದ ಮತ್ತು ಸ್ವಭಾವತಃ ದುಷ್ಟಬುದ್ಧಿಯುಳ್ಳ ಮಾರೀಚ ಮೋಸಮಾಡಲು ರಾಮನ ಬಳಿ ಧಾವಿಸಿದ.

**ವಿವರಣೆ :-** ವಂಚನೆ ದುಷ್ಟರ ಸ್ವಾಭಾವಿಕ ಗುಣ. ಮಾರೀಚ ಸಾತ್ವಿಕನಾಗಿದ್ದರೆ ರಾವಣನ ಬಳಿ ಹಾಗೇ ಆಗಲೆಂದು ಸುಳ್ಳುಹೇಳಿ ರಾಮನ ಬಳಿ ಬಂದು ಶರಣಾಗತನಾಗಿ ಸತ್ಯವನ್ನು ಹೇಳಬಹುದಿತ್ತು. ಆದರೆ ತಾಮಸ-ಸ್ವಭಾವದ ಮಾರೀಚನಿಗೆ ವಂಚನೆ ಪ್ರಿಯವಾಗಿತ್ತು. ಬುದ್ಧಿಪೂರ್ವಕವಾಗಿಯೇ ಅವನು ಈ ಕಾರ್ಯದಲ್ಲಿ ತನ್ನನ್ನು ತೊಡಗಿಸಿಕೊಂಡ. ಆದ್ದರಿಂದಲೇ ಸಾಯುವಾಗ 'ಹಾ ಸೀತೇ ಹಾ ಲಕ್ಷ್ಣ' ಎಂದು ಮೋಸದಮಾತನಾಡಿ ಪ್ರಾಣತೊರೆದ. ॥ ೩೧ ॥

ಬಂದಿತು ಬಂಗಾರದ ಜಿಂಕೆ

ಸ ಪ್ರಾಪ್ಯ ಹೈಮಮೃಗತಾಂ ಬಹುರತ್ನಚಿತ್ರಃ
ಸೀತಾಸಮೀಪ ಉರುಧಾ ವಿಚಚಾರ ಶೀಘ್ರಮ್ ।
ನಿರ್ದೋಷನಿತ್ಯವರಸಂವಿದಪಿ ಸ್ಮ ದೇವೀ
ರಕ್ಷೋವಧಾಯ ಜನಮೋಹಕೃತೇ ತಥಾಽಽಹ ॥ ೩೨ ॥

ಪದಚ್ಛೇದ : ಸಃ ಪ್ರಾಪ್ಯ ಹೈಮಮೃಗತಾಂ ಬಹುರತ್ನಚಿತ್ರಃ ಸೀತಾಸಮೀಪೇ ಉರುಧಾ ವಿಚಚಾರ ಶೀಘ್ರಮ್ । ನಿರ್ದೋಷನಿತ್ಯವರಸಂವಿತ್ ಅಪಿ ಸ್ಮ ದೇವೀ ರಕ್ಷೋವಧಾಯ ಜನಮೋಹಕೃತೇ ತಥಾ ಆಹ ॥

**ಅರ್ಥ** :- **ಬಹುರತ್ನಚಿತ್ರಃ** ಅನೇಕ ಮಣಿಗಳಿಂದ ಅಲಂಕೃತವಾದ ವಿಚಿತ್ರವಾದ, ಸಃ ಮಾರೀಚನು, **ಹೈಮಮೃಗತಾಂ** ಬಂಗಾರದ ಜಿಂಕೆಯ ರೂಪವನ್ನು **ಪ್ರಾಪ್ಯ** ಹೊಂದಿ, **ಉರುಧಾ** ಅನೇಕ ಪ್ರಕಾರವಾಗಿ, **ಸೀತಾಸಮೀಪೇ** ಸೀತಾದೇವಿಯ ಹತ್ತಿರ, **ಶೀಘ್ರಂ** ವೇಗವಾಗಿ, **ವಿಚಚಾರ** ಸಂಚರಿಸಿದನು, **ದೇವೀ** ಸೀತಾದೇವಿಯು, **ನಿರ್ದೋಷನಿತ್ಯವರಸಂವಿದಪಿ** ದೋಷವಿಲ್ಲದ, ನಿತ್ಯವಾದ ಹಾಗೂ ಶ್ರೇಷ್ಠವಾದ ಜ್ಞಾನಸ್ವರೂಪಳಾದರೂ ಕೂಡ, **ರಕ್ಷೋವಧಾಯ** ರಾಕ್ಷಸರ ಸಂಹಾರಕ್ಕೋಸ್ಕರ ಮತ್ತು, **ಜನಮೋಹಕೃತೇ** ದುಷ್ಟ ಜನರಿಗೆ ಮಿಥ್ಯಾಜ್ಞಾನವನ್ನುಂಟು ಮಾಡುವುದಕ್ಕೋಸ್ಕರ, **ಯಥಾ** ಹೇಗೆ ರಾಕ್ಷಸರ ಸಂಹಾರವಾದೀತೋ ಮತ್ತು ದುಷ್ಟರಿಗೆ ಮಿಥ್ಯಾಜ್ಞಾನ ಉಂಟಾದೀತೋ, **ತಥಾ** ಹಾಗೆ, **ಆಹ** ಹೇಳಿದಳು, ಸ್ಮ ಇದು ಪ್ರಸಿದ್ಧ

**ತಾತ್ಪರ್ಯ** : ಬಹುರತ್ನಗಳಿಂದ ಸಮಲಂಕೃತವಾದ ಬಂಗಾರದ ಜಿಂಕೆಯ ರೂಪಧರಿಸಿ ಮಾರೀಚ ಸೀತೆಯ ಹತ್ತಿರ ಓಡಾಡಿದ. ನಿತ್ಯನಿರ್ದೋಷ ಜ್ಞಾನಸ್ವರೂಪಳಾದ ಸೀತೆ, ರಾಕ್ಷಸರ ಸಂಹಾರ ಮತ್ತು ದುಷ್ಟಜನಮೋಹನಕ್ಕಾಗಿ ಶ್ರೀರಾಮನ ಮುಂದೆ ಹೀಗೆ ಮಾತನಾಡಿದಳು. ॥ ೩೨ ॥

ದೇವೇಮಮಾಶು ಪರಿಗೃಹ್ಯ ಚ ದೇಹಿ ಮೇ ತ್ವಂ
ಕ್ರೀಡಾಮೃಗಂ ತ್ವಿತಿ ತಯೋದಿತ ಏವ ರಾಮಃ ।
ಅನ್ವಕ್ಷಸಾರ ಹ ಶರಾಸನಬಾಣಪಾಣಿ-
ರ್ಮಾಯಾಮೃಗಂ ನಿಶಿಚರಂ ನಿಜಘಾನ ಜಾನನ್ ॥ ೩೩ ॥

ಪದಚ್ಛೇದ : ದೇವ ಇಮಮ್ ಆಶು ಪರಿಗೃಹ್ಯ ಚ ದೇಹಿ ಮೇ ತ್ವಂ ಕ್ರೀಡಾಮೃಗಂ ತು ಇತಿ ತಯಾ ಉದಿತಃ ಏವ ರಾಮಃ । ಅನ್ವಕ್ಸಾರ ಹ ಶರಾಸನಬಾಣಪಾಣಿಃ ಮಾಯಾಮೃಗಂ ನಿಶಿಚರಂ ನಿಜಘಾನ ಜಾನನ್ ॥

**ಅರ್ಥ :-** **ಹೇ ದೇವ** ಕ್ರೀಡಾದಿಗುಣವಿಶಿಷ್ಟನೇ, **ಇಮಂ** ಈ, **ಕ್ರೀಡಾಮೃಗಂ** ಆಟಕ್ಕೆ ಯೋಗ್ಯವಾದ ಜಿಂಕೆಯನ್ನು, **ಆಶು** ಬೇಗನೇ, **ಪರಿಗೃಹ್ಯ** ಹಿಡಿದು, **ತ್ವಂ** ನೀನು, **ಮೇ** ನನಗೆ, **ದೇಹಿ** ಕೊಡು, **ಇತಿ** ಈ ರೀತಿಯಾಗಿ, **ತಯಾ** ಸೀತಾದೇವಿಯಿಂದ, **ಉದಿತ ಏವ** ಹೇಳಿಸಿಕೊಳ್ಳಲ್ಪಟ್ಟ, **ರಾಮಃ** ರಾಮನು, **ಶರಾಸನಬಾಣಪಾಣಿಃ** ಬಿಲ್ಲು ಬಾಣಗಳು ಕೈಯಲ್ಲಿ ಉಳ್ಳವನಾಗಿ, **ಅನ್ವಕ್ಸಾರ** ಅನುಸರಿಸಿ ಹೋದನು, **ಮಾಯಾಮೃಗಂ** ಕಪಟ ಜಿಂಕೆಯ ರೂಪವುಳ್ಳ, **ನಿಶಿಚರಂ** ರಾಕ್ಷಸನಾದ ಮಾರೀಚನನ್ನು, **ಜಾನನ್** ತಿಳಿದವನಾಗಿ, **ಜಘಾನ** ಕೊಂದನು.

**ತಾತ್ಪರ್ಯ :-** ಓ ! ದೇವ ಈ ಬಂಗಾರದ ಜಿಂಕೆಯನ್ನು ಹಿಡಿದು ತಾ. ಹೀಗೆ ಸೀತೆ ಪ್ರಾರ್ಥಿಸಿದಾಗ ಶ್ರೀರಾಮನು, ಇವನು ಮೂಲತಃ ರಾಕ್ಷಸನೆಂದು ತಿಳಿದೇ ಅವನ ಸಂಹಾರಕ್ಕೋಸ್ಕರ ಬಿಲ್ಲು ಬಾಣಗಳನ್ನು ಧರಿಸಿಕೊಂಡು ಅಟ್ಟಿಸಿಕೊಂಡು ಹೋದನು. ಅನಂತರ ಅವನನ್ನು ಸಂಹರಿಸಿದನು. ॥ ೩೩ ॥

ಮಾರೀಚನ ಸಂಹಾರ

**ತೇನಾಹತಃ ಶರವರೇಣ ಭೃಶಂ ಮಮಾರ**
**ವಿಕ್ರುಶ್ಯ ಲಕ್ಷ್ಮಣ ಮುರುವ್ಯಥಯಾ ಸ ಪಾಪಃ ।**
**ಶ್ರುತ್ವೈವ ಲಕ್ಷ್ಮಣಮಚೂಚುದದುಗ್ರವಾಕ್ಯೈಃ**
**ಸೋಽಪ್ಯಾಪ ರಾಮಪಥಮೇವ ಸಚಾಪಬಾಣಃ ॥ ೩೪ ॥**

ಪದಚ್ಛೇದ : ತೇನ ಆಹತಃ ಶರವರೇಣ ಭೃಶಂ ಮಮಾರ ವಿಕ್ರುಶ್ಯ ಲಕ್ಷ್ಮಣಮ್ ಉರುವ್ಯಥಯಾ ಸಃ ಪಾಪಃ । ಶ್ರುತ್ವಾ ಏವ ಲಕ್ಷ್ಮಣಮ್ ಅಚೂಚುದತ್ ಉಗ್ರವಾಕ್ಯೈಃ ಸಃ ಅಪಿ ಆಪ ರಾಮಪಥಮ್ ಏವ ಸಚಾಪಬಾಣಃ ॥

**ಅರ್ಥ :-** **ತೇನ** ಆ ರಾಮನಿಂದ, **ಶರವರೇಣ** ಶ್ರೇಷ್ಠ ಬಾಣದಿಂದ, **ಭೃಶಂ** ಚೆನ್ನಾಗಿ, **ಆಹತಃ** ಹೊಡೆಯಲ್ಪಟ್ಟ, **ಪಾಪಃ** ಪಾಪಿಷ್ಠನಾದ, **ಸಃ** ಆ ಮಾರೀಚನು, **ಉರುವ್ಯಥಯಾ** ತೀವ್ರವೇದನೆಯಿಂದ, **ಲಕ್ಷ್ಮಣಂ** ಲಕ್ಷ್ಮಣನನ್ನು, **ವಿಕ್ರುಶ್ಯ** = 'ಓ

ಲಕ್ಷ್ಮಣನೇ' ಎಂಬುದಾಗಿ ಕರೆದು, **ಮಮಾರ** ಸತ್ತನು, **ಶ್ರುತ್ವೈವ** ಈ ಉದ್ಗಾರ ವನ್ನು ಕೇಳಿಯೇ, ಸೀತಾದೇವಿಯು, **ಉಗ್ರವಾಕ್ಯೈಃ** ಕಟುಮಾತುಗಳಿಂದ, **ಲಕ್ಷ್ಮಣಂ** ಲಕ್ಷ್ಮಣನನ್ನು **ಅಚೂಚುದತ್** ಹೋಗಲು ಪ್ರೇರಿಸಿದಳು, **ಸೋಪಿ** ಆ ಲಕ್ಷ್ಮಣನಾದರೂ, **ಸಚಾಪಬಾಣಃ ಸನ್** ಧನುರ್ಬಾಣಗಳಿಂದ ಸಹಿತನಾಗಿ, **ರಾಮಪಥಮೇವ** ರಾಮನು ಹೋದ ದಾರಿಯಲ್ಲೇ, **ಆಪ** ತೆರಳಿದನು.

**ತಾತ್ಪರ್ಯ** :- ರಾಮನ ಬಾಣದ ಪೆಟ್ಟು ತಿಂದ ಮಾರೀಚ 'ಹಾ ಲಕ್ಷ್ಮಣ' ಎಂದು ಕೂಗುತ್ತ ವೇದನೆ ಸಹಿಸಲಾಗದೆ ಮರಣವನ್ನಪ್ಪಿದ. ಸೀತೆಯು ಕಟೂಕ್ತಿ ಯಿಂದ ಲಕ್ಷ್ಮಣನನ್ನು ನಿಂದಿಸಿ ರಾಮನಿರುವಲ್ಲಿ ಹೋಗಲು ಆದೇಶಿಸಿದಳು. ಲಕ್ಷ್ಮಣನು ಬಿಲ್ಲು-ಬಾಣಗಳನ್ನು ಧರಿಸಿ ರಾಮ ನಡೆದ ದಾರಿಯಲ್ಲಿ ಪಯಣಿಸಿದನು ॥ ೩೪ ॥

**ಯಾಂ ಯಾಂ ಪರೇಶ ಉರುಧೈವ ಕರೋತಿ ಲೀಲಾಂ**
**ತಾಂ ತಾಂ ಕರೋತ್ಯನು ತಥೈವ ರಮಾಽಪಿ ದೇವೀ ।**
**ನೈತಾವತಾಽಸ್ಯ ಪರಮಸ್ಯ ತಥಾ ರಮಾಯಾ**
**ದೋಷೋಽಣುರಪ್ಯನುವಿಚಿಂತ್ಯ ಉರುಪ್ರಭೂ ಯತ್ ॥ ೩೫ ॥**

ಪದಚ್ಛೇದ : **ಯಾಂ ಯಾಂ ಪರೇಶಃ ಉರುಧಾ ಏವ ಕರೋತಿ ಲೀಲಾಂ ತಾಂ ತಾಂ ಕರೋತಿ ಅನು ತಥಾ ಏವ ರಮಾ ಅಪಿ ದೇವೀ । ನ ಏತಾವತಾ ಅಸ್ಯ ಪರಮಸ್ಯ ತಥಾ ರಮಾಯಾಃ ದೋಷಃ ಅಣುಃ ಅಪಿ ಅನುವಿಚಿಂತ್ಯಃ ಉರುಪ್ರಭೂಯತ್ ॥**

**ಅರ್ಥ** :- **ಪರೇಶಃ** ಏವ ಸರ್ವೇಶ್ವರನಾದ ರಾಮನು, **ಉರುಧಾ** ಅನೇಕ ರೀತಿಯಿಂದ, **ಯಾಂ ಯಾಂ ಲೀಲಾಂ** ಯಾವ ಯಾವ ಕ್ರೀಡೆಯನ್ನು (ಕಾರ್ಯವನ್ನು), **ಕರೋತಿ** ಮಾಡುತ್ತಾನೋ, **ರಮಾದೇವೀ ಅಪಿ** ಲಕ್ಷ್ಮೀ ಸ್ವರೂಪಳಾದ ಸೀತಾದೇವಿಯೂ ಕೂಡ, **ಅನು** ಪರಮಾತ್ಮನನ್ನು ಅನುಸರಿಸಿ, **ತಾಂ ತಾಂ ಲೀಲಾಂ** ಹರಿಯ ಇಚ್ಛಾನುಗುಣವಾಗಿ ಕಾರ್ಯವನ್ನು, **ತಥೈವ** ಪರಮಾತ್ಮನಂತೆಯೇ, **ಕರೋತಿ** ಮಾಡುತ್ತಾಳೆ, **ಏತಾವತಾ** ಈ ವಿಡಂಬನೆ ಯನ್ನು ಮಾಡಿದ್ದರಿಂದ, **ಪರಮಸ್ಯ** ಸರ್ವೋತ್ತಮನಾದ, **ಅಸ್ಯ** ಈ ರಾಮನಿಗೆ, **ತಥಾ** ಹಾಗೆಯೇ, **ರಮಾಯಾಃ** ಲಕ್ಷ್ಮೀರೂಪಳಾದ ಸೀತೆಗೂ ಕೂಡ, **ಅಣುರಪಿ**

ಸ್ವಲ್ಪವೂ ಕೂಡ, **ದೋಷಃ** ಅಜ್ಞಾನ ದುಃಖಾದಿ ದೋಷವು, **ನೈವಾನುವಿಚಿಂತ್ಯಃ** ತಿಳಿಯಲು ಯೋಗ್ಯವಲ್ಲ. **ಯತ್** ಯಾವ ಕಾರಣದಿಂದ, **ಉರುಪ್ರಭೂ** ಉತ್ತಮರಾದ ಬ್ರಹ್ಮಾದಿಗಳಿಗೆ ಅವರು ನಿಯಾಮಕರೋ, **ತತ್** ಆದ್ದರಿಂದ, **ದೋಷಃ ನೈವಾನುವಿಚಿಂತ್ಯಃ** ದೋಷವು ಚಿಂತನಾರ್ಹವಲ್ಲ.

**ತಾತ್ಪರ್ಯ** :- ಶ್ರೀರಾಮನ ಸಂಕಲ್ಪವನ್ನರಿತು ಸೀತೆಯೂ ವಿಡಂಬನ ಕಾರ್ಯದಲ್ಲಿ ತನ್ನನ್ನು ತೊಡಗಿಸಿಕೊಳ್ಳುತ್ತಾಳೆ. ಇದರಿಂದ ರಮಾ- ನಾರಾಯಣ ರಲ್ಲಿ ಅಜ್ಞಾನಾದಿ ದೋಷಗಳಿವೆಯೆಂದು ತಿಳಿಯಬಾರದು. ಅವರೀರ್ವರೂ ಸರ್ವಶಕ್ತರಲ್ಲವೇ ? ॥ ೩೫॥

**ಕ್ವಾಜ್ಞಾನಮಾಪದಪಿ ಮಂದಕಟಾಕ್ಷಮಾತ್ರಾತ್**
**ಸರ್ಗಸ್ಥಿತಿಪ್ರಲಯಸಂಸೃತಿಮೋಕ್ಷ ಹೇತೋಃ ।**
**ದೇವ್ಯಾ ಹರೇಃ ಕಿಮು ವಿಡಂಬನಮಾತ್ರಮೇತದ್**
**ವಿಕ್ರೀಡತೋಃ ಸುರನರಾದಿವದೇವ ತಸ್ಮಾತ್ ॥ ೩೬ ॥**

ಪದಚ್ಛೇದ : ಕ್ವ ಅಜ್ಞಾನಮ್ ಆಪತ್ ಅಪಿ ಮಂದಕಟಾಕ್ಷಮಾತ್ರಾತ್ ಸರ್ಗಸ್ಥಿತಿ–ಪ್ರಲಯಸಂಸೃತಿಮೋಕ್ಷಹೇತೋಃ । ದೇವ್ಯಾಃ ಹರೇಃ ಕಿಮು ವಿಡಂಬನಮಾತ್ರಮ್ ಏತತ್ ವಿಕ್ರೀಡತೋಃ ಸುರನರಾದಿವತ್ ಏವ ತಸ್ಮಾತ್ ॥

**ಅರ್ಥ** :- **ಮಂದಕಟಾಕ್ಷಮಾತ್ರಾತ್** ಸ್ವಲ್ಪ ಕಡೆಗಣ್ಣಿನ ನೋಟದಿಂದಲೇ, **ಸರ್ಗಸ್ಥಿತಿಪ್ರಲಯಸಂಸೃತಿಮೋಕ್ಷಹೇತೋಃ** ಹುಟ್ಟು – ರಕ್ಷಣೆ – ವಿನಾಶ – ಸಂಸಾರ – ಮೋಕ್ಷ ಇವುಗಳಿಗೆ ಕಾರಣಳಾದ, **ದೇವ್ಯಾಃ** ಸೀತಾದೇವಿಗೆ, **ಅಜ್ಞಾನಂ** ಅಜ್ಞಾನವು, **ಆಪದಪಿ** ಆಪತ್ತು ಕೂಡ, **ಕ್ವ** ಎಲ್ಲಿ? (ಇಲ್ಲವೆಂದರ್ಥ), **ದೇವ್ಯಾಃ** ಸೀತಾದೇವಿಗಿಂತ ಉತ್ತಮನಾದ, **ಹರೇಃ** ರಾಮನಿಗೆ ಅಜ್ಞಾನಾದಿಗಳು, **ಕಿಮು** ಇಲ್ಲವೆಂದು ಏನು ಹೇಳಬೇಕಿದೆ ? **ಏತತ್** ಈ ಜಿಂಕೆಯನ್ನು ಅನುಸರಿಸಿ ಹೋಗುವಿಕೆಮೊದಲಾದದ್ದು **ತಸ್ಮಾತ್** ಅಜ್ಞಾನ ಆಪತ್ತು ಮೊದಲಾದ ದೋಷಗಳು ಇಲ್ಲದಿರುವುದರಿಂದ, **ಸುರನರಾದಿವತ್** ದೇವತೆಗಳು ಹಾಗೂ ಮನುಷ್ಯರು ಮೊದಲಾದವರಂತೆ, **ವಿಕ್ರೀಡತೋಃ** ಕ್ರೀಡಿಸತಕ್ಕ, **ದೇವ್ಯಾ ಹರೇಃ** ಸೀತಾದೇವಿಗೂ ರಾಮನಿಗೂ, **ಏತತ್** ಈ ಜಿಂಕೆಯನ್ನು ಅನುಸರಿಸಿ ಹೋಗುವಿಕೆ ಮೊದಲಾದದ್ದು **ವಿಡಂಬನಮಾತ್ರಂ** ಕೇವಲ ನಟನೆಯು.

**ತಾತ್ಪರ್ಯ** : ಕೇವಲ ತನ್ನ ಕಿರಿದಾದ ಕುಡಿನೋಟದಿಂದಲೇ ಸಮಗ್ರ ವಿಶ್ವದ ಸೃಷ್ಟಿ-ಸ್ಥಿತಿ-ಲಯಮೊದಲಾದ ಎಂಟು ಕ್ರಿಯೆಗಳಿಗೆ ಕಾರಣಳಾದ ಶ್ರೀದೇವಿಗೆ ಅಜ್ಞಾನ-ಅಪತ್ತುಗಳೆಲ್ಲಿವೆ ? ಶ್ರೀದೇವಿಗೇ ಆಪತ್ತಿಲ್ಲದಿರುವಾಗ ನಾರಾಯಣನಿಗೆ ಆಪತ್ತಿಲ್ಲವೆಂದು ಪ್ರತ್ಯೇಕ ಸಾಧಿಸುವ ಅಗತ್ಯವೇನಿದೆ ? ಆದರೂ ಮಾನವರ ನಡುವೆ ಅವತರಿಸಿದಾಗ ಅವರು ಮಾನವರಂತೆ ತಮ್ಮನ್ನು ತೋರಿಸಿಕೊಳ್ಳುತ್ತಾರೆ. ಇವರ ಕಾರ್ಯಗಳೆಲ್ಲ ದುರ್ಜನಮೋಹನಕ್ಕಾಗಿ ನಡೆಸಿದ ವಿಡಂಬನೆ ಮಾತ್ರ. ॥ ೩೬ ॥

### ಕೈಲಾಸಕ್ಕೆ ತೆರಳಿದ ಸೀತೆ

**ದೇವ್ಯಾಃ ಸಮೀಪಮಥ ರಾವಣ ಆಸಸಾದ**
**ಸಾಽದೃಶ್ಯತಾಮಗಮದಪ್ಯವಿಷಹ್ಯಶಕ್ತಿಃ ।**
**ಸೃಷ್ಟ್ವಾಽಽತ್ಮನಃ ಪ್ರತಿಕೃತಿಂ ಪ್ರಯಯೌ ಚ ಶೀಘ್ರಂ**
**ಕೈಲಾಸಮರ್ಚಿತಪದಾ ನ್ಯವಸಚ್ಛಿವಾಭ್ಯಾಮ್ ॥ ೩೭ ॥**

ಪದಚ್ಛೇದ : **ದೇವ್ಯಾಃ ಸಮೀಪಮ್ ಅಥ ರಾವಣಃ ಆಸಸಾದ ಸಾ ಅದೃಶ್ಯತಾಮ್ ಅಗಮತ್ ಅಪಿ ಅವಿಷಹ್ಯಶಕ್ತಿಃ । ಸೃಷ್ಟ್ವಾ ಆತ್ಮನಃ ಪ್ರತಿಕೃತಿಂ ಪ್ರಯಯೌ ಚ ಶೀಘ್ರಂ ಕೈಲಾಸಮ್ ಅರ್ಚಿತಪದಾ ನ್ಯವಸತ್ ಶಿವಾಭ್ಯಾಮ್ ॥**

**ಅರ್ಥ** :- **ಅಥ** ಅನಂತರ, **ರಾವಣಃ** ರಾವಣನು, **ದೇವ್ಯಾಃ** ಸೀತಾ ದೇವಿಯ, **ಸಮೀಪಂ** ಹತ್ತಿರವನ್ನು, **ಆಸಸಾದ** ಹೊಂದಿದನು, **ಸಾ** ಆ ಸೀತಾ ದೇವಿಯು, **ಅವಿಷಹ್ಯಶಕ್ತಿರಪಿ** ಇನ್ನೊಬ್ಬರಿಂದ ಸಹಿಸಲಾಗದ ಸಾಮರ್ಥ್ಯವುಳ್ಳ ವಳಾದರೂ ಕೂಡ, **ಆತ್ಮನಃ** ತನ್ನ, **ಪ್ರತಿಕೃತಿಂ** ಪ್ರತಿಮೆಯನ್ನು, **ಸೃಷ್ಟ್ವಾ** ಸೃಷ್ಟಿಸಿ, **ಅದೃಶ್ಯತಾಂ** ಕಾಣದಿರುವಿಕೆಯನ್ನು **ಅಗಮತ್** ಹೊಂದಿದಳು, **ಶೀಘ್ರಂ** ಕೂಡಲೇ, **ಕೈಲಾಸಂ** ಕೈಲಾಸ ಪರ್ವತವನ್ನು, **ಪ್ರಯಯೌ** ಹೋದಳು, **ಶಿವಾಭ್ಯಾಂ** ರುದ್ರ ಪಾರ್ವತಿಯರಿಂದ, **ಅರ್ಚಿತಪದಾ** ಪೂಜಿಸಲ್ಪಟ್ಟವಳಾಗಿ, **ನ್ಯವಸತ್** ಕೈಲಾಸದಲ್ಲಿ ವಾಸ ಮಾಡಿದಳು.

**ತಾತ್ಪರ್ಯ** :- ಅನಂತರ ರಾವಣ ಸೀತೆಯ ಬಳಿ ಬಂದ. ಅಮಿತ ಶಕ್ತಿಯುಳ್ಳ ಅವಳನ್ನು ಅವನು ಮುಟ್ಟುವುದಾಗಲೀ ಹೊತ್ತುಕೊಂಡು ಹೋಗು ವುದಾಗಲೀ ಸಾಧ್ಯವಿಲ್ಲ. ಆದರೆ ಮುಂದಿನ ಕಾರ್ಯಕ್ಕಾಗಿ ಸೀತಾದೇವಿಯು ತನ್ನ ಪ್ರತಿಕೃತಿಯೊಂದನ್ನು ಅಲ್ಲಿ ಸೃಜಿಸಿ ಅದೃಶ್ಯಳಾದಳು. ಅಲ್ಲಿಂದ ಉಮಾ-ಮಹೇಶ್ವರರ ಬಳಿ ತೆರಳಿ ಅಲ್ಲಿ ಪೂಜೆ ಸ್ವೀಕರಿಸುತ್ತ ಇದ್ದಳು. ॥ ೩೭ ॥

### ಜಟಾಯುವಿನ ಪ್ರತಿಭಟನೆ

**ತಸ್ಯಾಸ್ತು ತಾಂ ಪ್ರತಿಕೃತಿಂ ಪ್ರವಿವೇಶ ಶಕ್ರೋ**
**ದೇವ್ಯಾಶ್ಚ ಸನ್ನಿಧಿಯುತಾಂ ವ್ಯವಹಾರಸಿದ್ಧ್ಯೈ ।**
**ಆದಾಯ ತಾಮಥ ಯಯೌ ರಜನೀಚರೇಂದ್ರೋ**
**ಹತ್ವಾ ಜಟಾಯುಷಮುರುಶ್ರಮತೋ ನಿರುದ್ಧಃ ॥ ೩೮ ॥**

ಪದಚ್ಛೇದ : ತಸ್ಯಾಃ ತು ತಾಂ ಪ್ರತಿಕೃತಿಂ ಪ್ರವಿವೇಶ ಶಕ್ರಃ ದೇವ್ಯಾಃ ಚ ಸನ್ನಿಧಿಯುತಾಂ ವ್ಯವಹಾರಸಿದ್ಧ್ಯೈ । ಆದಾಯ ತಾಮ್ ಅಥ ಯಯೌ ರಜನೀಚರೇಂದ್ರಃ ಹತ್ವಾ ಜಟಾಯುಷಮ್ ಉರುಶ್ರಮತಃ ನಿರುದ್ಧಃ ॥

**ಅರ್ಥ :-** **ಶಕ್ರಃ** ಇಂದ್ರನು, **ತಸ್ಯಾಃ** ಕೈಲಾಸವನ್ನು ಕುರಿತು ಹೋಗಿರುವ ಸೀತಾದೇವಿಯ, **ಸನ್ನಿಧಿಯುತಾಂ** ಸನ್ನಿಧಾನದಿಂದ ಕೂಡಿದ, **ತಾಂ** ಆ ಆಶ್ರಮದಲ್ಲಿ ನಿರ್ಮಿಸಲ್ಪಟ್ಟ ಪ್ರತಿಮೆಯಲ್ಲಿ, **ವ್ಯವಹಾರಸಿದ್ಧ್ಯೈ** ಮಾತು-ಕೃತಿ ಮುಂತಾದ ವ್ಯವಹಾರಸಿದ್ಧಿಗಾಗಿ, **ಪ್ರವಿವೇಶ** ಪ್ರವೇಶಿಸಿದನು, **ಅಥ** ಇಂದ್ರನು ಪ್ರವೇಶಿಸಿದ ಅನಂತರ, **ರಜನೀಚರೇಶಃ** ರಾಕ್ಷಸರ ಸ್ವಾಮಿಯಾದ ರಾವಣನು, **ನಿರುದ್ಧಃ** ದಾರಿಯಲ್ಲಿ ಜಟಾಯುವಿನಿಂದ ತಡೆಯಲ್ಪಟ್ಟವನಾಗಿ, **ಜಟಾಯುಷಂ** ಜಟಾಯುವನ್ನು, **ಉರುಶ್ರಮತಃ** ಬಹು ಪ್ರಯಾಸದಿಂದ, **ಹತ್ವಾ** ಹಿಂಸಿಸಿ, **ತಾಂ** ಆ ಪ್ರತಿಮೆಯನ್ನು **ಆದಾಯ** ಹಿಡಿದುಕೊಂಡು, **ಯಯೌ** ಪ್ರಯಾಣ ಮಾಡಿದನು.

**ತಾತ್ಪರ್ಯ :-** ಸೀತೆಯು ಸೃಷ್ಟಿಸಿದ ಪ್ರಾಕೃತ ಪ್ರತಿಮೆಯಲ್ಲಿ ಮಾತನಾಡುವುದು ಪ್ರತಿಭಟಿಸುವುದೇ ಮೊದಲಾದ ವ್ಯವಹಾರನಡೆಸಲು ಇಂದ್ರನು ಪ್ರವೇಶಿಸಿದನು. ಅಲ್ಲಿ ಸೀತೆಯ ಸನ್ನಿಧಾನವೂ ಇದ್ದಿತು. ಸೀತಾಕೃತಿಯನ್ನು ಹೊತ್ತು ಪಯಣಿಸಿದ ರಾವಣನಿಗೆ ಮಾರ್ಗಮಧ್ಯದಲ್ಲಿ ಜಟಾಯು ತಡೆಯೊಡ್ಡಿದನು. ರಾವಣ ಅವನ ರೆಕ್ಕೆ-ಕಾಲುಗಳನ್ನು ಕತ್ತರಿಸಿ ಮುಂದೆ ಪಯಣಿಸಿದ. ॥ ೩೮ ॥

**ಮಾರ್ಗೇ ವ್ರಜಂತಮಭಿಯಾಯ ತತೋ ಹನೂಮಾನ್**
**ಸಂವಾರಿತೋ ರವಿಸುತೇನ ಚ ಜಾನಮಾನಃ ।**
**ದೈವಂ ತು ಕಾರ್ಯಮಥ ಕೀರ್ತಿಮಭೀಪ್ಸಮಾನೋ**
**ರಾಮಸ್ಯ ನೈನಮಹನದ್‌ವಚನಾದ್ಧರೇಶ್ಚ ॥ ೩೯ ॥**

ಪದಚ್ಛೇದ : ಮಾರ್ಗೇ ವ್ರಜಂತಮ್ ಅಭಿಯಾಯ ತತಃ ಹನೂಮಾನ್ ಸಂವಾರಿತಃ ರವಿಸುತೇನ ಚ ಜಾನಮಾನಃ । ದೈವಂ ತು ಕಾರ್ಯಂ ಅಥ ಕೀರ್ತಿಂ ಅಭೀಪ್ಸಮಾನಃ ರಾಮಸ್ಯ ನ ಏನಮ್ ಅಹನತ್ ವಚನಾತ್ ಹರೇಃ ಚ ॥

**ಅರ್ಥ** :- **ತತಃ** ನಂತರ, **ಹನೂಮಾನ್** ಹನುಮಂತನು, **ಮಾರ್ಗೇ** ದಾರಿಯಲ್ಲಿ, **ವ್ರಜಂತಂ** ಹೋಗತಕ್ಕ ರಾವಣನನ್ನು **ಅಭಿಯಾಯ** ತಡೆಯ ಬಯಸಿ, **ರವಿಸುತೇನ** ಸೂರ್ಯ ಪುತ್ರನಾದ ಸುಗ್ರೀವನಿಂದ, **ಸಂವಾರಿತಃ** ತಡೆಯಲ್ಪಟ್ಟವನಾಗಿ, **ದೈವಂ** ದೇವತಾಸಂಬಂಧಿಯಾದ, **ಕಾರ್ಯಂ ತು** ಎಲ್ಲಾ ರಾಕ್ಷಸರಸಂಹಾರರೂಪ ಕಾರ್ಯವನ್ನು, **ಜಾನಮಾನಃ** ತಿಳಿದವನಾಗಿ, **ಅಥ** ಮತ್ತು, **ರಾಮಸ್ಯ** ಶ್ರೀರಾಮನ, **ಕೀರ್ತಿಂ** ಯಶಸ್ಸನ್ನು, **ಅಭೀಪ್ಸಮಾನಃ** ಬಯಸಿದವನಾಗಿ, **ಹರೇಃ** ಪರಮಾತ್ಮನ, **ವಚನಾಚ್ಚ** ಮೂರು ಜನ್ಮಗಳಲ್ಲಿಯೂ ನಾನೇ ನಿಮ್ಮನ್ನು ಕೊಲ್ಲುವೆನೆಂಬ, ಜಯವಿಜಯರಿಗೆ ಕೊಟ್ಟಿರುವ ಮಾತನ್ನು ತಿಳಿದವನಾಗಿ, **ಏನಂ** ಈ ರಾವಣನನ್ನು **ನಾಹನತ್** ಕೊಲ್ಲಲಿಲ್ಲ.

**ತಾತ್ಪರ್ಯ** :- ಜಟಾಯುವನ್ನು ನಿರ್ವಿಣ್ಣನಾಗಿಸಿ ರಾವಣ, ಋಷ್ಯಮೂಕ ಪರ್ವತದ ಮಾರ್ಗವಾಗಿ ಸಂಚರಿಸುತ್ತ ಲಂಕೆಗೆ ತೆರಳುತ್ತಲಿದ್ದ. ಅವನನ್ನು ಕಂಡ ಹನುಮಂತ ತಡೆಯ ಬಯಸಿದ. ಸುಗ್ರೀವ ಅವನನ್ನು ತಡೆದ. ಸಕಲರಾಕ್ಷಸರ ಸಂಹಾರವಾಗಬೇಕೆಂಬ ದೈವಸಂಕಲ್ಪ ಮತ್ತು ಮೂರು ಜನ್ಮಗಳಲ್ಲೂ ನಾನೇ ನಿಮ್ಮನ್ನು ಸಂಹರಿಸುವೆನೆಂದು ಶ್ರೀಹರಿ ಜಯ-ವಿಜಯರಿಗೆ ನೀಡಿದ ವರವನ್ನು ತಿಳಿದ ಹನುಮಂತ, ರಾವಣಸಂಹಾರದಿಂದ ಸ್ವಾಮಿ ರಾಮನ ಕೀರ್ತಿ ಎಲ್ಲೆಡೆ ಹರಡಲೆಂದು ಸುಮ್ಮನಾದ. ॥೩೯॥

**ಪ್ರಾಪ್ಯೈವ ರಾಕ್ಷಸ ಉತಾತ್ಮಪುರೀಂ ಸ ತತ್ರ**
**ಸೀತಾಕೃತಿಂ ಪ್ರತಿನಿಧಾಯ ರರಕ್ಷ ಚಾಥ ।**
**ರಾಮೋಽಪಿ ತತ್ತು ವಿನಿಹತ್ಯ ಸುದುಷ್ಟರಕ್ಷಃ**
**ಪ್ರಾಪ್ಯಾಶ್ರಮಂ ಸ್ವದಯಿತಾಂ ನ ಹಿ ಪಶ್ಯತೀವ ॥ ೪೦ ॥**

ಪದಚ್ಛೇದ : ಪ್ರಾಪ್ಯ ಏವ ರಾಕ್ಷಸಃ ಉತ ಆತ್ಮಪುರೀಂ ಸಃ ತತ್ರ ಸೀತಾಕೃತಿಂ ಪ್ರತಿನಿಧಾಯ ರರಕ್ಷ ಚ ಅಥ । ರಾಮಃ ಅಪಿ ತತ್ ತು ವಿನಿಹತ್ಯ ಸುದುಷ್ಟರಕ್ಷಃ ಪ್ರಾಪ್ಯ ಆಶ್ರಮಂ ಸ್ವದಯಿತಾಂ ನ ಹಿ ಪಶ್ಯತಿ ಇವ ॥

### ಜಟಾಯುವಿನ ಪ್ರತಿಭಟನೆ

ತಸ್ಯಾಸ್ತು ತಾಂ ಪ್ರತಿಕೃತಿಂ ಪ್ರವಿವೇಶ ಶಕ್ರೋ
ದೇವ್ಯಾಶ್ಚ ಸನ್ನಿಧಿಯುತಾಂ ವ್ಯವಹಾರಸಿದ್ಧ್ಯೈ ।
ಆದಾಯ ತಾಮಥ ಯಯೌ ರಜನೀಚರೇಂದ್ರೋ
ಹತ್ವಾ ಜಟಾಯುಷಮುರುಶ್ರಮತೋ ನಿರುದ್ಧಃ ॥ ೩೮ ॥

ಪದಚ್ಛೇದ : ತಸ್ಯಾಃ ತು ತಾಂ ಪ್ರತಿಕೃತಿಂ ಪ್ರವಿವೇಶ ಶಕ್ರಃ ದೇವ್ಯಾಃ ಚ ಸನ್ನಿಧಿಯುತಾಂ ವ್ಯವಹಾರಸಿದ್ಧ್ಯೈ । ಆದಾಯ ತಾಮ್ ಅಥ ಯಯೌ ರಜನೀಚರೇಂದ್ರಃ ಹತ್ವಾ ಜಟಾಯುಷಮ್ ಉರುಶ್ರಮತಃ ನಿರುದ್ಧಃ ॥

**ಅರ್ಥ :-** **ಶಕ್ರಃ** ಇಂದ್ರನು, **ತಸ್ಯಾಃ** ಕೈಲಾಸವನ್ನು ಕುರಿತು ಹೋಗಿರುವ ಸೀತಾದೇವಿಯ, **ಸನ್ನಿಧಿಯುತಾಂ** ಸನ್ನಿಧಾನದಿಂದ ಕೂಡಿದ, **ತಾಂ** ಆ ಆಶ್ರಮದಲ್ಲಿ ನಿರ್ಮಿಸಲ್ಪಟ್ಟ ಪ್ರತಿಮೆಯಲ್ಲಿ **ವ್ಯವಹಾರಸಿದ್ಧ್ಯೈ** ಮಾತು-ಕೃತಿ ಮುಂತಾದ ವ್ಯವಹಾರಸಿದ್ಧಿಗಾಗಿ, **ಪ್ರವಿವೇಶ** ಪ್ರವೇಶಿಸಿದನು, **ಅಥ** ಇಂದ್ರನು ಪ್ರವೇಶಿಸಿದ ಅನಂತರ, **ರಜನೀಚರೇಶಃ** ರಾಕ್ಷಸರ ಸ್ವಾಮಿಯಾದ ರಾವಣನು, **ನಿರುದ್ಧಃ** ದಾರಿಯಲ್ಲಿ ಜಟಾಯುವಿನಿಂದ ತಡೆಯಲ್ಪಟ್ಟವನಾಗಿ, **ಜಟಾಯುಷಂ** ಜಟಾಯುವನ್ನು, **ಉರುಶ್ರಮತಃ** ಬಹು ಪ್ರಯಾಸದಿಂದ, **ಹತ್ವಾ** ಹಿಂಸಿಸಿ, **ತಾಂ** ಆ ಪ್ರತಿಮೆಯನ್ನು, **ಆದಾಯ** ಹಿಡಿದುಕೊಂಡು, **ಯಯೌ** ಪ್ರಯಾಣ ಮಾಡಿದನು.

**ತಾತ್ಪರ್ಯ :-** ಸೀತೆಯು ಸೃಷ್ಟಿಸಿದ ಪ್ರಾಕೃತ ಪ್ರತಿಮೆಯಲ್ಲಿ ಮಾತನಾಡುವುದು ಪ್ರತಿಭಟಿಸುವುದೇ ಮೊದಲಾದ ವ್ಯವಹಾರನಡೆಸಲು ಇಂದ್ರನು ಪ್ರವೇಶಿಸಿದನು. ಅಲ್ಲಿ ಸೀತೆಯ ಸನ್ನಿಧಾನವೂ ಇದ್ದಿತು. ಸೀತಾಕೃತಿಯನ್ನು ಹೊತ್ತು ಪಯಣಿಸಿದ ರಾವಣನಿಗೆ ಮಾರ್ಗಮಧ್ಯದಲ್ಲಿ ಜಟಾಯು ತಡೆಯೊಡ್ಡಿದನು. ರಾವಣ ಅವನ ರೆಕ್ಕೆ-ಕಾಲುಗಳನ್ನು ಕತ್ತರಿಸಿ ಮುಂದೆ ಪಯಣಿಸಿದ. ॥ ೩೮ ॥

ಮಾರ್ಗೇ ವ್ರಜಂತಮಭಿಯಾಯ ತತೋ ಹನೂಮಾನ್
ಸಂವಾರಿತೋ ರವಿಸುತೇನ ಚ ಜಾನಮಾನಃ ।
ದೈವಂ ತು ಕಾರ್ಯಮಥ ಕೀರ್ತಿಮಭೀಪ್ಸಮಾನೋ
ರಾಮಸ್ಯ ನೈನಮಹನದ್ವಚನಾದ್ಧರೇಶ್ಚ ॥ ೩೯ ॥

ಪದಚ್ಛೇದ : ಮಾರ್ಗೇ ವ್ರಜಂತಮ್ ಅಭಿಯಾಯ ತತಃ ಹನೂಮಾನ್ ಸಂವಾರಿತಃ ರವಿಸುತೇನ ಚ ಜಾನಮಾನಃ । ದೈವಂ ತು ಕಾರ್ಯಂ ಅಥ ಕೀರ್ತಿಂ ಅಭೀಪ್ಸಮಾನಃ ರಾಮಸ್ಯ ನ ಏನಮ್ ಅಹನತ್ ವಚನಾತ್ ಹರೇಃ ಚ ॥

**ಅರ್ಥ** :- **ತತಃ** ನಂತರ, **ಹನೂಮಾನ್** ಹನುಮಂತನು, **ಮಾರ್ಗೇ** ದಾರಿಯಲ್ಲಿ, **ವ್ರಜಂತಂ** ಹೋಗತಕ್ಕ ರಾವಣನನ್ನು, **ಅಭಿಯಾಯ** ತಡೆಯ ಬಯಸಿ, **ರವಿಸುತೇನ** ಸೂರ್ಯ ಪುತ್ರನಾದ ಸುಗ್ರೀವನಿಂದ, **ಸಂವಾರಿತಃ** ತಡೆಯಲ್ಪಟ್ಟವನಾಗಿ, **ದೈವಂ** ದೇವತಾಸಂಬಂಧಿಯಾದ, **ಕಾರ್ಯಂ ತು** ಎಲ್ಲಾ ರಾಕ್ಷಸರಸಂಹಾರರೂಪ ಕಾರ್ಯವನ್ನು **ಜಾನಮಾನಃ** ತಿಳಿದವನಾಗಿ, **ಅಥ** ಮತ್ತು, **ರಾಮಸ್ಯ** ಶ್ರೀರಾಮನ, **ಕೀರ್ತಿಂ** ಯಶಸ್ಸನ್ನು **ಅಭೀಪ್ಸಮಾನಃ** ಬಯಸಿದವನಾಗಿ, **ಹರೇಃ** ಪರಮಾತ್ಮನ, **ವಚನಾಚ್ಚ** ಮೂರು ಜನ್ಮಗಳಲ್ಲಿಯೂ ನಾನೇ ನಿಮ್ಮನ್ನು ಕೊಲ್ಲುವೆನೆಂಬ, ಜಯವಿಜಯರಿಗೆ ಕೊಟ್ಟಿರುವ ಮಾತನ್ನು ತಿಳಿದವನಾಗಿ, **ಏನಂ** ಈ ರಾವಣನನ್ನು, **ನಾಹನತ್** ಕೊಲ್ಲಲಿಲ್ಲ.

**ತಾತ್ಪರ್ಯ** :- ಜಟಾಯುವನ್ನು ನಿರ್ವಿಣ್ಣನಾಗಿಸಿ ರಾವಣ, ಋಷ್ಯಮೂಕ ಪರ್ವತದ ಮಾರ್ಗವಾಗಿ ಸಂಚರಿಸುತ್ತ ಲಂಕೆಗೆ ತೆರಳುತ್ತಲಿದ್ದ. ಅವನನ್ನು ಕಂಡ ಹನುಮಂತ ತಡೆಯ ಬಯಸಿದ. ಸುಗ್ರೀವ ಅವನನ್ನು ತಡೆದ. ಸಕಲರಾಕ್ಷಸರ ಸಂಹಾರವಾಗಬೇಕೆಂಬ ದೈವಸಂಕಲ್ಪ ಮತ್ತು ಮೂರು ಜನ್ಮಗಳಲ್ಲೂ ನಾನೇ ನಿಮ್ಮನ್ನು ಸಂಹರಿಸುವೆನೆಂದು ಶ್ರೀಹರಿ ಜಯ-ವಿಜಯರಿಗೆ ನೀಡಿದ ವರವನ್ನು ತಿಳಿದ ಹನುಮಂತ, ರಾವಣಸಂಹಾರದಿಂದ ಸ್ವಾಮಿ ರಾಮನ ಕೀರ್ತಿ ಎಲ್ಲೆಡೆ ಹರಡಲೆಂದು ಸುಮ್ಮನಾದ. ॥೩೯॥

**ಪ್ರಾಪ್ಯೈವ ರಾಕ್ಷಸ ಉತಾತ್ಮಪುರೀಂ ಸ ತತ್ರ**
**ಸೀತಾಕೃತಿಂ ಪ್ರತಿನಿಧಾಯ ರರಕ್ಷ ಚಾಥ ।**
**ರಾಮೋಽಪಿ ತತ್ತು ವಿನಿಹತ್ಯ ಸುದುಷ್ಟರಕ್ಷಃ**
**ಪ್ರಾಪ್ಯಾಶ್ರಮಂ ಸ್ವದಯಿತಾಂ ನ ಹಿ ಪಶ್ಯತೀವ ॥ ೪೦ ॥**

ಪದಚ್ಛೇದ : ಪ್ರಾಪ್ಯ ಏವ ರಾಕ್ಷಸಃ ಉತ ಆತ್ಮಪುರೀಂ ಸಃ ತತ್ರ ಸೀತಾಕೃತಿಂ ಪ್ರತಿನಿಧಾಯ ರರಕ್ಷ ಚ ಅಥ । ರಾಮಃ ಅಪಿ ತತ್ ತು ವಿನಿಹತ್ಯ ಸುದುಷ್ಟರಕ್ಷಃ ಪ್ರಾಪ್ಯ ಆಶ್ರಮಂ ಸ್ವದಯಿತಾಂ ನ ಹಿ ಪಶ್ಯತಿ ಇವ ॥

**ಅರ್ಥ** :- **ಸ ರಾಕ್ಷಸಃ** ಆ ರಾವಣನು, **ಆತ್ಮಪುರೀಂ** ತನ್ನ ಪಟ್ಟಣವಾದ ಲಂಕೆಯನ್ನು, **ಪ್ರಾಪ್ಯ** ಹೊಂದಿ, **ಉತ** ಮತ್ತು, **ತತ್ರ** ಆ ಲಂಕೆಯಲ್ಲಿ, **ಸೀತಾ ಕೃತಿಂ** ಸೀತಾದೇವಿಯ ಪ್ರತಿಮೆಯನ್ನು, **ಪ್ರತಿನಿಧಾಯ** ಇಟ್ಟು, **ರರಕ್ಷ ಚ** ರಕ್ಷಿಸುತ್ತಲಿದ್ದನು, **ಅಥ** ಅನಂತರ, **ರಾಮೋಪಿ** ರಾಮನಾದರೂ, **ಸುದುಷ್ಟರಕ್ಷಃ** ಅತ್ಯಂತ ದುಷ್ಟ ರಾಕ್ಷಸನಾದ, **ತತ್** ಬಂಗಾರದ ಜಿಂಕೆಯ ರೂಪ ತಳೆದ ಮಾರೀಚನನ್ನು **ವಿನಿಹತ್ಯ** ಕೊಂದು, **ಆಶ್ರಮಂ ಪ್ರಾಪ್ಯ** ಆಶ್ರಮವನ್ನು ಹೊಂದಿ, **ಸ್ವದಯಿತಾಂ** ತನ್ನ ಪ್ರಿಯಳಾದ ಸೀತೆಯನ್ನು, **ನ ಪಶ್ಯತೀವ** ನೋಡದವನಂತೆ (ಅಜ್ಞಾನ-ದುಃಖಗಳನ್ನು ಪ್ರದರ್ಶಿಸಿದನು).

**ತಾತ್ಪರ್ಯ** :- ರಾವಣ ಲಂಕೆಗೆ ಆಗಮಿಸಿ ಅಶೋಕವನದಲ್ಲಿ ಸೀತಾಕೃತಿಯನ್ನಿರಿಸಿ ರಕ್ಷಣೆಯ ವ್ಯವಸ್ಥೆ ಮಾಡಿದ. ಶ್ರೀರಾಮ ದುರುಳ ಮಾರೀಚನನ್ನು ಸಂಹರಿಸಿ ಆಶ್ರಮಕ್ಕೆ ಬಂದು ಎಂದಿಗೂ ತನ್ನೊಡನೆ ಇರುವ ಸೀತೆಯನ್ನು ಕಾಣದವನಂತೆ ತೋರಿಸಿಕೊಂಡ, ದುಃಖಿಸಿದ. ॥ ೪೦ ॥

**ಜಟಾಯುವಿಗೆ ಸದ್ಗತಿ**

**ಅನ್ವೇಷಮಾಣ ಇವ ತಂ ಚ ದದರ್ಶ ಗೃಧ್ರಂ**
**ಸೀತಾಂ ರಿರಕ್ಷಿಷುಮಥೋ ರಿಪುಣಾ ವಿಶಸ್ತಮ್ ।**
**ಮಂದಾತ್ಮಚೇಷ್ಟಮಮುನೋಕ್ತಮರೇಶ್ಚ ಕರ್ಮ**
**ಶ್ರುತ್ವಾ ಮೃತಂ ತಮದಹತ್ ಸ್ವಗತಿಂ ತಥಾऽದಾತ್ ॥ ೪೧ ॥**

ಪದಚ್ಛೇದ : ಅನ್ವೇಷಮಾಣಃ ಇವ ತಂ ಚ ದದರ್ಶ ಗೃಧ್ರಂ ಸೀತಾಂ ರಿರಕ್ಷಿಷುಮ್ ಅಥೋ ರಿಪುಣಾ ವಿಶಸ್ತಮ್ । ಮಂದಾತ್ಮಚೇಷ್ಟಮ್ ಅಮುನಾ ಉಕ್ತಮ್ ಅರೇಃ ಚ ಕರ್ಮ ಶ್ರುತ್ವಾ ಮೃತಂ ತಮ್ ಅದಹತ್ ಸ್ವಗತಿಂ ತಥಾ ಅದಾತ್ ॥

**ಅರ್ಥ** :- **ಅನ್ವೇಷಮಾಣ ಇವ** ಸೀತಾದೇವಿಯನ್ನು ಹುಡುಕುವವನಂತೆ ತಿರುಗುತ್ತಿರುವ ರಾಮನು, **ಸೀತಾಂ** ಸೀತಾದೇವಿಯನ್ನು, **ರಿರಕ್ಷಿಷುಂ** ರಕ್ಷಿಸಲು ಯತ್ನಿಸಿ, **ರಿಪುಣಾ** ವೈರಿಯಾದ ರಾವಣನಿಂದ, **ವಿಶಸ್ತಂ** ಅಂಗಾಂಗಳನ್ನು ಕಳೆದುಕೊಂಡ, **ಮಂದಾತ್ಮಚೇಷ್ಟಂ** ಪ್ರಾಣ ತೊರೆಯುವ ಸ್ಥಿತಿಯಲ್ಲಿರುವ, **ತಂ ಗೃಧ್ರಂ** ಆ ಜಟಾಯುವನ್ನು, **ದದರ್ಶ** ನೋಡಿದನು, **ಅಮುನಾ** ಈ ಜಟಾಯುವಿನಿಂದ, **ಉಕ್ತಂ** ಹೇಳಲ್ಪಟ್ಟ **ಅರೇಃ** ವೈರಿಯಾದ ರಾವಣನ, **ಕರ್ಮ** ಸೀತಾಪಹರಣಾದಿ ಕಾರ್ಯವನ್ನು, **ಶ್ರುತ್ವಾ** ಕೇಳಿ, **ಮೃತಂ** ಮರಣ ಹೊಂದಿದ,

ತಂ ಆ ಜಟಾಯುವನ್ನು **ಅದಹತ್** ಸಂಸ್ಕಾರ ಮಾಡಿದನು, **ತಥಾ** ಹಾಗೆಯೇ, **ಸ್ವಗತಿಂ** ಉತ್ತಮ ಲೋಕದ ಪ್ರಾಪ್ತಿಯನ್ನು **ಅದಾತ್** ಕರುಣಿಸಿದನು.

**ತಾತ್ಪರ್ಯ** :- ಶ್ರೀರಾಮ ಅಜ್ಞನಂತೆ ಸೀತೆಯನ್ನು ಹುಡುಕುತ್ತ ಎಲ್ಲೆಡೆ ಸಂಚರಿಸಿದ. ದಾರಿಯಲ್ಲಿ ಮರಣೋನ್ಮುಖನಾದ ಜಟಾಯುವನ್ನು ಕಂಡ. ಅವನಿಂದ ಸೀತೆಯನ್ನು ರಾವಣ ಕೊಂಡುಹೋದ ವಿಷಯ ತಿಳಿದು, ಮೃತನಾದ ಜಟಾಯುವಿಗೆ ಸಂಸ್ಕಾರ ನೆರವೇರಿಸಿದ. ಯೋಗ್ಯಗತಿ ಕರುಣಿಸಿದ. ॥ ೪೧ ॥

### ದನುಶಾಪವಿಮೋಚನೆ

**ಅನ್ಯತ್ರ ಚೈವ ವಿಚರನ್ ಸಹಿತೋಽನುಜೇನ**
**ಪ್ರಾಪ್ತಃ ಕರೌ ಸ ಸಹಸಾಽಥ ಕಬಂಧನಾಮ್ನಃ ।**
**ಧಾತುರ್ವರಾದಖಿಲಜಾಯಿನ ಉಜ್ಝಿತಸ್ಯ**
**ಮೃತ್ಯೋಶ್ಚ ವಜ್ರಪತನಾದತಿಕುಂಚಿತಸ್ಯ ॥ ೪೨ ॥**

ಪದಚ್ಛೇದ : ಅನ್ಯತ್ರ ಚ ಏವ ವಿಚರನ್ ಸಹಿತಃ ಅನುಜೇನ ಪ್ರಾಪ್ತಃ ಕರೌ ಸಃ ಸಹಸಾ ಅಥ ಕಬಂಧನಾಮ್ನಃ । ಧಾತುಃ ವರಾತ್ ಅಖಿಲಜಾಯಿನಃ ಉಜ್ಝಿತಸ್ಯ ಮೃತ್ಯೋಃ ಚ ವಜ್ರಪತನಾತ್ ಅತಿಕುಂಚಿತಸ್ಯ ॥

**ಅರ್ಥ** :- **ಅಥ** ಜಟಾಯುವಿಗೆ ಸದ್ಗತಿಯನ್ನು ಕೊಟ್ಟ ಮೇಲೆ, **ಅನ್ಯತ್ರ** ಬೇರೆ ಕಡೆ, **ವಿಚರನ್ನೇವ** ಸಂಚರಿಸಿಕೊಂಡೇ, **ಅನುಜೇನ** ತಮ್ಮನಾದ ಲಕ್ಷ್ಮಣನಿಂದ, **ಸಹಿತಃ** ಕೂಡಿದ **ಸಃ** ರಾಮನು, **ಧಾತುಃ** ಬ್ರಹ್ಮನ, **ವರಾತ್** ವರದಿಂದ, **ಅಖಿಲಜಾಯಿನಃ** ಎಲ್ಲರನ್ನು ಜಯಿಸತಕ್ಕ, **ಮೃತ್ಯೋಃ** ಮರಣದಿಂದ, **ಉಜ್ಝಿತಸ್ಯ** ರಹಿತನಾದ, **ವಜ್ರಪತನಾತ್** ಇಂದ್ರನ ವಜ್ರಾಯುಧ ಪ್ರಹಾರದಿಂದ, **ಅತಿಕುಂಚಿತಸ್ಯ** ಸಂಕುಚಿತ ದೇಹವುಳ್ಳ (ಹೊಟ್ಟೆಯಲ್ಲಿ ಶಿರಸ್ಸಿನ ಪ್ರವೇಶದಿಂದ ಅತ್ಯಂತ ಸಂಕೋಚವನ್ನು ಹೊಂದಿದ), **ಕಬಂಧನಾಮ್ನಃ** ಕಬಂಧನೆಂಬ ಹೆಸರುಳ್ಳ ರಾಕ್ಷಸನ, **ಕರೌ** ಕೈಗಳನ್ನು **ಸಹಸಾ** ಕೂಡಲೇ, **ಪ್ರಾಪ್ತಃ** ಹೊಂದಿದನು.

**ತಾತ್ಪರ್ಯ** :- ಕಾಡಿನಲ್ಲಿ ಸಂಚರಿಸುತ್ತ ಶ್ರೀರಾಮ, ಲಕ್ಷ್ಮಣನೊಡನೆ ಕಬಂಧನೆಂಬ ರಕ್ಕಸನ ಬಾಹುಗಳಲ್ಲಿ ಬಂಧಿತನಾದ, ಬ್ರಹ್ಮನ ವರದಿಂದ ಈ ರಕ್ಕಸ ಅಜೇಯನೂ ಅವಧ್ಯನೂ ಆಗಿದ್ದ. ಇಂದ್ರನ ವಜ್ರಾಯುಧದ ಹೊಡೆತಕ್ಕೆ ಸಿಲುಕಿ ರುಂಡ ಹೊಟ್ಟೆಯೊಳ ಸೇರಿ, ಶರೀರ ಸಂಕುಚಿತವಾಗಿತ್ತು. ॥ ೪೨ ॥

ಛಿತ್ವಾಽಸ್ಯ ಬಾಹುಯುಗಲಂ ಸಹಿತೋಽನುಜೇನ
ತಂ ಪೂರ್ವವತ್ ಪ್ರತಿವಿಧಾಯ ಸುರೇಂದ್ರಭೃತ್ಯಮ್ ।
ನಾಮ್ನಾ ದನುಂ ತ್ರಿಜಟಯೈವ ಪುರಾಽಭಿಜಾತಂ
ಗಂಧರ್ವಮಾಶು ಚ ತತೋಽಪಿ ತದರ್ಚಿತೋಽಗಾತ್ ॥ ೪೩ ॥

ಪದಚ್ಛೇದ : ಛಿತ್ವಾ ಅಸ್ಯ ಬಾಹುಯುಗಲಂ ಸಹಿತಃ ಅನುಜೇನ ತಂ ಪೂರ್ವವತ್ ಪ್ರತಿವಿಧಾಯ ಸುರೇಂದ್ರಭೃತ್ಯಮ್ । ನಾಮ್ನಾ ದನುಂ ತ್ರಿಜಟಯಾ ಏವ ಪುರಾ ಅಭಿಜಾತಂ ಗಂಧರ್ವಂ ಆಶು ಚ ತತಃ ಅಪಿ ತದರ್ಚಿತಃ ಅಗಾತ್ ॥

**ಅರ್ಥ** :- **ಅನುಜೇನ** ತಮ್ಮನಾದ ಲಕ್ಷ್ಮಣನಿಂದ, **ಸಹಿತಃ** ಕೂಡಿದ ರಾಮನು, **ಅಸ್ಯ** ಈ ಕಬಂಧನ, **ಬಾಹುಯುಗಲಂ** ಭುಜಗಳೆರಡನ್ನು **ಛಿತ್ವಾ** ತುಂಡರಿಸಿ, **ಗಂಧರ್ವಂ** ವಿಶ್ವಾವಸು ಎಂಬ ಗಂಧರ್ವನನ್ನು **ತ್ರಿಜಟಯಾ** ತ್ರಿಜಟೆಯೆಂಬ ರಾಕ್ಷಸಿಯಿಂದ, **ಅಭಿಜಾತಂ** ಹುಟ್ಟಿರುವ, **ನಾಮ್ನಾ** ಹೆಸರಿನಿಂದ, **ಪುರಾ** ಹಿಂದೆ, **ದನುಂ** ದನು ಎಂಬುವವನನ್ನು, **ಆಶು** ಕೂಡಲೇ, **ತಂ** ಅವನನ್ನು, **ಪೂರ್ವವತ್** ಹಿಂದಿನಂತೆ, **ಸುರೇಂದ್ರಭೃತ್ಯಂ** ದೇವೇಂದ್ರನ ಸೇವಕನನ್ನಾಗಿ, **ಪ್ರತಿವಿಧಾಯ** ಮಾಡಿ, **ತತೋಽಪಿ** ಅಲ್ಲಿಂದಲೂ, **ತದರ್ಚಿತಃ** ಆ ಗಂಧರ್ವನಿಂದ ಪೂಜಿತನಾಗಿ, **ಅಗಾತ್** ಪಯಣಿಸಿದನು.

**ತಾತ್ಪರ್ಯ** :- ಲಕ್ಷ್ಮಣನೊಡನೆ ರಾಮ ಕಬಂಧನ ಎರಡು ಬಾಹುಗಳನ್ನು ಕತ್ತರಿಸಿದ. ತ್ರಿಜಟೆಯಲ್ಲಿ ಶಾಪದಿಂದ ರಕ್ಕಸನಾಗಿ ಹುಟ್ಟಿದ, ಮೂಲತಃ ದನು ಎಂಬ ಗಂಧರ್ವನಾದ ಇವನನ್ನು ಸಂಹರಿಸಿ ಮೊದಲ ರೂಪಬರುವಂತೆ (ಗಂಧರ್ವಶರೀರ ದೊರಕುವಂತೆ) ಅನುಗ್ರಹಿಸಿ ಅವನಿಂದ ಸತ್ಕೃತನಾಗಿ ಮುಂದೆ ಸಂಚರಿಸಿದ. ॥ ೪೩ ॥

**ಶಬರಿಗೆ ಅನುಗ್ರಹ**

ದೃಷ್ಟ್ವಾ ತಮೇವ ಶಬರೀ ಪರಮಂ ಹರಿಂ ಚ
ಜ್ಞಾತ್ವಾ ವಿವೇಶ ದಹನಂ ಪುರತೋಽಸ್ಯ ತಸ್ಯೈ ।
ಪ್ರಾದಾತ್ ಸ್ವಲೋಕಮಿಮಮೇವ ಹಿ ಸಾ ಪ್ರತೀಕ್ಷ್ಯ
ಪೂರ್ವಂ ಮತಂಗವಚನೇನ ವನೇಽತ್ರ ಸಾಽಭೂತ್ ॥ ೪೪ ॥

ಪದಚ್ಛೇದ : ದೃಷ್ಟ್ವಾ ತಂ ಏವ ಶಬರೀ ಪರಮಂ ಹರಿಂ ಚ ಜ್ಞಾತ್ವಾ ವಿವೇಶ ದಹನಂ ಪುರತಃ ಅಸ್ಯ ತಸ್ಯೈ । ಪ್ರಾದಾತ್ ಸ್ವಲೋಕಮ್ ಇಮಮ್ ಏವ ಹಿ ಸಾ ಪ್ರತೀಕ್ಷ್ಯ ಪೂರ್ವಂ ಮತಂಗವಚನೇನ ವನೇ ಅತ್ರಸಾ ಅಭೂತ್ ॥

**ಅರ್ಥ :- ಪೂರ್ವಂ** ಮೊದಲು, **ಶಬರೀ** ಶಬರಿಯು, **ಮತಂಗವಚನೇನ** ಮತಂಗಋಷಿಯ ಮಾತಿನಿಂದ, **ರಾಮಂ** ಶ್ರೀರಾಮನನ್ನು, **ಪರಮಂ** ಸರ್ವೋತ್ತಮನನ್ನಾಗಿ, **ಜ್ಞಾತ್ವಾ** ತಿಳಿದು, **ತಮೇವ** ಆ ರಾಮನನ್ನೇ, **ದೃಷ್ಟ್ವಾ** ನೋಡಿ, **ಅಸ್ಯ** ಶ್ರೀರಾಮನ, **ಪುರತಃ** ಮುಂಭಾಗದಲ್ಲಿ, **ದಹನಂ** ಅಗ್ನಿಯನ್ನು, **ವಿವೇಶ** ಪ್ರವೇಶಿಸಿದಳು, **ತಸ್ಯೈ** ಆ ಶಬರಿಗೆ, **ಸ್ವಲೋಕಂ** ತನ್ನ ವೈಕುಂಠವನ್ನು **ಅದಾತ್** ಕೊಟ್ಟನು, **ಹಿ** ಇದು ಪ್ರಸಿದ್ಧವು, **ಸಾ** ಆ ಶಬರಿಯು, **ಇಮಮೇವ** ಈ ರಾಮನನ್ನೇ, **ಪ್ರತೀಕ್ಷ್ಯ** ರಾಮನು ಇಲ್ಲಿಗೆ ಬರುವನೆಂಬ ಮತಂಗರ ಮಾತನ್ನುನಂಬಿ, **ವನೇ** ಮತಂಗವನದಲ್ಲಿ, **ಅತ್ರಸಾ** ಭಯವಿಲ್ಲದವಳಾಗಿ, **ಅಭೂತ್** ಇದ್ದಳು.

**ತಾತ್ಪರ್ಯ :-** ಶಬರಿ ರಾಮನನ್ನು ಸರ್ವೇಶ್ವರನೆಂದು ಅರಿತು, ಸಾಕ್ಷಾತ್ಕಾರ ಪಡೆದು ಅವನ ಮುಂದೆ ಅಗ್ನಿ ಪ್ರವೇಶ ಮಾಡಿದಳು. ಅವಳಿಗೆ ಶ್ರೀರಾಮ ತನ್ನ ಲೋಕವನ್ನು ಕರುಣಿಸಿದ. ಅವಳು, 'ಇಲ್ಲಿ ರಾಮ ಬರುತ್ತಾನೆ' ಎಂಬ ಮತಂಗ ಋಷಿಗಳ ಮಾತಿನಲ್ಲಿ ವಿಶ್ವಾಸವಿಟ್ಟು ಕಾಡಿನಲ್ಲಿ ನಿರ್ಭಯಳಾಗಿದ್ದಳು. ॥ ೪೪ ॥

**ಶಾಪಾದ್ವರಾಪ್ಸರಸಮೇವ ಹಿ ತಾಂ ವಿಮೋಚ್ಯ**
**ಶಚ್ಯಾ ಕೃತಾತ್ ಪತಿಪುರಸ್ತ್ವತಿದರ್ಪಹೇತೋಃ ।**
**ಗತ್ವಾ ದದರ್ಶ ಪವನಾತ್ಮಜಮೃಷ್ಯಮೂಕೇ**
**ಸ ಹ್ಯೇಕ ಏನಮವಗಚ್ಛತಿ ಸಮ್ಯಗೀಶಮ್ ॥ ೪೫ ॥**

ಪದಚ್ಛೇದ : ಶಾಪಾತ್ ವರಾಪ್ಸರಸಂ ಏವ ಹಿ ತಾಂ ವಿಮೋಚ್ಯ ಶಚ್ಯಾ ಕೃತಾತ್ ಪತಿಪುರಃ ತು ಅತಿದರ್ಪಹೇತೋಃ । ಗತ್ವಾ ದದರ್ಶ ಪವನಾತ್ಮಜಮ್ ಋಷ್ಯಮೂಕೇ ಸಃ ಹಿ ಏಕಃ ಏನಂ ಅವಗಚ್ಛತಿ ಸಮ್ಯಕ್ ಈಶಮ್ ॥

**ಅರ್ಥ :- ಪತಿಪುರಃ** ತನ್ನ ಗಂಡನಾದ ಇಂದ್ರನ ಸಮ್ಮುಖದಲ್ಲಿ, **ಅತಿದರ್ಪ ಹೇತೋಃ** ಸೌಂದರ್ಯದ ಹಮ್ಮು ಪ್ರದರ್ಶಿಸಿದ್ದಕ್ಕಾಗಿ, **ಶಚ್ಯಾ** ಶಚಿಯಿಂದ, **ಕೃತಾತ್** ಮಾಡಲ್ಪಟ್ಟ **ಶಾಪಾತ್** ಬೇಡರ ಕುಲದಲ್ಲಿ ಹುಟ್ಟು ಎಂಬ ಶಾಪದಿಂದ, **ತಾಂ** ಕೆಳಜಾತಿಯಲ್ಲಿ ಹುಟ್ಟಿದ, **ವರಾಪ್ಸರಸಂ** ಉತ್ತಮಳಾದ ಅಪ್ಸರ ಸ್ತ್ರೀಯನ್ನು **ವಿಮೋಚ್ಯ** ಬಿಡಿಸಿ, **ಗತ್ವಾ** ಅಲ್ಲಿಂದ ಹೊರಟು, **ಋಷ್ಯಮೂಕೇ** ಋಷ್ಯಮೂಕ ಪರ್ವತದಲ್ಲಿ, **ಪವನಾತ್ಮಜಂ** ವಾಯುದೇವನ ಮಗನಾದ ಹನುಮಂತನನ್ನು

**ದದರ್ಶ** ನೋಡಿದನು, **ಸ ಹಿ** ಆ ಹನುಮಂತನು, **ಏಕಃ** ಒಬ್ಬನೇ, **ಏನಂ** ಈ ರಾಮನನ್ನು **ಈಶಂ** ಸರ್ವಸ್ವಾಮಿಯನ್ನಾಗಿ, **ಸಮ್ಯಕ್** ಚೆನ್ನಾಗಿ, **ಅವಗಚ್ಛತಿ** ತಿಳಿಯುತ್ತಾನೆ.

**ತಾತ್ಪರ್ಯ** :- ದೇವೇಂದ್ರನ ಮುಂದೆ ತನ್ನ ಸೌಂದರ್ಯದ ಹಮ್ಮು ತೋರಿದ ಅಪ್ಸರಸ್ತ್ರೀಯೊಬ್ಬಳು 'ಬೇಡತಿ'ಯಾಗಿ ಜನಿಸೆಂದು ಶಚೀದೇವಿಯಿಂದ ಶಪ್ತಳಾದಳು. ಅವಳೇ ಶಬರಿ. ಅವಳಿಗೆ ನಿಜರೂಪ ಕರುಣಿಸಿ ರಾಮ ಋಷ್ಯ ಮೂಕ ಪರ್ವತಕ್ಕೆ ಬಂದು ಹನುಮಂತನನ್ನು ಕಂಡ. ಅವನೊಬ್ಬನೇ ಸರಿಯಾಗಿ ಶ್ರೀರಾಮನನ್ನು ತಿಳಿದ ಮಹಾತ್ಮ. ಅವನಿಂದ ಉತ್ತಮ ಸೇವೆ ಸ್ವೀಕರಿಸಿ ಅನುಗ್ರಹಿಸಲೆಂದೇ ರಾಮ ಅವನ ಬಳಿ ಬಂದ. ॥ ೪೫ ॥

**ರಾಮ-ಹನುಮಂತರ ಭಾವಬಂಧ**

**ದೇಹೇಽಪಿ ಯತ್ರ ಪವನೋಽತ್ರ ಹರಿರ್ಯತೋಽಸೌ**
**ತತ್ರೈವ ವಾಯುರಿತಿ ವೇದವಚಃ ಪ್ರಸಿದ್ಧಮ್ ।**
**''ಕಸ್ಮಿನ್ನ್ವಹಂ'' ತ್ವಿತಿ ತಥೈವ ಹಿ ಸೋಽವತಾರೇ**
**ತಸ್ಮಾತ್ ಸ ಮಾರುತಿಕೃತೇ ರವಿಜಂ ರರಕ್ಷ ॥ ೪೬ ॥**

ಪದಚ್ಛೇದ : **ದೇಹೇ ಅಪಿ ಯತ್ರ ಪವನಃ ಅತ್ರ ಹರಿಃ ಯತಃ ಅಸೌ ತತ್ರ ಏವ ವಾಯುಃ ಇತಿ ವೇದವಚಃ ಪ್ರಸಿದ್ಧಮ್ । ''ಕಸ್ಮಿನ್ ನು ಅಹಂ'' ತು ಇತಿ ತಥಾ ಏವ ಹಿ ಸಃ ಅವತಾರೇ ತಸ್ಮಾತ್ ಸಃ ಮಾರುತಿಕೃತೇ ರವಿಜಂ ರರಕ್ಷ ॥**

**ಅರ್ಥ** :- **ದೇಹೇಪಿ** ಎಲ್ಲಾ ಪ್ರಾಣಿಗಳ ಶರೀರಗಳಲ್ಲಿ **ಯತ್ರ** ಎಲ್ಲಿ **ಪವನಃ** ವಾಯುದೇವನಿರುವನೋ, **ತತ್ರ** ಅಲ್ಲಿ **ಹರಿಃ** ಪರಮಾತ್ಮನು, **ಯತಃ** ಎಲ್ಲಿ, **ಅಸೌ ಹರಿಃ** ಈ ಪರಮಾತ್ಮನೋ, **ತತ್ರೈವ** ಅಲ್ಲಿಯೇ, **ವಾಯುಃ** ವಾಯುದೇವನು, **ಇತಿ** ಎಂಬುದಾಗಿ, **ಕಸ್ಮಿನ್ನ್ವಹಂ** 'ಕಸ್ಮಿನ್ನ್ವಹಮುತ್ಕ್ರಾಂತೇ ಉತ್ಕ್ರಮಿಷ್ಯಾಮಿ ಕಸ್ಮಿನ್ನ್ವಹಂ ಸ್ಥಿತೇ ಸ್ಥಾಸ್ಯಾಮೀತಿ 'ಸ ಪ್ರಾಣಮಸೃಜತ' ಎಂಬ, **ವೇದವಚಃ** ಶ್ರುತಿವಚನವು, **ಪ್ರಸಿದ್ಧಂ** ಪ್ರಸಿದ್ಧವಾಗಿದೆ, **ಸಃ** ಆ ವಾಯುದೇವನು, **ಅವತಾರೇ** ರಾಮಕೃಷ್ಣಾದ್ಯವತಾರಗಳಲ್ಲಿ **ತಥೈವ** ಮೂಲರೂಪದಲ್ಲಿ ಹೇಗೋ ಹಾಗೆಯೇ ಪ್ರಿಯನಾಗಿರುತ್ತಾನೆ, **ತಸ್ಮಾತ್** ಆದ್ದರಿಂದ **ಸಃ** ಆ ಶ್ರೀರಾಮನು, **ಮಾರುತಿಕೃತೇ** ಹನುಮಂತನ ಪ್ರೀತಿಗಾಗಿ, **ರವಿಜಂ** ಸೂರ್ಯಪುತ್ರನಾದ ಸುಗ್ರೀವನನ್ನು, **ರರಕ್ಷ** ರಕ್ಷಿಸಿದನು.

**ತಾತ್ಪರ್ಯ :** ಯಾವ ದೇಹದಲ್ಲಿ ಮುಖ್ಯಪ್ರಾಣನಿರುವನೋ ಅಲ್ಲಿ ಹರಿ ಇರುವನು. ಎಲ್ಲಿ ಹರಿಯೋ ಅಲ್ಲಿ ಪ್ರಾಣನು ಇರುವನೆಂದು, 'ಕಸ್ಮಿನ್ನ್ವಹ ಮುತ್ಕ್ರಾಂತೇ' ಎಂಬ ಶ್ರುತಿಯು ಸಮರ್ಥಿಸುತ್ತಿದೆ. ಈ ಪ್ರಾಣದೇವನು, ಮೂಲ ರೂಪದಲ್ಲಿ ಹರಿಗೆ ಪ್ರಿಯನಾಗಿರುವಂತೆ ರಾಮಕೃಷ್ಣಾದಿ ಅವತಾರರೂಪಗಳಲ್ಲೂ ಅತ್ಯಂತ ಪ್ರೀತಿಪಾತ್ರನು. ಆದ್ದರಿಂದ ಹನುಮಂತನಿಗೋಸ್ಕರವೇ ಸುಗ್ರೀವನನ್ನು ಶ್ರೀರಾಮ ರಕ್ಷಿಸಿದ. ॥ ೪೬ ॥

**ಏವಂ ಸ ಕೃಷ್ಣತನುರರ್ಜುನಮಪ್ಯರಕ್ಷದ್**
**ಭೀಮಾರ್ಥಮೇವ ತದರಿಂ ರವಿಜಂ ನಿಹತ್ಯ ।**
**ಪೂರ್ವಂ ಹಿ ಮಾರುತಿಮವಾಪ ರವೇಃ ಸುತೋಽಯಂ**
**ತೇನಾಸ್ಯ ವಾಲಿನಮಹನ್ ರಘುಪಃ ಪ್ರತೀಪಮ್ ॥ ೪೭ ॥**

ಪದಚ್ಛೇದ : ಏವಂ ಸಃ ಕೃಷ್ಣತನುಃ ಅರ್ಜುನಮ್ ಅಪಿ ಅರಕ್ಷತ್ ಭೀಮಾರ್ಥಮ್ ಏವ ತದರಿಂ ರವಿಜಂ ನಿಹತ್ಯ । ಪೂರ್ವಂ ಹಿ ಮಾರುತಿಮ್ ಅವಾಪ ರವೇಃ ಸುತಃ ಅಯಂ ತೇನ ಅಸ್ಯ ವಾಲಿನಮ್ ಅಹನ್ ರಘುಪಃ ಪ್ರತೀಪಮ್ ॥

**ಅರ್ಥ :-** **ಏವಂ** ಈ ರೀತಿಯಾಗಿ, **ಕೃಷ್ಣತನುಃ** ಕೃಷ್ಣಾವತಾರದಲ್ಲಿ, **ಸಃ** ಆ ಪರಮಾತ್ಮನು, **ಭೀಮಾರ್ಥಮೇವ** ಭೀಮನ ಪ್ರೀತಿಗೋಸ್ಕರವೇ, **ತದರಿಂ** ಆ ಅರ್ಜುನನಿಗೆ ಶತ್ರುವಾದ, **ರವಿಜಂ** ಸೂರ್ಯನ ಮಗನಾದ ಕರ್ಣನನ್ನು, **ನಿಹತ್ಯ** ಕೊಂದು, **ಅರ್ಜುನಮಪಿ** ಅರ್ಜುನನ್ನು ಕೂಡ, **ಅರಕ್ಷತ್** ರಕ್ಷಿಸಿದನು, **ಹಿ** ಯಾವ ಕಾರಣದಿಂದ, **ರವೇಃ ಸುತಃ** ಸೂರ್ಯಪುತ್ರನಾದ, **ಅಯಂ** ಈ ಸುಗ್ರೀವನು, **ಪೂರ್ವಂ** ಮೊದಲು, **ಮಾರುತಿಂ** ಹನುಮಂತನನ್ನು, **ಶರಣಂ** ರಕ್ಷಕನನ್ನಾಗಿ, **ಅವಾಪ** ಹೊಂದಿದನೋ, **ತೇನ** ಆ ಕಾರಣದಿಂದ, **ಅಸ್ಯ** ಈ ಸುಗ್ರೀವನಿಗೆ, **ಪ್ರತೀಪಂ** ವಿರೋಧಿಯಾದ ವಾಲಿಯನ್ನು, **ರಘುಪಃ** ಶ್ರೀರಾಮನು, **ಅಹನ್** ಸಂಹರಿಸಿದನು.

**ತಾತ್ಪರ್ಯ :** ಇದರಂತೆ, ಕೃಷ್ಣಾವತಾರದಲ್ಲಿ ಅರ್ಜುನ ಭೀಮನನ್ನು ಆಶ್ರಯಿಸಿದ ಕಾರಣ ಕೃಷ್ಣಾನುಗ್ರಹದಿಂದ ರಕ್ಷಿತನಾದ. ಭೀಮದ್ವೇಷಿಯಾದುದರಿಂದಲೇ ಕರ್ಣ ಪ್ರಾಣ ಕಳೆದುಕೊಂಡ. ಈಗ ಹನುಮಂತನನ್ನು ಆಶ್ರಯಿಸಿದ ಕಾರಣ ಸುಗ್ರೀವನನ್ನು ರಾಮ ರಕ್ಷಿಸಿದ. ಹನುಮಂತನಿಂದ ದೂರ ಸರಿದ ಕಾರಣ ಬಲಿಷ್ಠನಾದರೂ ವಾಲಿ ರಾಮನಿಂದ ಪರಿತ್ಯಕ್ತನಾದ (ಮೃತನಾದ.) ॥ ೪೭ ॥

ಏವಂ ಸುರಾಶ್ಚ ಪವನಸ್ಯ ವಶೇ ಯತೋಽತಃ
ಸುಗ್ರೀವಮತ್ರ ತು ಪರತ್ರ ಚ ಶಕ್ರಸೂನುಮ್ ।
ಸರ್ವೇ ಶ್ರಿತಾ ಹನುಮತಸ್ತದನುಗ್ರಹಾಯ
ತತ್ರಾಗಮದ್ರಘುಪತಿಃ ಸಹ ಲಕ್ಷ್ಮಣೇನ ॥ ೪೮ ॥

ಪದಚ್ಛೇದ : ಏವಂ ಸುರಾಃ ಚ ಪವನಸ್ಯ ವಶೇ ಯತಃ ಅತಃ ಸುಗ್ರೀವಮ್ ಅತ್ರ ತು ಪರತ್ರ ಚ ಶಕ್ರಸೂನುಮ್ । ಸರ್ವೇ ಶ್ರಿತಾಃ ಹನುಮತಃ ತದನುಗ್ರಹಾಯ ತತ್ರ ಅಗಮತ್ ರಘುಪತಿಃ ಸಹ ಲಕ್ಷ್ಮಣೇನ ॥

**ಅರ್ಥ** :- **ಏವಂ** ಈ ರೀತಿಯಾಗಿ, **ಯತಃ** ಯಾವ ಕಾರಣದಿಂದ, **ಸುರಾಃ** **ಶೇಷಾದಿ** ದೇವತೆಗಳು, **ಪವನಸ್ಯ** ಮೂಲರೂಪದಲ್ಲಿ ವಾಯುದೇವರ, **ವಶೇ** ಅಧೀನದಲ್ಲಿರುವರೋ, **ಅತಃ** ಆ ಕಾರಣದಿಂದ, **ಸರ್ವೇ** ಎಲ್ಲಾ ದೇವತೆಗಳು, **ಅತ್ರ** ಈ ರಾಮಾವತಾರದಲ್ಲಿ, **ಸುಗ್ರೀವಂ** (ಹನುಮಂತನಿಗೆ ಪ್ರಿಯನಾದ್ದರಿಂದ) ಸುಗ್ರೀವನನ್ನು, **ಶ್ರಿತಾಃ** ಆಶ್ರಯಿಸಿದರು, **ಪರತ್ರ ಚ** ಮುಂದೆ ಆಗುವ ಕೃಷ್ಣಾವತಾರದಲ್ಲಿ, **ಶಕ್ರಸೂನುಂ** ಭೀಮನಿಗೆ ಪ್ರಿಯನಾದ್ದರಿಂದ ಇಂದ್ರನ ಮಗನಾದ ಅರ್ಜುನನನ್ನು, **ಸರ್ವೇ** ಎಲ್ಲಾ ದೇವತೆಗಳು, **ಶ್ರಿತಾಃ** ಆಶ್ರಯಿಸಿದರು, **ತತ್** ಎಲ್ಲಾ ದೇವತೆಗಳಿಗೆ ಹನುಮಂತನು ಅತ್ಯಂತ ಪ್ರಿಯನಾದ್ದರಿಂದ, **ಹನುಮತಃ** ಹನುಮಂತನಿಗೆ, **ಅನುಗ್ರಹಾಯ** ಅನುಗ್ರಹ ಮಾಡುವುದಕ್ಕೋಸ್ಕರ, **ಯತ್ರ** ಎಲ್ಲಿ ಹನುಮಂತನಿರುವನೋ, **ತತ್ರ** ಅಲ್ಲಿಗೆ, **ರಘುಪತಿಃ** ರಾಮಚಂದ್ರನು, **ಲಕ್ಷ್ಮಣೇನ** ಲಕ್ಷ್ಮಣನಿಂದ, **ಸಹ** ಕೂಡಿಕೊಂಡು, **ಅಗಮತ್** ಆಗಮಿಸಿದನು.

**ತಾತ್ಪರ್ಯ** :- ದೇವತೆಗಳೆಲ್ಲ ವಾಯುದೇವರ ಅಧೀನರು. ವಾಯುದೇವರನ್ನು ಆಶ್ರಯಿಸಿದ ಪ್ರಧಾನವ್ಯಕ್ತಿಯನ್ನು ಇತರರೂ ಅವಲಂಬಿಸುತ್ತಾರೆ ಆದ್ದರಿಂದ ಹನುಮಂತನ ಆಸರೆ ಪಡೆದ ಸುಗ್ರೀವನ ಬಳಿ ಎಲ್ಲ ದೇವತೆಗಳು ನಿಂದರು. ಅದರಂತೆ ಮುಂದಿನ ಅವತಾರದಲ್ಲೂ ಭೀಮನ ಒಲವು ಪಡೆದ ಅರ್ಜುನನ ಬಳಿ ಎಲ್ಲ ದೇವತೆಗಳು ಆಶ್ರಯ ಪಡೆದರು. ಈ ಹಿನ್ನಲೆಯಲ್ಲಿ ಸರ್ವದೇವತೆಗಳಿಗೆ ಅನುಗ್ರಾಹಕನಾದ ಹನುಮಂತನ ಸೇವೆ ಸ್ವೀಕರಿಸಿ ತನ್ನ ಅಮಿತ ಅನುಗ್ರಹವನ್ನು ಅವನಲ್ಲಿ ಪ್ರಕಟಿಸಲೆಂದೇ ಶ್ರೀರಾಮ ಅವನ ಬಳಿ ಬಂದ ॥ ೪೮ ॥

**ಯತ್ಪಾದಪಂಕಜರಜಃ ಶಿರಸಾ ಬಿಭರ್ತಿ**
**ಶ್ರೀರಬ್ಜಜಶ್ಚ ಗಿರಿಶಃ ಸಹ ಲೋಕಪಾಲೈಃ ।**
**ಸರ್ವೇಶ್ವರಸ್ಯ ಪರಮಸ್ಯ ಹಿ ಸರ್ವಶಕ್ತೇಃ**
**ಕಿಂ ತಸ್ಯ ಶತ್ರುಹನನೇ ಕಪಯಃ ಸಹಾಯಾಃ ॥ ೪೯ ॥**

ಪದಚ್ಛೇದ : ಯತ್ಪಾದಪಂಕಜರಜಃ ಶಿರಸಾ ಬಿಭರ್ತಿ ಶ್ರೀಃ ಅಬ್ಜಜಃ ಚ ಗಿರಿಶಃ ಸಹ ಲೋಕಪಾಲೈಃ । ಸರ್ವೇಶ್ವರಸ್ಯ ಪರಮಸ್ಯ ಹಿ ಸರ್ವಶಕ್ತೇಃ ಕಿಂ ತಸ್ಯ ಶತ್ರುಹನನೇ ಕಪಯಃ ಸಹಾಯಾಃ ॥

**ಅರ್ಥ :-** **ಶ್ರೀಃ** ಲಕ್ಷ್ಮೀದೇವಿಯು, **ಅಬ್ಜಜಃ** ಬ್ರಹ್ಮನು, **ಗಿರಿಶಶ್ಚ** ರುದ್ರನು ಕೂಡ, **ಲೋಕಪಾಲೈಃ** ಇಂದ್ರಾದಿ ದಿಕ್ಪಾಲಕರಿಂದ, **ಸಹ** ಕೂಡಿಕೊಂಡು, **ಯತ್ಪಾದಪಂಕಜರಜಃ** ಯಾವ ಶ್ರೀರಾಮನ ಕಮಲದಂತಿರುವ ಪಾದಗಳಲ್ಲಿ ರುವ ಧೂಳಿಯನ್ನು, **ಶಿರಸಾ** ಶಿರಸ್ಸಿನಿಂದ, **ಬಿಭರ್ತಿ** ಧರಿಸುತ್ತಾರೋ, **ಸರ್ವೇಶ್ವರಸ್ಯ** ಎಲ್ಲರಿಗೂ ಸ್ವಾಮಿಯಾದ, **ಪರಮಸ್ಯ** ಸರ್ವೋತ್ತಮನಾದ, **ಸರ್ವಶಕ್ತೇಃ** ಎಲ್ಲಾ ವಿಷಯದಲ್ಲಿಯೂ ತಡೆ ಇಲ್ಲದ ಶಕ್ತಿ ಉಳ್ಳ, **ತಸ್ಯ** ಆ ರಾಮನಿಗೆ, **ಶತ್ರುಹನನೇ** ರಾವಣಾದಿಗಳನ್ನು ನಾಶ ಮಾಡುವ ವಿಷಯದಲ್ಲಿ, **ಕಪಯಃ** ಕಪಿಗಳು, **ಸಹಾಯಾಃ ಕಿಂ** ಸಹಾಯ ಮಾಡತಕ್ಕವುಗಳೇನು? (ಕಪಿಗಳ ಸಹಾಯ ಅನಗತ್ಯವೆಂದು ತಾತ್ಪರ್ಯ).

**ತಾತ್ಪರ್ಯ :-** ಯಾರ ಪಾದಧೂಳಿಯನ್ನು ಸಿರಿದೇವಿನಾಲ್ಮೊಗಶಂಕರ ಮೊದಲಾದ ದೇವತೆಗಳು ಲೋಕಪಾಲಕರೊಂದಿಗೆ ಪರಮಾದರದಿಂದ ಧರಿಸುವರೋ ಅಂತಹ ಅಮಿತಶಕ್ತಿಯುಳ್ಳ ಸರ್ವೇಶ್ವರನಾದ ಶ್ರೀರಾಮನಿಗೆ ಶತ್ರುಸಂಹಾರಕ್ಕೆ ಕಪಿಗಳ ಸಹಾಯ ಅನಿವಾರ್ಯವೆ ? ಖಂಡಿತವಾಗಿಯೂ ಕಪಿಗಳ ಬೆಂಬಲ ಅನಗತ್ಯ. ॥ ೪೯ ॥

**ಸಮಾಗತೇ ತು ರಾಘವೇ ಪ್ಲವಂಗಮಾಃ ಸಸೂರ್ಯಜಾಃ ।**
**ವಿಪುಪ್ಲುವುರ್ಭಯಾರ್ದಿತಾ ನ್ಯವಾರಯಚ್ಚ ಮಾರುತಿಃ ॥ ೫೦ ॥**

ಪದಚ್ಛೇದ : ಸಮಾಗತೇ ತು ರಾಘವೇ ಪ್ಲವಂಗಮಾಃ ಸಸೂರ್ಯಜಾಃ। ವಿಪುಪ್ಲುವುಃ ಭಯಾರ್ದಿತಾಃ ನ್ಯವಾರಯತ್ ಚ ಮಾರುತಿಃ ॥

**ಅರ್ಥ :-** **ರಾಘವೇ** ಶ್ರೀರಾಮನು, **ಸಮಾಗತೇ ತು** ಆಗಮಿಸುತ್ತಿರಲು, **ಸಸೂರ್ಯಜಾಃ** ಸೂರ್ಯನ ಮಗನಾದ ಸುಗ್ರೀವನಿಂದ ಕೂಡಿದ,

**ಪ್ಲವಂಗಮಾಃ** ಕಪಿಗಳು, **ಭಯಾರ್ದಿತಾಃ** (ಇವರು ವಾಲಿಯ ಕಡೆಯವರೆಂಬ) ಭಯದಿಂದ ಪೀಡಿತರಾಗಿ, **ವಿಪುಪ್ಲುವುಃ** ಹಾರಿದವು, **ಮಾರುತಿಃ** ಹನುಮಂತನು **ನ್ಯವಾರಯತ್** ಆ ಕಪಿಗಳನ್ನು ತಡೆದನು.

**ತಾತ್ಪರ್ಯ** :- ಶ್ರೀರಾಮ ಆಗಮಿಸುವುದನ್ನು ಕಂಡ ಸುಗ್ರೀವ ಮೊದಲಾದ ಕಪಿಗಳೆಲ್ಲ ಇವನು ವಾಲಿಯ ಕಡೆಯವನು ನಮ್ಮನ್ನು ಸಂಹರಿಸಲು ಬರುತ್ತಿರುವ ನೆಂದು ಭ್ರಮಿಸಿ, ಭಯದಿಂದ ಹಾರಲಾರಂಭಿಸಿದರು. ಶ್ರೀರಾಮನ ಮಹಿಮೆ ಯರಿತ ಹನುಮಂತ ಅವರನ್ನೆಲ್ಲ ಸಮಾಧಾನಮಾಡಿ ತಡೆದನು. ॥ ೫೦ ॥

**ಹನುಮಂತ ಬಂದ**

**ಸಂಸ್ಥಾಪ್ಯಾಶು ಹರೀಂದ್ರಾನ್ ಜಾನನ್**
**ವಿಷ್ಣೋರ್ಗುಣಾನನಂತಾನ್ ಸಃ ।**
**ಸಾಕ್ಷಾದ್ ಬ್ರಹ್ಮಪಿತಾಽಸಾವಿತ್ಯೇ-**
**ತೇನಾಸ್ಯ ಪಾದಯೋಃ ಪೇತೇ ॥ ೫೧ ॥**

ಪದಚ್ಛೇದ : ಸಂಸ್ಥಾಪ್ಯ ಆಶು ಹರೀಂದ್ರಾನ್ ಜಾನನ್ ವಿಷ್ಣೋಃ ಗುಣಾನ್ ಅನಂತಾನ್ ಸಃ । ಸಾಕ್ಷಾತ್ ಬ್ರಹ್ಮಪಿತಾ ಅಸೌ ಇತಿ ಏತೇನ ಅಸ್ಯ ಪಾದಯೋಃ ಪೇತೇ ॥

**ಅರ್ಥ** :- **ವಿಷ್ಣೋಃ** ಪರಮಾತ್ಮನ, **ಅನಂತಾನ್** ಅಪರಿಮಿತಗಳಾದ, **ಗುಣಾನ್** ವೇದೋಕ್ತ ಗುಣಗಳನ್ನು **ಜಾನನ್** ತಿಳಿದಿರುವ, **ಸಃ** ಆ ಹನುಮಂತನು, **ಆಶು** ಕೂಡಲೇ, **ಕಪೀಂದ್ರಾನ್** ಕಪಿಶ್ರೇಷ್ಠರನ್ನು **ಸಂಸ್ಥಾಪ್ಯ** ಸ್ವಲ್ಪದೂರದಲ್ಲಿರಿಸಿ, **ಅಸೌ** ಈ ರಾಮನು, **ಸಾಕ್ಷಾದ್ಬ್ರಹ್ಮಪಿತಾ** ಮುಖ್ಯವಾಗಿ ಚತುರ್ಮುಖನಿಗೆ ತಂದೆಯು, **ಇತಿ** ಇಂತೆಂದು, **ಏತೇನ** ಈ ಕಾರಣದಿಂದ, **ಅಸ್ಯ** ಈ ರಾಮನ, **ಪಾದಯೋಃ** ಚರಣಗಳಲ್ಲಿ, **ಪೇತೇ** ನಮಸ್ಕರಿಸಿದನು.

**ತಾತ್ಪರ್ಯ** :- ವಿಷ್ಣುವಿನ ಅನಂತ ಮಹಿಮೆಯನ್ನರಿತ ಹನುಮಂತ ಕಪಿ ಗಳನ್ನೆಲ್ಲ ಸಮಾಧಾನಗೊಳಿಸಿ ತಡೆದು ನಿಲ್ಲಿಸಿದ. ಸೃಷ್ಟಿಕರ್ತನಾದ ಚತುರ್ಮುಖ ನಿಗೂ ಶ್ರೀರಾಮ ಜನಕನೆಂದರಿತ ಹನುಮಂತ ಅವನ ಬಳಿ ಸಾರಿ ಪಾದಕಮಲಗಳಿಗೆ ನಮಿಸಿದ. ॥ ೫೧ ॥

**॥ ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ**
**ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯೇ**
**ಪಂಚಮೋಽಧ್ಯಾಯಃ ॥**

# ಅಧ್ಯಾಯ - 6

ಉತ್ಥಾಪ್ಯ ಚೈನಮರವಿಂದದಲಾಯತಾಕ್ಷ-
ಶ್ಚಕ್ರಾಂಕಿತೇನ ವರದೇನ ಕರಾಂಬುಜೇನ ।
ಕೃತ್ವಾ ಚ ಸಂವಿದಮನೇನ ನುತೋಽಸ್ಯ ಚಾಂಸಂ
ಪ್ರೀತ್ಯಾಽಽರುರೋಹ ಸ ಹಸನ್ ಸಹ ಲಕ್ಷ್ಮಣೇನ ॥ ೧ ॥

ಪದಚ್ಛೇದ : ಉತ್ಥಾಪ್ಯ ಚ ಏನಮ್ ಅರವಿಂದದಲಾಯತಾಕ್ಷಃ ಚಕ್ರಾಂಕಿತೇನ ವರದೇನ ಕರಾಂಬುಜೇನ । ಕೃತ್ವಾ ಚ ಸಂವಿದಮ್ ಅನೇನ ನುತಃ ಅಸ್ಯ ಚ ಅಂಸಂ ಪ್ರೀತ್ಯಾ ಆರುರೋಹ ಸಃ ಹಸನ್ ಸಹ ಲಕ್ಷ್ಮಣೇನ ॥

**ಅರ್ಥ :- ಅರವಿಂದದಲಾಯತಾಕ್ಷಃ** ಕಮಲದಳದಂತೆ ವಿಶಾಲವಾದ ಕಣ್ಣುಗಳುಳ್ಳ, ಸಃ ಆ ರಾಮನು, **ಚಕ್ರಾಂಕಿತೇನ** ಸುದರ್ಶನದಿಂದ ಚಿಹ್ನಿತವಾದ, **ವರದೇನ** ವರವನ್ನು ನೀಡುವ, **ಕರಾಂಬುಜೇನ** ಕಮಲದಂತಿರುವ ಕೈಯಿಂದ, ಏನಂ ಈ ಹನುಮಂತನನ್ನು, **ಉತ್ಥಾಪ್ಯ** ಎಬ್ಬಿಸಿ, **ಅನೇನ** ಈ ಹನುಮಂತನಿಂದ, **ನುತಃ ಸನ್** ನಮಸ್ಕರಿಸಿಕೊಳ್ಳಲ್ಪಟ್ಟವಾಗಿ, **ಸಂವಿದಂ** ಪ್ರಿಯವಚನವನ್ನು **ಕೃತ್ವಾ** ಮಾಡಿ, **ಲಕ್ಷ್ಮಣೇನ** ಲಕ್ಷ್ಮಣನಿಂದ, **ಸಹ** ಕೂಡಿಕೊಂಡು, **ಹಸನ್** ನಗುತ್ತಾ, **ಅಸ್ಯ** ಈ ಹನುಮಂತನ, **ಅಂಸಂ** ಹೆಗಲನ್ನು **ಪ್ರೀತ್ಯಾ** ಸಂತೋಷದಿಂದ, **ಆರುರೋಹ** ಏರಿದನು.

**ತಾತ್ಪರ್ಯ :-** ಕಮಲದಳದಂತೆ ನಳನಳಿಸುವ-ವಿಶಾಲವಾದ ಕಂಗಳುಳ್ಳ ಶ್ರೀರಾಮ, ಸುದರ್ಶನ ಚಿಹ್ನಿತವಾದ ವರಪ್ರದವಾದ ಕರಕಮಲದಿಂದ ಹನುಮಂತನನ್ನು ಎಬ್ಬಿಸಿದ. ಪ್ರೀತಿಯಿಂದ ಅವನೊಡನೆ ಸಂಭಾಷಿಸಿದ. ಅವನಿಂದ ಸ್ತುತನಾಗಿ ಮೆಲುನಗೆಯೊಂದಿಗೆ ಲಕ್ಷ್ಮಣನೊಡನೆ ಅವನ ಹೆಗಲೇರಿದ.

**ವಿವರಣೆ :-** ಹನುಮನ ಹೆಗಲನ್ನು ಮೆಲುನಗೆಯೊಂದಿಗೆ ಶ್ರೀರಾಮ ಏರಿದ. ಅದರ ಹಿನ್ನೆಲೆ ಹೀಗಿದೆಮೂಲ ರೂಪದಲ್ಲಿಯೂ ಕೂಡ ನನ್ನನ್ನು ಹಾಗೂ ಜೀವವನ್ನು ಹೆಗಲಲ್ಲಿ ಏರಿಸಿಕೊಂಡು ಒಂದು ಶರೀರದಿಂದ ಮತ್ತೊಂದು ಶರೀರಕ್ಕೆ ಹೋಗುವಿ, ಆದ್ದರಿಂದ ಇದು ಅಪೂರ್ವವಲ್ಲವೆಂದು ರಾಮನು ಸೂಚಿಸುತ್ತಿದ್ದಾನೆ. ಇದು ಶ್ರೀವಾದಿರಾಜರು 'ಹಸನ್' ಎಂಬ ಪದಕ್ಕೆ ನೀಡಿದ ವಿವರಣೆ. ॥ ೧ ॥

ಆರೋಪ್ಯ ಚಾಂಸಯುಗಲಂ ಭಗವಂತಮೇನಂ
ತಸ್ಯಾನುಜಂ ಚ ಹನುಮಾನ್ ಪ್ರಯಯೌ ಕಪೀಂದ್ರಮ್ ।
ಸಖ್ಯಂ ಚಕಾರ ಹುತಭುಕ್ಪ್ರಮುಖೇ ಚ ತಸ್ಯ
ರಾಮೇಣ ಶಾಶ್ವತನಿಜಾರ್ತಿಹರೇಣ ಶೀಘ್ರಮ್ ॥ ೨ ॥

ಪದಚ್ಛೇದ : ಆರೋಪ್ಯ ಚ ಅಂಸಯುಗಲಂ ಭಗವಂತಮ್ ಏನಂ ತಸ್ಯ ಅನುಜಂ ಚ ಹನುಮಾನ್ ಪ್ರಯಯೌ ಕಪೀಂದ್ರಮ್ । ಸಖ್ಯಂ ಚಕಾರ ಹುತಭುಕ್ಪ್ರಮುಖೇ ಚ ತಸ್ಯ ರಾಮೇಣ ಶಾಶ್ವತನಿಜಾರ್ತಿಹರೇಣ ಶೀಘ್ರಮ್ ॥

**ಅರ್ಥ** :- **ಹನುಮಾನ್** ಹನುಮಂತನು, **ಭಗವಂತಂ** ಪೂಜ್ಯನಾದ, **ಏನಂ** ಶ್ರೀರಾಮನನ್ನು, **ತಸ್ಯ** ಆ ರಾಮನ, **ಅನುಜಂ ಚ** ತಮ್ಮನಾದ ಲಕ್ಷ್ಮಣನನ್ನು ಕೂಡ, **ಅಂಸಯುಗಲಂ** ಭುಜಗಳೆರಡನ್ನು **ಆರೋಪ್ಯ** ಏರಿಸಿ, **ಕಪೀಂದ್ರಂ** ಕಪಿಶ್ರೇಷ್ಠನಾದ ಸುಗ್ರೀವನನ್ನು **ಪ್ರಯಯೌ** ಹೊಂದಿದನು, **ಶಾಶ್ವತನಿಜಾರ್ತಿಹರೇಣ** ಯಾವಾಗಲೂ ಒಂದೇ ರೀತಿ ಇರತಕ್ಕ ತನ್ನ ಭಕ್ತರ ದುಃಖವನ್ನು ಪರಿಹರಿಸತಕ್ಕ, **ರಾಮೇಣ** ರಾಮನಿಂದ, **ಸಹ** ಕೂಡಿಕೊಂಡು, **ತಸ್ಯ** ಆ ಸುಗ್ರೀವನಿಗೆ, **ಶೀಘ್ರಂ** ಕೂಡಲೇ, **ಹುತಭುಕ್ಪ್ರಮುಖೇ** ಅಗ್ನಿಯ ಸಮ್ಮುಖದಲ್ಲಿ **ಸಖ್ಯಂ** ಗೆಳೆತನವನ್ನು **ಚಕಾರ** ಮಾಡಿದನು.

**ತಾತ್ಪರ್ಯ** :- ಶ್ರೀರಾಮ-ಲಕ್ಷ್ಮಣರನ್ನು ಹೆಗಲ ಮೇಲೆ ಕೂರಿಸಿಕೊಂಡ ಹನುಮಂತ ಸುಗ್ರೀವನ ಬಳಿ ಬಂದ.ನಂಬಿದ ಭಕ್ತರ ದುಃಖ ಪರಿಹರಿಸುವ ಶ್ರೀರಾಮನೊಂದಿಗೆ ಅಗ್ನಿಯ ಸಮ್ಮುಖವಾಗಿ ಗೆಳೆತನ ಮಾಡಿಸಿದ. ॥ ೨॥

ಶ್ರುತ್ವಾಽಸ್ಯ ದುಃಖಮಥ ದೇವವರಃ ಪ್ರತಿಜ್ಞಾಂ
ಚಕ್ರೇ ಸ ವಾಲಿನಿಧನಾಯ ಹರೀಶ್ವರೋಽಪಿ ।
ಸೀತಾನುಮಾರ್ಗಣಕೃತೇಽಥ ಸ ವಾಲಿನೈವ
ಕ್ಷಿಪ್ತಾಂ ಹಿ ದುಂದುಭಿತನುಂ ಸಮದರ್ಶಯಚ್ಚ ॥ ೩ ॥

ಪದಚ್ಛೇದ : ಶ್ರುತ್ವಾ ಅಸ್ಯ ದುಃಖಮ್ ಅಥ ದೇವವರಃ ಪ್ರತಿಜ್ಞಾಂ ಚಕ್ರೇ ಸಃ ವಾಲಿನಿಧನಾಯ ಹರೀಶ್ವರಃ ಅಪಿ । ಸೀತಾನುಮಾರ್ಗಣಕೃತೇ ಅಸ್ಯ ಸಃ ವಾಲಿನಾ ಏವ ಕ್ಷಿಪ್ತಾಂ ಹಿ ದುಂದುಭಿತನುಂ ಸಮದರ್ಶಯತ್ ಚ ॥

**ಅರ್ಥ** :- **ಅಥ** ಅನಂತರ, **ದೇವವರಃ** ದೇವಶ್ರೇಷ್ಠನಾದ, **ಸಃ** ಆ ರಾಮನು, **ಅಸ್ಯ** ಈ ಸುಗ್ರೀವನ, **ದುಃಖಂ** ವಾಲಿಯಿಂದ ನೀಡಲ್ಪಟ್ಟ ದುಃಖ ವನ್ನು **ಶ್ರುತ್ವಾ** ಕೇಳಿ, **ವಾಲಿನಿಧನಾಯ** ವಾಲಿಯನ್ನು ಕೊಲ್ಲುವುದಕ್ಕೋಸ್ಕರ, **ಪ್ರತಿಜ್ಞಾಂ** ಪ್ರತಿಜ್ಞೆಯನ್ನು **ಚಕ್ರೇ** ಮಾಡಿದನು, **ಹರೀಶ್ವರೋಽಪಿ** ಕಪಿಶ್ರೇಷ್ಠನಾದ ಸುಗ್ರೀವನೂ ಕೂಡ, **ಸೀತಾನುಮಾರ್ಗಣಕೃತೇ** ಸೀತೆಯನ್ನು ಹುಡುಕುವುದ ಕ್ಕೋಸ್ಕರ, **ಪ್ರತಿಜ್ಞಾಂ ಚಕ್ರೇ** ಪ್ರತಿಜ್ಞೆ ಮಾಡಿದನು, **ಅಥ** ಆ ಪ್ರತಿಜ್ಞಾ ನಂತರ, **ಸಃ** ಆ ಸುಗ್ರೀವನು, **ವಾಲಿನೈವ** ವಾಲಿಯಿಂದಲೇ, **ಕ್ಷಿಪ್ತಾಂ** ಬಿಸಾಡಲ್ಪಟ್ಟ **ದುಂದುಭಿ ತನುಂ** ದುಂದುಭಿಯೆಂಬ ರಾಕ್ಷಸನ ಶರೀರವನ್ನು, **ಸಮದರ್ಶ ಯತ್** ತೋರಿಸಿದನು.

**ತಾತ್ಪರ್ಯ** :- ಸುಗ್ರೀವನಿಗೆ ವಾಲಿಯಿಂದಾದ ಶೋಷಣೆಯನ್ನೆಲ್ಲ ಕೇಳಿದ ಶ್ರೀರಾಮ ವಾಲಿಯನ್ನು ಸಂಹರಿಸುವುದಾಗಿ ಪ್ರತಿಜ್ಞೆಗೈದ. ಸುಗ್ರೀವನೂ ಸೀತೆಯನ್ನು ಹುಡುಕುವುದಾಗಿ ಪ್ರತಿಜ್ಞೆಮಾಡಿದ. ರಾಮನ ವಿಕ್ರಮವನ್ನು ಪರೀಕ್ಷಿಸಲು ಸುಗ್ರೀವ, ವಾಲಿ ಸಂಹರಿಸಿದ ದುಂದುಭಿಯ ಶರೀರವನ್ನು ತೋರಿಸಿದ.

**ವಿವರಣೆ** :- ಸುಗ್ರೀವ ರಾಮನಿಗೆ ತನ್ನ ಕಥೆ ಹೇಳಿದವಾಲಿ, ಮಾಯಾವಿ ಎಂಬ ರಕ್ಕಸನೊಡನೆ ಹೋರಾಡುವಾಗ ಗುಹೆಯಲ್ಲಿ ಹೊಕ್ಕ. ಬಹಳ ದಿನಗಳವರೆಗೆ ಯುದ್ಧ ನಡೆಯಿತು. ವಾಲಿಯ ಧ್ವನಿ ಕೇಳಿ ಬರಲಿಲ್ಲ, ದುಂದುಭಿಯ ಧ್ವನಿ ಕೇಳಿ ಬರುತ್ತಿತ್ತು. ರಕ್ತ ಕೋಡಿ ಹರಿಯಿತು. ವಾಲಿ ಮೃತ ನಾದನೆಂದು ನಾನು ಭ್ರಮಿಸಿ ಆ ರಕ್ಕಸ ಹೊರಬರಬಾರದೆಂದು ಆ ಗುಹೆಗೆ ಬಂಡೆಗಲ್ಲನ್ನು ಮುಚ್ಚಿದೆ. ಕಿಷ್ಕಿಂಧೆಗೆ ಬಂದು ಸೇರಿದೆ. ನಂತರ ಬಂದ ವಾಲಿ ನನ್ನ ಮಾತನ್ನು ನಂಬದೇ, ಕ್ಷಮೆ ಯಾಚಿಸಿದರೂ ಕಿವಿಗೊಡದೇ ನನ್ನನ್ನು ಉಟ್ಟ ಬಟ್ಟೆಯಲ್ಲೇ ರಾಜ್ಯದಿಂದ ಹೊರದೂಡಿದ. ನನ್ನ ಹೆಂಡತಿಯನ್ನು ತಾನೇ ಇರಿಸಿಕೊಂಡ. ವಾಲಿ ಯಾರಿಂದಲೂ ಸಂಹರಿಸಲಾಗದ ಬಲಿಷ್ಠ ದುಂದುಭಿ ಯೆಂಬ ದಾನವನನ್ನು ಸಂಹರಿಸಿ ಬಂದು, ಒಂದು ಯೋಜನ ದೂರ ಅವನ ಶರೀರವನ್ನು ಎತ್ತಿ ಎಸೆದ. ಆ ಶರೀರದ ನೆತ್ತರ ಹನಿಗಳು ಮತಂಗ ಋಷಿಗಳ ಆಶ್ರಮ ಪರಿಸರದಲ್ಲಿ ಬಿದ್ದವು. ಆಶ್ರಮವಲಯವನ್ನು ಅಪವಿತ್ರಗೊಳಿಸಿದ್ದಕ್ಕಾಗಿ ಮತಂಗಋಷಿಗಳು ವಾಲಿಯನ್ನು ಶಪಿಸಿದರು-'ಈ ಪ್ರದೇಶದಲ್ಲಿ ನೀನು ಸುಳಿದರೆ ಮೃತನಾಗು'. ಈ ಹಿನ್ನಲೆಯಲ್ಲಿ ವಾಲಿಯಿಂದ ಶೋಷಿತನಾದ ನಾನು

ನನ್ನವರೆಲ್ಲ ವಾಲಿಯ ಭಯದಿಂದ ಮುಕ್ತವಾದ ಈ ಆಶ್ರಮ ಪರಿಸರದಲ್ಲಿ ವಾಸಿಸುತ್ತಿದ್ದೇವೆ. ವಾಲಿ ಎಸೆದ ದುಂದುಭಿ ಶರೀರ ಇನ್ನೂ ಅಲ್ಲಿದೆ. ಅದನ್ನು ನೀನು ಎತ್ತಿ ಬಹುದೂರ ಎಸೆದರೆ ವಾಲಿಯನ್ನು ನೀನು ಸಂಹರಿಸಬಲ್ಲೆ ಎಂಬ ವಿಶ್ವಾಸ ನನಗೆ ಮೂಡುತ್ತದೆ. ॥ ೩॥

**ವೀಕ್ಷ್ಯೈವ ತಾಂ ನಿಪತಿತಾಮಥ ರಾಮದೇವಃ**
**ಸೋಽಂಗುಷ್ಠಮಾತ್ರಚಲನಾದತಿಲೀಲಯೈವ ।**
**ಸಂಪ್ರಾಸ್ಯ ಯೋಜನಶತೇಽಥ ತಯೈವ ಚೋರ್ವೀಂ**
**ಸರ್ವಾನ್ ವಿದಾರ್ಯ ದಿತಿಜಾನಹನದ್ರಸಾಸ್ಥಾನ್ ॥ ೪ ॥**

ಪದಚ್ಛೇದ : **ವೀಕ್ಷ್ಯ ಏವ ತಾಂ ನಿಪತಿತಾಮ್ ಅಥ ರಾಮದೇವಃ ಸಃ ಅಂಗುಷ್ಠ ಮಾತ್ರ ಚಲನಾತ್ ಅತಿಲೀಲಯಾ ಏವ । ಸಂಪ್ರಾಸ್ಯ ಯೋಜನಶತೇ ಅಥ ತಯಾ ಏವ ಚ ಉರ್ವೀಂ ಸರ್ವಾನ್ ವಿದಾರ್ಯ ದಿತಿಜಾನ್ ಅಹನತ್ ರಸಾಸ್ಥಾನ್ ॥**

**ಅರ್ಥ :- ಅಥ** ಅನಂತರ, **ಸಃ ರಾಮದೇವಃ** ಆ ಶ್ರೀರಾಮಚಂದ್ರನು, **ನಿಪತಿತಾಂ** ಬಿದ್ದಿರುವ, **ತಾಂ** ಆ ದುಂದುಭಿ ಶರೀರವನ್ನು **ವೀಕ್ಷ್ಯೈವ** ನೋಡಿಯೇ, **ಅಂಗುಷ್ಠಮಾತ್ರಚಲನಾತ್** ಕೇವಲ ಹೆಬ್ಬೆರಳಿನ ಚಲನೆಯಿಂದಲೇ, **ಅತಿಲೀಲಯೈವ** ಅತ್ಯಂತ ಅನಾಯಾಸವಾಗಿ, **ಯೋಜನಶತೇ** ನೂರು ಯೋಜನ ದೂರದಲ್ಲಿ **ಸಂಪ್ರಾಸ್ಯ** ಬಿಸಾಡಿ, **ಅಥ** ಆಮೇಲೆ, **ತಯೈವ** ಆ ಶರೀರದಿಂದಲೇ, **ಉರ್ವೀಂ** ಭೂಮಿಯನ್ನು **ವಿದಾರ್ಯ** ಸೀಳಿ, **ರಸಾಸ್ಥಾನ್** ರಸಾತಲದಲ್ಲಿರತಕ್ಕ, **ಸರ್ವಾನ್** ಎಲ್ಲಾ, **ದಿತಿಜಾನ್** ದೈತ್ಯರನ್ನು **ಅಹನತ್** ಸಂಹರಿಸಿದನು.

**ತಾತ್ಪರ್ಯ :-** ಶ್ರೀರಾಮದೇವನು ಸುಗ್ರೀವನ ಬೇಡಿಕೆಯಂತೆ ವಾಲಿ ಒಂದು ಯೋಜನ ದೂರ ಎಸೆದ ದುಂದುಭಿಯ ಶರೀರವನ್ನು ಅತ್ಯನಾಯಾಸವಾಗಿ ನೂರು ಯೋಜನದೂರ ಹೆಬ್ಬೆರಳಿನಿಂದ ಚಿಮ್ಮಿದ. ಎತ್ತರದಿಂದ ಬಿದ್ದ ಆ ಶರೀರವು ಭೂಮಿಯನ್ನು ಭೇದಿಸಿ ರಸಾತಲಲೋಕದಲ್ಲಿರುವ ಅಸಂಖ್ಯ ದಾನವರನ್ನು ಸಂಹರಿಸಿತು. ॥ ೪॥

**ಶರ್ವಪ್ರಸಾದಜಬಲಾದ್ದಿತಿಜಾನವಧ್ಯಾನ್**
**ಸರ್ವಾನ್ ನಿಹತ್ಯ ಕುಣಪೇನ ಪುನಶ್ಚ ಸಖ್ಯಾ ।**

**ಭೀತೇನ ವಾಲಿಬಲತಃ ಕಥಿತಶ್ಚ ಸಪ್ತ**
**ತಾಲಾನ್ ಪ್ರದರ್ಶ್ಯ ದಿತಿಜಾನ್ ಸುದೃಢಾಂಶ್ಚ ವಜ್ರಾತ್ ॥ ೫ ॥**

ಪದಚ್ಛೇದ : ಶರ್ವಪ್ರಸಾದಜಬಲಾತ್ ದಿತಿಜಾನ್ ಅವಧ್ಯಾನ್ ಸರ್ವಾನ್ ನಿಹತ್ಯ ಕುಣಪೇನ ಪುನಃ ಚ ಸಖ್ಯಾ । ಭೀತೇನ ವಾಲಿಬಲತಃ ಕಥಿತಃ ಚ ಸಪ್ತ ತಾಲಾನ್ ಪ್ರದರ್ಶ್ಯ ದಿತಿಜಾನ್ ಸುದೃಢಾನ್ ಚ ವಜ್ರಾತ್ ॥

**ಅರ್ಥ :-** **ಶರ್ವಪ್ರಸಾದಜಬಲಾತ್** ರುದ್ರದೇವರ ಅನುಗ್ರಹದಿಂದ, **ಅವಧ್ಯಾನ್** ಮರಣವನ್ನು ಮೆಟ್ಟಿನಿಂದ, **ಸರ್ವಾನ್** ಎಲ್ಲಾ **ದಿತಿಜಾನ್** ದೈತ್ಯರನ್ನು **ಕುಣಪೇನ** ಶವದಿಂದ, **ನಿಹತ್ಯ** ಕೊಂದು, **ಪುನಶ್ಚ** ಶವವನ್ನು ಬಿಸಾಡಿದ ಮೇಲೆಯೂ ಕೂಡ, **ವಾಲಿಬಲತಃ** ವಾಲಿಯ ಸಾಮರ್ಥ್ಯದಿಂದ, **ಭೀತೇನ** ಹೆದರಿದ, **ಸಖ್ಯಾ** ಗೆಳೆಯನಾದ ಸುಗ್ರೀವನಿಂದ, **ವಜ್ರಾತ್** ವಜ್ರ ದೆಸೆಯಿಂದಲೂ, **ಸುದೃಢಾನ್** ಅತ್ಯಂತ ಕಠಿನಗಳಾದ, **ದಿತಿಜಾನ್** ದೈತ್ಯ ಸ್ವರೂಪರಾದ, **ಸಪ್ತ ತಾಲಾನ್** ಏಳು ತಾಲವೃಕ್ಷಗಳನ್ನು, **ಪ್ರದರ್ಶ್ಯ** ತೋರಿಸಿ, **ಕಥಿತಃ** ಹೇಳಿಸಿಕೊಳ್ಳಲ್ಪಟ್ಟನು.

**ತಾತ್ಪರ್ಯ :** ದುಂದುಭಿಯ ಶರೀರಾಘಾತದಿಂದ ರಸಾತಲಲೋಕದಲ್ಲಿ ಮೃತರಾದ ದಾನವರು ರುದ್ರದೇವರ ವರದಿಂದ ಅವಧ್ಯರಾಗಿದ್ದರು. ಶ್ರೀರಾಮ ಅವರನ್ನು ಅನಾಯಾಸವಾಗಿ ಸಂಹರಿಸಿದ. ಆದರೂ ಸುಗ್ರೀವನಿಗೆ ನಂಬಿಕೆ ಬರಲಿಲ್ಲ. 'ದುಂದುಭಿಯ ಮೃತಶರೀರ ಬಹಳಕಾಲವಾದ್ದರಿಂದ ದುರ್ಬಲವಾಗಿದೆ. ಇದನ್ನೂ ನೀನು ಅನಾಯಾಸವಾಗಿ ಚಿಮ್ಮಿರುವಿ. ಇಗೋ ಈ ಏಳು ತಾಲವೃಕ್ಷಗಳನ್ನು ನೋಡು' ಎಂದ. ಏಳು ದೈತ್ಯರೇ ವಜ್ರಕ್ಕಿಂತಲೂ ದೃಢತಮವಾದ ಮರಗಳ ರೂಪ ತಳೆದಿದ್ದರು.॥ ೫॥

**ಏಕೈಕಮೇಷು ಸ ವಿಕಂಪಯಿತುಂ ಸಮರ್ಥಃ**
**ಪತ್ರಾಣಿ ಲೋಪ್ತುಮಪಿ ತೂತ್ಸಹತೇ ನ ಶಕ್ತಃ ।**
**ವಿಷ್ವಕ್ ಸ್ಥಿತಾನ್ ಯದಿ ಭವಾನ್ ಪ್ರತಿಭೇತ್ಸ್ಯತೀಮಾನ್**
**ಏಕೇಷುಣಾ ತರ್‌ಹಿ ವಾಲಿವಧೇ ಸಮರ್ಥಃ ॥ ೬ ॥**

ಪದಚ್ಛೇದ : ಏಕೈಕಮ್ ಏಷು ಸಃ ವಿಕಂಪಯಿತುಂ ಸಮರ್ಥಃ ಪತ್ರಾಣಿ ಲೋಪ್ತುಮ್ ಅಪಿ ತು ಉತ್ಸಹತೇ ನ ಶಕ್ತಃ । ವಿಷ್ವಕ್ ಸ್ಥಿತಾನ್ ಯದಿ ಭವಾನ್ ಪ್ರತಿಭೇತ್ಸ್ಯತಿ ಇಮಾನ್ ಏಕೇಷುಣಾ ತರ್‌ಹಿ ವಾಲಿವಧೇ ಸಮರ್ಥಃ ॥

**ಅರ್ಥ** :- **ಸಃ** ಆ ವಾಲಿಯು, **ಏಷು** ಈ ಏಳು ತಾಲವೃಕ್ಷಗಳ ಮಧ್ಯದಲ್ಲಿ **ಏಕೈಕಂ** ಒಂದೊಂದು ತಾಲವೃಕ್ಷವನ್ನು **ಕಂಪಯಿತುಂ** ಅಲುಗಾಡಿಸಲು, **ಸಮರ್ಥಃ** ಶಕ್ತನು, **ಪತ್ರಾಣಿ** ಎಲೆಗಳನ್ನು **ಲೋಪ್ತುಮಪಿ** ಕೀಳಲೂ ಕೂಡ, **ಉತ್ಸಹತೇ** ಪ್ರಯತ್ನಿಸುತ್ತಾನೆ, **ಅಪಿ ತು** ಹಾಗಾದರೂ ಕೂಡ, **ನ ಶಕ್ತಃ** ಸಮರ್ಥನಲ್ಲ, **ಭವಾನ್** ನೀನು, **ವಿಷ್ವಕ್ ಸ್ಥಿತಾನ್** ವಕ್ರವಾಗಿರುವ, **ಇಮಾನ್** ಈ ತಾಲ ವೃಕ್ಷಗಳನ್ನು **ಏಕೇಷುಣಾ** ಒಂದು ಬಾಣದಿಂದ, **ಪ್ರತಿಭೇತ್ಸ್ಯತಿ** ಭೇದಿಸುವುದಾದರೆ, **ತರ್ಹಿ** ಆಗ, **ವಾಲಿವಧೇ** ವಾಲಿಯ ಸಂಹಾರದಲ್ಲಿ **ಸಮರ್ಥಃ** ಶಕ್ತನು.

**ತಾತ್ಪರ್ಯ** :- ಈ ಏಳು ವೃಕ್ಷಗಳಲ್ಲಿ ಒಂದೊಂದನ್ನು ಪ್ರತ್ಯೇಕವಾಗಿ ವಾಲಿ ಅಲುಗಾಡಿಸುವನು. ಇವುಗಳ ಎಲೆ ಕೀಳಲು ಮಹಾಪ್ರಯತ್ನ ನಡೆಸಿದರೂ ಸಾಧ್ಯವಾಗಲಿಲ್ಲ. ನೀನು ಒಂದೇ ಬಾಣದಿಂದ ಏಳೂ ಮರಗಳನ್ನೂ ಕತ್ತರಿಸುವಿಯಾದರೆ ನೀನು ವಾಲಿಯ ಸಂಹಾರಕ್ಕೆ ಖಂಡಿತ ಸಮರ್ಥ. ॥ ೬॥

**ವಿವರಣೆ** :- ರಾಮನ ಶಕ್ತಿಯ ಬಗ್ಗೆ ಸಂಶಯವನ್ನು ಸುಗ್ರೀವ, ವ್ಯಕ್ತಪಡಿಸುವುದನ್ನು 'ತರ್ಹಿ' ಎಂಬ ಪದವಿನ್ಯಾಸ ಸೂಚಿಸುತ್ತದೆ ಎನ್ನುತ್ತಾರೆ ಶ್ರೀವಾದಿರಾಜ ಶ್ರೀಪಾದರು. ॥ ೬॥

**ಜೇತುಂ ಚತುರ್ಗುಣಬಲೋ ಹಿ ಪುಮಾನ್ ಪ್ರಭುಃ ಸ್ಯಾದ್**
**ಹಂತುಂ ಶತಾಧಿಕಬಲೋಽತಿಬಲಂ ಸುಶಕ್ತಃ ।**
**ತಸ್ಮಾದಿಮಾನ್ ಹರಿಹಯಾತ್ಮಜಬಾಹ್ವಲೋಪ್ಯ**
**ಪತ್ರಾನ್ ವಿಭಿದ್ಯ ಮಮ ಸಂಶಯಮಾಶು ಭಿಂಧಿ ॥ ೭ ॥**

ಪದಚ್ಛೇದ : ಜೇತುಂ ಚತುರ್ಗುಣಬಲಃ ಹಿ ಪುಮಾನ್ ಪ್ರಭುಃ ಸ್ಯಾತ್ ಹಂತುಂ ಶತಾಧಿಕಬಲಃ ಅತಿಬಲಂ ಸುಶಕ್ತಃ । ತಸ್ಮಾತ್ ಇಮಾನ್ ಹರಿಹಯಾತ್ಮಜಬಾಹ್ವಲೋಪ್ಯ ಪತ್ರಾನ್ ವಿಭಿದ್ಯ ಮಮ ಸಂಶಯಮ್ ಆಶು ಭಿಂಧಿ ॥

**ಅರ್ಥ** :- **ಅರಿಬಲಾತ್** ಶತ್ರುವಿನ ಸಾಮರ್ಥ್ಯಕ್ಕಿಂತ, **ಚತುರ್ಗುಣಬಲಃ** ನಾಲ್ಕು ಪಾಲು ಅಧಿಕ ಬಲವುಳ್ಳ, **ಪುಮಾನ್** ಪುರುಷನು, **ಜೇತುಂ** ಶತ್ರುವನ್ನು ಜಯಿಸಲು, **ಪ್ರಭುಃ** ಸಮರ್ಥನು, **ಸ್ಯಾತ್** ಆಗುವನು, **ಶತಾಧಿಕಬಲಃ** ನೂರು ಪಾಲು ಹೆಚ್ಚು ಬಲವುಳ್ಳ ಪುರುಷನು, **ಅತಿಬಲಂ** ಹೆಚ್ಚು ಬಲವುಳ್ಳವನನ್ನು

**ಹಂತುಂ** ಕೊಲ್ಲಲು, **ಹಿ** ಯಾವ ಕಾರಣದಿಂದ, **ಸುಶಕ್ತಃ** ಅನಾಯಾಸವಾಗಿ ಸಮರ್ಥನು, **ತಸ್ಮಾತ್** ಆ ಕಾರಣದಿಂದ, **ಹರಿಹಯಾತ್ಮಜಬಾಹ್ವಲೋಪ್ಯಪತ್ರಾನ್** ದೇವೇಂದ್ರನ ಮಗನಾದ ವಾಲಿಯ ಭುಜಗಳಿಂದ ಭೇದಿಸಲು ಅಶಕ್ಯಗಳಾದ ಎಲೆಗಳುಳ್ಳ, **ಇಮಾನ್** ಈ ತಾಲವೃಕ್ಷಗಳನ್ನು **ವಿಭಿದ್ಯ** ಭೇದಿಸಿ, **ಮಮ** ನನ್ನ **ಸಂಶಯಂ** ವಾಲಿವಧ ಸಾಮರ್ಥ್ಯ ವಿಷಯದಲ್ಲಿರುವ ಸಂದೇಹವನ್ನು, **ಆಶು** ಬೇಗನೇ, **ಭಿಂದಿ** = ಪರಿಹರಿಸು.

**ತಾತ್ಪರ್ಯ :-** ಒಬ್ಬ ಬಲಶಾಲಿಯನ್ನು ಗೆಲ್ಲಲು ಎದುರಾಳಿ ನಾಲ್ಕು ಪಟ್ಟು ಹೆಚ್ಚು ಬಲಶಾಲಿಯಾಗಿರಬೇಕು. ಅತಿಬಲಿಷ್ಠನಾದ ಶತ್ರುವನ್ನು ಸಂಹರಿಸಲು ಎದುರಾಳಿಯು ನೂರು ಪಟ್ಟು ಹೆಚ್ಚಿನ ಬಲಶಾಲಿಯಾಗಿರಬೇಕು. ಆಗ ಅನಾಯಾಸವಾಗಿ ಶತ್ರುವನ್ನು ಸಂಹರಿಸಬಲ್ಲ. ಆದ್ದರಿಂದ ವಾಲಿಯು ಮಹಾಪ್ರಯತ್ನ ಮಾಡಿದರೂ ಕೀಳಲಾಗದ ಎಲೆಗಳುಳ್ಳ ಈ ತಾಲವೃಕ್ಷಗಳನ್ನು ನೀನು ತುಂಡರಿಸಿ ನನ್ನ ಸಂಶಯವನ್ನು ಪರಿಹರಿಸು ಎಂದನು ಸುಗ್ರೀವ. ॥ ೭॥

**ಶ್ರುತ್ವಾಽಸ್ಯ ವಾಕ್ಯಮವಮೃಶ್ಯ ದಿತೇಃ ಸುತಾಂಸ್ತಾನ್**
**ಧಾತುರ್ವರಾದಖಿಲಪುಂಭಿರಭೇದ್ಯರೂಪಾನ್ ।**
**ಬ್ರಹ್ಮತ್ವಮಾಪ್ತುಮಚಲಂ ತಪಸಿ ಪ್ರವೃತ್ತಾನ್**
**ಏಕೇಷುಣಾ ಸಪದಿ ತಾನ್ ಪ್ರಬಿಭೇದ ರಾಮಃ ॥ ೮ ॥**

ಪದಚ್ಛೇದ : **ಶ್ರುತ್ವಾ ಅಸ್ಯ ವಾಕ್ಯಮ್ ಅವಮೃಶ್ಯ ದಿತೇಃ ಸುತಾನ್ ತಾನ್ ಧಾತುಃ ವರಾತ್ ಅಖಿಲಪುಂಭಿಃ ಅಭೇದ್ಯರೂಪಾನ್ । ಬ್ರಹ್ಮತ್ವಮ್ ಆಪ್ತುಮ್ ಅಚಲಂ ತಪಸಿ ಪ್ರವೃತ್ತಾನ್ ಏಕೇಷುಣಾ ಸಪದಿ ತಾನ್ ಪ್ರಬಿಭೇದ ರಾಮಃ ॥**

**ಅರ್ಥ :- ರಾಮಃ** ಶ್ರೀರಾಮಚಂದ್ರನು, **ಅಸ್ಯ** ಈ ಸುಗ್ರೀವನ, **ವಾಕ್ಯಂ** ಮಾತನ್ನು **ಶ್ರುತ್ವಾ** ಕೇಳಿ, **ಧಾತುಃ** ಬ್ರಹ್ಮನ, **ವರಾತ್** ವರದಿಂದ, **ಅಖಿಲಪುಂಭಿಃ** ಎಲ್ಲಾ ಪುರುಷರಿಂದಲೂ, **ಅಭೇದ್ಯರೂಪಾನ್** ಭೇದಿಸಲು ಅಶಕ್ಯವಾದ ಸ್ವರೂಪವುಳ್ಳ, **ಬ್ರಹ್ಮತ್ವಂ** ಚತುರ್ಮುಖ ಪದವಿಯನ್ನು **ಆಪ್ತುಂ** ಹೊಂದಲು, **ಅಚಲಂ** ಸ್ಥಿರವಾದ, **ತಪಸಿ** ತಪಸ್ಸಿನಲ್ಲಿ **ಪ್ರವೃತ್ತಾನ್** ಉದ್ಯುಕ್ತರಾದ, **ದಿತೇಃ** ದಿತಿಯ, **ಸುತಾನ್** ಮಕ್ಕಳಾದ, **ತಾನ್** ಆ ತಾಲವೃಕ್ಷಗಳನ್ನು **ಅವಮೃಶ್ಯ** ತಿಳಿದು, **ಏಕೇಷುಣಾ** ಒಂದೇ ಬಾಣದಿಂದ, **ಸಪದಿ** ಕೂಡಲೇ, **ತಾನ್** ಆ ತಾಲ ವೃಕ್ಷಗಳನ್ನು **ಪ್ರಬಿಭೇದ** ತುಂಡರಿಸಿದನು.

**ತಾತ್ಪರ್ಯ** : ಬ್ರಹ್ಮಪದ ಪಡೆಯಲು, ಯಾರಿಗೂ ತಿಳಿಯದಂತೆ ಮರಗಳ ರೂಪ ತಳೆದು ತಪಸ್ಸಿನಲ್ಲಿ ತೊಡಗಿದ್ದರು ಈ ಏಳು ದಾನವರು. ಚತುರ್ಮುಖ ನೀಡಿದ ಅವಧ್ಯತ್ವ ವರವೂ ಇವರಿಗೆ ಬೆಂಗಾವಲಾಗಿತ್ತು. ಆದ್ದರಿಂದ ಯಾರಿಂದಲೂ ಇವರನ್ನು ಅಲುಗಾಡಿಸಲು ಸಾಧ್ಯವಾಗುತ್ತಿರಲಿಲ್ಲ. ಇವರ ನಿಜರೂಪವರಿತ ರಾಮ ಒಂದೇ ಬಾಣದಿಂದ ಅವರನ್ನೆಲ್ಲ ಸಂಹರಿಸಿದ. ॥ ೮॥

**ಸಂಧಾಯ ಕಾರ್ಮುಕವರೇ ನಿಶಿತೇ ತು ಬಾಣೇऽ-**
**ಥಾಕೃಷ್ಯ ದಕ್ಷಿಣಭುಜೇನ ತದಾ ಪ್ರಮುಕ್ತೇ ।**
**ರಾಮೇಣ ಸತ್ವರಮನಂತಬಲೇನ ಸರ್ವೇ**
**ಚೂರ್ಣೀಕೃತಾಃ ಸಪದಿ ತೇ ತರವೋ ರವೇಣ ॥ ೯ ॥**

ಪದಚ್ಛೇದ : ಸಂಧಾಯ ಕಾರ್ಮುಕವರೇ ನಿಶಿತೇ ತು ಬಾಣೇ ಅಥ ಆಕೃಷ್ಯ ದಕ್ಷಿಣಭುಜೇನ ತದಾ ಪ್ರಮುಕ್ತೇ । ರಾಮೇಣ ಸತ್ವರಮ್ ಅನಂತಬಲೇನ ಸರ್ವೇ ಚೂರ್ಣೀಕೃತಾಃ ಸಪದಿ ತೇ ತರವಃ ರವೇಣ ॥

**ಅರ್ಥ** :- **ತದಾ** ಆ ತಾಲವೃಕ್ಷಗಳನ್ನು ಭೇದಿಸುವ ಸಮಯದಲ್ಲಿ, **ಅನಂತಬಲೇನ** ಅಪರಿಮಿತ ಸಾಮರ್ಥ್ಯವುಳ್ಳ, **ರಾಮೇಣ** ಶ್ರೀರಾಮನಿಂದ, **ಕಾರ್ಮುಕವರೇ** ಶ್ರೇಷ್ಠ ಧನುಸ್ಸಿನಲ್ಲಿ, **ನಿಶಿತೇ** ಮೊನಚಾದ, **ಬಾಣೇ** ಬಾಣವನ್ನು, **ಸಂಧಾಯ** ಯೋಜಿಸಿ, **ಅಥ** ಅನಂತರ, **ದಕ್ಷಿಣಭುಜೇನ** ಬಲ ಬಾಹುವಿನಿಂದ, **ಆಕೃಷ್ಯ** ಸೆಳೆದು, **ಸತ್ವರಂ** ವೇಗದಿಂದ, **ಪ್ರಮುಕ್ತೇ** ಬಿಡಲ್ಪಡುತ್ತಿರಲು, **ಸಪದಿ** ಕೂಡಲೇ, **ತೇ** ಆ, **ಸರ್ವೇ** ಎಲ್ಲಾ, **ತರವಃ** ತಾಲವೃಕ್ಷಗಳು, **ರವೇಣ** ಶಬ್ದದಿಂದ, **ಚೂರ್ಣೀಕೃತಾಃ** ಪುಡಿ ಮಾಡಲ್ಪಟ್ಟವು.

**ತಾತ್ಪರ್ಯ** :- ಗಣನೆಗೆ ನಿಲುಕದ ಸಾಮರ್ಥ್ಯವುಳ್ಳ ಶ್ರೀರಾಮ ಹರಿತವಾದ ಬಾಣವೊಂದನ್ನು ಬಿಲ್ಲಿಗೆ ಸಂಯೋಜಿಸಿ ತಾಲವೃಕ್ಷಗಳ ಮೇಲೆ ಪ್ರಯೋಗಿಸಿದ. ಎಲ್ಲ ಮರಗಳ ರೂಪ ತಳೆದ ದಾನವರು ಪುಡಿ ಪುಡಿಯಾಗಿ ಬಿದ್ದರು. ॥ ೯॥

**ಭಿತ್ವಾ ಚ ತಾನ್ ಸಗಿರಿಕುಂ ಭಗವತ್ಪ್ರಮುಕ್ತಃ**
**ಪಾತಾಲಸಪ್ತಕಮಥಾತ್ರ ಚ ಯೇ ತ್ವವಧ್ಯಾಃ ।**
**ನಾಮ್ನಾऽಸುರಾಃ ಕುಮುದಿನೋऽಬ್ಜಜವಾಕ್ಯರಕ್ಷಃ**
**ಸರ್ವಾಂಶ್ಚ ತಾನದಹದಾಶು ಶರಃ ಸ ಏಕಃ ॥ ೧೦ ॥**

ಪದಚ್ಛೇದ : ಭಿತ್ವಾ ಚ ತಾನ್ ಸಗಿರಿಕುಂ ಭಗವತ್ಪ್ರಮುಕ್ತಃ ಪಾತಾಲಸಪ್ತಕಮ್ ಅಥ ಅತ್ರ ಚ ಯೇ ತು ಅವಧ್ಯಾಃ । ನಾಮ್ನಾ ಅಸುರಾಃ ಕುಮುದಿನಃ ಅಬ್ಜಜವಾಕ್ಯರಕ್ಷಃ ಸರ್ವಾನ್ ಚ ತಾನ್ ಅದಹತ್ ಆಶು ಶರಃ ಸಃ ಏಕಃ ॥

**ಅರ್ಥ** :- **ಭಗವತ್ಪ್ರಮುಕ್ತಃ** ಶ್ರೀರಾಮನಿಂದ ಬಿಡಲ್ಪಟ್ಟ **ಸ ಏಕಃ ಶರಃ** ಆ ಒಂದೇ ಬಾಣವು, **ತಾನ್** ಆ ಏಳು ತಾಲ ವೃಕ್ಷಗಳನ್ನು, **ಭಿತ್ವಾ** ಭೇದಿಸಿ, **ಸಗಿರಿಕುಂ** ಪರ್ವತದಿಂದ ಕೂಡಿದ ಭೂಮಿ ಹಾಗೂ, **ಪಾತಾಲಸಪ್ತಕಂ** ಪಾತಾಲಾದಿ ಏಳು ಲೋಕಗಳನ್ನು, **ಭಿತ್ವಾ** ಭೇದಿಸಿ, **ಅಥ** ಅನಂತರ, **ಅತ್ರ** ಈ ಪಾತಾಲಸಪ್ತಕಗಳಲ್ಲಿ, **ಅಬ್ಜಜವಾಕ್ಯರಕ್ಷಃ** ಬ್ರಹ್ಮನ ವಾಕ್ಯವೇ ರಕ್ಷಣೆಯಾಗಿ ಉಳ್ಳ, **ಅವಧ್ಯಾಃ** ಮರಣವಿಲ್ಲದ, **ನಾಮ್ನಾ ಕುಮುದಿನಃ** ಕುಮುದಿಗಳೆಂದು ಹೆಸರುಳ್ಳ, **ಯೇ** ಯಾವ ಅಸುರರೋ, **ತಾನ್ ಸರ್ವಾನ್** ಅವರೆಲ್ಲರನ್ನು, **ಆಶು** ಬೇಗನೇ, **ಅದಹತ್** ಸುಟ್ಟಿತು.

**ತಾತ್ಪರ್ಯ** : ಕೇವಲ ಏಳು ಮರಗಳನ್ನು ತುಂಡರಿಸಲು ಪ್ರಯೋಗಿಸಿದ ಶ್ರೀರಾಮನ ಬಾಣ, ಏಳು ಮರಗಳ ರೂಪದಲ್ಲಿದ್ದ ರಕ್ಕಸರನ್ನು ಸಂಹರಿಸಿದ್ದು ಮಾತ್ರವಲ್ಲದೆ, ಪರ್ವತಗಳ ನೆಲೆವೀಡಾದ ಭೂಮಿಯನ್ನು ಭೇದಿಸಿ, ಚತುರ್ಮುಖ ವರದಿಂದ ಅವಧ್ಯರಾದ 'ಕುಮುದಿ' ಎಂಬ ಅಸರರನ್ನು ಸಂಹರಿಸಿತು. ॥ ೧೦॥

**ನೈತದ್ವಿಚಿತ್ರಮಮಿತೋರುಬಸಲ್ಯ ವಿಷ್ಣೋ-**
**ರ್ಯತ್ಪ್ರೇರಣಾತ್ ಸಪವನಸ್ಯ ಭವೇತ್ ಪ್ರವೃತ್ತಿಃ ।**
**ಲೋಕಸ್ಯ ಸಪ್ರಕೃತಿಕಸ್ಯ ಸರುದ್ರಕಾಲ-**
**ಕರ್ಮಾದಿಕಸ್ಯ ತದಪೀದಮನನ್ಯಸಾಧ್ಯಮ್ ॥ ೧೧ ॥**

ಪದಚ್ಛೇದ : ನ ಏತತ್ ವಿಚಿತ್ರಮ್ ಅಮಿತೋರುಬಸಲ್ಯ ವಿಷ್ಣೋಃ ಯತ್ಪ್ರೇರಣಾತ್ ಸಪವನಸ್ಯ ಭವೇತ್ ಪ್ರವೃತ್ತಿಃ । ಲೋಕಸ್ಯ ಸಪ್ರಕೃತಿಕಸ್ಯ ಸರುದ್ರಕಾಲಕರ್ಮಾದಿಕಸ್ಯ ತತ್ ಅಪಿ ಇದವ್ ಅನನ್ಯಸಾಧ್ಯಮ್ ॥

**ಅರ್ಥ** :- **ಯತ್ಪ್ರೇರಣಾತ್** ಯಾವ ವಿಷ್ಣುವಿನ ಪ್ರೇರಣೆಯಿಂದ, **ಸಪವನಸ್ಯ** ವಾಯುದೇವರಿಂದ ಕೂಡಿದ, **ಸಪ್ರಕೃತಿಕಸ್ಯ** ಲಕ್ಷ್ಮೀ ಸಹಿತವಾದ, **ಸರುದ್ರಕಾಲಕರ್ಮಾದಿಕಸ್ಯ** ರುದ್ರನೂ ಕಾಲಾಭಿಮಾನಿಯಾದ ಗರುಡನೂ ಕರ್ಮಾಭಿಮಾನಿಯಾದ ಇಂದ್ರ-ಕಾಮಾದಿ ದೇವತೆಗಳಿಂದ ಕೂಡಿದ, **ಲೋಕಸ್ಯ**

ಜಗತ್ತಿನ ಮತ್ತು ಜನರ, **ಪ್ರವೃತ್ತಿಃ** ವ್ಯಾಪಾರವು, **ಭವೇತ್** ಆಗುವುದೋ, ಅಂತಹ ಶ್ರೀರಾಮನಿಗೆ, **ಇದಂ** ಮಂಡಲಾಕಾರವಾಗಿ ಇರತಕ್ಕ ತಾಲವೃಕ್ಷಗಳ ಭೇದನವು, **ಶವದಿಂದ** ಭೂಮಿಯ ಭೇದನವು, ಬ್ರಹ್ಮನ ವರದ ಉಲ್ಲಂಘನೆಯು ಇವೇ ಮೊದಲಾದದ್ದು **ಅನನ್ಯಸಾಧ್ಯಂ** ಇನ್ನೊಬ್ಬರಿಂದ ಮಾಡಲು ಅಶಕ್ಯವಾದದ್ದು **ತದಪಿ** ಈ ಕಾರ್ಯಸಮೂಹವು, **ಅಮಿತೋರು** ಬಸಲ್ಯ ಅಪರಿಮಿತ ಹಾಗೂ ಉತ್ಕೃಷ್ಟ ಬಲವುಳ್ಳ, **ವಿಷ್ಣೋಃ** ನಾರಾಯಣನಿಗೆ, **ಏತತ್** ಇದು, **ಚಿತ್ರಂ ನ** ಆಶ್ಚರ್ಯಕರವಲ್ಲ.

**ತಾತ್ಪರ್ಯ** :- ಶ್ರೀರಾಮನ ಬಾಣ ಇಷ್ಟೆಲ್ಲ ಕಾರ್ಯ ಮಾಡಿದುದು ಅಚ್ಚರಿಯ ಸಂಗತಿಯಲ್ಲ. ಅನಂತಶಕ್ತಿಯುಳ್ಳ ಶ್ರೀರಾಮನ ಪ್ರೇರಣೆಯಿಂದ ಶ್ರೀದೇವಿ-ಚತುರ್ಮುಖ-ರುದ್ರ ಮೊದಲಾದ ಸಕಲದೇವತೆಗಳ ಕಾರ್ಯಗಳು ನಡೆಯುತ್ತಿವೆ. ಅವನ ಸಾಮರ್ಥ್ಯ ಅನಂತ ಹಾಗೂ ಕಲ್ಪನಾತೀತ. ಇಂತಹ ಕಾರ್ಯ ಮಾಡಲು ಮತ್ತಾರಿಗೂ ಸಾಧ್ಯವಿಲ್ಲ. ॥ ೧೧ ॥

**ದೃಷ್ಟ್ವಾ ಬಲಂ ಭಗವತೋಽಥ ಹರೀಶ್ವರೋಽಸಾ-**
**ವಗ್ರೇ ನಿಧಾಯ ತಮಯಾತ್ ಪುರಮಗ್ರಜಸ್ಯ ।**
**ಆಶ್ರುತ್ಯ ರಾವಮನುಜಸ್ಯ ಬಿಲಾತ್ ಸ ಚಾಽಗಾ-**
**ದಭ್ಯೇನಮಾಶು ದಯಿತಾಪ್ರತಿವಾರಿತೋಽಪಿ ॥ ೧೨ ॥**

**ಪದಚ್ಛೇದ** : ದೃಷ್ಟ್ವಾ ಬಲಂ ಭಗವತಃ ಅಥ ಹರೀಶ್ವರಃ ಅಸೌ ಅಗ್ರೇ ನಿಧಾಯ ತಂ ಅಯಾತ್ ಪುರಮ್ ಅಗ್ರಜಸ್ಯ । ಆಶ್ರುತ್ಯ ರಾವಂ ಅನುಜಸ್ಯ ಬಿಲಾತ್ ಸಃ ಚ ಅಗಾತ್ ಅಭಿ ಏನಮ್ ಆಶು ದಯಿತಾಪ್ರತಿವಾರಿತಃ ಅಪಿ ॥

**ಅರ್ಥ** :- **ಅಥ** ಅನಂತರ, **ಹರೀಶ್ವರಃ** ಕಪಿಶ್ರೇಷ್ಠನಾದ, **ಅಸೌ** ಈ ಸುಗ್ರೀವನು, **ಭಗವತಃ** ಶ್ರೀರಾಮನ, **ಬಲಂ** ಸಾಮರ್ಥ್ಯವನ್ನು **ದೃಷ್ಟ್ವಾ** ನೋಡಿ, **ತಂ** ಆ ರಾಮನನ್ನು **ಅಗ್ರೇ** ಮುಂಭಾಗದಲ್ಲಿ **ನಿಧಾಯ** ಇರಿಸಿ ಕೊಂಡು, **ಅಗ್ರಜಸ್ಯ** ಅಣ್ಣನಾದ ವಾಲಿಯ, **ಪುರಂ** ಪಟ್ಟಣವನ್ನು **ಅಗಾತ್** ಹೋದನು, **ಸಃ ಚ** ಆ ವಾಲಿಯಾದರೂ, **ಅನುಜಸ್ಯ** ತಮ್ಮನಾದ ಸುಗ್ರೀವನ, **ರಾವಂ** ಶಬ್ದವನ್ನು **ಆಶ್ರುತ್ಯ** ಕೇಳಿ, **ದಯಿತಾಪ್ರತಿವಾರಿತೋಽಪಿ** ತನ್ನ ಹೆಂಡತಿ ಯಾದ ತಾರೆಯಿಂದ ಹೋಗಬಾರದು ಎಂಬುದಾಗಿ ತಡೆಯಲ್ಪಟ್ಟವನಾದರೂ

ಕೂಡ, **ಬಿಲಾತ್** ಬಿಸಲದೃಶವಾದ ಪಟ್ಟಣದಿಂದ, **ನಿರ್ಗತ್ಯ** ಹೊರಟು, **ಏನಂ** ಈ ಸುಗ್ರೀವನನ್ನು, **ಆಶು** ಬೇಗನೇ, **ಅಭ್ಯಗಾತ್** ಅಭಿಮುಖವಾಗಿ ಬಂದನು.

**ತಾತ್ಪರ್ಯ** : ಶ್ರೀರಾಮನ ಬಲದ ಬಗ್ಗೆ ನಂಬಿಕೆ ಹೊಂದಿದ ಸುಗ್ರೀವನು ಶ್ರೀರಾಮನನ್ನು ಮುಂದಿರಿಸಿಕೊಂಡು ವಾಲಿಯನ್ನು, ಪಟ್ಟಣದ ಬಳಿ ಬಂದು ವೀರಘರ್ಜನೆ ಮಾಡಿದ. ತಮ್ಮನಾದ ಸುಗ್ರೀವನ ಗರ್ಜನೆ ಸಹಿಸದ ವಾಲಿ ತಾರೆ ತಡೆದರೂ ಲೆಕ್ಕಿಸದೇ ಸುಗ್ರೀವನಿದ್ದೆಡೆ ಆಗಮಿಸಿದ. ॥ ೧೨॥

**ತನ್ಮುಷ್ಟಿಭಿಃ ಪ್ರತಿಹತಃ ಪ್ರಯಯಾವಶಕ್ತಃ**
**ಸುಗ್ರೀವ ಆಶು ರಘುಪೋಽಪಿ ಹಿ ಧರ್ಮಮೀಕ್ಷನ್ ।**
**ನೈನಂ ಜಘಾನ ವಿದಿತಾಖಿಲಲೋಕಚೇಷ್ಟೋಽ-**
**ಪ್ಯೇನಂ ಸ ಆಹ ಯುಧಿ ವಾಂ ನ ಮಯಾ ವಿವಿಕ್ತೌ ॥ ೧೩ ॥**

ಪದಚ್ಛೇದ : ತನ್ಮುಷ್ಟಿಭಿಃ ಪ್ರತಿಹತಃ ಪ್ರಯಯೌ ಅಶಕ್ತಃ ಸುಗ್ರೀವಃ ಆಶು ರಘುಪಃ ಅಪಿ ಹಿ ಧರ್ಮಮ್ ಈಕ್ಷನ್ । ನ ಏನಂ ಜಘಾನ ವಿದಿತಾಖಿಲಲೋಕಚೇಷ್ಟಃ ಅಪಿ ಏನಂ ಸಃ ಆಹ ಯುಧಿ ವಾಂ ನ ಮಯಾ ವಿವಿಕ್ತೌ ॥

**ಅರ್ಥ** :- **ತನ್ಮುಷ್ಟಿಭಿಃ** ಆ ವಾಲಿಯ ಮುಷ್ಟಿ ಪ್ರಹಾರಗಳಿಂದ, **ಪ್ರತಿಹತಃ** ಹೊಡೆಯಲ್ಪಟ್ಟ, **ಅಶಕ್ತಃ** ಅಸಮರ್ಥನಾದ, **ಸುಗ್ರೀವಃ** ಸುಗ್ರೀವನು, **ಆಶು** ಕೂಡಲೇ, **ಪ್ರಯಯೌ** ಯುದ್ಧ ಭೂಮಿಯಿಂದ ಓಡಿ ಬಂದನು, **ರಘುಪೋಽಪಿ** ಸಮರ್ಥನಾದ ರಾಮನು, **ಧರ್ಮಂ** ಸುಜನರಿಗೆ ಧರ್ಮವನ್ನು, **ಈಕ್ಷನ್** ತಿಳಿಸುವವನಾಗಿ, **ವಿದಿತಾಖಿಲಲೋಕಚೇಷ್ಟೋಽಪಿ** ತಿಳಿಯಲ್ಪಟ್ಟ ಎಲ್ಲಾ ಜನರ ಕಾರ್ಯಉಳ್ಳವನಾದರೂ, **ಏನಂ** ಸುಗ್ರೀವನನ್ನು ಕುರಿತು, **ಯುಧಿ** ಯುದ್ಧದಲ್ಲಿ, **ಮಯಾ** ನನ್ನಿಂದ, **ವಾಂ** ನೀವಿಬ್ಬರು, **ವಿವಿಕ್ತೌ** ಭೇದಕ ಧರ್ಮವುಳ್ಳವರಾಗಿ, **ನ** ತಿಳಿಯಲ್ಪಡಲಿಲ್ಲ, ಹೀಗೆ **ಆಹ** ಹೇಳಿದನು.

**ತಾತ್ಪರ್ಯ** : ವಾಲಿಯ ಮರಣಾಂತಕ ಪೆಟ್ಟು ತಾಳಲಾಗದೇ ಸುಗ್ರೀವ ಯುದ್ಧಭೂಮಿಯಿಂದ ಓಡಿಬಂದ. ಶ್ರೀರಾಮನು ವಾಲಿ-ಸುಗ್ರೀವರ ಮನಃಸ್ಥಿತಿಯನ್ನು ಪರೀಕ್ಷಿಸಲೆಂದೇ ಸುಮ್ಮನಿದ್ದ. ಮರಳಿ ಬಂದ ಸುಗ್ರೀವನಿಗೆ ನೀವಿಬ್ಬರೂ ಒಂದೇ ರೀತಿ ಇರುವುದರಿಂದ ನಿನಗೆ ಅನ್ಯಾಯವಾಗಬಾರದೆಂದೇ ಬಾಣ ಪ್ರಯೋಗಿಸಲಿಲ್ಲವೆಂದ. ॥ ೧೩॥

**ಸೌಭ್ರಾತ್ರಮೇಷ ಯದಿ ವಾಂಛತಿ ವಾಲಿನೈವ**
**ನಾಹಂ ನಿರಾಗಸಮಥಾಗ್ರಜನಿಂ ಹನಿಷ್ಯೇ ।**
**ದೀರ್ಘಃ ಸಹೋದರಗತೋ ನ ಭವೇದ್ಧಿ ಕೋಪೋ**
**ದೀರ್ಘೋಽಪಿ ಕಾರಣಮೃತೇ ವಿನಿವರ್ತತೇ ಚ ॥ ೧೪ ॥**

**ಪದಚ್ಛೇದ : ಸೌಭ್ರಾತ್ರಮ್ ಏಷಃ ಯದಿ ವಾಂಛತಿ ವಾಲಿನಾ ಏವ ನ ಅಹಂ ನಿರಾಗಸಂ ಅಗ್ರಜನಿಂ ಹನಿಷ್ಯೇ । ದೀರ್ಘಃ ಸಹೋದರಗತಃ ನ ಭವೇತ್ ಹಿ ಕೋಪಃ ದೀರ್ಘಃ ಅಪಿ ಕಾರಣಮ್ ಋತೇ ವಿನಿವರ್ತತೇ ಚ ॥**

**ಅರ್ಥ :- ಏಷಃ** ಈ ಸುಗ್ರೀವನು, **ವಾಲಿನೈವ** ವಾಲಿಯಿಂದಲೇ, **ಸೌಭ್ರಾತ್ರಂ** ಅಣ್ಣನಲ್ಲಿ ಗೌರವಬುದ್ಧಿಯನ್ನು **ಯದಿ ವಾಂಛತಿ** ಇಚ್ಛಿಸಿದರೆ, **ಅಹಂ** ನಾನು, **ನಿರಾಗಸಂ** ನಿರಪರಾಧಿಯಾದ, **ಅಗ್ರಜನಿಂ** ಅಣ್ಣನಾದ ವಾಲಿಯನ್ನು **ನ ಹನಿಷ್ಯೇ** ಕೊಲ್ಲಲಾರೆನು, **ಸಹೋದರಗತಃ** ಸಹೋದರರಲ್ಲಿರ ತಕ್ಕ, **ಕೋಪಃ** ಕ್ರೋಧವು, **ದೀರ್ಘಃ** ಬಹುಕಾಲದ ವರೆಗೆ, **ನ ಭವೇತ್** ಉಳಿಯಲಾರದು, **ದೀರ್ಘೋಽಪಿ** ಬಹು ಕಾಲವಿದ್ದರೂ, **ಕಾರಣವ್ ಋತೇ** ಪ್ರಬಲ ಕಾರಣವಿಲ್ಲದೆ, **ವಿನಿವರ್ತತೇ ಚ** ಸಹೋದರತ್ವ ಪ್ರಯುಕ್ತ ಸ್ವಾಭಾವಿಕ ಸ್ನೇಹದಿಂದ ನಿವೃತ್ತವಾಗುವುದು.

**ತಾತ್ಪರ್ಯ :** ಸುಗ್ರೀವನಿಗೆ ಅಣ್ಣನ ಬಗ್ಗೆ ಅಸಮಾಧಾನವಿದೆಯಾದರೂ ಪರಸ್ಪರ ಕಾದಾಡುವಾಗ ಯಾವುದೇ ಸನ್ನಿವೇಶದಲ್ಲಿ ತಂದೆಯ ಸ್ಥಾನದಲ್ಲಿರುವ ಅಣ್ಣನಲ್ಲಿ ಪ್ರೀತಿ ಜಾಗೃತವಾಗಬಹುದು. ಆಗ ನಾನು ವಾಲಿಯನ್ನು ಸಂಹರಿಸಿದ ಬಗ್ಗೆ ಸುಗ್ರೀವನಿಗೆ ಪಾಪ ಪ್ರಜ್ಞೆ ಜನಿಸಬಾರದು.ಇದರಂತೆ ವಾಲಿಯು ತನ್ನ ತಪ್ಪನ್ನು ಗುರುತಿಸಿಕೊಂಡರೆ ಸಂಹಾರಯೋಗ್ಯನಾಗಲಾರನು. ಸಹೋದರರಲ್ಲಿ ಸಣ್ಣ ಕಾರಣಗಳಿಂದ ವೈರ ಬೆಳೆದರೂ ಅದು ಬಹುಕಾಲ ಉಳಿಯುವುದಿಲ್ಲ. ಯಾವುದೋ ಪ್ರಸಂಗದಲ್ಲಿ ಆ ಕಿಚ್ಚು ಕಾರಣವಿಲ್ಲದೆಯೇ ಶಮನವಾಗ ಬಹುದು. ಈ ಹಿನ್ನಲೆಯಲ್ಲಿ ರಾಮ, ಬಾಣ ಪ್ರಯೋಗ ಮಾಡಲಿಲ್ಲ. ॥ ೧೪ ॥

**ಕೋಪಃ ಸಹೋದರಜನೇ ಪುನರಂತಕಾಲೇ**
**ಪ್ರಾಯೋ ನಿವೃತ್ತಿಮುಪಗಚ್ಛತಿ ತಾಪಕಶ್ಚ ।**
**ಏಕಸ್ಯ ಭಂಗ ಇತಿ ನೈವ ಝುಟಿತ್ಯಪಾಸ್ತ-**
**ದೋಷೋ ನಿಹಂತುಮಿಹ ಯೋಗ್ಯ ಇತಿ ಸ್ಮ ಮೇನೇ ॥ ೧೫ ॥**

ಪದಚ್ಛೇದ : ಕೋಪಃ ಸಹೋದರಜನೇ ಪುನಃ ಅಂತಕಾಲೇ ಪ್ರಾಯಃ ನಿವೃತ್ತಿಮ್ ಉಪಗಚ್ಛತಿ ತಾಪಕಃ ಚ । ಏಕಸ್ಯ ಭಂಗಃ ಇತಿ ನ ಏವ ಝುಟಿತಿ ಅಪಾಸ್ತದೋಷಃ ನಿಹಂತುಮ್ ಇಹ ಯೋಗ್ಯ ಇತಿ ಸ್ಮ ಮೇನೇ ॥

**ಅರ್ಥ** :- **ಸಹೋದರ ಜನೇ** ಅಣ್ಣ ತಮ್ಮಂದಿರಲ್ಲಿರುವ, **ಕೋಪಃ** ವಿರೋಧವು, **ಪುನಃ** ಮತ್ತೆ, **ಅಂತಕಾಲೇ** ಮರಣಸಮಯದಲ್ಲಿ, **ಪ್ರಾಯಃ** ಹೆಚ್ಚಾಗಿ, **ನಿವೃತ್ತಿಂ** ನಿವೃತ್ತಿಯನ್ನು, **ಉಪಗಚ್ಛತಿ** ಹೊಂದುತ್ತದೆ, **ಏಕಸ್ಯ** ಒಬ್ಬನ, **ಭಂಗೇ** ನಾಶವಾಗುತ್ತಿರಲು, **ತಾಪಕಶ್ಚ** ಪಶ್ಚಾತ್ತಾಪವನ್ನುಂಟು ಮಾಡತಕ್ಕದ್ದು **ಭವತಿ** ಆಗುತ್ತದೆ, **ಇತಿ** ಈ ಕಾರಣದಿಂದ, **ಝುಟಿತಿ** ಕೂಡಲೇ, **ಅಪಾಸ್ತ ದೋಷಃ** ದೋಷಲೇಶವಿಲ್ಲದ ಶ್ರೀರಾಮನು, **ಇಹ** ಈ ಪ್ರಥಮ ಯುದ್ಧದಲ್ಲಿ, **ಅಪಾಸ್ತದೋಷಃ** ವಾಲಿಯು ದ್ವೇಷಬುದ್ಧಿಯನ್ನು ತೊರೆದಲ್ಲಿ, **ನಿಹಂತುಂ** ಕೊಲ್ಲಲು, **ನೈವ ಯೋಗ್ಯಃ** ಯೋಗ್ಯನೇ ಅಲ್ಲ, **ಇತಿ** ಹೀಗೆ, **ಮೇನೇ ಸ್ಮ** ಆಲೋಚಿಸಿದನು.

**ತಾತ್ಪರ್ಯ** :- ಸಹೋದರರಲ್ಲಿರುವ ಕೋಪವು ಮರಣಕಾಲ ಬಂದಾಗ ಸಾಮಾನ್ಯವಾಗಿ ನಿವೃತ್ತವಾಗುವುದು. ಒಮ್ಮೊಮ್ಮೆ ಮರಣಕಾಲದಲ್ಲಿ ನಿವೃತ್ತವಾಗ ದಿದ್ದರೂ ಒಬ್ಬನ ಮರಣಾನಂತರ ಮತ್ತೊಬ್ಬನಿಗೆ ಪಶ್ಚಾತ್ತಾಪ ಜನಕವಾಗುವುದು. ಸುಗ್ರೀವ ಪೆಟ್ಟು ತಿಂದು ನಿರ್ವಿಣ್ಣನಾದಾಗ ವಾಲಿಯಲ್ಲಿ ಪಾಪಪ್ರಜ್ಞೆ ಜಾಗೃತ ವಾಗಬಹುದು. ಈ ಹಿನ್ನಲೆಯಲ್ಲಿ ವಾಲಿಯನ್ನು ಪರೀಕ್ಷಿಸದೆಯೇ ಸಂಹರಿಸಿದರೆ, ಅವನಿಗೆ ತಿದ್ದಿಕೊಳ್ಳುವ ಅವಕಾಶ ನೀಡಿದಂತಾಗದು. ಆದ್ದರಿಂದ ರಾಮ ಮೊದಲೇ ಬಾಣ ಪ್ರಯೋಗ ಮಾಡಲಿಲ್ಲ. ವಾಲಿಯ ದ್ವೇಷದ ತೀವ್ರತೆಯನ್ನು ಸರಿಯಾಗಿ ಪರೀಕ್ಷಿಸಲು ಮೊದಲು ಬಾಣ ಹೂಡಲಿಲ್ಲ ಶ್ರೀರಾಮ ॥ ೧೫॥

**ತಸ್ಮಾನ್ನ ಬಂಧುಜನಗೇ ಜನಿತೇ ವಿರೋಧೇ**
**ಕಾರ್ಯೋಽ ವಧಸ್ತದನುಬಂಧಿಭಿರಾಶ್ವಿತೀಹ ।**
**ಧರ್ಮಂ ಪ್ರದರ್ಶಯಿತುಮೇವ ರವೇಃ ಸುತಸ್ಯ**
**ಭಾವೀ ನ ತಾಪ ಇತಿ ವಿಚ್ಚ ನ ತಂ ಜಘಾನ ॥ ೧೬ ॥**

ಪದಚ್ಛೇದ : ತಸ್ಮಾತ್ ನ ಬಂಧುಜನಗೇ ಜನಿತೇ ವಿರೋಧೇ ಕಾರ್ಯಃ ವಧಃ ತದನುಬಂಧಿಭಿಃ ಆಶು ಇತಿ ಇಹ । ಧರ್ಮಂ ಪ್ರದರ್ಶಯಿತುಮ್ ಏವ ರವೇಃ ಸುತಸ್ಯ ಭಾವೀ ನ ತಾಪಃ ಇತಿ ವಿತ್ ಚ ನ ತಂ ಜಘಾನ ॥

**ಅರ್ಥ** :- **ರವೇಃ** ಸೂರ್ಯನ, **ಸುತಸ್ಯ** ಮಗನಾದ ಸುಗ್ರೀವನಿಗೆ, **ಭಾವೀ** ವಾಲಿಯ ಸಂಹಾರದಿಂದ ಮುಂದೆ ಆಗತಕ್ಕ, **ತಾಪಃ** ದುಃಖವು, **ನ ಭವೇತ್** ಆಗಬಾರದು, **ಇತಿ** ಎಂಬುದಾಗಿ, **ವಿತ್** ತಿಳಿದ ರಾಮನು, **ತಸ್ಮಾತ್** ಅಣ್ಣ ತಮ್ಮಂದಿರ ವಿರೋಧವು ಕಾರಣವಿಲ್ಲದೇ ನಿವೃತ್ತಿಯನ್ನು ಹೊಂದುವ ಸಂಭವ ವಿರುವುದರಿಂದ, **ಬಂಧುಜನಗೇ** ಬಂಧು ಜನರಲ್ಲಿ, **ವಿರೋಧೇ** ಕಲಹವು, **ಜನಿತೇ ಸತಿ** ಉಂಟಾಗುತ್ತಿರಲು, **ತದನುಬಂಧುಭಿಃ** ಮಿತ್ರರಿಂದ, **ಆಶು** ಸಂಧಾನಾದಿಗಳನ್ನಪೇಕ್ಷಿಸದೇ, **ವಧಃ** ಒಬ್ಬನ ಸಂಹಾರವು, **ನ ಕಾರ್ಯಃ** ಮಾಡಲು ಯೋಗ್ಯವಲ್ಲ, **ಇತಿ** ಎಂಬುದಾಗಿ, **ಇಹ** ಈ ವಾಲಿ ಸುಗ್ರೀವರ ಯುದ್ಧದಲ್ಲಿ, **ಧರ್ಮಂ** ಧರ್ಮಾನುಷ್ಠಾನ ಪ್ರಕಾರವನ್ನು, **ಪ್ರದರ್ಶಯಿತುಮೇವ** ತೋರಿಸುವುದಕ್ಕೋಸ್ಕರವೇ, **ತಂ** ಆ ವಾಲಿಯನ್ನು, **ನ ಜಘಾನ** ಕೊಲ್ಲಲಿಲ್ಲ.

**ತಾತ್ಪರ್ಯ** :- ಸಹೋದರರಲ್ಲಿ ಅಥವಾ ಬಾಂಧವರಲ್ಲಿ ವೈಮನಸ್ಯ ಉಂಟಾದಾಗ ಅವರ ಹಿತೈಷಿಗಳು ವಿಮರ್ಶಿಸದೇ ಒಂದೇ ಪಕ್ಷವನ್ನು ಅವಲಂಬಿಸಿ ಇನ್ನೊಬ್ಬರನ್ನು ಸಂಹರಿಸಬಾರದು. (ಇನ್ನೊಬ್ಬರಿಗೆ ಹಾನಿ ಮಾಡಬಾರದು) ಎಂಬ ಧರ್ಮಸೂಕ್ಷ್ಮವನ್ನು ಜಗತ್ತಿಗೆ ತಿಳಿಸಲು ಶ್ರೀರಾಮ ಮೊದಲ ಯುದ್ಧದಲ್ಲಿ ವಾಲಿಗೆ ಬಾಣ ಪ್ರಯೋಗಿಸಲಿಲ್ಲ. ಸುಗ್ರೀವನಿಗೆ ವಾಲಿ ಹನನದಿಂದ ಮುಂದೆಯೂ ದುಃಖಬಾರದೆಂಬ ಮನಃಸ್ಥಿತಿಯನ್ನು, ವಾಲಿಗೆ ಸುಗ್ರೀವನ ಮೃತಿಯೇ ಅಪೇಕ್ಷಿತವೆಂಬುದನ್ನೂ ರಾಮ ಅರಿತು ಕಾರ್ಯಪ್ರವೃತ್ತನಾದ. ॥ ೧೬ ॥

**ಯಃ ಪ್ರೇರಕಃ ಸಕಲಶೇಮುಷಿಸಂತತೇಶ್ಚ**
**ತಸ್ಯಾಜ್ಞತಾ ಕುತ ಇಹೇಶವರಸ್ಯ ವಿಷ್ಣೋಃ ।**
**ತೇನೋದಿತೋಽಥ ಸುದೃಢಂ ಪುನರಾಗತೇನ**
**ವಜ್ರೋಪಮಂ ಶರಮಮೂಮುಚದಿಂದ್ರಸೂನೌ ॥ ೧೭ ॥**

ಪದಚ್ಛೇದ : ಯಃ ಪ್ರೇರಕಃ ಸಕಲಶೇಮುಷಿಸಂತತೇಃ ಚ ತಸ್ಯ ಅಜ್ಞತಾ ಕುತಃ ಇಹ ಈಶವರಸ್ಯ ವಿಷ್ಣೋಃ । ತೇನ ಉದಿತಃ ಅಥ ಸುದೃಢಂ ಪುನಃ ಆಗತೇನ ವಜ್ರೋಪಮಂ ಶರಂ ಅಮೂಮುಚತ್ ಇಂದ್ರಸೂನೌ ॥

**ಅರ್ಥ** :- **ಯಃ** ಯಾವನು, **ಸಕಲಶೇಮುಷಿ ಸಂತತೇಃ** ಎಲ್ಲ ಬುದ್ಧಿಯ ಸಮುದಾಯಕ್ಕೆ , **ಪ್ರೇರಕಃ** ಪ್ರೇರಕನೋ, **ತಸ್ಯ** ಅಂತಹ, **ಈಶವರಸ್ಯ**

ಮನೋಭಿಮಾನಿಯಾದ ರುದ್ರನಿಗಿಂತ ಶ್ರೇಷ್ಠನಾದ, **ವಿಷ್ಣೋಃ** ಶ್ರೀರಾಮನಿಗೆ, **ಇಹ** ವಾಲಿ-ಸುಗ್ರೀವ ಯಾರೆಂಬ ವಿಷಯದಲ್ಲಿ **ಅಜ್ಞತಾ** ಅಜ್ಞಾನವು, **ಕುತಃ** ಹೇಗೆ ಸಾಧ್ಯ, **ಪುನಃ** ಅನಂತರ, **ಆಗತೇನ** ಯುದ್ಧಕ್ಕಾಗಿ ಬಂದ, **ತೇನ** ಆ ಸುಗ್ರೀವನಿಂದ, **ಸುದೃಢಂ** ವಾಲಿಯನ್ನು ಕೊಲ್ಲಲೇಬೇಕು ಎಂದು, **ಉದಿತಃ** ಹೇಳಿಸಿಕೊಳ್ಳಲ್ಪಟ್ಟ ರಾಮನು, **ಅಥ** ವಧವನ್ನು ನಿಶ್ಚಯಿಸಿ, **ವಜ್ರೋಪಮಂ** ವಜ್ರಕ್ಕೆ ಸಮಾನವಾದ, **ಶರಂ** ಬಾಣವನ್ನು, **ಇಂದ್ರಸೂನೌ** ಇಂದ್ರನ ಮಗನಾದ ವಾಲಿಯಲ್ಲಿ, **ಅಮೂಮುಚತ್** ಪ್ರಯೋಗಿಸಿದನು.

**ತಾತ್ಪರ್ಯ** :- ಎಲ್ಲರ ಮನಸ್ಸಿಗೆ ಪ್ರೇರಕನೂ, ರುದ್ರದೇವರಿಗೂ ಅನುಗ್ರಾಹಕನಾದ ಶ್ರೀರಾಮನಿಗೆ ವಾಲಿ-ಸುಗ್ರೀವರಲ್ಲಿ ಭೇದ ಗುರುತಿಸಲಾಗಲಿಲ್ಲವೆಂಬುದು ಹೇಗೆ ಸಾಧ್ಯ ? ಮತ್ತೆ ಸುಗ್ರೀವ ಬಂದು ವಾಲಿಯನ್ನು ಸಂಹರಿಸಲೇಬೇಕೆಂದು ಬಿನ್ನವಿಸಿದಾಗ ಶ್ರೀರಾಮನು ವಜ್ರದಂತೆ ಅಭೇದ್ಯವಾದ ಬಾಣವೊಂದನ್ನು ವಾಲಿಯ ಮೇಲೆ ಪ್ರಯೋಗಿಸಿದನು. ॥ ೧೭॥

**ರಾಮಾಜ್ಞಯೈವ ಲತಯಾ ರವಿಜೇ ವಿಭಕ್ತೇ**
**ವಾಯೋಃ ಸುತೇನ ರಘುಪೇಣ ಶರೇ ಪ್ರಮುಕ್ತೇ ।**
**ಶ್ರುತ್ವಾಽಸ್ಯ ಶಬ್ದಮತುಲಂ ಹೃದಿ ತೇನ ವಿದ್ಧ**
**ಇಂದ್ರಾತ್ಮಜೋ ಗಿರಿರಿವಾಪತದಾಶು ಸನ್ನಃ ॥ ೧೮ ॥**

ಪದಚ್ಛೇದ : ರಾಮಾಜ್ಞಯಾ ಏವ ಲತಯಾ ರವಿಜೇ ವಿಭಕ್ತೇ ವಾಯೋಃ ಸುತೇನ ರಘುವರೇಣ ಶರೇ ಪ್ರಮುಕ್ತೇ । ಶ್ರುತ್ವಾ ಅಸ್ಯ ಶಬ್ದಮ್ ಅತುಲಂ ಹೃದಿ ತೇನ ವಿದ್ಧಃ ಇಂದ್ರಾತ್ಮಜಃ ಗಿರಿಃ ಇವ ಆಪತತ್ ಆಶು ಸನ್ನಃ ॥

**ಅರ್ಥ** :- **ವಾಯೋಃ** ಸುತೇನ ವಾಯುದೇವನ ಮಗನಾದ ಹನುಮಂತನಿಂದ, **ರಾಮಾಜ್ಞಯೈವ** ರಾಮನ ಅಪ್ಪಣೆಯಿಂದಲೇ, **ಲತಯಾ** ಪುಷ್ಪಮಾಲೆಯಿಂದ, **ರವಿಜೇ** ಸುಗ್ರೀವನು, **ವಿಭಕ್ತೇ ಸತಿ** ವಾಲಿಯಿಂದ ಬೇರೆಯಾಗಿ ತೋರಿಸಲ್ಪಡುತ್ತಿರಲು, **ರಘುಪೇಣ** ರಘುಕುಲಶ್ರೇಷ್ಠನಾದ ಶ್ರೀರಾಮನಿಂದ, **ಶರೇ** ಬಾಣವು, **ಪ್ರಮುಕ್ತೇ** ಬಿಡಲ್ಪಡುತ್ತಿರಲು, **ಅಸ್ಯ** ಈ ಬಾಣದ, **ಅತುಲಂ** ಅಸದೃಶವಾದ, **ಶಬ್ದಂ** ಧ್ವನಿಯನ್ನು, **ಶ್ರುತ್ವಾ** ಕೇಳಿ, **ಸನ್ನಃ** ಸಂಕಟವನ್ನು ಹೊಂದಿದ, **ಇಂದ್ರಾತ್ಮಜಃ** ಇಂದ್ರನ ಮಗನಾದ ವಾಲಿಯು, **ಹೃದಿ** ಹೃದಯದಲ್ಲಿ, **ತೇನ** ಆ ಬಾಣದಿಂದ, **ವಿದ್ಧಃ** ಹೊಡೆಯಲ್ಪಟ್ಟವನಾಗಿ, **ಆಶು** ಕೂಡಲೇ, **ಗಿರಿರಿವ** ಪರ್ವತದಂತೆ, **ಅಪತತ್** ಬಿದ್ದನು.

**ತಾತ್ಪರ್ಯ** : ಶ್ರೀರಾಮನ ಆದೇಶದಂತೆ ಸುಗ್ರೀವನಿಗೆ ಹನುಮಂತ ಅನುಗ್ರಹ ಮಾಲೆ ಹಾಕಿದ. ಸಾಮಾನ್ಯರಿಗೂ ಈರ್ವರ ನಡುವೆ ಅಂತರ ಕಾಣುವಂತಾಯಿತು. ಮತ್ತೆ ವಾಲಿ-ಸುಗ್ರೀವರ ನಡುವೆ ಘೋರಯುದ್ಧ ನಡೆದಾಗ ಮರೆಯಾಗಿ ನಿಂತಿದ್ದ ರಾಮ ಬಾಣವೊಂದನ್ನು ಪ್ರಯೋಗಿಸಿದ. ಅದರ ಶಬ್ದ-ಅಘಾತಗಳನ್ನು ತಾಳಲಾಗದ ವಾಲಿ ಬೆಟ್ಟದಂತೆ ಧರೆಗುರುಳಿದ. ॥ ೧೮ ॥

**ಭಕ್ತೋ ಮಮೈಷ ಯದಿ ಮಾಮಭಿಪಶ್ಯತೀಹ**
**ಪಾದೌ ಧ್ರುವಂ ಮಮ ಸಮೇಷ್ಯತಿ ನಿರ್ವಿಚಾರಃ ।**
**ಯೋಗ್ಯೋ ವಧೋ ನಹಿ ಜನಸ್ಯ ಪದಾನತಸ್ಯ**
**ರಾಜ್ಯಾರ್ಥಿನಾ ರವಿಸುತೇನ ವಧೋಽರ್ಥಿತಶ್ಚ ॥ ೧೯ ॥**

**ಪದಚ್ಛೇದ : ಭಕ್ತಃ ಮಮ ಏಷಃ ಯದಿ ಮಾಂ ಅಭಿಪಶ್ಯತಿ ಇಹ ಪಾದೌ ಧ್ರುವಂ ಮಮ ಸಮೇಷ್ಯತಿ ನಿರ್ವಿಚಾರಃ । ಯೋಗ್ಯಃ ವಧಃ ನ ಹಿ ಜನಸ್ಯ ಪದಾನತಸ್ಯ ರಾಜ್ಯಾರ್ಥಿನಾ ರವಿಸುತೇನ ವಧಃ ಅರ್ಥಿತಃ ಚ ॥**

**ಅರ್ಥ** :- **ಮಮ** ನನ್ನ, **ಭಕ್ತಃ** ಭಕ್ತನಾದ, **ಏಷಃ** ಈ ವಾಲಿಯು, **ಮಾಂ** ನನ್ನನ್ನು, **ಅಭಿಪಶ್ಯತಿ ಯದಿ** ನೋಡಿದ್ದಾದರೆ, **ಇಹ** ಈ ಶತ್ರುಪಕ್ಷದಲ್ಲಿರುವ ನನ್ನನ್ನು, **ನಿರ್ವಿಚಾರಃ** ವಿಚಾರ ರಹಿತನಾಗಿ, **ಮಮ** ನನ್ನ, **ಪಾದೌ** ಚರಣಗಳನ್ನು, **ಧ್ರುವಂ** ನಿಶ್ಚಯವಾಗಿಯೂ, **ಸಮೇಷ್ಯತಿ** ಹೊಂದುವನು, **ಪದಾನತಸ್ಯ** ಶರಣಾಗತನಾದ, **ಜನಸ್ಯ** ಮನುಷ್ಯನ, **ವಧಃ** ನಾಶವು, **ಶಸ್ತಃ** ಯೋಗ್ಯವು, **ನ** ಅಲ್ಲ, **ಹಿ** ಇದು ಧರ್ಮಶಾಸ್ತ್ರಗಳಲ್ಲಿ ಪ್ರಸಿದ್ಧವು, **ರಾಜ್ಯಾರ್ಥಿನಾ** ರಾಜ್ಯವನ್ನು ಅಪೇಕ್ಷಿಸುವ, **ರವಿಸುತೇನ** ಸೂರ್ಯಪುತ್ರನಾದ ಸುಗ್ರೀವನಿಂದ, **ವಧಃ** ವಾಲಿಯ ಸಂಹಾರವು, **ಅರ್ಥಿತಶ್ಚ** ಪ್ರಾರ್ಥಿಸಲ್ಪಟ್ಟಿದೆ.

**ತಾತ್ಪರ್ಯ** :- ಶ್ರೀರಾಮನು ಹೀಗೆ ಆಲೋಚಿಸಿದಯುದ್ಧಭೂಮಿಯಲ್ಲಿ ವಾಲಿ ನನ್ನನ್ನು ಕಂಡರೆ ಸಹಜಭಕ್ತಿಯಿಂದ ಕಾಲಿಗೆರಗುವನು. ಸುಗ್ರೀವನಿಗೆ ವಾಲಿ ಮಾಡಿದ ಅಪಚಾರ ಮತ್ತು ಸುಗ್ರೀವನ ಮಡದಿಯಾದ ರುಮೆಯನ್ನು ಸ್ವೀಕರಿಸಿದ ಕಾರಣ ವಾಲಿ ನನ್ನಿಂದ ವಧಿಸಲ್ಪಟ್ಟು (ಶಿಕ್ಷೆ ಪಡೆದು) ಅನುಗ್ರಹೀತ ನಾಗಲಿ ಎಂದು ನನ್ನ ಸಂಕಲ್ಪವಿದೆ. ಪ್ರಕೃತ ವಾಲಿಯನ್ನು ನಿಗ್ರಹಿಸಿ ಅನುಗ್ರಹಿಸು ವುದೇ ಉಚಿತವಾಗಿದೆ. ನಿರಪರಾಧಿ ಮತ್ತು ಶೋಷಿತನಾದ ಸುಗ್ರೀವನಿಗೆ ರಾಜ್ಯ ಪ್ರದಾನ ಮಾಡುವ ಹಿನ್ನಲೆಯಲ್ಲಿ ರಾಮ ಮರೆಯಲ್ಲಿ ನಿಂತು ವಾಲಿಯನ್ನು ಸಂಹರಿಸಿದ. ॥೧೯ ॥

ಕಾರ್ಯಂ ಹ್ಯಭೀಷ್ಟಮಪಿ ತತ್ಪ್ರಣತಸ್ಯ ಪೂರ್ವಂ
ಶಸ್ತೋ ವಧೋ ನ ಪದಯೋಃ ಪ್ರಣತಸ್ಯ ಚೈವ ।
ತಸ್ಮಾದದೃಶ್ಯತನುರೇವ ನಿಹನ್ಮಿ ಶಕ್ರ
ಪುತ್ರಂ ತ್ವಿತಿ ಸ್ಮ ತಮದೃಶ್ಯತಯಾ ಜಘಾನ ॥ ೨೦ ॥

ಪದಚ್ಛೇದ : ಕಾರ್ಯಂ ಹಿ ಅಭೀಷ್ಟಮ್ ಅಪಿ ತತ್ ಪ್ರಣತಸ್ಯ ಪೂರ್ವಂ ಶಸ್ತಃ ವಧಃ ನ ಪದಯೋಃ ಪ್ರಣತಸ್ಯ ಚ ಏವ । ತಸ್ಮಾತ್ ಅದೃಶ್ಯತನುಃ ಏವ ನಿಹನ್ಮಿ ಶಕ್ರಪುತ್ರಂ ತು ಇತಿ ಸ್ಮ ತಮ್ ಅದೃಶ್ಯತಯಾ ಜಘಾನ ॥

**ಅರ್ಥ** :- **ತತ್** ಅವರಿಬ್ಬರ ಮಧ್ಯದಲ್ಲಿ **ಪೂರ್ವಂ** ಮೊದಲು, **ಪ್ರಣತಸ್ಯ** ಶರಣಾದವನ, **ಅಭೀಷ್ಟಂ** ಅಪೇಕ್ಷಿತವಾದುದು, **ಕಾರ್ಯಂ** ಮಾಡತಕ್ಕದ್ದು **ಪದಯೋಃ** ಚರಣಗಳಲ್ಲಿ **ಪ್ರಣತಸ್ಯ** ನಮಸ್ಕರಿಸಿದವನ, **ವಧಃ** ಸಂಹಾರವು, **ಶಸ್ತೋ ನೈವ** ಯೋಗ್ಯವೇ ಅಲ್ಲ, **ತಸ್ಮಾತ್** ಆದ್ದರಿಂದ, **ಇಹ** ಈ ಯುದ್ಧದಲ್ಲಿ, **ಅದೃಶ್ಯತನುರೇವ** ಕಾಣಿಸಿಕೊಳ್ಳದೆಯೇ, **ಶಕ್ರಪುತ್ರಂ** ದೇವೇಂದ್ರನ ಮಗನಾದ ವಾಲಿಯನ್ನು **ನಿಹನ್ಮಿ** ಕೊಲ್ಲುತ್ತೇನೆ, **ಇತಿ** ಹೀಗೆ ವಿಚಾರಮಾಡಿ, **ತಂ** ಆ ವಾಲಿಯನ್ನು **ಅದೃಶ್ಯತಯಾ** ಕಾಣದೆ ಇದ್ದವನಾಗಿ, **ಜಘಾನ** ಕೊಂದನು.

**ತಾತ್ಪರ್ಯ** :- ಮೊದಲು ಶರಣಾಗತನಾಗಿ ರಾಜ್ಯವನ್ನು ಬಯಸಿದ ಸುಗ್ರೀವನ ಇಷ್ಟಾರ್ಥವನ್ನು ಪೂರೈಸಬೇಕಿದೆ. ಶರಣಾಗತನಾದರೆ, ಪತಿತನಾದ ಅಪರಾಧಿಯಾದ ವಾಲಿಯ ಸ್ವೀಕಾರ ಪ್ರಕೃತ ಯೋಗ್ಯವಲ್ಲ, ಈ ದೃಷ್ಟಿಯಿಂದ ಶ್ರೀರಾಮ ಮರೆಯಲ್ಲಿ ನಿಂತೇ ವಾಲಿಯನ್ನು ಸಂಹರಿಸುವುದಾಗಿ ನಿಶ್ಚಯಿಸಿದ.

**ವಿವರಣೆ** :- ವಾಲಿಗಿಂತ ಅನಂತಪಟ್ಟು ಬಲವುಳ್ಳ ಶ್ರೀರಾಮ ಯುದ್ಧ ಮಾಡಲು ಹೆದರಿಕೆಯಾಗಿ ಮರೆಯಾಗಿ ನಿಂತನೆಂದು ಶಂಕಿಸುವುದು ಅತ್ಯಂತ ಅನುಚಿತವಾದುದು. ವಾಲಿ ಅಲ್ಲಾಡಿಸಲಾಗದ ವೃಕ್ಷರೂಪದಲ್ಲಿರುವ ಏಳು ದೈತ್ಯರನ್ನು ಒಂದೇ ಬಾಣದಿಂದ ಸಂಹರಿಸಿದ ಶ್ರೀರಾಮನ ಪರಾಕ್ರಮ ಪ್ರಶ್ನಾತೀತವಾದುದು.

ತಮ್ಮನ ರಾಜ್ಯ ಕಸಿದುಕೊಂಡು ಮತ್ತು ಅವನ ಮಡದಿಯನ್ನು ಸ್ವೀಕರಿಸಿದ ವಾಲಿಗೆ ಧರ್ಮಶಾಸ್ತ್ರದಂತೆ ಈಗಲೇ ವಧೆ ಯೋಗ್ಯವಾದ ಶಿಕ್ಷೆ. ಪತಿತನೂ ಅಪರಾಧಿಯೂ ಆದ ವಾಲಿಯ ಸಖ್ಯ ನನಗೆ ಭೂಷಣವಲ್ಲ, ನಿಗ್ರಹಯೋಗ್ಯ

(ವಧಾರ್ಹ)ನಾದ ರಾವಣನಂತೆ ಇರುವ ವಾಲಿಯನ್ನು ಸಂಹರಿಸದೇ ಅವನೊಂದಿಗೆ ಗೆಳೆತನ ಮಾಡಿಕೊಳ್ಳುವುದರಲ್ಲಿ ಯಾವ ವಿವೇಕವೂ ಇಲ್ಲ. ಆದ್ದರಿಂದ ಮರೆಯಲ್ಲಿ ನಿಂತೇ ಇವನನ್ನು ಸಂಹರಿಸುವುದು ಯೋಗ್ಯವೆಂದು ಶ್ರೀರಾಮ ನಿಶ್ಚಯಿಸಿದ. ॥ ೨೦ ॥

**ಯಃ ಪ್ರೇರಕಃ ಸಕಲಲೋಕಬಸಲ್ಯ ನಿತ್ಯಂ**
**ಪೂರ್ಣಾವ್ಯಯೋಚ್ಚಬಲವೀರ್ಯತನುಃ ಸ್ವತಂತ್ರಃ ।**
**ಕಿಂ ತಸ್ಯ ದೃಷ್ಟಿಪಥಗಸ್ಯ ಚ ವಾನರೋಽಯಂ**
**ಕರ್ತೇಶಚಾಪಮಪಿ ಯೇನ ಪುರಾ ವಿಭಗ್ನಮ್ ॥ ೨೧ ॥**

ಪದಚ್ಛೇದ : ಯಃ ಪ್ರೇರಕಃ ಸಕಲಲೋಕಬಸಲ್ಯ ನಿತ್ಯಂ ಪೂರ್ಣಾವ್ಯಯೋಚ್ಚಬಲ ವೀರ್ಯತನುಃ ಸ್ವತಂತ್ರಃ । ಕಿಂ ತಸ್ಯ ದೃಷ್ಟಿಪಥಗಸ್ಯ ಚ ವಾನರಃ ಅಯಂ ಕರ್ತಾ ಈಶಚಾಪಮ್ ಅಪಿ ಯೇನ ಪುರಾ ವಿಭಗ್ನಮ್ ॥

**ಅರ್ಥ** :- **ಯೇನ** ಯಾವ ಶ್ರೀರಾಮನಿಂದ, **ಈಶಚಾಪಮಪಿ** ರುದ್ರನ ಧನುಸ್ಸು ಕೂಡ, **ಪುರಾ** ಸ್ವಯಂವರ ಕಾಲದಲ್ಲಿ, **ವಿಭಗ್ನಂ** ಮುರಿಯಲ್ಪಟ್ಟಿತೋ, **ಯಃ** ಯಾವನು, **ನಿತ್ಯಂ** ಯಾವಾಗಲೂ **ಸಕಲಲೋಕಬಸಲ್ಯ** ಎಲ್ಲಾ ಜನರ ಸಾಮರ್ಥ್ಯಕ್ಕೆ, **ಪ್ರೇರಕಃ** ಪ್ರೇರಿಸತಕ್ಕವನೋ, **ಯಃ** ಯಾವನು, **ಪೂರ್ಣಾವ್ಯಯೋಚ್ಚಬಲವೀರ್ಯತನುಃ** ಪೂರ್ಣ ಹಾಗೂ ನಾಶರಹಿತವಾಗದ ಉತ್ಕೃಷ್ಟಗಳಾದ ಬಲವೀರ್ಯಗಳೇ ಶರೀರವಾಗಿ ಉಳ್ಳವನೋ, **ಸ್ವತಂತ್ರಃ** ಸ್ವತಂತ್ರನೋ, **ತಸ್ಯ** ಅಂತಹ, **ದೃಷ್ಟಿಪಥಗಸ್ಯ** ಕಣ್ಣಿಗೆ ಗೋಚರನಾದ ರಾಮನಿಗೆ, **ಅಯಂ ವಾನರಃ** ಈ ವಾಲಿಯು, **ಕಿಂ ಕರ್ತಾ** ಏನು ಹಾನಿ ಮಾಡಬಲ್ಲನು ?

**ತಾತ್ಪರ್ಯ** :- ಯಾವ ಶ್ರೀರಾಮನು ಸೀತಾಸ್ವಯಂವರ ಕಾಲದಲ್ಲಿ ಅನಾಯಾಸವಾಗಿ ರುದ್ರದೇವರ ಬಿಲ್ಲನ್ನು ತುಂಡರಿಸಿದನೋ, ಯಾರ ಪ್ರೇರಣೆಯಿಂದ ಸಕಲವಿಶ್ವವು ಕಾರ್ಯಪ್ರವೃತ್ತವಾಗಿದೆಯೋ ಅಂತಹ ವಿಜ್ಞಾನಾನಂದ ಶರೀರನಾದ ಶ್ರೀರಾಮನಿಗೆ ಈ ವಾಲಿ ಏನು ತಾನೆ ಹಾನಿ ಮಾಡಬಲ್ಲನು? ॥ ೨೧॥

**ಸನ್ನೇಽಥ ವಾಲಿನಿ ಜಗಾಮ ಚ ತಸ್ಯ ಪಾರ್ಶ್ವಂ**
**ಪ್ರಾಹೈನಮಾರ್ದ್ರವಚಸಾ ಯದಿ ವಾಂಛಸಿ ತ್ವಮ್ ।**

ಉಜ್ಜೀವಯಿಷ್ಯ ಇತಿ ನೈಚ್ಛದಸೌ ತ್ವದಗ್ರೇ
ಕೋ ನಾಮ ನೇಚ್ಛತಿ ಮೃತಿಂ ಪುರುಷೋತ್ತಮೇತಿ ॥ ೨೨ ॥

ಪದಚ್ಛೇದ : ಸನ್ನೇ ಅಥ ವಾಲಿನಿ ಜಗಾಮ ಚ ತಸ್ಯ ಪಾರ್ಶ್ವಂ ಪ್ರಾಹ ಏನಮ್ ಆರ್ದ್ರ-ವಚಸಾ ಯದಿ ವಾಂಛಸಿ ತ್ವಮ್ । ಉಜ್ಜೀವಯಿಷ್ಯೇ ಇತಿ ನ ಐಚ್ಛತ್ ಅಸೌ ತ್ವದಗ್ರೇ ಕಃ ನಾಮ ನ ಇಚ್ಛತಿ ಮೃತಿಂ ಪುರುಷೋತ್ತಮ ಇತಿ ॥

**ಅರ್ಥ** :- **ರಾಮಃ** ಶ್ರೀರಾಮನು, **ವಾಲಿನಿ** ವಾಲಿಯು, **ಸನ್ನೇ** ಮರಣಸಂಕಟವನ್ನು ಅನುಭವಿಸುವಾಗ, **ತಸ್ಯ** ಆ ವಾಲಿಯ, **ಪಾರ್ಶ್ವಂ** ಸಮೀಪವನ್ನು, **ಜಗಾಮ** ಹೋದನು, **ಆರ್ದ್ರವಚಸಾ** ಸಹಜ ಪ್ರೀತಿಯಿಂದ, **ಏನಂ** ಈ ವಾಲಿಯನ್ನು, **ತ್ವಂ** ನೀನು, **ಯದಿ ವಾಂಛಸಿ** ಬದುಕಲು ಇಚ್ಛಿಸುವುದಾದರೆ, **ಉಜ್ಜೀವಯಿಷ್ಯೇ** ಬದುಕಿಸುವೆನು, **ಇತಿ** ಎಂಬುದಾಗಿ, **ಪ್ರಾಹ** ಹೇಳಿದನು, **ಅಸೌ** ಈ ವಾಲಿಯು, **ಹೇ ಪುರುಷೋತ್ತಮ** ಪುರುಷಶ್ರೇಷ್ಠನಾದ ರಾಮನೇ, **ತ್ವದಗ್ರೇ** ನಿನ್ನ ಸಮಕ್ಷಮದಲ್ಲಿ, **ಕಃ** ಯಾವ ಜ್ಞಾನಿಯಾದವನು, **ಮೃತಿಂ** ಮರಣವನ್ನು, **ನೇಚ್ಛತಿ** ಇಚ್ಛಿಸುವುದಿಲ್ಲ?, **ಇತಿ** ಹೀಗೆ, ತಿಳಿಸಿ, **ನೈಚ್ಛತ್** ಬದುಕುವುದನ್ನು ಸ್ವಾಗತಿಸಲಿಲ್ಲ.

**ತಾತ್ಪರ್ಯ** :- ವಾಲಿಯು ರಾಮಬಾಣದ ವೇದನೆಯಿಂದ ನರಳುತ್ತಿರುವಾಗ ಶ್ರೀರಾಮನು ಅವನ ಬಳಿ ಬಂದನು. ಶ್ರೀರಾಮ ಅವನ ತಪ್ಪನ್ನು ಅವನಿಗೆ ಮನವರಿಕೆ ಮಾಡಿಕೊಟ್ಟ. ಕೇವಲ ಕರುಣೆಯಿಂದ ನುಡಿದ 'ಬದುಕಬಯಸುವಿಯಾದರೆ ನಿನ್ನನ್ನು ಬದುಕಿಸುವೆನು' ಎಂದ. ವಾಲಿ ಮಾರ್ನುಡಿದ 'ಎಲ್ಲ ಮಹಾತ್ಮರು ನಿನ್ನ ಮಂಗಲಸ್ಮೃತಿಯಲ್ಲಿ ಮರಣವನ್ನು ಸ್ವಾಗತಿಸುವರು. ನೀನು ಸಾಕ್ಷಾತ್ತಾಗಿ ಎದಿರು ನಿಂದಿರುವಾಗ ಮರಣ ದೊರಕುವುದು ಮಹಾಭಾಗ್ಯ. ನಾನು ಬದುಕನ್ನು ಬಯಸಲಾರೆ.' ॥ ೨೨॥

ಕಾರ್ಯಾಣಿ ತಸ್ಯ ಚರಮಾಣಿ ವಿಧಾಯ ಪುತ್ರಂ
ತ್ವಗ್ರೇ ನಿಧಾಯ ರವಿಜಃ ಕಪಿರಾಜ್ಯ ಆಸೀತ್ ।
ರಾಮೋಽಪಿ ತದ್ಗಿರಿವರೇ ಚತುರೋಽಥ ಮಾಸಾನ್
ದೃಷ್ಟ್ವಾ ಘನಾಗಮಮುವಾಸ ಸಲಕ್ಷ್ಮಣೋಽಸೌ ॥ ೨೩ ॥

ಪದಚ್ಛೇದ : ಕಾರ್ಯಾಣಿ ತಸ್ಯ ಚರಮಾಣಿ ವಿಧಾಯ ಪುತ್ರಂ ತು ಅಗ್ರೇ ನಿಧಾಯ ರವಿಜಃ ಕಪಿರಾಜ್ಯೇ ಆಸೀತ್ । ರಾಮಃ ಅಪಿ ತದ್ಗಿರಿವರೇ ಚತುರಃ ಅಥ ಮಾಸಾನ್ ದೃಷ್ಟ್ವಾ ಘನಾಗಮಮ್ ಉವಾಸ ಸಲಕ್ಷ್ಮಣಃ ಅಸೌ ॥

**ಅರ್ಥ** :- **ತಸ್ಯ** ಮೃತನಾದ ವಾಲಿಯ, **ಪುತ್ರಂ** ಮಗನಾದ ಅಂಗದನನ್ನು **ಅಗ್ರೇ** ನಿಧಾಯ ಮುಂದಿಟ್ಟುಕೊಂಡು, **ಚರಮಾಣಿ ಕಾರ್ಯಾಣಿ** ವಾಲಿಯ ಅಂತ್ಯಕ್ರಿಯೆಗಳನ್ನು **ವಿಧಾಯ** ಮಾಡಿ, **ರವಿಜಃ** ಸೂರ್ಯಪುತ್ರನಾದ ಸುಗ್ರೀವನು, **ಕಪಿರಾಜ್ಯೇ ಆಸೀತ್** ಕಪಿರಾಜ್ಯದಲ್ಲಿ ಪಟ್ಟಾಭಿಷಿಕ್ತನಾದನು, **ಅಥ** ಅನಂತರದಲ್ಲಿ **ಅಸೌ** ಈ, **ರಾಮೋಽಪಿ** ಶ್ರೀರಾಮನಾದರೂ, **ಘನಾಗಮಂ ದೃಷ್ಟ್ವಾ** ವರ್ಷಾಕಾಲ ಪ್ರಾಪ್ತವಾದದ್ದನ್ನು ಕಂಡು, **ಸಲಕ್ಷ್ಮಣಃ** ಲಕ್ಷ್ಮಣನಿಂದ ಸಹಿತನಾಗಿ, **ತದ್ಗಿರಿವರೇ** ಶ್ರೇಷ್ಠವಾದ ಮಾಲ್ಯವಂತ ಪರ್ವತದಲ್ಲಿ **ಚತುರಃ ಮಾಸಾನ್** ಚಾತುರ್ಮಾಸ್ಯ ವ್ರತಕ್ಕಾಗಿ, **ಉವಾಸ** ವಾಸಿಸಿದನು.

**ತಾತ್ಪರ್ಯ** :- ವಾಲಿಪುತ್ರನಾದ ಅಂಗದನ ಮೂಲಕ ವಾಲಿಯ ಅಂತ್ಯ ಕ್ರಿಯೆ ನಡೆಸಲಾಯಿತು. ನಂತರ ಸುಗ್ರೀವನನ್ನು ಕಪಿರಾಜ್ಯದಲ್ಲಿ ಪಟ್ಟಾಭಿಷಿಕ್ತ ನನ್ನಾಗಿ ಮಾಡಿದರು. ಚಾತುರ್ಮಾಸ್ಯಕಾಲದಲ್ಲಿ ಶ್ರೀರಾಮ ಮಾಲ್ಯವಂತ ಎಂಬ ಪರ್ವತದಲ್ಲಿ ಲಕ್ಷ್ಮಣನೊಡನೆ ವಾಸಿಸಿದನು. ॥ ೨೩॥

**ಅಥಾತಿಸಕ್ತೇ ಕ್ಷಿತಿಪೇ ಕಪೀನಾಂ**
**ಪ್ರವಿಸ್ಮೃತೇ ರಾಮಕೃತೋಪಕಾರೇ ।**
**ಪ್ರಸಹ್ಯ ತಂ ಬುದ್ಧಿಮತಾಂ ವರಿಷ್ಠೋ**
**ರಾಮಾಂಘ್ರಿಭಕ್ತೋ ಹನುಮಾನುವಾಚ ॥ ೨೪ ॥**

ಪದಚ್ಛೇದ : ಅಥ ಅತಿಸಕ್ತೇ ಕ್ಷಿತಿಪೇ ಕಪೀನಾಂ ಪ್ರವಿಸ್ಮೃತೇ ರಾಮಕೃತೋಪಕಾರೇ । ಪ್ರಸಹ್ಯ ಬುದ್ಧಿಮತಾಂ ವರಿಷ್ಠಃ ರಾಮಾಂಘ್ರಿಭಕ್ತಃ ಹನುಮಾನ್ ಉವಾಚ ॥

**ಅರ್ಥ** :- **ಅಥ** ಚಾತುರ್ಮಾಸ್ಯವು ಮುಗಿದ ನಂತರ, **ಕಪೀನಾಂ ಕ್ಷಿತಿಪೇ** ಕಪಿರಾಜನಾದ ಸುಗ್ರೀವನು, **ಅತಿಸಕ್ತೇ** ಅತ್ಯಂತವಾಗಿ ಭೋಗದಲ್ಲಿ ಆಸಕ್ತನಾಗಿ, **ರಾಮಕೃತೋಪಕಾರೇ** ಶ್ರೀರಾಮನು ಮಾಡಿದ ಉಪಕಾರವನ್ನು **ಪ್ರವಿಸ್ಮೃತೇ ಸತಿ** ಮರೆತಾಗ, **ತಂ** ಆ ಸುಗ್ರೀವನನ್ನು ಕುರಿತು, **ರಾಮಾಂಘ್ರಿಭಕ್ತಃ** ಶ್ರೀರಾಮಪಾದಸೇವಕನಾದ, **ಬುದ್ಧಿಮತಾಂ ವರಿಷ್ಠಃ** ಬುದ್ಧಿಶಾಲಿಗಳಲ್ಲಿ ಅಗ್ರಣಿಯಾದ, **ಹನುಮಾನ್** ಹನುಮಂತನು, **ಪ್ರಸಹ್ಯ** ಬಲಾತ್ಕಾರದಿಂದ, **ಉವಾಚ** ಉಪದೇಶಿಸಿದನು.

ತಾತ್ಪರ್ಯ :- ಬಹುಕಾಲದ ನಂತರ ರಾಜ್ಯ-ಭೋಗಗಳಲ್ಲಿ ಮುಳುಗಿದ ಸುಗ್ರೀವ ಶ್ರೀರಾಮದೇವ ಮಾಡಿದ ಉಪಕಾರವನ್ನು ಮರತೇ ಬಿಟ್ಟ. ಆಗ ಬುದ್ಧಿವಂತರಲ್ಲಿ ಅಗ್ರಗಣ್ಯನಾದ ಶ್ರೀರಾಮನಪದಪಂಕಜಗಳ ಆರಾಧಕನಾದ ಹನುಮಂತನು ಸುಗ್ರೀವನಿಗೆ ಉಪದೇಶಿಸಿದನು ॥ ೨೪ ॥

**ನ ವಿಸ್ಮೃತಿಸ್ತೇ ರಘುವರ್ಯಕಾರ್ಯೇ**
**ಕಾರ್ಯಾ ಕಥಂಚಿತ್ ಸ ಹಿ ನೋಽಭಿಪೂಜ್ಯಃ ।**
**ನ ಚೇತ್ ಸ್ವಯಂ ಕರ್ತುಮಭೀಷ್ಟಮದ್ಯ ತೇ**
**ಧ್ರುವಂ ಬಲೇನಾಪಿ ಹಿ ಕಾರಯಾಮಿ ॥ ೨೫ ॥**

ಪದಚ್ಛೇದ : ನ ವಿಸ್ಮೃತಿಃ ತೇ ರಘುವರ್ಯಕಾರ್ಯೇ ಕಾರ್ಯಾ ಕಥಂಚಿತ್ ಸಃ ಹಿ ನಃ ಅಭಿಪೂಜ್ಯಃ । ನ ಚೇತ್ ಸ್ವಯಂ ಕರ್ತುಂ ಅಭೀಷ್ಟಮ್ ಅದ್ಯ ತೇ ಧ್ರುವಂ ಬಲೇನ ಅಪಿ ಹಿ ಕಾರಯಾಮಿ ॥

ಅರ್ಥ :- **ರಘುವರ್ಯಕಾರ್ಯೇ** ರಘುಕುಲಪ್ರವರನಾದ ಶ್ರೀರಾಮನ ಸೀತಾನ್ವೇಷಣ ರೂಪ ಕಾರ್ಯದಲ್ಲಿ, **ಕಥಂಚನ** ಯಾವ ರೀತಿಯಿಂದಲೂ, **ವಿಸ್ಮೃತಿಃ** ಮರೆಯುವಿಕೆಯು, **ತೇ** ನಿನ್ನಿಂದ, **ನ ಕಾರ್ಯಾ** ಮಾಡಲ್ಪಡಬಾರದು, **ಸಃ** ಆ ಶ್ರೀರಾಮನು, **ನಃ** ನಮಗೆಲ್ಲ, **ಅಭಿಪೂಜ್ಯಃ ಹಿ** ಪೂಜ್ಯನಾಗಿರುವನಷ್ಟೆ **ಅದ್ಯ** ಇಂದು, **ಸ್ವಯಂ** ನೀನಾಗಿಯೇ, **ಅಭೀಷ್ಟಂ ಕರ್ತುಂ** ಶ್ರೀರಾಮಕಾರ್ಯವನ್ನು ಮಾಡಲು, **ನ ಚೇತ್** ಪ್ರವೃತ್ತನಾಗದೇ ಹೊದರೆ, **ತೇ** ನಿನ್ನಿಂದ, **ಬಲೇನಾಪಿ** ಬಲಪ್ರಯೋಗದಿಂದಲಾದರೂ, **ಕಾರಯಾಮಿ** ಮಾಡಿಸುತ್ತೇನೆ, **ಧ್ರುವಂ ಹಿ** ಇದು ನಿಶ್ಚಿತವಷ್ಟೆ

ತಾತ್ಪರ್ಯ : ಶ್ರೀರಾಮನ ಕೈಂಕರ್ಯ ನೆರವೇರಿಸುವಲ್ಲಿ ನಿನಗೆ ಮರೆವು ಉಚಿತವಲ್ಲ, ಅವನು ಸದಾ ನಮ್ಮಿಂದ ಆರಾಧ್ಯನು. ವಿಷಯ ಭೋಗಗಳಲ್ಲಿ ಆಸಕ್ತನಾದ ನೀನು ಈ ಬಗ್ಗೆ ನಿರುತ್ಸಾಹ ತಾಳಿದರೆ, ನಾನು ಬಲಾತ್ಕಾರದಿಂದ ನಿನ್ನಿಂದ ಈ ಕಾರ್ಯ ಮಾಡಿಸುತ್ತೇನೆ. ॥ ೨೫ ॥

**ಸ ಏವಮುಕ್ತ್ವಾ ಹರಿರಾಜಸನ್ನಿಧೌ**
**ದ್ವೀಪೇಷು ಸಪ್ತಸ್ವಪಿ ವಾನರಾನ್ ಪ್ರತಿ ।**
**ಸಂಮೇಲನಾಯಾಶುಗತೀನ್ ಸ್ಮ ವಾನರಾನ್**
**ಪ್ರಸ್ಥಾಪಯಾಮಾಸ ಸಮಸ್ತಶಃ ಪ್ರಭುಃ ॥ ೨೬ ॥**

ಪದಚ್ಛೇದ : ಸಃ ಏವಮ್ ಉಕ್ತ್ವಾ ಹರಿರಾಜಸನ್ನಿಧೌ ದ್ವೀಪೇಷು ಸಪ್ತಸು ಅಪಿ ವಾನರಾನ್ ಪ್ರತಿ । ಸಂಮೇಲನಾಯ ಆಶುಗತೀನ್ ಸ್ಮ ವಾನರಾನ್ ಪ್ರಸ್ಥಾಪಯಾಮಾಸ ಸಮಸ್ತಶಃ ಪ್ರಭುಃ ॥

**ಅರ್ಥ** :- **ಪ್ರಭುಃ** ಸಮರ್ಥನಾದ, **ಸಃ** ಆ ಹನುಮಂತದೇವನು, **ಹರಿರಾಜಸನ್ನಿಧೌ** ಕಪಿರಾಜನಾದ ಸುಗ್ರೀವನ ಮುಂದೆ, **ಏವಂ** ಹೀಗೆ, **ಉಕ್ತ್ವಾ** ಹೇಳಿ, **ಸಪ್ತಸು** ಏಳು, **ದ್ವೀಪೇಷು** ದ್ವೀಪಗಳಲ್ಲಿ (ಇರುವ), **ವಾನರಾನ್ ಪ್ರತಿ** ಕಪಿಗಳನ್ನು ಕುರಿತು, **ಸಮ್ಮೇಲನಾಯ** ಎಲ್ಲರೂ ಒಂದೆಡೆ ಸೇರಲು, **ಆಶುಗತೀನ್** ವೇಗದಿಂದ ಹೋಗುವ ಶಕ್ತಿಯುಳ್ಳ, **ವಾನರಾನ್** ಕಪಿಗಳನ್ನು, **ಸಮಸ್ತಶಃ** ಎಲ್ಲ ಕಡೆಗೂ, **ಪ್ರಸ್ಥಾಪಯಾಮಾಸ ಸ್ಮ** ಕಳುಹಿಸಿದನು.

**ತಾತ್ಪರ್ಯ** :- ಹೀಗೆ ನುಡಿದ ಹನುಮಂತ ಏಳು ದ್ವೀಪಗಳಲ್ಲಿ ಯಥೇಚ್ಛವಾಗಿ ವಾಸಿಸುತ್ತಿದ್ದ ಕಪಿಗಳನ್ನು ಒಂದೆಡೆ ಸೇರಿಸಲು ಕೆಲವು ವೇಗ ಶಾಲಿಗಳಾದ ಕಪಿಗಳನ್ನು ಕಳುಹಿಸಿದ ॥ ೨೬ ॥

**ಹರೀಶ್ವರಾಜ್ಞಾಪ್ರಣಿಧಾನಪೂರ್ವಕಂ**
**ಹನೂಮತಾ ತೇ ಪ್ರಹಿತಾ ಹಿ ವಾನರಾಃ ।**
**ಸಮಸ್ತಶೈಲದ್ರುಮಷಂಡಸಂಸ್ಥಿತಾನ್**
**ಹರೀನ್ ಸಮಾದಾಯ ತದಾಽಭಿಜಗ್ಮುಃ ॥ ೨೭ ॥**

ಪದಚ್ಛೇದ : ಹರೀಶ್ವರಾಜ್ಞಾಪ್ರಣಿಧಾನಪೂರ್ವಕಂ ಹನೂಮತಾ ತೇ ಪ್ರಹಿತಾ ಹಿ ವಾನರಾಃ । ಸಮಸ್ತಶೈಲದ್ರುಮಷಂಡಸಂಸ್ಥಿತಾನ್ ಹರೀನ್ ಸಮಾದಾಯ ತದಾ ಅಭಿಜಗ್ಮುಃ ॥

**ಅರ್ಥ** :- **ತದಾ** ಆಗ, **ಹನೂಮತಾ** ಹನುಮಂತನಿಂದ, **ಪ್ರಹಿತಾಃ** ಕಳುಹಿಸಲ್ಪಟ್ಟ **ತೇ ವಾನರಾಃ** ಆ ಎಲ್ಲ ಕಪಿಗಳು, **ಹರೀಶ್ವರಾಜ್ಞಾಪ್ರಣಿಧಾನಪೂರ್ವಕಂ** ಕಪಿರಾಜನಾದ ಸುಗ್ರೀವನ ಆಜ್ಞೆಯನ್ನು ಮುಂದಿಟ್ಟುಕೊಂಡು, **ಸಮಸ್ತಶೈಲದ್ರುಮಷಂಡಸಂಸ್ಥಿತಾನ್** ಎಲ್ಲ ಬೆಟ್ಟ ಹಾಗೂ ವೃಕ್ಷಗಳ ಸಮೂಹಗಳಲ್ಲಿ ವಾಸಿಸುತ್ತಿದ್ದ **ಹರೀನ್** ಕಪಿಗಳನ್ನು, **ಸಮಾದಾಯ** ಕರೆದುಕೊಂಡು, **ಅಭಿಜಗ್ಮುಃ** ಕಿಷ್ಕಿಂಧೆಗೆ ಆಗಮಿಸಿದರು.

**ತಾತ್ಪರ್ಯ** : ಹನುಮಂತನಿಂದ ಪ್ರೇರಿತರಾದ ಸುಗ್ರೀವನ ಆದೇಶವನ್ನು ಹೊತ್ತ ವಿನತಾದಿ ಕಪಿಪ್ರವೀರರು ಎಲ್ಲ ಬೆಟ್ಟ ಕಾಡು -ದ್ವೀಪಗಳಲ್ಲಿ ವಾಸಿಸುತ್ತಿದ್ದ ಕಪಿಗಳನ್ನೆಲ್ಲ ಕರೆದುಕೊಂಡು ಬಂದರು. ॥ ೨೭ ॥

**ತದೈವ ರಾಮೋऽಪಿ ಹಿ ಭೋಗಸಕ್ತಂ**
**ಪ್ರಮತ್ತಮಾಲಕ್ಷ್ಯ ಕಪೀಶ್ವರಂ ಪ್ರಭುಃ ।**
**ಜಗಾದ ಸೌಮಿತ್ರಿಮಿದಂ ವಚೋ ಮೇ**
**ಪ್ಲವಂಗಮೇಶಾಯ ವದಾಶು ಯಾಹಿ ॥ ೨೮ ॥**

ಪದಚ್ಛೇದ : ತದಾ ಏವ ರಾಮಃ ಅಪಿ ಹಿ ಭೋಗಸಕ್ತಂ ಪ್ರಮತ್ತಮ್ ಆಲಕ್ಷ್ಯ ಕಪೀಶ್ವರಂ ಪ್ರಭುಃ । ಜಗಾದ ಸೌಮಿತ್ರಿಮ್ ಇದಂ ವಚಃ ಮೇ ಪ್ಲವಂಗಮೇಶಾಯ ವದ ಆಶು ಯಾಹಿ ॥

**ಅರ್ಥ** :- **ತದೈವ** ದ್ವೀಪಗಳಲ್ಲಿದ್ದ ಕಪಿಗಳು ಬರುವ ಸಮಯದಲ್ಲಿಯೇ, **ಪ್ರಭುಃ** ಸಮರ್ಥನಾದ, **ರಾಮೋऽಪಿ** ರಾಮನೂ ಕೂಡ, **ಭೋಗಸಕ್ತಂ** ವಿಷಯ ಭೋಗಗಳಲ್ಲಿ ಆಸಕ್ತನಾದ, **ಪ್ರಮತ್ತಂ** ಸ್ವಾಮಿಕಾರ್ಯವನ್ನು ಮರೆತ, **ಕಪೀಶ್ವರಂ** ಕಪಿಶ್ರೇಷ್ಠನಾದ ಸುಗ್ರೀವನನ್ನು **ಆಲಕ್ಷ್ಯ** ನೋಡಿ, **ಮೇ** ನನ್ನ **ಇದಂ** ಈ ಮುಂದೆ ಹೇಳುವ, **ವಚಃ** ಮಾತನ್ನು **ಪ್ಲವಂಗಮೇಶಾಯ** ವಾನರರಾಜ ನಾದ ಸುಗ್ರೀವನಿಗೆ, **ವದ** ಹೇಳು, **ಆಶು** ಬೇಗನೇ, **ಯಾಹಿ** ಹೋಗು, **ಇತಿ** ಎಂಬುದಾಗಿ, **ಸೌಮಿತ್ರಿಂ** ಲಕ್ಷ್ಮಣನನ್ನು ಕುರಿತು, **ಜಗಾದ** ಹೇಳಿದನು.

**ತಾತ್ಪರ್ಯ** :- ಇದೇ ಸಮಯದಲ್ಲಿ ಶ್ರೀರಾಮಚಂದ್ರನೂ ಕೂಡ ನಾಲ್ಕು ತಿಂಗಳು ಕಳೆದ ಮೇಲೂ ಭೋಗಾಸಕ್ತನಾಗಿ ತನ್ನ ಕರ್ತವ್ಯವನ್ನು ಮರೆತ ಸುಗ್ರೀವನನ್ನು ಎಚ್ಚರಿಸಲು ಲಕ್ಷ್ಮಣನನ್ನು ಕುರಿತು,-'ಲಕ್ಷ್ಮಣ! ನೀನು ಕೂಡಲೇ ಸುಗ್ರೀವನಿದ್ದೆಡೆ ತೆರಳು. ನನ್ನ ಆದೇಶವನ್ನು ತಿಳಿಸು' ಎಂದನು. ॥ ೨೮॥

**ಯದಿ ಪ್ರಮತ್ತೋऽಸಿ ಮದೀಯಕಾರ್ಯೇ**
**ನಯಾಮ್ಯಹಂ ತ್ವೇಂದ್ರಸುತಸ್ಯ ಮಾರ್ಗಮ್ ।**
**ಪ್ರಾಯಃ ಸ್ವಕಾರ್ಯೇ ಪ್ರತಿಪಾದಿತೇ ಹಿ**
**ಮದೋದ್ಧತಾ ನ ಪ್ರತಿಕರ್ತುಮೀಶತೇ ॥ ೨೯ ॥**

ಪದಚ್ಛೇದ : ಯದಿ ಪ್ರಮತ್ತಃ ಅಸಿ ಮದೀಯಕಾರ್ಯೇ ನಯಾಮಿ ಅಹಂ ತ್ವಾ ಇಂದ್ರಸುತಸ್ಯ ಮಾರ್ಗಮ್ । ಪ್ರಾಯಃ ಸ್ವಕಾರ್ಯೇ ಪ್ರತಿಪಾದಿತೇ ಹಿ ಮದೋದ್ಧತಾಃ ನ ಪ್ರತಿಕರ್ತುಮ್ ಈಶತೇ ॥

**ಅರ್ಥ** :- **ಮದೀಯ ಕಾರ್ಯೇ** ನನ್ನ ಕೆಲಸದಲ್ಲಿ, **ಪ್ರಮತ್ತಃ ಅಸಿ ಯದಿ** ಅನಾದರ ತೋರಿದರೆ, **ಅಹಂ** ನಾನು, **ತ್ವಾ** ನಿನ್ನನ್ನು, **ಇಂದ್ರಸುತಸ್ಯ** ವಾಲಿಯ, **ಮಾರ್ಗಂ** ದಾರಿಯನ್ನು, **ನಯಾಮಿ** ಕಳಿಸುತ್ತೇನೆ, **ಪ್ರಾಯಃ** ಹೆಚ್ಚಾಗಿ, **ಸ್ವಕಾರ್ಯೇ** ತಮ್ಮ ಪ್ರಯೋಜನವು, **ಪ್ರತಿಪಾದಿತೇ** ಸಂಪಾದಿಸಲ್ಪಡುತ್ತಿರಲು, **ಮದೋದ್ಧತಾಃ** ಅಹಂಕಾರದಿಂದ ಪ್ರಮತ್ತರಾದವರು, **ಪ್ರತಿಕರ್ತುಂ** ಪ್ರತ್ಯುಪಕಾರಮಾಡಲು, **ನೇಶತೇ** ಬಯಸುವುದಿಲ್ಲ.

**ತಾತ್ಪರ್ಯ** :- 'ಸಾಮಾನ್ಯವಾಗಿ ಜನರು ತಮ್ಮ ಸ್ವಾರ್ಥಸಾಧನೆಯಾದ ಕೂಡಲೇ ಉಪಕಾರ ಮಾಡಿದವರನ್ನು ಮರೆತುಬಿಡುತ್ತಾರೆ. ಪ್ರತ್ಯುಪಕಾರ ಮಾಡಬೇಕೆಂಬ ಪ್ರಜ್ಞೆ ಇರುವುದಿಲ್ಲ. ಓ ಸುಗ್ರೀವ! ನೀನು ಆಡಿದ ವಚನದಂತೆ ನಡೆದುಕೊಳ್ಳದೆ ಹೋದಲ್ಲಿ ನಿನ್ನನ್ನು ವಾಲಿಯ ಮಾರ್ಗದಲ್ಲೇ ಕಳುಹಿಸುತ್ತೇನೆ.' ॥ ೨೯ ॥

ಇತೀಡ್ಯರಾಮೇಣ ಸಮೀರಿತೇ ತದಾ
ಯಯೌ ಸಬಾಣಃ ಸಧನುಃ ಸ ಲಕ್ಷ್ಮಣಃ ।
ದೃಷ್ಟ್ವೈವ ತಂ ತೇನ ಸಹೈವ ತಾಪನಿ-
ರ್ಭಯಾದ್ಯಯೌ ರಾಮಪದಾಂತಿಕಂ ತ್ವರನ್ ॥ ೩೦ ॥

ಪದಚ್ಛೇದ : ಇತಿ ಈಡ್ಯರಾಮೇಣ ಸಮೀರಿತೇ ತದಾ ಯಯೌ ಸಬಾಣಃ ಸಧನುಃ ಸಃ ಲಕ್ಷ್ಮಣಃ । ದೃಷ್ಟ್ವಾ ಏವ ತಂ ತೇನ ಸಹ ಏವ ತಾಪನಿಃ ಭಯಾತ್ ಯಯೌ ರಾಮಪದಾಂತಿಕಂ ತ್ವರನ್ ॥

**ಅರ್ಥ** :- **ಇತಿ** ಈ ರೀತಿಯಾಗಿ, **ಈಡ್ಯರಾಮೇಣ** ಸ್ತುತ್ಯನಾದ ರಾಮನಿಂದ, **ಸಮೀರಿತೇ** ಹೇಳಿಸಿಕೊಳ್ಳಲ್ಪಡುತ್ತಿರಲು, **ಸಧನುಃ** ಧನಸ್ಸಿನಿಂದ ಕೂಡಿದ, **ಸಬಾಣಃ** ಬಾಣಗಳಿಂದ ಸಹಿತನಾದ, **ಸಃ ಲಕ್ಷ್ಮಣಃ** ಆ ಲಕ್ಷ್ಮಣನು, **ತದಾ** ಆಗಲೇ, **ಯಯೌ** ಸುಗ್ರೀವನಿದ್ದಲ್ಲಿಗೆ ಹೋದನು, **ತಾಪನಿಃ** ಸೂರ್ಯನ ಮಗನಾದ ಸುಗ್ರೀವನು, **ತಂ** ಆ ಲಕ್ಷ್ಮಣನನ್ನು, **ದೃಷ್ಟ್ವೈವ** ನೋಡಿಯೇ, **ಭಯಾತ್** ಹೆದರಿಕೆಯಿಂದ, **ತೇನ** ಆ ಲಕ್ಷ್ಮಣನಿಂದ, **ಸಹೈವ** ಕೂಡಿಕೊಂಡೇ, **ತ್ವರನ್**

ವೇಗದಿಂದ ಕೂಡಿದವನಾಗಿ, **ರಾಮಪದಾಂತಿಕಂ** ರಾಮನ ಚರಣ ಸಮೀಪ ವನ್ನು ಕುರಿತು, **ಯಯೌ** ಆಗಮಿಸಿದನು.

**ತಾತ್ಪರ್ಯ** : ಹೀಗೆ ಶ್ರೀರಾಮನ ಸಂದೇಶವನ್ನು ಹೊತ್ತ ಲಕ್ಷ್ಮಣ ಬಿಲ್ಲು-ಬಾಣಗಳನ್ನು ಧರಿಸಿಕೊಂಡು ಸುಗ್ರೀವನಿದ್ದಲ್ಲಿಗೆ ಪಯಣಿಸಿದ. ಅವನನ್ನು ನೋಡಿದ ಕೂಡಲೇ ಭಯವಿಹ್ವಲನಾದ ತನ್ನ ತಪ್ಪನ್ನು ಗುರುತಿಸಿಕೊಂಡ ಸುಗ್ರೀವ ಲಕ್ಷ್ಮಣನೊಡನೆ ಶ್ರೀರಾಮನ ಪಾದಕಮಲಗಳ ಬಳಿ ಧಾವಿಸಿದ ॥ ೩೦॥

**ಹನೂಮತಃ ಸಾಧುವಚೋಭಿರಾಶು**
**ಪ್ರಸನ್ನಚೇತಸ್ಯಧಿಪೇ ಕಪೀನಾಮ್ ।**
**ಸಮಾಗತೇ ಸರ್ವಹರಿಪ್ರವೀರೈಃ**
**ಸಹೈವ ತಂ ವೀಕ್ಷ್ಯ ನನಂದ ರಾಘವಃ ॥ ೩೧ ॥**

ಪದಚ್ಛೇದ : ಹನೂಮತಃ ಸಾಧುವಚೋಭಿಃ ಆಶು ಪ್ರಸನ್ನಚೇತಸಿ ಅಧಿಪೇ ಕಪೀನಾಮ್ । ಸಮಾಗತೇ ಸರ್ವಹರಿಪ್ರವೀರೈಃ ಸಹ ಏವ ತಂ ವೀಕ್ಷ್ಯ ನನಂದ ರಾಘವಃ ॥

**ಅರ್ಥ** :- **ಹನೂಮತಃ** ಹನುಮಂತನ, **ಸಾಧುವಚೋಭಿಃ** ಉದ್ಬೋಧಕ ವಾದ ಒಳ್ಳೇ ಮಾತುಗಳಿಂದ, **ಆಶು** ಕೂಡಲೇ, **ಕಪೀನಾಂ** ಕಪಿಗಳಿಗೆ, **ಅಧಿಪೇ** ಒಡೆಯನಾದ ಸುಗ್ರೀವನು, **ಪ್ರಸನ್ನಚೇತಸಿ** ರಾಮನಲ್ಲಿ ಭಕ್ತಿಯಿಂದ ಕೂಡಿದ ಅಂತಃಕರಣವುಳ್ಳವನಾಗುತ್ತಿರಲು, **ಸರ್ವಹರಿಪ್ರವೀರೈಃ** ಎಲ್ಲಾ ಕಪಿಶ್ರೇಷ್ಠರಿಂದ, **ಸಹೈವ** ಕೂಡಿಕೊಂಡೇ, **ಸಮಾಗತೇ** ಬರುತ್ತಿರಲು, **ರಾಘವಃ** ಶ್ರೀರಾಮನು, **ತಂ** ಆ ಸುಗ್ರೀವನನ್ನು, **ವೀಕ್ಷ್ಯ** ನೋಡಿ, **ನನಂದ** ಸಂತೋಷಪಟ್ಟನು.

**ತಾತ್ಪರ್ಯ** : ಹನುಮಂತನ ಹಿತೋಕ್ತಿಗಳಿಂದ ಎಚ್ಚತ್ತು ಕಾರ್ಯತತ್ಪರ ನಾದ ಸುಗ್ರೀವ ಎಲ್ಲ ಕಪಿಸೈನ್ಯವನ್ನು ತನ್ನೊಡನೆ ಕರೆದುಕೊಂಡೇ ಶ್ರೀರಾಮನ ದರ್ಶನಕ್ಕೆ ಆಗಮಿಸಿದ. ಎಲ್ಲ ಕಪಿಪ್ರವೀರರೊಂದಿಗೆ ಸುಗ್ರೀವ ಬರುವುದನ್ನು ಕಂಡ ಶ್ರೀರಾಮ ಪ್ರಸನ್ನನಾದ. ॥ ೩೧ ॥

**ಸಸಂಭ್ರಮಂ ತಂ ಪತಿತಂ ಪದಾಬ್ಜಯೋ-**
**ಸ್ತ್ವರನ್ ಸಮುತ್ಥಾಪ್ಯ ಸಮಾಶ್ಲಿಷತ್ ಪ್ರಭುಃ ।**
**ಸ ಚೋಪವಿಷ್ಟೋ ಜಗದೀಶಸನ್ನಿಧೌ**
**ತದಾಜ್ಞಯೈವಾದಿಶದಾಶು ವಾನರಾನ್ ॥ ೩೨ ॥**

ಪದಚ್ಛೇದ : ಸಸಂಭ್ರಮಂ ತಂ ಪತಿತಂ ಪದಾಬ್ಜಯೋಃ ತ್ವರನ್ ಸಮುತ್ಥಾಪ್ಯ ಸಮಾಶ್ಲಿಷತ್ ಪ್ರಭುಃ । ಸಃ ಚ ಉಪವಿಷ್ಟಃ ಜಗದೀಶಸನ್ನಿಧೌ ತದಾಜ್ಞಯಾ ಏವ ಆದಿಶತ್ ಆಶು ವಾನರಾನ್ ॥

**ಅರ್ಥ** :- **ಪ್ರಭುಃ** ಸಮರ್ಥನಾದ ರಾಮನು, **ಸಸಂಭ್ರಮಂ** ಪರಮಾದರದಿಂದ, **ಪದಾಬ್ಜಯೋಃ** ಕಮಲದಂತಿರುವ ಪಾದಗಳಲ್ಲಿ, **ಪತಿತಂ** ನಮಸ್ಕರಿಸಿದ, **ತಂ** ಆ ಸುಗ್ರೀವನನ್ನು, **ತ್ವರನ್** ಕೂಡಲೇ, **ಉತ್ಥಾಪ್ಯ** ಎಬ್ಬಿಸಿ, **ಸಮಾಶ್ಲಿಷತ್** ಆಲಿಂಗಿಸಿದನು, **ಸಃ ಚ** ಆ ಸುಗ್ರೀವನಾದರೂ, **ತದಾಜ್ಞಯೈವ** ರಾಮನ ಅಪ್ಪಣೆಯಿಂದಲೇ, **ಜಗದೀಶಸನ್ನಿಧೌ** ಲೋಕಕ್ಕೆ ಸ್ವಾಮಿಯಾದ ರಾಮನ ಸಮೀಪದಲ್ಲಿ, **ಉಪವಿಷ್ಟಃ** ಕುಳಿತವನಾಗಿ, **ತದಾಜ್ಞಯೈವ** ಆ ರಾಮನ ಅಪ್ಪಣೆಯಿಂದಲೇ, **ಆಶು** ಕೂಡಲೇ, **ವಾನರಾನ್** ಕಪಿಗಳನ್ನು, **ಆದಿಶತ್** ಕಳುಹಿಸಿದನು.

**ತಾತ್ಪರ್ಯ** :- ಪರಮಾದರದಿಂದ ಸುಗ್ರೀವ ಶ್ರೀರಾಮನ ಪಾದಕಮಲಗಳಿಗೆ ನಮಿಸಿದ. ಶ್ರೀರಾಮ, ವಾತ್ಸಲ್ಯದಿಂದ ಎಬ್ಬಿಸಿ ಆಲಿಂಗಿಸಿದ. ಅವನ ಬಳಿ ಆಸೀನನಾದ ಸುಗ್ರೀವ ಸೀತಾನ್ವೇಷಣಕ್ಕಾಗಿ ಎಲ್ಲ ಕಪಿಗಳಿಗೆ ಆದೇಶಿಸಿದ.॥೩೨॥

**ಎಲ್ಲೆಡೆ ಸೀತಾನ್ವೇಷಣಕ್ಕೆ ಕಪಿಗಳು**

**ಸಮಸ್ತದಿಕ್ಷು ಪ್ರಹಿತೇಷು ತೇಷು**
**ಪ್ರಭುರ್ಹನೂಮಂತಮಿದಂ ಬಭಾಷೇ ।**
**ನ ಕಶ್ಚಿದೀಶಸ್ತ್ವದೃತೇಽಸ್ತಿ ಸಾಧನೇ**
**ಸಮಸ್ತಕಾರ್ಯಪ್ರವರಸ್ಯ ಮೇಽಸ್ಯ ॥ ೩೩ ॥**

ಪದಚ್ಛೇದ : ಸಮಸ್ತದಿಕ್ಷು ಪ್ರಹಿತೇಷು ತೇಷು ಪ್ರಭುಃ ಹನೂಮಂತಮ್ ಇದಂ ಬಭಾಷೇ । ನ ಕಶ್ಚಿತ್ ಈಶಃ ತ್ವದೃತೇ ಅಸ್ತಿ ಸಾಧನೇ ಸಮಸ್ತಕಾರ್ಯಪ್ರವರಸ್ಯ ಮೇ ಅಸ್ಯ ॥

**ಅರ್ಥ** :- **ತೇನ** ಆ ಸುಗ್ರೀವನಿಂದ, **ಸಮಸ್ತದಿಕ್ಷು** ಎಲ್ಲಾ ದಿಕ್ಕುಗಳಲ್ಲಿ **ಪ್ರಹಿತೇಷು** ಕಪಿಗಳು ಕಳುಹಿಸಲ್ಪಡುತ್ತಿರಲು, **ಪ್ರಭುಃ** ಸಮರ್ಥನಾದ ರಾಮನು, **ಹನೂಮಂತಂ** ಹನುಮಂತನನ್ನು, **ಇದಂ** ಈ ಮಾತನ್ನು, **ಬಭಾಷೇ** ಹೇಳಿದನು, **ಮೇ** ನನ್ನ **ಸಮಸ್ತಕಾರ್ಯಪ್ರವರಸ್ಯ** ಎಲ್ಲಾ ಕೆಲಸಗಳಲ್ಲಿ ಶ್ರೇಷ್ಠವಾದ,

**ಅಸ್ಯ** ಈ ಸೀತಾನ್ವೇಷಣ ರೂಪವಾದ ಕಾರ್ಯದ, **ಸಾಧನೇ** ಸಂಪಾದನೆ ಯಲ್ಲಿ, **ತ್ವದೃತೇ** ನಿನ್ನನ್ನು ಬಿಟ್ಟು **ಕಶ್ಚಿತ್** ಯಾವನೂ ಕೂಡ, **ಈಶಃ** ಸಮರ್ಥನು, **ನ** ಇಲ್ಲ.

**ತಾತ್ಪರ್ಯ :-** ಸುಗ್ರೀವ ಎಲ್ಲ ದಿಕ್ಕು-ವಿದಿಕ್ಕುಗಳಲ್ಲಿ ಸೀತೆಯನ್ನು ಅನ್ವೇಷಿಸಲು ಕಪಿಗಳಿಗೆ ಆದೇಶಿಸಿದಾಗ ಶ್ರೀರಾಮ ಹನುಮಂತನಿಗೆ ನುಡಿದ 'ನನ್ನ ಸೇವಾ ಕಾರ್ಯಗಳಲ್ಲಿ ಸೀತಾನ್ವೇಷಣೆ ಅತ್ಯಂತ ಪ್ರಮುಖವಾದುದು. ನೀನಲ್ಲದೇ ಈ ಕಾರ್ಯವನ್ನು ಬೇರಾರೂ ಮಾಡಲಾರರು.' ॥ ೩೩ ॥

**ಹನುಮ ದಕ್ಷಿಣದಿಕ್ಕಿಗೆ**

**ಅತಸ್ತ್ವಮೇವ ಪ್ರತಿಯಾಹಿ ದಕ್ಷಿಣಾಂ**
**ದಿಶಂ ಸಮಾದಾಯ ಮದಂಗುಲೀಯಕಮ್ ।**
**ಇತೀರಿತೋಽಸೌ ಪುರುಷೋತ್ತಮೇನ**
**ಯಯೌ ದಿಶಂ ತಾಂ ಯುವರಾಜಯುಕ್ತಃ ॥ ೩೪ ॥**

ಪದಚ್ಛೇದ : ಅತಃ ತ್ವಮ್ ಏವ ಪ್ರತಿಯಾಹಿ ದಕ್ಷಿಣಾಂ ದಿಶಂ ಸಮಾದಾಯ ಮದಂಗುಲೀಯಕಮ್ । ಇತಿ ಈರಿತಃ ಅಸೌ ಪುರುಷೋತ್ತಮೇನ ಯಯೌ ದಿಶಂ ತಾಂ ಯುವರಾಜಯುಕ್ತಃ ॥

**ಅರ್ಥ :- ಅತಃ** ಆದ್ದರಿಂದ, **ತ್ವಮೇವ** ನೀನೇ, **ಮದಂಗುಲೀಯಕಂ** ನನ್ನ ಉಂಗುರವನ್ನು, **ಸಮಾದಾಯ** ಹಿಡಿದುಕೊಂಡು, **ದಕ್ಷಿಣಂ ದಿಶಂ** ದಕ್ಷಿಣ ದಿಕ್ಕನ್ನು ಕುರಿತು, **ಪ್ರತಿಯಾಹಿ** ಹೋಗು, **ಇತಿ** ಈ ರೀತಿಯಾಗಿ, **ಪುರುಷೋತ್ತಮೇನ** ಪುರುಷಶ್ರೇಷ್ಠನಾದ ರಾಮನಿಂದ, **ಈರಿತಃ** ಹೇಳಿಸಿ ಕೊಳ್ಳಲ್ಪಟ್ಟ **ಅಸೌ** ಈ ಹನುಮಂತನು, **ಯುವರಾಜಯುಕ್ತಃ** ಯುವರಾಜನಾದ ಅಂಗದನಿಂದ ಕೂಡಿದವನಾಗಿ, **ತಾಂ ದಿಶಂ** ಆ ದಕ್ಷಿಣ ದಿಕ್ಕನ್ನು ಕುರಿತು, **ಯಯೌ** ಹೋದನು.

**ತಾತ್ಪರ್ಯ :-** ಆದ್ದರಿಂದ ನೀನು ನನ್ನ ಉಂಗುರವನ್ನು ತೆಗೆದುಕೊಂಡು ದಕ್ಷಿಣದಿಕ್ಕಿಗೆ ಪಯಣಿಸೆಂದು ಶ್ರೀರಾಮ ಆದೇಶಿಸಿದಾಗ ಹನುಮಂತನು ಅಂಗುಲೀಯಕವನ್ನು ಸ್ವೀಕರಿಸಿ ಯುವರಾಜ ಅಂಗದನೊಡನೆ ದಕ್ಷಿಣ ದಿಕ್ಕಿಗೆ ಹೊರಟ. ॥ ೩೪॥

**ಸಮಸ್ತದಿಕ್ಷು ಪ್ರತಿಯಾಪಿತಾ ಹಿ ತೇ**
**ಹರೀಶ್ವರಾಜ್ಞಾಮುಪಧಾರ್ಯ ಮಾಸತಃ ।**
**ಸಮಾಯಯುಸ್ತೇಽಂಗದಜಾಂಬವನ್ಮುಖಾಃ**
**ಸುತೇನ ವಾಯೋಃ ಸಹಿತಾ ನ ಚಾಯಯುಃ ॥ ೩೫ ॥**

**ಪದಚ್ಛೇದ : ಸಮಸ್ತದಿಕ್ಷು ಪ್ರತಿಯಾಪಿತಾಃ ಹಿ ತೇ ಹರೀಶ್ವರಾಜ್ಞಾಂ ಉಪಧಾರ್ಯ ಮಾಸತಃ । ಸಮಾಯಯುಃ ತೇ ಅಂಗದಜಾಂಬವನ್ಮುಖಾಃ ಸುತೇನ ವಾಯೋಃ ಸಹಿತಾಃ ನ ಚ ಆಯಯುಃ ॥**

**ಅರ್ಥ :-** **ಸಮಸ್ತದಿಕ್ಷು** ಎಲ್ಲಾ ದಿಕ್ಕುಗಳಲ್ಲಿ, **ಪ್ರತಿಯಾಪಿತಾಃ** ಕಳುಹಿಸಲ್ಪಟ್ಟ, **ತೇ** ಆ ಕಪಿಗಳು, **ಹರೀಶ್ವರಾಜ್ಞಾಂ** ಕಪೀಶ್ವರನಾದ ಸುಗ್ರೀವನ ಅಪ್ಪಣೆಯನ್ನು, **ಉಪಧಾರ್ಯ** ಸ್ವೀಕರಿಸಿ, **ಮಾಸತಃ** ಒಂದು ತಿಂಗಳಲ್ಲೇ, **ಸಮಾಯಯುಃ** ಮರಳಿ ಬಂದರು, **ವಾಯೋಃ** ವಾಯುದೇವರ, **ಸುತೇನ** ಮಗನಾದ ಹನುಮಂತನಿಂದ, **ಸಹಿತಾಃ** ಕೂಡಿದ, **ಅಂಗದಜಾಂಬವನ್ಮುಖಾಃ** ಅಂಗದ ಜಾಂಬವಂತನೇ ಪ್ರಧಾನರಾಗಿ ಉಳ್ಳ, **ತೇ** ಆ ಕಪಿಶ್ರೇಷ್ಠರು, **ನ ಚಾಯಯುಃ** ಒಂದು ತಿಂಗಳಲ್ಲೇ ಬರಲಿಲ್ಲ.

**ತಾತ್ಪರ್ಯ :-** ಎಲ್ಲ ದಿಕ್ಕುಗಳಲ್ಲಿ ಸೀತಾಮಾತೆಯನ್ನು ಹುಡುಕಿದ ಕಪಿಪ್ರವೀರರು ಅವಳನ್ನು ಕಾಣದೇ ಒಂದು ತಿಂಗಳಲ್ಲಿ ಮರಳಿದರು. ಆದರೆ ಹನುಮಂತನೊಡನೆ ದಕ್ಷಿಣದಿಕ್ಕಿಗೆ ಪಯಣಿಸಿದ ಜಾಂಬವಂತ ಅಂಗದ ಮೊದಲಾದ ಕಪಿಗಳು ತಿಂಗಳೊಳಗೆ ಮರಳಿ ಬರಲಿಲ್ಲ. ॥ ೩೫॥

**ಸಮಸ್ತದುರ್ಗಪ್ರವರಂ ದುರಾಸದಂ**
**ವಿಮಾರ್ಗತಾಂ ವಿಂಧ್ಯಗಿರಿಂ ಮಹಾತ್ಮನಾಮ್ ।**
**ಗತಃ ಸ ಕಾಲೋ ಹರಿರಾಡುದೀರಿತೋ**
**ಸಮಾಸದಂಶ್ಚಾಥ ಬಿಲಂ ಮಹಾದ್ಭುತಮ್ ॥ ೩೬ ॥**

ಪದಚ್ಛೇದ : ಸಮಸ್ತದುರ್ಗಪ್ರವರಂ ದುರಾಸದಂ ವಿಮಾರ್ಗತಾಂ ವಿಂಧ್ಯಗಿರಿಂ ಮಹಾತ್ಮನಾಮ್ । ಗತಃ ಸಃ ಕಾಲಃ ಹರಿರಾಡುದೀರಿತಃ ಸಮಾಸದನ್ ಚ ಅಥ ಬಿಲಂ ಮಹಾದ್ಭುತಮ್ ॥

**ಅರ್ಥ** :- **ಸಮಸ್ತದುರ್ಗಪ್ರವರಂ** ಹೋಗಲು ಅಶಕ್ಯಗಳಾದ ಎಲ್ಲಾ ಪ್ರದೇಶಗಳಲ್ಲಿ, **ದುರಾಸದಂ** ಅತೀವ ಅಗಮ್ಯವೆನಿಸಿದ, **ವಿಂಧ್ಯಗಿರಿಂ** ವಿಂಧ್ಯ ಪರ್ವತವನ್ನು, **ವಿಮಾರ್ಗತಾಂ** ಹುಡುಕತಕ್ಕ, **ಮಹಾತ್ಮನಾಂ** ಶ್ರೇಷ್ಠರಾದ ಅಂಗದಾದಿಗಳಿಗೆ, **ಹರಿರಾಡುದೀರಿತಃ** ಕಪಿ ಶ್ರೇಷ್ಠನಾದ ಸುಗ್ರೀವನಿಂದ ಹೇಳಲ್ಪಟ್ಟ **ಸಃ ಕಾಲಃ** ಆ ಒಂದು ಮಾಸ ಪರಿಮಿತವಾದ ಕಾಲವು, **ಗತಃ** ಮುಗಿಯಿತು, **ಅಥ** ಒಂದು ತಿಂಗಳು ಮುಗಿದ ನಂತರ, **ಮಹಾದ್ಭುತಂ** ಅತ್ಯಾಶ್ಚರ್ಯಕರವಾದ, **ಬಿಲಂ** ಗುಹೆಯನ್ನು, **ಸಮಾಸದನ್** ಸಮೀಪಿಸಿದರು.

**ತಾತ್ಪರ್ಯ** :- ಎಲ್ಲ ಅಗಮ್ಯ ಪ್ರದೇಶಗಳಿಗಿಂತ ದುರ್ಗಮವಾದ ವಿಂಧ್ಯಪರ್ವತದ ಬಳಿ ಸೀತಾನ್ವೇಷಣೆ ಮಾಡುವಾಗಲೇ ಸುಗ್ರೀವ ನೀಡಿದ ಒಂದು ತಿಂಗಳ ಗಡುವು ಮೀರಿಹೋಯಿತು. ಅನಂತರ ಹುಡುಕುವ ಕಾರ್ಯ ಮುಂದುವರಿಸಿದ ಕಪಿಗಳಿಗೆ ಅತ್ಯಾಶ್ಚರ್ಯಕರವಾದ ಗುಹೆಯೊಂದು ಕಾಣಿಸಿತು. || ೩೬||

ಮಹಾ ಗುಹಾದರ್ಶನ

**ಕೃತಂ ಮಯೇನಾತಿವಿಚಿತ್ರಮುತ್ತಮಂ**
**ಸಮೀಕ್ಷ್ಯ ತತ್ ತಾರ ಉವಾಚ ಚಾಂಗದಮ್ ।**
**''ವಯಂ ನ ಯಾಮೋ ಹರಿರಾಜಸನ್ನಿಧಿಂ**
**ವಿಲಂಘಿತೋ ನಃ ಸಮಯೋ ಯತೋಽಸ್ಯ ॥ ೩೭ ॥**

ಪದಚ್ಛೇದ : ಕೃತಂ ಮಯೇನ ಅತಿವಿಚಿತ್ರಮ್ ಉತ್ತಮಂ ಸಮೀಕ್ಷ್ಯ ತತ್ ತಾರಃ ಉವಾಚ ಚ ಅಂಗದಮ್ । ವಯಂ ನ ಯಾಮಃ ಹರಿರಾಜಸನ್ನಿಧಿಂ ವಿಲಂಘಿತಃ ನಃ ಸಮಯಃ ಯತಃ ಅಸ್ಯ ॥

**ಅರ್ಥ** :- **ಮಯೇನ** ಮಯನಾಮಕ ದೈತ್ಯನಿಂದ, **ಕೃತಂ** ಮಾಡಲ್ಪಟ್ಟ **ಅತಿವಿಚಿತ್ರಂ** ಅತ್ಯಂತ ಆಶ್ಚರ್ಯಕರವಾದ, **ಉತ್ತಮಂ** ಶ್ರೇಷ್ಠವಾದ, **ತತ್** ಆ ಬಿಲವನ್ನು, **ಸಮೀಕ್ಷ್ಯ** ನೋಡಿ, **ತಾರಃ** ವಾಲಿಯ ಹೆಂಡತಿಯಾದ ತಾರೆಯ ತಮ್ಮನಾದ **ತಾರನಾಮಕ** ಕಪಿಯು, **ಅಂಗದಂ** ಅಂಗದನನ್ನು ಕುರಿತು, **ವಯಂ** ನಾವು, **ಹರಿರಾಜಸನ್ನಿಧಿಂ** ಕಪಿಗಳಿಗೆ ರಾಜನಾದ ಸುಗ್ರೀವನ ಸಮೀಪವನ್ನು, **ನ ಯಾಮಃ** ಹೋಗುವುದಿಲ್ಲ, **ಅಸ್ಯ** ಈ ಸುಗ್ರೀವನ, **ಸಮಯಃ** ಒಂದು ತಿಂಗಳು ಅವಧಿ ಕಾಲವು, **ನಃ** ನಮ್ಮಿಂದ **ವಿಲಂಘಿತಃ** ದಾಟಲ್ಪಟ್ಟಿದೆ, **ಇತಿ** ಎಂಬುದಾಗಿ, **ಉವಾಚ** ಹೇಳಿದನು.

**ತಾತ್ಪರ್ಯ** :- ಆ ಗುಹೆಯು ಮಯಾಸುರನಿಂದ ನಿರ್ಮಿಸಲ್ಪಟ್ಟಿತ್ತು. ಅಲ್ಲಿ ಸ್ವಲ್ಪ ಕಾಲ ಶ್ರಮಪರಿಹರಿಸಿಕೊಂಡು ಹೊರಬಂದ ಮೇಲೆ ಅಂಗದನ ಸೋದರಮಾವನಾದ ತಾರನೆಂಬ ಕಪಿ ನುಡಿದಸುಗ್ರೀವ ನೀಡಿದ ಸೀತಾನ್ವೇಷಣದ ಅವಧಿ ಮುಗಿದಿದೆ. ನಾವು ಈ ಬಗ್ಗೆ ಸಫಲರಾಗಲಿಲ್ಲ. ಆದ್ದರಿಂದ ಇಲ್ಲೇ ವಾಸಿಸೋಣ. ॥ ೩೭ ॥

**ದುರಾಸದೋऽಸಾವತಿಚಂಡಶಾಸನೋ**
**ಹನಿಷ್ಯತಿ ತ್ವಾಮಪಿ ಕಿಂ ಮದಾದಿಕಾನ್ ।**
**ಅಗಮ್ಯಮೇತದ್ ಬಿಲಮಾಪ್ಯ ತತ್ಸುಖಂ**
**ವಸಾಮ ಸರ್ವೇ ಕಿಮಸಾವಿಹಾಚರೇತ್ ॥ ೩೮ ॥**

**ಪದಚ್ಛೇದ : ದುರಾಸದಃ ಅಸೌ ಅತಿಚಂಡಶಾಸನಃ ಹನಿಷ್ಯತಿ ತ್ವಾಮ್ ಅಪಿ ಕಿಂ ಮದಾದಿಕಾನ್ । ಅಗಮ್ಯಮ್ ಏತತ್ ಬಿಲಮ್ ಆಪ್ಯ ತತ್ ಸುಖಂ ವಸಾಮಃ ಸರ್ವೇ ಕಿಮ್ ಅಸೌ ಇಹ ಆಚರೇತ್ ॥**

**ಅರ್ಥ** :- **ದುರಾಸದಃ** ಸರಳವಾಗಿ ಒಲಿಯದ, **ಅತಿಚಂಡಶಾಸನಃ** ಅತ್ಯಂತ ಕ್ರೂರವಾದ ಆಜ್ಞೆಯುಳ್ಳ, **ಅಸೌ** ಈ ಸುಗ್ರೀವನು, **ತ್ವಾಮಪಿ** ಯುವರಾಜನಾದ ನಿನ್ನನ್ನೂ ಕೂಡ, **ಹನಿಷ್ಯತಿ** ಕೊಲ್ಲುವನು, **ಮದಾದಿಕಾನ್ ಕಿಂ** ನನ್ನಂತಹವರನ್ನೂ ಕೊಲ್ಲುವನೆಂದು ಏನು ಹೇಳತಕ್ಕದ್ದು **ತತ್** ಆದ್ದರಿಂದ, **ಅಗಮ್ಯಂ** ಯಾರಿಂದಲೂ ಗುರುತಿಸಲಾಗದ, **ಏತದ್ ಬಿಲಂ** ಈ ಗುಹೆಯನ್ನು **ಆಪ್ಯ** ಹೊಂದಿ, **ಸುಖಂ** ಆನಂದದಿಂದ, **ಇಹ** ಇಲ್ಲಿ, **ಸರ್ವೇ** ಎಲ್ಲರೂ, **ವಸಾಮಃ** ವಾಸ ಮಾಡೋಣ, **ಅಸೌ** ಈ ಸುಗ್ರೀವನು, **ಇಹ** ಇಲ್ಲಿ **ಕಿಮಾಚರೇತ್** ಏನು ಮಾಡುವನು?

**ತಾತ್ಪರ್ಯ** :- ತಾರ ಹೇಳಿದ – 'ಅಂಗದ! ಸುಗ್ರೀವ ಸುಮುಖನಲ್ಲ, ಅವನನ್ನು ಒಲಿಸುವುದು ಸರಳವಲ್ಲ, ಆದೇಶವನ್ನು ಪಾಲಿಸದವರ ಪಾಲಿಗೆ ಅವನು ಬಹು ಕಠಿಣ. ನಿನ್ನನ್ನು ಸಂಹರಿಸಬಹುದು. ಹೀಗಿರುವಾಗ ನಮ್ಮ ಪಾಡೇನು ? ಆದ್ದರಿಂದ ಯಾರಿಂದಲೂ ಗುರುತಿಸಲ್ಪಡದ ಅತ್ಯಂತ ಸುರಕ್ಷಿತ ವಾದ ಈ ಪ್ರದೇಶದಲ್ಲಿ ನಾವು ವಾಸಿಸೋಣ.' ॥ ೩೮॥

ಸುಗ್ರೀವ-ರಾಮರ ಸಂಗ ಬೇಡ

ನ ಚೈವ ರಾಮೇಣ ಸಲಕ್ಷ್ಮಣೇನ
ಪ್ರಯೋಜನಂ ನೋ ವನಚಾರಿಣಾಂ ಸದಾ ।
ನ ಚೇಹ ನಃ ಪೀಡಯಿತುಂ ಸ ಚ ಕ್ಷಮ-
ಸ್ತತೋ ಮಮೇಯಂ ಸುವಿನಿಶ್ಚಿತಾ ಮತಿಃ'' ॥ ೩೯ ॥

ಪದಚ್ಛೇದ : ನ ಚ ಏವ ರಾಮೇಣ ಸಲಕ್ಷ್ಮಣೇನ ಪ್ರಯೋಜನಂ ನಃ ವನಚಾರಿಣಾಂ ಸದಾ । ನ ಚ ಇಹ ಪೀಡಯಿತುಂ ಸಃ ಚ ಕ್ಷಮಃ ತತಃ ಮಮ ಇಯಂ ಸುವಿನಿಶ್ಚಿತಾ ಮತಿಃ ॥

ಅರ್ಥ :- ಸದಾ ಯಾವಾಗಲೂ, ವನಚಾರಿಣಾಂ ಅರಣ್ಯದಲ್ಲಿರುವ ಫಲಗಳನ್ನು ತಿನ್ನತಕ್ಕ ಅಥವಾ ಅರಣ್ಯದಲ್ಲಿ ಸಂಚರಿಸುವ, ನಃ ನಮಗೆ, ಸಲಕ್ಷ್ಮಣೇನ ಲಕ್ಷ್ಮಣನಿಂದ ಕೂಡಿದ, ರಾಮೇಣ ರಾಮನಿಂದ, ಪ್ರಯೋಜನಂ ಪ್ರಯೋಜನವು, ನ ಚೈವ ಇಲ್ಲವೇ ಇಲ್ಲ, ಸ ಚ ಆ ರಾಮನಾದರೋ, ಇಹ ಇಲ್ಲಿ, ನಃ ನಮ್ಮನ್ನು ಪೀಡಯಿತುಂ ಪೀಡಿಸಲಿಕ್ಕೆ, ನ ಚ ಕ್ಷಮಃ ಸಮರ್ಥನಲ್ಲ, ತತಃ ಆದ್ದರಿಂದ, ಮಮ ನನ್ನ ಇಯಂ ಮತಿಃ ಈ ಬುದ್ಧಿಯು, ಸುವಿನಿಶ್ಚಿತಾ ವಿಮರ್ಶೆಯಿಂದ ನಿರ್ಧರಿಸಲ್ಪಟ್ಟಿದೆ.

ತಾತ್ಪರ್ಯ : 'ಸದಾ ವನಚಾರಿಗಳಾದ ನಮಗೆ ರಾಮ-ಲಕ್ಷ್ಮಣರಿಂದೇನು ಪ್ರಯೋಜನ? ಇಲ್ಲಿ ತಂಗಿದ ನಮ್ಮನ್ನು ಅವರೂ ಪೀಡಿಸಲಾರರು. ಇದು ವಿಮರ್ಶೆ ಮಾಡಿ ತಳೆದ ನಿಲುವು. ಆದ್ದರಿಂದ ನಾವಿಲ್ಲೇ ಸುಖವಾಗಿರೋಣ.' ॥ ೩೯ ॥

ಇತೀರಿತಂ ಮಾತುಲವಾಕ್ಯಮಾಶು
ಸ ಆದದೇ ವಾಲಿಸುತೋಽಪಿ ಸಾದರಮ್ ।
ಉವಾಚ ವಾಕ್ಯಂ ಚ ನ ನೋ ಹರೀಶ್ವರಃ
ಕ್ಷಮೀ ಭವೇಲ್ಲಂಘಿತಶಾಸನಾನಾಮ್॥ ೪೦ ॥

ಪದಚ್ಛೇದ : ಇತಿ ಈರಿತಂ ಮಾತುಲವಾಕ್ಯಮ್ ಆಶು ಸಃ ಆದದೇ ವಾಲಿಸುತಃ ಅಪಿ ಸಾದರಮ್ । ಉವಾಚ ವಾಕ್ಯಂ ಚ ನ ನಃ ಹರೀಶ್ವರಃ ಕ್ಷಮೀ ಭವೇತ್ ಲಂಘಿತಶಾಸನಾನಾಮ್ ॥

**ಅರ್ಥ** :- **ಇತಿ** ಈ ಹಿಂದೆ ಹೇಳಿದ ರೀತಿಯಿಂದ, **ಈರಿತಂ** ಹೇಳಲ್ಪಟ್ಟ **ಮಾತುಲವಾಕ್ಯಂ** ಮಾವನಾದ ತಾರನ ಮಾತನ್ನು **ವಾಲಿಸುತೋಽಪಿ ಸಃ** ವಾಲಿಯ ಮಗನಾದ ಅಂಗದನಾದರೂ, **ಆಶು** ವಿಚಾರ ಮಾಡದೇ ಕೂಡಲೇ, **ಸಾದರಂ** ಪ್ರೀತಿಯಿಂದ, **ಆದದೇ** ಸ್ವೀಕರಿಸಿದನು, **ಲಂಘಿತ** ಶಾಸನಾನಾಂ ಆಜ್ಞಾಭಂಗವನ್ನು ಮಾಡಿರತಕ್ಕ, **ನಃ** ನಮಗೆ, **ಹರೀಶ್ವರಃ** ಕಪಿಶ್ರೇಷ್ಠನಾದ ಸುಗ್ರೀವನು, **ಕ್ಷಮೀ** ದಯಾವುಳ್ಳವನು, **ನ ಚ ಭವೇತ್** ಆಗಲಾರನು, **ಇತಿ** ಎಂಬುದಾಗಿ, **ವಾಕ್ಯಂ** ಮಾತನ್ನು **ಉವಾಚ** ಹೇಳಿದನು.

**ತಾತ್ಪರ್ಯ** : ತಾರನ ಮಾತನ್ನು ಆದರದಿಂದ ಅಂಗದ ಅನುಮೋದಿಸಿದ. ತನ್ನ ಅಭಿಪ್ರಾಯವನ್ನು ತಿಳಿಸಿದ – 'ತನ್ನ ಆದೇಶವನ್ನು ಪಾಲಿಸಲಾಗದ ನಮ್ಮನ್ನು ಸುಗ್ರೀವ ಕ್ಷಮಿಸಲಾರನು'. ॥ ೪೦ ॥

**ರಾಜ್ಯಾರ್ಥಿನಾ ಯೇನ ಹಿ ಘಾತಿತೋಽಗ್ರಜೋ**
**ಹೃತಾಶ್ಚ ದಾರಾಃ ಸುನೃಶಂಸಕೇನ ।**
**ಸ ನಃ ಕಥಂ ರಕ್ಷತಿ ಶಾಸನಾತಿಗಾನ್**
**ನಿರಾಶ್ರಯಾನ್ ದುರ್ಬಲಕಾನ್ ಬಲೇ ಸ್ಥಿತಃ ॥ ೪೧ ॥**

ಪದಚ್ಛೇದ : ರಾಜ್ಯಾರ್ಥಿನಾ ಯೇನ ಹಿ ಘಾತಿತಃ ಅಗ್ರಜಃ ಹೃತಾಃ ಚ ದಾರಾಃ ಸುನೃಶಂಸಕೇನ । ಸಃ ನಃ ಕಥಂ ರಕ್ಷತಿ ಶಾಸನಾತಿಗಾನ್ ನಿರಾಶ್ರಯಾನ್ ದುರ್ಬಲಕಾನ್ ಬಲೇ ಸ್ಥಿತಃ ॥

**ಅರ್ಥ** :- **ರಾಜ್ಯಾರ್ಥಿನಾ** ರಾಜ್ಯವನ್ನು ಅಪೇಕ್ಷಿಸುವ, **ಸುನೃಶಂಸಕೇನ** ಅತಿ ಕ್ರೂರಿಯಾದ, **ಯೇನ** ಯಾವ ಸುಗ್ರೀವನಿಂದ, **ಅಗ್ರಜಃ** ಅಣ್ಣನಾದ ವಾಲಿಯು, **ಘಾತಿತಃ** ಕೊಲ್ಲಲ್ಪಟ್ಟಿರುವನೋ, **ಯೇನ** ಯಾವ ಸುಗ್ರೀವನಿಂದ, **ದಾರಾಃ** ಅಣ್ಣನ ಹೆಂಡತಿಯಾದ ತಾರೆಯು, **ಹೃತಾಃ** ಅಪಹರಿಸಲ್ಪಟ್ಟಿರುವಳೋ, **ಬಲೇ ಸ್ಥಿತಃ** ರಾಮನ ಆಶ್ರಯದಿಂದ ಪ್ರಬಲನಾಗಿರತಕ್ಕ, **ಸಃ** ಆ ಸುಗ್ರೀವನು, **ಶಾಸನಾತಿಗಾನ್** ಆಜ್ಞೆಯನ್ನು ಮೀರಿದ, **ನಿರಾಶ್ರಯಾನ್** ಆಶ್ರಯರಹಿತರಾದ, **ದುರ್ಬಲಕಾನ್** ಬಲವಿಲ್ಲದಿರುವ, **ನಃ** ನಮ್ಮನ್ನು, **ಕಥಂ** ಹೇಗೆ, **ರಕ್ಷತಿ** ರಕ್ಷಿಸುತ್ತಾನೆ ?

**ತಾತ್ಪರ್ಯ :** ರಾಜ್ಯದ ಕಾಮನೆಯಿಂದ ಅಣ್ಣನನ್ನು ಕೊಲ್ಲಿಸಿದ, ಅವನ ಮಡದಿಯನ್ನು ಸ್ವೀಕರಿಸಿದ, ಕ್ರೂರಿಯಾದ ಸುಗ್ರೀವನಿಂದ ನಮಗಾವ ರಕ್ಷಣೆ ದೊರಕಲಾರದು. ಸುಗ್ರೀವನಿಗೀಗ ರಾಮನ ಬೆಂಬಲವಿದೆ. ನಾವು ದುರ್ಬಲರು. ನಮಗಾರ ಆಸರೆ ಇಲ್ಲ. ಆದ್ದರಿಂದ ಇಲ್ಲಿರುವುದೇ ಸೂಕ್ತ.॥೪೧॥

**ಇತೀರಿತೇ ಶಕ್ರಸುತಾತ್ಮಜೇನ**
**ತಥೇತಿ ಹೋಚುಃ ಸಹಜಾಂಬವನ್ಮುಖಾಃ ।**
**ಸರ್ವೇಽಪಿ ತೇಷಾಮಥ ಚೈಕಮತ್ಯಂ**
**ದೃಷ್ಟ್ವಾ ಹನೂಮಾನಿದಮಾಬಭಾಷೇ ॥ ೪೨ ॥**

**ಪದಚ್ಛೇದ :** ಇತಿ ಈರಿತೇ ಶಕ್ರಸುತಾತ್ಮಜೇನ ತಥಾ ಇತಿ ಹ ಊಚುಃ ಸಹ ಜಾಂಬವನ್ಮುಖಾಃ । ಸರ್ವೇ ಅಪಿ ತೇಷಾಂ ಅಥ ಚ ಐಕಮತ್ಯಂ ದೃಷ್ಟ್ವಾ ಹನೂಮಾನ್ ಇದಮ್ ಆಬಭಾಷೆ ॥

**ಅರ್ಥ :-** **ಶಕ್ರಸುತಾತ್ಮಜೇನ** ಇಂದ್ರನ ಮಗನಾದ ವಾಲಿಯ ಕುಮಾರನಾದ ಅಂಗದನಿಂದ, **ಇತಿ** ಈ ರೀತಿಯಾಗಿ, **ಈರಿತೇ** ಹೇಳಲ್ಪಡುತ್ತಿರಲು, **ಜಾಂಬವನ್ಮುಖಾಃ** ಜಾಂಬವಂತನೇ ಮೊದಲಾಗಿ ಉಳ್ಳ, **ಸರ್ವೇ** ಎಲ್ಲರೂ, **ಸಹ** ಮಿಲಿತರಾಗಿ, **ತಥೇತಿ** ನೀನು ಹೇಳಿದ ಹಾಗೆಯೇ ಆಗಲೆಂದು, **ಊಚುಃ** ಹೇಳಿದರು, **ಅಥ** ಕಪಿಗಳ ವಿಚಾರಾನಂತರ, **ಹನೂಮಾನ್** ಹನುಮಂತನು, **ತೇಷಾಂ** ಈ ಅಂಗದಾದಿ ಕಪಿಗಳ, **ಐಕಮತ್ಯಂ** ಏಕಾಭಿಪ್ರಾಯವನ್ನು, **ದೃಷ್ಟ್ವಾ** ನೋಡಿ, **ಇದಂ** ಈ ಮುಂದೆ ಹೇಳುವ ಮಾತನ್ನು, **ಆಬಭಾಷೇ** ಹೇಳಿದನು.

**ತಾತ್ಪರ್ಯ :** ಅಂಗದನ ಈ ಮಾತನ್ನು ಜಾಂಬವಂತನೇ ಮೊದಲಾದ ಎಲ್ಲ ಹಿರಿಯರೂ ಅನುಮೋದಿಸಿದರು. ಆಗ ಹನುಮಂತ ಅವರಿಗೆ ತಿಳಿಹೇಳಿದ. ॥ ೪೨॥

**ಹನುಮಂತನ ಸುಬೋಧನೆ**

**ವಿಜ್ಞಾತಮೇತದ್ಧಿ ಮಯಾಽಂಗದಸ್ಯ**
**ರಾಜ್ಯಾಯ ತಾರಾಭಿಹಿತಂ ಹಿ ವಾಕ್ಯಮ್ ।**
**ಸಾಧ್ಯಂ ನ ಚೈತನ್ನ ಹಿ ವಾಯುಸೂನೂ**
**ರಾಮಪ್ರತೀಪಂ ವಚನಂ ಸಹೇತ ॥ ೪೩ ॥**

**ಅರ್ಥ** :- ಇತಿ ಈ ಹಿಂದೆ ಹೇಳಿದ ರೀತಿಯಿಂದ, **ಈರಿತಂ** ಹೇಳಲ್ಪಟ್ಟ **ಮಾತುಲವಾಕ್ಯಂ** ಮಾವನಾದ ತಾರನ ಮಾತನ್ನು, **ವಾಲಿಸುತೋಽಪಿ ಸಃ** ವಾಲಿಯ ಮಗನಾದ ಅಂಗದನಾದರೂ, **ಆಶು** ವಿಚಾರ ಮಾಡದೇ ಕೂಡಲೇ, **ಸಾದರಂ** ಪ್ರೀತಿಯಿಂದ, **ಆದದೇ** ಸ್ವೀಕರಿಸಿದನು, **ಲಂಘಿತ** ಶಾಸನಾನಾಂ ಆಜ್ಞಾಭಂಗವನ್ನು ಮಾಡಿರತಕ್ಕ, **ನಃ** ನಮಗೆ, **ಹರೀಶ್ವರಃ** ಕಪಿಶ್ರೇಷ್ಠನಾದ ಸುಗ್ರೀವನು, **ಕ್ಷಮೀ** ದಯಾವುಳ್ಳವನು, **ನ ಚ ಭವೇತ್** ಆಗಲಾರನು, **ಇತಿ** ಎಂಬುದಾಗಿ, **ವಾಕ್ಯಂ** ಮಾತನ್ನು **ಉವಾಚ** ಹೇಳಿದನು.

**ತಾತ್ಪರ್ಯ** : ತಾರನ ಮಾತನ್ನು ಆದರದಿಂದ ಅಂಗದ ಅನುಮೋದಿಸಿದ. ತನ್ನ ಅಭಿಪ್ರಾಯವನ್ನು ತಿಳಿಸಿದ – 'ತನ್ನ ಆದೇಶವನ್ನು ಪಾಲಿಸಲಾಗದ ನಮ್ಮನ್ನು ಸುಗ್ರೀವ ಕ್ಷಮಿಸಲಾರನು'. ॥ ೪೦ ॥

**ರಾಜ್ಯಾರ್ಥಿನಾ ಯೇನ ಹಿ ಘಾತಿತೋಽಗ್ರಜೋ**
**ಹೃತಾಶ್ಚ ದಾರಾಃ ಸುನೃಶಂಸಕೇನ ।**
**ಸ ನಃ ಕಥಂ ರಕ್ಷತಿ ಶಾಸನಾತಿಗಾನ್**
**ನಿರಾಶ್ರಯಾನ್ ದುರ್ಬಲಕಾನ್ ಬಲೇ ಸ್ಥಿತಃ ॥ ೪೧ ॥**

ಪದಚ್ಛೇದ : ರಾಜ್ಯಾರ್ಥಿನಾ ಯೇನ ಹಿ ಘಾತಿತಃ ಅಗ್ರಜಃ ಹೃತಾಃ ಚ ದಾರಾಃ ಸುನೃಶಂಸಕೇನ । ಸಃ ನಃ ಕಥಂ ರಕ್ಷತಿ ಶಾಸನಾತಿಗಾನ್ ನಿರಾಶ್ರಯಾನ್ ದುರ್ಬಲಕಾನ್ ಬಲೇ ಸ್ಥಿತಃ ॥

**ಅರ್ಥ** :- **ರಾಜ್ಯಾರ್ಥಿನಾ** ರಾಜ್ಯವನ್ನು ಅಪೇಕ್ಷಿಸುವ, **ಸುನೃಶಂಸಕೇನ** ಅತಿ ಕ್ರೂರಿಯಾದ, **ಯೇನ** ಯಾವ ಸುಗ್ರೀವನಿಂದ, **ಅಗ್ರಜಃ** ಅಣ್ಣನಾದ ವಾಲಿಯು, **ಘಾತಿತಃ** ಕೊಲ್ಲಲ್ಪಟ್ಟಿರುವನೋ, **ಯೇನ** ಯಾವ ಸುಗ್ರೀವನಿಂದ, **ದಾರಾಃ** ಅಣ್ಣನ ಹೆಂಡತಿಯಾದ ತಾರೆಯು, **ಹೃತಾಃ** ಅಪಹರಿಸಲ್ಪಟ್ಟಿರುವಳೋ, **ಬಲೇ ಸ್ಥಿತಃ** ರಾಮನ ಆಶ್ರಯದಿಂದ ಪ್ರಬಲನಾಗಿರತಕ್ಕ, **ಸಃ** ಆ ಸುಗ್ರೀವನು, **ಶಾಸನಾತಿಗಾನ್** ಆಜ್ಞೆಯನ್ನು ಮೀರಿದ, **ನಿರಾಶ್ರಯಾನ್** ಆಶ್ರಯರಹಿತರಾದ, **ದುರ್ಬಲಕಾನ್** ಬಲವಿಲ್ಲದಿರುವ, **ನಃ** ನಮ್ಮನ್ನು, **ಕಥಂ** ಹೇಗೆ, **ರಕ್ಷತಿ** ರಕ್ಷಿಸುತ್ತಾನೆ ?

**ತಾತ್ಪರ್ಯ :** ರಾಜ್ಯದ ಕಾಮನೆಯಿಂದ ಅಣ್ಣನನ್ನು ಕೊಲ್ಲಿಸಿದ, ಅವನ ಮಡದಿಯನ್ನು ಸ್ವೀಕರಿಸಿದ, ಕ್ರೂರಿಯಾದ ಸುಗ್ರೀವನಿಂದ ನಮಗಾವ ರಕ್ಷಣೆ ದೊರಕಲಾರದು. ಸುಗ್ರೀವನಿಗೀಗ ರಾಮನ ಬೆಂಬಲವಿದೆ. ನಾವು ದುರ್ಬಲರು. ನಮಗಾರ ಆಸರೆ ಇಲ್ಲ. ಆದ್ದರಿಂದ ಇಲ್ಲಿರುವುದೇ ಸೂಕ್ತ.॥೪೧॥

**ಇತೀರಿತೇ ಶಕ್ರಸುತಾತ್ಮಜೇನ**
**ತಥೇತಿ ಹೋಚುಃ ಸಹಜಾಂಬವನ್ಮುಖಾಃ ।**
**ಸರ್ವೇಽಪಿ ತೇಷಾಮಥ ಚೈಕಮತ್ಯಂ**
**ದೃಷ್ಟ್ವಾ ಹನೂಮಾನಿದಮಾಬಭಾಷೇ ॥ ೪೨ ॥**

**ಪದಚ್ಛೇದ :** ಇತಿ ಈರಿತೇ ಶಕ್ರಸುತಾತ್ಮಜೇನ ತಥಾ ಇತಿ ಹ ಊಚುಃ ಸಹ ಜಾಂಬವನ್ಮುಖಾಃ । ಸರ್ವೇ ಅಪಿ ತೇಷಾಂ ಅಥ ಚ ಐಕಮತ್ಯಂ ದೃಷ್ಟ್ವಾ ಹನೂಮಾನ್ ಇದಮ್ ಆಬಭಾಷೆ ॥

**ಅರ್ಥ :-** **ಶಕ್ರಸುತಾತ್ಮಜೇನ** ಇಂದ್ರನ ಮಗನಾದ ವಾಲಿಯ ಕುಮಾರ ನಾದ ಅಂಗದನಿಂದ, **ಇತಿ** ಈ ರೀತಿಯಾಗಿ, **ಈರಿತೇ** ಹೇಳಲ್ಪಡುತ್ತಿರಲು, **ಜಾಂಬವನ್ಮುಖಾಃ** ಜಾಂಬವಂತನೇ ಮೊದಲಾಗಿ ಉಳ್ಳ, **ಸರ್ವೇ** ಎಲ್ಲರೂ, **ಸಹ** ಮಿಲಿತರಾಗಿ, **ತಥೇತಿ** ನೀನು ಹೇಳಿದ ಹಾಗೆಯೇ ಆಗಲೆಂದು, **ಊಚುಃ** ಹೇಳಿದರು, **ಅಥ** ಕಪಿಗಳ ವಿಚಾರಾನಂತರ, **ಹನೂಮಾನ್** ಹನುಮಂತನು, **ತೇಷಾಂ** ಈ ಅಂಗದಾದಿ ಕಪಿಗಳ, **ಐಕಮತ್ಯಂ** ಏಕಾಭಿಪ್ರಾಯವನ್ನು, **ದೃಷ್ಟ್ವಾ** ನೋಡಿ, **ಇದಂ** ಈ ಮುಂದೆ ಹೇಳುವ ಮಾತನ್ನು, **ಆಬಭಾಷೇ** ಹೇಳಿದನು.

**ತಾತ್ಪರ್ಯ :** ಅಂಗದನ ಈ ಮಾತನ್ನು ಜಾಂಬವಂತನೇ ಮೊದಲಾದ ಎಲ್ಲ ಹಿರಿಯರೂ ಅನುಮೋದಿಸಿದರು. ಆಗ ಹನುಮಂತ ಅವರಿಗೆ ತಿಳಿಹೇಳಿದ. ॥ ೪೨॥

**ಹನುಮಂತನ ಸುಬೋಧನೆ**

**ವಿಜ್ಞಾತಮೇತದ್ಧಿ ಮಯಾಽಂಗದಸ್ಯ**
**ರಾಜ್ಯಾಯ ತಾರಾಭಿಹಿತಂ ಹಿ ವಾಕ್ಯಮ್ ।**
**ಸಾಧ್ಯಂ ನ ಚೈತನ್ನ ಹಿ ವಾಯುಸೂನೂ**
**ರಾಮಪ್ರತೀಪಂ ವಚನಂ ಸಹೇತ ॥ ೪೩ ॥**

ಪದಚ್ಛೇದ : ವಿಜ್ಞಾತಮ್ ಏತತ್ ಹಿ ಮಯಾ ಅಂಗದಸ್ಯ ರಾಜ್ಯಾಯ ತಾರಾಭಿಹಿತಂ ಹಿ ವಾಕ್ಯಮ್ । ಸಾಧ್ಯಂ ನ ಚ ಏತತ್ ನ ಹಿ ವಾಯುಸೂನುಃ ರಾಮಪ್ರತೀಪಂ ವಚನಂ ಸಹೇತ ॥

**ಅರ್ಥ** :- **ಮಯಾ** ನನ್ನಿಂದ, **ಅಂಗದಸ್ಯ** ಅಂಗದನಿಗೆ, **ರಾಜ್ಯಾಯ** ಸಾಮ್ರಾಜ್ಯ ಕೊಡಿಸಲು, **ತಾರಾಭಿಹಿತಂ** ತಾರನಿಂದ ಹೇಳಲ್ಪಟ್ಟ **ಏತದ್ವಾಕ್ಯಂ** ಈ ಮಾತು, **ವಿಜ್ಞಾತಂ ಹಿ** ತಿಳಿಯಲ್ಪಟ್ಟಿತಷ್ಟೇ, **ಹಿ** ಯಾವ ಕಾರಣದಿಂದ, **ವಾಯು ಸೂನುಃ** ವಾಯುದೇವರ ಮಗನಾದ ಹನುಮಂತನು, **ರಾಮಪ್ರತೀಪಂ** ರಾಮನಿಗೆ ವಿರುದ್ಧವಾದ, **ವಚನಂ** ಮಾತನ್ನು **ನ ಸಹೇತ** ಸಹಿಸಲಾರನೋ, **ತತಃ** ಆ ಕಾರಣದಿಂದ, **ಏತತ್** ತಾರನು ಹೇಳಿದ್ದು **ಸಾಧ್ಯಂ ನ** ಸಾಧ್ಯವಾಗಲಾರದು.

**ತಾತ್ಪರ್ಯ** :- ಅಂಗದನಿಗೆ ರಾಜ್ಯ ಕೊಡಿಸುವ ತಾರನ ಸಂಚನ್ನು ನಾನು ಅರ್ಥ ಮಾಡಿಕೊಳ್ಳಬಲ್ಲೆ. ನಾವು ವಾಪಸ್ಸು ಹೋಗದೇ ಇಲ್ಲೇ ಇದ್ದಾಗ ಸೀತೆ ದೊರಕಲಿಲ್ಲವೆಂಬ ಅಸಮಾಧಾನದಿಂದ ರಾಮ ಸಿಟ್ಟಿಗೆದ್ದು ಮಾತಿನಂತೆ ನಡೆಯಲಾಗದ ಸುಗ್ರೀವನನ್ನು ಸಂಹರಿಸುವನು. ಅಂಗದನಿಗೆ ಸುಲಭವಾಗಿ ರಾಜ್ಯ ಸಿಗುವುದೆಂಬುದು ತಾರನ ಮಂತ್ರಾಲೋಚನೆ. ಖಂಡಿತ ಹೀಗಾಗದು. ಇದಲ್ಲದೆ, ಶ್ರೀರಾಮನಿಗೆ ವಿರೋಧಿಯಾದ ಯಾವ ನಿಲುವನ್ನೂ ಈ ಆಂಜನೇಯ ಸಹಿಸಲಾರನು. ॥ ೪೩॥

**ನ ಚಾಹಮಾಕ್ರಷ್ಟುಮುಪಾಯತೋऽಪಿ**
**ಶಕ್ಯಃ ಕಥಂಚಿತ್ ಸಕಲೈಃ ಸಮೇತೈಃ ।**
**ಸನ್ಮಾರ್ಗತೋ ನೈವ ಚ ರಾಘವಸ್ಯ**
**ದುರಂತಶಕ್ತೇರ್ಬಿಲಮಪ್ರಧೃಷ್ಯಮ್ ॥ ೪೪ ॥**

ಪದಚ್ಛೇದ : ನ ಚ ಅಹಮ್ ಆಕ್ರಷ್ಟುಮ್ ಉಪಾಯತಃ ಅಪಿ ಶಕ್ಯಃ ಕಥಂಚಿತ್ ಸಕಲೈಃ ಸಮೇತೈಃ । ಸನ್ಮಾರ್ಗತಃ ನ ಏವ ಚ ರಾಘವಸ್ಯ ದುರಂತಶಕ್ತೇಃ ಬಿಲಂ ಅಪ್ರಧೃಷ್ಯಮ್ ॥

**ಅರ್ಥ** :- **ಅಹಂ** ನಾನು, **ಸಮೇತೈಃ** ಮಿಲಿತರಾದ, **ಸಕಲೈಃ** ನಿಮ್ಮಿಂದ, **ಸನ್ಮಾರ್ಗತಃ** ರಾಮನಿಗೆ ಅನುಕೂಲವಾದ ಮಾರ್ಗದಿಂದ, **ಉಪಾಯತೋऽಪಿ**

ಸಾಮಾದಿ ಉಪಾಯಗಳಿಂದಲೂ, ಬಲದಿಂದಲೂ, **ಆಕ್ರಷ್ಟುಂ** ನಿಮ್ಮ ಬುದ್ಧಿಗೆ ಅನುಕೂಲವಾಗಿ ಸೆಳೆಯಲು, **ಕಥಂಚಿತ್** ಯಾವ ರೀತಿಯಿಂದಲೂ, **ಶಕ್ಯಃ** ಸಮರ್ಥನು, ನ ಆಗಲಾರೆನು, **ದುರಂತಶಕ್ತೇಃ** ಅಪರಿಮಿತ ಸಾಮರ್ಥ್ಯವುಳ್ಳ, **ರಾಘವಸ್ಯ** ರಾಮಚಂದ್ರನಿಗೆ, **ಬಿಲಂ** ಗುಹೆಯು, **ಅಪ್ರಧೃಷ್ಯಂ** ಅಗಮ್ಯವು, **ನೈವ** ಅಲ್ಲವೇ ಅಲ್ಲ.

**ತಾತ್ಪರ್ಯ :-** ನೀವೆಲ್ಲ ಒಟ್ಟಾಗಿ ಯತ್ನಿಸಿದರೂ ಯಾವುದೇ ಉಪಾಯ ಗಳಿಂದ ನನ್ನ ಬುದ್ಧಿಯನ್ನು ಬದಲಾಯಿಸಲಾರಿರಿ. ಅಮಿತ ವಿಕ್ರಮನಾದ ಶ್ರೀರಾಮನಿಗೆ ತಿಳಿಯದಂತೆ ನಾವಿರಲಾರೆವು. ಅವನು ಸಂಕಲ್ಪಿಸಿದರೆ ಈ ಗುಹೆಯನ್ನೇ ನಾಶ ಮಾಡಬಲ್ಲನು. ॥ ೪೪ ॥

**ವಚೋ ಮಮೈತದ್ಯದಿ ಚಾಽದರೇಣ**
**ಗ್ರಾಹ್ಯಂ ಭವೇದ್ವಸ್ತದತಿಪ್ರಿಯಂ ಮೇ ।**
**ನ ಚೇದ್ಬಲಾದಪ್ಯನಯೇ ಪ್ರವೃತ್ತಾನ್**
**ಪ್ರಶಾಸ್ಯ ಸನ್ಮಾರ್ಗಗತಾನ್ ಕರೋಮಿ ॥ ೪೫ ॥**

ಪದಚ್ಛೇದ : ವಚಃ ಮಮ ಏತತ್ ಯದಿ ಚ ಆದರೇಣ ಗ್ರಾಹ್ಯಂ ಭವೇತ್ ವಃ ತತ್ ಅತಿಪ್ರಿಯಂ ಮೇ । ನ ಚೇತ್ ಬಲಾತ್ ಅಪಿ ಅನಯೇ ಪ್ರವೃತ್ತಾನ್ ಪ್ರಶಾಸ್ಯ ಸನ್ಮಾರ್ಗಗತಾನ್ ಕರೋಮಿ ॥

**ಅರ್ಥ :-** **ಮಮ** ನನ್ನ, **ಏತದ್ವಚಃ** ಈ ಮಾತು, **ವಃ** ನಿಮಗೆ, **ಆದರೇಣ** ಪ್ರೀತಿಯಿಂದ, **ಗ್ರಾಹ್ಯಃ** ಅಂಗೀಕರಿಸಲು ಯೋಗ್ಯವು, **ಭವೇದ್ಯದಿ** ಆಗುವು ದಾದರೆ, **ಮೇ** ನನಗೆ, **ತತ್** ಆ ಅಂಗೀಕರಣವು, **ಅತಿಪ್ರಿಯಂ** ಅತ್ಯಂತ ಸಂತೋಷದಾಯಕವು, **ನ ಚೇತ್** ನನ್ನ ಮಾತನ್ನು ಸ್ವೀಕರಿಸದಿದ್ದರೆ, **ಅನಯೇ** ಅನ್ಯಾಯದಲ್ಲಿ, **ಪ್ರವೃತ್ತಾನ್** ಉದ್ಯುಕ್ತರಾದವರನ್ನು, **ಪ್ರಶಾಸ್ಯ** ಶಿಕ್ಷಿಸಿ, **ಬಲಾತ್** ಬಲಾತ್ಕಾರದಿಂದ, **ಸನ್ಮಾರ್ಗಗತಾನ್** ಸರಿಯಾದ ಮಾರ್ಗದಲ್ಲಿರತಕ್ಕವರನ್ನಾಗಿ, **ಕರೋಮಿ** ಮಾಡುತ್ತೇನೆ.

**ತಾತ್ಪರ್ಯ :** ನನ್ನ ಮಾತನ್ನು ಶ್ರದ್ಧೆಯಿಂದ ನೀವೆಲ್ಲ ಸ್ವೀಕರಿಸುವಿರಾದರೆ ನನಗೆ ತುಂಬ ಸಂತೋಷ. ಆದರೆ ನೈತಿಕಮಾರ್ಗವನ್ನು ಪರಿತ್ಯಜಿಸಿದಲ್ಲಿ ನಿಮ್ಮನ್ನೆಲ್ಲ ಬಲಾತ್ಕಾರದಿಂದ ನಾನು ಸರಿದಾರಿಗೆ ತರಬಲ್ಲೆ. ॥ ೪೫ ॥

**ಇತೀರಿತಂ ತತ್ ಪವನಾತ್ಮಜಸ್ಯ**
**ಶ್ರುತ್ವಾಽತಿಭೀತಾ ಧೃತಮೂಕಭಾವಾಃ ।**
**ಸರ್ವೇಽನುಜಗ್ಮುಸ್ತಮಥಾದ್ರಿಮುಖ್ಯಂ**
**ಮಾಹೇಂದ್ರಮಾಸೇದುರಗಾಧಬೋಧಾಃ ॥ ೪೬ ॥**

**ಪದಚ್ಛೇದ : ಇತಿ ಈರಿತಂ ತತ್ ಪವನಾತ್ಮಜಸ್ಯ ಶ್ರುತ್ವಾ ಅತಿಭೀತಾಃ ಧೃತಮೂಕಭಾವಾಃ । ಸರ್ವೇ ಅನುಜಗ್ಮುಃ ತಮ್ ಅಥ ಅದ್ರಿಮುಖ್ಯಂ ಮಾಹೇಂದ್ರಮ್ ಆಸೇದುಃ ಅಗಾಧಬೋಧಾಃ ॥**

**ಅರ್ಥ :-** **ಇತಿ** ಈ ರೀತಿಯಾಗಿ, **ಈರಿತಂ** ಹೇಳಲ್ಪಟ್ಟ, **ಪವನಾತ್ಮಜಸ್ಯ** ವಾಯುಪುತ್ರನಾದ ಹನುಮಂತನ, **ತತ್** ಆ ಮಾತನ್ನು **ಶ್ರುತ್ವಾ** ಕೇಳಿ, **ಅತಿಭೀತಾಃ** ಅತ್ಯಂತ ಭಯವನ್ನು ಹೊಂದಿದ, **ಧೃತಮೂಕಭಾವಾಃ** ಮೌನ ತಾಳಿದ, **ಸರ್ವೇ** ಎಲ್ಲಾ ಕಪಿಗಳು, **ತಂ** ಆ ಹನುಮಂತನನ್ನು, **ಅನುಜಗ್ಮುಃ** ಅನುಸರಿಸಿ ಹೋದರು, **ಅಥ** ವಿಂಧ್ಯಪರ್ವತವನ್ನು ಬಿಟ್ಟ ಮೇಲೆ, **ಅಗಾಧ ಬೋಧಾಃ** ಗಂಭೀರ ಜ್ಞಾನವುಳ್ಳ ಕಪಿಗಳು, **ಅದ್ರಿಮುಖ್ಯಂ** ಪರ್ವತಶ್ರೇಷ್ಠವಾದ ಮಹೇಂದ್ರವನ್ನು **ಆಸೇದುಃ** ಹೊಂದಿದರು.

**ತಾತ್ಪರ್ಯ :** ಹನುಮಂತನ ಮಾತನ್ನು ಕೇಳಿದ ಎಲ್ಲ ಕಪಿಗಳು ಭೀತರಾಗಿ ಮೂಕರಾದರು. ಹನುಮಂತನೊಡನೆ ಮಹೇಂದ್ರಪರ್ವತಕ್ಕೆ ಆಗಮಿಸಿದರು. ॥ ೪೬ ॥

### ಪ್ರಾಯೋಪವೇಶ

**ನಿರೀಕ್ಷ್ಯ ತೇ ಸಾಗರಮಪ್ರಧೃಷ್ಯ-**
**ಮಪಾರಮೇಯಂ ಸಹಸಾ ವಿಷಣ್ಣಾಃ ।**
**ದೃಢಂ ನಿರಾಶಾಶ್ಚ ಮತಿಂ ಹಿ ದಧ್ರುಃ**
**ಪ್ರಾಯೋಪವೇಶಾಯ ತಥಾ ಚ ಚಕ್ರುಃ ॥ ೪೭ ॥**

ಪದಚ್ಛೇದ : ನಿರೀಕ್ಷ್ಯ ತೇ ಸಾಗರಮ್ ಅಪ್ರಧೃಷ್ಯಮ್ ಅಪಾರಮೇಯಂ ಸಹಸಾ ವಿಷಣ್ಣಾಃ । ದೃಢಂ ನಿರಾಶಾಃ ಚ ಮತಿಂ ಹಿ ದಧ್ರುಃ ಪ್ರಾಯೋಪವೇಶಾಯ ತಥಾ ಚ ಚಕ್ರುಃ ॥

**ಅರ್ಥ :-** **ತೇ** ಆ ಕಪಿಗಳು, **ಸಹಸಾ** ಬಲದಿಂದ, **ಅಪಾರಮೇಯಂ** ಊಹೆಗೆ ನಿಲುಕದ, **ಅಪ್ರಧೃಷ್ಯಂ** ಆಚೆ ದಡಕ್ಕೆ ಹೋಗಲು ಅಶಕ್ಯವಾದ,

**ಸಾಗರಂ** ಸಮುದ್ರವನ್ನು **ನಿರೀಕ್ಷ್ಯ** ನೋಡಿ, **ವಿಷಣ್ಣಾಃ** ದುಃಖಿತರಾಗಿ, **ದೃಢಂ** ನಿಶ್ಚಯವಾಗಿಯೂ, **ನಿರಾಶಾಃ** ಅವಧಿ ದಾಟಿದ್ದರಿಂದ ಬದುಕುವ ಆಸೆಯನ್ನು ಬಿಟ್ಟವರಾಗಿ, **ಪ್ರಾಯೋಪವೇಶಾಯ** ನಿರಶನವ್ರತಕ್ಕೋಸ್ಕರ, **ಮತಿಂ** ಬುದ್ಧಿಯನ್ನು **ದಧ್ರುಃ** ಧರಿಸಿದರು, **ತಥಾ** ಹಾಗೆ, (ಮನಸ್ಸಿನಲ್ಲಿ ನಿಶ್ಚಯಿಸಿರುವರೋ ಹಾಗೆಯೇ ನಿರಶನಪೂರ್ವಕ ಮರಣಕ್ಕಾಗಿ ಕುಳಿತವರಾಗಿ ವ್ರತವನ್ನು) **ಚಕ್ರುಃ** ಮಾಡಿದರು.

**ತಾತ್ಪರ್ಯ :-** ದಾಟಲು ಸಾಧ್ಯವಿಲ್ಲದ ಅಪಾರವಾದ ಸಾಗರವನ್ನು ಕಂಡು ವಾನರರು ವಿಷಣ್ಣರಾದರು. ಇತ್ತ ಸಾಗರ ದಾಟಲಾಗದು, ಅತ್ತ ಸುಗ್ರೀವನ ಬಳಿ ಸಾಗುವಂತಿಲ್ಲ. ವಿಷಣ್ಣರಾದ ಕಪಿಗಳು 'ಪ್ರಾಯೋಪವೇಶ' (ಮರಣದ ತನಕ ಉಪವಾಸದಿಂದ ದೇವರ ಸ್ಮರಣೆ ಮಾಡುತ್ತ ಇರುವುದು) ವ್ರತವನ್ನು ಆರಂಭಿಸಿದರು ॥ ೪೭ ॥

### ರಾಮಕಥೆಯಾಲಿಸಿದ ಸಂಪಾತಿ

**ಪ್ರಾಯೋಪವಿಷ್ಟಾಶ್ಚ ಕಥಾಂ ವದಂತೋ**
**ರಾಮಸ್ಯ ಸಂಸಾರವಿಮುಕ್ತಿದಾತುಃ ।**
**ಜಟಾಯುಷಃ ಪಾತನಮೂಚಿರೇ ತತ್**
**ಸಂಪಾತಿನಾಮ್ನಃ ಶ್ರವಣಂ ಜಗಾಮ ॥ ೪೮ ॥**

ಪದಚ್ಛೇದ : ಪ್ರಾಯೋಪವಿಷ್ಟಾಃ ಚ ಕಥಾಂ ವದಂತಃ ರಾಮಸ್ಯ ಸಂಸಾರ ವಿಮುಕ್ತಿದಾತುಃ । ಜಟಾಯುಷಃ ಪಾತನಮ್ ಊಚಿರೇ ತತ್ ಸಂಪಾತಿನಾಮ್ನಃ ಶ್ರವಣಂ ಜಗಾಮ ॥

**ಅರ್ಥ :- ಪ್ರಾಯೋಪವಿಷ್ಟಾಃ** ನಿರಶನ ವ್ರತದಲ್ಲಿರತಕ್ಕ ಕಪಿಗಳು, **ಸಂಸಾರವಿಮುಕ್ತಿದಾತುಃ** ಸಂಸಾರವನ್ನು ಹೋಗಲಾಡಿಸಿ ಮೋಕ್ಷವನ್ನು ಕೊಡತಕ್ಕ **ರಾಮಸ್ಯ** ಶ್ರೀರಾಮನ, **ಕಥಾಂ** ಕಥೆಯನ್ನು, **ವದಂತಃ** ಹೇಳುವವರಾಗಿ, **ಜಟಾಯುಷಃ** ಜಟಾಯುವೆಂಬ ಪಕ್ಷಿಯ, **ಪಾತನಂ** ಪತನದವರೆಗಿನ ಕಥೆಯನ್ನು **ಊಚಿರೇ** ಹೇಳಿದರು, **ತತ್** ಜಟಾಯುವಿನ ಪತನದ ಸಂಗತಿಯು, **ಸಂಪಾತಿನಾಮ್ನಃ** ಸಂಪಾತಿಯೆಂಬ ಪಕ್ಷಿಯ, **ಶ್ರವಣಂ** ಕಿವಿಯನ್ನು, **ಜಗಾಮ** ತಲುಪಿತು.

**ತಾತ್ಪರ್ಯ :** ಪ್ರಾಯೋಪವೇಶಕ್ಕೆ ಕುಳಿತ ಕಪಿಗಳು ಮುಕ್ತಿಕಾರಣವಾದ ಶ್ರೀರಾಮನ ಮಂಗಲ ಕಥೆಯನ್ನು ಪರಸ್ಪರ ಹೇಳತೊಡಗಿದವು. ಕಪಿಗಳು

ಹೇಳಿದ, ಆರಂಭದಿಂದ ಜಟಾಯುವಿನ ಮರಣದ ವರೆಗಿನ ಕಥೆಯನ್ನು ವೃಕ್ಷದ ಮೇಲೆ ಕುಳಿತ 'ಸಂಪಾತಿ' ಎಂಬ ಪಕ್ಷಿ ಆಲಿಸಿತು. ॥ ೪೮ ॥

**ತಸ್ಯಾಗ್ರಜೋಽಸಾವರುಣಸ್ಯ ಸೂನುಃ**
**ಸೂರ್ಯಸ್ಯ ಬಿಂಬಂ ಸಹ ತೇನ ಯಾತಃ ।**
**ಜವಂ ಪರೀಕ್ಷನ್ನಥ ತಂ ಸುತಪ್ತಂ**
**ಗುಪ್ತ್ವಾ ಪತತ್ರಕ್ಷಯಮಾಪ್ಯ ಚಾಪತತ್ ॥ ೪೯ ॥**

**ಪದಚ್ಛೇದ : ತಸ್ಯ ಅಗ್ರಜಃ ಅಸೌ ಅರುಣಸ್ಯ ಸೂನುಃ ಸೂರ್ಯಸ್ಯ ಬಿಂಬಂ ಸಹ ತೇನ ಯಾತಃ । ಜವಂ ಪರೀಕ್ಷನ್ ಅಥ ತಂ ಸುತಪ್ತಂ ಗುಪ್ತ್ವಾ ಪತತ್ರಕ್ಷಯಮ್ ಆಪ್ಯ ಚ ಆಪತತ್ ॥**

**ಅರ್ಥ : ಅಸೌ** ಈ ಸಂಪಾತಿಯು, **ತಸ್ಯ** ಆ ಜಟಾಯುವಿನ, **ಅಗ್ರಜಃ** ಅಣ್ಣನು, **ಅರುಣಸ್ಯ** ಸೂರ್ಯನ ಸಾರಥಿಯಾದ ಅರುಣನ, **ಸೂನುಃ** ಮಗನು, **ಅಯಂ** ಈ ಸಂಪಾತಿಯು, **ಜವಂ** ವೇಗವನ್ನು, **ಪರೀಕ್ಷನ್** ಪರೀಕ್ಷಿಸತಕ್ಕವನಾಗಿ, **ತೇನ** ಆ ಜಟಾಯುವಿನಿಂದ, **ಸಹ** ಕೂಡಿಕೊಂಡು, **ಸೂರ್ಯಸ್ಯ** ರವಿಯ, **ಬಿಂಬಂ** ಮಂಡಲವನ್ನು, **ಯಾತಃ** ಹೋದನು, **ಅಥ** ಸೂರ್ಯನ ಮಂಡಲವನ್ನು ಹೊಂದಿದ ಮೇಲೆ, **ಸುತಪ್ತಂ** ಚೆನ್ನಾಗಿ ಸಂತಾಪವನ್ನು ಹೊಂದಿದ, **ತಂ** ಆ ಜಟಾಯುವನ್ನು, **ಗುಪ್ತ್ವಾ** ರಕ್ಷಿಸಿ, **ಪತತ್ರಕ್ಷಯಂ** ಬಿಸಿಲಿನಿಂದ ತನ್ನ ರೆಕ್ಕೆಗಳ ವಿನಾಶವನ್ನು, **ಆಪ್ಯ** ಹೊಂದಿ, **ಆಪತತ್** ಮಹೇಂದ್ರ ಪರ್ವತದಲ್ಲಿರುವ ಮರದ ಮೇಲೆ ಬಿದ್ದನು.

**ತಾತ್ಪರ್ಯ :-** ಜಟಾಯುವಿನ ಅಣ್ಣ ಸಂಪಾತಿ. ಅರುಣನ ಮಗ. ಈ ಸಹೋದರರು ವೇಗದಿಂದ ಸೂರ್ಯಮಂಡಲ ತಲುಪುವ ಸ್ಪರ್ಧೆಯಿಂದ ಆಗಸಕ್ಕೆ ಹಾರಿದರು. ಸೂರ್ಯ ಮಂಡಲದ ಹತ್ತಿರ ಬಂದಂತೆ ಆ ಬಿಸಿಲತಾಪವನ್ನು ಜಟಾಯುವಿಗೆ ತಾಳಲಾಗಲಿಲ್ಲ. ಅವನನ್ನು ರಕ್ಷಿಸಲು ಸಂಪಾತಿ ತನ್ನ ರೆಕ್ಕೆಗಳನ್ನು ಅವನ ಶರೀರದ ಮೇಲೆ ಆಚ್ಛಾದಿಸಿದ. ತಾಪ ತಾಳಲಾರದೆಯೇ ಸಂಪಾತಿಯ ರೆಕ್ಕೆಗಳು ಸುಟ್ಟು ಹೋದವು. ಅವನು ಧೊಪ್ಪನೆ ಈ ವಿಶಾಲವಾದ ಮರದ ಮೇಲೆ ಬಿದ್ದ. ॥ ೪೯॥

ಚೈತನ್ಯ ನೀಡಿದ ರಾಮಕಥೆ

**ಸ ದಗ್ಧಪಕ್ಷಃ ಸವಿತೃಪ್ರತಾಪಾತ್**
**ಶ್ರುತ್ವೈವ ರಾಮಸ್ಯ ಕಥಾಃ ಸಪಕ್ಷಃ ।**
**ಭೂತ್ವಾ ಪುನಶ್ಚಾಪಿ ಮೃತಿಂ ಜಟಾಯುಷಃ**
**ಶುಶ್ರಾವ ಪೃಷ್ಟ್ವಾ ಪುನರೇವ ಸಮ್ಯಕ್ ॥ ೫೦ ॥**

ಪದಚ್ಛೇದ : ಸಃ ದಗ್ಧಪಕ್ಷಃ ಸವಿತೃಪ್ರತಾಪಾತ್ ಶ್ರುತ್ವಾ ಏವ ರಾಮಸ್ಯ ಕಥಾಃ ಸಪಕ್ಷಃ । ಭೂತ್ವಾ ಪುನಃ ಚ ಅಪಿ ಮೃತಿಂ ಜಟಾಯುಷಃ ಶುಶ್ರಾವ ಪೃಷ್ಟ್ವಾ ಪುನಃ ಏವ ಸಮ್ಯಕ್ ॥

**ಅರ್ಥ :-** **ಸಃ** ಆ ಸಂಪಾತಿಯು, **ಸವಿತೃಪ್ರತಾಪಾತ್** ಸೂರ್ಯನ ಪ್ರಕೃಷ್ಟವಾದ ತೇಜಸ್ಸಿನಿಂದ, **ದಗ್ಧಪಕ್ಷಃ** ಸುಡಲ್ಪಟ್ಟ ರೆಕ್ಕೆಗಳುಳ್ಳವನಾಗಿ, **ರಾಮಸ್ಯ** ಶ್ರೀರಾಮನ, **ಕಥಾಃ** ಕಥೆಗಳನ್ನು, **ಸಮ್ಯಕ್** ಭಕ್ತಿಪೂರ್ವಕವಾಗಿ, **ಶ್ರುತ್ವೈವ** ಕೇಳಿಯೇ, **ಆಶು** ಬೇಗನೇ, **ಸಪಕ್ಷಃ** ರೆಕ್ಕೆಗಳುಳ್ಳವನು, **ಭೂತ್ವಾ** ಆಗಿ, **ಪುನಃ** ಮತ್ತೊಮ್ಮೆ, **ಪೃಷ್ಟ್ವಾ** ಕಪಿಗಳನ್ನು ಕೇಳಿ, **ಪುನರಪಿ** ರೆಕ್ಕೆಗಳನ್ನು ಹೊಂದಿದ ಮೇಲೆಯೂ ಕೂಡ, **ಜಟಾಯುಷಃ** ಜಟಾಯುವಿನ, **ಮೃತಿಂ** ಮರಣವನ್ನು, **ಶುಶ್ರಾವ** ಕೇಳಿದನು.

**ತಾತ್ಪರ್ಯ :-** ಸೂರ್ಯತಾಪದಿಂದ ಬಸವಳಿದು ರೆಕ್ಕೆ ಕಳೆದುಕೊಂಡ ಸಂಪಾತಿಗೆ ರಾಮಕಥಾಶ್ರವಣದಿಂದ ಮತ್ತೆ ರೆಕ್ಕೆಗಳು ಬೆಳೆದವು. ಮತ್ತೊಮ್ಮೆ ಜಟಾಯುವಿನ ಮರಣ ವಿವರ ಕೇಳಿದ ಸಂಪಾತಿ. ॥ ೫೦ ॥

**ಸ ರಾವಣಸ್ಯಾಥ ಗತಿಂ ಸುತೋಕ್ತಾಂ**
**ನಿವೇದ್ಯ ದೃಷ್ಟ್ವಾ ಜನಕಾತ್ಮಜಾಕೃತಿಮ್ ।**
**ಸ್ವಯಂ ತಥಾಽಶೋಕವನೇ ನಿಷಣ್ಣಾ-**
**ಮವೋಚದೇಭ್ಯೋ ಹರಿಪುಂಗವೇಭ್ಯಃ ॥ ೫೧ ॥**

ಪದಚ್ಛೇದ : ಸಃ ರಾವಣಸ್ಯ ಅಥ ಗತಿಂ ಸುತೋಕ್ತಾಂ ನಿವೇದ್ಯ ದೃಷ್ಟ್ವಾ ಜನಕಾತ್ಮಜಾಕೃತಿಮ್ । ಸ್ವಯಂ ತಥಾ ಅಶೋಕವನೇ ನಿಷಣ್ಣಾಮ್ ಅವೋಚತ್ ಏಭ್ಯಃ ಹರಿಪುಂಗವೇಭ್ಯಃ ॥

**ಅರ್ಥ** :- **ಅಥ** ಶ್ರೀರಾಮನ ಕಥೆಯನ್ನು ಕೇಳಿದ ನಂತರ, **ಸಃ** ಆ ಸಂಪಾತಿಯು, **ಸುತೋಕ್ತಾಂ** ತನ್ನ ಮಗನಾದ ಸುಪಾರ್ಶ್ವನಿಂದ ಹೇಳಲ್ಪಟ್ಟ **ರಾವಣಸ್ಯ** ರಾವಣನ, **ಗತಿಂ** ಸೀತೆಯನ್ನು ಈ ಮಾರ್ಗವಾಗಿ ರಾವಣನು ಕೊಂಡು ಹೋಗಿದ್ದಾನೆಂದು, **ನಿವೇದ್ಯ** ಹೇಳಿ, **ತಥಾ** ಹಾಗೆಯೇ, **ಸ್ವಯಂ ಚ** ತಾನೂ ಕೂಡ, **ಅಶೋಕವನೇ** ಅಶೋಕವನದಲ್ಲಿ, **ನಿಷಣ್ಣಾಂ** ಕುಳಿತಿರುವ, **ಜನಕಾತ್ಮಜಾಕೃತಿಂ** ಜನಕರಾಜನ ಮಗಳಾದ ಸೀತಾದೇವಿಯನ್ನು, **ದೃಷ್ಟ್ವಾ** ಮಾಹೇಂದ್ರಪರ್ವತದಲ್ಲಿ ನಿಂತುಕೊಂಡೇ ನೋಡಿ, **ಏಭ್ಯಃ ಹರಿಪುಂಗವೇಭ್ಯಃ** ಈ ಅಂಗದಾದಿ ಕಪಿಶ್ರೇಷ್ಠರಿಗೆ, **ಅವೋಚತ್** ಹೇಳಿದನು.

**ತಾತ್ಪರ್ಯ** :- ಅನಂತರ ಸಂಪಾತಿಯು ತನ್ನ ಮಗ ಸುಪಾರ್ಶ್ವ ತಿಳಿಸಿದಂತೆ ರಾವಣ ಈ ಮಾರ್ಗವಾಗಿ ತೆರಳಿದ್ದನ್ನು ವಿವರಿಸಿದ. ತಾನು ಎತ್ತರದಿಂದ ಹಾರಿ ಅಶೋಕವನದಲ್ಲಿರುವ ಸೀತೆಯನ್ನು (ಸೀತಾಕೃತಿ) ಕಂಡು ಅಲ್ಲಿರುವುದನ್ನು ನಿಶ್ಚಯಿಸಿ ಹೇಳಿದ. ॥ ೫೧ ॥

**ಕಪಿಬಲ ನಿಷ್ಕರ್ಷ**

**ತತಸ್ತು ತೇ ಬ್ರಹ್ಮಸುತೇನ ಪೃಷ್ಟಾ**
**ನ್ಯವೇದಯನ್ನಾತ್ಮಬಲಂ ಪೃಥಕ್ ಪೃಥಕ್ ।**
**ದಶೈವ ಚಾರಭ್ಯ ದಶೋತ್ತರಸ್ಯ**
**ಕ್ರಮಾತ್ ಪಥೋ ಯೋಜನತೋಽಭಿಯಾನೇ ॥ ೫೨ ॥**

ಪದಚ್ಛೇದ : ತತಃ ತು ತೇ ಬ್ರಹ್ಮಸುತೇನ ಪೃಷ್ಟಾಃ ನ್ಯವೇದಯನ್ ಆತ್ಮಬಲಂ ಪೃಥಕ್ ಪೃಥಕ್ । ದಶ ಏವ ಚ ಆರಭ್ಯ ದಶೋತ್ತರಸ್ಯ ಕ್ರಮಾತ್ ಪಥಃ ಯೋಜನತಃ ಅಭಿಯಾನೇ ॥

**ಅರ್ಥ** : **ತತಃ** ಸಂಪಾತಿಯ ವಾಕ್ಯವನ್ನು ಕೇಳಿದ ಮೇಲೆ, **ಬ್ರಹ್ಮಸುತೇನ** ಬ್ರಹ್ಮದೇವರ ಮಗನಾದ ಜಾಂಬವಂತನಿಂದ, **ಪೃಷ್ಟಾಃ** ಲಂಕೆಯನ್ನು ಹಾರುವ ವಿಷಯದಲ್ಲಿ ಬಲವನ್ನು ಕೇಳಲ್ಪಟ್ಟ **ತೇ** ಆ ಕಪಿಗಳು, **ದಶ ಯೋಜನತಃ** ಹತ್ತು ಯೋಜನಗಳನ್ನು, **ಆರಭ್ಯೈವ** ಆರಂಭಿಸಿಯೇ, **ಕ್ರಮಾತ್** ಕ್ರಮದಿಂದ, **ದಶೋತ್ತರಸ್ಯ** ಹತ್ತು ಹತ್ತು ಯೋಜನಗಳು ಹೆಚ್ಚಾಗಿ ಉಳ್ಳ, **ಪಥಃ** ಮಾರ್ಗದ, **ಅಭಿಯಾನೇ** ದಾಟುವುದರಲ್ಲಿ, **ಆತ್ಮಬಲಂ** ತಮ್ಮ ಸಾಮರ್ಥ್ಯವನ್ನು, **ಪೃಥಕ್ ಪೃಥಕ್** ಪ್ರತ್ಯೇಕ ಪ್ರತ್ಯೇಕವಾಗಿ, **ನ್ಯವೇದಯನ್** ತಿಳಿಸಿದರು.

**ತಾತ್ಪರ್ಯ** : ಅನಂತರ ಚತುರ್ಮುಖನ ಆವೇಶವುಳ್ಳ ಜಾಂಬವಂತನು ಪ್ರಶ್ನಿಸಿದನುನೂರು ಯೋಜನ ವಿಸ್ತೀರ್ಣವಾದ ಈ ಸಾಗರವನ್ನು ಯಾರು ದಾಟಬಲ್ಲರು? ಎಷ್ಟೆಷ್ಟು ಯೋಜನ ಹಾರುವ ಸಾಮರ್ಥ್ಯ ನಿಮಗಿದೆ ? ಆಗ ಕಪಿಗಳೆಲ್ಲ ಹತ್ತು ಯೋಜನದಿಂದ ಆರಂಭಿಸಿ ಹತ್ತನ್ನು ಹೆಚ್ಚಿಸುತ್ತ ತಮ್ಮ ತಮ್ಮ ಬಲವನ್ನು ವಿವರಿಸಿದವು. ॥ ೫೨॥

**ಸನೀಲಮೈಂದದ್ವಿವಿದಾಃ ಸತಾರಾಃ**
**ಸರ್ವೇಽಪ್ಯಶೀತ್ಯಾಃ ಪರತೋ ನ ಶಕ್ತಾಃ ।**
**ಗಂತುಂ ಯದಾಽಥಾತ್ಮಬಲಂ ಸ ಜಾಂಬವಾನ್**
**ಜಗಾದ ತಸ್ಮಾತ್ ಪುನರಷ್ಟಮಾಂಶಮ್ ॥ ೫೩ ॥**

ಪದಚ್ಛೇದ : ಸನೀಲಮೈಂದದ್ವಿವಿದಾಃ ಸತಾರಾಃ ಸರ್ವೇ ಅಪಿ ಅಶೀತ್ಯಾಃ ಪರತಃ ನ ಶಕ್ತಾಃ । ಗಂತುಂ ಯದಾ ಅಥ ಆತ್ಮಬಲಂ ಸ ಜಾಂಬವಾನ್ ಜಗಾದ ತಸ್ಮಾತ್ ಪುನಃ ಅಷ್ಟಮಾಂಶಮ್ ॥

**ಅರ್ಥ** :-**ಸನೀಲಮೈಂದದ್ವಿವಿದಾಃ** ನೀಲ, ಮೈಂದ, ವಿವಿದರಿಂದ ಕೂಡಿದ, **ಸತಾರಾಃ** ತಾರನೆಂಬ ಕಪಿಯಿಂದ ಕೂಡಿದ, **ಸರ್ವೇಪಿ** ಎಲ್ಲಾ ಕಪಿಗಳೂ ಕೂಡ, **ಅಶೀತ್ಯಾಃ** ಎಂಭತ್ತು ಯೋಜನಗಳ ದೆಸೆಯಿಂದ, **ಪರತಃ** ಮುಂದೆ, **ಗಂತುಂ** ಹೋಗಲು, **ಯದಾ** ಯಾವಾಗ, **ನ ಶಕ್ತಾಃ** ಸಮರ್ಥರಾಗಲಿಲ್ಲವೋ, **ಅಥ** ಅನಂತರ, **ತದಾ** ಆಗ, **ಸಃ ಜಾಂಬವಾನ್** ಮೊದಲು ಯಾವನು ಬಲವನ್ನು ಪ್ರಶ್ನೆ ಮಾಡಿರುವನೋ ಆ ಜಾಂಬವಂತನು, **ತಸ್ಮಾತ್** ಎಂಭತ್ತು ಯೋಜನ ಪರಿಮಾಣ ದೆಸೆಯಿಂದ, **ಪುನಃ** ಹೆಚ್ಚಾದ, **ಅಷ್ಟಮಾಂಶಂ** ಎಂಟನೇ ಒಂದು ಅಂಶ ಅಂದರೆ ಹತ್ತು ಯೋಜನಗಳಿಂದ ಹೆಚ್ಚಾದ, **ಆತ್ಮಬಲಂ** ತನ್ನ ಸಾಮರ್ಥ್ಯ ವನ್ನು, **ಜಗಾದ** ಹೇಳಿದನು.

**ತಾತ್ಪರ್ಯ** :- ನೀಲ-ಮೈಂದ-ವಿವಿದ-ತಾರನೇ ಮೊದಲಾದ ಕಪಿಗಳು ಎಂಭತ್ತು ಯೋಜನಕ್ಕಿಂತ ಹೆಚ್ಚು ಹಾರಲಾರೆವೆಂದರು. ಜಾಂಬವಂತ ನಾನು ಗರಿಷ್ಠ ತೊಂಬತ್ತು ಯೋಜನ ಹಾರಬಲ್ಲೆ ಎಂದ. ॥ ೫೩ ॥

**ಬಲೇರ್ಯದಾ ವಿಷ್ಣುರವಾಪ ಲೋಕಾಂ-**
**ಸ್ತ್ರಿಭಿಃ ಕ್ರಮೈರ್ನಂದಿರವಂ ಪ್ರಕುರ್ವತಾ ।**
**ತದಾ ಮಯಾ ಭ್ರಾಂತಮಿದಂ ಜಗತ್ರಯಂ**
**ಸವೇದನಂ ಜಾನು ಮಮಾಸ ಮೇರುತಃ ॥ ೫೪ ॥**

**ಪದಚ್ಛೇದ : ಬಲೇಃ ಯದಾ ವಿಷ್ಣುಃ ಅವಾಪ ಲೋಕಾನ್ ತ್ರಿಭಿಃ ಕ್ರಮೈಃ ನಂದಿರವಂ ಪ್ರಕುರ್ವತಾ । ತದಾ ಮಯಾ ಭ್ರಾಂತಮ್ ಇದಂ ಜಗತ್ರಯಂ ಸವೇದನಂ ಜಾನು ಮಮ ಆಸ ಮೇರುತಃ ॥**

**ಅರ್ಥ :- ವಿಷ್ಣುಃ** ವಾಮನರೂಪಿ ಪರಮಾತ್ಮನು, **ಬಲೇಃ** ಪ್ರಹ್ಲಾದನ ಮೊಮ್ಮಗನಾದ ಬಲಿಚಕ್ರವರ್ತಿಯಿಂದ, **ಲೋಕಾನ್** ಭೂರಾದಿ ಲೋಕಗಳನ್ನು **ತ್ರಿಭಿಃ ಕ್ರಮೈಃ** ಮೂರು ಪಾದ ಅಳೆಯುವಿಕೆಯಿಂದ, **ಯದಾ ಅವಾಪ** ಯಾವಾಗ ಹೊಂದಿದನೋ, **ತದಾ** ಆಗ, **ನಂದಿರವಂ** ಸಂತೋಷ ಧ್ವನಿಯನ್ನು **ಪ್ರಕುರ್ವತಾ** ಮಾಡತಕ್ಕ, **ಮಯಾ** ನನ್ನಿಂದ, **ಇದಂ ಜಗತ್ರಯಂ** ಈ ಮೂರು ಲೋಕವು, **ಭ್ರಾಂತಂ** ಪ್ರದಕ್ಷಿಣೆ ಮಾಡಲ್ಪಟ್ಟಿತು, **ಮೇರುತಃ** ಮೇರು ಪರ್ವತಕ್ಕೆ ತಾಗಿದ್ದರಿಂದ, **ಮಮ** ನನ್ನ **ಜಾನು** ಮೊಣಕಾಲು, **ಸವೇದನಂ** ನೋವಿನಿಂದ ಕೂಡಿದ್ದು **ಆಸ** ಆಯಿತು.

**ತಾತ್ಪರ್ಯ :-** ವಿಷ್ಣು ದೇವಕಾರ್ಯ ಸಾಧಿಸಲು ವಾಮನನಾಗಿ ಅವತರಿಸಿ ಬಲಿಯ ಬಳಿ ಮೂರು ಪಾದ ಭೂಮಿ ಬೇಡಿದ. ಮೂರು ಪಾದಗಳ ಅಳತೆಯ ನೆಪದಿಂದ ಎಲ್ಲ ಲೋಕಗಳಲ್ಲಿ ವ್ಯಾಪಿಸಿ ನಿಂದ. ಎಲ್ಲ ನನ್ನದೇ ಎಂಬ ಎಚ್ಚರ ಮೂಡಿಸಿದ. ಅವನ ಮಹಿಮೆ ಕೊಂಡಾಡುತ್ತ ನಾನಾಗ ಮೂರು ಲೋಕಗಳ ಪ್ರದಕ್ಷಿಣೆ ಮಾಡಿದೆ. ಮೇರು ಪರ್ವತಕ್ಕೆ ಮಂಡಿ ತಗುಲಿ ಮೊಣಕಾಲು ಗಾಯವಾಯಿತು. ॥ ೫೪ ॥

**ಅತೋ ಜವೋ ಮೇ ನ ಹಿ ಪೂರ್ವಸಂಮಿತಃ**
**ಪುರಾ ತ್ವಹಂ ಷಣ್ಣವತಿಪ್ಲವೋಽಸ್ಮಿ ।**
**ತತಃ ಕುಮಾರೋಽಂಗದ ಆಹ ಚಾಸ್ಮಾ-**
**ಚ್ಛತಂ ಪ್ಲವೇಯಂ ನ ತತೋಽಭಿಜಾನೇ ॥ ೫೫ ॥**

**ಪದಚ್ಛೇದ : ಅತಃ ಜವಃ ಮೇ ನ ಹಿ ಪೂರ್ವಸಂಮಿತಃ ಪುರಾ ತು ಅಹಂ ಷಣ್ಣವತಿಪ್ಲವಃ ಅಸ್ಮಿ । ತತಃ ಕುಮಾರಃ ಅಂಗದಃ ಆಹ ಚ ಅಸ್ಮಾತ್ ಶತಂ ಪ್ಲವೇಯಂ ನ ತತಃ ಅಭಿಜಾನೇ ॥**

**ಅರ್ಥ :- ಅತಃ** ಆ ಕಾರಣದಿಂದ, **ಪೂರ್ವಸಮ್ಮತಃ** ಮೊದಲಿನ ವೇಗಕ್ಕೆ ಸದೃಶವಾದ, **ಜವಃ** ವೇಗವು, **ನ ಹಿ** ಇರುವುದಿಲ್ಲ, **ಅಹಂ** ನಾನು, **ಪುರಾ ತು** ಮೊದಲಾದರೂ, **ಷಣ್ಣವತಿಪ್ಲವಃ** ತೊಂಭತ್ತಾರು ಯೋಜನದವರೆಗೆ

ಹಾರತಕ್ಕವನು, **ಅಸ್ಮಿ** ಆಗಿರುತ್ತೇನೆ, **ತತಃ** ಜಾಂಬವಂತನ ನಂತರ, **ಕುಮಾರಃ** ಯುವರಾಜನಾದ, **ಅಂಗದಃ** ಅಂಗದನು, **ಅಹಂ** ನಾನು, **ಅಸ್ಮಾತ್** ಈ ಮಹೇಂದ್ರ ಪರ್ವತದಿಂದ, **ಶತಂ** ನೂರು ಯೋಜನದವರೆಗೆ, **ಪ್ಲವೇಯಂ** ಹಾರುವೆನು, **ತತಃ** ನೂರು ಯೋಜನ ಹಾರಿದ ನಂತರ, **ನಾಭಿಜಾನೇ** ರಾವಣನ ದುರ್ಗಮ ಸ್ಥಳವನ್ನು ಪ್ರವೇಶಿಸಲಿಕ್ಕೆ, ರಾಕ್ಷಸರಿಂದ ಯುದ್ಧವನ್ನು ಮಾಡಲು, ಸೀತೆಯನ್ನು ಹುಡುಕಿ ಮಾಡಬೇಕಾದ ಕರ್ತವ್ಯಗಳ ಬಗ್ಗೆ ಸಾಮರ್ಥ್ಯ ಇದೆಯೋ ಇಲ್ಲವೋ ಎಂಬುದನ್ನು ತಿಳಿಯಲಾರೆ, **ಇತಿ** ಎಂಬುದಾಗಿ, **ಆಹ** ಹೇಳಿದನು.

**ತಾತ್ಪರ್ಯ** :- ಹಳೆಯ ಗಾಯದ ವೇದನೆಯಿಂದ ನನ್ನ ವೇಗ ಕುಂಠಿತವಾಗಿದೆ. ಹಿಂದೆ ನಾನು ತೊಂಬತ್ತಾರು ಯೋಜನ ಹಾರಬಲ್ಲವನಾಗಿದ್ದೆ. ಆದರೀಗ ತೊಂಭತ್ತು ಯೋಜನ ಮಾತ್ರ ಹಾರಬಲ್ಲೆನೆಂದ ಜಾಂಬವಂತ. ಅಂಗದ ನುಡಿದ 'ನಾನು ನೂರು ಯೋಜನದ ಸಾಗರವನ್ನು ದಾಟಬಲ್ಲೆ. ಅನಂತರ ರಕ್ಕಸರನ್ನು ಎದುರಿಸುವ, ಸೀತಾಮಾತೆಗೆ ಸಂದೇಶ ತಲುಪಿಸುವ, ಬಲಿಷ್ಠ ರಾವಣನ ಜೊತೆ ಸಂಭಾಷಣೆ ನಡೆಸುವ ಕರ್ತವ್ಯಗಳನ್ನು ಸಮರ್ಪಕ ವಾಗಿ ನಿರ್ವಹಿಸುವ ಆತ್ಮವಿಶ್ವಾಸ ನನಗಿಲ್ಲ'. ॥ ೫೫ ॥

**ಆಪೂರಿತೇ ತೈಃ ಸಕಲೈಃ ಶತಸ್ಯ**
**ಗಮಾಗಮೇ ಶತ್ರುಬಲಂ ಚ ವೀಕ್ಷ್ಯ ।**
**ಸುದುರ್ಗಮತ್ವಂ ಚ ನಿಶಾಚರೇಶ-**
**ಪುರ್ಯಾಃ ಸ ಧಾತುಃ ಸುತ ಆಬಭಾಷೇ ॥ ೫೬ ॥**

ಪದಚ್ಛೇದ : ಆಪೂರಿತೇ ತೈಃ ಸಕಲೈಃ ಶತಸ್ಯ ಗಮಾಗಮೇ ಶತ್ರುಬಲಂ ಚ ವೀಕ್ಷ್ಯ । ಸುದುರ್ಗಮತ್ವಂ ಚ ನಿಶಾಚರೇಶಪುರ್ಯಾಃ ಸಃ ಧಾತುಃ ಸುತಃ ಆಬಭಾಷೆ ॥

**ಅರ್ಥ** :- **ಸಕಲೈಃ** ಎಲ್ಲಾ, **ತೈಃ** ಆ ಕಪಿಗಳಿಂದ, **ಶತಸ್ಯ** ನೂರು ಯೋಜನ ಮಾರ್ಗದ, **ಗಮಾಗಮಃ** ಗಮನ ಸಹಿತವಾದ ಆಗಮನವು, **ಆಪೂರಿತೇ** ವಿವರಿಸಲ್ಪಡುತ್ತಿರಲು, **ಧಾತುಃ** ಬ್ರಹ್ಮದೇವರ, **ಸುತಃ** ಮಗನಾದ, **ಸಃ** ಆ ಜಾಂಬ ವಂತನು, **ಶತ್ರುಬಲಂ** ರಾವಣನ ಸಾಮರ್ಥ್ಯವನ್ನು, **ಚ** ಹೋಗಿ ಬರುವಾಗ ಮಧ್ಯದಲ್ಲಿ ಶತ್ರುಗಳಿಂದುಂಟಾಗುವ ವಿಘ್ನವನ್ನು **ನಿಶಾಚರೇಶ ಪುರ್ಯಾಃ**

ರಾತ್ರಿಯಲ್ಲಿ ಸಂಚರಿಸುವ ರಾಕ್ಷಸರಿಗೆ ಸ್ವಾಮಿಯಾದ ರಾವಣನ ಪಟ್ಟಣವಾದ ಲಂಕೆಗೆ, **ಸುದುರ್ಗಮತ್ವಂ ಚ** ಪ್ರವೇಶದಲ್ಲಿರುವ ಸಮಸ್ಯೆಗಳನ್ನು **ವೀಕ್ಷ್ಯ** ನೋಡಿ, **ಅಬಭಾಷೇ** ಹೇಳಿದನು.

**ತಾತ್ಪರ್ಯ** : ಎಲ್ಲ ಕಪಿಗಳು ಸಾಗರ ದಾಟುವ ಬಗ್ಗೆ ತಮ್ಮ ಮಿತಿಯನ್ನು ತಿಳಿಸಿದಾಗ, ಬಹುದೂರ ಸಾಗಬೇಕಾದ ದಾರಿಯಲ್ಲಿ ಒದಗುವ ಸಮಸ್ಯೆಗಳು, ರಾವಣನ ಬಲ, ಲಂಕಾಪಟ್ಟಣದ ಪ್ರವೇಶದ ಕಾಠಿಣ್ಯ ಇತ್ಯಾದಿಗಳನ್ನು ವಿಮರ್ಶಿಸಿ ಜಾಂಬವಂತನು ಮಾತನಾಡಿದನು. ॥ ೫೬॥

**ಹಾರುವ ಹನುಮನೊಬ್ಬನೇ**

**ಅಯಂ ಹಿ ಗೃಧ್ರಃ ಶತಯೋಜನಂ ಗಿರಿಂ**
**ತ್ರಿಕೂಟಮಾಹೇತ ಉತಾತ್ರ ವಿಘ್ನಾಃ ।**
**ಭವೇಯುರನ್ಯೇಽಪಿ ತತೋ ಹನೂಮಾ-**
**ನೇಕಃ ಸಮರ್ಥೋ ನ ಪರೋಽಸ್ತಿ ಕಶ್ಚಿತ್ ॥ ೫೭ ॥**

**ಪದಚ್ಛೇದ : ಅಯಂ ಹಿ ಗೃಧ್ರಃ ಶತಯೋಜನಂ ಗಿರಿಂ ತ್ರಿಕೂಟಮ್ ಆಹ ಇತಃ ಉತ ಅತ್ರ ವಿಘ್ನಾಃ । ಭವೇಯುಃ ಅನ್ಯೇ ಅಪಿ ತತಃ ಹನೂಮಾನ್** ಏಕಃ ಸಮರ್ಥಃ ನ ಪರಃ **ಅಸ್ತಿ ಕಶ್ಚಿತ್** ॥

**ಅರ್ಥ :- ಅಯಂ** ಈ, **ಗೃಧ್ರಃ** ಈ ಸಂಪಾತಿ ಪಕ್ಷಿಯು, **ಶತಯೋಜನಂ** ನೂರು ಯೋಜನ ವ್ಯವಧಾನದಲ್ಲಿರತಕ್ಕ, **ತ್ರಿಕೂಟಗಿರಿಂ** ಲಂಕೆಗೆ ಆವರಕವಾಗಿರ ತಕ್ಕ ತ್ರಿಕೂಟವೆಂಬ ಪರ್ವತವನ್ನು **ಆಹ** ಹೇಳುತ್ತದೆ, **ಉತ** ಮತ್ತು, **ಇತಃ** ಇಲ್ಲಿಂದ, **ಅತ್ರ** ಗಮನ ವಿಷಯದಲ್ಲಿ **ವಿಘ್ನಾಃ** ತೊಂದರೆಗಳೂ, **ಭವೇಯುಃ** ಆಗುವುವು, **ತತಃ** ಆ ಕಾರಣದಿಂದ, **ಹನೂಮಾನ್ ಏಕಃ** ಹನುಮಂತ ನೊಬ್ಬನೇ, **ಸಮರ್ಥಃ** ಶಕ್ತನು, **ಪರಃ ಕಶ್ಚಿತ್** ಬೇರೆ ಯಾರೊಬ್ಬರೂ, **ನಾಸ್ತಿ** ಸಮರ್ಥನಿರುವುದಿಲ್ಲ.

**ತಾತ್ಪರ್ಯ** :- ಸಂಪಾತಿಯು ಲಂಕೆಗೆ ಸುತ್ತುವರಿದ ತ್ರಿಕೂಟಪರ್ವತವು ನೂರು ಯೋಜನ ದಾರಿಯ ನಂತರದಲ್ಲಿದೆ ಎಂದಿದೆ. ದಾರಿಯಲ್ಲಿ ಸಂಭವಿಸುವ ಸಮಸ್ಯೆಗಳನ್ನು ಪರಿಹರಿಸಿಕೊಂಡು ರಾಮಕಾರ್ಯವನ್ನು ನೆರವೇರಿಸಲು ಹನುಮಂತನೊಬ್ಬನೇ ಸಮರ್ಥನೆಂದು ಜಾಂಬವಂತನು ಹೇಳಿದನು. ॥ ೫೭ ॥

ಉಕ್ತ್ವಾ ಸ ಇತ್ಥಂ ಪುನರಾಹ ಸೂನುಂ
ಪ್ರಾಣಸ್ಯ ನಿಃಸೀಮಬಲಂ ಪ್ರಕಾಶಯನ್ ।
''ತ್ವಮೇಕ ಏವಾತ್ರ ಪರಂ ಸಮರ್ಥಃ
ಕುರುಷ್ವ ಚೈತತ್ ಪರಿಪಾಹಿ ವಾನರಾನ್'' ॥ ೫೮ ॥

ಪದಚ್ಛೇದ : ಉಕ್ತ್ವಾ ಸಃ ಇತ್ಥಂ ಪುನಃ ಆಹ ಸೂನುಂ ಪ್ರಾಣಸ್ಯ ನಿಃಸೀಮಬಲಂ ಪ್ರಕಾಶಯನ್ । ತ್ವಮ್ ಏಕಃ ಏವ ಅತ್ರ ಪರಂ ಸಮರ್ಥಃ ಕುರುಷ್ವ ಚ ಏತತ್ ಪರಿಪಾಹಿ ವಾನರಾನ್' ॥

**ಅರ್ಥ** :- ಸಃ ಆ ಜಾಂಬವಂತನು, ಇತ್ಥಂ ಈ ರೀತಿಯಾಗಿ, **ಉಕ್ತ್ವಾ** ಹೇಳಿ, **ಪುನಃ** ಮತ್ತು, **ಪ್ರಾಣಸ್ಯ** ವಾಯುದೇವನ, **ಸೂನುಂ** ಮಗನಾದ ಹನುಮಂತನ, **ನಿಸ್ಸೀಮಬಲಂ** ಅಮಿತಶಕ್ತಿಯನ್ನು **ಪ್ರಕಾಶಯನ್** ಪ್ರಕಾಶ ಪಡಿಸುವವನಾಗಿ, **ಅತ್ರ** ಈ ಸೀತೆಯನ್ನು ಹುಡುಕುವ ಕೆಸಲದಲ್ಲಿ, **ತ್ವಮೇಕ ಏವ** ನೀನೊಬ್ಬನೇ, **ಪರಂ ಸಮರ್ಥಃ** ಅತ್ಯಂತ ಸಮರ್ಥನು, **ಏತತ್** ಈ ಕಾರ್ಯವನ್ನು **ಕುರುಷ್ವ** ಮಾಡು, **ವಾನರಾನ್** ಕಪಿಗಳನ್ನು **ಪರಿಪಾಹಿ** ರಕ್ಷಿಸು, **ಇತಿ** ಹೀಗೆ, **ಆಹ** ಹೇಳಿದನು.

**ತಾತ್ಪರ್ಯ** : ಹೀಗೆ ನುಡಿದ ಜಾಂಬವಂತನು ಅಮಿತ ಬಲಶಾಲಿಯಾದ ಪ್ರಾಣಸುತನಾದ ಆಂಜನೇಯನ ಸಾಮರ್ಥ್ಯವನ್ನು ಅರಿತವನಾಗಿ ಮಾತನಾಡಿದನು 'ಸೀತೆಯನ್ನು ಹುಡುಕುವ ಕಾರ್ಯದಲ್ಲಿ ನೀನೊಬ್ಬನೇ ಸಮರ್ಥನು. ನಿನ್ನಿಂದ ಸಾಗರತರಣ, ರಾಮಸಂದೇಶ ಶ್ರಾವಣಾದಿ ಕಾರ್ಯಗಳು ನಡೆಯಬೇಕು. ನಿನ್ನ ಸಮರ್ಥ ಯತ್ನದಿಂದ ಕಪಿಗಳಿಗೆಲ್ಲ ಪ್ರಾಣದಾನ ಮಾಡಬೇಕು.' ॥ ೫೮ ॥

ಇತೀರಿತೋಽಸೌ ಹನುಮಾನ್ ನಿಜೇಪ್ಸಿತಂ
ತೇಷಾಮಶಕ್ತಿಂ ಪ್ರಕಟಾಂ ವಿಧಾಯ ।
ಅವರ್ಧತಾಶು ಪ್ರವಿಚಿಂತ್ಯ ರಾಮಂ
ಸುಪೂರ್ಣಶಕ್ತಿಂ ಚರಿತೋಸ್ತದಾಜ್ಞಾಮ್ ॥ ೫೯ ॥

ಪದಚ್ಛೇದ : ಇತಿ ಈರಿತಃ ಅಸೌ ಹನುಮಾನ್ ನಿಜೇಪ್ಸಿತಂ ತೇಷಾಂ ಅಶಕ್ತಿಂ ಪ್ರಕಟಾಂ ವಿಧಾಯ । ಅವರ್ಧತ ಆಶು ಪ್ರವಿಚಿಂತ್ಯ ರಾಮಂ ಸುಪೂರ್ಣಶಕ್ತಿಂ ಚರಿತೋಃ ತದಾಜ್ಞಾಮ್ ॥

**ಅರ್ಥ** : **ಇತಿ** ಈ ರೀತಿಯಾಗಿ, **ನಿಜೇಪ್ಸಿತಂ** ತನಗೆ ಇಷ್ಟವಾದದ್ದನ್ನು **ಈರಿತಃ** ಮಾಡು ಎಂಬುದಾಗಿ ಹೇಳಿಸಿಕೊಳ್ಳಲ್ಪಟ್ಟ **ಅಸೌ** ಹನುಮಾನ್ ಈ ಹನುಮಂತನು, **ತೇಷಾಂ** ಆ ಕಪಿಗಳಿಗೆ, **ಅಶಕ್ತಿಂ** ಸಮುದ್ರ ದಾಟುವುದರಲ್ಲಿ ಅಸಾಮರ್ಥ್ಯವನ್ನು **ಪ್ರಕಟಾಂ** ಸ್ಪಷ್ಟವಾಗಿ, **ವಿಧಾಯ** ತೋರಿಸಿ, **ಸುಪೂರ್ಣಶಕ್ತಿಂ** ಅನಂತ ಶಕ್ತಿಯುಳ್ಳ, **ರಾಮಂ** ಶ್ರೀರಾಮಚಂದ್ರನನ್ನು **ಪ್ರವಿಚಿಂತ್ಯ** ಧ್ಯಾನ ಮಾಡಿ, **ತದಾಜ್ಞಾಂ** ಆ ರಾಮನ ಅಪ್ಪಣೆಯನ್ನು **ಚರಿತೋಃ** ಮಾಡುವುದಕ್ಕೋಸ್ಕರ, **ಆಶು** ಬೇಗನೆ, **ಅವರ್ಧತ** ಬೆಳೆದನು.

**ತಾತ್ಪರ್ಯ** :- ಹೀಗೆ ಸಾಗರತರಣ (ದಾಟುವ) ಕಾರ್ಯಕ್ಕೆ ಪ್ರಚೋದಿತನಾದ ಹನುಮಂತನು, ಉಳಿದವರಿಗೆ ಇದು ಅಸಾಧ್ಯವೆಂದು ಮನಗಂಡು ಅನಂತ ಶಕ್ತಿಸಂಪನ್ನನಾದ ಶ್ರೀರಾಮನನ್ನು ಧ್ಯಾನಿಸಿ, ಅವನ ಆಜ್ಞೆಯನ್ನು ಪಾಲಿಸುವ ಶ್ರದ್ಧೆಯಿಂದ ಬೃಹದ್‌ಗಾತ್ರನಾದನು. (ದೊಡ್ಡದಾದ ಶರೀರವನ್ನು ಧರಿಸಿದನು) ॥ ೫೯॥

॥ ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ
ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯೇ
ಷಷ್ಠೋಽಧ್ಯಾಯಃ ॥

# ಅಧ್ಯಾಯ - 7

## ರಾಮನಿಗೆ ನಮನ-ಲಂಕೆಗೆ ಪಯಣ

**ರಾಮಾಯ ಶಾಶ್ವತಸುವಿಸ್ತೃತಷಡ್ಗುಣಾಯ**
**ಸರ್ವೇಶ್ವರಾಯ ಬಲವೀರ್ಯ ಮಹಾರ್ಣವಾಯ ।**
**ನತ್ವಾ ಲಿಲಂಘಯಿಷುರರ್ಣವಮುತ್ಪಪಾತ**
**ನಿಷ್ಪೀಡ್ಯ ತಂ ಗಿರಿವರಂ ಪವನಸ್ಯ ಸೂನುಃ ॥ ೧ ॥**

ಪದಚ್ಛೇದ : ರಾಮಾಯ ಶಾಶ್ವತಸುವಿಸ್ತೃತಷಡ್ಗುಣಾಯ ಸರ್ವೇಶ್ವರಾಯ ಬಲವೀರ್ಯಮಹಾರ್ಣವಾಯ । ನತ್ವಾ ಲಿಲಂಘಯಿಷುಃ ಅರ್ಣವಂ ಉತ್ಪಪಾತ ನಿಷ್ಪೀಡ್ಯ ತಂ ಗಿರಿವರಂ ಪವನಸ್ಯ ಸೂನುಃ ॥

**ಅರ್ಥ** :- **ಪವನಸ್ಯ** ಶ್ರೀವಾಯುದೇವರ, **ಸೂನುಃ** ಅಂಶಸಂಭೂತನಾದ ಶ್ರೀ ಹನುಮಂತದೇವನು, **ಅರ್ಣವಂ** ಸಮುದ್ರವನ್ನು **ಲಿಲಂಘಯಿಷುಃ** ದಾಟಲು ಇಚ್ಛಿಸಿದವನಾಗಿ, **ಶಾಶ್ವತಸುವಿಸ್ತೃತಷಡ್ಗುಣಾಯ, ಶಾಶ್ವತ** ಯಾವಾಗಲೂ ಒಂದೇ ರೀತಿಯಾಗಿರತಕ್ಕ, **ಸುವಿಸ್ತೃತ** ಅನಂತವಾದ, **ಷಡ್ಗುಣಾಯ** ಐಶ್ವರ್ಯ, ವೀರ್ಯ, ಯಶಸ್ಸು, ಶ್ರೀ, ಜ್ಞಾನ, ವೈರಾಗ್ಯಾದಿ, ಗುಣಪೂರ್ಣನಾದ, **ಸರ್ವೇಶ್ವರಾಯ** ಸಕಲ ಬ್ರಹ್ಮಾಂಡ ನಿಯಾಮಕನಾದ, **ಬಲವೀರ್ಯ ಮಹಾರ್ಣವಾಯ** ಬಲ ಪರಾಕ್ರಮಾದಿಗಳಿಂದ ಸಮುದ್ರದಂತೆ ಇರತಕ್ಕ, **ರಾಮಾಯ** ಶ್ರೀರಾಮದೇವರಿಗೆ, **ನತ್ವಾ** ನಮಸ್ಕರಿಸಿ, **ತಂ** ಆ ಪ್ರಸಿದ್ಧವಾದ, **ಗಿರಿವರಂ** ಮಹೇಂದ್ರಪರ್ವತವನ್ನು **ನಿಷ್ಪೀಡ್ಯ** ಮೆಟ್ಟಿ **ಉತ್ಪಪಾತ** ಹಾರಿದನು.

**ತಾತ್ಪರ್ಯ** :- ಎಲ್ಲ ಕಾಲದಲ್ಲಿ ಏಕರೂಪನಾದ ಅನಂತಸುಗುಣಧಾಮನಾದ ಸರ್ವೇಶ್ವರನೂ ಆದ ಶ್ರೀರಾಮನಿಗೆ ನಮಿಸಿ, ಸಾಗರ ಲಂಘಿಸ ಬಯಸಿದ ಆಂಜನೇಯನು ಶ್ರೇಷ್ಠವಾದ ಮಹೇಂದ್ರಪರ್ವತವನ್ನು ಮೆಟ್ಟಿ ಆಕಾಶಕ್ಕೆ ಹಾರಿದನು. ॥ ೧ ॥

**ಚುಕ್ಷೋಭ ವಾರಿಧಿರನುಪ್ರಯಯೌ ಚ ಶೀಘ್ರಂ**
**ಯಾದೋಗಣೈಃ ಸಹ ತದೀಯಬಲಾಭಿಕೃಷ್ಟಃ ।**
**ವೃಕ್ಷಾಶ್ಚ ಪರ್ವತಗತಾಃ ಪವನೇನ ಪೂರ್ವಂ**
**ಕ್ಷಿಪ್ತೋಽರ್ಣವೇ ಗಿರಿರುದಾಗಮದಸ್ಯ ಹೇತೋಃ ॥ ೨ ॥**

ಪದಚ್ಛೇದ : ಚುಕ್ಷೋಭ ವಾರಿಧಿಃ ಅನುಪ್ರಯಯೌ ಚ ಶೀಘ್ರಂ ಯಾದೋಗಣೈಃ ಸಹ ತದೀಯಬಲಾಭಿಕೃಷ್ಟಃ । ವೃಕ್ಷಾಃ ಚ ಪರ್ವತಗತಾಃ ಪವನೇನ ಪೂರ್ವಂ ಕ್ಷಿಪ್ತಃ ಅರ್ಣವೇ ಗಿರಿಃ ಉದಾಗಮತ್ ಅಸ್ಯ ಹೇತೋಃ ॥

**ಅರ್ಥ** :- **ತದೀಯ ಬಲಾಭಿಕೃಷ್ಟಃ** ಆ ಹನುಮಂತನ ಬಲದಿಂದ ಆಕೃಷ್ಟವಾದ, **ವಾರಿಧಿಃ** ಸಮುದ್ರವು, **ಯಾದೋಗಣೈಃ** ಜಲಚರ ಪ್ರಾಣಿಗಳ ಸಮುದಾಯದಿಂದ, **ಸಹ** ಕೂಡಿಕೊಂಡು, **ಶೀಘ್ರಂ** ಕೂಡಲೇ, **ಅನುಪ್ರಯಯೌ ಚ** ಹನುಮಂತನನ್ನು ಅನುಸರಿಸಿ ಹೋಯಿತು ಮತ್ತು, **ಚುಕ್ಷೋಭ** ಅಲ್ಲೋಲ ಕಲ್ಲೋಲವಾಯಿತು, **ಪರ್ವತಗತಾಃ** ಮಹೇಂದ್ರ ಪರ್ವತದಲ್ಲಿ ಇರತಕ್ಕ, **ವೃಕ್ಷಾಶ್ಚ** ವೃಕ್ಷಗಳೂ ಸಹ, **ಅನುಯಯುಃ** ಹನುಮಂತನನ್ನು ಅನುಸರಿಸಿದವು, **ಪೂರ್ವಂ** ಹಿಂದೆ, **ಪವನೇನ** ಹನುಮಂತನಿಂದ, **ಅರ್ಣವೇ** ಸಮುದ್ರದಲ್ಲಿ, **ಕ್ಷಿಪ್ತಃ** ರಕ್ಷಿಸಲ್ಪಟ್ಟಂತಹ, **ಗಿರಿಃ** ಮೈನಾಕ ಪರ್ವತವು, **ಅಸ್ಯ** ಈ ಹನುಮಂತನ, **ಹೇತೋಃ** ಶ್ರಮಪರಿಹಾರಕ್ಕಾಗಿ, **ಉದಾಗಮತ್** ಮೇಲೆ ಬಂದಿತು.

**ತಾತ್ಪರ್ಯ** :- ಹನುಮಂತನ ವೇಗದಿಂದ ಸೆಳೆಯಲ್ಪಟ್ಟ ಸಾಗರವು ಜಲಚರಪ್ರಾಣಿಗಳೊಂದಿಗೆ ಹಿಂಬಾಲಿಸಿತು. ಸಾಗರ ಅಲ್ಲೋಲ ಕಲ್ಲೋಲ ವಾಯಿತು. ಹನುಮಂತ ಹಾರುವಾಗ ಪರ್ವತವನ್ನು ಮೆಟ್ಟಿದ ಕಾರಣ ಹಲವಾರು ಮರಗಳು ಬುಡಸಹಿತ ಕಿತ್ತು ಸಾಗರದಲ್ಲಿ ಬಿದ್ದವು. ನೋಡುವವರಿಗೆ ಅವು, ಹನುಮಂತನನ್ನು ಸ್ವಲ್ಪ ದೂರ ಬಂದು ಬೀಳ್ಕೊಡುವಂತೆ ಕಂಡವು. ವಾಯುದೇವ, ಮೈನಾಕಪರ್ವತವನ್ನು ರಕ್ಷಿಸಿದ್ದ. ಮೈನಾಕ (ಅಭಿಮಾನಿದೇವತೆ) ಹನುಮಂತನಿಗೆ ಆತಿಥ್ಯ ನೀಡಲು ಮೇಲೆದ್ದನು. ॥ ೨ ॥

ವಿಶ್ರಾಂತಿ ಬಯಸದ ಹನುಮ

ಶ್ಯಾಲೋ ಹರಸ್ಯ ಗಿರಿಪಕ್ಷವಿನಾಶಕಾಲೇ
ಕ್ಷಿಪ್ತೋಽರ್ಣವೇ ಸ ಮರುತೋರ್ವರಿತಾತ್ಮಪಕ್ಷಃ ।
ಹೈಮೋ ಗಿರಿಃ ಪವನಜಸ್ಯ ತು ವಿಶ್ರಮಾರ್ಥ-
ಮುದ್ಭಿದ್ಯ ವಾರಿಧಿಮವರ್ಧದನೇಕಸಾನುಃ ॥ ೩ ॥

ಪದಚ್ಛೇದ : ಶ್ಯಾಲಃ ಹರಸ್ಯ ಗಿರಿಪಕ್ಷವಿನಾಶಕಾಲೇ ಕ್ಷಿಪ್ತಃ ಅರ್ಣವೇ ಸಃ ಮರುತಾ ಉರ್ವರಿತಾತ್ಮಪಕ್ಷಃ । ಹೈಮಃ ಗಿರಿಃ ಪವನಜಸ್ಯ ತು ವಿಶ್ರಮಾರ್ಥಮ್ ಉದ್ಭಿದ್ಯ ವಾರಿಧಿಮ್ ಅವರ್ಧತ್ ಅನೇಕಸಾನುಃ ॥

**ಅರ್ಥ :- ಗಿರಿಪಕ್ಷವಿನಾಶಕಾಲೇ** ದೇವೇಂದ್ರನಿಂದ ಪರ್ವತದ ರೆಕ್ಕೆಗಳು ನಾಶ ಮಾಡಲ್ಪಡುತ್ತಿರುವ ಕಾಲದಲ್ಲಿ, **ಹರಸ್ಯ** ರುದ್ರದೇವನ, **ಶ್ಯಾಲಃ** ಹೆಂಡತಿಯಾದ ಪಾರ್ವತೀ ದೇವಿಯ ತಮ್ಮನಾದ, **ಸಃ** ಆ ಮೈನಾಕ ನು (ಪರ್ವತಾಭಿಮಾನಿ ದೇವತೆಯು), **ಅರ್ಣವೇ** ಸಮುದ್ರದಲ್ಲಿ, **ಮರುತಾ** ವಾಯುದೇವನಿಂದ, **ಕ್ಷಿಪ್ತಃ** ಇಡಲ್ಪಟ್ಟು, **ಉರ್ವರಿತಾತ್ಮಪಕ್ಷಃ** ರೆಕ್ಕೆಗಳನ್ನು ಕಳೆದುಕೊಳ್ಳದೇ, **ಅನೇಕಸಾನುಃ** ಅನೇಕ ಶಿಖರಗಳಿರುವ, **ಹೈಮೋ ಗಿರಿಃ** ಬಂಗಾರದ ಪರ್ವತವು (ಮೈನಾಕ ಪರ್ವತವು), **ಪವನಜಸ್ಯ** ವಾಯುವಿನ ಮಗನಾದ, **ಅಸ್ಯ** ಈ ಹನುಮಂತನ, **ವಿಶ್ರಮಾರ್ಥಂ** ವಿಶ್ರಾಂತಿಗಾಗಿ, **ವಾರಿಧಿಂ** ಸಮುದ್ರವನ್ನು, **ಉದ್ಭಿದ್ಯ** ಭೇದಿಸಿ, **ಅವರ್ಧತ್** ಬೆಳೆದು ನಿಂತು.

**ತಾತ್ಪರ್ಯ :-** ಈ ಮೈನಾಕ, ಶಂಕರನ ಮಡದಿಯಾದ ಪಾರ್ವತಿಯ ತಮ್ಮ. ಇಂದ್ರ ರೆಕ್ಕೆ ಕತ್ತರಿಸಬಂದಾಗ ಮುಖ್ಯಪ್ರಾಣನಿಗೆ ಶರಣಾದ. ಅವನ ಕೃಪೆಯಿಂದ ರಕ್ಷಿತನಾಗಿ ಸಾಗರವಾಸಿಯಾದ. ಹನುಮಂತನ ಆತಿಥ್ಯಕ್ಕಾಗಿ ಅವನು ಮೇಲೆದ್ದು ಬಂದ. ॥ ೩ ॥

**ನೈವಾತ್ರ ವಿಶ್ರಮಣಮೈಚ್ಛದವಿಶ್ರಮೋಽಸೌ**
**ನಿಃಸೀಮಪೌರುಷಬಲಸ್ಯ ಕುತಃ ಶ್ರಮೋಽಸ್ಯ ।**
**ಆಶ್ಲಿಷ್ಯ ಪರ್ವತವರಂ ಸ ದದರ್ಶ ಗಚ್ಛನ್**
**ದೇವೈಸ್ತು ನಾಗಜನನೀಂ ಪ್ರಹಿತಾಂ ವರೇಣ ॥ ೪ ॥**

ಪದಚ್ಛೇದ : ನೈವ ಅತ್ರ ವಿಶ್ರಮಣಮ್ ಐಚ್ಛತ್ ಅವಿಶ್ರಮಃ ಅಸೌ ನಿಃಸೀಮ ಪೌರುಷಬಲಸ್ಯ ಕುತಃ ಶ್ರಮಃ ಅಸ್ಯ । ಆಶ್ಲಿಷ್ಯ ಪರ್ವತವರಂ ಸಃ ದದರ್ಶ ಗಚ್ಛನ್ ದೇವೈಃ ತು ನಾಗಜನನೀಂ ಪ್ರಹಿತಾಂ ವರೇಣ ॥

**ಅರ್ಥ :- ಅವಿಶ್ರಮಃ** ಶ್ರಮರಹಿತನಾದ, **ಅಸೌ** ಈ ಹನುಮಂತನು, **ಅತ್ರ** ಈ ಮೈನಾಕ ಪರ್ವತದಲ್ಲಿ, **ವಿಶ್ರಮಣಂ** ವಿಶ್ರಾಂತಿಯನ್ನು, **ನೈವ ಐಚ್ಛತ್** ಅಪೇಕ್ಷಿಸಲಿಲ್ಲ, **ನಿಃಸೀಮಪೌರುಷಬಲಸ್ಯ** ಅಮಿತ ಪರಾಕ್ರಮ ಮತ್ತು ಬಲ ಗಳುಳ್ಳ, **ಅಸ್ಯ** ಈ ಹನುಮಂತನಿಗೆ, **ಶ್ರಮಃ** ಆಯಾಸವು, **ಕುತಃ** ಎಲ್ಲಿ, **ಪರ್ವತವರಂ** ಶ್ರೇಷ್ಠನಾದ ಈ ಮೈನಾಕನನ್ನು, **ಆಶ್ಲಿಷ್ಯ** ಆಲಿಂಗಿಸಿ, **ಗಚ್ಛನ್** ಮುಂದೆ ಹೋಗತಕ್ಕ, **ಸಃ** ಆ ಹನುಮಂತನು, **ದೇವೈಃ** ದೇವತೆಗಳಿಂದ, **ವರೇಣ**

ವರ ನೀಡಿ, **ಪ್ರಹಿತಾಂ** ಕಳುಹಿಸಲ್ಪಟ್ಟ, **ನಾಗಜನನೀಂ** ಸುರಸಾ ಎಂಬ ನಾಗಮಾತೆಯನ್ನು, **ದದರ್ಶ** ನೋಡಿದನು.

**ತಾತ್ಪರ್ಯ** :- ಮೈನಾಕನ ಬಳಿ ವಿಶ್ರಾಂತಿಯನ್ನು ಹನುಮಂತ ಪಡೆಯಲಿಲ್ಲ. ಅಮಿತಬಲ-ಪೌರುಷಗಳುಳ್ಳ ಅವನಿಗೆಲ್ಲಿಯ ಶ್ರಮ ? ಪ್ರೀತಿಯಿಂದ ಮೈನಾಕನನ್ನು ಆಲಂಗಿಸಿ ರಾಮಸೇವೆಗಾಗಿ ಮುಂದೆ ಸಾಗಿದ. ದೇವತೆಗಳು ವರವಿತ್ತು ಕಳುಹಿದ ನಾಗಮಾತೆಯಾದ ಕದ್ರುವನ್ನು (ಸುರಸೆಯನ್ನು) ಕಂಡ. ॥ ೪ ॥

**ಸುರಸೆಗೆ ಸಂತಸ**

**ಜಿಜ್ಞಾಸುಭಿರ್ನಿಜಬಲಂ ತವ ಭಕ್ಷಮೇತು**
**ಯದ್ಯತ್ ತ್ವಮಿಚ್ಛಸಿ ತದಿತ್ಯಮರೋದಿತಾಯಾಃ ।**
**ಆಸ್ಯಂ ಪ್ರವಿಶ್ಯ ಸಪದಿ ಪ್ರವಿನಿಃಸೃತೋಽಸ್ಮಾದ್**
**ದೇವಾನನಂದಯದುತ ಸ್ವೃತಮೇಷು ರಕ್ಷನ್ ॥ ೫ ॥**

**ಪದಚ್ಛೇದ** : **ಜಿಜ್ಞಾಸುಭಿಃ ನಿಜಬಲಂ ತವ ಭಕ್ಷಂ ಏತು ಯತ್ ಯತ್ ತ್ವಮ್ ಇಚ್ಛಸಿ ತತ್ ಇತಿ ಅಮರೋದಿತಾಯಾಃ । ಆಸ್ಯಂ ಪ್ರವಿಶ್ಯ ಸಪದಿ ಪ್ರವಿನಿಃಸೃತಃ ಅಸ್ಮಾದ್ ದೇವಾನ್ ಆನಂದಯತ್ ಉತ ಸ್ವೃತಮ್ ಏಷು ರಕ್ಷನ್ ॥**

**ಅರ್ಥ** :- **ನಿಜಬಲಂ** ತನ್ನ ಬಲವನ್ನು, **ಜಿಜ್ಞಾಸುಭಿಃ** ತಿಳಿಯಲು ಇಚ್ಛಿಸಿದ ದೇವತೆಗಳಿಂದ, **ಯತ್ ಯತ್ ತ್ವಂ ಇಚ್ಛಸಿ** ಯಾವುದನ್ನು ನೀನು (ತಿನ್ನಲು) ಅಪೇಕ್ಷಿಸುವೆಯೋ, **ತತ್** ಅದು, **ತವ** ನಿನ್ನ, **ಭಕ್ಷ್ಯಂ ಏತು** ಆಹಾರವಾಗಲಿ, **ಇತಿ** ಹೀಗೆ, **ಅಮರೋದಿತಾಯಾಃ** ದೇವತೆಗಳಿಂದ ಅನುಗೃಹೀತಳಾದ ನಾಗಜನನಿಯ, **ಆಸ್ಯಂ** ಮುಖವನ್ನು, **ಪ್ರವಿಶ್ಯ** ಪ್ರವೇಶ ಮಾಡಿ, **ಏಷು** ದೇವತೆಗಳಲ್ಲಿ, **ಸ್ವೃತಂ** ವಾಕ್‌ಸಿದ್ಧಿಯನ್ನು, **ರಕ್ಷನ್** ರಕ್ಷಿಸತಕ್ಕವನಾಗಿ, **ಅಸ್ಮಾತ್** ಇವಳ ಮುಖದಿಂದ, **ಸಪದಿ** ಶೀಘ್ರದಲ್ಲಿ, **ಪ್ರವಿನಿಸೃತಃ** ಹೊರಗೆ ಬಂದು, **ದೇವಾನ್** ದೇವತೆಗಳನ್ನು, **ಆನಂದಯತ್** ಸಂತೋಷ ಪಡಿಸಿದನು.

**ತಾತ್ಪರ್ಯ** :- ನೀನು ಬಯಸಿದ್ದೆಲ್ಲ ನಿನ್ನ ಆಹಾರವಾಗಲೆಂದು ಸುರಸೆಗೆ ದೇವತೆಗಳು ವರ ನೀಡಿದ್ದರು. ಹನುಮನ ಬಲ-ಸ್ಥೈರ್ಯಗಳನ್ನು ಪರೀಕ್ಷಿಸಲು ಅವಳನ್ನು ಪ್ರಚೋದಿಸಿದರು. ಹನುಮಂತನನ್ನು ಅವಳು ತಿನ್ನಬಂದಾಗ

ಹನುಮ, ಅವಳ ಬಾಯಿಗಿಂತ ಹಿರಿದಾದ ಗಾತ್ರ ತೋರಿದ. ಅವಳು ತನ್ನ ಬಾಯನ್ನು ಮತ್ತಷ್ಟು ವಿಸ್ತರಿಸಿದಳು. ಕೊನೆಗೆ ಅಣುರೂಪದಿಂದ ಅವಳ ಬಾಯಲ್ಲಿ ಪ್ರವೇಶಿಸಿ ಕೂಡಲೇ ಹೊರಬಂದ. ದೇವತೆಗಳ ವರವನ್ನು ಗೌರವಿಸಿ ಸುರಸೆಯಿಂದ ಸಂಸ್ತುತನಾದ. ॥ ೫ ॥

**ಸಿಂಹಿಕೆಯ ಸಂಹಾರ**

**ದೃಷ್ಟ್ವಾ ಸುರಪ್ರಣಯಿತಾಂ ಬಲಮಸ್ಯ ಚೋಗ್ರಂ**
**ದೇವಾಃ ಪ್ರತುಷ್ಟುವುರಮುಂ ಸುಮನೋಽಭಿವೃಷ್ಟ್ಯಾ ।**
**ತೈರಾದೃತಃ ಪುನರಸೌ ವಿಯತೈವ ಗಚ್ಛನ್**
**ಛಾಯಾಗ್ರಹಂ ಪ್ರತಿದದರ್ಶ ಚ ಸಿಂಹಿಕಾಖ್ಯಮ್ ॥ ೬ ॥**

ಪದಚ್ಛೇದ : ದೃಷ್ಟ್ವಾ ಸುರಪ್ರಣಯಿತಾಂ ಬಲಂ ಅಸ್ಯ ಚ ಉಗ್ರಂ ದೇವಾಃ ಪ್ರತುಷ್ಟುವುಃ ಅಮುಂ ಸುಮನೋಽಭಿವೃಷ್ಟ್ಯಾ । ತೈಃ ಆದೃತಃ ಪುನಃ ಅಸೌ ವಿಯತಾ ಏವ ಗಚ್ಛನ್ ಛಾಯಾಗ್ರಹಂ ಪ್ರತಿದದರ್ಶ ಚ ಸಿಂಹಿಕಾಖ್ಯಮ್ ॥

**ಅರ್ಥ :- ದೇವಾಃ** ದೇವತೆಗಳು, **ಅಸ್ಯ** ಈ ಹನುಮಂತನ, **ಸುರಪ್ರಣಯಿತಾಂ, ಸುರ** ದೇವತೆಗಳಲ್ಲಿ, **ಪ್ರಣಯಿತಾಂ** ಪ್ರೀತಿಯನ್ನು **ಚ** ಮತ್ತು, **ಉಗ್ರಂ** ಭಯಂಕರವಾದ, **ಬಲಂ** ಪರಾಕ್ರಮವನ್ನು, **ದೃಷ್ಟ್ವಾ** ನೋಡಿ, **ಸುಮನೋಽಭಿವೃಷ್ಟ್ಯಾ** ಉತ್ತಮ ಪುಷ್ಪಗಳ ವೃಷ್ಟಿಯಿಂದ, **ಅಮುಂ** ಈ ಹನುಮಂತನನ್ನು, **ಪ್ರತುಷ್ಟುವುಃ** ಚೆನ್ನಾಗಿ ಸ್ತೋತ್ರ ಮಾಡಿದರು, **ತೈಃ** ಆ ದೇವತೆಗಳಿಂದ, **ಆದೃತಃ** ಪೂಜಿತನಾದ, **ಅಸೌ** ಹನುಮಂತನು, **ಪುನಃ** ಮತ್ತು, **ವಿಯತೈವ** ಆಕಾಶ ಮಾರ್ಗದಿಂದಲೇ, **ಗಚ್ಛನ್** ಹೋಗತಕ್ಕವನಾಗಿ, **ಛಾಯಾಗ್ರಹಂ** ನೆರಳಿನಿಂದಲೇ ಪುರುಷನನ್ನು ನುಂಗತಕ್ಕ, **ಸಿಂಹಿಕಾಖ್ಯಂ** ಸಿಂಹಿಕಾ ಎಂಬ ಹೆಸರುಳ್ಳ ರಾಕ್ಷಸಿಯನ್ನು, **ಪ್ರತಿದದರ್ಶ** ನೋಡಿದನು.

**ತಾತ್ಪರ್ಯ :-** ದೇವತೆಗಳ ಮೇಲೆ ಹನುಮಂತ ತೋರಿದ ವಾತ್ಸಲ್ಯ ಮತ್ತು ಅವನ ಅತಿಶಯಿತ ಬಲವನ್ನು ಕಂಡ ದೇವತೆಗಳು ಪುಷ್ಪವೃಷ್ಟಿ ಮಾಡಿ ಅವನನ್ನು ಸ್ತುತಿಸಿದರು. ಅವರಿಂದ ಸತ್ಕೃತನಾದ ಆಂಜನೇಯ, ಆಕಾಶಮಾರ್ಗದಲ್ಲಿ ಹಾರುತ್ತ, ನೆರಳಿನಿಂದ ವ್ಯಕ್ತಿಯನ್ನು ಸೆಳೆದು ತಿನ್ನುವ ಸಿಂಹಿಕೆಯನ್ನು ಕಂಡನು. ॥ ೬ ॥

ಲಂಕಾವನಾಯ ಸಕಲಸ್ಯ ಚ ನಿಗ್ರಹೇಽಸ್ಯಾಃ
ಸಾಮರ್ಥ್ಯಮಪ್ರತಿಹತಂ ಪ್ರದದೌ ವಿಧಾತಾ ।
ಛಾಯಾಮವಾಕ್ಷಿಪದಸೌ ಪವನಾತ್ಮಜಸ್ಯ
ಸೋಽಸ್ಯಾಃ ಶರೀರಮನುವಿಶ್ಯ ಬಿಭೇದ ಚಾಶು ॥ ೭ ॥

ಪದಚ್ಛೇದ : ಲಂಕಾವನಾಯ ಸಕಲಸ್ಯ ಚ ನಿಗ್ರಹೇ ಅಸ್ಯಾಃ ಸಾಮರ್ಥ್ಯಮ್ ಅಪ್ರತಿಹತಂ ಪ್ರದದೌ ವಿಧಾತಾ । ಛಾಯಾಮ್ ಅವಾಕ್ಷಿಪತ್ ಅಸೌ ಪವನಾತ್ಮಜಸ್ಯ ಸಃ ಅಸ್ಯಾಃ ಶರೀರಮ್ ಅನುವಿಶ್ಯ ಬಿಭೇದ ಚ ಆಶು ॥

**ಅರ್ಥ :-** **ಲಂಕಾವನಾಯ** ಲಂಕಾಪುರಿಯ ರಕ್ಷಣೆಗೋಸ್ಕರ, **ಸಕಲಸ್ಯ** ಸಮಸ್ತರ, **ನಿಗ್ರಹೇ** ತಡೆಯುವ ವಿಷಯದಲ್ಲಿ, **ಅಸ್ಯಾಃ** ಈ ರಾಕ್ಷಸಿಗೆ, **ಅಪ್ರತಿಹತಂ** ಪ್ರತಿರೋಧರಹಿತವಾದ, **ಸಾಮರ್ಥ್ಯಂ** ಸಾಮರ್ಥ್ಯವನ್ನು **ವಿಧಾತಾ** ಬ್ರಹ್ಮದೇವನು, **ಪ್ರದದೌ** ಕೊಟ್ಟನು, (ಈ ರಾಕ್ಷಸಿಯು) **ಪವನಾತ್ಮಜಸ್ಯ** **ಛಾಯಾಂ** ಹನುಮಂತನ ಛಾಯೆಯನ್ನು **ಅವಾಕ್ಷಿಪತ್** ನುಂಗಿದಳು, **ಸಃ** ಆ ಹನುಮಂತನು, **ಅಸ್ಯ** ಈ ರಾಕ್ಷಸಿಯ, **ಶರೀರಂ** ಶರೀರವನ್ನು **ಅನುವಿಶ್ಯ** ಪ್ರವೇಶ ಮಾಡಿ, **ಆಶು** ಶೀಘ್ರದಲ್ಲಿ, **ಬಿಭೇದ ಚ** ಬಗೆದು ಹೊರ ಬಂದನು.

**ತಾತ್ಪರ್ಯ :-** ಲಂಕೆಗೆ ಬರುವ ಅನಭಿಮತ ವ್ಯಕ್ತಿಗಳನ್ನು ನಿಗ್ರಹಿಸುವ, ಆಹಾರ ಮಾಡಿ ಕೊಳ್ಳುವ ವರವನ್ನು ಚತುರ್ಮುಖ ಸಿಂಹಿಕೆಗೆ ಕರುಣಿಸಿದ್ದ. ಇವಳು ಹನುಮಂತನನ್ನು ಸೆಳೆದಾಗ ಅವಳ ಶರೀರದ ಒಳಹೊಕ್ಕ ಹನುಮಂತ ಅವಳನ್ನು ಸೀಳಿ (ಸಂಹರಿಸಿ) ಹೊರಬಂದ. ॥ ೭ ॥

ನಿಃಸೀಮಮಾತ್ಮಬಲಮಿತ್ಯನುದರ್ಶಯಾನೋ
ಹತ್ವೈವ ತಾಮಪಿ ವಿಧಾತೃವರಾಭಿಗುಪ್ತಾಮ್ ।
ಲಂಬೇ ಸ ಲಂಬಶಿಖರೇ ನಿಪಪಾತ ಲಂಕಾ-
ಪ್ರಾಕಾರರೂಪಕಗಿರಾವಥ ಸಂಚುಕೋಚ ॥ ೮ ॥

ಪದಚ್ಛೇದ : ನಿಃಸೀಮಂ ಆತ್ಮಬಲಮ್ ಇತಿ ಅನುದರ್ಶಯಾನಃ ಹತ್ವಾ ಏವ ತಾಮ್ ಅಪಿ ವಿಧಾತೃವರಾಭಿಗುಪ್ತಾಮ್ । ಲಂಬೇ ಸಃ ಲಂಬಶಿಖರೇ ನಿಪಪಾತ ಲಂಕಾ ಪ್ರಾಕಾರರೂಪಕಗಿರೌ ಅಥ ಸಂಚುಕೋಚ ॥

**ಅರ್ಥ :- ವಿಧಾತೃವರಾಭಿಗುಪ್ತಾಂ** ಬ್ರಹ್ಮದೇವರ ವರದಿಂದ ರಕ್ಷಿತಳಾದ, **ತಾಮಪಿ** ಆ ಸಿಂಹಿಕಾ ರಾಕ್ಷಸಿಯನ್ನು ಕೂಡ, **ಹತ್ವಾ** ಕೊಂದು, **ನಿಸ್ಸೀಮಂ** ಅಪರಿಮಿತವಾದ, **ಆತ್ಮಬಲಂ** ತನ್ನ ಸಾಮರ್ಥ್ಯವನ್ನು, **ಅನುದರ್ಶಯಾನಃ** ತೋರಿಸಿಕೊಟ್ಟ, **ಸಃ** ಆ ಹನುಮಂತನು, **ಅಥ** ಅನಂತರ, **ಲಂಬಶಿಖರೇ** ಉದ್ದವಾದ ಶಿಖರಗಳುಳ್ಳ, **ಲಂಬೇ** ಲಂಬ ಎಂದು ಹೆಸರುಳ್ಳ, **ಪ್ರಾಕಾರರೂಪಕ ಗಿರೌ** ಲಂಕಾನಗರಕ್ಕೆ ಪ್ರಾಕಾರದಂತಿರುವ ತ್ರಿಕೂಟ ಪರ್ವತದ ಒಂದು ಭಾಗ ದಲ್ಲಿ **ನಿಪಪಾತ** ಇಳಿದನು, **ಅಥ** ಅನಂತರ, **ಸಂಚುಕೋಚ** ತನ್ನ ಗಾತ್ರವನ್ನು ಕಿರಿದಾಗಿಸಿಕೊಂಡನು.

**ತಾತ್ಪರ್ಯ :-** ತನ್ನ ಅಮಿತಬಲವನ್ನು ತೋರಿಸಬಯಸಿದ ಹನುಮ, ಬ್ರಹ್ಮವರದಿಂದ ರಕ್ಷಿತಳಾಗಿದ್ದ ಸಿಂಹಿಕೆಯನ್ನು ಸಂಹರಿಸಿ, ಉದ್ದನೆಯ ಶಿಖರ ಗಳಿಂದ ಕೂಡಿದ ತ್ರಿಕೂಟಪರ್ವತದ 'ಲಂಬ' ಎಂಬ ಒಂದು ಪ್ರದೇಶದಲ್ಲಿ ಹಾರಿನಿಂತನು. ನಂತರ ತನ್ನ ಶರೀರವನ್ನು ಕಿರಿದಾಗಿಸಿಕೊಂಡನು. ॥ ೮ ॥

### ಲಂಕಿಣಿಯ ಮರ್ದನ

**ಭೂತ್ವಾ ಬಿಡಾಸಲಮಿತೋ ನಿಶಿ ತಾಂ ಪುರೀಂ ಚ**
**ಪ್ರಾಪ್ಸ್ಯನ್ ದದರ್ಶ ನಿಜರೂಪವತೀಂ ಸ ಲಂಕಾಮ್ ।**
**ರುದ್ಧೋಽನಯಾಽಽಶ್ವಥ ವಿಜಿತ್ಯ ಚ ತಾಂ ಸ್ವಮುಷ್ಟಿ-**
**ಪಿಷ್ಟಾಂ ತಯಾಽನುಮತ ಏವ ವಿವೇಶ ಲಂಕಾಮ್ ॥ ೯ ॥**

ಪದಚ್ಛೇದ : ಭೂತ್ವಾ ಬಿಡಾಸಲಮಿತಃ ನಿಶಿ ತಾಂ ಪುರೀಂ ಚ ಪ್ರಾಪ್ಸ್ಯನ್ ದದರ್ಶ ನಿಜರೂಪವತೀಂ ಸಃ ಲಂಕಾಮ್ । ರುದ್ಧಃ ಅನಯಾ ಆಶು ಅಥ ವಿಜಿತ್ಯ ಚ ತಾಂ ಸ್ವಮುಷ್ಟಿಪಿಷ್ಟಾಂ ತಯಾ ಅನುಮತ ಏವ ವಿವೇಶ ಲಂಕಾಮ್ ॥

**ಅರ್ಥ :- ಬಿಡಾಲ ಸಮಿತಃ** ಬೆಕ್ಕಿನಂತೆ ಸಣ್ಣ ಪರಿಮಾಣವನ್ನು **ಭೂತ್ವಾ** ಪಡೆದು, **ಸಃ** ಆ ಹನುಮಂತನು, **ತಾಂ ಪುರೀಂ** ಆ ಲಂಕಾ ಪಟ್ಟಣವನ್ನು **ಪ್ರಾಪ್ಸ್ಯನ್** ಪ್ರವೇಶಿಸಲು ಇಚ್ಛಿಸಿದವನಾಗಿ, **ನಿಜರೂಪವತೀಂ** ತನ್ನ ಮೂಲ ಸ್ವರೂಪವುಳ್ಳ, **ಲಂಕಾಂ** ಲಂಕಾ ಎಂಬ ರಾಕ್ಷಸಿಯನ್ನು **ದದರ್ಶ** ನೋಡಿದನು, **ಅನಯಾ** ಈ ರಾಕ್ಷಸಿಯಿಂದ, **ರುದ್ಧಃ** ತಡೆಯಲ್ಪಟ್ಟವನಾಗಿ, **ತಾಂ** ಅವಳನ್ನು **ಆಶು** ಬೇಗನೇ, **ಸ್ವಮುಷ್ಟಿಪಿಷ್ಟಾಂ** ತನ್ನ ಮುಷ್ಟಿಯ ಪೆಟ್ಟಿನಿಂದ ನಿರ್ವಿಣ್ಣಳನ್ನಾಗಿಸಿ,

ವಿಜಿತ್ಯ ಗೆದ್ದು, **ತಯಾ** ಅವಳಿಂದ, **ಅನುಮತ** ಏವ ಒಳಹೋಗಲು ಸಮ್ಮತಿಸ ಲ್ಪಟ್ಟವನಾಗಿ, **ಲಂಕಾಂ** ಲಂಕೆಯನ್ನು, ವಿವೇಶ ಪ್ರವೇಶಿಸಿದನು.

**ತಾತ್ಪರ್ಯ :-** ಹನುಮಂತ, ಬೆಕ್ಕಿನಂತೆ ಶರೀರವನ್ನು ಸಂಕುಚಿತಗೊಳಿಸಿ ಕೊಂಡು ರಾತ್ರಿ ಲಂಕಾಪಟ್ಟಣವನ್ನು ಪ್ರವೇಶಿಸಹೊರಟನು. ಆಗ ಬ್ರಹ್ಮನ ವರಬಲವುಳ್ಳ ಲಂಕೆಯ ಅಭಿಮಾನಿಯಾದ ಲಂಕಿಣಿ ಎಂಬ ರಕ್ಕಸಿ ತಡೆದಳು. ತನ್ನ ಮುಷ್ಟಿಪ್ರಹಾರದಿಂದ ಅವಳನ್ನು ನಿರ್ವಿಣ್ಣಳಾಗಿಸಿ, ಅವಳಿಂದ ಅನುಮೋದಿತನಾಗಿ ಲಂಕೆಯ ಒಳಗೆ ಪ್ರವೇಶಿಸಿದನು ॥೯॥

### ಸೀತಾಸಂದರ್ಶನ

**ಮಾರ್ಗಮಾಣೋ ಬಹಿಶ್ಚಾಂತಃ ಸೋಽಶೋಕವನಿಕಾತಲೇ ।**
**ದದರ್ಶ ಶಿಂಶಪಾವೃಕ್ಷಮೂಲಸ್ಥಿತರಮಾಕೃತಿಮ್ ॥ ೧೦ ॥**

**ಪದಚ್ಛೇದ :** ಮಾರ್ಗಮಾಣಃ ಬಹಿಃ ಚ ಅಂತಃ ಸಃ ಅಶೋಕವನಿಕಾತಲೇ । ದದರ್ಶ ಶಿಂಶಪಾವೃಕ್ಷಮೂಲಸ್ಥಿತರಮಾಕೃತಿಮ್ ॥

**ಅರ್ಥ :-** **ಸಃ** ಆ ಹನುಮಂತನು, **ಬಹಿಶ್ಚ ಅಂತಃ** ಲಂಕಾಪಟ್ಟಣದ ಒಳಹೊರಗೆ, **ಮಾರ್ಗಮಾಣಃ** ಸೀತಾದೇವಿಯನ್ನು ಹುಡುಕುವವನಾಗಿ, **ಅಶೋಕವನಿಕಾತಲೇ** ಅಶೋಕವನದ ಸ್ಥಳದಲ್ಲಿ (ಇರುವಂತಹ), **ಶಿಂಶಪಾವೃಕ್ಷ ಮೂಲಸ್ಥಿತರಮಾಕೃತಿಂ** ಶಿಂಶಪಾ ಎಂಬ ವೃಕ್ಷದ ಕೆಳಗೆ ಇರುವ ರಮಾದೇವಿಯ (ಸೀತಾದೇವಿಯ) ಆಕೃತಿಯನ್ನು, **ದದರ್ಶ** ನೋಡಿದನು.

ತಾತ್ಪರ್ಯ:- ಅರಮನೆಯ ಒಳ-ಹೊರ ಹುಡುಕುತ್ತ ಹೊರಟ ಹನುಮಂತ, ಶಿಂಶಪಾವೃಕ್ಷದ ಬುಡದಲ್ಲಿ ಕುಳಿತ ಸೀತಾಕೃತಿಯನ್ನು ಕಂಡ. ॥ ೧೦ ॥

### ಸೀತೆಗೆ ಉಂಗುರ, ರಾಮನಿಗೆ ಚೂಡಾಮಣಿ

**ನರಲೋಕವಿಡಂಬಸ್ಯ ಜಾನನ್ ರಾಮಸ್ಯ ಹೃದ್ಗತಮ್ ।**
**ತಸ್ಯ ಚೇಷ್ಟಾನುಸಾರೇಣ ಕೃತ್ವಾ ಚೇಷ್ಟಾಶ್ಚ ಸಂವಿದಃ ॥ ೧೧ ॥**

**ತಾದೃಕ್‌ಚೇಷ್ಟಾಸಮೇತಾಯಾ ಅಂಗುಲೀಯಮದಾತ್ ತತಃ ।**
**ಸೀತಾಯಾ ಯಾನಿ ಚೈವಾಸನ್ನಾಕೃತೇಸ್ತಾನಿ ಸರ್ವಶಃ ॥ ೧೨ ॥**

**ಭೂಷಣಾನಿ ದ್ವಿಧಾ ಭೂತ್ವಾ ತಾನ್ಯೇವಾಸಂಸ್ತಥೈವ ಚ ।**
**ಅಥ ಚೂಡಾಮಣಿಂ ದಿವ್ಯಂ ದಾತುಂ ರಾಮಾಯ ಸಾ ದದೌ ॥ ೧೩ ॥**

ಪದಚ್ಛೇದ : ನರಲೋಕವಿಡಂಬಸ್ಯ ಜಾನನ್ ರಾಮಸ್ಯ ಹೃದ್ಗತಮ್ । ತಸ್ಯ ಚೇಷ್ಟಾನುಸಾರೇಣ ಕೃತ್ವಾ ಚೇಷ್ಟಾಃ ಚ ಸಂವಿದಃ ॥ ೧೧ ॥

ತಾದೃಕ್‌ಚೇಷ್ಟಾಸಮೇತಾಯಾ ಯಃ ಅಂಗುಲೀಯಮ್ ಅದಾತ್ ತತಃ । ಸೀತಾಯಾಃ ಯಾನಿ ಚ ಏವ ಆಸನ್ ಆಕೃತೇಃ ತಾನಿ ಸರ್ವಶಃ ॥ ೧೨ ॥

ಭೂಷಣಾನಿ ದ್ವಿಧಾ ಭೂತ್ವಾ ತಾನಿ ಏವ ಆಸನ್ ತಥಾ ಏವ ಚ । ಅಥ ಚೂಡಾಮಣಿಂ ದಿವ್ಯಂ ದಾತುಂ ರಾಮಾಯ ಸಾ ದದೌ ॥ ೧೩ ॥

**ಅರ್ಥ :- ನರಲೋಕವಿಡಂಬಸ್ಯ** ಮನುಷ್ಯ ಲೋಕದಂತೆಯೇ ನಟನೆ ಮಾಡತಕ್ಕ, **ರಾಮಸ್ಯ** ಶ್ರೀರಾಮನ, **ಹೃದ್ಗತಂ** ಮನಸ್ಸಿನ ಅಭಿಪ್ರಾಯವನ್ನು **ಜಾನನ್** ತಿಳಿದ ಹನುಮಂತನು, **ತಸ್ಯ** ಆ ರಾಮದೇವನ, **ಚೇಷ್ಟಾನುಸಾರೇಣ** ಅಸುರಮೋಹಕ ವ್ಯಾಪಾರವನ್ನನುಸರಿಸಿ, **ಚೇಷ್ಟಾಃ** ಕಾರ್ಯಗಳನ್ನು, **ಚ** ಮತ್ತು, **ಸಂವಿದಃ** ವಿಚಾರಗಳನ್ನು, **ಕೃತ್ವಾ** ಮಾಡಿ, **ತತಃ** ನಂತರದಲ್ಲಿ, **ತಾದೃಕ್ಚೇಷ್ಟಾ ಸಮೇತಾಯಾಃ** ಅಂತಹ ಲೋಕ ವಿಡಂಬನೆಯುಳ್ಳ ಸೀತೆಗೋಸ್ಕರ, **ಅಂಗುಲೀಯಂ** ಶ್ರೀರಾಮನ ಉಂಗುರವನ್ನು, **ಅದಾತ್** ಕೊಟ್ಟನು. **ಸೀತಾಯಾಃ** ಸೀತಾದೇವಿಗೆ, **ಯಾನಿ ಚ** ಯಾವ ಯಾವ, **ಭೂಷಣಾನಿ** ಆಭರಣಗಳು, **ಆಸನ್** ಇದ್ದವೋ, **ತಾನಿ ಸರ್ವಶಃ** ಅವು ಎಲ್ಲವೂ, **ತಥೈವ ಚ** ಸೀತಾದೇವಿಯಲ್ಲಿರುವಂತೆ, **ದ್ವಿಧಾ ಭೂತ್ವಾ** ಎರಡಾಗಿ, **ಆಕೃತೇಃ** ಸೀತಾಕೃತಿಗೆ, **ತಾನ್ಯೇವ ಆಸನ್** ಅದೇ ಆಭರಣಗಳು ಇದ್ದವು, **ಅಥ** ಅನಂತರದಲ್ಲಿ, **ಸಾ** ಆ ಸೀತಾಕೃತಿಯು, **ರಾಮಾಯ** ಶ್ರೀರಾಮನಿಗೆ, **ದಾತುಂ** ಕೊಡಲು, **ದಿವ್ಯಂ** ಶ್ರೇಷ್ಠವಾದ, **ಚೂಡಾಮಣಿಂ** ಚೂಡಾಮಣಿಯನ್ನು, **ದದೌ** ಕೊಟ್ಟಳು.

**ತಾತ್ಪರ್ಯ :-** ಮಾನವರ ನಡುವೆ ಅವತರಿಸಿದಾಗ ಮಾನವರಂತೆ ತೋರಿಸಿಕೊಳ್ಳಬೇಕೆಂಬ ಶ್ರೀರಾಮನ ಮನೋಗತವರಿತ ಹನುಮಂತನು, ಅವನ ಆಶಯವನ್ನನುಸರಿಸಿ, ಅಂತಹ ನಿಲುವನ್ನೇ ಹೊಂದಿದ ಸೀತೆಯ ಸನ್ನಿಧಾನವುಳ್ಳ ಆಕೃತಿಗೆ ಶ್ರೀರಾಮನ ಉಂಗುರವನ್ನು ಸಮರ್ಪಿಸಿದ. ಸಂತುಷ್ಟಳಾದ ಸೀತೆ (ಸೀತಾಕೃತಿ) ರಾಮನಿಗೆ ಕೊಡಲು ತನ್ನ ಚೂಡಾಮಣಿಯನ್ನು ಸಮರ್ಪಿಸಿದಳು. ಕೈಲಾಸಕ್ಕೆ ತೆರಳಿದ ಸೀತೆಯ ಮೂಲರೂಪದಲ್ಲಿ ಇರುವ ಆಭರಣಗಳು

ಎರಡುಬಗೆಯಾಗಿ ಸೀತಾಕೃತಿಯಲ್ಲೂ ಇದ್ದವು. ಆದ್ದರಿಂದ ಸೀತೆ (ಸೀತಾಕೃತಿ) ತನ್ನ ಚೂಡಾಮಣಿಯನ್ನು ಹನುಮಂತನಿಗೆ ಕೊಟ್ಟಳು. ॥ ೧೧-೧೩ ॥

**ಯದ್ಯಪ್ಯೇತನ್ನ ಪಶ್ಯಂತಿ ನಿಶಾಚರಗಣಾಸ್ತು ತೇ ।**
**ದ್ಯುಲೋಕಚಾರಿಣಃ ಸರ್ವೇ ಪಶ್ಯಂತ್ಯೃಷಯ ಏವ ಚ ॥ ೧೪ ॥**

**ತೇಷಾಂ ವಿಡಂಬನಾಯೈವ ದೈತ್ಯಾನಾಂ ವಂಚನಾಯ ಚ ।**
**ಪಶ್ಯತಾಂ ಕಲಿಮುಖ್ಯಾನಾಂ ವಿಡಂಬೋಽಯಂ ಕೃತೋ ಭವೇತ್ ॥೧೫॥**

**ಪದಚ್ಛೇದ : ಯದಿ ಅಪಿ ಏತತ್ ನ ಪಶ್ಯಂತಿ ನಿಶಾಚರಗಣಾಃ ತು ತೇ । ದ್ಯುಲೋಕಚಾರಿಣಃ ಸರ್ವೇ ಪಶ್ಯಂತಿ ಋಷಯಃ ಏವ ಚ ॥ ೧೪ ॥**

**ತೇಷಾಂ ವಿಡಂಬನಾಯ ಏವ ದೈತ್ಯಾನಾಂ ವಂಚನಾಯ ಚ । ಪಶ್ಯತಾಂ ಕಲಿಮುಖ್ಯಾನಾಂ ವಿಡಂಬಃ ಅಯಂ ಕೃತಃ ಭವೇತ್ ॥ ೧೫ ॥**

**ಅರ್ಥ :-** **ಯದ್ಯಪಿ** ವಾಸ್ತವವಾಗಿ, **ಏತತ್** ಈ ವಿಡಂಬನೆಯನ್ನು, **ತೇ ನಿಶಾಚರಗಣಾಃ** ಆ ರಾಕ್ಷಸರು, **ನ ಪಶ್ಯಂತಿ** ಗುರುತಿಸುವುದಿಲ್ಲ, **ದ್ಯುಲೋಕ ಚಾರಿಣಃ** ಅಂತರಿಕ್ಷ ಲೋಕದಲ್ಲಿ ಸಂಚರಿಸುವ, **ಸರ್ವೇ** ಸಮಸ್ತರಾದ ದೇವತೆಗಳು, **ಋಷಯಃ** ಋಷಿಗಳು, **ಪಶ್ಯಂತಿ ಏವ** ನಿಶ್ಚಿತವಾಗಿ ನೋಡುತ್ತಾರೆ, **ತೇಷಾಂ** ಅವರಿಗೆ, **ವಿಡಂಬನಾಯೈವ** ಇದು ಲೋಕ ವಿಡಂಬನೆ ಎಂದು ಜ್ಞಾನ ಮಾಡಿಕೊಡುವುದಕ್ಕೋಸ್ಕರ, **ಚ** ಮತ್ತು, **ಪಶ್ಯತಾಂ** ನೋಡುತ್ತಿರುವ, **ಕಲಿ ಮುಖ್ಯಾನಾಂ** ಕಲಿಯೇ ಪ್ರಧಾನರಾಗಿ ಉಳ್ಳ, **ದೈತ್ಯಾನಾಂ** ದೈತ್ಯರಿಗೆ, **ವಂಚನಾಯ ಚ** ಮೋಸವನ್ನು ಮಾಡುವುದಕ್ಕೋಸ್ಕರವಾಗಿಯೇ, **ಅಯಂ** ಈ, **ವಿಡಂಬಃ** ಲೋಕ ವಿಡಂಬನೆಯು, **ಕೃತೋ ಭವೇತ್** ಮಾಡಲ್ಪಟ್ಟಿರುತ್ತದೆ.

**ತಾತ್ಪರ್ಯ :-** ಹನುಮಂತನ ವಿಡಂಬನೆಯನ್ನು ರಾಕ್ಷಸರ ಗುಂಪು ಅರಿಯಲಾರದು. ದೇವತೆಗಳು ಹಾಗೂ ಋಷಿಗಳಿಗೆ, ರಾಮನ ಚಿತ್ತಕ್ಕೆ ತಕ್ಕಂತೆ ಹನುಮಂತ ವರ್ತಿಸುತ್ತಿರುವುದು ಅರ್ಥವಾಗುತ್ತದೆ. ಇದರಂತೆ ಕಲಿ ಮೊದಲಾದ ದೈತ್ಯರು, ಹನುಮಂತನ ವರ್ತನೆಯಿಂದ ಅವನಲ್ಲಿ ಅಜ್ಞಾನವನ್ನು ಸೀತಾ-ರಾಮರಲ್ಲಿ ವಿಯೋಗ ಹಾಗೂ ದುಃಖಗಳನ್ನು ಚಿಂತಿಸಿ ತಮಸ್ಸಿಗೆ ಬೇಕಾದ ಸಾಧನೆ ಮಾಡಿಕೊಳ್ಳಲಿ ಎಂಬ ಹಿನ್ನೆಲೆಯೂ ಈ ವಿಡಂಬನೆಯ ಹಿಂದಿದೆ. ॥೧೪-೧೫ ॥

### ಅಲ್ಪಶಕ್ತಿಯ ಆವಿಷ್ಕಾರ

ಕೃತ್ವಾ ಕಾರ್ಯಮಿದಂ ಸರ್ವಂ ವಿಶಂಕಃ ಪವನಾತ್ಮಜಃ ।
ಆತ್ಮಾವಿಷ್ಕರಣೇ ಚಿತ್ತಂ ಚಕ್ರೇ ಮತಿಮತಾಂ ವರಃ ॥ ೧೬ ॥

ಪದಚ್ಛೇದ : ಕೃತ್ವಾ ಕಾರ್ಯಂ ಇದಂ ಸರ್ವಂ ವಿಶಂಕಃ ಪವನಾತ್ಮಜಃ । ಆತ್ಮಾವಿಷ್ಕರಣೇ ಚಿತ್ತಂ ಚಕ್ರೇ ಮತಿಮತಾಂ ವರಃ ॥

ಅರ್ಥ :- ಮತಿಮತಾಂ ಜ್ಞಾನಿಗಳಿಗೆ, ವರಃ ಶ್ರೇಷ್ಠನಾದ, ವಿಶಂಕಃ ರಾಕ್ಷಸರ ಬಾಧೆಯ ಭಯವಿಲ್ಲದ, ಪವನಾತ್ಮಜಃ ವಾಯುಪುತ್ರನಾದ ಹನುಮಂತನು, ಇದಂ ಸರ್ವಂ ಮೇಲೆ ಹೇಳಿದ ಎಲ್ಲ ಕಾರ್ಯಂ ಅವಶ್ಯ ಕರ್ತವ್ಯವನ್ನು ಕೃತ್ವಾ ಮಾಡಿ, ಆತ್ಮಾವಿಷ್ಕರಣೇ, ಆತ್ಮ ತನ್ನ ಆವಿಷ್ಕರಣೇ ಸ್ವಲ್ಪ ಬಲವನ್ನು ವ್ಯಕ್ತಗೊಳಿಸಲು, ಚಿತ್ತಂ ಬುದ್ಧಿಯನ್ನು ಚಕ್ರೇ ಮಾಡಿದನು.

ತಾತ್ಪರ್ಯ :- ಜ್ಞಾನಿಗಳಲ್ಲಿ ಅಗ್ರಗಣ್ಯನಾದ ಹನುಮಂತನು ಸೀತೆಗೆ ರಾಮಸಂದೇಶ ತಲುಪಿಸುವುದು ಮತ್ತು ಉಂಗುರ ಸಮರ್ಪಿಸುವುದೇ ಮೊದಲಾದ ಆವಶ್ಯಕ ಕಾರ್ಯಗಳನ್ನು ಮಾಡಿದ ನಂತರ, ತನ್ನ ಶಕ್ತಿಯ ಅಲ್ಪಭಾಗವನ್ನು ಪ್ರಕಟಪಡಿಸ ಬಯಸಿದನು. ॥ ೧೬ ॥

### ಅಶೋಕವನ ಭಂಗ

ಅಥ ವನಮಖಿಲಂ ತದ್ರಾವಣಸ್ಯಾವಲುಂಪ್ಯ
ಕ್ಷಿತಿರುಹಮಿಮಮೇಕಂ ವರ್ಜಯಿತ್ವಾಽಽಶು ವೀರಃ ।
ರಜನಿಚರವಿನಾಶಂ ಕಾಂಕ್ಷಮಾಣೋಽತಿವೇಲಂ
ಮುಹುರತಿರವನಾದೀ ತೋರಣಂ ಚಾರುರೋಹ ॥ ೧೭ ॥

ಪದಚ್ಛೇದ : ಅಥ ವನಂ ಅಖಿಲಂ ತತ್ ರಾವಣಸ್ಯ ಅವಲುಂಪ್ಯ ಕ್ಷಿತಿರುಹಂ ಇಮಂ ಏಕಂ ವರ್ಜಯಿತ್ವಾ ಆಶು ವೀರಃ । ರಜನಿಚರವಿನಾಶಂ ಕಾಂಕ್ಷಮಾಣಃ ಅತಿವೇಲಂ ಮುಹುಃ ಅತಿರವನಾದೀ ತೋರಣಂ ಚ ಆರುರೋಹ ॥

ಅರ್ಥ :- ಅಥ ಅನಂತರ, ರಜನಿಚರವಿನಾಶಂ ರಾತ್ರಿಯಲ್ಲಿ ಸಂಚರಿಸುವ ರಾಕ್ಷಸರ ವಿನಾಶವನ್ನು, ಕಾಂಕ್ಷಮಾಣಃ ಅಪೇಕ್ಷಿಸಿದ, ವೀರಃ ಮಹಾ ಪರಾಕ್ರಮಿಯಾದ ಹನುಮಂತನು, ಇಮಂ ಈ ಸೀತಾಕೃತಿಯು ಕುಳಿತಿರುವ,

**ಏಕಂ ಕ್ಷಿತಿರುಹಂ** ಒಂದು ವೃಕ್ಷವನ್ನು ಮಾತ್ರ, **ವರ್ಜಯಿತ್ವಾ** ಬಿಟ್ಟು, **ಅಖಿಲಂ** ಉಳಿದ, **ರಾವಣಸ್ಯ** ರಾವಣನ, **ತತ್ ವನಂ** ಅಶೋಕವನವನ್ನು, **ಆಶು** ಬೇಗನೇ, **ಅವಲುಂಪ್ಯ** ನಾಶ ಮಾಡಿ, **ಮುಹುಃ** ಮತ್ತೆ ಮತ್ತೆ, **ಅತಿರವನಾದೀ, ಅತಿ** ಅತ್ಯಂತವಾಗಿ, **ರವ** ಗರ್ಜನೆಯನ್ನು **ನಾದೀ** ಮಾಡತಕ್ಕವನಾಗಿ, **ತೋರಣಂ ಚ** ಕೋಟೆಯ ಬಾಗಿಲನ್ನು **ಆರುರೋಹ** ಏರಿದನು.

**ತಾತ್ಪರ್ಯ** :- ಅನಂತರ ರಕ್ಕಸರನ್ನು ಸಂಹರಿಸಬಯಸಿದ ಹನುಮಂತನು ಸೀತಾಮಾತೆ ಕುಳಿತ ಶಿಂಶಪಾವೃಕ್ಷವೊಂದನ್ನು ತೊರೆದು, ರಾವಣನಿಗೆ ಅತಿಪ್ರಿಯವಾದ ಅಶೋಕವನವನ್ನು ಧ್ವಂಸ ಮಾಡಿದನು. ಗಟ್ಟಿಯಾಗಿ ಗರ್ಜಿಸುತ್ತ ಕೋಟೆಯ ಬಾಗಿಲನ್ನೇರಿ ನಿಂದನು. ॥೧೭॥

**ಅಥಾಶ್ರುಣೋದ್ದಶಾನನಃ ಕಪೀಂದ್ರಚೇಷ್ಟಿತಂ ಪರಮ್ ।**
**ದಿದೇಶ ಕಿಂಕರಾನ್ ಬಹೂನ್ ಕಪಿರ್ನಿಗೃಹ್ಯತಾಮಿತಿ ॥ ೧೮ ॥**

**ಪದಚ್ಛೇದ : ಅಥ ಅಶ್ರುಣೋತ್ ದಶಾನನಃ ಕಪೀಂದ್ರಚೇಷ್ಟಿತಂ ಪರಮ್ । ದಿದೇಶ ಕಿಂಕರಾನ್ ಬಹೂನ್ ಕಪಿಃ ನಿಗೃಹ್ಯತಾಂ ಇತಿ ॥**

**ಅರ್ಥ** :- **ಅಥ** ಅನಂತರ, **ದಶಾನನಃ** ರಾವಣನು, **ಪರಂ** ಸಹಿಸಲಾಗದ, **ಕಪೀಂದ್ರಚೇಷ್ಟಿತಂ** ಹನುಮಂತನಿಂದ ಮಾಡಲ್ಪಟ್ಟ ಅಶೋಕವನ ಧ್ವಂಸಾದಿಗಳನ್ನು **ಅಶ್ರುಣೋತ್** ಕೇಳಿದನು, **ಕಪಿಃ** ಹನುಮಂತನು, **ನಿಗೃಹ್ಯತಾಂ** ಬಂಧಿಸಲ್ಪಡಲಿ, **ಇತಿ** ಹೀಗೆ, **ಬಹೂನ್** ಅನೇಕರಾದ, **ಕಿಂಕರಾನ್** ಸೇವಕರನ್ನು **ದಿದೇಶ** ಆಜ್ಞಾಪಿಸಿದನು.

**ತಾತ್ಪರ್ಯ** :- ಹನುಮಂತನಿಂದ ಅಶೋಕವನವು ಧ್ವಸ್ತವಾದ ಸಂಗತಿ ಕೇಳಿದ ರಾವಣನು, ಕ್ರುದ್ಧನಾಗಿ ಕಪಿಯನ್ನು ಹಿಡಿದು ತನ್ನಿರೆಂದು ತನ್ನ ಸೇವಕವರ್ಗಕ್ಕೆ ಆದೇಶಿಸಿದನು. ॥೧೮ ॥

**ಸಮಸ್ತಶೋ ವಿಮೃತ್ಯವೋ ವರಾದ್ಧರಸ್ಯ ಕಿಂಕರಾಃ ।**
**ಸಮಾಸದನ್ ಮಹಾಬಲಂ ಸುರಾಂತರಾತ್ಮನೋಽಂಗಜಮ್ ॥ ೧೯ ॥**

ಪದಚ್ಛೇದ : ಸಮಸ್ತಶಃ ವಿಮೃತ್ಯವಃ ವರಾತ್ ಹರಸ್ಯ ಕಿಂಕರಾಃ । ಸಮಾಸದನ್ ಮಹಾಬಲಂ ಸುರಾಂತರಾತ್ಮನಃ ಅಂಗಜಮ್ ॥

**ಅರ್ಥ** :- **ಹರಸ್ಯ** ರುದ್ರದೇವನ, **ವರಾತ್** ವರದಿಂದ, **ವಿಮೃತ್ಯವಃ** ಮರಣವಿಲ್ಲದ, **ಸಮಸ್ತಶಃ** ಎಲ್ಲ, **ಕಿಂಕರಾಃ** (ರಾವಣನ) ಸೇವಕರು, **ಮಹಾಬಲಂ** ಅತ್ಯಂತ ಬಲಶಾಲಿಯಾದ, **ಸುರಾಂತರಾತ್ಮನಃ** ದೇವತೆಗಳ ಅಂತರ್ನಿಯಾಮ ಕನಾದ ವಾಯುದೇವನ, **ಅಂಗಜಂ** ಮಗನಾದ ಹನುಮಂತನ ಬಳಿಗೆ, **ಸಮಾಸದನ್** ಬಂದರು.

**ತಾತ್ಪರ್ಯ** :- ರುದ್ರದೇವರ ವರದಿಂದ ಅವಧ್ಯರಾಗಿದ್ದ ರಾವಣನ ಕಿಂಕರರು ದೇವತೆಗಳೊಳಗೂ ನಿಯಾಮಕನಾದ ವಾಯುದೇವನ ಮಗನಾದ ಮಹಾ ಪರಾಕ್ರಮಿಯಾದ ಹನುಮಂತನ ಬಳಿ ಆಗಮಿಸಿದರು. ॥ ೧೯ ॥

**ಅಶೀತಿಕೋಟಿಯೂಥಪಂ ಪುರಃಸರಾಷ್ಟಕಾಯುತಮ್ ।**
**ಅನೇಕಹೇತಿಸಂಕುಲಂ ಕಪೀಂದ್ರಮಾವೃಣೋದ್ಬಲಮ್ ॥ ೨೦ ॥**

ಪದಚ್ಛೇದ : **ಅಶೀತಿಕೋಟಿಯೂಥಪಂ ಪುರಃಸರಾಷ್ಟಕಾಯುತಮ್ । ಅನೇಕಹೇತಿಸಂಕುಲಂ ಕಪೀಂದ್ರಂ ಆವೃಣೋತ್ ಬಲಮ್ ॥**

**ಅರ್ಥ** :- **ಅಶೀತಿಕೋಟಿಯೂಥಪಂ** ಎಂಭತ್ತು ಕೋಟಿ ಸೇನಾಪತಿ ಗಳುಳ್ಳ , **ಪುರಸ್ಸರಾಷ್ಟಕಾಯುತಂ** ಎಂಭತ್ತು ಸಾವಿರ ಅಗ್ರೇಸರರಿಂದ ಕೂಡಿದ, **ಅನೇಕಹೇತಿಸಂಕುಲಂ** ನಾನಾವಿಧವಾದ ಆಯುಧಗಳನ್ನು ಧರಿಸಿದ, **ಬಲಂ** ಸೇನೆಯು, **ಕಪೀಂದ್ರಂ** ಕಪಿಶ್ರೇಷ್ಠನಾದ ಹನುಮಂತನನ್ನು, **ಆವೃಣೋತ್** ಸುತ್ತುವರೆಯಿತು (ಆಕ್ರಮಿಸಿತು).

**ತಾತ್ಪರ್ಯ** :- ಎಂಬತ್ತು ಕೋಟಿ ಸೇನಾಧೀಶರಿಂದ ಹಾಗೂ ಎಂಬತ್ತು ಸಾವಿರ ವೀರರಿಂದ ಸಮ್ಮಿಲಿತವಾದ ನಾನಾಬಗೆಯ ಆಯುಧಗಳನ್ನು ಧರಿಸಿದ ರಾವಣನ ಸೇನೆ, ಕಪಿಪ್ರವರನಾದ ಹನುಮಂತನನ್ನು ಸುತ್ತುವರೆಯಿತು (ಆಕ್ರಮಿಸಿತು). ॥ ೨೦ ॥

**ಸಮಾವೃತಸ್ತಥಾऽऽಯುಧೈಃ ಸ ತಾಡಿತಶ್ಚ ತೈರ್ಭೃಶಮ್ ।**
**ಚಕಾರ ತಾನ್ ಸಮಸ್ತಶಸ್ತಲಪ್ರಹಾರಚೂರ್ಣಿತಾನ್ ॥ ೨೧ ॥**

ಪದಚ್ಛೇದ : ಸಮಾವೃತಃ ತಥಾ ಆಯುಧೈಃ ಸಃ ತಾಡಿತಃ ಚ ತೈಃ ಭೃಶಮ್ । ಚಕಾರ ತಾನ್ ಸಮಸ್ತಶಃ ತಲಪ್ರಹಾರಚೂರ್ಣಿತಾನ್ ॥

**ಅರ್ಥ** :- **ತೈಃ** ಆ ಕಿಂಕರರಿಂದ, **ಸಮಾವೃತಃ** ಸುತ್ತುವರೆಯಲ್ಪಟ್ಟ **ತಥಾ** ಅದರಂತೆ, **ಭೃಶಂ** ಬಹಳವಾಗಿ, **ಆಯುಧೈಃ** ಆಯುಧಗಳಿಂದ, **ತಾಡಿತಶ್ಚ** ಹೊಡೆಯಲ್ಪಟ್ಟ **ಸಃ** ಆ ಹನುಮಂತನು, **ಸಮಸ್ತಶಃ** ಎಲ್ಲ **ತಾನ್** ಆ ಕಿಂಕರರನ್ನು **ತಲಪ್ರಹಾರಚೂರ್ಣಿತಾನ್** ಅಂಗೈಯ ಹೊಡೆತದಿಂದ ಪುಡಿ ಪುಡಿಯಾದವರನ್ನಾಗಿ, **ಚಕಾರ** ಮಾಡಿದನು.

**ತಾತ್ಪರ್ಯ** :- ಸುತ್ತುವರಿದ ಸೇನೆ ನಾನಾ ಆಯುಧಗಳಿಂದ ಹನುಮಂತನ ಮೇಲೆ ಪ್ರಹಾರಗೈದಿತು. ಹನುಮಂತನು ಎಲ್ಲ ಕಿಂಕರರನ್ನು ತನ್ನ ಅಂಗೈಯ ಹೊಡೆತದಿಂದಲೇ ಸಂಹರಿಸಿದನು. ॥ ೨೧ ॥

**ಪುನಶ್ಚ ಮಂತ್ರಿಪುತ್ರಕಾನ್ ಸ ರಾವಣಪ್ರಚೋದಿತಾನ್ ।**
**ಮಮರ್ದ ಸಪ್ತ ಪರ್ವತಪ್ರಭಾನ್ ವರಾಭಿರಕ್ಷಿತಾನ್ ॥ ೨೨ ॥**

ಪದಚ್ಛೇದ : ಪುನಃ ಚ ಮಂತ್ರಿಪುತ್ರಕಾನ್ ಸಃ ರಾವಣಪ್ರಚೋದಿತಾನ್ । ಮಮರ್ದ ಸಪ್ತ ಪರ್ವತಪ್ರಭಾನ್ ವರಾಭಿರಕ್ಷಿತಾನ್ ॥

**ಅರ್ಥ** :- **ಪುನಶ್ಚ** ಮತ್ತು, **ಸಃ** ಆ ಹನುಮಂತನು, **ರಾವಣ ಪ್ರಚೋದಿತಾನ್** ರಾವಣನಿಂದ ಕಳುಹಿಸಲ್ಪಟ್ಟ **ಪರ್ವತಪ್ರಭಾನ್** ಪರ್ವತದಂತೆ ಬಲಾಢ್ಯರಾದ, **ವರಾಭಿರಕ್ಷಿತಾನ್** ಬ್ರಹ್ಮ-ರುದ್ರರ ವರದಿಂದ ರಕ್ಷಿತರಾದ, **ಮಂತ್ರಿಪುತ್ರಕಾನ್** ಮಂತ್ರಿಪುತ್ರರನ್ನು, **ಮಮರ್ದ** ಪಾದದಿಂದ ಸಂಹರಿಸಿದನು.

**ತಾತ್ಪರ್ಯ** :- ರಾವಣನಿಂದ ಕಳುಹಲ್ಪಟ್ಟ ಬೆಟ್ಟದಂತೆ ಬಲಿಷ್ಠರಾದ, ಬ್ರಹ್ಮದೇವರ ವರದಿಂದ ಅವಧ್ಯರಾದ ಏಳು ಮಂತ್ರಿಕುಮಾರರನ್ನು ಹನುಮಂತನು ಕಾಲಿನಿಂದ ತುಳಿದು ಸಂಹರಿಸಿದನು. ॥ ೨೨ ॥

**ಬಲಾಗ್ರಗಾಮಿನಸ್ತಥಾ ಸ ಶರ್ವವಾಕ್ಸುಗರ್ವಿತಾನ್ ।**
**ನಿಹತ್ಯ ಸರ್ವರಕ್ಷಸಾಂ ತೃತೀಯಭಾಗಮಕ್ಷಿಣೋತ್ ॥ ೨೩ ॥**

ಪದಚ್ಛೇದ : ಬಲಾಗ್ರಗಾಮಿನಃ ತಥಾ ಸಃ ಶರ್ವವಾಕ್ಸುಗರ್ವಿತಾನ್ । ನಿಹತ್ಯ ಸರ್ವರಕ್ಷಸಾಂ ತೃತೀಯಭಾಗಂ ಅಕ್ಷಿಣೋತ್ ॥

**ಅರ್ಥ** :- **ಶರ್ವವಾಕ್ಸುಗರ್ವಿತಾನ್** ರುದ್ರದೇವರ ವರದಿಂದ ಅತ್ಯಂತ ಗರ್ವಿಷ್ಠರಾದ, **ಬಲಾಗ್ರಗಾಮಿನಃ** ಸೇನಾನಿಯಾಮಕರಾದವರನ್ನು **ನಿಹತ್ಯ**

ಕೊಂದು, **ಸಃ** ಆ ಹನುಮಂತನು, **ಸರ್ವರಕ್ಷಸಾಂ** ಎಲ್ಲಾ ರಾಕ್ಷಸರ, **ತೃತೀಯ ಭಾಗಂ** ಮೂರನೆಯ ಭಾಗವನ್ನು **ಅಕ್ಷಿಣೋತ್** ವಿನಾಶ ಪಡಿಸಿದನು.

**ತಾತ್ಪರ್ಯ** :- ರುದ್ರದೇವರ ವರದಿಂದ ಅವಧ್ಯರಾದ ಅನೇಕ ಸೇನಾ ನಾಯಕರನ್ನು ಸಂಹರಿಸಿದ ಹನುಮಂತನು, ರಾವಣನ ಮೂರನೆಯ ಒಂದು ಭಾಗ ಸೈನ್ಯವನ್ನು ವಿನಾಶಗೊಳಿಸಿದನು. ॥ ೨೩ ॥

### ಅಕ್ಷಕುಮಾರನ ಸಂಹಾರ

**ಅನೌಪಮಂ ಹರೇರ್ಬಲಂ ನಿಶಮ್ಯ ರಾಕ್ಷಸಾಧಿಪಃ ।**
**ಕುಮಾರಮಕ್ಷಮಾತ್ಮನಃ ಸಮಂ ಸುತಂ ನ್ಯಯೋಜಯತ್ ॥ ೨೪ ॥**

ಪದಚ್ಛೇದ : ಅನೌಪಮಂ ಹರೇಃ ಬಲಂ ನಿಶಮ್ಯ ರಾಕ್ಷಸಾಧಿಪಃ । ಕುಮಾರಂ ಅಕ್ಷಂ ಆತ್ಮನಃ ಸಮಂ ಸುತಂ ನ್ಯಯೋಜಯತ್ ॥

**ಅರ್ಥ** :- **ಹರೇಃ** ಹನುಮಂತನ, **ಅನೌಪಮಂ** ಅಸದೃಶವಾದ, **ಬಲಂ** ಸಾಮರ್ಥ್ಯವನ್ನು, **ನಿಶಮ್ಯ** ಕೇಳಿ, **ರಾಕ್ಷಸಾಧಿಪಃ** ರಾಕ್ಷಸರ ಒಡೆಯನಾದ ರಾವಣನು, **ಆತ್ಮನಃ ಸಮಂ** ತನಗೆ ಸಮನಾದ, **ಸುತಂ** ಮಗನಾದ, **ಕುಮಾರಮ್ ಅಕ್ಷಂ** ಅಕ್ಷಕುಮಾರನನ್ನು **ನ್ಯಯೋಜಯತ್** ಯುದ್ಧ ಮಾಡಲು ಕಳುಹಿಸಿದನು.

**ತಾತ್ಪರ್ಯ** :- ಕಪಿಯ ಬಲ ಅಸದೃಶವಾದುದೆಂದು ತಿಳಿದ ರಾವಣನು ಕಪಿಯನ್ನು ನಿಗ್ರಹಿಸಲು ವಿಕ್ರಮದಲ್ಲಿ ತನಗೆ ಸಮನಾದ ಅಕ್ಷಕುಮಾರನನ್ನು ಕಳುಹಿಸಿದನು. ॥ ೨೪ ॥

**ಸ ಸರ್ವಲೋಕಸಾಕ್ಷಿಣಃ ಸುತಂ ಶರೈರ್ವವರ್ಷ ಹ ।**
**ಶಿತೈರ್ವರಾಸ್ತ್ರಮಂತ್ರಿತೈರ್ನ ಚೈನಮಭ್ಯಚಾಲಯತ್ ॥ ೨೫ ॥**

ಪದಚ್ಛೇದ : ಸಃ ಸರ್ವಲೋಕಸಾಕ್ಷಿಣಃ ಸುತಂ ಶರೈಃ ವವರ್ಷ ಹ । ಶಿತೈಃ ವರಾಸ್ತ್ರಮಂತ್ರಿತೈಃ ನ ಚ ಏನಂ ಅಭ್ಯಚಾಲಯತ್ ॥

**ಅರ್ಥ** :- **ಸಃ** ಆ ಅಕ್ಷಕುಮಾರನು, **ಸರ್ವಲೋಕಸಾಕ್ಷಿಣಃ** ಸಮಸ್ತ ಲೋಕಕ್ಕೆ ಅಂತರ್ಯಾಮಿಯಾದ ವಾಯುದೇವನ, **ಸುತಂ** ಮಗನಾದ

ಹನುಮಂತನನ್ನು, **ಶಿತೈಃ** ತೀಕ್ಷ್ಣವಾದ, **ವರಾಸ್ತ್ರಮಂತ್ರಿತೈಃ** ಶ್ರೇಷ್ಠವಾದ ಅಸ್ತ್ರಮಂತ್ರಗಳಿಂದ ಅಭಿಮಂತ್ರಿತವಾದ, **ಶರೈಃ** ಬಾಣಗಳಿಂದ, **ವವರ್ಷ ಹ** ಮಳೆಗರೆದನು, ಏನಂ ಈ ಹನುಮಂತನನ್ನು **ನ ಚ ಅಭ್ಯಚಾಲಯತ್** ಸ್ವಲ್ಪವೂ ಅಲುಗಾಡಿಸಲು ಸಮರ್ಥನಾಗಲಿಲ್ಲ.

**ತಾತ್ಪರ್ಯ** :- ಆ ಅಕ್ಷಕುಮಾರನು ವಾಯುಪುತ್ರನಾದ ಹನುಮಂತನ ಮೇಲೆ ಶ್ರೇಷ್ಠವಾದ ಮಂತ್ರಗಳಿಂದ ಅಭಿಮಂತ್ರಿತವಾದ ಬಾಣಗಳ ಮಳೆಗೆರೆದನು. ಆದರೂ ಅವನಿಗೆ ಯಾವ ರೀತಿಯಿಂದಲೂ ಹನುಮಂತನನ್ನು ಅಲುಗಾಡಿಸಲು ಸಾಧ್ಯವಾಗಲಿಲ್ಲ. ॥ ೨೫ ॥

**ಸ ಮಂಡಮಧ್ಯಕಾಸುತಂ ಸಮೀಕ್ಷ್ಯ ರಾವಣೋಪಮಮ್ ।**
**ತೃತೀಯ ಏಷ ಚಾಂಶಕೋ ಬಲಸ್ಯ ಹೀತ್ಯಚಿಂತಯತ್ ॥ ೨೬ ॥**

**ಪದಚ್ಛೇದ** : ಸಃ ಮಂಡಮಧ್ಯಕಾಸುತಂ ಸಮೀಕ್ಷ್ಯ ರಾವಣೋಪಮಮ್ । ತೃತೀಯಃ ಏಷಃ ಚ ಅಂಶಕಃ ಬಲಸ್ಯ ಹಿ ಇತಿ ಅಚಿಂತಯತ್ ॥

**ಅರ್ಥ** :- ಸಃ ಆ ಹನುಮಂತನು, **ಮಂಡಮಧ್ಯಕಾಸುತಂ** ಮಂಡೋದರಿಯ ಮಗನಾದ, **ರಾವಣೋಪಮಂ** ರಾವಣನಿಗೆ ಸದೃಶನಾದ ಅಕ್ಷಕುಮಾರನನ್ನು, **ಈಕ್ಷ್ಯ** ನೋಡಿ, **ಏಷಃ ಚ** ಈ ಅಕ್ಷ ಕುಮಾರನು, **ಬಲಸ್ಯ** ರಾವಣನ ಬಲದ, **ತೃತೀಯಃ ಅಂಶಕಃ** ಮೂರನೆಯ ಒಂದು ಭಾಗದ ಶಕ್ತಿಯುಳ್ಳವನು, **ಇತಿ** ಹೀಗೆ, **ಅಚಿಂತಯತ್** ತಿಳಿದನು.

**ತಾತ್ಪರ್ಯ** :- ಮಂಡೋದರಿಯ ಮಗನಾದ ಅಕ್ಷಕುಮಾರನನ್ನು ಕಂಡ ಹನುಮ, ಇವನು 'ರಾವಣಸದೃಶ ಪರಾಕ್ರಮಿಯಾಗಿದ್ದಾನೆ, ಇವನನ್ನು ಸಂಹರಿಸಿದರೆ ರಾವಣನ ಬಲದ ಮೂರನೆಯ ಒಂದು ಭಾಗವನ್ನು ಸಂಹರಿಸಿದಂತೆ' ಎಂದಾಲೋಚಿಸಿದ. ॥ ೨೬ ॥

**ನಿಧಾರ್ಯ ಏವ ರಾವಣಃ ಸ ರಾಘವಾಯ ನಾನ್ಯಥಾ ।**
**ಯದೀಂದ್ರಜಿನ್ಮಯಾ ಹತೋ ನ ಚಾಸ್ಯ ಶಕ್ತಿರೀಕ್ಷ್ಯತೇ ॥ ೨೭ ॥**

**ಪದಚ್ಛೇದ** : ನಿಧಾರ್ಯ ಏವ ರಾವಣಃ ಸಃ ರಾಘವಾಯ ನ ಅನ್ಯಥಾ । ಯದಿ ಇಂದ್ರಜಿತ್ ಮಯಾ ಹತಃ ನ ಚ ಅಸ್ಯ ಶಕ್ತಿಃ ಈಕ್ಷ್ಯತೇ ॥

**ಅರ್ಥ :- ಸಃ ರಾವಣಃ** ಆ ರಾವಣನು, **ರಾಘವಾಯ** ಶ್ರೀ ರಾಮಚಂದ್ರನಿಂದ ಸಂಹೃತನಾಗಲು, **ನಿರ್ಧಾರ್ಯ ಏವ** ಬಿಡಲೇ ಬೇಕಾದವನಾಗಿದ್ದಾನೆ, **ಚ** ಮತ್ತು, **ಅನ್ಯಥಾ ನ** ಶ್ರೀರಾಮನ ಸಂಕಲ್ಪ ಬದಲಾಯಿಸಲಾಗದು, **ಯದಿ** ಒಂದು ವೇಳೆ, **ಇಂದ್ರಜಿತ್** ಇಂದ್ರಜಿತ್ ಎಂಬುವನು, **ಮಯಾ** ನನ್ನಿಂದ, **ಹತಃ** ಹತನಾದರೆ, **ಅಸ್ಯ** ಈ ಇಂದ್ರಜಿತ್ ದೈತ್ಯನ, **ಶಕ್ತಿಃ** ಶಸ್ತ್ರಾಸ್ತ್ರ ಮತ್ತು ಶಾರೀರ ಬಲವು, **ನ ಈಕ್ಷ್ಯತೇ** (ನಮ್ಮವರಿಂದ) ನೋಡಲ್ಪಡುವುದಿಲ್ಲ.

**ತಾತ್ಪರ್ಯ :-** ಶ್ರೀರಾಮನಿಗಾಗಿ ರಾವಣನನ್ನು ಸಂಹರಿಸುವುದಿಲ್ಲ. ಶ್ರೀರಾಮನೇ ರಾವಣಸಂಹಾರಿಯಾಗಬೇಕು. ಮುಂದೆ ಬರಲಿರುವ ಇಂದ್ರಜಿತ್‌ನನ್ನು ನಾನು ಈಗ ಸಂಹರಿಸಿದರೆ ಅವನ ಬಲ-ವಿಕ್ರಮಗಳ ಪರಿಚಯ ಕಪಿಸೈನ್ಯಕ್ಕೆ ಆಗಲಾರದು. ॥ ೨೭ ॥

**ಅತಸ್ತಯೋಃ ಸಮೋ ಮಯಾ ತೃತೀಯ ಏಷ ಹನ್ಯತೇ ।**
**ವಿಚಾರ್ಯ ಚೈವಮಾಶು ತಂ ಪದೋಃ ಪ್ರಗೃಹ್ಯ ಪುಪ್ಲುವೇ ॥ ೨೮ ॥**

ಪದಚ್ಛೇದ : ಅತಃ ತಯೋಃ ಸಮಃ ಮಯಾ ತೃತೀಯಃ ಏಷಃ ಹನ್ಯತೇ । ವಿಚಾರ್ಯ ಚ ಏವಂ ಆಶು ತಂ ಪದೋಃ ಪ್ರಗೃಹ್ಯ ಪುಪ್ಲುವೇ ॥

**ಅರ್ಥ :- ಅತಃ** ಆದ್ದರಿಂದ, **ತಯೋಃ** ರಾವಣ ಇಂದ್ರಜಿತರಿಗೆ, **ಸಮಃ** ಸದೃಶನಾದ, **ತೃತೀಯಃ** ಮೂರನೆಯವನಾದ, **ಏಷಃ** ಈ ಅಕ್ಷಕುಮಾರನು, **ಮಯಾ** ನನ್ನಿಂದ, **ಹನ್ಯತೇ** ಕೊಲ್ಲಲ್ಪಡುತ್ತಾನೆ, **ಏವಂ** ಈ ರೀತಿ, **ವಿಚಾರ್ಯ ಚ** ವಿಚಾರ ಮಾಡಿ, **ಪದೋಃ** ಅಕ್ಷಕುಮಾರನ ಪಾದಗಳನ್ನು, **ಪ್ರಗೃಹ್ಯ** ಹಿಡಿದು, **ಆಶು** ಬೇಗನೇ, **ತಂ** ಆ ಅಕ್ಷಕುಮಾರನನ್ನು **ಪುಪ್ಲುವೇ** ತಿರುಗಿಸಿದನು.

**ತಾತ್ಪರ್ಯ :-** ಆದ್ದರಿಂದ ರಾವಣ ಹಾಗೂ ಇಂದ್ರಜಿತ್‌ರಿಗೆ ಬಲದಲ್ಲಿ ಸಮನೆನಿಸಿದ ಅಕ್ಷಕುಮಾರನನ್ನು ಸಂಹರಿಸುವೆನೆಂದು ಸಂಕಲ್ಪಿಸಿದ ಹನುಮ, ಅವನ ಎರಡು ಕಾಲುಗಳನ್ನು ಹಿಡಿದೆತ್ತಿ ಮೇಲೆ ಹಾರಿದ. ॥ ೨೮ ॥

**ಸ ಚಕ್ರವದ್ಭ್ರಮಾತುರಂ ವಿಧಾಯ ರಾವಣಾತ್ಮಜಮ್ ।**
**ಅಪೋಥಯದ್ಧರಾತಲೇ ಕ್ಷಣೇನ ಮಾರುತೀತನುಃ ॥ ೨೯ ॥**

ಪದಚ್ಛೇದ : ಸಃ ಚಕ್ರವತ್ ಭ್ರಮಾತುರಂ ವಿಧಾಯ ರಾವಣಾತ್ಮಜಮ್ । ಅಪೋಥಯತ್ ಧರಾತಲೇ ಕ್ಷಣೇನ ಮಾರುತೀತನುಃ ॥

**ಅರ್ಥ :- ಮಾರುತೀತನುಃ** ವಾಯುವಿನ ಅವತಾರನಾದ, **ಸಃ** ಆ ಹನುಮಂತನು, **ರಾವಣಾತ್ಮಜಂ** ರಾವಣನ ಮಗನಾದ ಅಕ್ಷಕುಮಾರನನ್ನು **ಚಕ್ರವತ್** ಚಕ್ರದಂತೆ, **ಭ್ರಮಾತುರಂ** ತಿರುಗಿಸುತ್ತಿರುವುದರಿಂದ ವ್ಯಾಕುಲಿತನನ್ನಾಗಿ, **ವಿಧಾಯ** ಮಾಡಿ, **ಕ್ಷಣೇನ** ಒಂದು ಕ್ಷಣದಲ್ಲಿ, **ಧರಾತಲೇ** ಭೂಮಿಯ ಮೇಲೆ, **ಅಪೋಥಯತ್** ಅಪ್ಪಳಿಸಿದನು.

**ತಾತ್ಪರ್ಯ :-** ಹನುಮಂತ ಎತ್ತರಕ್ಕೆ ಹಾರಿ, ಅಲ್ಲಿ ಚಕ್ರದಂತೆ ಅಕ್ಷಕುಮಾರನನ್ನು ಗರಗರ ತಿರುಗಿಸಿ ಕ್ಷಣಮಾತ್ರದಲ್ಲಿ ನೆಲಕ್ಕಪ್ಪಳಿಸಿದನು.॥೨೯॥

**ವಿಚೂರ್ಣಿತೇ ಧರಾತಲೇ ನಿಜೇ ಸುತೇ ಸ ರಾವಣಃ ।**
**ನಿಶಮ್ಯ ಶೋಕತಾಪಿತಸ್ತದಗ್ರಜಂ ಸಮಾದಿಶತ್ ॥ ೩೦ ॥**

ಪದಚ್ಛೇದ : ವಿಚೂರ್ಣಿತೇ ಧರಾತಲೇ ನಿಜೇ ಸುತೇ ಸಃ ರಾವಣಃ । ನಿಶಮ್ಯ ಶೋಕತಾಪಿತಃ ತದಗ್ರಜಂ ಸಮಾದಿಶತ್ ॥

**ಅರ್ಥ :- ಧರಾತಲೇ** ಭೂಮಿಯಲ್ಲಿ, **ನಿಜೇ ಸುತೇ** ತನ್ನ ಮಗನು, **ವಿಚೂರ್ಣಿತೇ** ಮೃತನಾದುದನ್ನು, **ನಿಶಮ್ಯ** ಕೇಳಿ, **ಶೋಕತಾಪಿತಃ** ದುಃಖತಪ್ತನಾದ, **ಸಃ ರಾವಣಃ** ಆ ರಾವಣನು, **ತದಗ್ರಜಂ** ಅಕ್ಷಕುಮಾರನ ಅಣ್ಣನಾದ ಇಂದ್ರಜಿತ್‌ನನ್ನು, **ಸಮಾದಿಶತ್** ಯುದ್ಧಕ್ಕೆ ಹೋಗಲು ಆಜ್ಞಾಪಿಸಿದನು.

**ತಾತ್ಪರ್ಯ :-** ತನ್ನ ಮಗ ಯುದ್ಧಭೂಮಿಯಲ್ಲಿ ಹನುಮಂತನಿಂದ ನೆಲದಲ್ಲಿ ಅಪ್ಪಳಿಸಲ್ಪಟ್ಟು ಮೃತನಾದ ವಾರ್ತೆ ಕೇಳಿದ ರಾವಣ, ಶೋಕ ಸಂತಪ್ತನಾದ. ಅನಂತರ ಅಕ್ಷಕುಮಾರನ ಅಣ್ಣನಾದ ಇಂದ್ರಜಿತ್‌ನನ್ನು ಯುದ್ಧಕ್ಕೆ ಹೋಗಲು ಆಜ್ಞಾಪಿಸಿದನು. ॥ ೩೦ ॥

### ಇಂದ್ರಜಿತ್ ಆಗಮನ

**ಅಥೇಂದ್ರಜಿನ್ಮಹಾಶರೈರ್ವರಾಸ್ತ್ರಸಂಪ್ರಯೋಜಿತೈಃ ।**
**ತತಕ್ಷ ವಾನರೋತ್ತಮಂ ನ ಚಾಶಕದ್ವಿಚಾಲನೇ ॥ ೩೧ ॥**

ಪದಚ್ಛೇದ : ಅಥ ಇಂದ್ರಜಿತ್ ಮಹಾಶರೈಃ ವರಾಸ್ತ್ರಸಂಪ್ರಯೋಜಿತೈಃ । ತತಕ್ಷ ವಾನರೋತ್ತಮಂ ನ ಚ ಅಶಕತ್ ವಿಚಾಲನೇ ॥

**ಅರ್ಥ :- ಅಥ** ಅನಂತರದಲ್ಲಿ, **ಇಂದ್ರಜಿತ್** ಇಂದ್ರಜಿತನು, **ವರಾಸ್ತ್ರ** ಸಂಪ್ರಯೋಜಿತೈಃ ಶ್ರೇಷ್ಠವಾದ ಅಸ್ತ್ರಮಂತ್ರಗಳಿಂದ ಅಭಿಮಂತ್ರಿತವಾದ, **ಮಹಾ ಶರೈಃ** ತೀಕ್ಷ್ಣವಾದ ಬಾಣಗಳಿಂದ, **ವಾನರೋತ್ತಮಂ** ಹನುಮಂತನನ್ನು, **ತತಕ್ಷ** ತಾಡನ ಮಾಡಿದನು. ಆದರೆ, **ವಿಚಾಲನೇ** ಅಲುಗಾಡಿಸುವ ವಿಷಯದಲ್ಲಿ, **ನ ಚ ಅಶಕತ್** ಶಕ್ತನಾಗಲಿಲ್ಲ.

**ತಾತ್ಪರ್ಯ :-** ಅನಂತರ ಯುದ್ಧಭೂಮಿಗೆ ಬಂದ ಇಂದ್ರಜಿತ್ ದಿವ್ಯಾಸ್ತ್ರಗಳನ್ನು ಹನುಮಂತನ ಮೇಲೆ ಪ್ರಯೋಗಿಸಿದ. ಆದರೂ ಹನುಮಂತನನ್ನು ವಿಚಲಿತಗೊಳಿಸಲು ಸಮರ್ಥನಾಗಲಿಲ್ಲ. ॥ ೩೧ ॥

**ಅಥಾಸ್ತ್ರಮುತ್ತಮಂ ವಿಧೇರ್ಯುಯೋಜ ಸರ್ವದುಃಸಹಮ್ ।**
**ಸ ತೇನ ತಾಡಿತೋ ಹರಿರ್ವ್ಯಚಿಂತಯನ್ನಿರಾಕುಲಃ ॥ ೩೨ ॥**

ಪದಚ್ಛೇದ : **ಅಥ ಅಸ್ತ್ರಂ ಉತ್ತಮಂ ವಿಧೇಃ ಯುಯೋಜ ಸರ್ವದುಃಸಹಮ್ ।**
**ಸಃ ತೇನ ತಾಡಿತಃ ಹರಿಃ ವ್ಯಚಿಂತಯತ್ ನಿರಾಕುಲಃ ॥**

**ಅರ್ಥ :- ಅಥ** ಅನಂತರದಲ್ಲಿ, **ಸಃ** ಆ ಇಂದ್ರಜಿತನು, **ಸರ್ವದುಸ್ಸಹಂ** ಯಾರಿಂದಲೂ ಎದುರಿಸಲಾಗದ, **ಉತ್ತಮಂ** ಶ್ರೇಷ್ಠವಾದ, **ವಿಧೇಃ ಅಸ್ತ್ರಂ** ಬ್ರಹ್ಮಾಸ್ತ್ರವನ್ನು, **ಯುಯೋಜ** ಪ್ರಯೋಗಿಸಿದನು, **ನಿರಾಕುಲಃ** ಉದ್ವೇಗರಹಿತನಾದ, **ಹರಿಃ** ಹನುಮಂತನು, **ತೇನ** ಆ ಬ್ರಹ್ಮಾಸ್ತ್ರದಿಂದ, **ತಾಡಿತಃ ಸನ್** ಹೊಡೆಯಲ್ಪಟ್ಟವನಾಗಿ, **ವ್ಯಚಿಂತಯತ್** ವಿಚಾರ ಮಾಡಿದನು.

**ತಾತ್ಪರ್ಯ :-** ನಂತರ, ಯಾರಿಂದಲೂ ತಡೆಯಲಾಗದ ಬ್ರಹ್ಮಾಸ್ತ್ರವನ್ನು ಇಂದ್ರಜಿತ್ ಹನುಮಂತನ ಮೇಲೆ ಪ್ರಯೋಗಿಸಿದ. ಆದರಿಂದ ವಿಚಲಿತನಾಗದ ಹನುಮಂತ ಆಲೋಚಿಸಿದ. ॥ ೩೨ ॥

### ಅಣ್ಣನನ್ನು ಗೌರವಿಸಿದ ಕಪಿ

**ಮಯ ವರಾ ವಿಲಂಘಿತಾ ಹ್ಯನೇಕಶಃ ಸ್ವಯಂಭುವಃ ।**
**ಸ ಮಾನನೀಯ ಏವ ಮೇ ತತೋಽತ್ರ ಮಾನಯಾಮ್ಯಹಮ್ ॥ ೩೩ ॥**

ಪದಚ್ಛೇದ : ಮಯಾ ವರಾಃ ವಿಲಂಘಿತಾಃ ಹಿ **ಅನೇಕಶಃ ಸ್ವಯಂಭುವಃ । ಸಃ**
ಮಾನನೀಯಃ ಏವ ಮೇ ತತಃ ಅತ್ರ ಮಾನಯಾಮಿ **ಅಹಮ್ ॥**

**ಅರ್ಥ** :- **ಸ್ವಯಂಭುವಃ** ಬ್ರಹ್ಮದೇವರ, **ವರಾಃ** ವರಗಳು, **ಮಯಾ** ನನ್ನಿಂದ, **ವಿಲಂಘಿತಾಃ** ಉಲ್ಲಂಘಿಸಲ್ಪಟ್ಟಿವೆ, **ಸಃ** ಆ ಬ್ರಹ್ಮದೇವರು, **ಮೇ** ನನಗೆ, **ಮಾನನೀಯ ಏವ** ಮಾನ್ಯರೇ ಆಗಿದ್ದಾರೆ, **ತತಃ** ಆದ್ದರಿಂದ, **ಅತ್ರ** ಈ ಇಂದ್ರಜಿತನು ಪ್ರಯೋಗಿಸಿದ ಬ್ರಹ್ಮಾಸ್ತ್ರ ವಿಷಯದಲ್ಲಿ **ಅಹಂ** ನಾನು, **ಮಾನಯಾಮಿ** ಬ್ರಹ್ಮದೇವರ ವರವನ್ನು ಮಾನ್ಯ ಮಾಡುತ್ತೇನೆ.

**ತಾತ್ಪರ್ಯ** :- ನಾನೀಗಾಗಲೇ ಬ್ರಹ್ಮವರದಿಂದ ಅವಧ್ಯರಾದ ರಕ್ಕಸರನ್ನು ಸಂಹರಿಸುವ ಮೂಲಕ ಅನೇಕ ಬಾರಿ ಬ್ರಹ್ಮವರಗಳನ್ನು ಉಲ್ಲಂಘಿಸಿದ್ದೇನೆ. ಚತುರ್ಮುಖ ನನಗೆ ಮಾನ್ಯನೇ ಆಗಿರುವನು. ಆದ್ದರಿಂದ ಈಗ ಈ ಅಸ್ತ್ರಕ್ಕೆ ಬಂಧಿತನಂತೆ ತೋರಿಸಿಕೊಳ್ಳುವೆ ಎಂದು ಹನುಮಂತ ಚಿಂತಿಸಿದ. ॥ ೩೩ ॥

**ಇಮೇ ಚ ಕುರ್ಯುರತ್ರ ಕಿಂ ಪ್ರಹೃಷ್ಟರಕ್ಷಸಾಂ ಗಣಾಃ ।**
**ಇತೀಹ ಲಕ್ಷ್ಯಮೇವ ಮೇ ಸ ರಾವಣಶ್ಚ ದೃಶ್ಯತೇ ॥ ೩೪ ॥**

ಪದಚ್ಛೇದ : ಇಮೇ ಚ ಕುರ್ಯುಃ ಅತ್ರ ಕಿಂ ಪ್ರಹೃಷ್ಟರಕ್ಷಸಾಂ ಗಣಾಃ । ಇತಿ ಇಹ ಲಕ್ಷ್ಯಂ ಏವ ಮೇ ಸಃ ರಾವಣಃ ಚ ದೃಶ್ಯತೇ ॥

**ಅರ್ಥ** :- **ಅತ್ರ** ನನ್ನಿಂದ ಈ ಅಸ್ತ್ರವನ್ನು ಗೌರವಿಸಿದಾಗ, **ಇಮೇ** ಈ, **ಪ್ರಹೃಷ್ಟರಕ್ಷಸಾಂ** ಸಂತುಷ್ಟರಾದ ರಾಕ್ಷಸರ, **ಗಣಾಃ** ಸಮುದಾಯಗಳು **ಕಿಂ ಚ ಕುರ್ಯುಃ** ಏನು ಮಾಡುತ್ತಾರೆ? **ಇತಿ** ಹೀಗೆ, **ಇಹ** ಇಲ್ಲಿ, **ಲಕ್ಷ್ಯಮೇವ** ತಿಳಿಯಬೇಕಾಗಿದೆ, **ಚ** ಮತ್ತು, **ಸಃ ರಾವಣಃ** ಆ ರಾವಣನು, **ದೃಶ್ಯತೇ** ನನ್ನಿಂದ ನೋಡಲ್ಪಡುತ್ತಾನೆ (ರಾವಣನ ಭೇಟಿ ಅಭಿಲಷಿತವಾಗಿದೆ).

**ತಾತ್ಪರ್ಯ** :- ಸಂತಸದ ಪರಾಕಾಷ್ಠೆಯಲ್ಲಿರುವ ಈ ರಕ್ಕಸರು ಹೇಗೆ ವರ್ತಿಸುವರು ಎಂಬುದನ್ನು ನಾನು ನೋಡಬೇಕು. ಇದಲ್ಲದೆ ಅನಾಯಾಸವಾಗಿ ರಾವಣನ ಭೇಟಿ ಕೂಡ ಸಾಧ್ಯವಾಗುವುದು. ಆದ್ದರಿಂದ ಮುಗ್ಧನಂತೆ ತೋರಿಸಿ ಕೊಳ್ಳುವೆ ಎಂದುಕೊಂಡ ಹನುಮಂತ. ॥ ೩೪ ॥

**ಇದಂ ಸಮೀಕ್ಷ್ಯ ಬದ್ಧವತ್ ಸ್ಥಿತಂ ಕಪೀಂದ್ರಮಾಶು ತೇ ।**
**ಬಬಂಧುರನ್ಯಪಾಶಕೈರ್ಜಗಾಮ ಚಾಸ್ತ್ರಮಸ್ಯ ತತ್ ॥ ೩೫ ॥**

ಪದಚ್ಛೇದ : ಇದಂ ಸಮೀಕ್ಷ್ಯ ಬದ್ಧವತ್ ಸ್ಥಿತಂ ಕಪೀಂದ್ರಂ ಆಶು ತೇ । ಬಬಂಧುಃ ಅನ್ಯಪಾಶಕೈಃ ಜಗಾಮ ಚ ಅಸ್ತ್ರಂ ಅಸ್ಯ ತತ್ ॥

**ಅರ್ಥ** :- **ಇದಂ** ಈ ಕಾರ್ಯದ್ವಯವನ್ನು **ಸಮೀಕ್ಷ್ಯ** ವಿಚಾರ ಮಾಡಿ, **ಬದ್ಧವತ್** ಬದ್ಧನಾದಂತೆ, **ಸ್ಥಿತಂ** ನಿಂತ, **ಕಪೀಂದ್ರಂ** ಕಪಿಶ್ರೇಷ್ಠನಾದ ಹನುಮಂತನನ್ನು **ತೇ** ಆ ರಾಕ್ಷಸರು, **ಆಶು** ಕೂಡಲೆ, **ಅನ್ಯಪಾಶಕೈಃ** ಇತರ ಪಾಶಗಳಿಂದ, **ಬಬಂಧುಃ** ಬಂಧಿಸಿದರು, **ಅಸ್ಯ** ಈ ಇಂದ್ರಜಿತನ, **ತತ್ ಅಸ್ತ್ರಂ** ಆ ಬ್ರಹ್ಮಾಸ್ತ್ರವು, **ಜಗಾಮ** ಬ್ರಹ್ಮಲೋಕವನ್ನು ಕುರಿತು ಹೋಯಿತು.

**ತಾತ್ಪರ್ಯ** :- ಹೀಗೆ ಆಲೋಚಿಸಿ ಬಂಧನಕ್ಕೊಳಪಟ್ಟವನಂತೆ ಹನುಮಂತ ಕಂಡಾಗ ಎಲ್ಲ ರಕ್ಕಸರು ಬೇರೆ ಹಗ್ಗಗಳಿಂದಲೂ ಅವನನ್ನು ಬಿಗಿದರು. ಬ್ರಹ್ಮಾಸ್ತ್ರವು ನಂತರ ಹೊರಟು ಹೋಯಿತು. ॥ ೩೫ ॥

**ಅಥ ಪ್ರಗೃಹ್ಯ ತಂ ಕಪಿಂ ಸಮೀಪಮಾನಯಂಶ್ಚ ತೇ ।**
**ನಿಶಾಚರೇಶ್ವರಸ್ಯ ತಂ ಸ ಪೃಷ್ಟವಾಂಶ್ಚ ರಾವಣಃ ॥ ೩೬ ॥**

ಪದಚ್ಛೇದ : ಅಥ ಪ್ರಗೃಹ್ಯ ತಂ ಕಪಿಂ ಸಮೀಪಂ ಆನಯನ್ ಚ ತೇ । ನಿಶಾಚರೇಶ್ವರಸ್ಯ ತಂ ಸಃ ಪೃಷ್ಟವಾನ್ ಚ ರಾವಣಃ ॥

**ಅರ್ಥ** :- **ಅಥ** ಅನಂತರದಲ್ಲಿ, **ತೇ** ಆ ರಾಕ್ಷಸರು, **ತಂ ಕಪಿಂ** ಆ ಹನುಮಂತನನ್ನು, **ನಿಶಾಚರೇಶ್ವರಸ್ಯ** ರಾಕ್ಷಸರಿಗೆ ನಿಯಾಮಕನಾದ ರಾವಣನ, **ಸಮೀಪಂ** ಸಮೀಪಕ್ಕೆ, **ಆನಯನ್** ತಂದರು, **ಸಃ ರಾವಣಃ** ಆ ರಾವಣನು, **ತಂ** ಆ ಹನುಮಂತನನ್ನು, **ಪೃಷ್ಟವಾನ್** ಪ್ರಶ್ನಿಸಿದನು.

**ತಾತ್ಪರ್ಯ** :- ಬಂಧಿತನಂತೆ ಕಂಡ ಹನುಮಂತನನ್ನು ರಕ್ಕಸರೆಲ್ಲ ರಾವಣನ ಬಳಿ ಕರೆತಂದರು. ರಾವಣ ಆಂಜನೇಯನನ್ನು ಪ್ರಶ್ನಿಸಿದ. ॥ ೩೬ ॥

**ಕಪೇ ಕುತೋಽಸಿ ಕಸ್ಯ ವಾ ಕಿಮರ್ಥಮೀದೃಶಂ ಕೃತಮ್ ।**
**ಇತೀರಿತಃ ಸ ಚಾವದತ್ ಪ್ರಣಮ್ಯ ರಾಮಮೀಶ್ವರಮ್ ॥ ೩೭ ॥**

ಪದಚ್ಛೇದ : ಕಪೇ ಕುತಃ ಅಸಿ ಕಸ್ಯ ವಾ ಕಿಮರ್ಥಂ ಈದೃಶಂ ಕೃತಮ್ । ಇತಿ ಈರಿತಃ ಸಃ ಚ ಅವದತ್ ಪ್ರಣಮ್ಯ ರಾಮಮ್ ಈಶ್ವರಮ್ ॥

**ಅರ್ಥ** :- **ಕಪೇ** ಹೇ ಕಪಿಯೇ, **ಕುತಃ ಅಸಿ** ಎಲ್ಲಿಂದ ಬಂದಿರುವಿ?, **ಕಸ್ಯ ವಾ** ಯಾರ ದೂತನಾಗಿರುವೆ ?, **ಕಿಮರ್ಥಂ** ಯಾವ ಉದ್ದೇಶಕ್ಕೋಸ್ಕರ, **ಈದೃಶಂ** ಈ ರೀತಿ, **ಕೃತಂ** ಮಾಡಲ್ಪಟ್ಟಿತು, **ಇತಿ** ಈ ರೀತಿಯಾಗಿ **ಈರಿತಃ** ರಾವಣನಿಂದ ಕೇಳಲ್ಪಟ್ಟ **ಸಃ** ಹನುಮಂತನು, **ಈಶ್ವರಂ** ಸ್ವಾಮಿಯಾದ, **ರಾಮಂ** ಶ್ರೀರಾಮನನ್ನು **ಪ್ರಣಮ್ಯ** ನಮಸ್ಕರಿಸಿ, **ಅವದತ್** ಮಾತನಾಡಿದನು.

**ತಾತ್ಪರ್ಯ** :- ಕಪಿಯೇ ! ಎಲ್ಲಿಂದ ಬಂದಿಹೆ ? ಯಾರ ದೂತ ನೀನು ? ಏಕೆ ಅಶೋಕವನ ವಿನಾಶಪಡಿಸಿ ರಕ್ಕಸರನು ಸಂಹರಿಸಿದಿ ? ರಾವಣನ ಈ ಪ್ರಶ್ನೆಗಳಿಗೆ ಸ್ವಾಮಿ ರಾಮನನ್ನು ನಮಿಸಿ ಹನುಮಂತ ಉತ್ತರಿಸಿದ. ॥ ೩೭ ॥

### ರಾಮದೂತ ನಾ ಬಂದಿಹೆ

**ಅವೈಹಿ ದೂತಮಾಗತಂ ದುರಂತವಿಕ್ರಮಸ್ಯ ಮಾಮ್ ।**
**ರಘೂತ್ತಮಸ್ಯ ಮಾರುತಿಂ ಕುಲಕ್ಷಯೇ ತವೇಶ್ವರಮ್ ॥ ೩೮ ॥**

ಪದಚ್ಛೇದ : ಅವೈಹಿ ದೂತಂ ಆಗತಂ ದುರಂತವಿಕ್ರಮಸ್ಯ ಮಾಮ್ । ರಘೂತ್ತಮಸ್ಯ ಮಾರುತಿಂ ಕುಲಕ್ಷಯೇ ತವ ಈಶ್ವರಮ್ ॥

**ಅರ್ಥ** :- **ದುರಂತವಿಕ್ರಮಸ್ಯ** ಅಮಿತವಿಕ್ರಮನಾದ, **ರಘೂತ್ತಮಸ್ಯ** ಶ್ರೀರಾಮಚಂದ್ರನ, **ದೂತಂ** ದೂತನಾಗಿ, **ಆಗತಂ** ಇಲ್ಲಿ ಬಂದ, **ಮಾಂ** ನನ್ನನ್ನು **ಮಾರುತಿಂ** ವಾಯುಸುತ ಹನುಮಂತನೆಂದು, **ತವ** ನಿನ್ನ **ಕುಲಕ್ಷಯೇ** ವಂಶವನ್ನು ನಾಶ ಮಾಡುವ ವಿಷಯದಲ್ಲಿ, **ಈಶ್ವರಂ** ಸಮರ್ಥನನ್ನಾಗಿ, **ಅವೈಹಿ** ತಿಳಿ.

**ತಾತ್ಪರ್ಯ** :- ಅಮಿತವಿಕ್ರಮನಾದ ಶ್ರೀರಾಮನ ದಾಸ (ದೂತ) ನಾನು. ವಾಯುಸುತನಾದ ನಾನು ನಿನ್ನ ಸಮಗ್ರ ಕುಲವನ್ನೆಲ್ಲ ನಾಶ ಮಾಡಬಲ್ಲೆ. ॥೩೮॥

### ರಾವಣನಿಗೆ ಬುದ್ಧಿವಾದ

**ನ ಚೇತ್ ಪ್ರದಾಸ್ಯಸಿ ತ್ವರನ್ ರಘೂತ್ತಮಪ್ರಿಯಾಂ ತದಾ ।**
**ಸಪುತ್ರಮಿತ್ರಬಾಂಧವೋ ವಿನಾಶಮಾಶು ಯಾಸ್ಯಸಿ ॥ ೩೯ ॥**

ಪದಚ್ಛೇದ : ನ ಚೇತ್ ಪ್ರದಾಸ್ಯಸಿ ತ್ವರನ್ ರಘೂತ್ತಮಪ್ರಿಯಾಂ ತದಾ । ಸಪುತ್ರಮಿತ್ರಬಾಂಧವಃ ವಿನಾಶಂ ಆಶು ಯಾಸ್ಯಸಿ ॥

**ಅರ್ಥ** :- **ರಘೂತ್ತಮಪ್ರಿಯಾಂ** ಶ್ರೀರಾಮಚಂದ್ರನ ಪತ್ನಿಯಾದ ಸೀತಾದೇವಿಯನ್ನು, **ತ್ವರನ್** ಬೇಗನೆ, **ನ ಪ್ರದಾಸ್ಯಸಿ** ಹಿಂತಿರುಗಿಸದಿದ್ದರೆ, **ತದಾ** ಆಗ, **ಸಪುತ್ರಮಿತ್ರಬಾಂಧವಃ** ಪುತ್ರರೂ ಮಿತ್ರರೂ ಬಾಂಧವರಿಂದ ಕೂಡಿ ಕೊಂಡವನಾಗಿ, **ವಿನಾಶಂ** ಸಂಪೂರ್ಣ ನಾಶವನ್ನು, **ಆಶು** ಬೇಗನೆ, **ಯಾಸ್ಯಸಿ** ಹೊಂದುವಿ.

**ತಾತ್ಪರ್ಯ** :- ನೀನು ಕೂಡಲೆ ಶ್ರೀರಾಮನ ಮಡದಿಯಾದ ಜಾನಕಿ ಯನ್ನು ಒಪ್ಪಿಸದಿದ್ದಲ್ಲಿ ನಿನಗೆ ಸರ್ವನಾಶ ಖಚಿತ. ॥ ೩೯ ॥

**ನ ರಾಮಬಾಣಧಾರಣೇ ಕ್ಷಮಾಃ ಸುರೇಶ್ವರಾ ಅಪಿ ।**
**ವಿರಿಂಚ ಶರ್ವಪೂರ್ವಕಾಃ ಕಿಮು ತ್ವಮಲ್ಪಸಾರಕಃ ॥ ೪೦ ॥**

ಪದಚ್ಛೇದ :- ನ ರಾಮಬಾಣಧಾರಣೇ ಕ್ಷಮಾಃ ಸುರೇಶ್ವರಾಃ ಅಪಿ । ವಿರಿಂಚಶರ್ವಪೂರ್ವಕಾಃ ಕಿಮು ತ್ವಂ ಅಲ್ಪಸಾರಕಃ ॥

**ಅರ್ಥ** :- **ವಿರಿಂಚಶರ್ವಪೂರ್ವಕಾಃ** ಬ್ರಹ್ಮ ರುದ್ರ ಮೊದಲಾಗಿ ಉಳ್ಳ, **ಸುರೇಶ್ವರಾಃ ಅಪಿ** ದೇವಶ್ರೇಷ್ಠರೂ ಕೂಡ, **ರಾಮಬಾಣಧಾರಣೇ** ಶ್ರೀರಾಮ ಚಂದ್ರನ ಬಾಣದ ಆಘಾತವನ್ನು ತಾಳಿಕೊಳ್ಳುವ ವಿಷಯದಲ್ಲಿ, **ನ ಕ್ಷಮಾಃ** ಸಮರ್ಥರಲ್ಲ, **ಅಲ್ಪ** ಸಾರಕಃ ಅತ್ಯಲ್ಪ ಸಾಮರ್ಥ್ಯವುಳ್ಳ, **ತ್ವಂ** ನೀನು, **ಕಿಮು** ಏನು ಮಾಡಬಲ್ಲೆ ?

**ತಾತ್ಪರ್ಯ** :- ಬ್ರಹ್ಮ-ರುದ್ರಾದಿದೇವತೆಗಳು ರಾಮನ ಬಾಣದ ಆಘಾತ ತಾಳರು. ಅವರ ವರದಿಂದ ಕೊಬ್ಬಿದ ಅಲ್ಪಶಕ್ತನಾದ ನೀನು ರಾಮನನ್ನು ಎದುರಿಸಲಾರೆಯೆಂದು ಪ್ರತ್ಯೇಕ ಹೇಳುವ ಅಗತ್ಯವಿಲ್ಲ. ॥ ೪೦ ॥

**ಪ್ರಕೋಪಿತಸ್ಯ ತಸ್ಯ ಕಃ ಪುರಃಸ್ಥಿತೌ ಕ್ಷಮೋ ಭವೇತ್ ।**
**ಸುರಾಸುರೋರಗಾದಿಕೇ ಜಗತ್ಯಚಿಂತ್ಯಕರ್ಮಣಃ ॥ ೪೧ ॥**

ಪದಚ್ಛೇದ : ಪ್ರಕೋಪಿತಸ್ಯ ತಸ್ಯ ಕಃ ಪುರಃಸ್ಥಿತೌ ಕ್ಷಮಃ ಭವೇತ್ । ಸುರಾಸುರೋರಗಾದಿಕೇ ಜಗತಿ ಅಚಿಂತ್ಯಕರ್ಮಣಃ ॥

**ಅರ್ಥ** : **ಪ್ರಕೋಪಿತಸ್ಯ** ಅತ್ಯಂತ ಕೋಪಯುಕ್ತನಾದ, **ಅಚಿಂತ್ಯಕರ್ಮಣಃ** ತಿಳಿಯಲು ಅಶಕ್ಯವಾದ ಕಾರ್ಯಗಳುಳ್ಳ, **ತಸ್ಯ** ಆ ರಾಮದೇವನ, **ಪುರಃ**

ಮುಂದೆ, **ಸ್ಥಿತೌ** ನಿಲ್ಲುವ ವಿಷಯದಲ್ಲಿ, **ಸುರಾಸುರೋರಗಾದಿಕೇ** ದೇವತೆಗಳು ದೈತ್ಯರು ಸರ್ಪಗಳು ಇವೇ ಮೊದಲಾಗಿ ಉಳ್ಳ, **ಜಗತಿ** ಜಗತ್ತಿನಲ್ಲಿ, **ಕಃ** ಯಾವನು, **ಕ್ಷಮೋ ಭವೇತ್** ಸಮರ್ಥನಾದಾನು ?

**ತಾತ್ಪರ್ಯ** :- ಯಾರ ಕಲ್ಪನೆಗೂ ನಿಲುಕದ ಅನಂತವಿಕ್ರಮನಾದ, ಕುಪಿತನಾದ, ಶ್ರೀರಾಮನ ಮುಂದೆ ದೇವ-ದಾನವ-ನಾಗರನ್ನೊಳಗೊಂಡ ಈ ವಿಶ್ವ ಎದುರು ನಿಲ್ಲಲಾರದು. ॥ ೪೧ ॥

**ಇತೀರಿತೇ ವಧೋದ್ಯತಂ ನ್ಯವಾರಯದ್ವಿಭೀಷಣಃ ।**
**ಸ ಪುಚ್ಛದಾಹಕರ್ಮಣಿ ನ್ಯಯೋಜಯನ್ನಿಶಾಚರಾನ್ ॥ ೪೨ ॥**

**ಪದಚ್ಛೇದ** : ಇತಿ ಈರಿತೇ ವಧೋದ್ಯತಂ ನ್ಯವಾರಯತ್ ವೀಭಿಷಣಃ । ಸಃ ಪುಚ್ಛದಾಹಕರ್ಮಣಿ ನ್ಯಯೋಜಯತ್ ನಿಶಾಚರಾನ್ ॥

**ಅರ್ಥ** :- **ಇತಿ** ಹೀಗೆ, **ಈರಿತೇ ಸತಿ** ಹೇಳಲ್ಪಡುತ್ತಿರಲು, **ವಧೋದ್ಯತಂ** ಸಂಹಾರದಲ್ಲಿ ಉದ್ಯುಕ್ತನಾದ ರಾವಣನನ್ನು, **ವಿಭೀಷಣಃ** ವಿಭೀಷಣನು, **ನ್ಯವಾರಯತ್** ತಡೆದನು, **ಸಃ** ಆ ರಾವಣನು, **ಪುಚ್ಛದಾಹಕರ್ಮಣಿ** ಹನುಮಂತನ ಬಾಲಕ್ಕೆ ಬೆಂಕಿಯನ್ನು ಹಚ್ಚುವ ಕೆಲಸದಲ್ಲಿ, **ನಿಶಾಚರಾನ್** ರಾಕ್ಷಸರನ್ನು, **ನ್ಯಯೋಜಯತ್** ಆಜ್ಞಾಪಿಸಿದನು.

**ತಾತ್ಪರ್ಯ** :- ಹನುಮಂತನ ಸತ್ಯನಿಷ್ಠುರ ವಚನ, ರಾವಣನ ಕೋಪ ವನ್ನು ಕೆರಳಿಸಿತು. ಅವನು ಈ ಕಪಿಯನ್ನು ಸಂಹರಿಸಿ ಎಂದು ಅಪ್ಪಣೆ ಮಾಡಿದ. ದೂತವಧೆ ಸಂವಿಧಾನಬಾಹಿರವೆಂದ ವಿಭೀಷಣ. ಹಾಗಾದರೆ ಕಪಿಗಳಿಗೆ ಪ್ರಿಯವಾದ ಈ ಬಾಲವನ್ನು ಸುಟ್ಟುಬಿಡಿ ಎಂದ ರಾವಣ. ॥ ೪೨ ॥

**ಬಾಲಕ್ಕೆ ಬೆಂಕಿ**

**ಅಥಾಸ್ಯ ವಸ್ತ್ರಸಂಚಯೈಃ ಪಿಧಾಯ ಪುಚ್ಛಮಗ್ನಯೇ ।**
**ದದುರ್ದದಾಹ ನಾಸ್ಯ ತನ್ಮರುತ್ಸಖೋ ಹುತಾಶನಃ ॥ ೪೩ ॥**

**ಪದಚ್ಛೇದ** : ಅಥ ಅಸ್ಯ ವಸ್ತ್ರಸಂಚಯೈಃ ಪಿಧಾಯ ಪುಚ್ಛಂ ಅಗ್ನಯೇ । ದದುಃ ದದಾಹ ನ ಅಸ್ಯ ತತ್ ಮರುತ್ಸಖಃ ಹುತಾಶನಃ ॥ ೪೩ ॥

**ಅರ್ಥ** :- **ಅಥ** ಅನಂತರದಲ್ಲಿ, **ಅಸ್ಯ** ಈ ಹನುಮಂತನ, **ಪುಚ್ಛಂ** ಬಾಲವನ್ನು, **ವಸ್ತ್ರಸಂಚಯೈಃ** ವಸ್ತ್ರಗಳ ಸಮೂಹದಿಂದ, **ಪಿಧಾಯ** ಆಚ್ಛಾದನ ಮಾಡಿ, **ಅಗ್ನಯೇ** ಅಗ್ನಿಗೆ, **ದದುಃ** ಕೊಟ್ಟರು (ಬಾಲಕ್ಕೆ ಬಟ್ಟೆಯನ್ನು ಸುತ್ತಿ ಬೆಂಕಿ ಹಚ್ಚಿದರು), **ಮರುತ್ಸಖಃ** ವಾಯುದೇವನ ಗೆಳೆಯನಾದ, **ಹುತಾಶನಃ** ಅಗ್ನಿದೇವನು, **ಅಸ್ಯ** ಈ ಹನುಮಂತನ, **ತತ್** ಆ ಬಾಲವನ್ನು, **ನ ದದಾಹ** ಸುಡಲಿಲ್ಲ.

**ತಾತ್ಪರ್ಯ** :- ಅನಂತರ ರಕ್ಕಸರು ವಸ್ತ್ರಗಳಿಂದ ಹನುಮಂತನ ಬಾಲವನ್ನು ಸುತ್ತಿ ಬೆಂಕಿ ನೀಡಿದರು. ಆದರೆ ವಾಯುದೇವನ ಗೆಳೆಯನಾದ ಅಗ್ನಿದೇವನು ಹನುಮಂತನಿಗೆ ಯಾವ ಹಾನಿಯನ್ನೂ ಎಸಗಲಿಲ್ಲ. ॥ ೪೩ ॥

**ಮಮರ್ಷ ಸರ್ವಚೇಷ್ಟಿತಂ ಸ ರಕ್ಷಸಾಂ ನಿರಾಮಯಃ ।**
**ಬಲೋದ್ಧತಶ್ಚ ಕೌತುಕಾತ್ ಪ್ರದಗ್ಧುಮೇವ ತಾಂ ಪುರೀಮ್ ॥ ೪೪ ॥**

ಪದಚ್ಛೇದ : ಮಮರ್ಷ ಸರ್ವಚೇಷ್ಟಿತಂ ಸಃ ರಕ್ಷಸಾಂ ನಿರಾಮಯಃ । ಬಲೋದ್ಧತಃ ಚ ಕೌತುಕಾತ್ ಪ್ರದಗ್ಧುಮ್ ಏವ ತಾಂ ಪುರೀಮ್ ॥ ೪೪ ॥

**ಅರ್ಥ** :- **ಬಲೋದ್ಧತಃ** ಅತ್ಯಂತ ಬಲಶಾಲಿಯಾದ, **ನಿರಾಮಯಃ** ಯಾವುದೇ ವಿಕಾರಗಳಿಲ್ಲದ, **ಸಃ** ಆ ಹನುಮಂತನು, **ಕೌತುಕಾತ್** ಸಂತೋಷದಿಂದ, **ತಾಂ ಪುರೀಂ** ಆ ಲಂಕಾ ಪಟ್ಟಣವನ್ನು, **ಪ್ರದಗ್ಧುಮೇವ** ಸುಡುವುದಕ್ಕೋಸ್ಕರವೇ, **ರಕ್ಷಸಾಂ** ರಾಕ್ಷಸರ, **ಸರ್ವಚೇಷ್ಟಿತಂ** ಬಾಲಕ್ಕೆ ಬಟ್ಟೆ ಸುತ್ತುವುದು, **ಬೆಂಕಿ** ಹಚ್ಚುವುದು ಇತ್ಯಾದಿ ಕೆಲಸಗಳನ್ನು, **ಮಮರ್ಷ** ಸಹಿಸಿಕೊಂಡನು.

**ತಾತ್ಪರ್ಯ** :- ಮಹಾಬಲನಾದ ಹನುಮಂತ ರಕ್ಕಸರ ಎಲ್ಲ ಕುಚೇಷ್ಟೆಗಳನ್ನು ಸಹಿಸಿದ. ಇವರಿಟ್ಟ ಬೆಂಕಿಯಿಂದ ಇವರ ಪಟ್ಟಣವನ್ನೇ ಸುಡುವೆನೆಂದು ಸಂಕಲ್ಪಿಸಿದ. ॥ ೪೪ ॥

### ಲಂಕೆ ದಹಿಸಿದ ಕಪೀಶ್ವರ

**ದದಾಹ ಚಾಖಿಲಾಂ ಪುರೀಂ ಸ್ವಪುಚ್ಛಗೇನ ವಹ್ನಿನಾ ।**
**ಕೃತಿಸ್ತು ವಿಶ್ವಕರ್ಮಣೋಽಪ್ಯದಹ್ಯತಾಸ್ಯ ತೇಜಸಾ ॥ ೪೫ ॥**

ಪದಚ್ಛೇದ : ದದಾಹ ಚ ಅಖಿಲಾಂ ಪುರೀಂ ಸ್ವಪುಚ್ಛಗೇನ ವಹ್ನಿನಾ । ಕೃತಿಃ ತು ವಿಶ್ವಕರ್ಮಣಃ ಅಪಿ ಅದಹ್ಯತ ಅಸ್ಯ ತೇಜಸಾ ॥

**ಅರ್ಥ** :- **ಚ** ಮತ್ತು, **ಅಖಿಲಾಂ ಪುರೀಂ** ಸಮಸ್ತ ಲಂಕಾ ಪಟ್ಟಣವನ್ನು **ಸ್ವಪುಚ್ಛಗೇನ** ತನ್ನ ಬಾಲದಲ್ಲಿರುವ, **ವಹ್ನಿನಾ** ಬೆಂಕಿಯಿಂದ, **ದದಾಹ** ಸುಟ್ಟನು, **ವಿಶ್ವಕರ್ಮಣಃ** ದೇವ ಶಿಲ್ಪಿಯಾದ ವಿಶ್ವಕರ್ಮನ, **ಕೃತಿರಪಿ** ನಿರ್ಮಾಣವಾದ ಲಂಕಾಪಟ್ಟಣವೂ ಕೂಡ, **ಅಸ್ಯ** ಈ ಹನುಮಂತನ, **ತೇಜಸಾ ತು** ತೇಜಸ್ಸಿನಿಂದಲೇ, **ಅದಹ್ಯತ** ಸುಟ್ಟು ಹೋಯಿತು.

**ತಾತ್ಪರ್ಯ** :- ಹನುಮಂತ ತನ್ನ ಬಾಲದಲ್ಲಿದ್ದ ಬೆಂಕಿಯಿಂದ ಸಮಗ್ರ ಲಂಕಾಪಟ್ಟಣವನ್ನು ದಹಿಸಿದ. ಹನುಮಂತನ ತೇಜಸ್ಸಿನಿಂದ ವಿಶ್ವಕರ್ಮ ನಿರ್ಮಿತವಾದ ಪಟ್ಟಣ ಅಗ್ನಿಗೆ ಆಹುತಿಯಾಯಿತು. ॥ ೪೫ ॥

**ಸುವರ್ಣರತ್ನಕಾರಿತಾಂ ಸ ರಾಕ್ಷಸೋತ್ತಮೈಃ ಸಹ ।**
**ಪ್ರದಹ್ಯ ಸರ್ವಶಃ ಪುರೀಂ ಮುದಾಽನ್ವಿತೋ ಜಗರ್ಜ ಚ ॥ ೪೬ ॥**

ಪದಚ್ಛೇದ : ಸುವರ್ಣರತ್ನಕಾರಿತಾಂ ಸಃ ರಾಕ್ಷಸೋತ್ತಮೈಃ ಸಹ । ಪ್ರದಹ್ಯ ಸರ್ವಶಃ ಪುರೀಂ ಮುದಾ ಅನ್ವಿತಃ ಜಗರ್ಜ ಚ ॥

**ಅರ್ಥ** :- **ಸುವರ್ಣರತ್ನಕಾರಿತಾಂ** ಬಂಗಾರದಿಂದಲೂ ರತ್ನದಿಂದಲೂ ಮಾಡಲ್ಪಟ್ಟ **ಪುರೀಂ** ಲಂಕಾ ಪಟ್ಟಣವನ್ನು, **ರಾಕ್ಷಸೋತ್ತಮೈಃ ಸಹ** ಶ್ರೇಷ್ಠ ರಾಕ್ಷಸರಿಂದ ಸಹಿತವಾಗಿ, **ಸರ್ವಶಃ** ಎಲ್ಲಾ ರೀತಿಯಲ್ಲೂ, **ಪ್ರದಹ್ಯ** ಸುಟ್ಟು, **ಸಃ** ಆ ಹನುಮಂತನು, **ಮುದಾನ್ವಿತಃ** ಸಂತೋಷದಿಂದ ಕೂಡಿದವನಾಗಿ, **ಜಗರ್ಜ ಚ** ಸಿಂಹ ನಾದ ಮಾಡಿದನು.

**ತಾತ್ಪರ್ಯ** :- ಸುವರ್ಣ-ರತ್ನಗಳಿಂದ ಕಂಗೊಳಿಸುವ ಲಂಕಾಪಟ್ಟಣವನ್ನು ರಕ್ಕಸರ ಜೊತೆಗೆ ಸುಟ್ಟ ವೀರಹನುಮ, ಹರ್ಷದಿಂದ ಸಿಂಹನಾದ ಮಾಡಿದ. ॥ ೪೬ ॥

**ಸ ರಾವಣಂ ಸಪುತ್ರಕಂ ತೃಣೋಪಮಂ ವಿಧಾಯ ಚ ।**
**ತಯೋಃ ಪ್ರಪಶ್ಯತೋಃ ಪುರೀಂ ವಿಧಾಯ ಭಸ್ಮಸಾದ್ಯಯೌ ॥ ೪೭ ॥**

ಪದಚ್ಛೇದ : ಸಃ ರಾವಣಂ ಸಪುತ್ರಕಂ ತೃಣೋಪಮಂ ವಿಧಾಯ ಚ । ತಯೋಃ ಪ್ರಪಶ್ಯತೋಃ ಪುರೀಂ ವಿಧಾಯ ಭಸ್ಮಸಾತ್ ಯಯೌ ॥

**ಅರ್ಥ** :- **ಸಃ** ಆ ಹನುಮಂತನು, **ಸಪುತ್ರಕಂ** ಮಗನಿಂದ ಕೂಡಿದ, **ರಾವಣಂ** ರಾವಣನನ್ನು **ತೃಣೋಪಮಂ** ಹುಲ್ಲಿಗೆ ಸಮಾನನನ್ನಾಗಿ, **ವಿಧಾಯ**

ಮಾಡಿ , **ಚ** ಮತ್ತು, **ತಯೋಃ** ರಾವಣ ಇಂದ್ರಜಿತರು, **ಪ್ರಪಶ್ಯತೋಃ** ನೋಡುತ್ತಿರಲು, **ಪುರೀಂ** ಲಂಕಾ ಪಟ್ಟಣವನ್ನು **ಭಸ್ಮಸಾತ್ ವಿಧಾಯ** ಬೂದಿ ಮಾಡಿ, **ಯಯೌ** ಲಂಕಾ ಪಟ್ಟಣದಿಂದ ಹೊರಟನು.

**ತಾತ್ಪರ್ಯ** :- ರಾವಣ-ಇಂದ್ರಜಿತ್ ಮೊದಲಾದವರು ನೋಡುತ್ತಿರುವಂತೆಯೇ ಪ್ರತಿರೋಧರಹಿತವಾದ ತನ್ನ ತೇಜಸ್ಸಿನಿಂದ ಲಂಕಾಪಟ್ಟಣವನ್ನು ಸುಟ್ಟ ಹನುಮಂತ, ಅವರನ್ನೂ ಧಿಕ್ಕರಿಸಿ ಸಾಗರದಾಚೆಗೆ ತೆರಳಿದ. ॥ ೪೭ ॥

**ಕಪಿಗಳೊಂದಿಗೆ ಸಮ್ಮಿಲನ**

**ವಿಲಂಘ್ಯ ಚಾರ್ಣವಂ ಪುನಃ ಸ್ವಜಾತಿಭಿಃ ಪ್ರಪೂಜಿತಃ ।**
**ಪ್ರಭಕ್ಷ್ಯ ವಾನರೇಶಿತುರ್ಮಧು ಪ್ರಭುಂ ಸಮೇಯಿವಾನ್ ॥ ೪೮ ॥**

**ಪದಚ್ಛೇದ** : ವಿಲಂಘ್ಯ ಚ ಅರ್ಣವಂ ಪುನಃ ಸ್ವಜಾತಿಭಿಃ ಪ್ರಪೂಜಿತಃ । ಪ್ರಭಕ್ಷ್ಯ ವಾನರೇಶಿತುಃ ಮಧು ಪ್ರಭುಂ ಸಮೇಯಿವಾನ್ ॥

**ಅರ್ಥ** :- **ಚ** ಮತ್ತು, **ಅರ್ಣವಂ** ಸಮುದ್ರವನ್ನು, **ಪುನಃ** ಇನ್ನೊಮ್ಮೆ **ವಿಲಂಘ್ಯ** ದಾಟಿ, **ಸ್ವಜಾತಿಭಿಃ** ತನ್ನವರಾದ ಕಪಿಗಳಿಂದ, **ಪ್ರಪೂಜಿತಃ** ಪೂಜಿಸಲ್ಪಟ್ಟ ಹನುಮಂತನು, **ವಾನರೇಶಿತುಃ** ಕಪಿರಾಜನಾದ ಸುಗ್ರೀವನ, **ಮಧು** ಮಧುವನದಲ್ಲಿರುವ ಜೇನುತುಪ್ಪವನ್ನು, **ಪ್ರಭಕ್ಷ್ಯ** ಆಸ್ವಾದಿಸಿ, **ಪ್ರಭುಂ** ಸಮರ್ಥನಾದ ಶ್ರೀರಾಮಚಂದ್ರ ದೇವರನ್ನು, **ಏಯಿವಾನ್** ಹೊಂದಿದನು.

**ತಾತ್ಪರ್ಯ** :- ಮತ್ತೆ ಸಾಗರವನ್ನು ದಾಟಿ ತನ್ನವರಿಂದ ಸತ್ಕೃತನಾದ ಹನುಮಂತ, ಸುಗ್ರೀವನ ಮಧುವನ ಪ್ರವೇಶಿಸಿ ಹೆಜ್ಜೇನು ಸವಿದ. ಸ್ವಾಮಿ ಶ್ರೀರಾಮನ ಬಳಿ ಎಲ್ಲರೊಡನೆ ಆಗಮಿಸಿದ. ॥ ೪೮ ॥

**ಚೂಡಾಮಣಿ ಸಮರ್ಪಣೆ**

**ರಾಮಂ ಸುರೇಶ್ವರಮಗಣ್ಯಗುಣಾಭಿರಾಮಂ**
**ಸಂಪ್ರಾಪ್ಯ ಸರ್ವಕಪಿವೀರವರೈಃ ಸಮೇತಃ ।**
**ಚೂಡಾಮಣಿಂ ಪವನಜಃ ಪದಯೋರ್ನಿಧಾಯ**
**ಸರ್ವಾಂಗಕೈಃ ಪ್ರಣತಿಮಸ್ಯ ಚಕಾರ ಭಕ್ತ್ಯಾ ॥ ೪೯ ॥**

**ಪದಚ್ಛೇದ** : ರಾಮಂ ಸುರೇಶ್ವರಂ ಅಗಣ್ಯಗುಣಾಭಿರಾಮಂ ಸಂಪ್ರಾಪ್ಯ ಸರ್ವಕಪಿವೀರವರೈಃ ಸಮೇತಃ । ಚೂಡಾಮಣಿಂ ಪವನಜಃ ಪದಯೋಃ ನಿಧಾಯ ಸರ್ವಾಂಗಕೈಃ ಪ್ರಣತಿಮ್ ಅಸ್ಯ ಚಕಾರ ಭಕ್ತ್ಯಾ॥

**ಅರ್ಥ** :- **ಸರ್ವಕಪಿವೀರವರ್ಯೈಃ** ಪರಾಕ್ರಮಿಗಳಾದ ಎಲ್ಲ ಕಪಿಶ್ರೇಷ್ಠರಿಂದ, **ಸಮೇತಃ** ಕೂಡಿದ, **ಪವನಜಃ** ಹನುಮಂತನು, **ಸುರೇಶ್ವರಂ** ಸಮಸ್ತ ದೇವತೆಗಳಿಗೆ ಒಡೆಯನಾದ, **ಅಗಣ್ಯಗುಣಾಭಿರಾಮಂ** ಲೆಕ್ಕ ಮಾಡಲಶಕ್ಯವಾದ ಗುಣಗಳಿಂದ ಅತ್ಯಂತ ಮನೋಹರನಾದ ಶ್ರೀ ರಾಮಚಂದ್ರನನ್ನು, **ಸಂಪ್ರಾಪ್ಯ** ಹೊಂದಿ, **ಪದಯೋಃ** ಶ್ರೀರಾಮನ ಪಾದಗಳಲ್ಲಿ, **ಚೂಡಾಮಣಿಂ** ಸೀತಾದೇವಿಯು ಕೊಟ್ಟ ಚೂಡಾಮಣಿಯನ್ನು, **ನಿಧಾಯ** ಇಟ್ಟು (ಅರ್ಪಿಸಿ), **ಅಸ್ಯ** ಶ್ರೀರಾಮನಿಗೆ, **ಭಕ್ತ್ಯಾ** ಭಕ್ತಿಯಿಂದ, **ಸರ್ವಾಂಗಕೈಃ ಪ್ರಣತಿಂ** ಸಾಷ್ಟಾಂಗ ನಮಸ್ಕಾರವನ್ನು , **ಚಕಾರ** ಮಾಡಿದನು.

**ತಾತ್ಪರ್ಯ** :- ಅನಂತಗುಣಪೂರ್ಣನೂ ಸುರೇಶ್ವರನೂ ಆದ ಶ್ರೀರಾಮನ ಬಳಿ ಎಲ್ಲ ಕಪಿಗಳೊಂದಿಗೆ ಆಗಮಿಸಿದ ಹನುಮಂತ, ಅವನ ಪಾದಗಳಿಗೆರಗಿ ಭಕ್ತಿಯಿಂದ ಚೂಡಾಮಣಿಯನ್ನು ಸಮರ್ಪಿಸಿ ಸಾಷ್ಟಾಂಗ ನಮಸ್ಕಾರ ಮಾಡಿದ. ॥ ೪೯ ॥

**ರಾಮಾಲಿಂಗನ ಪಡೆದ ಹನುಮ**

**ರಾಮೋಽಪಿ ನಾನ್ಯದನುದಾತುಮಮುಷ್ಯ ಯೋಗ್ಯ-**
**ಮತ್ಯಂತಭಕ್ತಿಭರಿತಸ್ಯ ವಿಲಕ್ಷ್ಯ ಕಿಂಚಿತ್ ।**
**ಸ್ವಾತ್ಮಪ್ರದಾನಮಧಿಕಂ ಪವನಾತ್ಮಜಸ್ಯ**
**ಕುರ್ವನ್ ಸಮಾಶ್ಲಿಷದಮುಂ ಪರಮಾಭಿತುಷ್ಟಃ ॥ ೫೦ ॥**

**॥ ಇತಿ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ ವಿರಚಿತೇ**
**ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯೇ**
**ಶ್ರೀರಾಮಚರಿತೇ ಹನೂಮತ್ಪ್ರತಿಯಾನಂ**
**(ಸುಂದರಕಾಂಡಕಥಾನಿರೂಪಣಂ)**
**ನಾಮ ಸಪ್ತಮೋಽಧ್ಯಾಯಃ ॥**

ಪದಚ್ಛೇದ : ರಾಮಃ ಅಪಿ ನ ಅನ್ಯತ್ ಅನುದಾತುಂ ಅಮುಷ್ಯ ಯೋಗ್ಯಮ್ ಅತ್ಯಂತಭಕ್ತಿಭರಿತಸ್ಯ ವಿಲಕ್ಷ್ಯ ಕಿಂಚಿತ್ । ಸ್ವಾತ್ಮಪ್ರದಾನಂ ಅಧಿಕಂ ಪವನಾತ್ಮಜಸ್ಯ ಕುರ್ವನ್ ಸಮಾಶ್ಲಿಷತ್ ಅಮುಂ ಪರಮಾಭಿತುಷ್ಟಃ ॥

**ಅರ್ಥ** :- **ರಾಮೋಽಪಿ** ಶ್ರೀ ರಾಮಚಂದ್ರನೂ ಕೂಡ, **ಅತ್ಯಂತಭಕ್ತಿಭರಿತಸ್ಯ** ಪರಿಪೂರ್ಣ ಭಕ್ತಿಯಿಂದ ಕೂಡಿದ, **ಅಮುಷ್ಯ** ಈ, **ಪವನಾತ್ಮಜಸ್ಯ**

ಹನುಮಂತನಿಗೆ, **ದಾತುಂ** ಕೊಡಲು, **ಯೋಗ್ಯಂ** ಯೋಗ್ಯವಾದ, **ಅನ್ಯತ್** ಬೇರೆ ವಸ್ತುವನ್ನು ನ ವಿಲಕ್ಷ್ಯ ಕಾಣದೇ, **ಪರಮಾಭಿತುಷ್ಟಃ** ಅತ್ಯಂತ ಸಂತುಷ್ಟನಾಗಿ, **ಅಧಿಕಂ** ಸರ್ವಶ್ರೇಷ್ಠವಾದ, **ಸ್ವಾತ್ಮಪ್ರದಾನಂ** ಶರೀರಾಲಿಂಗನವನ್ನು **ಕುರ್ವನ್** ಕೊಡತಕ್ಕವನಾಗಿ, **ಅಮುಂ** ಹನುಮಂತನನ್ನು **ಸಮಾಶ್ಲಿಷತ್** ಪ್ರೀತಿಯಿಂದ ಆಲಂಗಿಸಿದನು.

**ತಾತ್ಪರ್ಯ :-** ಹನುಮಂತ ಮಾಡಿದ ಸೇವಾಕಾರ್ಯದಿಂದ ಪರಮ ಸಂತುಷ್ಟನಾದ ಶ್ರೀರಾಮ ಭಕ್ತಾಗ್ರೇಸರನಾದ ಹನುಮಂತನಿಗೆ ಪ್ರತಿಯಾಗಿ ಬೇರೇನನ್ನು ಕೊಡಲಾಗದೇ ತನ್ನನ್ನೇ ಕೊಟ್ಟನು. ಪ್ರೀತಿಯಿಂದ ಹನುಮಂತನನ್ನಾಲಿಂಗಿಸಿದನು. ॥ ೫೦ ॥

**॥ ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ**
**ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯೇ**
**ಸಪ್ತಮೋಽಧ್ಯಾಯಃ ॥**

# ಅಧ್ಯಾಯ - 8

## ಶ್ರೀರಾಮನ ಲಂಕಾಪಯಣ:

ಶ್ರುತ್ವಾ ಹನೂಮದುದಿತಂ ಕೃತಮಸ್ಯ ಸರ್ವಂ
ಪ್ರೀತಃ ಪ್ರಯಾಣಮಭಿರೋಚಯತೇ ಸ ರಾಮಃ ।
ಆರುಹ್ಯ ವಾಯುಸುತಮಂಗದಗೇನ ಯುಕ್ತಃ
ಸೌಮಿತ್ರಿಣಾ ಸರವಿಜಃ ಸಹ ಸೇನಯಾಽಗಾತ್ ॥ ೧ ॥

ಪದಚ್ಛೇದ :ಶ್ರುತ್ವಾ ಹನೂಮತಾ ಉದಿತಂ ಕೃತಮ್ ಅಸ್ಯ ಸರ್ವಂ ಪ್ರೀತಃ ಪ್ರಯಾಣಮ್ ಅಭಿರೋಚತೇ ಸಃ ರಾಮಃ । ಆರುಹ್ಯ ವಾಯುಸುತಮ್ ಅಂಗದಗೇನ ಯುಕ್ತಃ ಸೌಮಿತ್ರಿಣಾ ಸರವಿಜಃ ಸಹ ಸೇನಯಾ ಆಗಾತ್ ।

**ಅರ್ಥ** :- **ರಾಮಃ** ಶ್ರೀರಾಮಚಂದ್ರನು **ಹನೂಮತಾ** ಹನುಮಂತನಿಂದ **ಉದಿತಂ** ಹೇಳಲ್ಪಟ್ಟ **ಅಸ್ಯ** ಹನುಮಂತನಿಂದ **ಕೃತಂ ಸರ್ವಂ** ಮಾಡಲ್ಪಟ್ಟ ಲಂಕಾ ದಹನವೇ ಮೊದಲಾದ ಅನೇಕಕಾರ್ಯಗಳನ್ನು **ಶ್ರುತ್ವಾ** ಕೇಳಿ **ಪ್ರೀತಃ(ಸನ್)** ಹರ್ಷ ಗೊಂಡವನಾಗಿ **ಪ್ರಯಾಣಂ** ಲಂಕೆಯನ್ನು ಕುರಿತು ಪ್ರಯಾಣವನ್ನು **ಅಭಿರೋಚಯತೇ** ಇಚ್ಛಿಸಿದನು **ಅಂಗದಗೇನ** ಅಂಗದನ ಹೆಗಲನ್ನು ಏರಿದ **ಸೌಮಿತ್ರಿಣಾ** ಲಕ್ಷ್ಮಣನಿಂದ **ಯುಕ್ತಃ** ಕೂಡಿದ **ಸಃ** ಆ ಶ್ರೀರಾಮನು **ವಾಯು ಸುತಂ** ವಾಯುಪುತ್ರನಾದ ಹನುಮಂತನನ್ನು **ಆರುಹ್ಯ** (ಹೆಗಲನ್ನು) ಏರಿ **ಸರವಿಜಃ** ಸುಗ್ರೀವನೊಂದಿಗೆ **ಸೇನಯಾ ಸಹ** ಸೇನೆಯಿಂದ ಕೂಡಿದವನಾಗಿ **ಆಗಾತ್** ಹೋದನು.

**ತಾತ್ಪರ್ಯ** :- ಚೂಡಾಮಣಿಯನ್ನು ಕೊಟ್ಟ ನಂತರ ಹನುಮನಂತನು ತಾನು ಲಂಕೆಯಲ್ಲಿ ಮಾಡಿದ ಸೀತಾಸಮಾಗಮ ಹಾಗು ರಾಕ್ಷಸವಿನಾಶ ಕಾರ್ಯಗಳನ್ನು ಶ್ರೀರಾಮನಿಗೆ ಹೇಳುತ್ತಾನೆ. ಇದರಿಂದ ಸಂತುಷ್ಟನಾದ ಶ್ರೀರಾಮನು ಮುಂದಿನ ಕಾರ್ಯಗಳಿಗಾಗಿ ಲಂಕೆಗೆ ಪ್ರಯಾಣಬೆಳಸುತ್ತಾನೆ. ಪ್ರಯಾಣದಲ್ಲಿ ಲಕ್ಷ್ಮಣನು ಅಂಗದನ ಭುಜದಲ್ಲಿ ಕುಳಿತರೆ ಶ್ರೀರಾಮನು ಹನುಮಂತನ ಭುಜವನ್ನೇರುತ್ತಾನೆ. ಇವರೊಂದಿಗೆ ಸುಗ್ರೀವನೂ ಅವನ ಸೇನೆಯೂ ಹೊರಡುತ್ತದೆ.

ದರ್ಭಶಯನ ಶ್ರೀರಾಮ

ಸಂಪ್ರಾಪ್ಯ ದಕ್ಷಿಣಮಪಾಂನಿಧಿಮತ್ರ ದೇವಃ
ಶಿಶ್ಯೇ ಜಗದ್ಗುರುತಮೋಽಪ್ಯವಿಷಹ್ಯಶಕ್ತಿಃ ।
ಅಗ್ರೇ ಹಿ ಮಾರ್ದವಮನುಪ್ರಥಯನ್ ಸ ಧರ್ಮಂ
ಪಂಥಾನಮರ್ಥಿತುಮಪಾಂ ಪತಿತಃ ಪ್ರತೀತಃ ॥ ೨ ॥

ಪದಚ್ಛೇದ :ಸಂಪ್ರಾಪ್ಯ ದಕ್ಷಿಣಮ್ ಅಪಾಂನಿಧಿಮ್ ಅತ್ರ ದೇವಃ ಶಿಶ್ಯೇ ಜಗದ್ಗುರುತಮಃ ಅಪಿ ಅವಿಷಹ್ಯಶಕ್ತಿಃ । ಅಗ್ರೇ ಹಿ ಮಾರ್ದವಮ್ ಅನುಪ್ರಥಯನ್ ಸಃ ಧರ್ಮಂ ಪಂಥಾನಮ್ ಅರ್ಥಿತುಮ್ ಅಪಾಂ ಪತಿತಃ ಪ್ರತೀತಃ ॥

**ಅರ್ಥ** :- **ಜಗದ್ಗುರುಃ** ಜಗತ್ತಿಗೆ ಶ್ರೇಷ್ಠಗುರುವೆಂದು **ಪ್ರತೀತಃ** ಪ್ರಸಿದ್ಧನಾದ **ಅವಿಷಹ್ಯಶಕ್ತಿಃ** ತಡೆಯಲು ಅಸಾಧ್ಯವಾದ ಶಕ್ತಿಯುಳ್ಳವನೂ **ಆದ ದೇವಃ** ಶ್ರೀರಾಮನು **ದಕ್ಷಿಣಂ** ದಕ್ಷಿಣದಿಕ್ಕಿನ **ಅಪಾಂನಿಧಿಮ್** ಸಮುದ್ರವನ್ನು **ಸಂಪ್ರಾಪ್ಯ** ಹೊಂದಿ **ಅತ್ರ** ಆ ತೀರದಲ್ಲಿ **ಅಗ್ರೇ** ಮೊದಲು **ಮಾರ್ದವಂ** ಮೃದುತ್ವ ರೂಪವಾದ **ಧರ್ಮಂ** ಸ್ವಭಾವವನ್ನು **ಅನುಪ್ರಥಯನ್** ಪ್ರಕಟಿ ಸುವವನಾಗಿ **ಸಃ ಹಿ** ಶ್ರೀರಾಮನಾದರೂ **ಅಪಾಂ** ಜಲಸಮೂಹಕ್ಕೆ **ಪತಿತಃ** ಸ್ವಾಮಿಯಾದ ಸಮುದ್ರನಿಂದ **ಪಂಥಾನಮ್** ಮಾರ್ಗವನ್ನು **ಅರ್ಥಿತುಂ** ಪ್ರಾರ್ಥಿಸಲು **ಶಿಶ್ಯೆ** ಮಲಗಿದನು.

**ತಾತ್ಪರ್ಯ** :- ಎಲ್ಲರೊಂದಿಗೆ ದಕ್ಷಿಣದ ಸಮುದ್ರತೀರವನ್ನು ಸೇರಿದ ಶ್ರೀರಾಮನು ಮುಂದಿರುವ ಅಪಾರ ಜಲರಾಶಿಯನ್ನು ನೋಡಿ ಸಮುದ್ರ ರಾಜನನ್ನು ಲಂಕೆಗೆ ಮಾರ್ಗವನ್ನು ತೆರವು ಮಾಡೆಂದು ಪ್ರಾರ್ಥಿಸಲು ಮಲಗುತ್ತಾನೆ. ವಸ್ತುತಃ ಸಮಸ್ತಜಗತ್ತಿಗೇ ಗುರುವೂ ಅಪಾರಶಕ್ತಿಸಾಮರ್ಥ್ಯ ವುಳ್ಳನೂ ಆದ ಶ್ರೀರಾಮನು ಸಮುದ್ರರಾಜನಿಗೆ ದಾರಿಯನ್ನು ಬಿಡಲು ಆಜ್ಞಾಪಿಸಬಹುದಿತ್ತು. ಆದರೂ ವ್ಯಕ್ತಿಯು ಎಷ್ಟೇ ಸಮರ್ಥನಾದರೂ ಕಾರ್ಯಾರಂಭದಲ್ಲಿ ಮೃದುಧೋರಣೆಯನ್ನು ತೋರುವುದು ಧರ್ಮವೆಂದು ತೋರಿಸಲು ಹೀಗೆ ಮಾಡಿದ್ದಾನೆ ಹೊರತು ಅಶಕ್ತನೆಂದಲ್ಲ.

### ವಿಭೀಷಣನ ಶರಣಾಗತಿ

**ತತ್ರಾಽಜಗಾಮ ಸ ವಿಭೀಷಣನಾಮಧೇಯೋ
ರಕ್ಷಃ ಪತೇರವರಜೋಽಪ್ಯಥ ರಾವಣೇನ ।
ಭಕ್ತೋಽಧಿಕಂ ರಘುಪತಾವಿತಿ ಧರ್ಮನಿಷ್ಠ -
ಸ್ತ್ಯಕ್ತೋ ಜಗಾಮ ಶರಣಂ ಚ ರಘೂತ್ತಮಂ ತಮ್ ॥ ೩ ॥**

**ಪದಚ್ಛೇದ :** ತತ್ರ ಆಜಗಾಮ ಸಃ ವಿಭೀಷಣನಾಮಧೇಯಃ ರಕ್ಷಃಪತೇಃ ಅವರಜಃ ಅಪಿ ಅಥ ರಾವಣೇನ । ಭಕ್ತಃ ಅಧಿಕಂ ರಘುಪತೌ ಇತಿ ಧರ್ಮನಿಷ್ಠಃ ತ್ಯಕ್ತಃ ಜಗಾಮ ಶರಣಂ ಚ ರಘೂತ್ತಮಂ ತಮ್ ॥

**ಅರ್ಥ :- ಅಥ** ಅನಂತರ **ರಕ್ಷಃಪತೇಃ** ರಕ್ಕಸರಿಗೆ ಒಡೆಯನಾದ ರಾವಣನ **ಅವರಜೋಽಪಿ** ತಮ್ಮನಾದರೂ **ರಘುಪತೌ** ಶ್ರೀರಾಮನಲ್ಲಿ **ಅಧಿಕಂ** ಅಧಿಕವಾಗಿ **ಭಕ್ತಃ** ಭಕ್ತನು **ಅತಿಧರ್ಮನಿಷ್ಠಶ್ಚ** ಧರ್ಮದಲ್ಲಿ ಅತಿಶಯವಾಗಿ ನಿರತನೂ ಆದ **ವಿಭೀಷಣನಾಧೇಯಃ** ವಿಭೀಷಣನೆಂಬ ಹೆಸರುಳ್ಳವನು **ರಾವಣೇನ** ರಾವಣನಿಂದ **ತ್ಯಕ್ತಃ** ಬಹಿಷ್ಕರಿಸಲ್ಪಟ್ಟವನಾಗಿ **ತತ್ರ** ರಾಮನಿರುವ ಸ್ಥಳಕ್ಕೆ **ಆಜಗಾಮ** ಬಂದನು. **ರಘೂತ್ತಮಂ** ರಘುಕುಲಶ್ರೇಷ್ಠನಾದ **ತಂ** ಆ ರಾಮನನ್ನು **ಸಃ** ಆ ವಿಭಿಷಣನು **ಶರಣಂ** ಶರಣಾಗತಿಯನ್ನು **ಜಗಾಮ** ಹೊಂದಿದನು.

**ತಾತ್ಪರ್ಯ :-** ರಾವಣನಿಗೆ ವಿಭೀಷಣನೆಂಬ ಅನುಜನೊಬ್ಬನಿದ್ದನು. ಇವನು ಸದಾ ಧರ್ಮದಲ್ಲಿ ನಿರತನೂ ಆಗಿದ್ದನು. ರಾಮನಲ್ಲಿ ಅಪಾರ ಭಕ್ತಿಯುಳ್ಳ ಇವನು ರಾವಣನ ಸೀತಾಪಹಾರದ ಕೃತ್ಯವನ್ನು ವಿರೋಧಿಸುತ್ತಿರುತ್ತಾನೆ. ಒಮ್ಮೆ ಕುಪಿತನಾದ ರಾವಣನು ಇವನನ್ನು ತನ್ನ ರಾಜ್ಯದಿಂದ ಬಹಿಷ್ಕರಿಸುತ್ತಾನೆ. ಆಗ ವಿಭೀಷಣನು ದೂರದ ಸಮುದ್ರತೀರದಲ್ಲಿ ಬೀಡು ಬಿಟ್ಟಿದ್ದ ಶ್ರೀರಾಮನಲ್ಲಿಗೆ ಬಂದು ತನ್ನ ಶರಣಾಗತಿಯನ್ನು ನಿವೇದಿಸುತ್ತಾನೆ.

### ಹಿರಿಯ ಕಪಿಗಳ ವಿರೋಧ

**ಬ್ರಹ್ಮಾತ್ಮಜೇನ ರವಿಜೇನ ಬಲಪ್ರಣೇತ್ರಾ
ನೀಲೇನ ಮೈಂದವಿವಿದಾಂಗದತಾರಪೂರ್ವೈಃ ।
ಸರ್ವೈಶ್ಚ ಶತ್ರುಸದನಾದುಪಯಾತ ಏಷ
ಭ್ರಾತಾಽಸ್ಯ ನ ಗ್ರಹಣಯೋಗ್ಯ ಇತಿ ಸ್ಥಿರೋಕ್ತಃ ॥ ೪ ॥**

ಪದಚ್ಛೇದ :ಬ್ರಹ್ಮಾತ್ಮಜೇನ ರವಿಜೇನ ಬಲಪ್ರಣೇತ್ರಾ ನೀಲೇನ ಮೈಂದ ವಿವಿದಾಂಗದತಾರಪೂರ್ವೈಃ । ಸರ್ವೈಃ ಚ ಶತ್ರುಸದನಾತ್ ಉಪಯಾತಃ ಏಷಃ ಭ್ರಾತಾ ಅಸ್ಯ ನ ಗ್ರಹಣಯೋಗ್ಯಃ ಇತಿ ಸ್ಥಿರೋಕ್ತಃ ॥

**ಅರ್ಥ** :- **ಬ್ರಹ್ಮಾತ್ಮಜೇನ** ಬ್ರಹ್ಮಪುತ್ರಜಾಂಬವಂತನಿಂದ **ರವಿಜೇನ** ಸುಗ್ರೀವನಿಂದ **ಬಲಪ್ರಣೇತ್ರಾ** ಸೇನಾಧಿಪತಿಯಾದ **ನೀಲೇನ** ನೀಲನಿಂದ **ಮೈಂದವಿವಿದಾಗಂದತಾರಪೂರ್ವೈಃ** ಮೈಂದ ವಿವಿದ ಅಂಗದ ತಾರ ಇವರೇ ಮೊದಲಾದ **ಸರ್ವೈಶ್ಚ** ಎಲ್ಲಾ ಕಪಿಸೈನಿಕರಿಂದಲೂ **ಶತ್ರುಸದನಾತ್** ಶತ್ರುವಾದ ರಾವಣನ ಸದನದಿಂದ **ಉಪಯಾತಃ** ಆಗಮಿಸಿರುವ **ಏಷಃ** ವಿಭೀಷಣನು **ಅಸ್ಯ** ಈ ರಾವಣನ **ಭ್ರಾತಾ** ಸಹೋದರನು (ಅತ ಏವ ಆ ಕಾರಣದಿಂದಲೇ) **ಗ್ರಹಣಯೋಗ್ಯಃ** ಸ್ವೀಕರಿಸಲು ಯೋಗ್ಯನು **ನ** ಅಲ್ಲ **ಇತಿ** ಎಂಬುದಾಗಿ **ಸ್ಥಿರೋಕ್ತಃ** ದೃಢವಾಗಿ ಹೇಳಲ್ಪಟ್ಟನು.

**ತಾತ್ಪರ್ಯ** :- ಆದರೆ ಶತ್ರುಗಳ ರಾಜ್ಯವಾದ ಲಂಕೆಯಿಂದ ಬಂದ ವಿಭೀಷಣನು ರಾವಣನ ತಮ್ಮನೆಂಬ ಕಾರಣದಿಂದ ಜಾಂಬವಂತ ಸುಗ್ರೀವ ಕಪಿಸೇನಾನಿಯಾದ ನೀಲ, ಮೈಂದ ವಿವಿದ ಅಂಗದ ತಾರ ಇವರೇ ಪ್ರಮುಖ ರಾದ ಕಪಿಗಳೊಂದಿಗೆ ಸಮಸ್ತಕಪಿಸೈನಿಕರೂ ಕೂಡ ಇವನು ಸ್ವೀಕಾರಾರ್ಹ ನಲ್ಲವೆಂದು ನಿಶ್ಚಯವಾಗಿ ಹೇಳುತ್ತಾರೆ.

### ಹನುಮಂತನ ಸಮ್ಮತಿ

**ಅತ್ರಾಽಹ ರೂಪಮಪರಂ ಬಲದೇವತಾಯಾ**
**ಗ್ರಾಹ್ಯಃ ಸ ಏಷ ನಿತರಾಂ ಶರಣಂ ಪ್ರಪನ್ನಃ ।**
**ಭಕ್ತಶ್ಚ ರಾಮಪದಯೋರ್ವಿನಶಿಷ್ಣು ರಕ್ಷೋ**
**ವಿಜ್ಞಾಯ ರಾಜ್ಯಮುಪಭೋಕ್ತುಮಿಹಾಭಿಯಾತಃ ॥ ೫ ॥**

ಪದಚ್ಛೇದ : ಅತ್ರ ಆಹ ರೂಪಂ ಅಪರಂ ಬಲದೇವತಾಯಾಃ ಗ್ರಾಹ್ಯಃ ಸಃ ಏಷಃ ನಿತರಾಂ ಶರಣಂ ಪ್ರಪನ್ನಃ । ಭಕ್ತಶ್ಚ ರಾಮಪದಯೋಃ ವಿನಶಿಷ್ಣುಃ ರಕ್ಷೋ ವಿಜ್ಞಾಯ ರಾಜ್ಯಂ ಉಪಭೋಕ್ತುಂ ಇಹ ಅಭಿಯಾತಃ ॥

**ಅರ್ಥ** :- **ಬದೇವತಾಯಾಃ** ಬಲದೇವತೆಯಾದ ಶ್ರೀಮುಖ್ಯಪ್ರಾಣನ **ಅಪರರೂಪಂ** ಇನ್ನೊಂದು ರೂಪನಾದ ಹನುಮಂತನು **ಅತ್ರ** ಆ ಪ್ರಸಂಗದಲ್ಲಿ

**ಸಃ ಏಷಃ** ವಿಭೀಷಣನು **ಶರಣಂ** ರಕ್ಷಣೆಯನ್ನು **ಪ್ರಪನ್ನಃ** ಹೊಂದಿರುವವನು **ರಾಮಪದಯೋಃ** ರಾಮನ ಪಾದಗಳಲ್ಲಿ **ನಿತರಾಂ** ನಿರಂತರವಾಗಿ **ಭಕ್ತಶ್ಚ** ಭಕ್ತನೂ ಆಗಿರುವನು. **ವಿನಿಶಿಷ್ಣುಃ** ಶ್ರೀಘ್ರವಾಗಿ ವಿನಾಶವನ್ನು ಹೊಂದುವ **ರಕ್ಷಃ** ರಾವಣನನ್ನು **ವಿಜ್ಞಾಯ** ತಿಳಿದು **ಇಹ** ಈ ಲಂಕೆಯಲ್ಲಿ **ರಾಜ್ಯಂ** ರಾಜ್ಯವನ್ನು **ಉಪಭೋಕ್ತುಂ** ಪಾಲಿಸಲು (ಇಹ ರಾಮನಿರುವಲ್ಲಿಗೆ) **ಅಭಿಯಾತಃ** ಬಂದಿರುವನು. (**ಅತ** ಏವ ಹಾಗಾಗಿಯೇ) **ಗ್ರಾಹ್ಯಃ** ಸ್ವೀಕರಿಸಲು ಯೋಗ್ಯನೆಂದು **ಆಹ** ಹೇಳಿದನು.

**ತಾತ್ಪರ್ಯ** :- ಆಗ ಹನುಮಂತ ಹೇಳಿದನು– 'ಶರಣಾಗತಿಯನ್ನು ಅರಸಿ ಬಂದ ವಿಭೀಷಣನು ರಾಮನ ಪಾದಗಳಲ್ಲಿಯೇ ನಿರಂತರವೂ ಭಕ್ತಿಯುಳ್ಳವನಾಗಿರುವನು. ವಿನಾಶದ ಅಂಚಿನಲ್ಲಿರುವ ರಾವಣ ಹಾಗೂ ಸೇನೆಯನ್ನೂ ಗಮನಿಸಿ, ಇವನು ಮುಂದೆ ಲಂಕೆಯಲ್ಲಿ ರಾಜ್ಯವನ್ನು ಕಟ್ಟಲು ಇಲ್ಲಿ ಆಗಮಿಸಿರುವನು. ಆದ ಕಾರಣ ಇವನು ಸ್ವೀಕಾರಾರ್ಹನಾಗುತ್ತಾನೆ.' ಎನ್ನುವನು.

### ಶರಣಾಗತ ವತ್ಸಲ ರಾಮ

**ಇತ್ಯುಕ್ತವತ್ಯಥ ಹನೂಮತಿ ದೇವದೇವಃ**
**ಸಂಗೃಹ್ಯ ತದ್ವಚನಮಾಹ ಯಥೈವ ಪೂರ್ವಮ್ ।**
**ಸುಗ್ರೀವಹೇತುತ ಇಮಂ ಸ್ಥಿರಮಾಗ್ರಹೀಷ್ಯೇ**
**ಪಾದಪ್ರಪನ್ನಮಿದಮೇವ ಸದಾ ವ್ರತಂ ಮೇ ॥ ೬ ॥**

ಪದಚ್ಛೇದ : ಇತಿ ಉಕ್ತವತಿ ಅಥ ಹನೂಮತಿ ದೇವದೇವಃ ಸಂಗೃಹ್ಯ ತದ್ವಚನಮ್ ಆಹ ಯಥಾ ಏವ ಪೂರ್ವಂ ಸುಗ್ರೀವಹೇತುತಃ ಇಮಂ ಸ್ಥಿರಮ್ ಆಗ್ರಹೀಷ್ಯೇ ಪಾದಪ್ರಪನ್ನಮ್ ಇದಮ್ ಏವ ಸದಾ ವ್ರತಂ ಮೇ ॥

**ಅರ್ಥ** :- **ಹನೂಮತಿ** ಹನುಮಂತನು **ಉಕ್ತವತಿ (ಸತಿ)** ಹೀಗೆ ಹೇಳುತ್ತಿರಲು **ಅಥ** ಅನಂತರ **ದೇವದೇವಃ** ದೇವತೆಗಳಿಗೆ ಸ್ವಾಮಿಯಾದ ಶ್ರೀರಾಮನು **ಯಥಾ** ಹೇಗೆ **ಪೂರ್ವಂ** ಮೊದಲು **ಸುಗ್ರೀವಹೇತುತಃ** ಸುಗ್ರೀವ ನಿಗೋಸ್ಕರ **ತದ್ವಚನಂ** ಹನುಮಂತನ ಮಾತನ್ನು **ಅಗ್ರಹೀತ್** ಅಂಗೀಕರಿಸಿದನೊ **ತಥೈವ** ವಿಭೀಷಣನವಿಷಯದಲ್ಲಿಯೂ (**ತದ್ವಚನಂ** ಹನುಮಂತನ ಮಾತನ್ನು) **ಸಂಗೃಹ್ಯ** ಸ್ವೀಕರಿಸಿ **ಪಾದಪ್ರಪನ್ನಂ** ಪಾದವನ್ನು ಆಶ್ರಯಿಸಿದ **ಇಮಂ** ಈ

ವಿಭೀಷಣನನ್ನು **ಸ್ಥಿರಂ** ಖಂಡಿತವಾಗಿಯೂ **ಅಗ್ರಹೀಷ್ಯೇ** ಒಪ್ಪಿಕೊಳ್ಳುವೆ **ಇದಮೇವ** ಶರಣಾಗತರ ರಕ್ಷಣೆಯೇ **ಸದಾ** ಯಾವಾಗಲೂ **ಮೇ** ನನ್ನ **ವ್ರತಂ** ವ್ರತವು (**ಇತಿ** ಎಂದು) **ಆಹ** ಹೇಳಿದನು

**ತಾತ್ಪರ್ಯ :-** ಶ್ರೀರಾಮನು ಹಿಂದೆ ಸುಗ್ರೀವನ ಪ್ರಸಂಗದಲ್ಲಿ ಹೇಗೆ ಹನುಮಂತನ ಅಭಿಪ್ರಾಯವನ್ನು ಅನುಮೋದಿಸಿದನೋ ಹಾಗೆಯೇ ವಿಭೀಷಣನ ವಿಷಯದಲ್ಲಿಯೂ ಹನುಮಂತನ ಮಾತನ್ನು ಒಪ್ಪಿ 'ಪಾದವನ್ನು ಆಶ್ರಯಿಸಿಬಂದ ಶರಣಾಗತರನ್ನು ನಿರಂತರವಾಗಿಯೂ ರಕ್ಷಿಸುವುದು ನನ್ನ ವ್ರತವೆಂದು' ಹೇಳಿ ವಿಭೀಷಣನನ್ನು ಸ್ವೀಕರಿಸುತ್ತಾನೆ.

**ಸಬ್ರಹ್ಮಕಾಃ ಸುರಗಣಾಃ ಸಹದೈತ್ಯಮರ್ತ್ಯಾಃ**
**ಸರ್ವೇ ಸಮೇತ್ಯ ಚ ಮದಂಗುಲಿಚಾಲನೇಽಪಿ ।**
**ನೇಶಾ ಭಯಂ ನ ಮಮ ರಾತ್ರಿಚರಾದಮುಷ್ಮಾ–**
**ಚ್ಛುದ್ಧಸ್ವಭಾವ ಇತಿ ಚೈನಮಹಂ ವಿಜಾನೇ ॥ ೭ ॥**

ಪದಚ್ಛೇದ : ಸಬ್ರಹ್ಮಕಾಃ ಸುರಗಣಾಃ ಸಹದೈತ್ಯಮರ್ತ್ಯಾಃ ಸರ್ವೇ ಸಮೇತ್ಯ ಚ ಮದಂಗುಲಿಚಾಲನೇ ಅಪಿ । ನೇಶಾಃ ಭಯಂ ನ ಮಮ ರಾತ್ರಿಚರಾತ್ ಅಮುಷ್ಮಾತ್ ಶುದ್ಧಸ್ವಭಾವಃ ಇತಿ ಚ ಏನಮ್ ಅಹಂ ವಿಜಾನೇ ॥

**ಅರ್ಥ :- ಸಹದೈತ್ಯಮರ್ತ್ಯಾಃ** ದೈತ್ಯರು ಹಾಗು ಮನುಷ್ಯರೊಂದಿಗೆ **ಸಬ್ರಹ್ಮಕಾಃ** ಚತುರ್ಮುಖಬ್ರಹ್ಮದೇವರೊಂದಿಗೆ ಕೂಡಿದ **ಸರ್ವೇ** ಸಮಸ್ತ **ಸುರಗಣಾಃ** ದೇವತಾಸಮೂಹಗಳು **ಸಮೇತ್ಯಾಪಿ** ಒಟ್ಟುಗೂಡಿದರೂ **ಮದಂಗುಲಿ ಚಾಲನೇಽಪಿ** ನನ್ನ ಬೆರಳನ್ನು ಅಲುಗಾಡಿಸುವ ವಿಷಯದಲ್ಲಿ ಆದರೂ **ನೇಶಾಃ** ಸಮರ್ಥವಾಗುವುದಿಲ್ಲ. (**ಅತಃ** ಆದಕಾರಣ) **ಅಮುಷ್ಮಾತ್** ಇಂಥಹ **ವಿಭೀಷಣಾತ್** ವಿಭೀಷಣನ ದೆಸೆಯಿಂದ **ಮಮ** ನನಗೆ **ಭಯಂ** ಭಯವು **ನ** ಇರುವುದಿಲ್ಲ. **ಏನಂ** ಈ ವಿಭೀಷಣನನ್ನು **ಶುದ್ಧಸ್ವಭಾವಃ** ಶುದ್ಧಸ್ವಭಾವ ದವನೆಂದು **ವಿಜಾನೇ** ತಿಳಿದಿರುವೆನು.

**ತಾತ್ಪರ್ಯ :-** 'ದೈತ್ಯರು ಮನುಷ್ಯರು ಬ್ರಹ್ಮದೇವರು ಇವರೊಂದಿಗೆ ಸಮಸ್ತದೇವಗಣಗಳು ಒಟ್ಟಾಗಿ ಕೂಡಿದರೂ ನನ್ನ ಕೇವಲ ಒಂದು ಬೆರಳನ್ನು ಅಲುಗಾಡಿಸಲಾರರು. ಹೀಗಿರುವಾಗ ರಾಕ್ಷಸನಾದ ಈ ವಿಭೀಷಣನಿಂದ ನನಗೆ

ಯಾವ ಭಯ? ಎಲೈ ಕಪಿವೀರರೇ! ಇವನು ಉತ್ತಮಸ್ವಭಾವದವನೆಂದು ನಾನು ತಿಳಿದಿರುವೆ. ಆದ್ದರಿಂದ ನಿಮಗೂ ಇವನಿಂದ ಭಯವು ಉಂಟಾಗಲಾರದು'.

**ವಿಭೀಷಣನಿಗೆ ಪಟ್ಟಾಭಿಷೇಕ**

**ಇತ್ಯುಕ್ತವಾಕ್ಯ ಉತ ತಂ ಸ್ವಜನಂ ವಿಧಾಯ**
**ರಾಜ್ಯೇಽಭ್ಯಷೇಚಯದಪಾರಸುಸತ್ತ್ವರಾಶಿಃ ।**
**ಮತ್ವಾ ತೃಣೋಪಮಮಶೇಷಸದಂತಕಂ ತಂ**
**ರಕ್ಷಃಪತೇಸ್ತ ವವರಜಸ್ಯ ದದೌ ಸ ಲಂಕಾಮ್ ॥ ೮ ॥**

ಪದಚ್ಛೇದ : ಇತಿ ಉಕ್ತವಾಕ್ಯಃ ಉತ ತಂ ಸ್ವಜನಂ ವಿಧಾಯ ರಾಜ್ಯೇ ಅಭ್ಯಷೇಚಯತ್ ಅಪಾರಸುಸತ್ತ್ವರಾಶಿಃ । ಮತ್ವಾ ತೃಣೋಪಮಮ್ ಅಶೇಷಸದಂತಕಂ ತಂ ರಕ್ಷಃಪತಿಂ ತು ಅವರಜಸ್ಯ ದದೌ ಸ ಲಂಕಾಮ್ ॥

**ಅರ್ಥ** :- **ಇತಿ** ಈ ಪ್ರಕಾರವಾಗಿ **ಉಕ್ತವಾಕ್ಯಃ** ಹೇಳಲ್ಪಟ್ಟ ವಾಕ್ಯಗಳುಳ್ಳ **ಸತು** ರಾಮನಾದರೂ **ತಂ** ವಿಭೀಷಣನನ್ನು **ಸ್ವಜನಂ** ತನ್ನ ಸೇವಕನನ್ನಾಗಿ **ವಿಧಾಯ** ಮಾಡಿ **ಉತ** ಅನಂತರ **ತಂ** ಆ ವಿಭೀಷಣನನ್ನು **ರಾಜ್ಯೇ** ರಾವಣ ರಾಜ್ಯದಲ್ಲಿ **ಅಭ್ಯಷೇಚಯತ್** ಪಟ್ಟಾಭಿಷೇಕಮಾಡಿದನು. **ಅಪಾರಸುಸತ್ತ್ವರಾಶಿಃ** ಅನಂತವಾದ ಸ್ವಭಾವಸಿದ್ಧಸಾಮರ್ಥ್ಯವುಳ್ಳ ಶ್ರೀರಾಮನು **ಅಶೇಷಸದಂತಕಂ** ಸಮಸ್ತಸಜ್ಜನರಿಗೆ ಶತ್ರುವಾದ **ತಂ** ಆ ರಾವಣನನ್ನು **ತೃಣೋಪಮಂ** ತೃಣ ಸಮಾನನೆಂದು **ಮತ್ವಾ** ತಿಳಿದು **ರಕ್ಷಃಪತೇಃ** ರಾಕ್ಷಸಾಧಿಪತಿಯ **ಅವರಜಸ್ಯ** ಸಹೋದರನಾದ ವಿಭೀಷಣನಿಗೆ **ಲಂಕಾಂ** ಲಂಕೆಯನ್ನು **ದದೌ** ಕೊಟ್ಟನು.

**ತಾತ್ಪರ್ಯ** :- ಈ ರೀತಿಯಾಗಿ ಹೇಳಿದ ಶ್ರೀರಾಮನು ವಿಭೀಷಣನನ್ನು ಭೃತ್ಯನೆಂದು ಸ್ವೀಕರಿಸುತ್ತಾನೆ. ದುಷ್ಟನೂ ಸಜ್ಜನರ ಹಂತಕನೂ ಆಗಿರುವ ರಾವಣನನ್ನು ತೃಣಕ್ಕೆ ಸಮಾನನೆಂದು ಬಗೆದು ಕಿರಿಯವನಾಗಿರುವ ವಿಭೀಷಣನಿಗೆ ಲಂಕೆಯ ಒಡೆತನ ನೀಡಿದನು.

**ಸಮುದ್ರರಾಜನ ಉದ್ಧಟತನ**

**ಕಲ್ಪಾಂತಮಸ್ಯ ನಿಶಿಚಾರಪತಿತ್ವಪೂರ್ವ-**
**ಮಾಯುಃ ಪ್ರದಾಯ ನಿಜಲೋಕಗತಿಂ ತದಂತೇ ।**

**ರಾತ್ರಿತ್ರಯೇಽಪ್ಯನುಪಗಾಮಿನಮೀಕ್ಷ್ಯ ಸೋಽಬ್ಧಿಂ**
**ಚುಕ್ರೋಧ ರಕ್ತನಯನಾಂತಮಯುಂಜದಬ್ಧೌ ॥ ೯ ॥**

ಪದಚ್ಛೇದ : ಕಲ್ಪಾಂತಮ್ ಅಸ್ಯ ನಿಶಿಚಾರಪತಿತ್ವಪೂರ್ವಮ್ ಆಯುಃ ಪ್ರದಾಯ ನಿಜಲೋಕಗತಿಂ ತದಂತೇ । ರಾತ್ರಿತ್ರಯೇ ಅಪಿ ಅನುಪಗಾಮಿಮ್ ಈಕ್ಷ್ಯ ಸಃ ಅಬ್ಧಿಂ ಚುಕ್ರೋಧ ರಕ್ತನಯನಾಂತಮ್ ಅಯುಂಜತ್ ಅಬ್ಧೌ ॥

**ಅರ್ಥ :-** **ಅಸ್ಯ** ಈ ವಿಭೀಷಣನಿಗೆ **ನಿಶಿಚಾರಪತಿತ್ವಪೂರ್ವಂ** ರಾತ್ರಿಯಲ್ಲಿ ಸಂಚರಿಸುವ ರಾಕ್ಷಸರ ಅಧಿಪತಿತ್ವವನ್ನು ಕೊಡುವ ಮೊದಲು **ಕಲ್ಪಾಂತಂ** ಬ್ರಹ್ಮದೇವರ ದಿನಕಲ್ಪದವರೆಗೆ **ಆಯುಃ** ಆಯುಸ್ಸನ್ನು **ಪ್ರದಾಯ** ಕೊಟ್ಟು **ತದಂತೇ** ಅವನ ಆಯುಷ್ಯದ ಕೊನೆಯಲ್ಲಿ **ನಿಜಲೋಕಗತಿಂ** ವೈಕುಂಠ ಲೋಕದ ಹೊಂದುವಿಕೆಯನ್ನು **ಪ್ರದಾಯ** ಕೊಟ್ಟು **ರಾತ್ರಿತಯೇಽಪಿ** ಮೂರು ರಾತ್ರಿಗಳು ಕಳೆದರೂ ಕೂಡ **ಅನುಪಗಾಮಿನಂ** ಆಗಮಿಸದಿರುವ **ಅಬ್ಧಿಂ** ಸಮುದ್ರರಾಜನನ್ನು **ಈಕ್ಷ್ಯ** ವೀಕ್ಷಿಸಿ **ಸಃ** ಶ್ರೀರಾಮನು **ಚುಕ್ರೋಧ** ಕೋಪ ಗೊಂಡನು. **ರಕ್ತನಯನಾಂತಂ** ಕೆಂಪುವರ್ಣವುಳ್ಳ ಕಡೆಗಣ್ಣನ್ನು **ಅಬ್ಧೌ** ಸಮುದ್ರ ದಲ್ಲಿ **ಅಮುಂಚತ್** ನಿಯೋಜಿಸಿದನು.

**ತಾತ್ಪರ್ಯ :-** ರಾಮನು ವಿಭೀಷಣನಿಗೆ ಪಟ್ಟಾಭಿಷೇಕವನ್ನ ಮಾಡುವ ಮೊದಲು ಅವನಿಗೆ ಬ್ರಹ್ಮದಿನಕಲ್ಪಪರ್ಯಂತ ಆಯುಸ್ಸನ್ನು ಪ್ರದಾನ ಮಾಡು ತ್ತಾನೆ. ಇತ್ತ ಮೂರು ರಾತ್ರಿಗಳು ಕಳೆದರೂ ದಾರಿಯನ್ನು ಬಿಡಲು ಬಾರದಿರುವ ಸಮುದ್ರರಾಜನ ಮೇಲೆ ರಾಮನಿಗೆ ಅತ್ಯಂತ ಕೋಪವು ಉಂಟಾಗುತ್ತದೆ.

### ಹೆದರಿದ ಸಮುದ್ರರಾಜ

**ಸ ಕ್ರೋಧದೀಪ್ತನಯನಾಂತಹತಃ ಪರಸ್ಯ**
**ಶೋಷಂ ಕ್ಷಣಾದುಪಗತೋ ದನುಜಾದಿಸತ್ತ್ವೈಃ ।**
**ಸಿಂಧುಃ ಶಿರಸ್ಯರ್ಹಣಂ ಪರಿಗೃಹ್ಯ ರೂಪೀ**
**ಪಾದಾರವಿಂದಮುಪಗಮ್ಯ ಬಭಾಷ ಏತತ್ ॥ ೧೦ ॥**

ಪದಚ್ಛೇದ : ಸಃ ಕ್ರೋಧದೀಪ್ತನಯನಾಂತಹತಃ ಪರಸ್ಯ ಶೋಷಂ ಕ್ಷಣಾತ್ ಉಪಗತಃ ದನುಜಾದಿಸತ್ತ್ವೈಃ । ಸಿಂಧುಃ ಶಿರಸಿ ಆರ್ಹಣಂ ಪರಿಗೃಹ್ಯ ರೂಪೀ ಪಾದಾರವಿಂದಮ್ ಉಪಗಮ್ಯ ಬಭಾಷೇ ಏತತ್॥

**ಅರ್ಥ** :- **ಪರಸ್ಯ** ಶ್ರೀರಾಮನ **ಕ್ರೋಧದೀಪ್ತನಯನಾಂತಹತಃ** ಕ್ರೋಧದಿಂದ ಪ್ರಕಾಶಿಸುವ ಕಡೆಗಣ್ಣಿನ ನೋಟದಿಂದ ವೇದನೆಗೆ ಒಳಗಾದ **ಸಿಂಧುಃ** ಸಮುದ್ರರಾಜನು. **ದನುಜಾದಿಸತ್ತ್ವೈಃ** ದಾನವರೇ ಮೊದಲಾದ ಜಲಚರ ಪ್ರಾಣಿಗಳಿಂದ ಕೂಡಿ **ಶೋಷಂ** ಜಲದ ಅಭಾವದಿಂದ ಒಣಗುವಿಕೆಯನ್ನು **ಕ್ಷಣಾತ್** ಆ ಕ್ಷಣದಲ್ಲಿಯೇ **ಉಪಗತಃ (ಸನ್)** ಹೊಂದಿದವನಾಗಿ **ರೂಪೀ** ವರುಣರೂಪವನ್ನು ಹೊಂದಿದವನಾಗಿ **ಶಿರಸಿ** ಶಿರದಲ್ಲಿ **ಅರ್ಹಣಂ** ಪೂಜೆಯ ವಸ್ತುಗಳನ್ನು **ಪರಿಗೃಹ್ಯ** ಧರಿಸಿ **ಪಾದಾರವಿಂದಂ** ರಾಮನ ಪಾದಗಳೆಂಬ ಕಮಲ ಗಳನ್ನು **ಉಪಗಮ್ಯ** ಹೊಂದಿ **ಏತತ್** ಈ ಮಾತನ್ನು **ಬಭಾಷೇ** ಹೇಳಿದನು

**ತಾತ್ಪರ್ಯ** :- ಕೋಪಪೂರಿತ ರಾಮನ ದೃಷ್ಟಿಗೆ ಸಮುದ್ರದ ನೀರೆಲ್ಲವೂ ಒಣಗುವ ಸ್ಥಿತಿಯೊದಗಿತು. ಆಗ ಭಯಗ್ರಸ್ತನಾದ ಅಲ್ಲಿದ್ದ ಜಲಚರಪ್ರಾಣಿ ಗಳೊಂದಿಗೆ ಕೂಡಿದ ವರುಣರೂಪಿ ಸಮುದ್ರನು ಪೂಜಾದ್ರವ್ಯಗಳನ್ನು ಹಿಡಿದು ರಾಮನನ್ನು ಸಮೀಪಿಸುತ್ತಾನೆ.

**ಸೇತುವೆ ಕಟ್ಟಲು ಪ್ರಾರ್ಥನೆ**

**ತಂ ತ್ವಾ ವಯಂ ಜಡಧಿಯೋ ನ ವಿದಾಮ**
**ಭೂಮನ್ ಕೂಟಸ್ಥಮಾದಿಪುರುಷಂ ಜಗತಾಮಧೀಶಮ್ ।**
**ತ್ವಂ ಸತ್ತ್ವತಃ ಸುರಗಣಾನ್ ರಜಸೋ ಮನುಷ್ಯಾಂ-**
**ಸ್ತಾರ್ತೀಯತೋಽಸುರಗಣಾನಭಿತಸ್ತಥಾಽಸ್ರಾಃ ॥ ೧೧ ॥**

ಪದಚ್ಛೇದ : ತಂ ತ್ವಾ ವಯಂ ಜಡಧಿಯಃ ನ ವಿದಾಮ ಭೂಮನ್ ಕೂಟಸ್ಥಮ್ ಆದಿಪುರುಷಂ ಜಗತಾಮ್ ಅಧೀಶಮ್ । ತ್ವಂ ಸತ್ತ್ವತಃ ಸುರಗಣಾನ್ ರಜಸಃ ಮನುಷ್ಯಾನ್ ತಾರ್ತೀಯತಃ ಅಸುರಗಣಾನ್ ಅಭಿತಃ ತಥಾ ಅಸ್ರಾಃ ॥

**ಅರ್ಥ** :- **ಹೇ ಭೂಮನ್** ದೇಶತಃ ಕಾಲತಃ ಪರಿಪೂರ್ಣನೇ **ಜಡಧಿಯಃ** ಅಜ್ಞರಾದ **ವಯಂ** ನಾವು **ಕೂಟಸ್ಥಂ** ನಿರ್ವಿಕಾರನಾದ **ತಂ** ಪ್ರಸಿದ್ಧನಾದ **ಆದಿಪುರುಷಂ** ಮೂಲಪುರುಷನಾದ **ಜಗತಾಂ** ಲೋಕಗಳಿಗೆ **ಅಧೀಶಂ** ಒಡೆಯ ನಾದ **ತ್ವಾ** ನಿನ್ನನ್ನು **ನ ವಿದಾಮ** ಅರಿಯುವುದಿಲ್ಲ. **ತ್ವಂ** ನೀನು **ಸತ್ತ್ವತಃ** ಸತ್ವಗುಣ ದಿಂದ **ಸುರಗಣಾನ್** ದೇವಸಮೂಹವನ್ನು **ರಜಸಃ** ರಜೋಗುಣದಿಂದ **ಮನುಷ್ಯಾನ್** ಮಾನವರನ್ನು **ತಥಾ** ಹಾಗೆಯೇ **ತಾರ್ತೀಯತಃ** ಮೂರನೆಯ ದಾದ ತಮೋ ಗುಣದಿಂದ **ಅಸುರಗಣಾನ್** ರಾಕ್ಷಸರಸಮೂಹವನ್ನು **ಅಭಿತಃ** ಪ್ರತಿಯೊಂದು ಕಲ್ಪದಲ್ಲಿಯೂ **ಅಸ್ರಾಃ** ಸೃಷ್ಟಿಸಿದೆ.

**ತಾತ್ಪರ್ಯ** :- ಸಮುದ್ರರಾಜನು ರಾಮನನ್ನು ಸ್ತುತಿಸುವನು. 'ಜಗತ್ತಿಗೇ ಮೂಲ ಪುರುಷನಾದ ಶ್ರೀರಾಮನೆ! ನೀನು ಸತ್ವಗುಣದಿಂದ ದೇವತೆಗಳನ್ನು, ರಜೋಗುಣದಿಂದ ಮನುಷ್ಯರನ್ನು, ತಮೋಗುಣದಿಂದ ರಾಕ್ಷಸರನ್ನೂ ಪ್ರತಿ ಕಲ್ಪಗಳಲ್ಲಿಯೂ ಸೃಷ್ಟಿ ಮಾಡಿರುವಿ. ಆದರೂ ನೀನು ಈ ಮೂರು ಗುಣಗಳ ವಿಕಾರರಹಿತನು. ನಾವು ಮಂದಮತಿಗಳು. ಸಮಸ್ತಲೋಕಕ್ಕೆ ಒಡೆಯನಾದ ನಿನ್ನನ್ನು ನಾವು ಅರಿಯಲಾರೆವು.'

**ಕಾಮಂ ಪ್ರಯಾಹಿ ಜಹಿ ವಿಶ್ರವಸೋಽವಮೇಹಂ**
**ತ್ರೈಲೋಕ್ಯರಾವಣಮವಾಪ್ನುಹಿ ವೀರ ಪತ್ನೀಮ್ ।**
**ಬಧ್ನೀಹಿ ಸೇತುಮಿಹ ತೇ ಯಶಸೋ ವಿತತ್ಯೈ ತ್ರ**
**ಗಾಯಂತಿ ದಿಗ್ವಿಜಯಿನೋ ಯಮುಪೇತ್ಯ ಭೂಪಾಃ ॥ ೧೨ ॥**

ಪದಚ್ಛೇದ : **ಕಾಮಂ ಪ್ರಯಾಹಿ ಜಹಿ ವಿಶ್ರವಸಃ ಅವಮೇಹಂ ತ್ರೈಲೋಕ್ಯ ರಾವಣಮ್ ಅವಾಪ್ನುಹಿ ವೀರ! ಪತ್ನೀಮ್ । ಬಧ್ನೀಹಿ ಸೇತುಂ ಇಹ ತೇ ಯಶಸಃ ವಿತತ್ಯೈ ತ್ರ ಗಾಯಂತಿ ದಿಗ್ವಿಜಯಿನಃ ಯಮ್ ಉಪೇತ್ಯ ಭೂಪಾಃ ॥**

**ಅರ್ಥ** :- **ಹೇ ವೀರ** ಎಲೈ ವೀರನಾದ ರಾಮನೆ **ಕಾಮಂ** ಇಚ್ಛಾನುಸಾರಿ ಯಾಗಿ **ಪ್ರಯಾಹಿ** ಲಂಕೆಯನ್ನು ಕುರಿತು ಹೋಗು. **ತ್ರೈಲೋಕ್ಯರಾವಣಂ** ಮೂರೂ ಲೋಕಗಳನ್ನು ಬೆಚ್ಚುಸುವ **ವಿಶ್ರವಸಃ** ವಿಶ್ರವಸ್ ಎಂಬ ಮುನಿಗಳ **ಅವಮೇಹಂ** ರೇತೋವಿಕಾರನಾದ ರಾವಣನನ್ನು **ಜಹಿ** ಸಂಹರಿಸು. **ಪತ್ನೀಂ** ಪತ್ನಿರೂಪವಾದ ಸೀತಾಕೃತಿಯನ್ನು **ಅವಾಪ್ನುಹಿ** ಹೊಂದುವವನಾಗು. **ತೇ** ನಿನ್ನ **ಯಶಸಃ** ಕೀರ್ತಿಯ **ವಿತತ್ಯೈ** ವಿಸ್ತಾರಕ್ಕೋಸ್ಕರ **ಇಹ** ಈ ಸಮುದ್ರದಲ್ಲಿ **ಸೇತುಂ** ಸೇತುವೆಯನ್ನು **ಬಧ್ನೀಹಿ** ಕಟ್ಟುವವನಾಗು. **ದಿಗ್ವಿಜಯಿನಃ** ಸಮಸ್ತದಿಕ್ಕುಗಳನ್ನು ಗೆದ್ದಿರುವ **ಭೂಪಾಃ** ರಾಜರು **ಯಂ** ಯಾವ ನೀನು ಕಟ್ಟಿದ ಸೇತುವೆಯನ್ನು **ಉಪೇತ್ಯ** ಹೊಂದಿ **ಗಾಯಂತಿ** ಸ್ತೋತ್ರಮಾಡುತ್ತಾರೆ. (**ಇತ್ಯೇತದ್** ಹೀಗೆಂದು) **ಬಭಾಷೇ** ಹೇಳಿದನು.

**ತಾತ್ಪರ್ಯ** :- ಹೇ ರಾಮನೇ! 'ವಿಶ್ರವಸ್' ಎಂಬ ಮುನಿಯ ಅಮೇಧ್ಯದಿಂದ ಜನಿಸಿದವನೇ ರಾವಣನು. ಇವನು ಮೂರುಲೋಕಗಳಲ್ಲಿ ಸಂಕಟವನ್ನುಮಾಡುತ್ತಿರುವನು. ರಾಮನೇ! ನಿನ್ನಿಚ್ಛೆಯಂತೆ ಲಂಕೆಗೆ ತೆರಳು. ರಾವಣನನ್ನು ಸಂಹರಿಸು. ಸೀತಾಕೃತಿಯನ್ನು ಮರಳಿ ಪಡೆ. ಅದಕ್ಕಾಗಿ

ಸೇತುವೆಯನ್ನು ಕಟ್ಟು ಇದರಿಂದಾಗ ನಿನ್ನ ಕೀರ್ತಿಯು ರಾಜರಿಂದ ಲೋಕದೆಲ್ಲೆಡೆ ಹಬ್ಬುವುದು.

ರಾಮನಿಂದ ರಕ್ಕಸರ ವಧೆ

**ಇತ್ಯುಕ್ತವಂತಮಮುಮಾಶ್ವನುಗೃಹ್ಯ ಬಾಣಂ**
**ತಸ್ಮೈ ಧೃತಂ ದಿತಿಸುತಾತ್ಮಸು ಚಾಂತ್ಯಜೇಷು ।**
**ಶಾರ್ವಾದ್ ವರಾದ್ ವಿಗತಮೃತ್ಯುಷು ದುರ್ಜಯೇಷು**
**ನಿಃಸಂಖ್ಯಕೇಷ್ವಮುಚದಾಶು ದದಾಹ ಸರ್ವಾನ್ ॥ ೧೩ ॥**

**ಪದಚ್ಛೇದ : ಇತಿ ಉಕ್ತವಂತಮ್ ಅಮುಮ್ ಆಶು ಅನುಗೃಹ್ಯ ಬಾಣಂ ತಸ್ಮೈ ಧೃತಂ ದಿತಿಸುತಾತ್ಮಸು ಚ ಅಂತ್ಯಜೇಷು । ಶಾರ್ವಾದ್ ವರಾದ್ ವಿಗತಮೃತ್ಯುಷು ದುರ್ಜಯೇಷು ನಿಃಸಂಖ್ಯಕೇಷು ಅಮುಚತ್ ಆಶು ದದಾಹ ಸರ್ವಾನ್ ॥**

**ಅರ್ಥ :-** **ಇತಿ** ಈ ಪ್ರಕಾರವಾಗಿ **ಉಕ್ತವಂತಂ** ಹೇಳುತ್ತಿರುವ **ಅಮುಂ** ಈ ಸಮುದ್ರರಾಜನನ್ನು **ಆಶು** ಕೂಡಲೆ **ಅನುಗೃಹ್ಯ** ಅನುಗ್ರಹಿಸಿ **ತಸ್ಮೈ** ಆ ಸಮುದ್ರ ರಾಜನಿಗೋಸ್ಕರ **ಧೃತಂ** ಧರಿಸಲ್ಪಟ್ಟ **ಬಾಣಂ** ಬಾಣವನ್ನು **ಶಾರ್ವಾತ್** ರುದ್ರ ದೇವರ ಸಂಬಂಧಿಯಾದ **ವರಾತ್** ವರದ ದೆಸೆಯಿಂದ **ವಿಗತಮೃತ್ಯುಂ** ಮೃತ್ಯು ವಿಮುಖರಾದ **ದಿತಿಸುತಾಸ್ಮಸು** ದಿತಿದೇವಿಯ ಮಕ್ಕಳಾದ ರಾಕ್ಷಸರಲ್ಲಿ **ದುರ್ಜಯೇಷು** ಜಯಿಸಲು ಅಸಾಧ್ಯರಾದ **ನಿಃಸಂಖ್ಯಕೇಷು** ಅಸಂಖ್ಯರಾದ **ಅಂತ್ಯಜೇಷು ಚ** ಅಸಂಸ್ಕೃತರಲ್ಲಿಯೂ **ಅಮುಂಚತ್** ಬಿಟ್ಟನು. **ಆಶು** ಕೂಡಲೇ **ಸರ್ವಾನ್** ಎಲ್ಲ ಅಸಂಸ್ಕೃತರನ್ನು **ದದಾಹ** ಬಾಣವು ದಹಿಸಿತು.

**ತಾತ್ಪರ್ಯ :-** ಈ ಮಾತುಗಳನ್ನಾಡಿದ ಸಮುದ್ರನನ್ನು ರಾಮನು ಕೂಡಲೇ ಅನುಗ್ರಹಿಸಿ ಅವನ ಮೇಲೆ ಪ್ರಯೋಗಿಸಲು ಹೂಡಿದ ಬಾಣದಿಂದ ಸಾಗರದೊಳಗಡಗಿರುವ ದಿತಿದೇವಿಯ ಪುತ್ರರಾದ ರಾಕ್ಷಸರರನ್ನು ಹಾಗು ಅಸಂಸ್ಕೃತರನ್ನು ಸಂಹರಿಸಲು ಬಾಣವನ್ನು ಬಿಡುವನು. ಇವರೆಲ್ಲರೂ ರುದ್ರ ದೇವನ ವರದಿಂದ ಅವಧ್ಯರಾಗಿ ಜಯಿಸಲು ಅಸಾಧ್ಯರಾಗಿದ್ದರು. ಆದರೆ ರಾಮನ ಬಾಣವು ಎಲ್ಲರನ್ನೂ ದಹಿಸಿತು.

ಸೇತು ಬಂಧನ

**ಕೃತ್ವೇರಿಣಂ ತದಥ ಮೂಲಫಲಾನಿ ಚಾತ್ರ**
**ಸಮ್ಯಗ್ ವಿಧಾಯ ಭವಶತ್ರುರಮೋಘಚೇಷ್ಟಃ ।**

ಬದ್ಧುಂ ದಿದೇಶ ಸುರವರ್ಧಕಿನೋಽವತಾರಂ
ತಜ್ಞಂ ನಲಂ ಹರಿವರಾನಪರಾಂಶ್ಚ ಸೇತುಮ್ ॥ ೧೪ ॥

ಪದಚ್ಛೇದ : ಕೃತ್ವಾ ಈರಿಣಂ ತತ್ ಅಥ ಮೂಲಫಲಾನಿ ಚ ಅತ್ರ ಸಮ್ಯಗ್ ವಿಧಾಯ ಭವಶತ್ರುಃ ಅಮೋಘಚೇಷ್ಟಃ । ಬದ್ಧುಂ ದಿದೇಶ ಸುರವರ್ಧಕಿನಃ ಅವತಾರಂ ತಜ್ಞಂ ನಲಂ ಹರಿವರಾನ್ ಅಪರಾನ್ ಚ ಸೇತುಮ್ ॥

**ಅರ್ಥ** :- **ಭವಶತ್ರುಃ** ಸಂಸಾರವನ್ನು ದೂರಮಾಡುವ **ಅಮೋಘಚೇಷ್ಟಃ** ಅದ್ಭುತವಾದ ಕಾರ್ಯಗಳುಳ್ಳ ಶ್ರೀರಾಮನು **ತತ್ ಈರಣಂ** ಆ ಮರು ಭೂಮಿಯನ್ನು **ಸಮ್ಯಕ್** ಯೋಗ್ಯಭೂಮಿಯನ್ನಾಗಿ **ಕೃತ್ವಾ** ಮಾಡಿ **ಅಥ** ಅನಂತರ **ಅತ್ರ** ಆ ಭೂಮಿಯಲ್ಲಿ **ಮೂಲಫಲಾನಿ ಚ** ಗೆಡ್ಡೆ ಗೆಣಸು ಹಾಗು ಫಲಗಳೇ ಮೊದಲಾದವುಗಳನ್ನು **ವಿಧಾಯ** ಮಾಡಿ **ಸುರವರ್ಧಕಿನಃ** ದೇವತೆಗಳ ಶಿಲ್ಪಿಯಾದ ವಿಶ್ವಕರ್ಮನ **ಅವತಾರಂ** ಅವತಾರಿಯಾದ **ತಜ್ಞಂ** ಅವನಿಂದ ಹುಟ್ಟಿದ **ನಲಂ** ನಲನೆಂಬುವನನ್ನು **ಅಪರಾನ್** ಇನ್ನುಳಿದ **ಹರಿವರಾನ್ ಚ** ಕಪಿಶ್ರೇಷ್ಠರನ್ನೂ ಕೂಡ **ಸೇತುಂ** ಸೇತುವೆಯನ್ನು **ಬದ್ಧುಂ** ಕಟ್ಟಲು **ದಿದೇಶ** ಆದೇಶಿಸಿದನು.

**ತಾತ್ಪರ್ಯ** :- ಸೇತುವೆಯನ್ನು ಕಟ್ಟಲು ಅಲ್ಲಿರುವ ಮರುಭೂಮಿಯನ್ನು ಹಸನಾಗಿಸುವ ರಾಮನು ಅಲ್ಲಿ ಕಂದಮೂಲಫಲಗಳನ್ನು ಬೆಳೆಯುವಂತೆ ಮಾಡುವನು. ವಿಶ್ವಕರ್ಮನ ಅವತಾರಿಯಾದ ಶಿಲ್ಪಕಲಾನಿಪುಣನಾದ ನಲ ನೆಂಬ ಕಪಿಗೂ ಹಾಗು ಉಳಿದ ಕಪಿವರರಿಗೂ ಸೇತುವೆಯನ್ನು ಕಟ್ಟಲು ಆದೇಶವನ್ನು ನೀಡುತ್ತಾನೆ.

ಲಂಕಾಪ್ರವೇಶ

ಬಧ್ವೋದಧೌ ರಘುಪತಿರ್ವಿವಿಧಾದ್ರಿಕೂಟೈಃ
ಸೇತುಂ ಕಪೀಂದ್ರಕರಕಂಪಿತಭೂರುಹಾಂಗೈಃ ।
ಸುಗ್ರೀವನೀಲಹನುಮತ್ಪ್ರಮುಖೈರನೀಕೈ-
ರ್ಲಂಕಾಂ ವಿಭೀಷಣದೃಶಾಽವಿಶದಾಶು ದಗ್ಧಾಮ್ ॥ ೧೫ ॥

ಪದಚ್ಛೇದ : ಬಧ್ವಾ ಉದಧೌ ರಘುಪತಿಃ ವಿವಿಧಾದ್ರಿಕೂಟೈಃ ಸೇತುಂ ಕಪೀಂದ್ರಕರಕಂಪಿತಭೂರುಹಾಂಗೈಃ । ಸುಗ್ರೀವನೀಲಹನುಮತ್ಪ್ರಮುಖೈಃ ಅನೀಕೈಃ ಲಂಕಾಂ ವಿಭೀಷಣದೃಶಾ ಆವಿಶತ್ ಆಶು ದಗ್ಧಾಮ್॥

**ಅರ್ಥ** :- **ರಘುಪತಿಃ** ಶ್ರೀರಾಮನು **ಕಪೀಂದ್ರಕರಕಂಪಿತಭೂರುಹಾಂಗ್ರೈಃ ಕಪೀಂದ್ರ ಕರಕಂಪಿತ ಕಪೀಂದ್ರಕರ** ಕಪಿವೀರರ ಕರಗಳಿಂದ **ಕಂಪಿತಃ** ಕಂಪಿಸಲ್ಪಟ್ಟ **ಭೂರುಹಾಂಗ್ರೈಃ** ವೃಕ್ಷಗಳ ಅವಯವಗಳುಳ್ಳ **ವಿವಿಧಾದ್ರಿಕೂಟೈಃ** ಅನೇಕವಿಧ ವಾದ ಪರ್ವತಶಿರೋಭಾಗಗಳಿಂದ **ಉದಧೌ** ಸಮುದ್ರದಲ್ಲಿ **ಸೇತುಂ** ಸೇತುವೆ ಯನ್ನು **ಬಧ್ವಾ** ಕಟ್ಟಿ **ಸುಗ್ರೀವನೀಲಹನುಮತ್ಪ್ರಮುಖೈಃ** ಸುಗ್ರೀವ ನೀಲ ಹನುಮಂತನೇ ಮೊದಲಾದ ಕಪಿಪ್ರಮುಖರೊಂದಿಗೆ **ಅನೇಕೈಃ** ಅನೇಕಕಪಿ ಗಳಿಂದ (ಕೂಡಿ) **ವಿಭೀಷಣದೃಶಾ** ವಿಭೀಷಣನಿಂದ ಸೂಚಿಸಲ್ಪಟ್ಟ ಮಾರ್ಗ ದಿಂದ **ದಗ್ಧಾಂ** ಹನುಮಂತನಿಂದ ಸುಡಲ್ಪಟ್ಟ **ಲಂಕಾಂ** ಲಂಕಾನಗರವನ್ನು **ಆಶು** ಶೀಘ್ರವಾಗಿ **ಆವಿಶತ್** ಪ್ರವೇಶಿಸಿದನು.

**ತಾತ್ಪರ್ಯ** :- ಸೇತುವೆಯನ್ನು ಕಟ್ಟಲು ಕಪಿಗಳೆಲ್ಲರೂ ವಿವಿಧವೃಕ್ಷಗಳಿಂದ ಕೂಡಿದ ಅನೇಕಪರ್ವತಶಿಖರಗಳನ್ನೇ ಸಾಧನವಾಗಿ ಬಳಸುತ್ತಾರೆ. ಶೀಘ್ರ ವಾಗಿಯೇ ಸೇತುವೆಯು ಪೂರ್ಣವಾಗುತ್ತದೆ. ವಿಭೀಷಣನು ಲಂಕೆಯ ಮಾರ್ಗದರ್ಶಿಯಾಗಿದ್ದಾನೆ. ಹನುಮಂತಮೊದಲಾದವರೊಂದಿಗೆ ರಾಮ ಬೇಗನೇ ಲಂಕೆಯನ್ನು ಪ್ರವೇಶಿಸುತ್ತಾನೆ.

### ರಾವಣನ ಭೀತಿ

**ಪ್ರಾಪ್ತಂ ನಿಶಮ್ಯ ಪರಮಂ ಭುವನೈಕಸಾರಂ**
**ನಿಸ್ಸೀಮಪೌರುಷಮನಂತಮಸೌ ದಶಾಸ್ಯಃ ।**
**ತ್ರಾಸಾದ್ ವಿಷಣ್ಣಹೃದಯೋ ನಿತರಾಂ ಬಭೂವ**
**ಕರ್ತವ್ಯಕರ್ಮವಿಷಯೇ ಚ ವಿಮೂಢಚೇತಾಃ ॥ ೧೬ ॥**

ಪದಚ್ಛೇದ : ಪ್ರಾಪ್ತಂ ನಿಶಮ್ಯ ಪರಮಂ ಭುವನೈಕಸಾರಂ ನಿಸ್ಸೀಮಪೌರುಷಮ್ ಅನಂತಮ್ ಅಸೌ ದಶಾಸ್ಯಃ । ತ್ರಾಸಾದ್ ವಿಷಣ್ಣಹೃದಯಃ ನಿತರಾಂ ಬಭೂವ ಕರ್ತವ್ಯಕರ್ಮವಿಷಯೇ ಚ ವಿಮೂಢಚೇತಾಃ ॥

**ಅರ್ಥ** :- **ಭುವನೈಕಸಾರಂ** ಜಗತ್ತಿನಲ್ಲಿಯೇ ಮಹಾಬಲಿಷ್ಠನಾದ **ನಿಃಸೀಮಪೌರುಷಂ** ಮಿತಿಯಿಲ್ಲದ ಸಾಮರ್ಥ್ಯವುಳ್ಳ **ಅನಂತಂ** ನಾಶರಹಿತನಾದ **ಪರಮಂ** ಉತ್ತಮನಾದ ಶ್ರೀರಾಮನು **ಪ್ರಾಪ್ತಂ** ತನ್ನ ಸಮೀಪಕ್ಕೆ ಆಗಮಿಸಿರು ವುದನ್ನು **ಅಸೌ ದಶಾಸ್ಯಃ** ಈ ರಾವಣನು **ನಿಶಮ್ಯ** ಕೇಳಿ **ತ್ರಾಸಾತ್** ಭಯದಿಂದ **ನಿತರಾಂ** ಬಹುವಾಗಿ **ವಿಷಣ್ಣಹೃದಯಃ** ದುಃಖಿತಹೃದಯವುಳ್ಳವನೂ **ಕರ್ತವ್ಯ**

**ಕರ್ಮವಿಷಯೇ ಚ** ಮಾಡಬೇಕಾದ ಕಾರ್ಯಗಳ ವಿಷಯಗಳಲ್ಲೂ **ವಿಮೂಢ ಚೇತಾಃ** ಮುಂದೇನು ಮಾಡಬೇಕೆಂಬ ವಿಷಯದಲ್ಲಿ ಬುದ್ಧಿಹೀನನಾಗಿಯೂ **ಬಭೂವ** ಆದನು

**ತಾತ್ಪರ್ಯ :-** ಅಮಿತಪರಾಕ್ರಮಿಯಾದ ರಾಮನು ಲಂಕೆಯನ್ನು ಪ್ರವೇಶಿಸಿದ ವಾರ್ತೆಯನ್ನು ಕೇಳಿ ರಾವಣನು ಭಯಗ್ರಸ್ತನಾಗುವನು. ದುಃಖ ತಪ್ತನಾದ ರಾವಣನು ಮುಂದೇನು ಮಾಡಬೇಕೆಂದು ತಿಳಿಯದೇ ಹತಾಶನಾಗುತ್ತಾನೆ.

**ದೂತನಾದ ಅಂಗದ**

**ಪ್ರಸ್ಥಾಪ್ಯ ವಾಲಿಸುತಮೇವ ಚ ರಾಜನೀತ್ಯೈ**
**ರಾಮಸ್ತದುಕ್ತವಚನೇಽಪ್ಯಮುನಾಽಗೃಹೀತೇ ।**
**ದ್ವಾರೋ ರುರೋಧ ಸ ಚತಸ್ರ ಉದೀರ್ಣಸೈನ್ಯೋ**
**ರಕ್ಷಃಪತೇಃ ಪುರ ಉದಾರಗುಣಃ ಪರೇಶಃ ॥ ೧೭ ॥**

ಪದಚ್ಛೇದ : ಪ್ರಸ್ಥಾಪ್ಯ ವಾಲಿಸುತಂ ಏವ ಚ ರಾಜನೀತ್ಯೈ ರಾಮಃ ತದುಕ್ತವಚನೇ ಅಪಿ ಅಮುನಾ ಅಗೃಹೀತೇ । ದಾರಃ ರುರೋಧ ಸ ಚತಸ್ರಃ ಉದೀರ್ಣಸೈನ್ಯಃ ರಕ್ಷಃಪತೇಃ ಪುರ ಉದಾರಗುಣಃ ಪರೇಶಃ ॥

**ಅರ್ಥ :- ಉದೀರ್ಣಸೈನ್ಯಃ** ಉತ್ತಮವಾದ ಸೈನ್ಯವುಳ್ಳ **ಉದಾರಗುಣಃ** ಉತ್ಕೃಷ್ಟವಾದ ಗುಣಶಾಲಿಯಾದ **ಪರೇಶಃ** ಬ್ರಹ್ಮಾದಿಗಳಿಗೂ ಒಡೆಯನಾದ **ರಾಮಃ** ಶ್ರೀರಾಮನು **ರಾಜನೀತ್ಯೈ ಏವ** ರಾಜನೀತಿಗಾಗಿಯೇ **ವಾಲಿಸುತಂ** ವಾಲಿಯ ಮಗನಾದ ಅಂಗದನನ್ನು **ಪ್ರಸ್ಥಾಪ್ಯ** ಕಳುಹಿಸಿ **ಅಮುನಾ ಚ** ಆ ರಾವಣನಿಂದಾದರೋ **ತದುಕ್ತವಚನೇ** ಅಂಗದನಿಂದ ಹೇಳಲ್ಪಟ್ಟ ವಚನವು **ಅಗೃಹೀತೇ (ಸತಿ)** ಅಂಗೀಕರಿಸಲ್ಪಡುತ್ತಿರಲು **ರಕ್ಷಃಪತೇಃ** ರಾಕ್ಷಸಾಧಿಪತಿಯಾದ ರಾವಣನ **ಪುರಃ** ಪಟ್ಟಣದ **ಚತಸ್ರಃ ದ್ವಾರಃ** ನಾಲ್ಕು ದ್ವಾರಗಳನ್ನು **ರುರೋಧ** ಪ್ರತಿಬಂಧಿಸಿದನು.

**ತಾತ್ಪರ್ಯ :-** ರಾಮನು ಮೊದಲು ಅಂಗದನನ್ನು ರಾಯಭಾರಿಯಾಗಿ ರಾವಣನಿದ್ದಲ್ಲಿಗೆ ಕಳುಹಿಸುತ್ತಾನೆ. ಆದರೆ ಅಂಗದನ ಯಾವ ಮಾತುಗಳನ್ನು ರಾವಣನು ಮನ್ನಿಸುವುದಿಲ್ಲ. ಹೀಗಾಗಿ ರಾಮನು ತನ್ನ ಕಪಿಸೈನಿಕರೊಂದಿಗೆ ಲಂಕೆಯ ನಾಲ್ಕು ದಿಕ್ಕುಗಳಲ್ಲಿರುವ ನಾಲ್ಕು ದ್ವಾರಗಳಿಗೆ ಮುತ್ತಿಗೆ ಹಾಕುತ್ತಾನೆ.

**ಅರ್ಥ** :- **ರಘುಪತಿಃ** ಶ್ರೀರಾಮನು **ಕಪೀಂದ್ರಕರಕಂಪಿತಭೂರುಹಾಂಗ್ಯೈಃ ಕಪೀಂದ್ರ ಕರಕಂಪಿತ ಕಪೀಂದ್ರ**ಕರ ಕಪಿವೀರರ ಕರಗಳಿಂದ **ಕಂಪಿತಃ** ಕಂಪಿಸಲ್ಪಟ್ಟ **ಭೂರುಹಾಂಗ್ಯೈಃ** ವೃಕ್ಷಗಳ ಅವಯವಗಳುಳ್ಳ **ವಿವಿಧಾದ್ರಿಕೂಟೈಃ** ಅನೇಕವಿಧವಾದ ಪರ್ವತಶಿರೋಭಾಗಗಳಿಂದ **ಉದಧೌ** ಸಮುದ್ರದಲ್ಲಿ **ಸೇತುಂ** ಸೇತುವೆಯನ್ನು **ಬಧ್ವಾ** ಕಟ್ಟಿ **ಸುಗ್ರೀವನೀಲಹನುಮತ್ಪ್ರಮುಖೈಃ** ಸುಗ್ರೀವ ನೀಲ ಹನುಮಂತನೇ ಮೊದಲಾದ ಕಪಿಪ್ರಮುಖರೊಂದಿಗೆ **ಅನೇಕೈಃ** ಅನೇಕಕಪಿಗಳಿಂದ (ಕೂಡಿ) **ವಿಭೀಷಣದೃಶಾ** ವಿಭೀಷಣನಿಂದ ಸೂಚಿಸಲ್ಪಟ್ಟ ಮಾರ್ಗದಿಂದ **ದಗ್ಧಾಂ** ಹನುಮಂತನಿಂದ ಸುಡಲ್ಪಟ್ಟ **ಲಂಕಾಂ** ಲಂಕಾನಗರವನ್ನು **ಆಶು** ಶೀಘ್ರವಾಗಿ **ಆವಿಶತ್** ಪ್ರವೇಶಿಸಿದನು.

**ತಾತ್ಪರ್ಯ** :- ಸೇತುವೆಯನ್ನು ಕಟ್ಟಲು ಕಪಿಗಳೆಲ್ಲರೂ ವಿವಿಧವೃಕ್ಷಗಳಿಂದ ಕೂಡಿದ ಅನೇಕಪರ್ವತಶಿಖರಗಳನ್ನೇ ಸಾಧನವಾಗಿ ಬಳಸುತ್ತಾರೆ. ಶೀಘ್ರವಾಗಿಯೇ ಸೇತುವೆಯು ಪೂರ್ಣವಾಗುತ್ತದೆ. ವಿಭೀಷಣನು ಲಂಕೆಯ ಮಾರ್ಗದರ್ಶಿಯಾಗಿದ್ದಾನೆ. ಹನುಮಂತಮೊದಲಾದವರೊಂದಿಗೆ ರಾಮ ಬೇಗನೇ ಲಂಕೆಯನ್ನು ಪ್ರವೇಶಿಸುತ್ತಾನೆ.

### ರಾವಣನ ಭೀತಿ

**ಪ್ರಾಪ್ತಂ ನಿಶಮ್ಯ ಪರಮಂ ಭುವನೈಕಸಾರಂ**
**ನಿಸ್ಸೀಮಪೌರುಷಮನಂತಮಸೌ ದಶಾಸ್ಯಃ ।**
**ತ್ರಾಸಾದ್ ವಿಷಣ್ಣಹೃದಯೋ ನಿತರಾಂ ಬಭೂವ**
**ಕರ್ತವ್ಯಕರ್ಮವಿಷಯೇ ಚ ವಿಮೂಢಚೇತಾಃ ॥ ೧೬ ॥**

ಪದಚ್ಛೇದ : ಪ್ರಾಪ್ತಂ ನಿಶಮ್ಯ ಪರಮಂ ಭುವನೈಕಸಾರಂ ನಿಸ್ಸೀಮಪೌರುಷಮ್ ಅನಂತಮ್ ಅಸೌ ದಶಾಸ್ಯಃ । ತ್ರಾಸಾದ್ ವಿಷಣ್ಣಹೃದಯಃ ನಿತರಾಂ ಬಭೂವ ಕರ್ತವ್ಯಕರ್ಮವಿಷಯೇ ಚ ವಿಮೂಢಚೇತಾಃ ॥

**ಅರ್ಥ** :- **ಭುವನೈಕಸಾರಂ** ಜಗತ್ತಿನಲ್ಲಿಯೇ ಮಹಾಬಲಿಷ್ಠನಾದ **ನಿಃಸೀಮಪೌರುಷಂ** ಮಿತಿಯಿಲ್ಲದ ಸಾಮರ್ಥ್ಯವುಳ್ಳ **ಅನಂತಂ** ನಾಶರಹಿತನಾದ **ಪರಮಂ** ಉತ್ತಮನಾದ ಶ್ರೀರಾಮನು **ಪ್ರಾಪ್ತಂ** ತನ್ನ ಸಮೀಪಕ್ಕೆ ಆಗಮಿಸಿರುವುದನ್ನು **ಅಸೌ ದಶಾಸ್ಯಃ** ಈ ರಾವಣನು **ನಿಶಮ್ಯ** ಕೇಳಿ **ತ್ರಾಸಾತ್** ಭಯದಿಂದ **ನಿತರಾಂ** ಬಹುವಾಗಿ **ವಿಷಣ್ಣಹೃದಯಃ** ದುಃಖಿತಹೃದಯವುಳ್ಳವನೂ **ಕರ್ತವ್ಯ**

**ಕರ್ಮವಿಷಯೇ ಚ** ಮಾಡಬೇಕಾದ ಕಾರ್ಯಗಳ ವಿಷಯಗಳಲ್ಲೂ **ವಿಮೂಢ ಚೇತಾಃ** ಮುಂದೇನು ಮಾಡಬೇಕೆಂಬ ವಿಷಯದಲ್ಲಿ ಬುದ್ಧಿಹೀನನಾಗಿಯೂ **ಬಭೂವ** ಆದನು

**ತಾತ್ಪರ್ಯ :-** ಅಮಿತಪರಾಕ್ರಮಿಯಾದ ರಾಮನು ಲಂಕೆಯನ್ನು ಪ್ರವೇಶಿಸಿದ ವಾರ್ತೆಯನ್ನು ಕೇಳಿ ರಾವಣನು ಭಯಗ್ರಸ್ತನಾಗುವನು. ದುಃಖ ತಪ್ತನಾದ ರಾವಣನು ಮುಂದೇನು ಮಾಡಬೇಕೆಂದು ತಿಳಿಯದೇ ಹತಾಶನಾಗುತ್ತಾನೆ.

**ದೂತನಾದ ಅಂಗದ**

**ಪ್ರಸ್ಥಾಪ್ಯ ವಾಲಿಸುತಮೇವ ಚ ರಾಜನೀತ್ಯೈ**
**ರಾಮಸ್ತದುಕ್ತವಚನೇಽಪ್ಯಮುನಾಽಗೃಹೀತೇ ।**
**ದ್ವಾರೋ ರುರೋಧ ಸ ಚತಸ್ರ ಉದೀರ್ಣಸೈನ್ಯೋ**
**ರಕ್ಷಃಪತೇಃ ಪುರ ಉದಾರಗುಣಃ ಪರೇಶಃ ॥ ೧೭ ॥**

**ಪದಚ್ಛೇದ :** ಪ್ರಸ್ಥಾಪ್ಯ ವಾಲಿಸುತಂ ಏವ ಚ ರಾಜನೀತ್ಯೈ ರಾಮಃ ತದುಕ್ತವಚನೇ ಅಪಿ ಅಮುನಾ ಅಗೃಹೀತೇ । ದಾರಃ ರುರೋಧ ಸ ಚತಸ್ರಃ ಉದೀರ್ಣಸೈನ್ಯಃ ರಕ್ಷಃಪತೇಃ ಪುರ ಉದಾರಗುಣಃ ಪರೇಶಃ ॥

**ಅರ್ಥ :- ಉದೀರ್ಣಸೈನ್ಯಃ** ಉತ್ತಮವಾದ ಸೈನ್ಯವುಳ್ಳ **ಉದಾರಗುಣಃ** ಉತ್ಕೃಷ್ಟವಾದ ಗುಣಶಾಲಿಯಾದ **ಪರೇಶಃ** ಬ್ರಹ್ಮಾದಿಗಳಿಗೂ ಒಡೆಯನಾದ **ರಾಮಃ** ಶ್ರೀರಾಮನು **ರಾಜನೀತ್ಯೈ ಏವ** ರಾಜನೀತಿಗಾಗಿಯೇ **ವಾಲಿಸುತಂ** ವಾಲಿಯ ಮಗನಾದ ಅಂಗದನನ್ನು **ಪ್ರಸ್ಥಾಪ್ಯ** ಕಳುಹಿಸಿ **ಅಮುನಾ ಚ** ಆ ರಾವಣನಿಂದಾದರೋ **ತದುಕ್ತವಚನೇ** ಅಂಗದನಿಂದ ಹೇಳಲ್ಪಟ್ಟ ವಚನವು **ಅಗೃಹೀತೇ (ಸತಿ)** ಅಂಗೀಕರಿಸಲ್ಪಡುತ್ತಿರಲು **ರಕ್ಷಃಪತೇಃ** ರಾಕ್ಷಸಾಧಿಪತಿಯಾದ ರಾವಣನ **ಪುರಃ** ಪಟ್ಟಣದ **ಚತಸ್ರಃ ದ್ವಾರಃ** ನಾಲ್ಕು ದ್ವಾರಗಳನ್ನು **ರುರೋಧ** ಪ್ರತಿಬಂಧಿಸಿದನು.

**ತಾತ್ಪರ್ಯ :-** ರಾಮನು ಮೊದಲು ಅಂಗದನನ್ನು ರಾಯಭಾರಿಯಾಗಿ ರಾವಣನಿದ್ದಲ್ಲಿಗೆ ಕಳುಹಿಸುತ್ತಾನೆ. ಆದರೆ ಅಂಗದನ ಯಾವ ಮಾತುಗಳನ್ನು ರಾವಣನು ಮನ್ನಿಸುವುದಿಲ್ಲ. ಹೀಗಾಗಿ ರಾಮನು ತನ್ನ ಕಪಿಸೈನಿಕರೊಂದಿಗೆ ಲಂಕೆಯ ನಾಲ್ಕು ದಿಕ್ಕುಗಳಲ್ಲಿರುವ ನಾಲ್ಕು ದ್ವಾರಗಳಿಗೆ ಮುತ್ತಿಗೆ ಹಾಕುತ್ತಾನೆ.

ರಾವಣನ ರಣತಂತ್ರ

ದ್ವಾರಾಂ ನಿರೋಧಸಮಯೇ ಸ ದಿದೇಶ ಪುತ್ರಂ
ವಾರಾಂಪತೇರ್ದಿಶಿ ಸುರೇಶ್ವರಶತ್ರುಮುಗ್ರಮ್ ।
ಪ್ರಾಚ್ಯಾಂ ಪ್ರಹಸ್ತಮದಿಶದ್ ದಿಶಿ ವಜ್ರದಂಷ್ಟ್ರಂ
ಪ್ರೇತಾಧಿಪಸ್ಯ ಶಶಿನಃ ಸ್ವಯಮೇವ ಚಾಗಾತ್ ॥ ೧೮ ॥

ಪದಚ್ಛೇದ : ದ್ವಾರಾಂ ನಿರೋಧಸಮಯೇ ಸ ದಿದೇಶ ಪುತ್ರಂ ವಾರಾಂಪತೇಃ ದಿಶಿ ಸುರೇಶ್ವರಶತ್ರುಮ್ ಉಗ್ರಮ್ । ಪ್ರಾಚ್ಯಾಂ ಪ್ರಹಸ್ತಮ್ ಅದಿಶತ್ ದಿಶಿ ವಜ್ರದಂಷ್ಟ್ರಂ ಪ್ರೇತಾಧಿಪಸ್ಯ ಶಶಿನಃ ಸ್ವಯಮ್ ಏವ ಚ ಆಗಾತ್॥

**ಅರ್ಥ** :- **ಸಃ** ಆ ರಾವಣನು **ದ್ವಾರಾಂ** ದ್ವಾರಗಳ **ನಿರೋಧಸಮಯೇ** ಪ್ರತಿ ಬಂಧಿಸುವ ಸಮಯದಲ್ಲಿ **ಉಗ್ರಂ** ಭಯಂಕರನಾದ **ಸುರೇಶ್ವರಶತ್ರುಂ** ದೇವತೆಗಳಿಗೆ ಒಡೆಯನಾದ ಇಂದ್ರನ ಶತ್ರುವಾದ **ಪುತ್ರಂ** ಇಂದ್ರಜಿತ್ ಎಂಬ ಪುತ್ರನನ್ನು **ವಾರಾಂಪತೇಃ** ಜಲಕ್ಕೆ ಅಧಿಪನಾದ ವರುಣನ **ದಿಶಿ** ದಿಕ್ಕಿನಲ್ಲಿ **ದಿದೇಶ** ಕಳುಹಿಸಿದನು. **ಪ್ರಹಸ್ತಂ** ಪ್ರಹಸ್ತನೆಂಬುವವನನ್ನ **ಪ್ರಾಚ್ಯಾಂ** ಪೂರ್ವದಿಕ್ಕಿನಲ್ಲಿ **ಅದಿಶತ್** ಕಳುಹಿಸಿದನು. **ವಜ್ರದಂಷ್ಟ್ರಂ ಚ** ವಜ್ರದಂಷ್ಟ್ರನ ನ್ನಾದರೋ **ಪ್ರೇತಾಧಿಪಸ್ಯ** ಯಮನ **ದಿಶಿ** ದಕ್ಷಿಣದಿಕ್ಕಿನಲ್ಲಿ **ಅದಿಶತ್** ಕಳುಹಿಸಿದನು **ಶಶಿನಃ** ಚಂದ್ರನ **ದಿಶಿ** ಉತ್ತರದಿಕ್ಕಿಗೆ **ಸ್ವಯಮೇವ** ತಾನೇ **ಅಗಾತ್** ಹೋದನು.

**ತಾತ್ಪರ್ಯ** :- ರಾಮನು ನಾಲ್ಕು ದಿಕ್ಕುಗಳಿಂದಲೂ ಮುತ್ತಿಗೆ ಹಾಕಿರುವುದನ್ನು ತಡೆಯಲು ರಾವಣನು ತನ್ನವರನ್ನು ಕಳುಹಿಸುತ್ತಾನೆ. ಅವರಲ್ಲಿ ಪಶ್ಚಿಮಕ್ಕೆ ಇಂದ್ರಜಿತ್ ಪೂರ್ವಕ್ಕೆ ಪ್ರಹಸ್ತ ದಕ್ಷಿಣಕ್ಕೆ ವಜ್ರದಂಷ್ಟ್ರನನ್ನು ಕಳುಹಿಸಿದರೆ ಉತ್ತರಕ್ಕೆ ರಾವಣನೇ ಹೋಗುತ್ತಾನೆ.

ರಾಮನ ಪ್ರತಿತಂತ್ರ

ವಿಜ್ಞಾಯ ತತ್ ಸ ಭಗವಾನ್ ಹನುಮಂತಮೇವ
ದೇವೇಂದ್ರಶತ್ರುವಿಜಯಾಯ ದಿದೇಶ ಚಾಽಶು ।
ನೀಲಂ ಪ್ರಹಸ್ತನಿಧನಾಯ ಚ ವಜ್ರದಂಷ್ಟ್ರಂ
ಹಂತುಂ ಸುರೇಂದ್ರಸುತಸೂನುಮಥಾಽದಿದೇಶ ॥ ೧೯ ॥

ಪದಚ್ಛೇದ : ವಿಜ್ಞಾಯ ತತ್ ಸ ಭಗವಾನ್ ಹನುಮಂತಮ್ ಏವ ದೇವೇಂದ್ರಶತ್ರುವಿಜಯಾಯ ದಿದೇಶ ಚ ಆಶು । ನೀಲಂ ಪ್ರಹಸ್ತನಿಧನಾಯ ಚ ವಜ್ರದಂಷ್ಟ್ರಂ ಹಂತುಂ ಸುರೇಂದ್ರಸುತಸೂನುಮ್ ಅಥ ಆದಿದೇಶ ॥

**ಅರ್ಥ** :- **ಅಥ** ಅನಂತರ **ಭಗವಾನ್** ಷಡ್ಗುಣೈಶ್ವರ್ಯಸಂಪೂರ್ಣನಾದ ಶ್ರೀರಾಮನು **ತತ್** ಆ ರಾವಣನ ಕಾರ್ಯತಂತ್ರವನ್ನು **ವಿಜ್ಞಾಯ** ತಿಳಿದು **ದೇವೇಂದ್ರಶತ್ರುವಿಜಯಾಯ** ದೇವೇಂದ್ರನಿಗೆ ಶತ್ರುವಾದ ಇಂದ್ರಜಿತುವನ್ನು ಜಯಿಸುವುದಕ್ಕಾಗಿ **ಹನುಮಂತಮೇವ** ಹನುಮಂತನನ್ನೇ **ಆಶು** ಶೀಘ್ರವೇ **ದಿದೇಶ** ಕಳುಹಿಸಿದನು. **ಪ್ರಹಸ್ತನಿಧನಾಯ ಚ** ಪ್ರಹಸ್ತನ ಸಂಹಾರಕ್ಕಾದರೋ **ನೀಲಂ** ನೀಲನನ್ನು **ಚ** ಮತ್ತು **ವಜ್ರದಂಷ್ಟ್ರಂ** ವಜ್ರದಂಷ್ಟ್ರನನ್ನು **ಹಂತುಂ** ಸಂಹರಿಸಲು **ಸುರೇಂದ್ರಸುತಸೂನುಂ** ಇಂದ್ರನಮಗನು ವಾಲಿಯಪುತ್ರನೂ ಆದ ಅಂಗದನನ್ನು **ಆದಿದೇಶ** ಆಜ್ಞಾಪಿಸಿದನು.

**ತಾತ್ಪರ್ಯ** :- ರಾವಣನು ತನ್ನ ಪುತ್ರರನ್ನು ದ್ವಾರವನ್ನು ರಕ್ಷಿಸಲು ಕಳುಹಿಸಿದನೆಂದು ತಿಳಿದ ರಾಮನು ಇಂದ್ರಜಿತನನ್ನು ಜಯಿಸಲೆಂದು ಹನುಮಂತನ್ನೇ ಕಳುಹಿಸುತ್ತಾನೆ. ಪ್ರಹಸ್ತನನ್ನ ಸಂಹರಿಸಲೆಂದು ನೀಲನನ್ನು ವಜ್ರದಂಷ್ಟನ ಸಂಹಾರಕ್ಕೆಂದು ಅಂಗದನನ್ನು ಆಜ್ಞಾಪಿಸುತ್ತಾನೆ.

**ಮಧ್ಯೇ ಹರೀಶ್ವರಮಧಿಜ್ಯಧನುರ್ನಿಯುಜ್ಯ**
**ಯಸ್ಯಾಂ ಸ ರಾಕ್ಷಸಪತಿರ್ದಿಶಮೇವ ತಾಂ ಹಿ ।**
**ಉದ್ದಿಶ್ಯ ಸಂಸ್ಥಿತ ಉಪಾತ್ತಶರಃ ಸಖಡ್ಗೋ**
**ದೇದೀಪ್ಯಮಾನವಪುರುತ್ತಮಪೂರುಷೋಽಸೌ ॥ ೨೦ ॥**

ಪದಚ್ಛೇದ : ಮಧ್ಯೇ ಹರೀಶ್ವರಮ್ ಅಧಿಜ್ಯಧನುಃ ನಿಯುಜ್ಯ ಯಸ್ಯಾಂ ಸ ರಾಕ್ಷಸಪತಿಃ ದಿಶಮ್ ಏವ ತಾಂ ಹಿ । ಉದ್ದಿಶ್ಯ ಸಂಸ್ಥಿತಃ ಉಪಾತ್ತಶರಃ ಸಖಡ್ಗಃ ದೇದೀಪ್ಯಮಾನವಪುಃ ಉತ್ತಮಪೂರುಷಃ ಅಸೌ ॥

**ಅರ್ಥ** :- **ಅಧಿಜ್ಯಧನುಃ** ಹೆದೆ ಏರಿಸಿದ ಧನುಸ್ಸುಳ್ಳ **ಉಪಾತ್ತಶರಃ** ಬತ್ತಳಿಕೆಯಿಂದ ತೆಗೆಯಲ್ಪಟ್ಟ ಬಾಣವುಳ್ಳ **ಸಖಡ್ಗಃ** ಖಡ್ಗಯುಕ್ತನಾದ **ದೇದೀಪ್ಯಮಾನವಪುಃ** ಚೆನ್ನಾಗಿ ಪ್ರಕಾಶಿಸುವ ಶರೀರವುಳ್ಳ **ಉತ್ತಮಪೂರುಷಃ** ಉತ್ತಮ ಪುರುಷನಾದ **ಅಸೌ** ಶ್ರೀರಾಮನು **ಹರೀಶ್ವರಂ** ಕಪಿಶ್ರೇಷ್ಠಸುಗ್ರೀವನನ್ನು **ಮಧ್ಯೇ** ಪೂರ್ವ ದಕ್ಷಿಣದಿಕ್ಕುಗಳ ಮಧ್ಯದಲ್ಲಿ **ನಿಯೋಜ್ಯ** ತನ್ನ ಸೈನ್ಯಮಧ್ಯದಲ್ಲಿ ನಿಯಮಿಸಿ **ಯಸ್ಯಾಂ** ಯಾವ ದಿಕ್ಕಿನಲ್ಲಿ **ರಾಕ್ಷಸಾಧಿಪತಿಃ** ರಾವಣನು (ಇರುವನೋ) **ತಾಂ** ಆ ಉತ್ತರದಿಕ್ಕನ್ನು **ಉದ್ದಿಶ್ಯ** ಉದ್ದೇಶಿಸಿ **ಸಃ** ಶ್ರೀರಾಮನು **ಅತಿಷ್ಠತ್** ನಿಂತನು.

**ತಾತ್ಪರ್ಯ** :- ಇನ್ನು ಉಳಿದಿರುವುದು ರಾವಣನು ಇರುವ ಉತ್ತರ ದಿಕ್ಕು. ರಾವಣನನ್ನು ಎದುರಿಸಲು ಸ್ವತಃ ರಾಮನೇ ತನ್ನ ಬಿಲ್ಲುಬಾಣ ಖಡ್ಗಗಳಿಂದ ಕೂಡಿದವನಾಗಿ ಆ ದಿಕ್ಕನ್ನೇ ಅಭಿಮುಖೀಕರಿಸಿ ನಿಲ್ಲುತ್ತಾನೆ.

**ಹನುಮಂತನ ಪರಾಕ್ರಮ**

**ವಿದ್ರಾವಿತೋ ಹನುಮತೇಂದ್ರಜಿದಾಶು ಹಸ್ತಂ**
**ತಸ್ಯ ಪ್ರಪನ್ನ ಇವ ವೀರ್ಯಮಮುಷ್ಯ ಜಾನನ್ ।**
**ನೀಲೋ ವಿಭೀಷಣ ಉಭೌ ಶಿಲಯಾ ಚ ಶಕ್ತ್ಯಾ ಯ**
**ಸಂಚಕ್ರತುರ್ಯಮವಶಂ ಗಮಿತಂ ಪ್ರಹಸ್ತಮ್ ॥ ೨೧ ॥**

**ಪದಚ್ಛೇದ** : ವಿದ್ರಾವಿತಃ ಹನುಮತಾ ಇಂದ್ರಜಿತ್ ಆಶು ಹಸ್ತಂ ತಸ್ಯ ಪ್ರಪನ್ನಃ ಇವ ವೀರ್ಯಮ್ ಅಮುಷ್ಯ ಜಾನನ್ । ನೀಲಃ ವಿಭೀಷಣಃ ಉಭೌ ಶಿಲಯಾ ಚ ಶಕ್ತ್ಯಾ ಯ ಸಂಚಕ್ರತುಃ ಯಮವಶಂ ಗಮಿತಂ ಪ್ರಹಸ್ತಮ್ ॥

**ಅರ್ಥ** :- **ಅಮುಷ್ಯ** ಈ ಹನುಮಂತನ **ವೀರ್ಯಂ** ಪರಾಕ್ರಮವನ್ನು **ಜಾನನ್** ತಿಳಿದವನಾದ **ಇಂದ್ರಜಿತ್** ಇಂದ್ರಜಿತುವು **ತಸ್ಯ** ಹನುಮಂತನ **ಹಸ್ತಂ** ಕೈಯನ್ನು **ಪ್ರಪನ್ನಃ ಇವ** ಹೊಂದಿದವನಂತೆ **ಭೂತ್ವಾ** ಆಗಿ **ಹನುಮತಾ** ಹನುಮಂತನ ದೆಸೆಯಿಂದ **ಆಶು** ಕೂಡಲೇ **ವಿದ್ರಾವಿತಃ** ಪಲಾಯನ ಮಾಡಿಸಲ್ಪಟ್ಟನು. **ನೀಲಃ** ನೀಲನು **ಶಿಲಯಾ** ಶಿಲೆಯಿಂದಲೂ **ವಿಭೀಷಣಃ** ವಿಭೀಷಣನು **ಶಕ್ತ್ಯಾ** ಶಕ್ತಿ ಎಂಬ ಆಯುಧವಿಶೇಷದಿಂದಲೂ **ಉಭೌ ಚ** ಇಬ್ಬರೂ ಕೂಡ **ಪ್ರಹಸ್ತಂ** ಪ್ರಹಸ್ತನೆಂಬುವನನ್ನು **ಯಮವಶಂ** ಯಮನ ಅಧೀನವನ್ನು **ಗಮಿತಂ** ಹೊಂದಿದವನನ್ನಾಗಿ **ಸಂಚಕ್ರತುಃ** ಮಾಡಿದರು.

**ತಾತ್ಪರ್ಯ** :- ಹನುಮಂತನ ಪರಾಕ್ರಮವನ್ನು ಮೊದಲೇ ತಿಳಿದಿದ್ದ ಇಂದ್ರಜಿತ್‌ವು ಅವನ ಕೈಗೆ ಸಿಕ್ಕಿದಂತಾದ ಕೂಡಲೇ ಪಲಾಯನ ಮಾಡಿದ. ರಾವಣನ ಮಗನಾದ ಪ್ರಹಸ್ತನನ್ನು ನೀಲನು ಶಿಲೆಯಿಂದ ವಿಭೀಷಣನು ಶಕ್ತಿ ಎಂಬ ಆಯುಧದಿಂದ ಹೊಡೆದು ಇಬ್ಬರೂ ಕೂಡಿ ಸಂಹರಿಸುತ್ತಾರೆ.

**ವಜ್ರದಂಷ್ಟ್ರನ ಮರಣ**

**ನೀಲಸ್ಯ ನೈವ ವಶಮೇತಿ ಸ ಇತ್ಯಮೋಘ-**
**ಶಕ್ತ್ಯಾ ಯ ವಿಭೀಷಣ ಇಮಂ ಪ್ರಜಹಾರ ಸಾಕಮ್ ।**

ತಸ್ಮಿನ್ ಹತೇऽಂಗದ ಉಪೇತ್ಯ ಜಘಾನ ವಜ್ರ-
ದಂಷ್ಟ್ರಂ ನಿಪಾತ್ಯ ಭುವಿ ಶೀರ್ಷಮಮುಷ್ಯ ಮೃದ್ನನ್ ॥ ೨೨ ॥

ಪದಚ್ಛೇದ : ನೀಲಸ್ಯ ನ ಏವ ವಶಂ ಏತಿ ಸ ಇತಿ ಅಮೋಘಶಕ್ತ್ಯಾ ಯ ವಿಭೀಷಣಃ ಇಮಂ ಪ್ರಜಹಾರ ಸಾಕಮ್ । ತಸ್ಮಿನ್ ಹತೇ ಅಂಗದ ಉಪೇತ್ಯ ಜಘಾನ ವಜ್ರದಂಷ್ಟ್ರಂ ನಿಪಾತ್ಯ ಭುವಿ ಶೀರ್ಷಮ್ ಅಮುಷ್ಯ ಮೃದ್ನನ್ ॥

**ಅರ್ಥ** :- **ಸಃ** ಆ ಪ್ರಹಸ್ತನು **ನೀಲಸ್ಯ** ನೀಲನ **ವಶಂ** ಅಧೀನತೆಯನ್ನು **ನೈವ ಏತಿ** ಹೊಂದುವುದೇ ಇಲ್ಲ **ಇತಿ** ಎಂಬುದಾಗಿ **ವಿಭೀಷಣಃ** ವಿಭೀಷಣನು **ಸಾಕಂ** ನೀಲನಿಂದ ಕೂಡಿಕೊಂಡು **ಅಮೋಘಶಕ್ತ್ಯಾ** ಅಮೋಘವಾದ ಶಕ್ತಿ ಎಂಬ ಆಯುಧದಿಂದ **ಇಮಂ** ಈ ಪ್ರಹಸ್ತನನ್ನು **ಪ್ರಜಹಾರ** ಸಂಹರಿಸಿದನು. **ತಸ್ಮಿನ್** ಆ ಪ್ರಹಸ್ತನು **ಹತೇ(ಸತಿ)** ಹತನಾಗುತ್ತಿರಲು **ಅಂಗದಃ** ಅಂಗದನು **ವಜ್ರದಂಷ್ಟ್ರಂ** ವಜ್ರದಂಷ್ಟ್ರನನ್ನು **ಉಪೇತ್ಯ** ಹೊಂದಿದವನಾಗಿ **ಭುವಿ** ಭೂಮಿಯಲ್ಲಿ **ನಿಪಾತ್ಯ** ಬೀಳಿಸಿ **ಅಮುಷ್ಯ** ಈ ವಜ್ರದಂಷ್ಟ್ರನ **ಶೀರ್ಷಂ** ತಲೆಯನ್ನು **ಮೃದ್ನನ್ (ಸನ್)** ಮರ್ದಿಸುವವನಾಗಿ **ಜಘಾನ** ಸಂಹರಿಸಿದನು.

**ತಾತ್ಪರ್ಯ** :- ನೀಲನು ಪ್ರಹಸ್ತನನ್ನು ಸಂಹರಿಸಲಾರನೆಂದು ಬಗೆದ ವಿಭೀಷಣನು ತನ್ನ ಶಕ್ತ್ಯಾಯುಧದಿಂದ ನೀಲನೊಂದಿಗೆ ಅವನನ್ನು ಸಂಹರಿಸಿದ. ಇತ್ತ ಅಂಗದನು ಪ್ರಹಸ್ತನು ಮರಣ ಹೊಂದಿದ ನಂತರ ವಜ್ರದಂಷ್ಟ್ರನನ್ನು ಭೂಮಿಯಲ್ಲಿ ಬೀಳಿಸಿ ಅವನ ತಲೆಯನ್ನು ಚೆನ್ನಾಗಿ ಮರ್ದಿಸಿ ಸಂಹರಿಸುತ್ತಾನೆ.

### ಧೂಮ್ರಾಕ್ಷನನ್ನು ಕೊಂದ ಹನುಮ

ಸರ್ವೇಷು ತೇಷು ನಿಹತೇಷು ದಿದೇಶ ಧೂಮ್ರ-
ನೇತ್ರಂ ಸ ರಾಕ್ಷಸಪತಿಃ ಸ ಚ ಪಶ್ಚಿಮೇನ ।
ದ್ವಾರೇಣ ಮಾರುತಸುತಂ ಸಮುಪೇತ್ಯ ದಗ್ಧೋ
ಗುಪ್ತೋऽಪಿ ಶೂಲಿವಚನೇನ ದುರಂತಶಕ್ತಿಮ್ ॥ ೨೩ ॥

ಪದಚ್ಛೇದ : ಸರ್ವೇಷು ತೇಷು ನಿಹತೇಷು ದಿದೇಶ ಧೂಮ್ರನೇತ್ರಂ ಸಃ ರಾಕ್ಷಸಪತಿಃ ಸಃ ಚ ಪಶ್ಚಿಮೇನ । ದ್ವಾರೇಣ ಮಾರುತಸುತಂ ಸಮುಪೇತ್ಯ ದಗ್ಧಃ ಗುಪ್ತಃ ಅಪಿ ಶೂಲಿವಚನೇನ ದುರಂತಶಕ್ತಿಮ್ ॥

**ಅರ್ಥ** :- **ತೇಷು ಸರ್ವೇಷು** ವಜ್ರದಂಷ್ಟ್ರನೇ ಮೊದಲಾದವರಾಗಿ ಎಲ್ಲರೂ **ನಿಹತೇಷು (ಸತ್ಸು)** ಸಂಹರಿಸಲ್ಪಡುತ್ತಿರಲು **ರಾಕ್ಷಸಪತಿಃ** ರಾಕ್ಷಸಪತಿಯಾದ **ಸಃ** ಆ ರಾವಣನು **ಧೂಮ್ರನೇತ್ರಂ** ಧೂಮ್ರನೇತ್ರನೆಂಬ ರಾಕ್ಷಸನನ್ನು **ದಿದೇಶ** ಕಳುಹಿಸಿದನು. **ಸಚ** ಅವನಾದರೂ **ಪಶ್ಚಿಮೇನ ದ್ವಾರೇಣ** ಪಶ್ಚಿಮ ದಿಕ್ಕಿನ ದ್ವಾರದಿಂದ **ದುರಂತಶಕ್ತಿಂ** ನಾಶರಹಿತವಾದ ಸಾಮರ್ಥ್ಯವುಳ್ಳ **ಮಾರುತಸುತಂ** ವಾಯುಪುತ್ರನಾದ ಹನುಮಂತನನ್ನು **ಸಮುಪೇತ್ಯ** ಹೊಂದಿದವನಾಗಿ **ಶೂಲಿವಚನೇನ** ರುದ್ರನ ವರದಿಂದ **ಗುಪ್ತೋಽಪಿ** ರಕ್ಷಿಸಲ್ಪಟ್ಟವನಾಗಿದ್ದರೂ **ದಗ್ಧಃ** ದಹಿಸಲ್ಪಟ್ಟನು.

**ತಾತ್ಪರ್ಯ** :- ಹೀಗೆ ಒಬ್ಬೊಬ್ಬರಾಗಿ ಹತರಾಗಲು ರಾವಣನ ಆದೇಶದಂತೆ ಧೂಮ್ರನೇತ್ರನೆಂಬ ರಾಕ್ಷಸನು ಲಂಕೆಯ ಪಶ್ಚಿಮದ್ವಾರದಿಂದ ಯುದ್ಧಕ್ಕೆ ಆಗಮಿಸುತ್ತಾನೆ. ರುದ್ರನ ವರಬಲದಿಂದ ರಕ್ಷಿತನಾದರೂ ಅಪಾರಶಕ್ತಿಶಾಲಿಯಾದ ಹನುಮಂತನಿಂದ ವಧ್ಯನಾಗುತ್ತಾನೆ.

### ಹನುಮಂತನಿಂದ ಅಕಂಪನನ ಮರಣ

**ಅಕಂಪನೋಽಪಿ ರಾಕ್ಷಸೋ ನಿಶಾಚರೇಶಚೋದಿತಃ ।**
**ಉಮಾಪತೇರ್ವರೋದ್ಧತಃ ಕ್ಷಣಾದ್ಧತೋ ಹನೂಮತಾ ॥ ೨೪ ॥**

**ಪದಚ್ಛೇದ : ಅಕಂಪನಃ ಅಪಿ ರಾಕ್ಷಸಃ ನಿಶಾಚರೇಶಚೋದಿತಃ । ಉಮಾಪತೇಃ ವರೋದ್ಧತಃ ಕ್ಷಣಾತ್ ಹತಃ ಹನೂಮತಾ ॥**

**ಅರ್ಥ** :- **ಉಮಾಪತೇಃ** ಉಮೆಯ ಪತಿಯಾದ ರುದ್ರದೇವನ **ವರೋದ್ಧತಃ** ವರದಿಂದ ಉನ್ಮತ್ತನಾದ **ನಿಶಾಚರೇಶಚೋದಿತಃ** ರಾತ್ರಿಯಲ್ಲಿ ಸಂಚರಿಸುವ ರಾಕ್ಷಸರ ಅಧಿಪತಿಯಾದ ರಾವಣನಿಂದ ಪ್ರೇರಿತನಾದ **ಅಕಂಪನಃ** ಅಕಂಪನೆಂಬ **ರಾಕ್ಷಸಃ ಅಪಿ** ರಾಕ್ಷಸನೂ ಕೂಡ **ಹನುಮತಾ** ಹನುಮಂತನಿಂದ **ಕ್ಷಣಾತ್** ತಕ್ಷಣವೇ **ಹತಃ** ಸಂಹೃತನಾದನು.

**ತಾತ್ಪರ್ಯ** :- ರಾವಣನು ಅಕಂಪನನ್ನು ಕಳುಹಿಸುತ್ತಾನೆ. ರುದ್ರದೇವರ ವರದಿಂದ ಉನ್ಮತ್ತನಾದ ಇವನೂ ಕೂಡ ಹನುಮಂತನಿಂದ ಬೇಗನೇ ಹತನಾಗುತ್ತಾನೆ.

ಕಪಿಗಳಿಂದ ಲಂಕಾದಹನ

**ಅಥಾಸ್ತ್ರಸಂಪ್ರದೀಪಿತೈಃ ಸಮಸ್ತಶೋ ಮಹೋಲ್ಮುಕೈಃ ।**
**ರಘುಪ್ರವೀರಚೋದಿತಾಃ ಪುರಂ ನಿಶಿ ಸ್ವದಾಹಯನ್ ॥ ೨೫ ॥**

ಪದಚ್ಛೇದ : ಅಥ ಅಸ್ತ್ರಸಂಪ್ರದೀಪಿತೈಃ ಸಮಸ್ತಶಃ ಮಹೋಲ್ಮುಕೈಃ । ರಘುಪ್ರವೀರಚೋದಿತಾಃ ಪುರಂ ನಿಶಿ ಸ್ವದಾಹಯನ್ ॥

**ಅರ್ಥ** :- **ಅಥ** ಅನಂತರ **ಅಸ್ತ್ರಸಂಪ್ರದೀಪಿತೈಃ** ಅಗ್ನ್ಯಸ್ತ್ರದಿಂದ ಪ್ರಜ್ವಲಿಸುತ್ತಿರುವ **ಮಹೋಲ್ಮುಕೈಃ** ದೊಡ್ಡದಾದ ಪಂಜುಗಳಿಂದ **ಸಮಸ್ತಶಃ** ಎಲ್ಲ ಕಪಿಗಳು **ರಘುಪ್ರವೀರಚೋದಿತಾಃ** (ಸಂತಃ) ಶ್ರೀರಾಮನಿಂದ ಪ್ರೇರಿಸಲ್ಪಟ್ಟವರಾಗಿ **ನಿಶಿ** ರಾತ್ರಿಯಲ್ಲಿ **ಪುರಂ** ಲಂಕಾಪುರವನ್ನು **ಸ್ವದಾಹಯನ್** ಚೆನ್ನಾಗಿ ಸುಟ್ಟರು.

**ತಾತ್ಪರ್ಯ** :- ಶ್ರೀರಾಮನಿಂದ ಪ್ರೇರಿತರಾದ ಕಪಿಗಳೆಲ್ಲವೂ ಅಗ್ನ್ಯಸ್ತ್ರದಿಂದ ಚೆನ್ನಾಗಿ ಉರಿಯುತ್ತಿರುವ ಪಂಜುಗಳಿಂದ ಲಂಕಾಪುರವನ್ನು ದಹನಮಾಡುತ್ತಾರೆ.

**ತತಸ್ತೌ ನಿಕುಂಭೋಽಥ ಕುಂಭಶ್ಚ ಕೋಪಾತ್**
**ಪ್ರದಿಷ್ಟೌ ದಶಾಸ್ಯೇನ ಕುಂಭಶ್ರುತೇರ್ಹಿ ।**
**ಸುತೌ ಸುಪ್ರಹೃಷ್ಟೌ ರಣಾಯಾಭಿಯಾತೌ**
**ಕಪೀಂಸ್ತಾನ್ ಬಹಿಃ ಸರ್ವಶೋ ಯಾಪಯಿತ್ವಾ ॥ ೨೬ ॥**

ಪದಚ್ಛೇದ : ತತಃ ತೌ ನಿಕುಂಭಃ ಅಥ ಕುಂಭಃ ಚ ಕೋಪಾತ್ ಪ್ರದಿಷ್ಟೌ ದಶಾಸ್ಯೇನ ಕುಂಭಶ್ರುತೇಃ ಹಿ । ಸುತೌ ಸುಪ್ರಹೃಷ್ಟೌ ರಣಾಯ ಅಭಿಯಾತೌ ಕಪೀನ್ ತಾನ್ ಬಹಿಃ ಸರ್ವಶಃ ಯಾಪಯಿತ್ವಾ ॥

**ಅರ್ಥ** :- **ತತಃ** ಅನಂತರ **ಕೋಪಾತ್** ಕೋಪದಿಂದ **ದಶಾಸ್ಯೇನ** ರಾವಣನಿಂದ **ಪ್ರದಿಷ್ಟೌ** ಆಜ್ಞಾಪಿತರಾದ **ಕುಂಭಶ್ರುತೇಃ** ಕುಂಭಕರ್ಣನ **ಸುಪ್ರಹೃಷ್ಟೌ** ಯುದ್ಧವು ಬಂದಿತೆಂದು ಹರ್ಷಗೊಂಡ **ಸುತೌ** ಪುತ್ರರಾದ **ನಿಕುಂಭಃ** ನಿಕುಂಭನೆಂಬವನು **ಅಥ** ಹಾಗೆಯೇ **ಕುಂಭಶ್ಚ** ಕುಂಭನೆಂಬುವನೂ ಕೂಡ **ಸರ್ವಶಃ** ಎಲ್ಲಾ **ತಾನ್** ಆ **ಕಪೀನ್** ಕಪಿಗಳನ್ನಾದರೋ **ಬಹಿಃ** ಲಂಕಾಪುರದ ಪ್ರಾಕಾರದ ದೆಸೆಯಿಂದ ಹೊರಗೆ **ಯಾಪಯಿತ್ವಾ** ಕಳುಹಿಸಿ **ತೌ** ಆ ಇಬ್ಬರು **ರಣಾಯ** ಯುದ್ಧಕ್ಕಾಗಿ **ಅಭಿಯಾತೌ** ಆಗಮಿಸಿದರು.

**ತಾತ್ಪರ್ಯ** : ಇದರಿಂದ ಕೋಪತಪ್ತನಾದ ರಾವಣನು 'ನಿಕುಂಭ ಕುಂಭ' ರೆಂಬ ಕುಂಭಕರ್ಣನ ಇಬ್ಬರು ಪುತ್ರರನ್ನು ಯುದ್ಧಕ್ಕೆ ಕಳುಹಿಸಿದ. ಯುದ್ಧದಲ್ಲಿಯೇ ಸಂತೋಷವುಳ್ಳ ಅವರಿಬ್ಬರು ಲಂಕೆಯ ಒಳಗೆ ಪ್ರವೇಶಿಸಿದ ಕಪಿಗಳನ್ನೆಲ್ಲ ಹೊರಗೆ ಅಟ್ಟುತ್ತಾ ಯುದ್ಧವನ್ನು ಮಾಡಲು ಬರುತ್ತಾರೆ.

**ಕುಂಭನನ್ನು ಕೊಂದ ಸುಗ್ರೀವ**

**ಸ ಕುಂಭೋ ವಿಧಾತುಃ ಸುತಂ ತಾರನೀಲೌ**
**ನಳಂ ಚಾಶ್ವಿಪುತ್ರೌ ಜಿಗಾಯಾಂಗದಂ ಚ ।**
**ಸುಯುದ್ಧಂ ಚ ಕೃತ್ವಾ ದಿನೇಶಾತ್ಮಜೇನ**
**ಪ್ರಣೀತೋ ಯಮಸ್ಯಾಽಶು ಲೋಕಂ ಸುಪಾಪಃ ॥ ೨೭ ॥**

**ಪದಚ್ಛೇದ** : ಸಃ ಕುಂಭಃ ವಿಧಾತುಃ ಸುತಂ ತಾರನೀಲೌ ನಳಂ ಚ ಅಶ್ವಿಪುತ್ರೌ ಜಿಗಾಯ ಅಂಗದಂ ಚ । ಸುಯುದ್ಧಂ ಚ ಕೃತ್ವಾ ದಿನೇಶಾತ್ಮಜೇನ ಪ್ರಣೀತಃ ಯಮಸ್ಯ ಆಶು ಲೋಕಂ ಸುಪಾಪಃ ॥

**ಅರ್ಥ** :- **ಸುಪಾಪಃ** ಪಾಪಭೂಯಿಷ್ಠನಾದ **ಸಃ ಕುಂಭಃ** ಆ ಕುಂಭನಾದರೋ **ವಿಧಾತುಃ** ಬ್ರಹ್ಮದೇವನ **ಸುತಂ** ಪುತ್ರನಾದ ಜಾಂಬವಂತನನ್ನು **ತಾರನೀಲೌ** ತಾರ ಮತ್ತು ನೀಲರನ್ನು **ನಲಂ ಚ** ನಲನನ್ನೂ **ಅಶ್ವಿಪುತ್ರೌ** ಅಶ್ವಿನೀದೇವತೆಗಳ ಸುತರಾದ ಮೈಂದ ಮತ್ತು ವಿವಿದರನ್ನು **ಅಂಗದಂ ಚ** ಅಂಗದನನ್ನೂ ಕೂಡ **ಜಿಗಾಯ** ಜಯಿಸಿದನು. **ದಿನೇಶಾತ್ಮಜೇನ** ಸೂರ್ಯಸುತನಾದ ಸುಗ್ರೀವನಿಂದ **ಸುಯುದ್ಧಂ ಚ** ಚೆನ್ನಾಗಿ ಯುದ್ಧವನ್ನೂ ಕೂಡ **ಕೃತ್ವಾ** ಮಾಡಿ (**ತೇನ** ಅವನಿಂದ) **ಯಮಸ್ಯ** ಯಮನ **ಲೋಕಂ** ಲೋಕವನ್ನು **ಆಶು** ಶೀಘ್ರವೇ **ಪ್ರಣೀತಃ** ಕಳುಹಿಸಲ್ಪಟ್ಟನು.

**ತಾತ್ಪರ್ಯ** :- ಕುಂಭನು ಬ್ರಹ್ಮಪುತ್ರನಾದ ಜಾಂಬವಂತನನ್ನು ತಾರ ನೀಲರನ್ನು ಅಶ್ವಿನೀದೇವತೆಗಳ ಪುತ್ರರಾದ ಮೈಂದವಿವಿದರನ್ನೂ ಹಾಗು ಅಂಗದ ಇವರೆಲ್ಲರನ್ನೂ ಯುದ್ಧದಲ್ಲಿ ಸೋಲಿಸುತ್ತಾನೆ. ಆದರೆ ಹೀಗೆ ಬಹುಕಾಲ ಯುದ್ಧ ಮಾಡಿಯೂ ಕೂಡ ಕುಂಭನು ಕೊನೆಯಲ್ಲಿ ಸುಗ್ರೀವನಿಂದ ಹತನಾಗುತ್ತಾನೆ.

**ವಿಜೃಂಭಿಸಿದ ನಿಕುಂಭ**

ತತೋ ನಿಕುಂಭೋಽದ್ರಿವರಪ್ರದಾರಣಂ
ಮಹಾಂತಮುಗ್ರಂ ಪರಿಘಂ ಪ್ರಗೃಹ್ಯ ।

ಸಸಾರ ಸೂರ್ಯಾತ್ಮಜಮಾಶು ಭೀತಃ
ಸ ಪುಪ್ಲುವೇ ಪಶ್ಚಿಮತೋ ಧನುಃಶತಮ್ ॥ ೨೮ ॥

ಪದಚ್ಛೇದ : ತತಃ ನಿಕುಂಭಃ ಅದ್ರಿವರಪ್ರದಾರಣಂ ಮಹಾಂತಮ್ ಉಗ್ರಂ ಪರಿಘಂ ಪ್ರಗೃಹ್ಯ । ಸಸಾರ ಸೂರ್ಯಾತ್ಮಜಮ್ ಆಶು ಭೀತಃ ಸ ಪುಪ್ಲುವೇ ಪಶ್ಚಿಮತಃ ಧನುಃಶತಮ್ ॥

**ಅರ್ಥ** :- **ತತಃ** ಅನಂತರ **ನಿಕುಂಭಃ** ನಿಕುಂಭನು **ಅದ್ರಿವರಪ್ರದಾರಣಂ** ಶ್ರೇಷ್ಠವಾದ ಪರ್ವತಗಳನ್ನು ಸೀಳುವಂತಹ **ಮಹಾಂತಂ** ದೊಡ್ಡದಾದ **ಉಗ್ರಂ** ಭಯಂಕರವಾದ **ಪರಿಘಂ** ಪರಿಘವೆಂಬ ಆಯುಧವಿಶೇಷವನ್ನು **ಪ್ರಗೃಹ್ಯ** ಹಿಡಿದು **ಸೂರ್ಯಾತ್ಮಜಂ** ಸೂರ್ಯನಮಗನಾದ ಸುಗ್ರೀವನನ್ನು **ಸಸಾರ** ಹೊಂದಿದನು. **ಸಃ** ಆ ಸುಗ್ರೀವನು **ಭೀತಃ(ಸನ್)** ಭಯಗೊಂಡವನಾಗಿ **ಆಶು** ಕೂಡಲೇ **ಪಶ್ಚಿಮತಃ** ಪೃಷ್ಠಭಾಗದಲ್ಲಿ **ಧನುಃಶತಮ್** ನೂರು ಧನುಸ್ಸಿನ ಅಳತೆ ಪರ್ಯಂತ **ಪುಪ್ಲುವೇ** ಹಾರಿದನು.

**ತಾತ್ಪರ್ಯ** :- ಸುಗ್ರೀವನೊಂದಿಗೆ ಯುದ್ಧ ಮಾಡಲು ನಿಕುಂಭನು ಬೃಹತ್ತಾದ ಬೆಟ್ಟಗಳನ್ನೇ ನಾಶಪಡಿಸುವ 'ಪರಿಘ'ವೆಂಬ ಆಯುಧದೊಂದಿಗೆ ಬಂದ. ಇದನ್ನು ನೋಡಿ ಹೆದರಿದ ಸುಗ್ರೀವನು ನೂರು ಬಿಲ್ಲುಗಳ ಅಳತೆಯಷ್ಟು ಹಿಂದಕ್ಕೆ ಹಾರಿದ.

ತಂ ಭ್ರಾಮಯತ್ಯಾಶು ಭುಜೇನ ವೀರೇ
ಭ್ರಾಂತಾ ದಿಶೋ ದ್ಯೌಶ್ಚ ಸಚಂದ್ರಸೂರ್ಯಾಃ ।
ಸುರಾಶ್ಚ ತಸ್ಯೋರುಬಲಂ ವರಂ ಚ
ಶರ್ವೋದ್ಭವಂ ವೀಕ್ಷ್ಯ ವಿಷೇದುರೀಷತ್ ॥ ೨೯ ॥

ಪದಚ್ಛೇದ : ತಂ ಭ್ರಾಮಯತಿ ಆಶು ಭುಜೇನ ವೀರೇ ಭ್ರಾಂತಾಃ ದಿಶಃ ದ್ಯೌಃ ಚ ಸಚಂದ್ರಸೂರ್ಯಾಃ । ಸುರಾಃ ಚ ತಸ್ಯ ಉರುಬಲಂ ವರಂ ಚ ಶರ್ವೋದ್ಭವಂ ವೀಕ್ಷ್ಯ ವಿಷೇದುಃ ಈಷತ್ ॥

**ಅರ್ಥ** :- **ವೀರೇ** ವೀರನಾದ ನಿಕುಂಭನು **ಭುಜೇನ** ಭುಜದಿಂದ **ತಂ** ಆ ಪರಿಘವೆಂಬ ಆಯುಧವನ್ನು **ಆಶು** ಶೀಘ್ರವಾಗಿ **ಭ್ರಾಮಯತಿ(ಸತಿ)** ತಿರುಗಿಸುತ್ತಿರಲು **ದಿಶಃ** ದಿಕ್ಕುಗಳಿಗೆ ಅಭಿಮಾನಿತೇವತೆಗಳು **ಸಚಂದ್ರಸೂರ್ಯಾಃ**

ಚಂದ್ರಸೂರ್ಯರಿಂದ ಸಹಿತರಾದ **ದ್ಯೌಶ್ಚ** ಅಂತರಿಕ್ಷ ಅಭಿಮಾನಿದೇವತೆಗಳೂ ಕೂಡ **ಭ್ರಾಂತಾಃ** ಆತಂಕಿತರಾದರು. (ಅತ್ತಿತ್ತ ಓಡಾಡಿದರು.) **ಸುರಾಶ್ಚ** ಆ ದೇವತೆಗಳಾದರೂ **ಶರ್ವೋದ್ಭವಂ** ರುದ್ರದೇವರಿಂದ ಉದ್ಭವಿಸಿದ **ತಸ್ಯ** ಆ ನಿಕುಂಭನ **ಉರುಬಲಂ** ಶ್ರೇಷ್ಠವಾದ ಬಲವನ್ನು **ವರಂ ಚ** ವರವನ್ನೂ ಕೂಡ **ವೀಕ್ಷ್ಯ** ನೋಡಿ **ಈಷತ್** ಸ್ವಲ್ಪ **ವಿಷೇದುಃ** ದುಃಖಿತರಾದರು.

**ತಾತ್ಪರ್ಯ :-** ನಿಕುಂಭನಿಗೆ ರುದ್ರದೇವರ ವರವಿತ್ತು. ಇದರಿಂದ ಅತಿಬಲ ಶಾಲಿಯಾದ ಇವನು ಪರಿಘವೆಂಬ ಆಯುಧವನನು ವೇಗವಾಗಿ ತಿರುಗಿ ಸುತ್ತಿರಲು ಇದನ್ನು ನೋಡಿದ ದಿಗ್‌ದೇವತೆಗಳು ಚಂದ್ರಸೂರ್ಯ ಅಂತರಿಕ್ಷ ಅಭಿಮಾನಿ ದೇವತೆಗಳು ಎಲ್ಲರೂ ಭಯಭ್ರಾಂತರಾದರು.

### ಹನುಮ ನಿಕುಂಭರ ಘೋರ ಕಾಳಗ

**ಅನನ್ಯಸಾಧ್ಯಂ ತಮಥೋ ನಿರೀಕ್ಷ್ಯ**
**ಸಮುತ್ಪಪಾತಾಽಶು ಪುರೋಽಸ್ಯ ಮಾರುತಿಃ ।**
**ಪ್ರಕಾಶ್ಯ ಬಾಹ್ವಂತರಮಾಹ ಚೈನಂ**
**ಕಿಮೇಭಿರತ್ರ ಪ್ರಹರಾಽಯುಧಂ ತೇ ॥ ೩೦ ॥**

**ಪದಚ್ಛೇದ :** ಅನನ್ಯಸಾಧ್ಯಂ ತಮ್ ಅಥೋ ನಿರೀಕ್ಷ್ಯ ಸಮುತ್ಪಪಾತ ಆಶು ಪುರಃ ಅಸ್ಯ ಮಾರುತಿಃ । ಪ್ರಕಾಶ್ಯ ಬಾಹ್ವಂತರಮ್ ಆಹ ಚ ಏನಂ ಕಿಮ್ ಏಭಿಃ ಅತ್ರ ಪ್ರಹರ ಆಯುಧಂ ತೇ ॥

**ಅರ್ಥ :- ಅಥೋ** ಅನಂತರ **ಅನನ್ಯಸಾಧ್ಯಂ** ಬೇರೆಯವರಿಂದ ವಧಿಸಲು ಅಶಕ್ಯನಾದ **ತಂ** ಆ ನಿಕುಂಭನನ್ನು **ಮಾರುತಿಃ** ಹನುಮಂತನು **ನಿರೀಕ್ಷ್ಯ** ನೋಡಿ **ಅಸ್ಯ** ಈ ನಿಕುಂಭನ **ಪುರಃ** ಮುಂಭಾಗದಲ್ಲಿ **ಆಶು** ಬೇಗನೆ **ಸಮುತ್ಪಪಾತ** ಹಾರಿಬಂದನು. **ಬಾಹ್ವಂತರಂ** ಬಾಹುಗಳ ಮಧ್ಯಭಾಗವಾದ ಎದೆಯನ್ನು **ಪ್ರಕಾಶ್ಯ** ಪ್ರದರ್ಶಿಸಿ **ಏನಂ** ಈ ನಿಕುಂಭನನ್ನು **ತೇ ಚ** ನಿನಗಾದರೋ **ಏಭಿಃ** ಈ ಕಪಿಗಳಿಂದ **ಕಿಂ** ಏನು ಪ್ರಯೋಜನ? **ಅತ್ರ** ಈ ನನ್ನ ಎದೆಯಲ್ಲಿ (**ತೇ** ನಿನ್ನ) **ಆಯುಧಂ** ಆಯುಧವನ್ನು **ಪ್ರಹರ** ಪ್ರಹಾರಮಾಡು ಎಂದು **ಆಹ** ಹೇಳಿದನು.

**ತಾತ್ಪರ್ಯ :-** ನಿಕುಂಭನು ಬೇರೆಯಾರಿಂದಲೂ ಸಂಹರಿಸಲು ಅಶಕ್ಯ ನೆಂದರಿತ ಹನುಮಂತನು ತಾನೇ ಅವನಿದ್ದಲ್ಲಿಗೆ ಬಂದು ಎಲೈ 'ನಿಕುಂಭನೇ ಈ

ಕಪಿಗಳಿರಲಿ ನನ್ನ ಎದೆಗೆ ನಿನ್ನ ಆಯುಧವನ್ನು ಪ್ರಹರಿಸು ನೋಡೋಣ ಎಂದು ತನ್ನ ಎದೆಯನ್ನು ಪ್ರದರ್ಶಿಸಿ ಹೇಳುತ್ತಾನೆ.

**ಇತೀರಿತಸ್ತೇನ ಸ ರಾಕ್ಷಸೋತ್ತಮೋ**
**ವರಾದಮೋಘಂ ಪ್ರಜಹಾರ ವಕ್ಷಸಿ ।**
**ವಿಚೂರ್ಣಿತೋऽಸೌ ತದುರಸ್ಯಭೇದ್ಯೇ**
**ಯಥೈವ ವಜ್ರೋ ವಿಪತೌ ವೃಥಾऽಭವತ್ ॥ ೩೧ ॥**

**ಪದಚ್ಛೇದ : ಇತಿ ಈರಿತಃ ತೇನ ಸಃ ರಾಕ್ಷಸೋತ್ತಮಃ ವರಾತ್ ಅಮೋಘಂ ಪ್ರಜಹಾರ ವಕ್ಷಸಿ । ವಿಚೂರ್ಣಿತಃ ಅಸೌ ತದುರಸಿ ಅಭೇದ್ಯೇ ಯಥಾ ಏವ ವಜ್ರಃ ವಿಪತೌ ವೃಥಾ ಅಭವತ್ ॥**

**ಅರ್ಥ** :- ಇತಿ ಈ ಪ್ರಕಾರವಾಗಿ ತೇನ ಆ ಹನುಮಂತನಿಂದ **ಈರಿತಃ** ಹೇಳಿಸಿಕೊಳ್ಳಲ್ಪಟ್ಟ **ರಾಕ್ಷಸೋತ್ತಮಃ** ರಾಕ್ಷಸೋತ್ತಮನಾದ ಸಃ ಆ ನಿಕುಂಭನು **ವರಾತ್** ರುದ್ರನ ವರದದೆಸೆಯಿಂದ **ಅಮೋಘಂ** ವ್ಯರ್ಥವಲ್ಲದ ಪರಿಘವೆಂಬ ಆಯುಧವನ್ನು **ವಕ್ಷಸಿ** ಹನುಮಂತನ ವಕ್ಷೋಭಾಗದಲ್ಲಿ **ಪ್ರಜಹಾರ** ಪ್ರಹಾರ ಮಾಡಿದನು. **ಅಸೌ** ಈ ಪರಿಘವು **ಅಭೇದ್ಯೇ** ಭೇದಿಸಲಸಾಧ್ಯವಾದ **ತದುರಸಿ** ಆ ಹನುಮಂತನ ಹೃದಯಭಾಗದಲ್ಲಿ **ಯಥಾ** ಹೇಗೆ **ವಜ್ರಃ** ವಜ್ರಾಯುಧವು **ವಿಪತೌ** ಗರುಡನಲ್ಲಿ **ವೃಥಾ** ವ್ಯರ್ಥವಾದದ್ದಾಗಿ **ಅಭವತ್** ಉಂಟಾಯಿತೋ **(ತಥಾ)** ಏವ ಹಾಗೆಯೇ **ವಿಚೂರ್ಣಿತಃ** ವಿಫಲವಾಯಿತು (ಪುಡಿಯಾಯಿತು.)

**ತಾತ್ಪರ್ಯ** :- ಹನುಮಂತನ ಈ ಸವಾಲನ್ನು ಸ್ವೀಕರಿಸಿದ ನಿಕುಂಭನು ಅವನ ಎದೆಗೆ ಪರಿಘವನ್ನು ಎಸೆದ. ಆದರೆ ಇಂದ್ರನು ಗರುಡನ ಮೇಲೆ ವಜ್ರಾಯು ಧವನ್ನು ಪ್ರಯೋಗಿಸಿದಾಗ ಅದು ವ್ಯರ್ಥವಾದಂತೆ ಈ ಪರಿಘವು ಚೂರು ಚೂರಾಯಿತು.

**ವಿಚೂರ್ಣಿತೇ ನಿಜಾಯುಧೇ**
**ನಿಕುಂಭ ಏತ್ಯ ಮಾರುತಿಮ್ ।**
**ಪ್ರಗೃಹ್ಯ ಚಾತ್ಮನೋऽಂಸಕೇ**
**ನಿಧಾಯ ಜಗ್ಮಿವಾನ್ ದ್ರುತಮ್ ॥ ೩೨ ॥**

**ಪದಚ್ಛೇದ** :– **ವಿಚೂರ್ಣಿತೇ ನಿಜಾಯುಧೇ ನಿಕುಂಭಃ ಏತ್ಯ ಮಾರುತಿಮ್ । ಪ್ರಗೃಹ್ಯ ಚ ಆತ್ಮನಃ ಅಂಸಕೇ ನಿಧಾಯ ಜಗ್ಮಿವಾನ್ ದ್ರುತಮ್ ॥**

**ಅರ್ಥ** :– **ನಿಜಾಯುಧೇ** ತನ್ನ ಪರಿಘಾಯುಧವು **ವಿಚೂರ್ಣಿತೇ (ಸತಿ)** ಪುಡಿಯಾಗುತ್ತಿರಲು **ನಿಕುಂಭಃ** ನಿಕುಂಭನು **ಮಾರುತಿಂ** ಹನುಮಂತನನ್ನು **ಏತ್ಯ** ಸಮೀಪಿಸಿ **ಪ್ರಗೃಹ್ಯ** ಹಿಡಿದುಕೊಂಡು **ಚ** ಮತ್ತು **ಆತ್ಮನಃ** ತನ್ನ **ಅಂಸಕೇ** ಭುಜಗಳಲ್ಲಿ **ನಿಧಾಯ** ಸ್ಥಾಪಿಸಿ **ದ್ರುತಂ** ವೇಗವಾಗಿ **ಜಗ್ಮಿವಾನ್** ಹೊರಟನು.

**ತಾತ್ಪರ್ಯ** :– ಹೀಗೆ ಪರಿಘವು ವ್ಯರ್ಥವಾಗಲು ಆಗ ನಿಕುಂಭನು ಹನುಮಂತನನ್ನು ತನ್ನ ಹೆಗಲ ಮೇಲೆ ಹೊತ್ತುಕೊಂಡು ಲಂಕೆಗೆ ವೇಗವಾಗಿ ಹೊರಟ.

### ಯುದ್ಧಾಗ್ನಿಗೆ ಪಶುವಾದ ನಿಕುಂಭ

**ಪ್ರಗೃಹ್ಯ ಕಂಠಮಸ್ಯ ಸ ಪ್ರಧಾನಮಾರುತಾತ್ಮಜಃ ।**
**ಸ್ವಮಾಶು ಮೋಚಯಂಸ್ತತೋ ನ್ಯಪಾತಯದ್ ಧರಾತಲೇ ॥ ೩೩ ॥**

**ಪದಚ್ಛೇದ** :– ಪ್ರಗೃಹ್ಯ ಕಂಠಮ್ ಅಸ್ಯ ಸ ಪ್ರಧಾನಮಾರುತಾತ್ಮಜಃ । ಸ್ವಮ್ ಆಶು ಮೋಚಯನ್ ತತಃ ನ್ಯಪಾತಯತ್ ಧರಾತಲೇ ॥

**ಅರ್ಥ** :– **ಪ್ರಧಾನಮಾರುತಾತ್ಮಜಃ** ಮುಖ್ಯಪ್ರಾಣನ ಪುತ್ರನಾದ **ಸಃ** ಆ ಹನುಮಂತನು **ಅಸ್ಯ** ಈ ನಿಕುಂಭನ **ಕಂಠಂ** ಕಂಠವನ್ನು **ಪ್ರಗೃಹ್ಯ** ಒತ್ತಿ ಹಿಡಿದು **ಸ್ವಂ** ತನ್ನನ್ನು **ಆಶು** ಕೂಡಲೆ **ತತಃ** ಆ ನಿಕುಂಭನಿಂದ **ಮೋಚಯನ್ (ಸನ್)** ಬಿಡಿಸಿಕೊಂಡವನಾಗಿ **(ತಂ** ಆ ನಿಕುಂಭನನ್ನು**) ಧರಾತಲೇ** ನೆಲದಲ್ಲಿ **ನ್ಯಪಾತಯತ್** ಬೀಳಿಸಿದನು.

**ತಾತ್ಪರ್ಯ** :– ಅಷ್ಟರೊಳಗೆ ನಿಕುಂಭನ ಕತ್ತನ್ನು ಬಲವಾಗಿ ಒತ್ತಿಹಿಡಿದ ಹನುಮನು ಕೂಡಲೇ ತನ್ನನ್ನ ಬಿಡಿಸಿಕೊಂಡು ನಿಕುಂಭನನ್ನು ಕೆಳಗೆಡವಿ ಸಂಹರಿಸುತ್ತಾನೆ.

**ಚಕಾರ ತಂ ರಣಾತ್ಮಕೇ ಮಖೇ ರಮೇಶದೈವತೇ ।**
**ಪಶುಂ ಪ್ರಭಂಜನಾತ್ಮಜೋ ವಿನೇದುರತ್ರ ದೇವತಾಃ ॥ ೩೪ ॥**

**ಪದಚ್ಛೇದ** :– ಚಕಾರ ತಂ ರಣಾತ್ಮಕೇ ಮಖೇ ರಮೇಶದೈವತೇ । ಪಶುಂ ಪ್ರಭಂಜನಾತ್ಮಜಃ ವಿನೇದುಃ ಅತ್ರ ದೇವತಾಃ ॥

**ಅರ್ಥ** :- **ಪ್ರಭಂಜನಾತ್ಮಜಃ** ವಾಯುಪುತ್ರನಾದ ಹನುಮಂತನು **ರಮೇಶ ದೈವತೇ** ರಮೆಗೆ ಪತಿಯಾದ ಶ್ರೀರಾಮನೇ ದೇವತೆಯಾಗಿ ಉಳ್ಳ **ರಣಾತ್ಮಕೇ** ಯುದ್ಧರೂಪವಾದ **ಮಖೇ** ಯಾಗದಲ್ಲಿ **ತಂ** ಆ ನಿಕುಂಭನನ್ನು **ಪಶುಂ** ಪಶುವನ್ನಾಗಿ **ಚಕಾರ** ಮಾಡಿದನು. **ಅತ್ರ** ಯುದ್ಧರೂಪವಾದ ಇಂತಹ ಯಾಗದಲ್ಲಿ **ದೇವತಾಃ** ದೇವತೆಗಳು **ವಿನೇದುಃ** ಉದ್ಗಾತೃವಿನಂತೆ ಮಂತ್ರ ಧ್ವನಿಯನ್ನು ಮಾಡಿದರು.

**ತಾತ್ಪರ್ಯ** :- ಯಜ್ಞಗಳಲ್ಲಿ ಪಶುವು ಹೇಗೋ ಹಾಗೆಯೇ ಹನುಮಂತನು ಯುದ್ಧವೆಂಬ ಈ ಯಜ್ಞದಲ್ಲಿ ನಿಕುಂಭನ್ನು ಪಶುವನ್ನಾಗಿಸುತ್ತಾನೆ. ಈ ಯಜ್ಞಕ್ಕೆ ಶ್ರೀರಾಮನೇ ದೇವತೆಯಾದರೆ ಮಂತ್ರಗಳನ್ನು ಹೇಳುವ ಉದ್ಗಾತೃವಿನ ಕೆಲಸ ವನ್ನು ದೇವತೆಗಳು ಮಾಡುತ್ತಾರೆ. (ಹರ್ಷಗೊಂಡ ದೇವತೆಗಳು ಉದ್ಗಾರ ವನ್ನು ಮಾಡುತ್ತಾರೆ.)

### ರಾವಣನ ಇತರ ಮಂತ್ರಿಗಳ ಅವನತಿ

**ಸುಪ್ತನಘೋ ಯಜ್ಞಕೋಪಶ್ಚ ಶಕುನಿರ್ದೇವತಾಪನಃ ।**
**ವಿದ್ಯುಜ್ಜಿಹ್ವಃ ಪ್ರಮಾಥೀ ಚ ಶುಕಸಾರಣಸಂಯುತಾಃ ॥ ೩೫ ॥**

**ರಾವಣಪ್ರೇರಿತಾಃ ಸರ್ವಾನ್ ಮಥ್ನಂತಃ ಕಪಿಕುಂಜರಾನ್ ।**
**ಅವಧ್ಯಾ ಬ್ರಹ್ಮವರತೋ ನಿಹತಾ ರಾಮಸಾಯಕೈಃ ॥ ೩೬ ॥**

**ಪದಚ್ಛೇದ** :- ಸುಪ್ತಘ್ನಃ ಯಜ್ಞಕೋಪಃ ಚ ಶಕುನಿಃ ದೇವತಾಪನಃ । ವಿದ್ಯುಜ್ಜಿಹ್ವಃ ಪ್ರಮಾಥೀ ಚ ಶುಕಸಾರಣಸಂಯುತಾಃ ॥ ರಾವಣಪ್ರೇರಿತಾಃ ಸರ್ವಾನ್ ಮಥ್ನಂತಃ ಕಪಿಕುಂಜರಾನ್ । ಅವಧ್ಯಾಃ ಬ್ರಹ್ಮವರತಃ ನಿಹತಾಃ ರಾಮಸಾಯಕೈಃ ॥

**ಅರ್ಥ** :- **ಬ್ರಹ್ಮವರತಃ** ಬ್ರಹ್ಮನ ವರದದೆಸೆಯಿಂದ **ಅವಧ್ಯಾಃ** ವಧಿಸಲಶಕ್ಯರಾದ **ಸುಪ್ರಘ್ನಃ** ಸುಪ್ರಘ್ನನು **ಯಜ್ಞಕೋಪಶ್ಚ** ಯಜ್ಞಕೋಪನು **ಶಕುನಿಃ** ಶಕುನಿಯು **ದೇವತಾಪನಿಃ** ದೇವತಾಪನಿಯು **ವಿದ್ಯುಜ್ಜಿಹ್ವಃ** ವಿದ್ಯುಜ್ಜಿಹ್ವನು **ಪ್ರಮಾಥೀ ಚ** ಪ್ರಮಾಥೀ ಎಂಬುವನೂ ಕೂಡ **ಶುಕಸಾರಣಸಂಯುತಾಃ** ಶುಕ ಮತ್ತು ಸಾರಣರಿಂದ ಕೂಡಿಕೊಂಡವರಾಗಿ **ರಾವಣಪ್ರೇರಿತಾಃ (ಸಂತಃ)** ರಾವಣನಿಂದ ಪ್ರಚೋದಿಸಲ್ಪಟ್ಟವರಾಗಿ **ಸರ್ವೇ** ಆ ಎಲ್ಲಾ ರಾಕ್ಷಸರೂ **ಕಪಿಕುಂಜರಾನ್** ಕಪಿ ಶ್ರೇಷ್ಠರನ್ನು **ಮಥ್ನಂತಃ** ಮಥಿಸುವವರಾಗಿ (ವ್ಯಾಕುಲವನ್ನುಂಟು

ಮಾಡುವವರಾಗಿ) **ರಾಮಸಾಯಕೈಃ** ಶ್ರೀರಾಮನ ಬಾಣಗಳಿಂದ **ನಿಹತಾಃ** ಸಂಹರಿಸಲ್ಪಟ್ಟರು.

**ತಾತ್ಪರ್ಯ** :- ರಾವಣನು 'ಸುಪ್ತಘ್ನ ಯಜ್ಞಕೋಪ ಶಕುನಿ ದೇವತಾಪನಿ ವಿದ್ಯುಜ್ಜಿಹ್ವ ಪ್ರಮಾಥೀ ಶುಕ ಮತ್ತು ಸಾರಣ.' ಇವರೆನ್ನೆಲ್ಲರನ್ನು ಯುದ್ಧಕ್ಕೆ ಕಳುಹಿಸಿದನು. ಅವರಾದರೋ ಬ್ರಹ್ಮನ ವರಬಲದಿಂದ ಅವಧ್ಯರಾಗಿ ಸಿಕ್ಕಿ ಸಿಕ್ಕ ಕಪಿಗಳನ್ನೆಲ್ಲರನ್ನೂ ಹಿಚುಕಿ ಹಾಕುತ್ತಿರುತ್ತಾರೆ. ಆಗ ಶ್ರೀರಾಮನು ತನ್ನ ಬಾಣ ಪ್ರಯೋಗದಿಂದ ಅವರೆಲ್ಲರನ್ನೂ ಸಂಹರಿದ.

### ರಾವಣಪುತ್ರರ ಆಗಮನ

**ಯುದ್ಧೋನ್ಮತ್ತಶ್ಚ ಮತ್ತಶ್ಚ ದೇವಾಂತಕನರಾಂತಕೌ ।**
**ತ್ರಿಶಿರಾ ಅತಿಕಾಯಶ್ಚ ನಿರ್ಯಯೂ ರಾವಣಾಜ್ಞಯಾ ॥ ೩೭ ॥**

**ಪದಚ್ಛೇದ** :- ಯುದ್ಧೋನ್ಮತ್ತಃ ಚ ಮತ್ತಃ ಚ ದೇವಾಂತಕನರಾಂತಕೌ । ತ್ರಿಶಿರಾಃ ಅತಿಕಾಯಃ ಚ ನಿರ್ಯಯುಃ ರಾವಣಾಜ್ಞಯಾ ॥

**ಅರ್ಥ** :- **ಯುದ್ಧೋನ್ಮತ್ತಶ್ಚ** ಯುದ್ಧೋನ್ಮತ್ತನೂ **ಮತ್ತಶ್ಚ** ಮತ್ತನೆಂಬುವವನೂ **ದೇವಾಂತಕನರಾಂತಕೌ** ದೇವಾಂತಕನರಾಂತಕರೆಂಬುವರು **ತ್ರಿಶಿರಾಃ** ತ್ರಿಶಿರನು **ಅತಿಕಾಯಶ್ಚ** ಅತಿಕಾಯನೆಂಬುವವನೂ **ರಾವಣಾಜ್ಞಯಾ** ರಾವಣನ ಆದೇಶದಂತೆ **ನಿರ್ಯಯುಃ** ಯುದ್ಧಕ್ಕೆ ಹೊರಟರು.

**ತಾತ್ಪರ್ಯ** :- ಅನಂತರ ರಾವಣನು 'ಯುದ್ಧೋನ್ಮತ್ತ ಮತ್ತು ದೇವಾಂತಕ ನರಾಂತಕ ತ್ರಿಶಿರ ಅತಿಕಾಯ'ರೆಂಬ ರಾಕ್ಷಸರನ್ನು ಯುದ್ಧಕ್ಕೆ ಕಳುಹಿಸುವನು. ರಾವಣನ ಅಜ್ಞೆಯಂತೆ ಇವರೆಲ್ಲರೂ ಯುದ್ಧಕ್ಕೆ ತೆರಳುವರು.

### ಅಂಗದನಿಂದ ನರಾಂತಕನ ಸಂಹಾರ

**ನರಾಂತಕೋ ರಾವಣಜೋ ಹಯವರ್ಯೋಪರಿ ಸ್ಥಿತಃ ।**
**ಅಭೀಃ ಸಸಾರ ಸಮರೇ ಪ್ರಾಸೋದ್ಯತಕರೋ ಹರೀನ್ ॥ ೩೮ ॥**

**ಪದಚ್ಛೇದ** :- ನರಾಂತಕಃ ರಾವಣಜಃ ಹಯವರ್ಯೋಪರಿ ಸ್ಥಿತಃ । ಅಭೀಃ ಸಸಾರ ಸಮರೇ ಪ್ರಾಸೋದ್ಯತಕರಃ ಹರೀನ್ ॥

**ಅರ್ಥ** :- **ರಾವಣಜಃ** ರಾವಣನಿಂದ ಜನಿಸಿದ **ನರಾಂತಕಃ** ನರಾಂತಕನೆಂಬುವವನು **ಹಯವರ್ಯೋಽಪರಿ** ಉತ್ತಮವಾದ ಅಶ್ವದ ಮೇಲೆ **ಸ್ಥಿತಃ (ಸನ್)** ಇರುವವನಾಗಿ **ಸಮರೇ** ಯುದ್ಧದಲ್ಲಿ **ಅಭೀಃ** ಹೆದರಿಕೆ ಇಲ್ಲದವನಾಗಿ **ಪ್ರಾಸೋದ್ಯತಕರಃ(ಸನ್)** ಪ್ರಾಸವೆಂಬ ಆಯುಧದಿಂದ **ಉದ್ಯುಕ್ತಃ** ಕೈಗಳುಳ್ಳವನಾಗಿ **ಹರೀನ್** ಕಪಿಗಳನ್ನು ಸಸಾರ ಹೊಂದಿದನು.

**ತಾತ್ಪರ್ಯ** :- 'ನರಾಂತಕ'ನೆಂಬುವನು ರಾವಣನ ಇನ್ನೊಬ್ಬ ಮಗನು. ಉತ್ತಮ ಕುದುರೆಯನ್ನು ಏರಿದ ಇವನು 'ಪ್ರಾಸ' ವೆಂಬ ಆಯುಧದೊಂದಿಗೆ ನಿರ್ಭಯ ನಾಗಿ ಕಪಿಗಳನ್ನು ಎದುರಿಸಲು ಆಗಮಿಸುತ್ತಾನೆ.

**ತಂ ದಹಂತಮನೀಕಾನಿ ಯುವರಾಜೋಽಂಗದೋ ಬಲೀ ।**
**ಉತ್ಪಪಾತ ನಿರೀಕ್ಷ್ಯಾಽಶು ಸಮದರ್ಶಯದಪ್ಯುರಃ ॥ ೩೯ ॥**

ಪದಚ್ಛೇದ :- ತಂ ದಹಂತಮ್ ಅನೀಕಾನಿ ಯುವರಾಜಃ ಅಂಗದಃ ಬಲೀ ।
ಉತ್ಪಪಾತ ನಿರೀಕ್ಷ್ಯ ಆಶು ಸಮದರ್ಶಯತ್ ಅಪಿ ಉರಃ ॥

**ಅರ್ಥ** :- **ಬಲೀ** ಬಲಿಷ್ಠನಾದ **ಯುವರಾಜಃ** ಯುವರಾಜನಾದ **ಅಂಗದಃ** ಅಂಗದನು **ಅನೀಕಾನಿ** ತನ್ನ ಸೈನ್ಯಗಳನ್ನು **ದಹಂತಂ** ಭಸ್ಮಮಾಡುತ್ತಿರುವ **ತಂ** ಆ ನರಾಂತಕನೆಂಬುವನನ್ನು **ನಿರೀಕ್ಷ್ಯ** ನೋಡಿ **ಆಶು** ತಕ್ಷಣವೇ **ಉತ್ಪಪಾತ** ಅವನ ಹತ್ತಿರ ನೆಗೆದನು. **ಉರಃ ಅಪಿ** ಎದೆಯನ್ನೂ ಕೂಡ **ಸಮದರ್ಶಯತ್** ತೋರಿಸಿದನು.

**ತಾತ್ಪರ್ಯ** :- ನರಾಂತಕನಿಂದ ತನ್ನ ಸೈನ್ಯವು ಭಸ್ಮವಾಗುತ್ತಿರುವುದನ್ನು ನೋಡಿದ ಅಂಗದನು ಕೂಡಲೇ ಅವನ ಹತ್ತಿರ ಆಗಮಿಸಿ ತನ್ನ ಎದೆಯನ್ನು ಪ್ರದರ್ಶಿಸಿದನು.

**ತಸ್ಯೋರಸಿ ಪ್ರಾಸವರಂ ಪ್ರಜಹಾರ ಸ ರಾಕ್ಷಸಃ ।**
**ದ್ವಿಧಾ ಸಮಭವತ್ ತತ್ತು ವಾಲಿಪುತ್ರಸ್ಯ ತೇಜಸಾ ॥ ೪೦ ॥**

ಪದಚ್ಛೇದ :- ತಸ್ಯ ಉರಸಿ ಪ್ರಾಸವರಂ ಪ್ರಜಹಾರ ಸಃ ರಾಕ್ಷಸಃ । ದ್ವಿಧಾ ಸಮಭವತ್ ತತ್ ತು ವಾಲಿಪುತ್ರಸ್ಯ ತೇಜಸಾ ॥

**ಅರ್ಥ** :- **ರಾಕ್ಷಸಃ** ರಾಕ್ಷಸನಾದ **ಸಃ** ಆ ನರಾಂತಕನು **ತಸ್ಯ** ಆ ಅಂಗದನ **ಉರಸಿ** ಎದೆಯಲ್ಲಿ **ಪ್ರಾಸವರಂ** ಉತ್ತಮವಾದ ಪ್ರಾಸವೆಂಬ ಆಯುಧವನ್ನು **ಪ್ರಜಹಾರ** ಪ್ರಹರಿಸಿದನು. **ತತ್ತು** ಆ ಪ್ರಾಸವೆಂಬ ಆಯುಧವಾದರೋ **ವಾಲಿ ಪುತ್ರಸ್ಯ** ವಾಲಿ ಪುತ್ರನ **ತೇಜಸಾ** ತೇಜಸ್ಸಿನಿಂದ **ದ್ವಿಧಾ** ಎರಡು ಭಾಗವುಳ್ಳದ್ದಾಗಿ **ಸಮಭವತ್** ಉಂಟಾಯಿತು.

**ತಾತ್ಪರ್ಯ** :- ಆಗ ಅಂಗದನ ಎದೆಗೆ ಪ್ರಾಸವೆಂಬ ಆಯುಧವನ್ನು ನರಾಂತಕನು ಎಸೆಯುವವನು. ಆದರೆ ಅಂಗದ ಶಕ್ತಿಸಾಮರ್ಥ್ಯದಿಂದ ಅದೂ ಕೂಡ ಎರಡು ತುಂಡಾಗುವುದು.

**ಅಥಾಸ್ಯ ಹಯಮಾಶ್ವೇವ ನಿಜಘಾನ ಮುಖೇ ಕಪಿಃ ।**
**ಪೇತತುಶ್ಚಾಕ್ಷಿಣೀ ತಸ್ಯ ಸ ಪಪಾತ ಮಮಾರ ಚ ॥ ೪೧ ॥**

ಪದಚ್ಛೇದ :- **ಅಥ ಅಸ್ಯ ಹಯಮ್ ಆಶು ಏವ ನಿಜಘಾನ ಮುಖೇ ಕಪಿಃ । ಪೇತತುಃ ಚ ಅಕ್ಷಿಣೀ ತಸ್ಯ ಸಃ ಪಪಾತ ಮಮಾರ ಚ ॥**

**ಅರ್ಥ** :- **ಕಪಿಃ** ಅಂಗದನು **ಅಥ** ಅನಂತರ **ಅಸ್ಯ** ಈ ನರಾಂತಕನ **ಹಯಂ** ಕುದುರೆಯನ್ನು **ಮುಖೇ** ಮುಖದಲ್ಲಿ **ಆಶ್ವೇವ** ಆ ಕ್ಷಣವೇ **ನಿಜಘಾನ** ಅಪ್ಪಳಿಸಿದನು. **ತಸ್ಯ** ಆ ಕುದುರೆಯ **ಅಕ್ಷಿಣೀ** ಕಣ್ಣುಗಳು **ಪೇತತುಃ** ಬಿದ್ದವು. **ಸಃ** ಆ ಕುದುರೆಯು **ಪಪಾತ** ಬಿದ್ದಿತು. **ಮಮಾರ ಚ** ಮರಣವನ್ನೂ ಹೊಂದಿತು.

**ತಾತ್ಪರ್ಯ** :- ಆ ಕೂಡಲೆ ಅಂಗದನು ನರಾಂತಕನ ಕುದುರೆಯ ಕೆನ್ನೆಗೆ ಬಾರಿ ಸುತ್ತಾನೆ. ಇದರಿಂದಾಗಿ ಕುದುರೆಯ ಕಣ್ಣುಗಳು ಕೆಳಗೆ ಬಿದ್ದು ಅದೂ ಕೂಡ ಕೆಳಗೆ ಬೀಳುತ್ತದೆ. ಕೊನೆಗೆ ಮರಣವನ್ನು ಹೊಂದುತ್ತದೆ.

**ಸ ಖಡ್ಗವರಮಾದಾಯ ಪ್ರಸಸಾರ ರಣೇ ಕಪಿಮ್ ।**
**ಆಚ್ಛಿದ್ಯ ಖಡ್ಗಮಸ್ಯೈವ ನಿಹತೋ ವಾಲಿಸೂನುನಾ ॥ ೪೨ ॥**

ಪದಚ್ಛೇದ :- ಸಃ ಖಡ್ಗವರಮ್ ಆದಾಯ ಪ್ರಸಸಾರ ರಣೇ ಕಪಿಮ್ । ಆಚ್ಛಿದ್ಯ ಖಡ್ಗಮ್ ಅಸ್ಯ ಏವ ನಿಹತಃ ವಾಲಿಸೂನುನಾ ॥

**ಅರ್ಥ** :- **ಸಃ** ಆ ನರಾಂತಕನು **ಖಡ್ಗವರಂ** ಶ್ರೇಷ್ಠವಾದ ಖಡ್ಗವನ್ನು **ಆದಾಯ** ಹಿಡಿದುಕೊಂಡು **ರಣೇ** ಯುದ್ಧದಲ್ಲಿ **ಕಪಿಂ** ಅಂಗದನನ್ನು **ಪ್ರಸಸಾರ**

ಹೊಂದಿದನು. ವಾಲಿಸೂನುನಾ ಚ ವಾಲಿಪುತ್ರನಾದ ಅಂಗದನಿಂದಲಾದರೋ **ಅಸ್ಯ** ಈ ನರಾಂತಕನ **ಖಡ್ಗಂ** ಖಡ್ಗವನ್ನು **ಆಚ್ಛಿದ್ಯೈವ** ಕಿತ್ತುಕೊಂಡೇ **ನಿಹತಃ** ಸಂಹರಿಸಲ್ಪಟ್ಟನು.

**ತಾತ್ಪರ್ಯ** :- ಆ ನರಾಂತಕನು ಖಡ್ಗದಿಂದ ಅವನನ್ನು ಎದುರಿಸುತ್ತಾನೆ. ಆದರೆ ಅಂಗದನು ಆ ಖಡ್ಗವನ್ನೇ ಕಿತ್ತುಕೊಂಡು ಅವನನ್ನು ಸಂಹರಿಸುತ್ತಾನೆ.

**ಕಪಿಗಳನ್ನು ಹಿಮ್ಮೆಟ್ಟಿಸಿದ ದೇವಾಂತಕ**

**ಗಂಧರ್ವಕನ್ಯಕಾಸೂತೇ ನಿಹತೇ ರಾವಣಾತ್ಮಜೇ ।**
**ಆಜಗಾಮಾಗ್ರಜಸ್ತಸ್ಯ ಸೋದರ್ಯೋ ದೇವತಾಂತಕಃ ॥ ೪೩ ॥**

ಪದಚ್ಛೇದ :- ಗಂಧರ್ವಕನ್ಯಕಾಸೂತೇ ನಿಹತೇ ರಾವಣಾತ್ಮಜೇ । ಆಜಗಾಮ ಅಗ್ರಜಃ ತಸ್ಯ ಸೋದರ್ಯಃ ದೇವತಾಂತಕಃ ॥

**ಅರ್ಥ** :- **ಗಂಧರ್ವಕನ್ಯಕಾಸೂತೇ** ಗಂಧರ್ವಕನ್ಯೆಯಲ್ಲಿ ಜನಿಸಿದ **ರಾವಣಾತ್ಮಜೇ** ರಾವಣನ ಪುತ್ರನಾದ **ತಸ್ಯ** ಆ ನರಾಂತಕನ **ಸೋದರ್ಯಃ** ಒಂದೇ ಉದರದಲ್ಲಿ ಹುಟ್ಟಿದ **ಅಗ್ರಜಃ** ಅಣ್ಣನಾದ **ದೇವಾಂತಕಃ** ದೇವಾಂತಕನೆಂಬುವನು **ಆಜಗಾಮ** ಆಗಮಿಸಿದನು.

**ತಾತ್ಪರ್ಯ** :- ರಾವಣನಿಗೆ ಗಂಧರ್ವಕನ್ಯೆಯಲ್ಲಿ ಹುಟ್ಟಿದ ನರಾಂತಕನೊಂದಿಗೆ ದೇವಾಂತಕನೆಂಬ ಇನ್ನೊಬ್ಬ ಮಗನಿದ್ದನು. ನರಾಂತಕನು ಸತ್ತ ನಂತರ ಅಗ್ರಜನಾದ ಇವನು ಯುದ್ಧಕ್ಕೆ ಬರುತ್ತಾನೆ.

**ತಸ್ಯಾಽಪತತ ಏವಾಽಶು ಶರವರ್ಷಪ್ರತಾಪಿತಾಃ ।**
**ಪ್ರದುದ್ರುವುರ್ಭಯಾತ್ ಸರ್ವೇ ಕಪಯೋ ಜಾಂಬವನ್ಮುಖಾಃ ॥ ೪೪ ॥**

ಪದಚ್ಛೇದ :- ತಸ್ಯ ಆಪತತಃ ಏವ ಆಶು ಶರವರ್ಷಪ್ರತಾಪಿತಾಃ । ಪ್ರದುದ್ರುವುಃ ಭಯಾತ್ ಸರ್ವೇ ಕಪಯಃ ಜಾಂಬವನ್ಮುಖಾಃ ॥

**ಅರ್ಥ** :- **ಆಪತತ ಏವ** ಎದುರಾಗಿಯೇ ಬರುವಂತಹ **ತಸ್ಯ** ಆ ದೇವಾಂತಕನ **ಶರವರ್ಷಪ್ರತಾಪಿತಾಃ** ಬಾಣಗಳೆಂಬ ವರ್ಷಧಾರೆಯಿಂದ ಸಂತಪ್ತರಾದ **ಜಾಂಬವನ್ಮುಖಾಃ** ಜಾಂಬವಂತನೇ ಪ್ರಮುಖರಾಗಿ ಉಳ್ಳ **ಸರ್ವೇ** ಎಲ್ಲಾ **ಕಪಯಃ** ಕಪಿಗಳು **ಭಯಾತ್** ಭಯದಿಂದ **ಆಶು** ಕೂಡಲೆ **ಪ್ರದುದ್ರುವುಃ** ಚದುರಿದರು.

**ತಾತ್ಪರ್ಯ** :- ಆ ದೇವಾಂತಕನಾದರೊ ಬಾಣಗಳ ಮಳೆಯನ್ನೇ ಕಪಿಗಳ ಮೇಲೆ ಸುರಿಸಿದನು. ಆದರಿಂದ ಖಿನ್ನರಾದ ಜಾಂಬವಂತನೇ ಮೊದಲಾದ ಕಪಿಗಳೆಲ್ಲರೂ ತಕ್ಷಣವೇ ಚದುರಿ ಓಡಿಹೋಗುವರು.

**ಸ ಶರಂ ತರಸಾऽऽದಾಯ**
**ರವಿಪುತ್ರಾಯುಧೋಪಮಮ್ ।**
**ಅಂಗದಂ ಪ್ರಜಹಾರೋರಸ್ಯ-**
**ಪತತ್ ಸ ಮುಮೋಹ ಚ ॥ ೪೫ ॥**

ಪದಚ್ಛೇದ :- ಸ ಶರಂ ತರಸಾ ಆದಾಯ ರವಿಪುತ್ರಾಯುಧೋಪಮಮ್ । ಅಂಗದಂ ಪ್ರಜಹಾರ ಉರಸಿ ಅಪತತ್ ಸ ಮುಮೋಹ ಚ ॥

**ಅರ್ಥ** :- ಸಃ ಆ ದೇವಾಂತಕನು **ತರಸಾ** ವೇಗದಿಂದ **ರವಿಪುತ್ರಾಯುಧೋಪಮಂ** ಸೂರ್ಯಪುತ್ರನಾದ ಯಮನ ದಂಡಸದೃಶವಾದ **ಶರಂ** ಬಾಣವನ್ನು **ಆದಾಯ** ಹಿಡಿದು. **ಅಂಗದಂ** ಅಂಗದನನ್ನು **ಉರಸಿ** ಎದೆಭಾಗದಲ್ಲಿ **ಪ್ರಜಹಾರ** ಹೊಡೆದನು. ಸಃ ಅಂಗದನು **ಅಪತತ್** ಬಿದ್ದನು **ಮುಮೋಹ ಚ** ಮೂರ್ಛೆಯನ್ನೂ ಹೊಂದಿದನು.

**ತಾತ್ಪರ್ಯ** :- ಆ ದೇವಾಂತಕನು ಯಮದಂಡಸದೃಶವಾದ ಬಾಣದಿಂದ ಅಂಗದನ ಎದೆಗೆ ಹೊಡೆಯುತ್ತಾನೆ. ಕೆಳಗೆ ಬಿದ್ದ ಅಂಗದ ಮೂರ್ಛೆ ಹೋಗುತ್ತಾನೆ.

### ದೇವಾಂತಕನಿಂದ ಸುಗ್ರೀವನ ಹಿನ್ನಡೆ

**ಅಥ ತಿಗ್ಮಾಂಶುತನಯಃ ಶೈಲಂ ಪ್ರಚಲಪಾದಪಮ್ ।**
**ಅಭಿದುದ್ರಾವ ಸಂಗೃಹ್ಯ ಚಿಕ್ಷೇಪ ಚ ನಿಶಾಚರೇ ॥ ೪೬ ॥**

ಪದಚ್ಛೇದ :- ಅಥ ತಿಗ್ಮಾಂಶುತನಯಃ ಶೈಲಂ ಪ್ರಚಲಪಾದಪಮ್ । ಅಭಿದುದ್ರಾವ ಸಂಗೃಹ್ಯ ಚಿಕ್ಷೇಪ ಚ ನಿಶಾಚರೇ ॥

**ಅರ್ಥ** :- **ಅಥ** ಅನಂತರ **ತಿಗ್ಮಾಂಶುತನಯಃ** ಉಗ್ರವಾದ ಕಿರಣಗಳುಳ್ಳ ರವಿಯ ಸುತನಾದ ಸುಗ್ರೀವನು **ಪ್ರಚಲಪಾದಪಂ** ಸಂಚರಿಸುವ ವೃಕ್ಷಗಳುಳ್ಳ **ಶೈಲಂ** ಪರ್ವತವನ್ನು **ಸಂಗೃಹ್ಯ** ತೆಗೆದುಕೊಂಡು **ಅಭಿದುದ್ರಾವ** ಆಗಮಿಸಿದನು. **ನಿಶಾಚರೇ** ದೇವಾಂತಕನಲ್ಲಿ **ಚಿಕ್ಷೇಪ ಚ** ಎಸೆದನೂ ಕೂಡ.

**ತಾತ್ಪರ್ಯ** :- ಆಗ ಸುಗ್ರೀವನು ವೃಕ್ಷಗಳಿಂದ ಕೂಡಿದ ಪರ್ವತವನ್ನು ಈ ದೇವಾಂತಕನ ಮೇಲೆ ಎಸೆಯುತ್ತಾನೆ.

**ತಮಾಪತಂತಮಾಲಕ್ಷ್ಯ ದೂರಾಚ್ಛರವಿದಾರಿತಮ್ ।**
**ಸುರಾಂತಕಶ್ಚಕಾರಾಽಶು ದಧಾರ ಚ ಪರಂ ಶರಮ್ ॥ ೪೭ ॥**

**ಪದಚ್ಛೇದ** :- **ತಮ್ ಆಪತಂತಮ್ ಆಲಕ್ಷ್ಯ ದೂರಾತ್ ಶರವಿದಾರಿತಮ್ । ಸುರಾಂತಕಃ ಚಕಾರ ಆಶು ದಧಾರ ಚ ಪರಂ ಶರಮ್ ॥**

**ಅರ್ಥ** :- **ಸುರಾಂತಕಃ** ದೇವಾಂತಕನು **ಆಪತಂತಂ** ತನ್ನ ಮೇಲೆ ಬೀಳಲು ಆಗಮಿಸುತ್ತಿರುವ **ತಂ** ಆ ಪರ್ವತವನ್ನು **ಆಲಕ್ಷ್ಯ** ಅವಲೋಕಿಸಿ **ದೂರಾತ್** ದೂರದಿಂದಲೇ **ಶರವಿದಾರಿತಂ** ಬಾಣದಿಂದ ನಾಶಪಡಿಸುವವನಾಗಿ **ಚಕಾರ** ಮಾಡಿದನು. **ಚ** ಮತ್ತು **ಆಶು** ಕೂಡಲೆ **ಪರಂ** ಇನ್ನೊಂದು **ಶರಂ** ಬಾಣವನ್ನು **ದಧಾರ** ಧರಿಸಿದನು.

**ತಾತ್ಪರ್ಯ** :- ತನ್ನ ಮೇಲೆ ಬೀಳಲು ಬರುತ್ತಿರುವ ಬೆಟ್ಟವನ್ನು ನೋಡಿದ ಸುಗ್ರೀವ ಬಾಣವನ್ನು ಬಿಟ್ಟು ಅದನ್ನು ದೂರದಲ್ಲಿ ನಾಶಪಡಿಸಿ ತಾನು ಇನ್ನೊಂದು ಬಾಣವನ್ನು ಬಿಡಲು ಉದ್ಯುಕ್ತನಾದನು.

**ಸ ತಮಾಕರ್ಣಮಾಕೃಷ್ಯ ಯಮದಂಡೋಪಮಂ ಶರಮ್ ।**
**ಅವಿದ್ಧ್ಯದ್ಧೃದಯೇ ರಾಜ್ಞಃ ಕಪೀನಾಂ ಸ ಪಪಾತ ಹ ॥ ೪೮ ॥**

**ಪದಚ್ಛೇದ** :- **ಸಃ ತಮ್ ಆಕರ್ಣಮ್ ಆಕೃಷ್ಯ ಯಮದಂಡೋಪಮಂ ಶರಮ್ । ಅವಿದ್ಧ್ಯತ್ ಹೃದಯೇ ರಾಜ್ಞಃ ಕಪೀನಾಂ ಸ ಪಪಾತ ಹ ॥**

**ಅರ್ಥ** :- **ಸಃ** ಆ ದೇವಾಂತಕನು **ಯಮದಂಡೋಪಮಂ** ಯಮ ದಂಡ ಸದೃಶವಾದ **ತಂ** ಅಂತಹ **ಶರಂ** ಬಾಣವನ್ನು **ಆಕರ್ಣಂ** ಕಿವಿಯ ಪರ್ಯಂತ **ಆಕೃಷ್ಯ** ಎಳೆದು **ಕಪೀನಾಂ** ಕಪಿಗಳ **ರಾಜ್ಞಃ** ರಾಜನಾದ ಸುಗ್ರೀವನ **ಹೃದಯೇ** ಹೃದಯದಲ್ಲಿ **ಅವಿದ್ಧ್ಯತ್** ಹೊಡೆದನು. **ಸಃ** ಆಸುಗ್ರೀವನು **ಪಪಾತ** ಬಿದ್ದನು. **ಹ** ಅಯ್ಯೋ!

**ತಾತ್ಪರ್ಯ** :- ಯಮದಂಡಸದೃಶವಾದ ಬಾಣವನ್ನು ದೇವಾಂತಕನು ತನ್ನ ಕಿವಿಯವರೆಗೆ ಎಳೆದು ಬಲವಾಗಿ ಬಿಟ್ಟಾಗ ಅದು ಸುಗ್ರೀವನ ಎದೆಗೆ ಬಡಿದು ಅವನು ಕೆಳಗೆ ಬೀಳುವನು.

### ದೇವಾಂತಕನನ್ನು ಕೊಂದ ಹನುಮ

**ಬಲಮಪ್ರತಿಮಂ ವೀಕ್ಷ್ಯ ಸುರಶತ್ರೋಸ್ತು ಮಾರುತಿಃ ।**
**ಆಹ್ವಯಾಮಾಸ ಯುದ್ಧಾಯ ಕೇಶವಃ ಕೈಟಭಂ ಯಥಾ ॥ ೪೯ ॥**

**ಪದಚ್ಛೇದ :-** ಬಲಮ್ ಅಪ್ರತಿಮಂ ವೀಕ್ಷ್ಯ ಸುರಶತ್ರೋಃ ತು ಮಾರುತಿಃ । ಆಹ್ವಯಾಮಾಸ ಯುದ್ಧಾಯ ಕೇಶವಃ ಕೈಟಭಂ ಯಥಾ ॥

**ಅರ್ಥ :-** **ಸುರಶತ್ರೋಃ** ಸುರರಿಗೆ ಶತ್ರುವಾದ ದೇವಾಂತಕನ **ಅಪ್ರತಿಮಂ** ಅಸದೃಶವಾದ **ಬಲಂ** ಸಾಮರ್ಥ್ಯವನ್ನು **ಮಾರುತಿಃ ತು** ಹನುಮಂತನಾದರೋ **ವೀಕ್ಷ್ಯ** ನೋಡಿ **ಯಥಾ** ಹೇಗೆ **ಕೇಶವಃ** ಪರಮಾತ್ಮನು **ಕೈಟಭಂ** ಕೈಟಭನನ್ನು ಯುದ್ಧಕ್ಕೆ ಕರೆದನೋ (ತಥಾ ಹಾಗೆಯೆ) **ಯುದ್ಧಾಯ** ಯುದ್ಧಕ್ಕೆ **ಆಹ್ವಯಾಮಾಸ** ಆಹ್ವಾನಿಸಿದನು.

**ತಾತ್ಪರ್ಯ :-** ಇವನ ಅಸದೃಶಬಲವನ್ನು ನೋಡಿದ ಹನುಮಂತನು ಕೇಶವನು ಕೈಟಭನೆಂಬ ರಕ್ಕಸನನ್ನು ಯುದ್ಧಕ್ಕೆ ಕರೆದಂತೆ ದೇವಾಂತಕನನ್ನು ಯುದ್ಧಕ್ಕೆ ಆಹ್ವಾನಿಸಿದನು.

**ತಮಾಪತಂತಮಾಲೋಕ್ಯ ರಥಂ ಸಹಯಸಾರಥಿಮ್ ।**
**ಚೂರ್ಣಯಿತ್ವಾ ಧನುಶ್ಚಾಸ್ಯ ಸಮಾಚ್ಛಿದ್ಯ ಬಭಂಜ ಹ ॥ ೫೦ ॥**

**ಪದಚ್ಛೇದ :-** ತಮ್ ಆಪತಂತಮ್ ಆಲೋಕ್ಯ ರಥಂ ಸಹಯಸಾರಥಿಮ್ । ಚೂರ್ಣಯಿತ್ವಾ ಧನುಃ ಚ ಅಸ್ಯ ಸಮಾಚ್ಛಿದ್ಯ ಬಭಂಜ ಹ ॥

**ಅರ್ಥ :-** **ಆಪತಂತಂ** ಯುದ್ಧಕ್ಕೆ ಬರುತ್ತಿರುವ **ತಂ** ದೇವಾಂತಕನನ್ನು **ಮಾರುತಿಃ** ಮಾರುತಿಯು **ಆಲೋಕ್ಯ** ನೋಡಿ **ಸಹಯಸಾರಥಿಂ** ಕುದುರೆ ಮತ್ತು ಸಾರಥಿಯಿಂದ ಕೂಡಿದ **ರಥಂ** ರಥವನ್ನು **ಚೂರ್ಣಯಿತ್ವಾ** ಪುಡಿಯನ್ನಾಗಿ ಮಾಡಿ **ಅಸ್ಯ** ಈ ದೇವಾಂತಕನ **ಧನುಶ್ಚ** ಧನುಸ್ಸನ್ನೂ ಕೂಡ **ಸಮಾಚ್ಛಿದ್ಯ** ಅಪಹರಿಸಿ **ಬಭಂಜ ಹ** ಮುರಿದನಷ್ಟೆ

**ತಾತ್ಪರ್ಯ :-** ಹನುಮಂತನು ಯುದ್ಧಕ್ಕೆ ಬಂದ ದೇವಾಂತಕನ ಕುದುರೆ ಸಾರಥಿ ರಥವನ್ನು ಮುರಿದು ಹಾಗೆಯೇ ಅವನ ಬಿಲ್ಲನ್ನು ಅಪಹರಿಸಿ ಅದನ್ನು ಮುರಿದು ಹಾಕುವನು.

ಅಥ ಖಡ್ಗಂ ಸಮಾದಾಯ ಪುರ ಆಪಾತತೋ ರಿಪೋಃ ।
ಹರಿಃ ಪ್ರಗೃಹ್ಯ ಕೇಶೇಷು ಪಾತಯಿತ್ವೈನಮಾಹವೇ ।
ಶಿರೋ ಮಮರ್ದ ತರಸಾ ಪವಮಾನಾತ್ಮಜಃ ಪದಾ ॥ ೫೧ ॥

ಪದಚ್ಛೇದ :- ಅಥ ಖಡ್ಗಂ ಸಮಾದಾಯ ಪುರಃ ಆಪಾತತಃ ರಿಪೋಃ । ಹರಿಃ ಪ್ರಗೃಹ್ಯ ಕೇಶೇಷು ಪಾತಯಿತ್ವಾ ಏನಮ್ ಆಹವೇ । ಶಿರಃ ಮಮರ್ದ ತರಸಾ ಪವಮಾನಾತ್ಮಜಃ ಪದಾ ॥

ಅರ್ಥ :- ಅಥ ಅನಂತರ ಪವನಾತ್ಮಜಃ ವಾಯುದೇವನ ಪುತ್ರನಾದ ಹರಿಃ ಹನುಮಂತನು ಪುರಃ ಎದುರಿನಲ್ಲಿ ಆಪಾತತಃ ಬರುತ್ತಿರುವ ರಿಪೋಃ ಶತ್ರುವಾದ ದೇವಾಂತಕನ ಖಡ್ಗಂ ಖಡ್ಗವನ್ನು ಸಮಾದಾಯ ಹಿಡಿದುಕೊಂಡು ಏನಂ ಈ ದೇವಾಂತಕನನ್ನು ಆಹವೇ ಯುದ್ಧದಲ್ಲಿ ಕೇಶೇಷು ಕೂದಲುಗಳಲ್ಲಿ ಪ್ರಗೃಹ್ಯ ಹಿಡಿದುಕೊಂಡು ಪಾತಯಿತ್ವಾ ಕೆಡವಿ ತರಸಾ ವೇಗದಿಂದ ಪದಾ ಕಾಲಿನಿಂದ ಶಿರಃ ತಲೆಯನ್ನು ಮಮರ್ದ ಮರ್ದಿಸಿದನು.

ತಾತ್ಪರ್ಯ :- ದೇವಾಂತಕನು ಖಡ್ಗದೊಂದಿಗೆ ಯುದ್ಧ ಮಾಡಲು ಧಾವಿಸುವನು. ಆಗ ಹನುಮಂತನು ಅವನ ಖಡ್ಗವನ್ನು ಕಸಿದುಕೊಂಡು ಕೂದಲನ್ನು ಹಿಡಿದು ನೆಲಕ್ಕೆ ಬೀಳಿಸಿ ಅವನ ತಲೆಯನ್ನು ತನ್ನ ಕಾಲಿನಿಂದ ತುಳಿಯುವನು.

ವರದಾನಾದವಧ್ಯಂ ತಂ ನಿಹತ್ಯ ಪವನಾತ್ಮಜಃ ।
ಸಮೀಡಿತಃ ಸುರವರ್ಯೈಃ ಪ್ಲವಗೈರ್ವೀಕ್ಷಿತೋ ಮುದಾ ॥ ೫೨ ॥

ಪದಚ್ಛೇದ :- ವರದಾನಾತ್ ಅವಧ್ಯಂ ತಂ ನಿಹತ್ಯ ಪವನಾತ್ಮಜಃ । ಸಮೀಡಿತಃ ಸುರವರ್ಯೈಃ ಪ್ಲವಗೈಃ ವೀಕ್ಷಿತೋ ಮುದಾ ॥

ಅರ್ಥ :- ಪವನಾತ್ಮಜಃ ವಾಯುಪುತ್ರನಾದ ಹನುಮಂತನು ವರದಾನಾತ್ ವರದ ಬಲದಿಂದ ಅವಧ್ಯಂ ಮರಣರಹಿತನಾದ ತಂ ಆ ದೇವಾಂತಕನನ್ನು ನಿಹತ್ಯ ಕೊಂದು ಸುರವರ್ಯೈಃ ದೇವೋತ್ತಮರಿಂದ ಸಮೀಡಿತಃ ಬಹಳವಾಗಿ ಸ್ತುತಿಸಲ್ಪಟ್ಟನು. ಪ್ಲವಗೈಃ ಕಪಿಗಳಿಂದ ಮುದಾ ಹರ್ಷದಿಂದ ವೀಕ್ಷಿತಃ ನೋಡಲ್ಪಟ್ಟನು.

**ತಾತ್ಪರ್ಯ** :- ಹೀಗೆ ಹನುಮಂತನು ದೇವಾಂತಕನನ್ನು ಸಂಹರಿಸುವನು. ಶಿವನ ವರಬಲವಿದ್ದರೂ ದೇವಾಂತಕನು ಹನುಮಂತನಿಂದ ಹತನಾದದ್ದನ್ನು ಕಂಡು ದೇವಶ್ರೇಷ್ಠರೆಲ್ಲರೂ ಹನುಮಂತನನ್ನು ಸ್ತುತಿಸುವರು. ಆಗ ಕಪಿಗಳೆಲ್ಲ ಹರ್ಷಿತರಾಗಿ ಇವನನ್ನು ನೋಡುವರು.

### ಹನುಮಂತನಿಂದ ತ್ರಿಶಿರನ ಸಂಹಾರ

**ವಿದ್ರಾವಿತಾಖಿಲಕಪಿಂ ವರಾತ್ ತ್ರಿಶಿರಸಂ ವಿಭೋಃ ।**
**ಭಂಕ್ತ್ವಾ ರಥಂ ಧನುಃ ಖಡ್ಗಮಾಚ್ಛಿದ್ಯಾಶಿರಸಂ ವ್ಯಧಾತ್ ॥ ೫೩ ॥**

**ಪದಚ್ಛೇದ** :- **ವಿದ್ರಾವಿತಾಖಿಲಕಪಿಂ ವರಾತ್ ತ್ರಿಶಿರಸಂ ವಿಭೋಃ । ಭಂಕ್ತ್ವಾ ರಥಂ ಧನುಃ ಖಡ್ಗಮ್ ಆಚ್ಛಿದ್ಯ ಅಶಿರಸಂ ವ್ಯಧಾತ್ ॥**

**ಅರ್ಥ** :- **ವಿಭೋಃ** ಬ್ರಹ್ಮದೇವನ **ವರಾತ್** ವರದದೆಸೆಯಿಂದ **ವಿದ್ರಾವಿತಾಖಿಲಕಪಿಂ** ಓಡಿಸಲ್ಪಟ್ಟ ಸಮಸ್ತಕಪಿಗಳುಳ್ಳ **ತ್ರಿಶಿರಸಂ** ತ್ರಿಶಿರಸನೆಂಬ ರಾಕ್ಷಸನನ್ನು **ರಥಂ** ಅವನ ರಥವನ್ನು **ಧನುಃ** ಧನುಸ್ಸನ್ನು **ಭಂಕ್ತ್ವಾ** ನಾಶಪಡಿಸಿ **ಖಡ್ಗಂ** ಖಡ್ಗವನ್ನು **ಆಚ್ಛಿದ್ಯ** ಸಳೆದು **ಅಶಿರಸಂ** ಶಿರರಹಿತನನ್ನಾಗಿ **ವ್ಯಧಾತ್** ಮಾಡಿದನು.

**ತಾತ್ಪರ್ಯ** :- ಬ್ರಹ್ಮನ ವರ ಬಲದಿಂದ ತ್ರಿಶಿರಸನೆಂಬ ರಾಕ್ಷಸನು ಸರ್ವ ಕಪಿಗಳನ್ನು ಹಿಮ್ಮೆಟ್ಟಿಸಿದ. ಆಗ ಹನುಮಂತನು ಅವನ ರಥ ಬಿಲ್ಲುಗಳನ್ನು ತುಂಡರಿಸಿ ಖಡ್ಗವನ್ನು ಕಿತ್ತು ತ್ರಿಶಿರನಾದ ಅವನನ್ನು ಮುಂಡದಿಂದ ಶಿರಸ್ಸನ್ನು ಭೇಧಿಸಿ ಅಶಿರಸ್ಕನನ್ನಾಗಿ ಮಾಡುವನು.

### ಹನುಮಂತನಿಂದ ಯದ್ಧೋನ್ಮತ್ತಾದಿಗಳ ಸಂಹಾರ

**ಯುದ್ಧೋನ್ಮತ್ತಶ್ಚ ಮತ್ತಶ್ಚ ಪಾರ್ವತೀವರದರ್ಪಿತೌ ।**
**ಪ್ರಮಥಂತೌ ಕಪೀನ್ ಸರ್ವಾನ್ ಹತೌ ಮಾರುತಿಮುಷ್ಟಿನಾ ॥೫೪॥**

ಪದಚ್ಛೇದ :- ಯುದ್ಧೋನ್ಮತ್ತಃ ಚ ಮತ್ತಃ ಚ ಪಾರ್ವತೀವರದರ್ಪಿತೌ । ಪ್ರಮಥಂತೌ ಕಪೀನ್ ಸರ್ವಾನ್ ಹತೌ ಮಾರುತಿಮುಷ್ಟಿನಾ ॥

**ಅರ್ಥ** :- ಪಾರ್ವತೀವರದರ್ಪಿತೌ ಪಾರ್ವತೀದೇವಿಯ ವರಬಲದಿಂದ ಗರ್ವಿತರಾದ ಸರ್ವಾನ್ ಆ ಎಲ್ಲ ಕಪೀನ್ ಕಪಿಗಳನ್ನು ಪ್ರಮಥ್ನಂತೌ

ಸಂಕಷ್ಟಕ್ಕೀಡು ಮಾಡತಕ್ಕ **ಯುದ್ಧೋನ್ಮತ್ತಃ** ಯುದ್ಧೋನ್ಮತ್ತನೆಂಬುವನು **ಚ** ಮತ್ತು **ಮತ್ತಶ್ಚ** ಮತ್ತನೆಂಬುವನೂ ಕೂಡ **ಮಾರುತಿಮುಷ್ಟಿನಾ** ಹನುಮಂತನ ಮುಷ್ಟಿಯಿಂದ **ಹತೌ** ಸಂಹರಿಸಲ್ಪಟ್ಟರು.

**ತಾತ್ಪರ್ಯ :-** ಯುದ್ಧೋನ್ಮತ್ತ ಮತ್ತು ಮತ್ತರೆಂಬ ಇಬ್ಬರು ರಾಕ್ಷಸರಿಗೆ ಪಾರ್ವತಿಯ ವರಬಲವಿತ್ತು. ಕಪಿಗಳನ್ನೆಲ್ಲ ಗೋಳಾಡಿಸುತ್ತಿದ್ದ ಇವರು ಹನುಮಂತನ ಮುಷ್ಟಿಪ್ರಯೋಗದಿಂದ ಅಸು ನೀಗುವರು.

### ಅತಿಕಾಯನೆಂಬ ಇನ್ನೊಬ್ಬ ಕುಂಭಕರ್ಣ

**ತತೋಽತಿಕಾಯೋಽತಿರಥೋ ರಥೇನ**
**ಸ್ವಯಂಭುದತ್ತೇನ ಹರೀನ್ ಪ್ರಮೃದ್ನನ್ ।**
**ಚಚಾರ ಕಾಲಾನಲಸನ್ನಿಕಾಶೋ**
**ಗಂಧರ್ವಿಕಾಯಾಂ ಜನಿತೋ ದಶಾಸ್ಯಾತ್ ॥ ೫೫ ॥**

ಪದಚ್ಛೇದ :- ತತಃ ಅತಿಕಾಯಃ ಅತಿರಥಃ ರಥೇನ ಸ್ವಯಂಭುದತ್ತೇನ ಹರೀನ್ ಪ್ರಮೃದ್ನನ್ । ಚಚಾರ ಕಾಲಾನಲಸನ್ನಿಕಾಶಃ ಗಂಧರ್ವಿಕಾಯಾಂ ಜನಿತಃ ದಶಾಸ್ಯಾತ್ ॥

**ಅರ್ಥ :- ತತಃ** ಐವರು ರಾಕ್ಷಸರ ಸಂಹಾರದ ನಂತರ **ಗಂಧರ್ವಿಕಾಯಾಂ** ಗಂಧರ್ವಕನ್ಯೆಯಲ್ಲಿ **ದಶಾಸ್ಯಾತ್** ಹತ್ತುಮುಖವುಳ್ಳ ರಾವಣನ ದೆಸೆಯಿಂದ **ಜನಿತಃ** ಜನಿಸಿದ **ಕಾಲಾನಲಸನ್ನಿಕಾಶಃ** ಪ್ರಳಯಕಾಲಾಗ್ನಿಗೆ ಸದೃಶನಾದ **ಅತಿರಥಃ** ಅತಿರಥನಾದ **ಅತಿಕಾಯಃ** ಅತಿಕಾಯನೆಂಬುವನು **ಸ್ವಯಂಭುದತ್ತೇನ** ಬ್ರಹ್ಮದೇವನಿಂದ ಕೊಡಲ್ಪಟ್ಟ **ರಥೇನ** ರಥದಿಂದ **ಹರೀನ್** ಕಪಿಗಳನ್ನು **ಪ್ರಮಥ್ನನ್** ಮರ್ದಿಸುವವನಾಗಿ **ಚಚಾರ** ಸಂಚರಿಸಿದನು.

**ತಾತ್ಪರ್ಯ :-** ಅತಿಕಾಯನೆಂಬ ಇನ್ನೊಬ್ಬ ಮಗನು ರಾವಣನಿಗಿದ್ದನು. ಗಂಧರ್ವಕನ್ಯೆಯಲ್ಲಿ ಜನಿಸಿದ ಇವನಿಗೆ ಪ್ರಳಯಕಾದ ಅಗ್ನಿಗೆ ಸದೃಶವಾದ ಸಾಮರ್ಥ್ಯವಿತ್ತು. ಬ್ರಹ್ಮದೇವರು ಕೊಟ್ಟ ರಥದಿಂದ ಇವನು ಕಪಿಗಳನ್ನೆಲ್ಲ ಪೀಡಿಸ ಹತ್ತಿದನು.

**ಬೃಹತ್ತನುಃ ಕುಂಭವದೇವ ಕರ್ಣಾ-**
**ವಸ್ಯೇತ್ಯತೋ ನಾಮ ಚ ಕುಂಭಕರ್ಣಃ ।**

**ತಾತ್ಪರ್ಯ** :- ಹೀಗೆ ಹನುಮಂತನು ದೇವಾಂತಕನನ್ನು ಸಂಹರಿಸುವನು. ಶಿವನ ವರಬಲವಿದ್ದರೂ ದೇವಾಂತಕನು ಹನುಮಂತನಿಂದ ಹತನಾದದ್ದನ್ನು ಕಂಡು ದೇವಶ್ರೇಷ್ಠರೆಲ್ಲರೂ ಹನುಮಂತನನ್ನು ಸ್ತುತಿಸುವರು. ಆಗ ಕಪಿಗಳೆಲ್ಲ ಹರ್ಷಿತರಾಗಿ ಇವನನ್ನು ನೋಡುವರು.

### ಹನುಮಂತನಿಂದ ತ್ರಿಶಿರನ ಸಂಹಾರ

**ವಿದ್ರಾವಿತಾಖಿಲಕಪಿಂ ವರಾತ್ ತ್ರಿಶಿರಸಂ ವಿಭೋಃ ।**
**ಭಂಕ್ತ್ವಾ ರಥಂ ಧನುಃ ಖಡ್ಗಮಾಚ್ಛಿದ್ಯಾಶಿರಸಂ ವ್ಯಧಾತ್ ॥ ೫೩ ॥**

ಪದಚ್ಛೇದ :- **ವಿದ್ರಾವಿತಾಖಿಲಕಪಿಂ ವರಾತ್ ತ್ರಿಶಿರಸಂ ವಿಭೋಃ । ಭಂಕ್ತ್ವಾ ರಥಂ ಧನುಃ ಖಡ್ಗಮ್ ಆಚ್ಛಿದ್ಯ ಅಶಿರಸಂ ವ್ಯಧಾತ್ ॥**

**ಅರ್ಥ** :- **ವಿಭೋಃ** ಬ್ರಹ್ಮದೇವನ **ವರಾತ್** ವರದದೆಸೆಯಿಂದ **ವಿದ್ರಾವಿತಾಖಿಲಕಪಿಂ** ಓಡಿಸಲ್ಪಟ್ಟ ಸಮಸ್ತಕಪಿಗಳುಳ್ಳ **ತ್ರಿಶಿರಸಂ** ತ್ರಿಶಿರಸನೆಂಬ ರಾಕ್ಷಸನನ್ನು **ರಥಂ** ಅವನ ರಥವನ್ನು **ಧನುಃ** ಧನುಸ್ಸನ್ನು **ಭಂಕ್ತ್ವಾ** ನಾಶಪಡಿಸಿ **ಖಡ್ಗಂ** ಖಡ್ಗವನ್ನು **ಆಚ್ಛಿದ್ಯ** ಸಳೆದು **ಅಶಿರಸಂ** ಶಿರರಹಿತನನ್ನಾಗಿ **ವ್ಯಧಾತ್** ಮಾಡಿದನು.

**ತಾತ್ಪರ್ಯ** :- ಬ್ರಹ್ಮನ ವರ ಬಲದಿಂದ ತ್ರಿಶಿರಸನೆಂಬ ರಾಕ್ಷಸನು ಸರ್ವ ಕಪಿಗಳನ್ನು ಹಿಮ್ಮೆಟ್ಟಿಸಿದ. ಆಗ ಹನುಮಂತನು ಅವನ ರಥ ಬಿಲ್ಲುಗಳನ್ನು ತುಂಡರಿಸಿ ಖಡ್ಗವನ್ನು ಕಿತ್ತು ತ್ರಿಶಿರನಾದ ಅವನನ್ನು ಮುಂಡದಿಂದ ಶಿರಸ್ಸನ್ನು ಭೇಧಿಸಿ ಅಶಿರಸ್ಕನನ್ನಾಗಿ ಮಾಡುವನು.

### ಹನುಮಂತನಿಂದ ಯುದ್ಧೋನ್ಮತ್ತಾದಿಗಳ ಸಂಹಾರ

**ಯುದ್ಧೋನ್ಮತ್ತಶ್ಚ ಮತ್ತಶ್ಚ ಪಾರ್ವತೀವರದರ್ಪಿತೌ ।**
**ಪ್ರಮಥಂತೌ ಕಪೀನ್ ಸರ್ವಾನ್ ಹತೌ ಮಾರುತಿಮುಷ್ಟಿನಾ ॥೫೪॥**

ಪದಚ್ಛೇದ :- ಯುದ್ಧೋನ್ಮತ್ತಃ ಚ ಮತ್ತಃ ಚ ಪಾರ್ವತೀವರದರ್ಪಿತೌ । ಪ್ರಮಥಂತೌ ಕಪೀನ್ ಸರ್ವಾನ್ ಹತೌ ಮಾರುತಿಮುಷ್ಟಿನಾ ॥

**ಅರ್ಥ** :- **ಪಾರ್ವತೀವರದರ್ಪಿತೌ** ಪಾರ್ವತೀದೇವಿಯ ವರಬಲದಿಂದ ಗರ್ವಿತರಾದ **ಸರ್ವಾನ್** ಆ ಎಲ್ಲ **ಕಪೀನ್** ಕಪಿಗಳನ್ನು **ಪ್ರಮಥ್ನಂತೌ**

ಸಂಕಷ್ಟಕ್ಕೀಡು ಮಾಡತಕ್ಕ **ಯುದ್ಧೋನ್ಮತ್ತಃ** ಯುದ್ಧೋನ್ಮತ್ತನೆಂಬುವನು **ಚ** ಮತ್ತು **ಮತ್ತಶ್ಚ** ಮತ್ತನೆಂಬುವನೂ ಕೂಡ **ಮಾರುತಿಮುಷ್ಟಿನಾ** ಹನುಮಂತನ ಮುಷ್ಟಿಯಿಂದ **ಹತೌ** ಸಂಹರಿಸಲ್ಪಟ್ಟರು.

**ತಾತ್ಪರ್ಯ** :- ಯುದ್ಧೋನ್ಮತ್ತ ಮತ್ತು ಮತ್ತರೆಂಬ ಇಬ್ಬರು ರಾಕ್ಷಸರಿಗೆ ಪಾರ್ವತಿಯ ವರಬಲವಿತ್ತು. ಕಪಿಗಳನ್ನೆಲ್ಲ ಗೋಳಾಡಿಸುತ್ತಿದ್ದ ಇವರು ಹನುಮಂತನ ಮುಷ್ಟಿಪ್ರಯೋಗದಿಂದ ಅಸು ನೀಗುವರು.

**ಅತಿಕಾಯನೆಂಬ ಇನ್ನೊಬ್ಬ ಕುಂಭಕರ್ಣ**

**ತತೋಽತಿಕಾಯೋಽತಿರಥೋ ರಥೇನ**
**ಸ್ವಯಂಭುದತ್ತೇನ ಹರೀನ್ ಪ್ರಮೃದ್ನನ್ ।**
**ಚಚಾರ ಕಾಲಾನಲಸನ್ನಿಕಾಶೋ**
**ಗಂಧರ್ವಿಕಾಯಾಂ ಜನಿತೋ ದಶಾಸ್ಯಾತ್ ॥ ೫೫ ॥**

ಪದಚ್ಛೇದ :– ತತಃ ಅತಿಕಾಯಃ ಅತಿರಥಃ ರಥೇನ ಸ್ವಯಂಭುದತ್ತೇನ ಹರೀನ್ ಪ್ರಮೃದ್ನನ್ । ಚಚಾರ ಕಾಲಾನಲಸನ್ನಿಕಾಶಃ ಗಂಧರ್ವಿಕಾಯಾಂ ಜನಿತಃ ದಶಾಸ್ಯಾತ್ ॥

**ಅರ್ಥ** :- **ತತಃ** ಐವರು ರಾಕ್ಷಸರ ಸಂಹಾರದ ನಂತರ **ಗಂಧರ್ವಿಕಾಯಾಂ** ಗಂಧರ್ವಕನ್ಯೆಯಲ್ಲಿ **ದಶಾಸ್ಯಾತ್** ಹತ್ತುಮುಖವುಳ್ಳ ರಾವಣನ ದೆಸೆಯಿಂದ **ಜನಿತಃ** ಜನಿಸಿದ **ಕಾಲಾನಲಸನ್ನಿಕಾಶಃ** ಪ್ರಳಯಕಾಲಾಗ್ನಿಗೆ ಸದೃಶನಾದ **ಅತಿರಥಃ** ಅತಿರಥನಾದ **ಅತಿಕಾಯಃ** ಅತಿಕಾಯನೆಂಬುವನು **ಸ್ವಯಂಭುದತ್ತೇನ** ಬ್ರಹ್ಮದೇವನಿಂದ ಕೊಡಲ್ಪಟ್ಟ **ರಥೇನ** ರಥದಿಂದ **ಹರೀನ್** ಕಪಿಗಳನ್ನು **ಪ್ರಮಥ್ನನ್** ಮರ್ದಿಸುವವನಾಗಿ **ಚಚಾರ** ಸಂಚರಿಸಿದನು.

**ತಾತ್ಪರ್ಯ** :- ಅತಿಕಾಯನೆಂಬ ಇನ್ನೊಬ್ಬ ಮಗನು ರಾವಣನಿಗಿದ್ದನು. ಗಂಧರ್ವಕನ್ಯೆಯಲ್ಲಿ ಜನಿಸಿದ ಇವನಿಗೆ ಪ್ರಳಯಕಾದ ಅಗ್ನಿಗೆ ಸದೃಶವಾದ ಸಾಮರ್ಥ್ಯವಿತ್ತು. ಬ್ರಹ್ಮದೇವರು ಕೊಟ್ಟ ರಥದಿಂದ ಇವನು ಕಪಿಗಳನ್ನೆಲ್ಲ ಪೀಡಿಸ ಹತ್ತಿದನು.

**ಬೃಹತ್ತನುಃ ಕುಂಭವದೇವ ಕರ್ಣಾ-**
**ವಸ್ಯೇತ್ಯತೋ ನಾಮ ಚ ಕುಂಭಕರ್ಣಃ ।**

ಇತ್ಯಸ್ಯ ಸೋಽರ್ಕಾತ್ಮಜಪೂರ್ವಕಾನ್ ಕಪೀನ್
ಜಿಗಾಯ ರಾಮಂ ಸಹಸಾಽಭ್ಯಧಾವತ್ ॥ ೫೬ ॥

ಪದಚ್ಛೇದ :- ಬೃಹತ್ತನುಃ ಕುಂಭವತ್ ಏವ ಕರ್ಣೌ ಅಸ್ಯ ಇತಿ ಅತಃ ನಾಮ ಚ ಕುಂಭಕರ್ಣಃ । ಇತಿ ಅಸ್ಯ ಸಃ ಅರ್ಕಾತ್ಮಜಪೂರ್ವಕಾನ್ ಕಪೀನ್ ಜಿಗಾಯ ರಾಮಂ ಸಹಸಾ ಅಭ್ಯಧಾವತ್ ॥

**ಅರ್ಥ :-** **ಯತಃ** ಯಾವಕಾರಣದಿಂದ **ಅಸ್ಯ** ಈ ಅತಿಕಾಯನಿಗೆ **ಬೃಹತ್ತನುಃ** ದೊಡ್ಡದಾದ ಶರೀರವೋ **ಅತಃ** ಆ ಕಾರಣದಿಂದ **ಅತಿಕಾಯಃ** ಅತಿಕಾಯನೆಂಬ **ನಾಮ** ಹೆಸರು **ಯತಃ** ಯಾವಕಾರಣದಿಂದ **ಅಸ್ಯ** ಇವನಿಗೆ **ಕುಂಭವದೇವ** ಮಡಿಕೆಯಂತೆಯೇ **ಕರ್ಣೌ** ಕಿವಿಗಳೋ **ಅತಃ** ಆ ಕಾರಣಕ್ಕಾಗಿ **ಕುಂಭಕರ್ಣಃ ಚ** ಕುಂಭಕರ್ಣನೆಂದೂ ಕೂಡ **ನಾಮ** ಹೆಸರು. **ಇತಿ** ಎಂದು **ಸಃ** ಆ ಅತಿ ಕಾಯನು **ಅರ್ಕಾತ್ಮಜಪೂರ್ವಾನ್** ರವಿಯಪುತ್ರನಾದ ಸುಗ್ರೀವನೇ ಮೊದಲಾದವರನ್ನು **ಜಿಗಾಯ** ಗೆದ್ದನು. **ಸಹಸಾ** ವೇಗದಿಂದ **ರಾಮಂ** ರಾಮನನ್ನು **ಅಭ್ಯಧಾವತ್** ಧಾವಿಸಿದನು.

**ತಾತ್ಪರ್ಯ :-** ರಾವಣನ ತಮ್ಮನಾದ ಕುಂಭಕರ್ಣನಿಗೆ ಇರುವಂತೆ ಅತಿಕಾಯನಿಗೂ ದೊಡ್ಡದಾದ ದೇಹ ಮಡಿಕೆಯಂತೆ ಕಿವಿಗಳಿರುವ ಪ್ರಯುಕ್ತ ಇವನಿಗೂ ಕುಂಭಕರ್ಣನೆಂಬ ಹೆಸರಿತ್ತು. ಇಂಥಹ ಇವನು ಯುದ್ಧದಲ್ಲಿ ಸುಗ್ರೀವನೇ ಮೊದಲಾದವರನ್ನು ಗೆದ್ದು ರಾಮನನ್ನು ಎದುರಿಸಲು ಧಾವಿಸುವನು.

### ಲಕ್ಷ್ಮಣ ಅತಿಕಾಯರ ಕಾಳಗ

ತಮಾಪತಂತಂ ಶರವರ್ಷಧಾರಂ
ಮಹಾಘನಾಭಂ ಸ್ತನಯಿತ್ನುಘೋಷಮ್ ।
ನಿವಾರಯಾಮಾಸ ಯಥಾ ಸಮೀರಃ
ಸೌಮಿತ್ರಿರಾತ್ತೇಷ್ವಸನಃ ಶರೌಘೈಃ ॥ ೫೭ ॥

ಪದಚ್ಛೇದ :- ತಮ್ ಆಪತಂತಂ ಶರವರ್ಷಧಾರಂ ಮಹಾಘನಾಭಂ ಸ್ತನಯಿತ್ನುಘೋಷಮ್ । ನಿವಾರಯಾಮಾಸ ಯಥಾ ಸಮೀರಃ ಸೌಮಿತ್ರಿಃ ಆತ್ತೇಷ್ವಸನಃ ಶರೌಘೈಃ ॥

**ಅರ್ಥ** :- **ಶರವರ್ಷಧಾರಂ** ಬಾಣಗಳೆಂಬ ವೃಷ್ಟಿಸಮೂಹವುಳ್ಳ **ಮಹಾ ಘನಾಭಂ** ಬೃಹತ್ತಾದ ಮೇಘದಂತೆ ಕಾಂತಿಯುಳ್ಳ **ಸ್ತನಯಿತ್ನುಘೋಷಂ** ಮೋಡಗಳ ಗರ್ಜನೆಯಂತೆ ಗರ್ಜನೆಯುಳ್ಳ **ಆಪತಂತಂ** ಅಭಿಮುಖವಾಗಿ ಆಗಮಿಸುತ್ತಿರುವ **ತಂ** ಆ ಅತಿಕಾಯನನ್ನು **ಆತ್ತೇಷ್ವಸನಃ** ಸ್ವೀಕರಿಸಲ್ಪಟ್ಟ ಧನುಸ್ಸುಳ್ಳ **ಸೌಮಿತ್ರಿಃ** ಲಕ್ಷ್ಮಣನು **ಶರೋಘೈಃ** ಬಾಣಗಳ ಸಮೂಹದಿಂದ **ಯಥಾ** ಹೇಗೆ **ಸಮೀರಃ** ಸಮೀರನೋ (**ತಥಾ** ಹಾಗೆಯೇ) **ನಿವಾರಯಾ ಮಾಸ** ಪ್ರತಿಬಂಧಿಸಿದನು.

**ತಾತ್ಪರ್ಯ** :- ಮೇಘದಂತೆ ಕಪ್ಪಾದ ಮೈಬಣ್ಣವುಳ್ಳ ಅತಿಕಾಯನು ಮೇಘದಂತೆ ಗರ್ಜಿಸುತ್ತಾ ಅಸಂಖ್ಯ ಬಾಣಗಳ ಮಳೆಯನ್ನೇ ಲಕ್ಷ್ಮಣನ ಮೇಲೆ ಸುರಿಸುತ್ತಾನೆ. ಇಂತಹ ಅತಿಕಾಯನನ್ನು ಲಕ್ಷ್ಮಣನು, ಮೇಘವನ್ನು ಗಾಳಿಯು ತಡೆ ಹಿಡಿಯುವಂತೆ ತನ್ನ ಬಾಣಗಳ ಸಮೂಹದಿಂದ ತಡೆಯುತ್ತಾನೆ.

**ವವರ್ಷತುಸ್ತಾವತಿಮಾತ್ರವೀರ್ಯೌ**
**ಶರಾನ್ ಸುರೇಶಾಶನಿತುಲ್ಯವೇಗಾನ್ ।**
**ತಮೋಮಯಂ ಚಕ್ರತುರಂತರಿಕ್ಷಂ**
**ಸ್ವಶಿಕ್ಷಯಾ ಕ್ಷಿಪ್ರತಮಾಸ್ತಬಾಣೈಃ ॥ ೫೮ ॥**

ಪದಚ್ಛೇದ :- ವವರ್ಷತುಃ ತೌ ಅತಿಮಾತ್ರವೀರ್ಯೌ ಶರಾನ್ ಸುರೇಶಾ ಶನಿತುಲ್ಯವೇಗಾನ್ । ತಮೋಮಯಂ ಚಕ್ರತುಃ ಅಂತರಿಕ್ಷಂ ಸ್ವಶಿಕ್ಷಯಾ ಕ್ಷಿಪರತಮಾಸ್ತಬಾಣೈಃ ॥

**ಅರ್ಥ** :- **ಅತಿಮಾತ್ರವೀರ್ಯೌ** ಅನ್ಯವೀರರ ಸಾಮರ್ಥ್ಯಕ್ಕಿಂತ ಅಧಿಕ ಸಾಮರ್ಥ್ಯವುಳ್ಳ **ತೌ** ಲಕ್ಷ್ಮಣ ಅತಿಕಾಯರು **ಸುರೇಶನಿತುಲ್ಯವೇಗಾನ್** ಸುರರಿಗೆ ಸ್ವಾಮಿಯಾದ ದೇವೇಂದ್ರನ ವಜ್ರಾಯುಧಕ್ಕೆ ಸಮಾನವಾದ ವೇಗ ವುಳ್ಳ **ಶರಾನ್** ಬಾಣಗಳನ್ನು **ವವರ್ಷತುಃ** ಮಳೆಯಂತೆ ಬಿಟ್ಟರು. **ಕ್ಷಿಪ್ರತಮಾಸ್ತ್ರ ಬಾಣೈಃ** ಅತಿವೇಗವುಳ್ಳ ಅಸ್ತ್ರಬಾಣಗಳಿಂದ **ಸುಶಿಕ್ಷಯಾ** ಒಳ್ಳೆಯ ಅಭ್ಯಾಸ ದಿಂದಲೂ **ಅಂತರಿಕ್ಷಂ** ಆಕಾಶವನ್ನು **ತಮೋಮಯಂ** ಅಂಧಕಾರದಿಂದ ವ್ಯಾಪ್ತ ವನ್ನಾಗಿ **ಚಕ್ರತುಃ** ಮಾಡಿದರು.

**ತಾತ್ಪರ್ಯ** :- ಇತರ ವೀರರ ಸಾಮರ್ಥ್ಯವನ್ನು ಮೀರಿಸುವ ಸಾಮರ್ಥ್ಯವುಳ್ಳ ಲಕ್ಷ್ಮಣ ಅತಿಕಾಯರು ಪರಸ್ಪರವಾಗಿ ಇಂದ್ರನ ವಜ್ರಾಯುಧದಂತೆ ವೇಗವುಳ್ಳ ಬಾಣಗಳ ಮಳೆಯನ್ನೇ ಸುರಿಸುವರು. ತಮಗೆ ದೊರೆತ ಉತ್ತಮ ಶಿಕ್ಷಣದಿಂದ ಅಸ್ತ್ರ ಬಾಣಗಳಿಂದ ಆಕಾಶವನ್ನು ಅಂಧಕಾರವನ್ನಾಗಿಸುವರು.

**ಶರೈಃ ಶರಾನಸ್ಯ ನಿವಾರ್ಯ ವೀರಃ**
**ಸೌಮಿತ್ರಿರಸ್ತ್ರಾಣಿ ಮಹಾಸ್ತ್ರಜಾಲೈಃ ।**
**ಚಿಚ್ಛೇದ ಬಾಹೂ ಶಿರಸಾ ಸಹೈವ**
**ಚತುರ್ಭುಜೋಽಭೂತ್ ಸ ಪುನರ್ದ್ವಿಶೀರ್ಷಃ ॥ ೫೯ ॥**

**ಪದಚ್ಛೇದ** :- ಶರೈಃ ಶರಾನ್ ಅಸ್ಯ ನಿವಾರ್ಯ ವೀರಃ ಸೌಮಿತ್ರಿಃ ಅಸ್ತ್ರಾಣಿ ಮಹಾಸ್ತ್ರಜಾಲೈಃ । ಚಿಚ್ಛೇದ ಬಾಹೂ ಶಿರಸಾ ಸಹ ಏವ ಚತುರ್ಭುಜಃ ಅಭೂತ್ ಸ ಪುನಃ ದ್ವಿಶೀರ್ಷಃ ॥

**ಅರ್ಥ** :- **ವೀರಃ** ವೀರನಾದ **ಸೌಮಿತ್ರಿಃ** ಲಕ್ಷ್ಮಣನು **ಅಸ್ಯ** ಈ ಅತಿಕಾಯನ **ಶರಾನ್** ಬಾಣಗಳನ್ನು **ಶರೈಃ** ಬಾಣಗಳಿಂದ **ನಿವಾರ್ಯ** ತಡೆದು **ಅಸ್ತ್ರಾಣಿ** ಅಸ್ತ್ರಗಳನ್ನು **ಮಹಾಸ್ತ್ರಜಾಲೈಃ** ಶ್ರೇಷ್ಠವಾದ ಅಸ್ತ್ರಗಳ ಸಮೂಹದಿಂದ (**ನಿವಾರ್ಯ** ತಡೆದು) **ಶಿರಸಾ** ಶಿರಸ್ಸಿನಿಂದ **ಸಹೈವ** ಕೂಡಿಕೊಂಡೇ **ಬಾಹೂ** ಕೈಗಳನ್ನು **ಚಿಚ್ಛೇದ** ಛೇದಿಸಿದನು. **ಸಃ** ಅತಿಕಾಯನು **ಪುನಃ** ಮತ್ತೊಮ್ಮೆ **ದ್ವಿಶೀರ್ಷಃ** ಎರಡು ತಲೆಗಳು **ಚತುರ್ಭುಜಃ** ನಾಲ್ಕುಕೈಗಳ್ಳವನು **ಅಭೂತ್** ಆದನು.

**ತಾತ್ಪರ್ಯ** : ಅತಿಕಾಯನು ಬಿಟ್ಟ ಬಾಣಗಳಿಗೆ ಪ್ರತಿಯಾಗಿ ಲಕ್ಷ್ಮಣನು ತನ್ನ ಬಾಣಗಳಿಂದ ಅವುಗಳನ್ನು ನಾಶಪಡಿಸುವನು. ಹಾಗೆಯೇ ಅವನು ಬಿಟ್ಟ ಅಸ್ತ್ರಗಳನ್ನು ಅದಕ್ಕಿಂತ ದೊಡ್ಡ ಅಸ್ತ್ರಗಳಿಂದ ನಿವಾರಿಸಿ ಅತಿಕಾಯನ ತಲೆಯೊಂದಿಗೆ ಅವನ ಕೈಗಳನ್ನೂ ತುಂಡರಿಸಿದನು. ಆದರೆ ಅವನು ಮರಣ ಹೊಂದದೆ ಎರಡು ತಲೆಗಳು ನಾಲ್ಕು ಕೈಗಳು ಅವನಿಗೆ ಮೂಡುತ್ತವೆ.

### ಹನುಮಂತನಿಂದ ರಹಸ್ಯ ಸೂಚನೆ

**ಭಿನ್ನೇಷು ತೇಷು ದ್ವಿಗುಣಾಸ್ಯಬಾಹುಃ**
**ಪುನಃಪುನಃ ಸೋಽಥ ಬಭೂವ ವೀರಃ ।**

ಉವಾಚ ಸೌಮಿತ್ರಿಮಥಾಂತರಾತ್ಮಾ
ಸಮಸ್ತಲೋಕಸ್ಯ ಮರುದ್ ವಿಷಣ್ಣಮ್ ॥ ೬೦ ॥

ಪದಚ್ಛೇದ : ಭಿನ್ನೇಷು ತೇಷು ದ್ವಿಗುಣಾಸ್ಯಬಾಹುಃ ಪುನಃಪುನಃ ಸಃ ಅಥ ಬಭೂವ ವೀರಃ । ಉವಾಚ ಸೌಮಿತ್ರಿಂ ಅಥ ಅಂತರಾತ್ಮಾ ಸಮಸ್ತಲೋಕಸ್ಯ ಮರುತ್ ವಿಷಣ್ಣಮ್ ॥

**ಅರ್ಥ** : **ತೇಷು** ಆ ನಾಲ್ಕುಬಾಹುಗಳು **ಭಿನ್ನೇಷು (ಸತ್ಸು)** ತುಂಡರಿಸಲ್ಪಡುತ್ತಿರಲು **ಅಥ** ಅನಂತರ **ವೀರಃ** ವೀರನಾದ **ಸಃ** ಆ ಅತಿಕಾಯನು **ಪುನಃಪುನಃ** ಮತ್ತೂ ಕೂಡ **ದ್ವಿಗುಣಾಸ್ಯಬಾಹುಃ** ಎರಡು ಪಟ್ಟು ವರ್ಧಿಸಿದ ತಲೆ ಬಾಹುಗಳುಳ್ಳವನು **ಬಭೂವ** ಆದನು. **ಅಥ** ಹೀಗೆ ನಡೆದನಂತರ **ಸಮಸ್ತಲೋಕಸ್ಯ** ಸಮಸ್ತಲೋಕದ **ಅಂತರಾತ್ಮಾ** ಒಳಗೆ ನಿಯಾಮಕನಾದ **ಮರುತ್** ಹನುಮಂತನು **ವಿಷಣ್ಣಂ** ಖಿನ್ನನಾದ **ಸೌಮಿತ್ರಿಂ** ಲಕ್ಷ್ಮಣನನ್ನು ಕುರಿತು **ಉವಾಚ** ಹೇಳಿದನು.

**ತಾತ್ಪರ್ಯ** :- ಲಕ್ಷ್ಮಣನು ಪುನಃ ಆ ಎರಡು ತಲೆಗಳನ್ನು ಹಾಗು ಬಾಹುಗಳನ್ನು ತುಂಡರಿಸುವನು. ಆದರೆ ಅವನು ಹೀಗೆ ತುಂಡರಿಸಿದಾಗೆಲ್ಲಾ ಹೆಚ್ಚು ಹೆಚ್ಚು ತಲೆಗಳು ಕೈಗಳು ಅತಿಕಾಯನಿಗೆ ಮೂಡುತ್ತವೆ. ಇದರಿಂದ ವ್ಯಾಕುಲಗೊಂಡ ಲಕ್ಷ್ಮಣನನ್ನು ಕುರಿತು ಜಗತ್ತಿಗೇ ಪ್ರಾಣಪ್ರೇರಕನಾದ ಹನುಮಂತನು ಹೀಗೆ ಹೇಳುವನು.

ಬ್ರಹ್ಮಾಸ್ತ್ರತೋಽನ್ಯೇನ ನ ವಧ್ಯ ಏಷ
ವರಾದ್ ವಿಧಾತುಃ ಸುಮುಖೇತ್ಯದೃಶ್ಯಃ ।
ರಕ್ಷಃಸುತಸ್ಯಾಶ್ರವಣೀಯಮಿತ್ಥ-
ಮುಕ್ತ್ವಾ ಸಮೀರೋಽರುಹದಂತರಿಕ್ಷಮ್ ॥ ೬೧ ॥

ಪದಚ್ಛೇದ : ಬ್ರಹ್ಮಾಸ್ತ್ರತಃ ಅನ್ಯೇನ ನ ವಧ್ಯಃ ಏಷಃ ವರಾತ್ ವಿಧಾತುಃ ಸುಮುಖ ಇತಿ ಅದೃಶ್ಯಃ । ರಕ್ಷಃಸುತಸ್ಯ ಅಶ್ರವಣೀಯಮ್ ಇತ್ಥಮ್ ಉಕ್ತ್ವಾ ಸಮೀರಃ ಅರುಹತ್ ಅಂತರಿಕ್ಷಮ್ ॥

**ಅರ್ಥ** : **ಅದೃಶ್ಯಃ** ಲಕ್ಷ್ಮಣನನ್ನು ಹೊರತು ಪಡಿಸಿ ಇತರರಿಗೆ ಗೋಚರಿಸದ **ಸಮೀರಃ** ಹನುಮಂತನು **ಹೇ ಸುಮುಖ** ಲಕ್ಷ್ಮಣನೇ **ಏಷಃ** ಈ ಅತಿಕಾಯನು

**ವಿಧಾತುಃ** ಬ್ರಹ್ಮದೇವನ **ವರಾತ್** ಅವಧ್ಯತ್ವರೂಪವಾದ ವರದಿಂದ **ಬ್ರಹ್ಮಾಸ್ತ್ರಾತ್** ಬ್ರಹ್ಮಾಸ್ತ್ರದ ದೆಸೆಯಿಂದ **ಅನ್ಯೇನ** ಬೇರೆ ಅಸ್ತ್ರದಿಂದ **ನ ವಧ್ಯಃ** ವಧಾರ್ಹನಲ್ಲ. **ಇತಿ** ಈ ರೀತಿಯಾಗಿ **ರಕ್ಷಃಸುತಸ್ಯ** ರಾವಣನ ಮಗನಾದ ಅತಿಕಾಯನಿಗೆ **ಅಶ್ರವಣೀಯಂ** ಶ್ರವಣೇಂದ್ರಿಯಕ್ಕೆ ಅಗೋಚರವು ಹೇಗೋ ಹಾಗೆಯೇ **ಇತ್ಥಂ** ಈ ಪ್ರಕಾರವಾಗಿ **ಉಕ್ತ್ವಾ** ಹೇಳಿ **ಅಂತರಿಕ್ಷಂ** ಆಕಾಶವನ್ನು **ಆರುಹತ್** ಏರಿದನು.

**ತಾತ್ಪರ್ಯ :-** 'ಲಕ್ಷ್ಮಣನೆ! ಅತಿಕಾಯನಿಗೆ ಬ್ರಹ್ಮದೇವನಿಂದ ಅವಧ್ಯತ್ವ ವರವಿರುವುದರ ಪ್ರಯುಕ್ತ ಅವನನ್ನು ಬ್ರಹ್ಮಾಸ್ತ್ರದಿಂದಲೇ ಸಂಹರಿಸು' ಎಂದು ಹನುಮಂತನು ಅತಿಕಾಯನಿಗೆ ಹಾಗು ಇತರರಿಗೆ ಕಾಣಿಸದಂತೆ ಕೇಳಿಸದಂತೆ ಅದೃಶ್ಯನಾಗಿ ಲಕ್ಷ್ಮಣನಿಗೆ ಮಾತ್ರ ಗೋಚರಿಸುವಂತೆ ಹೇಳಿ ಆಕಾಶದೆಡೆಗೆ ಹಾರುವನು.

### ಬ್ರಹ್ಮಾಸ್ತ್ರದಿಂದ ಅತಿಕಾಯನ ಸಂಹಾರ

**ಅಥಾನುಜೋ ದೇವತಮಸ್ಯ ಸೋಽಸ್ತ್ರಂ**
**ಬ್ರಾಹ್ಮಂ ತನೂಜೇ ದಶಕಂಧರಸ್ಯ ।**
**ಮುಮೋಚ ದಗ್ಧಃ ಸರಥಾಶ್ವಸೂತ-**
**ಸ್ತೇನಾತಿಕಾಯಃ ಪ್ರವರೋಽಸ್ತ್ರವಿತ್ಸು ॥ ೬೨ ॥**

ಪದಚ್ಛೇದ : ಅಥ ಅನುಜಃ ದೇವತಮಸ್ಯ ಸಃ ಅಸ್ತ್ರಂ ಬ್ರಾಹ್ಮಂ ತನೂಜೇ ದಶಕಂಧರಸ್ಯ । ಮುಮೋಚ ದಗ್ಧಃ ಸರಥಾಶ್ವಸೂತಃ ತೇನ ಅತಿಕಾಯಃ ಪ್ರವರಃ ಅಸ್ತ್ರವಿತ್ಸು ॥

**ಅರ್ಥ :- ಅಥ** ಅನಂತರ **ದೇವತಮಸ್ಯ** ದೇವೋತ್ತಮನಾದ ರಾಮನ **ಅನುಜಃ** ತಮ್ಮನಾದ **ಸಃ** ಆ ಲಕ್ಷ್ಮಣನು **ದಶಕಂಧರಸ್ಯ** ಹತ್ತು ತಲೆಯ ರಾವಣನ **ತನೂಜೇ** ತಮ್ಮನಾದ ಅತಿಕಾಯನಲ್ಲಿ **ಬ್ರಾಹ್ಮಂ** ಬ್ರಹ್ಮಸಂಬಂಧಿ ಅಸ್ತ್ರವನ್ನು **ಮುಮೋಚ** ಬಿಟ್ಟನು. **ಅಸ್ತ್ರವಿತ್ಸು** ಅಸ್ತ್ರಜ್ಞಾನಿಗಳಲ್ಲಿ **ಪ್ರವರಃ** ಉತ್ತಮನಾದ **ಅತಿಕಾಯಃ** ಅತಿಕಾಯನು **ತೇನ** ಆ ಬ್ರಹ್ಮಾಸ್ತ್ರದಿಂದ **ಸರಥಾಶ್ವಸೂತಃ** ರಥ ಕುದುರೆ ಸಾರಥಿಯೊಂದಿಗೆ **ದಗ್ಧಃ** ಸುಡಲ್ಪಟ್ಟನು.

**ತಾತ್ಪರ್ಯ :-** ಹನುಮಂತನು ಸೂಚಿಸಿದಂತೆ ಲಕ್ಷ್ಮಣನು ಅತಿಕಾಯನ ಮೇಲೆ ಬ್ರಹ್ಮಾಸ್ತ್ರವನ್ನು ಬಿಡುವನು. ಸಕಲ ಅಸ್ತ್ರಗಳ ಜ್ಞಾನವನ್ನು ಹೊಂದಿದ ಅತಿಕಾಯನೂ ಕೂಡ ಈ ಬ್ರಹ್ಮಾಸ್ತ್ರದಿಂದ ತನ್ನ ರಥ ಕುದುರೆ ಸಾರಥಿಯೊಂದಿಗೆ ತಾನು ಸಹ ಸುಟ್ಟು ಹೋಗುವನು.

ಮಕರಾಕ್ಷನ ಆಗಮನ

ಹತೇಷು ಪುತ್ರೇಷು ಸ ರಾಕ್ಷಸೇಶಃ
ಸ್ವಯಂ ಪ್ರಯಾಣಂ ಸಮರಾರ್ಥಮೈಚ್ಛತ್ ।
ಸಜ್ಜೀಭವತ್ಯೇವ ನಿಶಾಚರೇಶೇ
ಖರಾತ್ಮಜಃ ಪ್ರಾಹ ಧನುರ್ಧರೋತ್ತಮಃ ॥ ೬೩ ॥

ಪದಚ್ಛೇದ : ಹತೇಷು ಪುತ್ರೇಷು ಸ ರಾಕ್ಷಸೇಶಃ ಸ್ವಯಂ ಪ್ರಯಾಣಂ ಸಮರಾರ್ಥಮ್ ಐಚ್ಛತ್ । ಸಜ್ಜೀಭವತಿ ಏವ ನಿಶಾಚರೇಶೇ ಖರಾತ್ಮಜಃ ಪ್ರಾಹ ಧನುರ್ಧರೋತ್ತಮಃ ॥

**ಅರ್ಥ : ಪುತ್ರೇಷು** ಪುತ್ರರೆಲ್ಲರು **ಹತೇಷು (ಸತ್ಸು)** ಸಂಹರಿಸಲ್ಪಡುತ್ತಿರಲು **ರಾಕ್ಷಸೇಶಃ** ರಾಕ್ಷಸರ ಒಡೆಯನಾದ ರಾವಣನು **ಸ್ವಯಮೇವ** ತಾನಾಗಿಯೇ **ಸಮರಾರ್ಥಂ** ಯುದ್ಧಕ್ಕೋಸ್ಕರ **ಪ್ರಯಾಣಂ** ಪ್ರಯಾಣವನ್ನು **ಐಚ್ಛತ್** ಅಪೇಕ್ಷಿಸಿದನು. **ನಿಶಾಚರೇಶೇ** ರಾವಣನು **ಸಜ್ಜೀಭವತಿ (ಸತಿ)** ಸನ್ನದ್ಧನಾಗುತ್ತಿರಲು **ಧನುರ್ಧರೋತ್ತಮಃ** ಧನುರ್ಧಾರಿಗಳಲ್ಲಿ ಉತ್ತಮನಾದ **ಖರಾತ್ಮಜಃ** ಖರಾಸುರನ ಪುತ್ರನಾದ ಮಕರಾಕ್ಷನು **ಪ್ರಾಹ** ಹೇಳಿದನು.

**ತಾತ್ಪರ್ಯ :-** ಹೀಗೆ ತನ್ನ ಪುತ್ರರೆಲ್ಲರೂ ಸಂಹೃತರಾಗುತ್ತಿರಲು ಗತ್ಯಂತರವಿಲ್ಲದೇ ರಾವಣನೇ ಯುದ್ಧಕ್ಕೆ ಹೊರಡಲು ಅಣಿಯಾಗುವನು. ಅಷ್ಟರಲ್ಲಿಯೇ ಖರಾಸುರನ ಮಗನೂ ಬಿಲ್ಲುಗಾರರಲ್ಲಿ ಉತ್ತಮ ಪಟುವೂ ಆದ 'ಮಕರಾಕ್ಷ'ನೆಂಬ ರಾಕ್ಷಸನು ರಾವಣನಿಗೆ ಹೀಗೆ ಹೇಳುವನು.

ನಿಯುಂಕ್ಷ್ವ ಮಾಂ ಮೇ ಪಿತುರಂತಕಸ್ಯ
ವಧಾಯ ರಾಜನ್ ಸಹಲಕ್ಷ್ಮಣಂ ತಮ್ ।
ಕಪಿಪ್ರವೀರಾಂಶ್ಚ ನಿಹತ್ಯ ಸರ್ವಾನ್
ಪ್ರತೋಷಯೇ ತ್ವಾಮಹಮದ್ಯ ಸುಷ್ಠು ॥ ೬೪ ॥

ಪದಚ್ಛೇದ : ನಿಯುಂಕ್ಷ್ವ ಮಾಂ ಮೇ ಪಿತುಃ ಅಂತಕಸ್ಯ ವಧಾಯ ರಾಜನ್ ಸಹಲಕ್ಷ್ಮಣಂ ತಮ್ । ಕಪಿಪ್ರವೀರಾನ್ ಚ ನಿಹತ್ಯ ಸರ್ವಾನ್ ಪ್ರತೋಷಯೇ ತ್ವಾಮ್ ಅಹಮ್ ಅದ್ಯ ಸುಷ್ಠು ॥

**ಅರ್ಥ** :- **ಹೇ ರಾಜನ್** ಹೇ ರಾವಣನೇ **ಮೇ** ನನ್ನ **ಪಿತುಃ** ತಂದೆಯಾದ ಖರನಿಗೆ **ಮೃತ್ಯುಃ** ಮೃತ್ಯುಪ್ರದನಾದ ಶ್ರೀರಾಮನ **ವಧಾಯ** ಸಂಹಾರಕ್ಕಾಗಿ **ಮಾಂ** ನನ್ನನ್ನು **ನಿಯುಂಕ್ಷ್ವ** ನಿಯಮಿಸು. **ಸಹಲಕ್ಷ್ಮಣಂ** ಲಕ್ಷ್ಮಣನೊಂದಿಗೆ ಕೂಡಿದ **ತಂ** ಆ ರಾಮನನ್ನು **ಚ** ಮತ್ತು **ಸರ್ವಾನ್** ಆ ಎಲ್ಲಾ **ಕಪಿಪ್ರವೀರಾನ್** ಕಪಿವೀರರನ್ನು **ನಿಹತ್ಯ** ವಧಿಸಿ **ಅಹಂ** ನಾನು **ತಾಂ** ನಿನ್ನನ್ನು **ಅದ್ಯ** ಈ ದಿನವೇ **ಪ್ರತೋಷಯೇ** ಸಂತೋಷಪಡಿಸುವೆ.

**ತಾತ್ಪರ್ಯ** :- 'ಎಲೈ ರಾಜನೇ! ನನ್ನ ತಂದೆಯಾದ ಖರನನ್ನು ಸಂಹರಿಸಿದ ರಾಮನನ್ನು ನಾನು ಸಂಹರಿಸುವೆ. ನನಗೆ ಆಜ್ಞೆ ಕೊಡು. ಕೇವಲ ರಾಮನನ್ನಲ್ಲದೇ ಲಕ್ಷ್ಮಣನೊಂದಿಗೆ ಎಲ್ಲ ಕಪಿಗಳನ್ನೂ ಈ ಕೂಡಲೇ ಸಂಹರಿಸಿ ನಿನಗೆ ನಾನು ಸಂತೋಷವನ್ನುಂಟುಮಾಡುವೆ.'

**ಇತೀರಿತೇಽನೇನ ನಿಯೋಜಿತಃ ಸ**
**ಜಗಾಮ ವೀರೋ ಮಕರಾಕ್ಷನಾಮಾ ।**
**ವಿಧೂಯ ಸರ್ವಾಂಶ್ಚ ಹರಿಪ್ರವೀರಾನ್**
**ಸಹಾಂಗದಾನ್ ಸೂರ್ಯಸುತೇನ ಸಾಕಮ್ ॥ ೬೫ ॥**

ಪದಚ್ಛೇದ : ಇತಿ ಈರಿತೇ ಅನೇನ ನಿಯೋಜಿತಃ ಸಃ ಜಗಾಮ ವೀರಃ ಮಕರಾಕ್ಷನಾಮಾ । ವಿಧೂಯ ಸರ್ವಾನ್ ಚ ಹರಿಪ್ರವೀರಾನ್ ಸಹಾಂಗದಾನ್ ಸೂರ್ಯಸುತೇನ ಸಾಕಮ್ ॥

**ಅರ್ಥ** :- **ಇತಿ** ಈ ಪ್ರಕಾರವಾಗಿ **ಈರಿತೇ** (ಸತಿ) ಹೇಳಲ್ಪಡುತ್ತಿರಲು **ಅನೇನ** ಆ ರಾವಣನಿಂದ **ನಿಯೋಜಿತಃ** ಆದೇಶಿಸಲ್ಪಟ್ಟ **ವೀರಃ** ವೀರನಾದ **ಸಃ** ಆ **ಮಕರಾಕ್ಷನಾಮಾ** ಮಕರಾಕ್ಷನೆಂಬುವನು **ಸಹಾಂಗದಾನ್** ಅಂಗದನಿಂದ ಕೂಡಿ **ಸೂರ್ಯಸುತೇನ** ಸುಗ್ರೀವನಿಂದ **ಸಾಕಂ** ಕೂಡಿಕೊಂಡು **ಸರ್ವಾನ್** ಸಮಸ್ತ **ಹರಿಪ್ರವೀರಾನ್** ಕಪಿವೀರರನ್ನು **ವಿಧೂಯ** ಕೆಡವಿ **ಜಗಾಮ** ಹೊರಟನು.

**ತಾತ್ಪರ್ಯ** :- ರಾವಣನ ಅಪ್ಪಣೆಯನ್ನು ಪಡೆದ ಮಕರಾಕ್ಷನು ತನ್ನ ಮುಂದೆ ಬಂದ ಅಂಗದ ಸುಗ್ರೀವರೊಂದಿಗೆ ಎಲ್ಲಾ ಕಪಿಗಳನ್ನೂ ಜಯಿಸಿ ಮುಂದಕ್ಕೆ ಹೋಗುತ್ತಾನೆ.

ಅಚಿಂತಯನ್ ಲಕ್ಷ್ಮಣಬಾಣಸಂಘಾ-
ನವಜ್ಞಯಾ ರಾಮಮಥಾऽಹ್ವಯದ್ ರಣೇ ।
ಉವಾಚ ರಾಮಂ ರಜನೀಚರೋऽಸೌ
ಹತೋ ಜನಸ್ಥಾನಗತಃ ಪಿತಾ ತ್ವಯಾ ॥ ೬೬ ॥

ಪದಚ್ಛೇದ : ಅಚಿಂತಯನ್ ಲಕ್ಷ್ಮಣಬಾಣಸಂಘಾನ್ ಅವಜ್ಞಯಾ ರಾಮಂ ಅಥ ಆಹ್ವಯತ್ ರಣೇ । ಉವಾಚ ರಾಮಂ ರಜನೀಚರಃ ಅಸೌ ಹತಃ ಜನಸ್ಥಾನಗತಃ ಪಿತಾ ತ್ವಯಾ ॥

**ಅರ್ಥ** :- **ಅಥ** ಅನಂತರ **ರಜನೀಚರಃ** ರಾತ್ರಿಯಲ್ಲಿ ಸಂಚರಿಸುವ **ಅಸೌ** ಈ ಮಕರಾಕ್ಷನು **ಲಕ್ಷ್ಮಣಬಾಣಸಂಘಾನ್** ಲಕ್ಷ್ಮಣನ ಬಾಣಗಳ ಸಮೂಹವನ್ನು **ಅವಜ್ಞಯಾ** ಅಸಡ್ಡೆಯಿಂದ **ಅಚಿಂತಯನ್** ಲೆಕ್ಕಿಸದೆ **ರಾಮಂ** ಶ್ರೀರಾಮನನ್ನು **ರಣೇ** ಯುದ್ಧಕ್ಕಾಗಿ **ಆಹ್ವಯತ್** ಆಹ್ವಾನಿಸಿದನು. **ರಾಮಂ** ರಾಮನನ್ನು ಕುರಿತು **ಉವಾಚ** ಹೇಳಿದನು. **ಜನಸ್ಥಾನಗತಃ** ದಂಡಕಾರಣ್ಯದಲ್ಲಿ ಇದ್ದ **ಪಿತಾ** ತಂದೆಯಾದ ಖರನು **ತ್ವಯಾ** ನಿನ್ನಿಂದ **ಹತಃ** ಕೊಲ್ಲಲ್ಪಟ್ಟನು.

**ತಾತ್ಪರ್ಯ** :- ಮುಂದಕ್ಕೆ ಸಾಗಿ ಹೊರಟ ಮಕರಾಕ್ಷನಿಗೆ ಲಕ್ಷ್ಮಣನು ಅಸಂಖ್ಯಾತ ಬಾಣಗಳನ್ನು ಬಿಟ್ಟು ಅವನನ್ನು ತಡೆಯಲು ಪ್ರಯತ್ನಿಸುವನು. ಆದರೆ ಇವನ್ನು ಉಪೇಕ್ಷಿಸಿದ ಮಕರಾಕ್ಷನು ರಾಮನನ್ನೇ ಯುದ್ಧಕ್ಕೆ ಕರೆದು 'ಎಲೈ ರಾಮನೇ ದಂಡಕಾರಣ್ಯದಲ್ಲಿ ವಾಸವಾಗಿದ್ದ ತಂದೆಯನ್ನು ನೀನೇ ಕೊಂದಿದವನಾಗಿರುವೆ' ಎಂದನು.

### ರಾಮನಿಂದ ಮಕರಾಕ್ಷನ ವಧೆ

ಕೇನಾಪ್ಯುಪಾಯೇನ ಧನುರ್ಧರಾಣಾಂ
ವರಃ ಫಲಂ ತಸ್ಯ ದದಾಮಿ ತೇऽದ್ಯ ।
ಇತಿ ಬ್ರುವಾಣಃ ಸ ಸರೋಜಯೋನೇ-
ರ್ವರಾದವಧ್ಯೋऽಮುಚದಸ್ತ್ರಸಂಘಾನ್ ॥ ೬೭ ॥

ಪದಚ್ಛೇದ : ಕೇನ ಅಪಿ ಉಪಾಯೇನ ಧನುರ್ಧರಾಣಾಂ ವರಃ ಫಲಂ ತಸ್ಯ ದದಾಮಿ ತೇ ಅದ್ಯ । ಇತಿ ಬ್ರುವಾಣಃ ಸ ಸರೋಜಯೋನೇಃ ವರಾತ್ ಅವಧ್ಯಃ ಅಮುಚತ್ ಅಸ್ತ್ರಸಂಘಾನ್ ॥

**ಅರ್ಥ :- ಧನುರ್ಧರಾಣಾಂ** ಧನುರ್ಧಾರಿಗಳಲ್ಲಿ **ವರಃ** ಶ್ರೇಷ್ಠನಾದ ಖರನು **ಕೇನಾಽಪಿ** ಯಾವುದೋ ಒಂದು **ಉಪಾಯೇನ** ಉಪಾಯದಿಂದ (**ತ್ವಯಾ** ನಿನ್ನಿಂದ **ಹತಃ** ಕೊಲ್ಲಲ್ಪಟ್ಟನು) **ತಸ್ಯ** ಅದರ **ಫಲಂ** ಫಲವನ್ನು **ತೇ** ನಿನಗೆ **ಅದ್ಯ** ಈಗಲೇ **ದದಾಮಿ** ಕೊಡುವೆನು. **ಇತಿ** ಈ ಪ್ರಕಾರವಾಗಿ **ಬ್ರುವಾಣಃ** ಹೇಳುತ್ತಿರುವ **ಸರೋಜಯೋನೇಃ** ಪದ್ಮವು ಕಾರಣವಾಗಿಉಳ್ಳ ಬ್ರಹ್ಮದೇವನ **ವರಾತ್** ವರದಿಂದ **ಅವಧ್ಯಃ** ಅವಧ್ಯನಾದ **ಸಃ** ಆ ಮಕರಾಕ್ಷನು **ಅಸ್ತ್ರಸಂಘಾನ್** ಅಸ್ತ್ರಗಳ ಸಮೂಹವನ್ನೇ **ಅಮುಚತ್** ಬಿಟ್ಟನು.

**ತಾತ್ಪರ್ಯ :-** 'ಎಲೈ ರಾಮನೇ! ನೀನು ಉತ್ತಮಬಿಲ್ಲುಗಾರನಾದ ನನ್ನ ತಂದೆಯನ್ನು ಯಾವುದೋ ಮಂತ್ರೌಷಧಿ ಉಪಾಯದಿಂದ ಸಂಹರಿಸಿರುವಿ ಹೊರತು ಅಸ್ತ್ರಗಳ ಬಲದಿಂದಲ್ಲ. ಅದರ ಫಲ ಈಗಲೇ ನಿನಗೆ ಕೊಡುವವ ನಾಗಿರುವೆ ತೆಗೆದುಕೊ' ಎಂದ ಮಕರಾಕ್ಷನು ಬ್ರಹ್ಮನ ವರಬಲದಿಂದ ಅವಧ್ಯ ನಾದ ಇವನು ರಾಮನ ಮೇಲೆ ಬಾಣಗಳ ಮಳೆಯನ್ನೇ ಸುರಿಸುತ್ತಾನೆ.

**ಪ್ರಹಸ್ಯ ರಾಮೋಽಸ್ಯ ನಿವಾರ್ಯ ಚಾಸ್ತ್ರೈ-**
**ರಸ್ತ್ರಾಣ್ಯಮೇಯೋಽಶನಿಸನ್ನಿಭೇನ ।**
**ಶಿರಃ ಶರೇಣೋತ್ತಮಕುಂಡಲೋಜ್ಜ್ವಲಂ**
**ಖರಾತ್ಮಜಸ್ಯಾಥ ಸಮುನ್ಮಮಾಥ ॥ ೬೮ ॥**

ಪದಚ್ಛೇದ : ಪ್ರಹಸ್ಯ ರಾಮಃ ಅಸ್ಯ ನಿವಾರ್ಯ ಚ ಅಸ್ತ್ರೈಃ ಅಸ್ತ್ರಾಣಿ ಅಮೇಯಃ ಅಶನಿಸನ್ನಿಭೇನ । ಶಿರಃ ಶರೇಣೋತ್ತಮಕುಂಡಲೋಜ್ಜ್ವಲಂ ಖರಾತ್ಮಜಸ್ಯ ಅಥ ಸಮುನ್ಮಮಾಥ ॥

**ಅರ್ಥ :- ಅಮೇಯಃ** ತಿಳಿಯಲು ಅಶಕ್ಯನಾದ **ರಾಮಃ** ಶ್ರೀರಾಮನು **ಪ್ರಹಸ್ಯ** ಮಂದಹಾಸಬೀರಿ **ಅಥ** ಅನಂತರ **ಅಸ್ಯ** ಈ ಮಕರಾಕ್ಷನ **ಅಸ್ತ್ರಾಣಿ** ಅಸ್ತ್ರಗಳನ್ನು **ಅಸ್ತ್ರೈಃ** ಅಸ್ತ್ರಗಳಿಂದ **ನಿವಾರ್ಯ** ನಿವಾರಿಸಿ **ಚ** ಮತ್ತು **ಅಶನಿಸನ್ನಿಭೇನ** ವಜ್ರಾ ಯುಧಕ್ಕೆ ಸಮಾನವಾದ **ಶರೇಣ** ಬಾಣದಿಂದ **ಉತ್ತಮಕುಂಡಲೋಜ್ವಲಂ** ಶ್ರೇಷ್ಠವಾದ ಕುಂಡಲುಗಳಿಂದ ಶೋಭಿಸುವ **ಖರಾತ್ಮಜಸ್ಯ** ಖರನ ಪುತ್ರನಾದ ಮಕರಾಕ್ಷನ **ಶಿರಃ** ತಲೆಯನ್ನು **ಸಮುನ್ಮಮಾಥ** ಚೆನ್ನಾಗಿ ಛೇದಿಸುವನು.

**ತಾತ್ಪರ್ಯ** : ಮಕರಾಕ್ಷನು ಬಿಟ್ಟ ಎಲ್ಲಾ ಬಾಣಗಳನ್ನೂ ಮಂದಹಾಸದಿಂದ ನಾಶಪಡಿಸಿದ ಶ್ರೀರಾಮನು ವಜ್ರಾಯುಧಕ್ಕೆ ಸದೃಶವಾದ ಒಂದು ಬಾಣವನ್ನ ಪ್ರಯೋಗಿಸುತ್ತಾನೆ. ಅದು ಉತ್ತಮ ಕುಂಡಲಗಳಿಂದ ಹೊಳೆಯುತ್ತಿದ್ದ ಮಕರಾಕ್ಷನ ಶಿರಸನ್ನು ಛೇದಿಸುತ್ತದೆ.

ರಾವಣನ ರಣಪರಾಕ್ರಮ

**ವಿದುದ್ರುವುಸ್ತಸ್ಯ ತು ಯೇऽನುಯಾಯಿನಃ**
**ಕಪಿಪ್ರವೀರೈರ್ನಿಹತಾವಶೇಷಿತಾಃ ।**
**ಯಥೈವ ಧೂಮ್ರಾಕ್ಷಮುಖೇಷು**
**ಪೂರ್ವಂ ಹತೇಷು ಪೃಥ್ವೀರುಹಶೈಲಧಾರಿಭಿಃ ॥ ೬೯ ॥**

**ಪದಚ್ಛೇದ** : ವಿದುದ್ರುವುಃ ತಸ್ಯ ತು ಯೇ ಅನುಯಾಯಿನಃ ಕಪಿಪ್ರವೀರೈಃ ನಿಹತಾವಶೇಷಿತಾಃ । ಯಥಾ ಏವ ಧೂಮ್ರಾಕ್ಷಮುಖೇಷು ಪೂರ್ವಂ ಹತೇಷು ಪೃಥ್ವೀರುಹಶೈಲಧಾರಿಭಿಃ ॥

**ಅರ್ಥ** :- **ಪೃಥ್ವೀರುಹಶೈಲಧಾರಿಭಿಃ** ವೃಕ್ಷಗಳು ಪರ್ವತಗಳೂ ಇವುಗಳನ್ನು ಧರಿಸಿರುವ **ಕಪಿಪ್ರವೀರೈಃ ತು** ಕಪಿವೀರರಿಂದಲಾದರೂ **ನಿಹತಾವಶೇಷಿತಾಂ** ಸಂಹರಿಸಿ ಉಳಿದಿರುವ **ತಸ್ಯ** ಆ ಮಕರಾಕ್ಷನ **ಯೇ** ಯಾವ **ಅನುಯಾಯಿನಃ** ಅನುಚರರಿರುವರೋ (**ತೇ** ಅವರೆಲ್ಲರೂ) **ಪೂರ್ವಂ** ಹಿಂದೆಯೇ **ಧೂಮ್ರಾಕ್ಷ ಮುಖೇಷು** ಧೂಮ್ರಾಕ್ಷರೇ ಮೊದಲಾದ ಪ್ರಮುಖರು **ಹತೇಷು (ಸತ್ಸು)** ಮರಣ ಹೊಂದ ಲ್ಪಡುತ್ತಿರಲು **ಯಥೈವ** ಹೇಗೆ ಪಲಾಯನಗೈದರೋ (**ತಥೈವ** ಹಾಗೆಯೇ) **ಪ್ರದುದ್ರುವುಃ** ಪಲಾಯನಗೈದರು.

**ತಾತ್ಪರ್ಯ** : ಮಕರಾಕ್ಷನ ಅನುಚರರೆಲ್ಲರನ್ನೂ ಕಪಿಗಳು ವೃಕ್ಷಪರ್ವತಗಳಿಂದ ಹೊಡೆದು ಸಂಹರಿಸುತ್ತಾರೆ. ಅಲ್ಲಿ ಉಳಿದ ಕೆಲವರು ಹಿಂದೆ ಧೂಮ್ರಾಕ್ಷನ ವಧೆಯ ನಂತರ ಸಹಚರರೆಲ್ಲರೂ ಓಡಿದಂತೆ ಓಡಿದರು.

**ತತಃ ಸ ಸಜ್ಜೀಕೃತಮಾತ್ತಧನ್ವಾ**
**ರಥಂ ಸಮಾಸ್ಥಾಯ ನಿಶಾಚರೇಶ್ವರಃ ।**
**ವೃತಃ ಸಹಸ್ರಾಯುತಕೋಟ್ಯನೀಕಪೈಃ**
**ನಿಶಾಚರೈರಾಶು ಯಯೌ ರಣಾಯ ॥ ೭೦ ॥**

ಪದಚ್ಛೇದ : ತತಃ ಸ ಸಜ್ಜೀಕೃತಂ ಆತ್ತಧನ್ವಾ ರಥಂ ಸಮಾಸ್ಥಾಯ ನಿಶಾಚರೇಶ್ವರಃ। ವೃತಃ ಸಹಸ್ರಾಯುತಕೋಟ್ಯನೀಕಪೈಃ ನಿಶಾಚರೈಃ ಆಶು ಯಯೌ ರಣಾಯ ॥

ಅರ್ಥ :- ತತಃ ಅನಂತರ ಸಜ್ಜೀಕೃತಃ ಯುದ್ಧಸಾಮಗ್ರಿಗಳಿಂದ ಕೂಡಿದ ಆತ್ತಧನ್ವಾ ಸ್ವೀಕರಿಸಲ್ಪಟ್ಟ ಧನುಸ್ಸುಳ್ಳ ಸಹಸ್ರಾಯುತಕೋಟ್ಯನೀಕಪೈಃ ಹತ್ತು ಸಹಸ್ರಕೋಟಿ ಸೇನಾಧಿಪತಿಗಳಿಂದ ನಿಶಾಚರೈಃ ರಾಕ್ಷಸರಿಂದ ವೃತಃ ಆವರಿಸಲ್ಪಟ್ಟ ನಿಶಾಚರೇಶ್ವರಃ ನಿಶಾಚರರಿಗೆ ರಾಜನಾದ ಸಃ ಆ ರಾವಣನು ಆಶು ಕೂಡಲೆ ರಥಂ ರಥನ್ನು ಸಮಾಸ್ಥಾಯ ಏರಿ ರಣಾಯ ಯುದ್ಧಕ್ಕಾಗಿ ಯಯೌ ಹೊರಟನು.

ತಾತ್ಪರ್ಯ :- ಹತ್ತುಸಾವಿರ ಕೋಟಿ ಸೇನಾಧಿಪತಿಗಳು ರಾವಣನೊಂದಿಗೆ ಯುದ್ಧಕ್ಕೆ ಹೊರಡಲು ತಮ್ಮ ಧನುಸ್ಸುಗಳೊಂದಿಗೆ ಯುದ್ಧಸಾಮಗ್ರಿಗಳನ್ನು ಸಿದ್ಧಪಡಿಸುತ್ತಾರೆ. ಇವರೊಂದಿಗೆ ರಾವಣನು ಕೂಡಲೇ ಯುದ್ಧಕ್ಕೆ ಹೊರಟನು.

ಬಲೈಸ್ತು ತಸ್ಯಾಥ ಬಲಂ ಕಪೀನಾಂ
ನೈಕಪ್ರಕಾರಾಯುಧಪೂಗಭಗ್ನಮ್ ।
ದಿಶಃ ಪ್ರದುದ್ರಾವ ಹರೀಂದ್ರಮುಖ್ಯಾಃ
ಸಮಾರ್ದಯನ್ನಾಶು ನಿಶಾಚರಾಂಸ್ತದಾ ॥ ೭೧ ॥

ಪದಚ್ಛೇದ : ಬಲೈಃ ತು ತಸ್ಯ ಅಥ ಬಲಂ ಕಪೀನಾಂ ನೈಕಪ್ರಕಾರಾಯುಧ ಪೂಗಭಗ್ನಮ್ । ದಿಶಃ ಪ್ರದುದ್ರಾವ ಹರೀಂದ್ರಮುಖ್ಯಾಃ ಸಮಾರ್ದಯನ್ ಆಶು ನಿಶಾಚರಾನ್ ತದಾ ॥

ಅರ್ಥ :- ಅಥ ಅನಂತರ ತಸ್ಯ ಆ ರಾವಣನ ಬಲೈಃ ತು ಸೈನಿಕರಿಂದಲಾದರೋ ನೈಕಪ್ರಕಾರಾಯುಧಪೂಗಭಗ್ನಮ್ ಅನೇಕ ತೆರನಾದ ಆಯುಧಗಳ ಸಮೂಹದಿಂದ ಪರಾಭವವನ್ನು ಹೊಂದಿದ ಕಪೀನಾಂ ಕಪಿಗಳ ಬಲಂ ಸೈನ್ಯವು ದಿಶಃ ದಿಕ್ಕುಗಳನ್ನು ಕುರಿತು ಪ್ರದುದ್ರಾವ ಪಲಾಯನ ಗೈಯಿತು. ತದಾ ಆ ಸಮಯದಲ್ಲಿ ಆಶು ಆ ಕೂಡಲೇ ಹರೀಂದ್ರಮುಖ್ಯಾಃ ಕಪಿಗಳಲ್ಲಿ ಮುಖ್ಯರಾದವರು ನಿಶಾಚರಾನ್ ರಾಕ್ಷಸರನ್ನು ಸಮರ್ದಯನ್ ತೊಂದರೆಯನ್ನುಂಟುಮಾಡಿದರು.

ತಾತ್ಪರ್ಯ :- ರಾವಣನ ಸೈನ್ಯವು ಕಪಿಸೈನಿಕರ ಮೇಲೆ ಅನೇಕವಿಧವಾದ ಅಸ್ತ್ರಶಸ್ತ್ರಗಳನ್ನು ಪ್ರಯೋಗಿಸಿ ಯುದ್ಧವನ್ನ ಮಾಡುತ್ತಾರೆ. ಇದರಿಂದ ಕಪಿಸೈನ್ಯವು

ದಿಕ್ಕಾಪಾಲಾಗಿ ಓಡುತ್ತದೆ. ಆಗ ಕೂಡಲೇ ಕಪಿಸೈನ್ಯದ ಪ್ರಮುಖರೆಲ್ಲರೂ ರಾಕ್ಷಸ ಸೈನ್ಯದ ಮೇಲೆ ಆಕ್ರಮಣಗೈದು ಹಾನಿಯನ್ನುಂಟುಮಾಡಿದರು.

### ಗಜಾದಿಕಪಿಗಳ ಶೌರ್ಯ

ಗಜೋ ಗವಾಕ್ಷೋ ಗವಯೋ ವೃಷಶ್ಚ
ಸಗಂಧಮಾದಾ ಧನದೇನ ಜಾತಾಃ ।
ಪ್ರಾಣಾದಯಃ ಪಂಚ ಮರುತ್ಪ್ರವೀರಾಃ
ಸ ಕತ್ಥನೋ ವಿತ್ತಪತಿಶ್ಚ ಜಘ್ನುಃ ॥ ೭೨ ॥

ಪದಚ್ಛೇದ : ಗಜಃ ಗವಾಕ್ಷಃ ಗವಯಃ ವೃಷಃ ಚ ಸಗಂಧಮಾದಾಃ ಧನದೇನ ಜಾತಾಃ ಪ್ರಾಣಾದಯಃ ಪಂಚ ಮರುತ್ಪ್ರವೀರಾಃ ಸಃ ಕತ್ಥನಃ ವಿತ್ತಪತಿಃ ಚ ಜಘ್ನುಃ ॥

**ಅರ್ಥ :** **ಮರುತ್ಪ್ರವೀರಾಃ** ಮರುದ್ಗಣದಲ್ಲಿ ಪ್ರಧಾನರಾದ **ಪಂಚ** ಐವರು **ಪ್ರಾಣಾದಯಃ** ಪ್ರಾಣಾದಿಗಳು **ಗಜಃ** ಗಜನು **ಗವಾಕ್ಷಃ** ಗವಾಕ್ಷನು **ಗವಯಃ** ಗವಯನೆಂಬುವನು **ಸಗಂಧಮಾದಾಃ** ಗಂಧಮಾದನನಿಂದ ಕೂಡಿದ **ವೃಷಶ್ಚ** ವೃಷನೆಂಬುವನೂ ಕೂಡ **ಧನದೇನ** ಕುಬೇರನಿಂದ **ಜಾತಾಃ** ಹುಟ್ಟಿದವರು. **ಸಃ** ಆ ಪ್ರಸಿದ್ಧನಾದ **ವಿತ್ತಪತಿಶ್ಚ** ಕುಬೇರನಾದರೋ **ಕತ್ಥನಃ** ಕತ್ಥನ ಎಂಬ ಕಪಿಯು (ತೇ ಇವರೆಲ್ಲರೂ) **ಜಘ್ನುಃ** ಸೇನೆಯನ್ನು ರಾವಣನನ್ನೂ ಸಂಕಟಕ್ಕೆ ಈಡು ಮಾಡಿದರು.

**ತಾತ್ಪರ್ಯ :** 'ಗಜ ಗವಾಕ್ಷ ಗವಯ ವೃಷ ಗಂಧಮಾದ' ಈ ಐವರು ಕಪಿಗಳು ಮರುದ್ಗಣಗಳಲ್ಲಿ ಸೇರಿದ ಪ್ರಾಣ ಅಪಾನ ವ್ಯಾನ ಉದಾನ ಸಮಾನ ರೆಂಬ ದೇವತೆಗಳ ಅವತಾರ. ಇವರೆಲ್ಲರು ರಾಮನ ಸೇವೆಗಾಗಿ ಜನಿಸಿರುವರು. ಇವರೆಲ್ಲರೂ ಕುಬೇರನ ಅವತಾರನಾದ 'ಕತ್ಥನ' ಎಂಬ ಕಪಿಯ ಮಕ್ಕಳು ಒಟ್ಟಾರೆ ಈ ಆರು ಮಂದಿ ರಾವಣನ ಸೈನ್ಯವನ್ನು ಸದೆ ಬಡಿಯ ಹತ್ತಿದರು.

### ವಿಜೃಂಭಿಸಿದ ರಾವಣ

ಶರೈಸ್ತು ತಾನ್ ಷಡ್ಭಿರಮೋಘವೇಗೈ-
ರ್ನಿಪಾತಯಾಮಾಸ ದಶಾನನೋ ದ್ರಾಕ್ ।
ಅಥಾಶ್ವಿಪುತ್ರೌ ಚ ಸಜಾಂಬವಂತೌ
ಪ್ರಜಹ್ರತುಃ ಶೈಲವರೈಸ್ತ್ರಿಭಿಸ್ತಮ್ ॥ ೭೩ ॥

**ಪದಚ್ಛೇದ : ಶರೈಃ ತು ತಾನ್ ಷಡ್ಭಿಃ ಅಮೋಘವೇಗೈಃ ನಿಪಾತಯಾಮಾಸ ದಶಾನನಃ ದ್ರಾಕ್ । ಅಥ ಅಶ್ವಿಪುತ್ರೌ ಚ ಸಜಾಂಬವಂತೌ ಪ್ರಜಹ್ರತುಃ ಶೈಲವರೈಃ ತ್ರಿಭಿಃ ತಮ್ ॥**

**ಅರ್ಥ :- ದಶಾನನಸ್ತು** ಹತ್ತುಮುಖವುಳ್ಳ ರಾವಣನಾದರೋ **ತಾನ್** ಆ ಗಜಾದಿಕಪಿಗಳನ್ನು **ಅಮೋಘವೇಗೈಃ** ಅಮೋಘವಾದ ವೇಗವುಳ್ಳ **ಷಡ್ಭಿಃ** ಆರು ಸಂಖ್ಯೆಗಳುಳ್ಳ **ಶರೈಃ** ಬಾಣಗಳಿಂದ **ದ್ರಾಕ್** ಕೂಡಲೇ **ನಿಪಾತಯಾ-ಮಾಸ** ಬೀಳಿಸಿದನು. **ಅಥ** ಅನಂತರ **ಸಹಜಾಂಬವಂತೌ** ಜಾಂಬವಂತನಿಂದ ಕೂಡಿಕೊಂಡ **ಅಶ್ವಿಪುತ್ರೌ** ಅಶ್ವಿನಿದೇವತೆಗಳ ಪುತ್ರರಾದ ಮೈಂದವಿವಿದರು **ತ್ರಿಭಿಃ** ಮೂರು ಸಂಖ್ಯಾಕಗಳಾದ **ಶೈಲವರೈಃ** ದೊಡ್ಡ ಪರ್ವತಗಳಿಂದ **ಪ್ರಜಹ್ರತುಃ** ಬೀಸಿಹೊಡೆದರು.

**ತಾತ್ಪರ್ಯ :** ರಾವಣನು ಆ ಕೂಡಲೇ ತನ್ನ ಆರು ಬಾಣಗಳಿಂದ ಗಜಾದಿ ಆರು ಕಪಿಗಳನ್ನು ಹೊಡೆದುರುಳಿಸುವನು. ಆಗ ಮೈಂದ ವಿವಿದರೆಂಬ ಅಶ್ವಿದೇವತೆಗಳ ಪುತ್ರರು ಮೂರು ಬೆಟ್ಟಗಳನ್ನ ಕಿತ್ತಿ ರಾವಣನ ಮೇಲೆ ಎಸೆಯುವರು.

**ಗಿರೀನ್ ವಿದಾರ್ಯಾಽಶು ಶರೈರಥಾನ್ಯಾನ್**
**ಶರಾನ್ ದಶಾಸ್ಯೋಽಮುಚದಾಶು ತೇಷು ।**
**ಏಕೈಕಮೇಭಿರ್ವಿನಿಪಾತಿತಾಸ್ತೇ**
**ಸಸಾರ ತಂ ಶಕ್ರಸುತಾತ್ಮಜೋಽಥ ॥ ೭೪ ॥**

ಪದಚ್ಛೇದ : ಗಿರೀನ್ ವಿದಾರ್ಯ ಆಶು ಶರೈಃ ಅಥ ಅನ್ಯಾನ್ ಶರಾನ್ ದಶಾಸ್ಯಃ ಅಮುಚತ್ ಆಶು ತೇಷು । ಏಕೈಕಮ್ ಏಭಿಃ ವಿನಿಪಾತಿತಾಃ ತೇ ಸಸಾರ ತಂ ಶಕ್ರಸುತಾತ್ಮಜಃ ಅಥ ॥

**ಅರ್ಥ :- ದಶಾಸ್ಯಃ** ರಾವಣನು **ಆಶು** ಆ ಕೂಡಲೇ **ಶರೈಃ** ಬಾಣಗಳಿಂದ **ಗಿರೀನ್** ಪರ್ವತಗಳನ್ನು **ವಿದಾರ್ಯ** ಸೀಳಿ **ಅಥ** ಅನಂತರ **ಅನ್ಯಾನ್** ಬೇರೆಯದ್ದಾದ **ಶರಾನ್** ಬಾಣಗಳನ್ನು **ತೇಷು** ಆ ಮೂವರಲ್ಲಿ **ಆಶು** ಕೂಡಲೇ **ಅಮುಚತ್** ಬಿಟ್ಟನು. **ತೇ** ಮೈಂದಾದಿ ಮೂವರು **ಏಕೈಕಂ** ಒಂದೊಂದಾಗಿ ಬಿಟ್ಟ **ಏಭಿಃ** ಈ ಬಾಣಗಳಿಂದ **ವಿನಿಪಾತಿತಾಃ** ಉರುಳಿಸಲ್ಪಟ್ಟರು. **ಅಥ** ಅನಂತರ **ಶಕ್ರಸುತಾ**

ತ್ಮಜಃ ದೇವೇಂದ್ರನ ಸುತನಾದ ಸುಗ್ರೀವನ ಪುತ್ರನಾದ ಅಂಗದನು **ತಂ** ರಾವಣನನ್ನು ಸಸಾರ ಹೊಂದಿದನು.

**ತಾತ್ಪರ್ಯ** :- ತನ್ನ ಮೇಲೆ ಬೀಳಲಿರುವ ಆ ಪರ್ವತಗಳನ್ನು ಬಾಣದಿಂದ ನಾಶಪಡಿಸಿದ ರಾವಣನು ಕೂಡಲೆ ಮೂರು ಬಾಣಗಳನ್ನು ಈ ಮೂವರ ಮೇಲೆ ಪ್ರಯೋಗಿಸುವನು. ಇದರಿಂದ ಮೈಂದಾದಿ ಈ ಮೂವರು ಕೆಳಕ್ಕೆ ಬೀಳುತ್ತಾರೆ. ಆಗ ಅಂಗದನು ರಾವಣನನ್ನು ಎದುರಿಸುತ್ತಾನೆ.

### ಮೂರ್ಛಿತನಾದ ಅಂಗದ

**ಶಿಲಾಂ ಸಮಾದಾಯ ತಮಾಪತಂತಂ**
**ಬಿಭೇದ ರಕ್ಷೋ ಹೃದಯೇ ಶರೇಣ ।**
**ದೃಢಾಹತಃ ಸೋಽಪ್ಯಗಮದ್ ಧರಾತಲಂ**
**ರವೇಃ ಸುತೋಽಥೈನಮಭಿಪ್ರಜಗ್ಮಿವಾನ್ ॥ ೭೫ ॥**

ಪದಚ್ಛೇದ : ಶಿಲಾಂ ಸಮಾದಾಯ ತಮರುದ್ಗಣಗಳಲ್ಲಿ ಆಪತಂತಂ ಬಿಭೇದ ರಕ್ಷಃ ಹೃದಯೇ ಶರೇಣ । ದೃಢಾಹತಃ ಸಃ ಅಪಿ ಅಗಮತ್ ಧರಾತಲಂ ರವೇಃ ಸುತಃ ಅಥ ಏನಮರುದ್ಗಣಗಳಲ್ಲಿ ಅಭಿಪ್ರಜಗ್ಮಿವಾನ್ ॥

**ಅರ್ಥ** : **ಶಿಲಾಂ** ಶಿಲೆಯನ್ನು **ಸಮಾದಾಯ** ಹಿಡಿದುಕೊಂಡು **ಆಪತಂತಂ** ಬರುತ್ತಿರುವ **ತಂ** ಆ ಅಂಗದನನ್ನು **ರಕ್ಷಃ** ರಾವಣನು **ಶರೇಣ** ಬಾಣದಿಂದ **ಹೃದಯೇ** ಹೃದಯಭಾಗದಲ್ಲಿ **ಬಿಭೇದ** ಹೊಡೆದನು. **ದೃಢಾಹತಃ** ಜೋರಾಗಿ ಹೊಡೆಯಲ್ಪಟ್ಟ **ಸೋಽಪಿ** ಆ ಅಂಗದನಾದರು **ಧರಾತಲಂ** ಭೂಮಿಯನ್ನು **ಅಗಮತ್** ಹೊಂದಿದನು. **ಅಥ** ಅನಂತರ **ರವೇಃ** ರವಿಯ **ಸುತಃ** ಪುತ್ರನಾದ ಸುಗ್ರೀವನು **ಏನಂ** ಈ ರಾವಣನನ್ನು **ಅಭಿಪ್ರಜಗ್ಮಿವಾನ್** ಸಮೀಪಿಸಿದನು.

**ತಾತ್ಪರ್ಯ** :- ರಾವಣನ ಮೇಲೆ ಎಸೆಯಲು ದೊಡ್ಡ ಬಂಡೆಯನ್ನೇ ತಂದ ಅಂಗದನು ತನ್ನ ಎದೆಯ ಮೇಲೆ ಬಲವಾಗಿ ಅಪ್ಪಳಿಸಿದ ರಾವಣನ ಬಾಣದಿಂದ ಕೆಳಗೆ ಬೀಳುವನು. ಆಗ ಸುಗ್ರೀವನು ರಾವಣನನ್ನು ಆಕ್ರಮಿಸಲು ಬರುವನು.

### ಮೂರ್ಛೆ ಹೊಂದಿದ ಸುಗ್ರೀವ

**ತದ್ದಸ್ತಗಂ ಭೂರುಹಮಾಶು ಬಾಣೈ-**
**ರ್ದಶಾನನಃ ಖಂಡಶ ಏವ ಕೃತ್ವಾ ।**
**ಗ್ರೀವಾಪ್ರದೇಶೇಽಸ್ಯ ಮುಮೋಚ ಬಾಣಂ**
**ಭೃಶಾಹತಃ ಸೋಽಪಿ ಪಪಾತ ಭೂಮೌ ॥ ೭೬ ॥**

ಪದಚ್ಛೇದ : ತದ್ಧಸ್ತಗಂ ಭೂರುಹಮ್ ಆಶು ಬಾಣೈಃ ದಶಾನನಃ ಖಂಡಶಃ ಏವ ಕೃತ್ವಾ । ಗ್ರೀವಾಪ್ರದೇಶೇ ಅಸ್ಯ ಮುಮೋಚ ಬಾಣಂ ಭೃಶಾಹತಃ ಸಃ ಅಪಿ ಪಪಾತ ಭೂಮೌ ॥

**ಅರ್ಥ :-** **ತದ್ಧಸ್ತಗಂ** ಆ ಸುಗ್ರೀವನ ಹಸ್ತದಲ್ಲಿರುವ **ಭೂರುಹಂ** ವೃಕ್ಷವನ್ನು **ದಶಾನನಃ** ರಾವಣನು **ಆಶು** ತಕ್ಷಣವೇ **ಬಾಣೈಃ** ಬಾಣಗಳಿಂದ **ಖಂಡಶಃ** ತುಂಡುತುಂಡಾಗಿ **ಕೃತ್ವಾ** ಮಾಡಿ **ಅಸ್ಯ** ಈ ಸುಗ್ರೀವನ **ಗ್ರೀವಾಪ್ರದೇಶೇ** ಕಂಠದ ಮೂಲಪ್ರದೇಶದಲ್ಲಿ **ಬಾಣಂ** ಬಾಣವನ್ನು **ಮುಮೋಚ** ಬಿಟ್ಟನು. **ಭೃಶಾಹತಃ** ಚೆನ್ನಾಗಿ ಹೊಡೆಯಲ್ಪಟ್ಟ **ಸೋಽಪಿ** ಆ ಸುಗ್ರೀವನಾದರೋ **ಭೂಮೌ** ಭೂಮಿಯಲ್ಲಿ **ಪಪಾತ** ಬಿದ್ದನು.

**ತಾತ್ಪರ್ಯ :-** ಸುಗ್ರೀವನು ವೃಕ್ಷವನ್ನು ಕಿತ್ತು ರಾವಣನ ಮೇಲೆ ಎಸೆಯಲು ಬರುತ್ತಿದ್ದಂತೆಯೇ ರಾವಣನು ತನ್ನ ಬಾಣದಿಂದ ಅದನ್ನು ತುಂಡು ತುಂಡಾಗಿಸುವನು. ಬಲವಾಗಿ ಇನ್ನೊಂದು ಬಾಣವನ್ನು ಸುಗ್ರೀವನ ಕುತ್ತಿಗೆಯ ಕೆಳಭಾಗಕ್ಕೆ ಬಿಟ್ಟ ರಾವಣನು ಅವನನ್ನೂ ಕೆಳಗೆ ಬೀಳಿಸುವನು.

### ಹನುಮನ ಮುಷ್ಟಿಪ್ರಹಾರಕ್ಕೆ ರಕ್ತ ಕಕ್ಕಿದ ರಾವಣ

**ಅಥೋ ಹನೂಮಾನುರಗೇಂದ್ರಭೋಗ-**
**ಸಮಂ ಸ್ವಬಾಹುಂ ಭೃಶಮುನ್ನಮಯ್ಯ ।**
**ತತಾಡ ವಕ್ಷಸ್ಯಧಿಪಂ ತು ರಕ್ಷಸಾಂ**
**ಮುಖೈಃ ಸ ರಕ್ತಂ ಪ್ರವಮನ್ ಪಪಾತ ॥ ೭೭ ॥**

ಪದಚ್ಛೇದ : ಅಥೋ ಹನೂಮಾನ್ ಉರಗೇಂದ್ರಭೋಗಸಮಂ ಸ್ವಬಾಹುಂ ಭೃಶಮ್ ಉನ್ನಮಯ್ಯ । ತತಾಡ ವಕ್ಷಸಿ ಅಧಿಪಂ ತು ರಕ್ಷಸಾಂ ಮುಖೈಃ ಸ ರಕ್ತಂ ಪ್ರವಮನ್ ಪಪಾತ ॥

**ಅರ್ಥ** :- **ಅಥ** ಅನಂತರ **ಹನೂಮಾನ್** ಹನುಮಂತನು **ಉರಗೇಂದ್ರ ಭೋಗಸಮಂ** ಸರ್ಪಗಳಿಗೆ ರಾಜನಾದ ಶೇಷನ ದೇಹಕ್ಕೆ ಸದೃಶವಾದ **ಸ್ವಬಾಹುಂ** ತನ್ನ ಕೈಯನ್ನು **ಉನ್ನಮಯ್ಯ** ಮೇಲಕ್ಕೆತ್ತಿ **ರಕ್ಷಸಾಂ** ರಾಕ್ಷಸರಿಗೆ **ಅಧಿಪಂ** ಒಡೆಯನಾದ ರಾವಣನ **ವಕ್ಷಸಿ** ಎದೆಯಲ್ಲಿ **ಭೃಶಂ** ಚೆನ್ನಾಗಿ **ತತಾಡ** ಗುದ್ದಿದನು. **ಸ ತು** ಆ ರಾವಣನಾದರೋ **ಮುಖೈಃ** ಮುಖದಿಂದ **ರಕ್ತಂ** ರಕ್ತವನ್ನು **ಪ್ರವಮನ್** ವಾಂತಿಮಾಡುವ ವನಾಗಿ **ಪಪಾತ** ಬಿದ್ದನು.

**ತಾತ್ಪರ್ಯ** : ಆಗ ಹನುಮಂತನು ತನ್ನ ತೋಳನ್ನು ಮೇಲಕ್ಕೆತ್ತಿ ರಾವಣನ ಎದೆಗೆ ಹೊಡಯುತ್ತಾನೆ. ಶೇಷನ ದೇಹದಂತೆ ಬಲಿಷ್ಠವಾದ ಹನುಮಂತನ ಬಾಹುವಿನ ಹೊಡೆತಕ್ಕೆ ರಾವಣನ ಮುಖದಿಂದ ರಕ್ತವು ಚಿಮ್ಮಿ ಅವನು ಕೆಳಗೆ ಬೀಳುತ್ತಾನೆ.

### ರಾವಣನಿಂದ ಹನುಮನ ಪ್ರಶಂಸೆ

**ಸ ಲಬ್ಧಸಂಜ್ಞಃ ಪ್ರಶಶಂಸ ಮಾರುತಿಂ**
**ತ್ವಯಾ ಸಮೋ ನಾಸ್ತಿ ಪುಮಾನ್ ಹಿ ಕಶ್ಚಿತ್ ।**
**ಕಃ ಪ್ರಾಪಯೇದನ್ಯ ಇಮಾಂ ದಶಾಂ ಮಾ-**
**ಮಿತೀರಿತೋ ಮಾರುತಿರಾಹ ತಂ ಪುನಃ ॥ ೭೮ ॥**

ಪದಚ್ಛೇದ : ಸಃ ಲಬ್ಧಸಂಜ್ಞಃ ಪ್ರಶಶಂಸ ಮಾರುತಿಂ ತ್ವಯಾ ಸಮಃ ನಾಸ್ತಿ ಪುಮಾನ್ ಹಿ ಕಶ್ಚಿತ್ । ಕಃ ಪ್ರಾಪಯೇತ್ ಅನ್ಯಃ ಇಮಾಂ ದಶಾಂ ಮಾಮ್ ಇತೀರಿತಃ ಮಾರುತಿಃ ಆಹ ತಂ ಪುನಃ ॥

**ಅರ್ಥ** : **ಲಬ್ಧಸಂಜ್ಞಃ** ಹೊಂದಲ್ಪಟ್ಟ ಜ್ಞಾನವುಳ್ಳ **ಸಃ** ರಾವಣನು **ಮಾರುತಿಂ** ಹನುಮಂತನನ್ನು **ಪ್ರಶಶಂಸ** ಪ್ರಶಂಸಿಸಿದನು. **ತ್ವಯಾ** ನಿನ್ನಿಂದ **ಸಮಃ** ಸಮಾನ ನಾದ **ಕಶ್ಚಿತ್** ಯಾವನೊಬ್ಬ **ಪುಮಾನ್** ಪುರುಷನು **ನಾಸ್ತಿ** ಇಲ್ಲ **ಹಿ** ಯಾವ ಕಾರಣದಿಂದಾಗಿ **ಅನ್ಯಃ** ಬೇರೆಯವರು **ಮಾಂ** ನನ್ನನ್ನು **ಇಮಾಂ** ಈ **ದಶಾಂ** ಮೂರ್ಛಾವಸ್ಥೆಯ ದೆಶೆಯನ್ನು **ಕಃ** ಯಾವನು **ಪ್ರಾಪಯೇತ್** ಮಾಡಿ ಯಾನು? **ಇತಿ** ಈ ಪ್ರಕಾರವಾಗಿ **ಈರಿತಃ** ಹೇಳಿಸಿಕೊಳ್ಳಲ್ಪಟ್ಟ **ಮಾರುತಿಃ** ಹನುಮಂತನು **ಪುನಃ** ರಾವಣನು ಹೇಳಿದನಂತರವೂ **ತಂ** ಆ ರಾವಣನನ್ನು ಕುರಿತು **ಆಹ** ಹೇಳಿದನು

**ತಾತ್ಪರ್ಯ** :- ಮೂರ್ಛಾವಸ್ಥೆಯಿಂದ ಎದ್ದ ರಾವಣನು 'ಹೇ ಮಾರುತಿಯೇ ನಿನ್ನನ್ನು ಬಿಟ್ಟು ಬೇರೆ ಯಾರೂ ನನ್ನ ಹೀಗೆ ಮೂರ್ಛಾವಸ್ಥೆಗೆ ಕಳುಹಿಸಿರಲಿಲ್ಲ. ಹಾಗಾಗಿ ಹನುಮಂತನೇ ನಿನ್ನ ಸಮಾನನಾದ ವ್ಯಕ್ತಿ ಬೇರೊಬ್ಬರಿಲ್ಲ.' ಎಂದು ಹೊಗಳಿದಾಗ ಮಾರುತಿಯು ಹೀಗೆ ಹೇಳುತ್ತಾನೆ.

**ಅತ್ಯಲ್ಪಮೇತದ್ ಯದುಪಾತ್ತಜೀವಿತಃ**
**ಪುನಸ್ತ್ವಮಿತ್ಯುಕ್ತ ಉವಾಚ ರಾವಣಃ ।**
**ಗೃಹಾಣ ಮತ್ತೋಽಪಿ ಸಮುದ್ಯತಂ ತ್ವಂ**
**ಮುಷ್ಟಿಪ್ರಹಾರಂ ತ್ವಿತಿ ತಂ ಪುಪೋಥ ॥ ೭೯ ॥**

**ಪದಚ್ಛೇದ : ಅತ್ಯಲ್ಪಮ್ ಏತತ್ ಯದುಪಾತ್ತಜೀವಿತಃ ಪುನಃ ತ್ವಮ್ ಇತಿ ಉಕ್ತಃ ಉವಾಚ ರಾವಣಃ । ಗೃಹಾಣ ಮತ್ತೋಽಪಿ ಸಮುದ್ಯತಂ ತ್ವಂ ಮುಷ್ಟಿಪ್ರಹಾರಂ ತು ಇತಿ ತಂ ಪುಪೋಥ ॥**

**ಅರ್ಥ** :- **ಯತ್** ಯಾವಕಾರಣದಿಂದ **ತ್ವಂ** ನೀನು **ಪುನಃ** ನನ್ನ ಪ್ರಹಾರದ ಅನಂತರವೂ **ಉಪಾತ್ತಜೀವಿತಃ** ಪ್ರಾಪ್ತವಾದ ಜೀವನವುಳ್ಳವನೋ (**ತಸ್ಮಾತ್** ಆ ಕಾರಣದಿಂದ) **ಏತತ್** ನನ್ನ ಈ ತಾಡನವು **ಅತ್ಯಲ್ಪಂ** ಅತಿಕಡಿಮೆಯದ್ದು. **ಇತ್ಯುಕ್ತಃ** ಈ ರೀತಿ ಹೇಳಿಸಿಕೊಳ್ಳಲ್ಪಟ್ಟ **ರಾವಣಃ ತು** ರಾವಣನಾದರೋ **ಉವಾಚ** ಹೇಳಿದನು. **ಮತ್ತೋಽಪಿ** ನನ್ನ ದೆಸೆಯಿಂದಲೂ **ತ್ವಂ** ನೀನು **ಸಮುದ್ಯತಂ** ಚೆನ್ನಾಗಿ ಉದ್ಯುಕ್ತವಾದ **ಮುಷ್ಟಿಪ್ರಹಾರಂ** ಮುಷ್ಟಿಪ್ರಹಾರವನ್ನು **ಗೃಹಾಣ** ತೆಗೆದುಕೋ **ಇತಿ** ಎಂದು **ತಂ** ಹನುಮಂತನನ್ನು **ಪುಪೋಥ** ಹೊಡೆದನು.

**ತಾತ್ಪರ್ಯ** :- 'ರಾವಣನೆ! ನೀನು ಇನ್ನೂ ಬದುಕಿರುವಿ ಎಂದ ಮೇಲೆ ಈ ನನ್ನ ಹೊಡೆತವು ತುಂಬಾ ಕಡಿಮೆಯಾದದ್ದು ಎಂದೇ ತಿಳಿ' ಎಂದ ಹನುಮಂತನಿಗೆ ರಾವಣನು 'ಹಾಗಾದರೆ ಇಗೋ ಈ ನನ್ನ ಹೊಡೆತ ಸ್ವೀಕರಿಸು' ಎಂದು ಹನುಮಂತನಿಗೆ ಹೊಡೆದ.

### ಹನುಮನಿಂದ ದೂರ ಓಡಿದ ರಾವಣ

**ಕಿಂಚಿತ್ ಪ್ರಹಾರೇಣ ತು ವಿಹ್ವಲಾಂಗವತ್**
**ಸ್ಥಿತೇ ಹಿ ತಸ್ಮಿನ್ನಿದಮಂತರಂ ಮಮ ।**

**ಇತ್ಯಗ್ನಿಸೂನುಂ ಪ್ರಯಯೌ ಸ ರಾವಣೋ**
**ನಿವಾರಿತೋ ಮಾರುತಿನಾಽಪಿ ವಾಚಾ ॥ ೮೦ ॥**

ಪದಚ್ಛೇದ : ಕಿಂಚಿತ್ ಪ್ರಹಾರೇಣ ತು ವಿಹ್ವಲಾಂಗವತ್ ಸ್ಥಿತೇ ಹಿ ತಸ್ಮಿನ್ ಇದಮ್ ಅಂತರಂ ಮಮ । ಇತಿ ಅಗ್ನಿಸೂನುಂ ಪ್ರಯಯೌ ಸ ರಾವಣಃ ನಿವಾರಿತಃ ಮಾರುತಿನಾ ಅಪಿ ವಾಚಾ ॥

**ಅರ್ಥ :-** **ಪ್ರಹಾರೇಣ ತು** ಪೂರ್ಣಬಲದಿಂದ ಹೊಡೆಯುವಿಕೆಯಿಂದಲೂ **ತಸ್ಮಿನ್** ಆ ಹನುಮಂತನು **ಕಿಂಚಿತ್** ಸ್ವಲ್ಪ **ವಿಹ್ವಲಾಂಗವತ್** ಚಂಚಲಗೊಂಡ ಅಂಗವುಳ್ಳವನಂತೆ **ಸ್ಥಿತೇ(ಸತಿ)** ಇರುತ್ತಿರಲು **ಸಃ** ಆ ರಾವಣನು **ಇದಂ** ಈ ಹನುಮಂತನ ಇರುವಿಕೆಯು **ಮಮ** ನನಗೆ **ಅಂತರಂ** ಇಲ್ಲಿಂದಹೋಗಲು ಅವಕಾಶವು **ಇತಿ** ಎಂದರಿತು **ಮಾರುತಿನಾ** ಹನುಮಂತನಿಂದ **ವಾಚಾ** ವಚನ ದಿಂದ **ನಿವಾರಿತೋಽಪಿ** ತಡೆಯಲ್ಪಟ್ಟರೂ **ಅಗ್ನಿಸೂನುಂ** ಅಗ್ನಿಪುತ್ರನಾದ ನೀಲ ನನ್ನು ಕುರಿತು **ಪ್ರಯಯೌ** ಹೊರಟನು.

**ತಾತ್ಪರ್ಯ :-** ತಾನು ಪೂರ್ಣಬಲದಿಂದ ಗುದ್ದಿದರೂ ಹನುಮಂತನು ಸ್ವಲ್ಪ ಮಾತ್ರ ಚಲಿಸಿದಂತೆ ತೋರಿದಾಗ ರಾವಣನು ಹನುಮಂತನ ಸಾಮರ್ಥ್ಯ ದಿಂದ ಭೀತನಾಗಿ ಹೊರಡಲನುವಾಗುವನು. ಎಷ್ಟು ಭೀತನಾಗಿದ್ದನೆಂದರೆ ಹನುಮಂತನು 'ಇಲ್ಲಿಯೇ ಯುದ್ಧಿಸು ಹೊರಡಬೇಡ' ಎಂದರೂ ಅಲ್ಲಿಂದ ಕಾಲ್ತೆಗೆದ ರಾವಣನು ಅಗ್ನಿಯ ಪುತ್ರನಾದ ನೀಲನೊಂದಿಗೆ ಯುದ್ಧ ಮಾಡಲು ಹೊರಡುತ್ತಾನೆ.

### ನೀಲನ ಕಪಿಚೇಷ್ಟೆ

**ತಮಾಪತಂತಂ ಪ್ರಸಮೀಕ್ಷ್ಯ ನೀಲೋ**
**ಧನುರ್ಧ್ವಜಾಗ್ರಾಶ್ವರಥೇಷು ತಸ್ಯ ।**
**ಚಚಾರ ಮೂರ್ಧಸ್ವಪಿ ಚಂಚಲೋಽಲಂ**
**ಜಡೀಕೃತಸ್ತೇನ ಸ ರಾವಣೋಽಪಿ ॥ ೮೧ ॥**

ಪದಚ್ಛೇದ : ತಮ್ ಆಪತಂತಂ ಪ್ರಸಮೀಕ್ಷ್ಯ ನೀಲಃ ಧನುರ್ಧ್ವಜಾಗ್ರಾಶ್ವರಥೇಷು ತಸ್ಯ । ಚಚಾರ ಮೂರ್ಧಸು ಅಪಿ ಚಂಚಲಃ ಅಲಂ ಜಡೀಕೃತಃ ತೇನ ಸ ರಾವಣಃ ಅಪಿ ।

**ಅರ್ಥ** :- **ಆಪತಂತಂ** ಬರುತ್ತಿರುವ **ತಂ** ಆ ರಾವಣನನ್ನು **ನೀಲಃ** ನೀಲನು **ಪ್ರಸಮೀಕ್ಷ್ಯ** ವೀಕ್ಷಿಸಿ **ತಸ್ಯ** ರಾವಣನ **ಧನುರ್ಧ್ವಜಾಗ್ರಾಶ್ವರಥೇಷು** ಧನುಸ್ಸು ಧ್ವಜದ ಅಗ್ರಭಾಗ **ಅಶ್ವ** ರಥ ಇವುಗಳಲ್ಲಿ **ಮೂರ್ಧಸ್ವಪಿ** ಶಿರಗಳಲ್ಲಿಯೂ **ಚಂಚಲಃ (ಸನ್)** ಚಂಚಲತೆ ಉಳ್ಳವನಾಗಿ **ಚಚಾರ** ಸಂಚರಿಸಿದನು. **ತೇನ** ಈ ನೀಲನಿಂದ **ಸಃ** ಆ **ರಾವಣೋಽಪಿ** ರಾವಣನಾದರೋ **ಅಲಂ** ಬಹುವಾಗಿ **ಜಡೀಕೃತಃ** ಕರ್ತವ್ಯರಹಿತ ಜಡದಂತೆ ಇದ್ದನು.

**ತಾತ್ಪರ್ಯ** :- ತನ್ನನ್ನು ಎದುರಿಸಲು ಬರುತ್ತಿರುವ ರಾವಣನನ್ನು ನೋಡಿದ ನೀಲನು ಅವನ ಬಿಲ್ಲು ಧ್ವಜದ ಅಗ್ರಭಾಗ ಕುದುರೆ ರಥ ಕೊನೆಗೆ ಅವನ ತಲೆಗಳಲ್ಲೂ ಕ್ಷಿಪ್ರವಾಗಿ ಹಾರುತ್ತಾ ಸಂಚರಿಸುತ್ತಾನೆ. ಇದರಿಂದ ರಾವಣನು ಇವನನ್ನು ಹೇಗೆ ಎದುರಿಸಬೇಕೆಂದು ತಿಳಯದೇ ಜಡದಂತೆಯೇ ಇರುತ್ತಾನೆ.

ನೆಲಕ್ಕುರುಳಿದ ನೀಲ

**ಸ ಕ್ಷಿಪ್ರಮಾದಾಯ ಹುತಾಶನಾಸ್ತ್ರಂ**
**ಮುಮೋಚ ನೀಲೇ ರಜನೀಚರೇಶಃ ।**
**ಸ ತೇನ ಭೂಮೌ ಪತಿತೋ ನ ಚೈನಂ**
**ದದಾಹ ವಹ್ನಿಃ ಸ್ವತನುರ್ಯತೋಽಸೌ ॥ ೮೨ ॥**

ಪದಚ್ಛೇದ :- **ಸಃ ಕ್ಷಿಪ್ರಮ್ ಆದಾಯ ಹುತಾಶನಾಸ್ತ್ರಂ ಮುಮೋಚ ನೀಲೇ ರಜನೀಚರೇಶಃ । ಸಃ ತೇನ ಭೂಮೌ ಪತಿತಃ ನ ಚ ಏನಂ ದದಾಹ ವಹ್ನಿಃ ಸ್ವತನುಃ ಯತಃ ಅಸೌ॥**

**ಅರ್ಥ** : **ರಜನೀಚರೇಶಃ** ರಾತ್ರಿಯಲ್ಲಿ ಸಂಚರಿಸುವ ರಾಕ್ಷಸರಿಗೆ ಈಶನಾದ **ಸಃ** ಆ ರಾವಣನು **ಕ್ಷಿಪ್ರಂ** ಕೂಡಲೇ **ಹುತಾಶನಾಸ್ತ್ರಂ** ಆಗ್ನೇಯಾಸ್ತ್ರವನ್ನು **ಆದಾಯ** ತೆಗೆದುಕೊಂಡು **ನೀಲೇ** ನೀಲನಲ್ಲಿ **ಮುಮೋಚ** ಬಿಟ್ಟನು. **ಸಚ** ಆ ನೀಲನಾದರೋ **ತೇನ** ರಾವಣನು ಬಿಟ್ಟ ಆಗ್ನೇಯಾಸ್ತ್ರದಿಂದ **ಭೂಮೌ** ಭೂಮಿಯಲ್ಲಿ **ಪತಿತಃ** ಬಿದ್ದನು. **ಯತಃ** ಯಾವ ಕಾರಣದಿಂದ **ಅಸೌ** ಈ ನೀಲನು **ಸ್ವತನುಃ** ತನ್ನ ಮಗನು (**ತತಃ** ಆ ಕಾರಣದಿಂದ) **ವಹ್ನಿಃ** ಅಗ್ನಿಯು **ಏನಂ** ಈ ನೀಲನನ್ನು **ನ ದದಾಹ** ದಹಿಸಲಿಲ್ಲ.

**ತಾತ್ಪರ್ಯ** :- ಆಗ ನೀಲನ ಮೇಲೆ ಆಗ್ನೇಯಾಸ್ತ್ರವನ್ನು ರಾವಣನು ಬಿಡುತ್ತಾನೆ. ಇದರಿಂದ ನೀಲನು ಭೂಮಿ ಮೇಲೆ ಬೀಳುವನು. ಅಗ್ನಿಯ ಅವತಾರವೇ ಆದ ಆ ನೀಲನನ್ನು ಅಗ್ನಿಯು ತನ್ನ ಮಗನೆಂದು ಸುಡಲಿಲ್ಲ.

### ರಾವಣನನ್ನು ತಡೆದ ಲಕ್ಷ್ಮಣ

**ತತೋ ಯಯೌ ರಾಘವಮೇವ ರಾವಣೋ**
**ನಿವಾರಯಾಮಾಸ ತಮಾಶು ಲಕ್ಷ್ಮಣಃ ।**
**ತತಕ್ಷತುಸ್ತಾವಧಿಕೌ ಧನುರ್ಭೃತಾಂ ಶರೈಃ**
**ಶರೀರಾವರಣಾವದಾರಣೈಃ ॥ ೮೩ ॥**

**ಪದಚ್ಛೇದ** :- ತತಃ ಯಯೌ ರಾಘವಮ್ ಏವ ರಾವಣಃ ನಿವಾರಯಾಮಾಸ ತಮ್ ಆಶು ಲಕ್ಷ್ಮಣಃ । ತತಕ್ಷತುಃ ತೌ ಅಧಿಕೌ ಧನುರ್ಭೃತಾಂ ಶರೈಃ ಶರೀರಾ ವರಣಾವದಾರಣೈಃ ॥

**ಅರ್ಥ** :- **ತತಃ** ಅನಂತರ **ರಾವಣಃ** ರಾವಣನು **ರಾಘವಮೇವ** ಶ್ರೀರಾಘವನನ್ನೇ ಕುರಿತು **ಯಯೌ** ಹೊರಟನು. **ಲಕ್ಷ್ಮಣಃ** ಲಕ್ಷ್ಮಣನು **ತಂ** ಆ ರಾವಣನನ್ನು **ಆಶು** ಕೂಡಲೇ **ನಿವಾರಯಾಮಾಸ** ಪ್ರತಿರೋಧಿಸಿದನು. **ಧನುರ್ಭೃತಾಂ** ಧನುರ್ಧಾರಿಗಳಲ್ಲಿ **ಅಧಿಕೌ** ಅಧಿಕರಾದ **ತೌ** ಲಕ್ಷ್ಮಣ-ರಾವಣರು **ಶರೀರಾವರಣಾವದಾರಣೈಃ** ಶರೀರದ ಆವರಣಭೂತವಾದ ಕವಚವನ್ನು ಭೇದಿಸುವಂತಹ **ಶರೈಃ** ಬಾಣಗಳಿಂದ **ತತಕ್ಷತುಃ** ಹೊಡೆದಾಡಿದರು.

**ತಾತ್ಪರ್ಯ** :- ರಾಮನನ್ನೇ ಎದುರಿಸಲು ಬಂದ ರಾವಣನನ್ನು ಲಕ್ಷ್ಮಣನು ತಡೆದು ನಿಲ್ಲಿಸುತ್ತಾನೆ. ಬಿಲ್ಲುಗಾರರಲ್ಲಿ ಉತ್ತಮನೆನಿಸಿದ ಇವರಿಬ್ಬರೂ ದೇಹದಲ್ಲಿ ಧರಿಸಿದ ಕವಚವನ್ನೇ ಸೀಳುವಂತಹ ಬಾಣಗಳಿಂದ ಯುದ್ಧ ಮಾಡುತ್ತಾರೆ.

### ಸ್ಮೃತಿ ತಪ್ಪಿದ ಲಕ್ಷ್ಮಣ

**ನಿವಾರಿತಸ್ತೇನ ಸ ರಾವಣೋ ಭೃಶಂ**
**ರುಷಾಽನ್ವಿತೋ ಬಾಣಮಮೋಘಮುಗ್ರಮ್ ।**
**ಸ್ವಯಂಭುದತ್ತಂ ಪ್ರವಿಕೃಷ್ಯ ಚಾಽಶು**
**ಲಲಾಟಮಧ್ಯೇ ಪ್ರಮುಮೋಚ ತಸ್ಯ ॥ ೮೪ ॥**

ಪದಚ್ಛೇದ : ನಿವಾರಿತಃ ತೇನ ಸ ರಾವಣಃ ಭೃಶಂ ರುಷಾ ಅನ್ವಿತಃ ಬಾಣಂ ಅಮೋಘಂ ಉಗ್ರಮ್ । ಸ್ವಯಂಭುದತ್ತಂ ಪ್ರವಿಕೃಷ್ಯ ಚ ಆಶು ಲಲಾಟಮಧ್ಯೇ ಪ್ರಮುಮೋಚ ತಸ್ಯ ॥

ಅರ್ಥ :- ತೇನ ಆ ಲಕ್ಷ್ಮಣನಿಂದ ನಿವಾರಿತಃ ಪ್ರತಿಬಂಧಸಲ್ಪಟ್ಟ ದಶಾನನಃ ರಾವಣನು ರುಷಾನ್ವಿತಃ ಕೋಪದಿಂದ ಕೂಡಿದವನಾಗಿ ಸ್ವಯಂಭುದತ್ತಂ ಬ್ರಹ್ಮದೇವನಿಂದ ಕೊಡಲ್ಪಟ್ಟ ಉಗ್ರಂ ಭಯಂಕರವಾದ ಅಮೋಘಂ ವ್ಯರ್ಥವಾಗದ ಬಾಣಂ ಬಾಣವನ್ನು ಪರಿಕೃಷ್ಯ ಸೆಳೆದು ಚ ಮತ್ತು ಆಶು ಶೀಘ್ರವೇ ತಸ್ಯ ಆ ಲಕ್ಷ್ಮಣನ ಲಲಾಟಮಧ್ಯೇ ಹಣೆಯ ಮಧ್ಯಭಾಗಕ್ಕೆ ಪ್ರಮುಮೋಚ ಬಿಟ್ಟನು.

ತಾತ್ಪರ್ಯ :- ಲಕ್ಷ್ಮಣನು ಹೀಗೇ ತಡೆದಿದ್ದರಿಂದ ಕೆರಳಿದ ರಾವಣನು ಬ್ರಹ್ಮದೇವರು ಕೊಟ್ಟ ಉಗ್ರವಾದ ಅಸ್ತ್ರವನ್ನು ಲಕ್ಷ್ಮಣನ ಹಣೆಯ ಮಧ್ಯಭಾಗಕ್ಕೆ ಪ್ರಯೋಗಿಸುತ್ತಾನೆ.

ಭೃಶಾಹತಸ್ತೇನ ಮುಮೋಹ ಲಕ್ಷ್ಮಣೋ
ರಥಾದವಪ್ಲುತ್ಯ ದಶಾನನೋಽಪಿ ।
ಕ್ಷಣಾದಭಿದ್ರುತ್ಯ ಬಲಾತ್ ಪ್ರಗೃಹ್ಯ
ಸ್ವಬಾಹುಭಿರ್ನೇತುಮಿಮಂ ಸಮೈಚ್ಛತ್ ॥ ೮೫ ॥

ಪದಚ್ಛೇದ : ಭೃಶಾಹತತಃ ತೇನ ಮುಮೋಹ ಲಕ್ಷ್ಮಣಃ ರಥಾತ್ ಅವಪ್ಲುತ್ಯ ದಶಾನನಃ ಅಪಿ । ಕ್ಷಣಾತ್ ಅಭಿದ್ರುತ್ಯ ಬಲಾತ್ ಪ್ರಗೃಹ್ಯ ಸ್ವಬಾಹುಭಿಃ ನೇತುಮ್ ಇಮಂ ಸಮೈಚ್ಛತ್ ॥

ಅರ್ಥ :- ತೇನ ಆ ಬಾಣದಿಂದ ಭೃಶಾಹತಃ ಬಲವಾಗಿ ಹೊಡೆಯಲ್ಪಟ್ಟ ಲಕ್ಷ್ಮಣಃ ಲಕ್ಷ್ಮಣನು ಮುಮೋಹ ಮೂರ್ಛೆಹೋದನು. ದಶಾನನೋಽಪಿ ರಾವಣನಾದರೂ ಕ್ಷಣಾತ್ ಆ ಕ್ಷಣದಲ್ಲೇ ರಥಾತ್ ರಥದಿಂದ ಅವಪ್ಲುತ್ಯ ಇಳಿದು ಅಭಿದ್ರುತ್ಯ ಬೇಗನೇ ಹೋಗಿ ಇಮಂ ಈ ಲಕ್ಷ್ಮಣನನ್ನು ಸ್ವಬಾಹುಭಿಃ ತನ್ನ ಬಾಹುಗಳಿಂದ ಬಲಾತ್ ಬಲವಾಗಿ ಪ್ರಗೃಹ್ಯ ಹಿಡಿದು ನೇತುಂ ತನ್ನ ಪುರಕ್ಕೆ ಕೊಂಡೊಯ್ಯಲು ಸಮೈಚ್ಛತ್ ಅಪೇಕ್ಷಿಸಿದನು.

ತಾತ್ಪರ್ಯ :- ಈ ಅಸ್ತ್ರವು ಬಲವಾಗಿ ತಾಗಿ ಲಕ್ಷ್ಮಣನು ಮೂರ್ಛೆ ಹೋಗುವನು. ಆ ಕೂಡಲೇ ರಥದಿಂದ ಇಳಿದ ರಾವಣನು ಕೂಡಲೇ

ಲಕ್ಷ್ಮಣನನ್ನು ತನ್ನ ಗೃಹಕ್ಕೆ ತೆಗೆದು ಕೊಂಡು ಹೋಗಲು ಇಚ್ಛಿಸಿ ತನ್ನ ಕೈಗಳಿಂದ ಬಲವಾಗಿ ಅವನನ್ನು ಹಿಡಿದ.

### ಲಕ್ಷ್ಮಣನನ್ನು ಎತ್ತಲಾಗದ ರಾವಣ

**ಸಂಪ್ರಾಪ್ಯ ಸಂಜ್ಞಾಂ ಸ ಸುವಿಹ್ವಲೋಽಪಿ**
**ಸಸ್ಮಾರ ರೂಪಂ ನಿಜಮೇವ ಲಕ್ಷ್ಮಣಃ ।**
**ಶೇಷಂ ಹರೇರಂಶಯುತಂ ನ ಚಾಸ್ಯ**
**ಸ ಚಾಲನಾಯಾಪಿ ಶಶಾಕ ರಾವಣಃ ॥ ೮೬ ॥**

ಪದಚ್ಛೇದ : ಸಂಪ್ರಾಪ್ಯ ಸಂಜ್ಞಾಂ ಸ ಸುವಿಹ್ವಲಃ ಅಪಿ ಸಸ್ಮಾರ ರೂಪಂ ನಿಜಮ್ ಏವ ಲಕ್ಷ್ಮಣಃ । ಶೇಷಂ ಹರೇಃ ಅಂಶಯುತಂ ನ ಚ ಅಸ್ಯ ಸ ಚಾಲನಾಯ ಅಪಿ ಶಶಾಕ ರಾವಣಃ ॥

**ಅರ್ಥ** :- **ಸುವಿಹ್ವಲೋಽಪಿ** ಬಹಳವಾಗಿ ಮೂರ್ಛೆಗೊಂಡವನಾದರೂ **ಲಕ್ಷ್ಮಣಃ** ಲಕ್ಷ್ಮಣನು **ಸಂಜ್ಞಾಂ** ಪ್ರಜ್ಞಾವಸ್ಥೆಯನ್ನು **ಸಂಪ್ರಾಪ್ಯ** ಹೊಂದಿ **ಹರೇಃ** ಸಂಕರ್ಷಣರೂಪನಾದ ಭಗವಂತನ **ಅಂಶಯುತಂ** ಅಂಶಯುತನಾದ **ನಿಜಂ** ಸ್ವರೂಪಭೂತವಾದ **ರೂಪಂ** ಮೂಲರೂಪನಾದ **ಶೇಷಮೇವ** ಶೇಷದೇವ ನನ್ನೇ **ಸಸ್ಮಾರ** ಸ್ಮರಿಸಿದನು. **ಸಃ** ಆ **ರಾವಣಃ** ರಾವಣನು **ಅಸ್ಯ ಚ** ಶೇಷಾವತಾರಿ ಯಾದ ಲಕ್ಷ್ಮಣನನಾದರೋ **ಚಾಲನಾಯಾಽಪಿ** ಅಲುಗಾಡಿಸುವುದಲ್ಲಿಯೂ **ನ ಶಶಾಕ** ಶಕ್ತನಾಗಲಿಲ್ಲ.

**ತಾತ್ಪರ್ಯ** : ಮೂರ್ಛಾವಸ್ಥೆಯಿಂದ ಆ ಕ್ಷಣದಲ್ಲಿ ಎಚ್ಚೆತ್ತ ಲಕ್ಷ್ಮಣನು ತನ್ನ ಮೂಲರೂಪವಾದ ಶೇಷದೇವನನ್ನೇ ನೆನೆಸುವನು. ಆಗ ರಾವಣನಿಗೆ ಲಕ್ಷ್ಮಣ ನನ್ನು ಕಿಂಚಿತ್ತೂ ಅಲುಗಾಡಿಸಲು ಸಾಧ್ಯವಾಗುವುದಿಲ್ಲ.

**ಬಲಾತ್ ಸ್ವದೋರ್ಭಿಃ ಪ್ರತಿಗೃಹ್ಯ ಚಾಖಿಲೈ-**
**ರ್ಯದಾ ಸ ವೀರಂ ಪ್ರಚಕರ್ಷ ರಾವಣಃ ।**
**ಚಚಾಲ ಪೃಥ್ವೀ ಸಹಮೇರುಮಂದರಾ**
**ಸಸಾಗರಾ ನೈವ ಚಚಾಲ ಲಕ್ಷ್ಮಣಃ ॥ ೮೭ ॥**

ಪದಚ್ಛೇದ : ಬಲಾತ್ ಸ್ವದೋರ್ಭಿಃ ಪ್ರತಿಗೃಹ್ಯ ಚ ಅಖಿಲೈಃ ಯದಾ ಸ ವೀರಂ ಪ್ರಚಕರ್ಷ ರಾವಣಃ । ಚಚಾಲ ಪೃಥ್ವೀ ಸಹಮೇರುಮಂದರಾ ಸಸಾಗರಾ ನ ಏವ ಚಚಾಲ ಲಕ್ಷ್ಮಣಃ ॥

**ಅರ್ಥ** : **ರಾವಣಃ** ರಾವಣನು **ವೀರಂ** ವೀರನಾದ ಲಕ್ಷ್ಮಣನನ್ನು **ಅಖಿಲೈಃ** ಸಮಸ್ತವಾದ **ಸ್ವದೋರ್ಭಿಃ** ಇಪ್ಪತ್ತು ಕೈಗಳಿಂದ **ಪರಿಗೃಹ್ಯ** ಹಿಡಿದುಕೊಂಡು **ಯದಾ** ಯಾವಾಗ **ಬಲಾತ್** ಬಲಪೂರ್ವಕವಾಗಿ **ಪ್ರಚಕರ್ಷ** ಎಳೆದನೋ (ತದಾ ಆವಾಗ) **ಸಸಾಗರಾ** ಸಾಗರಸಹಿತ **ಸಮೇರುಮಂದರಾ** ಮೇರು ಮಂದರ ಪರ್ವತಗಳಿಂದ ಕೂಡಿದ **ಪೃಥ್ವೀ** ಭೂಮಿಯ **ಚಚಾಲ** ಚಲಿಸಿತು. **ಲಕ್ಷ್ಮಣಃ** ಲಕ್ಷ್ಮಣನು **ನೈವ ಚಚಾಲ** ಸ್ವಲ್ಪವೂ ಅಲುಗಾಡಲಿಲ್ಲ.

**ತಾತ್ಪರ್ಯ** :- ರಾವಣನು ತನ್ನ ಇಪ್ಪತ್ತು ಕೈಗಳಿಂದಲೂ ಚೆನ್ನಾಗಿ ಬಲ ಪ್ರಯೋಗ ಮಾಡಿ ಎಳೆಯುವವನು. ಆಗ ಸಪ್ತಸಾಗರಗಳು ಮೇರು ಮಂದರ ಪರ್ವತಗಳಿಂದ ಕೂಡಿದ ಭೂಮಿಯೇ ಅಲುಗಾಡುವುದು. ಆದರೂ ಲಕ್ಷ್ಮಣನನ್ನು ಎತ್ತುವುದಿರಲಿ ಅಲುಗಾಡಿಸಲೂ ರಾವಣನಿಗೆ ಸಾಧ್ಯವಾಗುವುದಿಲ್ಲ.

**ಶೇಷದೇವರ ಅತುಲಶಕ್ತಿ**

**ಸಹಸ್ರಮೂರ್ಧ್ನೋಽಸ್ಯ ಬತೈಕಮೂರ್ಧ್ನಿ**
**ಸಸಪ್ತಪಾತಾಲಗಿರೀಂದ್ರಸಾಗರಾ ।**
**ಧರಾಽಖಿಲೇಯಂ ನನು ಸರ್ಷಪಾಯತಿ**
**ಪ್ರಸಹ್ಯ ಕೋ ನಾಮ ಹರೇತ್ ತಮೇನಮ್ ॥ ೮೮ ॥**

ಪದಚ್ಛೇದ : ಸಹಸ್ರಮೂರ್ಧ್ನಃ ಅಸ್ಯ ಬತ ಏಕಮೂರ್ಧ್ನಿ ಸಸಪ್ತಪಾತಾಲಗಿರೀಂದ್ರ ಸಾಗರಾ । ಧರಾ ಅಖಿಲಾ ಇಯಂ ನನು ಸರ್ಷಪಾಯತಿ ಪ್ರಸಹ್ಯ ಕಃ ನಾಮ ಹರೇತ್ ತಮ್ ಏನಮ್ ॥

**ಅರ್ಥ** :- **ಸಹಸ್ರಮೂರ್ಧ್ನಃ** ಸಾವಿರ ಶಿರಗಳುಳ್ಳ **ಅಸ್ಯ** ಈ ಶೇಷದೇವನ **ಏಕಮೂರ್ಧ್ನಿ** ಒಂದು ಶಿರದಲ್ಲಿ **ಸಮಸ್ತಪಾತಾಲಗಿರೀಂದ್ರಸಾಗರಾ** ಪಾತಾಳವೇ ಮೊದಲಾದ ಸಪ್ತಲೋಕಗಳು ದೊಡ್ಡ ಪರ್ವತಗಳು ಸಾಗರಗಳೊಂದಿಗೆ **ಅಖಿಲಾ** ಸಮಗ್ರವಾದ **ಇಯಂ** ಈ **ಧರಾ** ಭೂಮಿಯು **ಸರ್ಷಪಾಯತಿ ನನು** ಸಾಸಿವೆ

ಕಾಳಿನಂತಿದೆಯಷ್ಟೇ ಬತ ಆಶ್ಚರ್ಯವು **ಕೋ ನಾಮ** ಯಾವ ಪುರುಷನು **ತಂ** ಶೇಷರೂಪನಾದ ಏನಂ ಈ ಲಕ್ಷ್ಮಣನನ್ನು **ಹರೇತ್** ಅಪಹರಿಸಿಯಾನು?

**ತಾತ್ಪರ್ಯ** : ಸಾವಿರ ಹೆಡೆಗಳುಳ್ಳ ಶೇಷನು ಕೇವಲ ತನ್ನ ಒಂದು ಹೆಡೆಯ ಲ್ಲಿಯೇ ಪಾತಾಳವೇ ಮೊದಲಾದ ಸಪ್ತಲೋಕಗಳು ಗಿರಿಸಾಗರಗಳುಳ್ಳ ಒಟ್ಟು ೫೦ಕೋಟಿ ವಿಸ್ತೀರ್ಣತೆಯುಳ್ಳ ಈ ಭೂಮಿಯನ್ನು ಒಂದು ಸಾಸಿವೆಯ ಕಾಳನ್ನು ಧರಿಸುವಂತೆ ಧರಿಸಿರುವನು. ಹೀಗಿರುವಾಗ ಇಂತಹ ಶೇಷನ ಅವತಾರ ನಾದ ಲಕ್ಷ್ಮಣನನ್ನು ಅಲುಗಾಡಿಸಲು ಯಾರಿಗೆ ತಾನೆ ಸಾಧ್ಯ?

### ಹನುಮನಿಂದ ಇನ್ನೊಮ್ಮೆ ರಕ್ತಕಾರಿದ ರಾವಣ

**ಪ್ರಕರ್ಷತಿ ತ್ವೇವ ನಿಶಾಚರೇಶ್ವರೇ**
**ತಥೈವ ರಾಮಾವರಜಂ ತ್ವರಾನ್ವಿತಃ ।**
**ಸಮಸ್ತಜೀವಾಧಿಪತೇಃ ಪರಾ ತನುಃ**
**ಸಮುತ್ಪಪಾತಾಸ್ಯ ಪುರೋ ಹನೂಮಾನ್ ॥ ೮೯ ॥**

ಪದಚ್ಛೇದ : ಪ್ರಕರ್ಷತಿ ತು ಏವ ನಿಶಾಚರೇಶ್ವರೇ ತಥಾ ಏವ ರಾಮಾವರಜಂ ತ್ವರಾನ್ವಿತಃ । ಸಮಸ್ತಜೀವಾಧಿಪತೇಃ ಪರಾ ತನುಃ ಸಮುತ್ಪಪಾತ ಅಸ್ಯ ಪುರಃ ಹನೂಮಾನ್ ॥

**ಅರ್ಥ** :- **ನಿಶಾಚರೇಶ್ವರೇ ತು** ರಾವಣನಿಂದಲಾದರೋ **ರಾಮಾವರಜಂ** ರಾಮನ ಅನುಜನಾದ ಲಕ್ಷ್ಮಣನನ್ನು **ಪ್ರಕರ್ಷತಿ (ಸತಿ)** ಎಳೆಯುತ್ತಿರಲು **ತಥೈವ** ಈ ಹಿಂದೆ ನಡೆದಂತೆಯೇ **ತ್ವರಾನ್ವಿತಃ** ವೇಗದಿಂದ ಕೂಡಿದ **ಸಮಸ್ತಜೀವಾಧಿಪತೇಃ** ಸಮಗ್ರಜೀವಿಗಳಿಗೆ ಅಧಿಪತಿಯಾದ ವಾಯುವಿನ **ಪರಾ ತನುಃ** ಇನ್ನೊಂದು ಶರೀರವಾಗಿವುಳ್ಳ **ಹನೂಮಾನ್** ಹನುಮಂತನು **ಆಶು** ಕೂಡಲೆ **(ಅಸ್ಯ** ಈ ರಾವಣನ) **ಪುರಃ** ಏವ ಮುಂಭಾಗದಲ್ಲಿಯೇ **ಸಮುತ್ಪಪಾತ** ಬಂದನು.

**ತಾತ್ಪರ್ಯ** :- ರಾವಣನು ಹೀಗೆ ಲಕ್ಷ್ಮಣನನ್ನು ಎಳೆದೊಯ್ಯಲು ಉದ್ಯುಕ್ತನಾದಾಗ ಆ ಕೂಡಲೇ ಸಮಸ್ತ ಜೀವಿಗಳ ಪ್ರಾಣಧಾರಕನಾದ ವಾಯುವಿನ ಅವತಾರವಾದ ಹನುಮಂತನು ವೇಗವಾಗಿ ರಾವಣನ ಮುಂದೆ ಬಂದು ನಿಲ್ಲುತ್ತಾನೆ.

ಸ ಮುಷ್ಟಿಮಾವರ್ತ್ಯ ಚ ವಜ್ರಕಲ್ಪಂ
ಜಘಾನ ತೇನೈವ ಚ ರಾವಣಂ ರುಷಾ ।
ಪ್ರಸಾರ್ಯ ಬಾಹೂನಖಿಲೈರ್ಮುಖೈ-
ರ್ವಮನ್ ಸ ರಕ್ತಮುಷ್ಣಂ ವ್ಯಸುವತ್ ಪಪಾತ ॥ ೯೦ ॥

ಪದಚ್ಛೇದ : ಸಃ ಮುಷ್ಟಿಮ್ ಆವರ್ತ್ಯ ಚ ವಜ್ರಕಲ್ಪಂ ಜಘಾನ ತೇನ ಏವ ಚ ರಾವಣಂ ರುಷಾ । ಪ್ರಸಾರ್ಯ ಬಾಹೂನ್ ಅಖಿಲೈಃ ಮುಖೈಃ ವಮನ್ ಸ ರಕ್ತಮ್ ಉಷ್ಣಂ ವ್ಯಸುವತ್ ಪಪಾತ ॥

**ಅರ್ಥ** :- **ಸಃ** ಹನುಮಂತನು **ರುಷಾ** ಸಿಟ್ಟಿನಿಂದ **ವಜ್ರಕಲ್ಪಂ** ವಜ್ರಸದೃಶವಾದ **ಮುಷ್ಟಿಂ** ಮುಷ್ಟಿಯನ್ನು **ಆವೃತ್ಯ** ತಿರುಗಿಸಿ **ತೇನೈವ** ಆ ಮುಷ್ಟಿಯಿಂದಲೇ **ರಾವಣಂ** ರಾವಣನನ್ನು **ಜಘಾನ** ಹೊಡೆದನು. **ಸಚ** ಅವನಾದರೋ **ಬಾಹೂನ್** ಕೈಗಳನ್ನು **ಪ್ರಸಾರ್ಯ** ಸಡಿಲಿಸಿ **ಅಖಿಲೈಃ ಮುಖೈಃ** ಎಲ್ಲಾ ಮುಖಗಳಿಂದ **ಉಷ್ಣಂ** ಬಿಸಿಯಾದ **ರಕ್ತಂ** ರಕ್ತವನ್ನು **ವಮನ್** (ಸನ್) ಹೊರ ಹಾಕುವವನಾಗಿ **ವ್ಯಸುವತ್** ಪ್ರಾಣರಹಿತನಂತೆ **ಪಪಾತ** ಬಿದ್ದನು.

**ತಾತ್ಪರ್ಯ** :- ರಾವಣನ ಮುಂದೆ ಬಂದು ನಿಂತ ಹನುಮಂತನು ಸಿಟ್ಟಿನಿಂದ ವಜ್ರಕಲ್ಪವಾದ ಮುಷ್ಟಿಯನ್ನು ಬಿಗಿದು ತಿರುಗಿಸುತ್ತಾ ಗುದ್ದುತ್ತಾನೆ. ಈ ಹೊಡೆತ ಪ್ರಭಾವದಿಂದ ಲಕ್ಷ್ಮಣನನ್ನು ಬಿಟ್ಟ ರಾವಣನು ತನ್ನ ಹತ್ತು ಮುಖಗಳಿಂದಲೂ ರಕ್ತವನ್ನು ಕಾರುತ್ತಾ ಕೆಳಗೆ ಬೀಳುತ್ತಾನೆ.

**ಲಕ್ಷ್ಮಣನ್ನು ರಾಮನೆಡೆಗೆ ಹೊತ್ತೊಯ್ದ ಹನುಮ**

ನಿಪಾತ್ಯ ರಕ್ಷೋಧಿಪತಿಂ ಸ ಮಾರುತಿಃ
ಪ್ರಗೃಹ್ಯ ಸೌಮಿತ್ರಿಮುರಂಗಶಾಯಿನಃ ।
ಜಗಾಮ ರಾಮಾಖ್ಯತನೋಃ ಸಮೀಪಂ
ಸೌಮಿತ್ರಿಮುದ್ಧರ್ತುಮಲಂ ಹ್ಯಸೌ ಕಪಿಃ ॥ ೯೧ ॥

ಪದಚ್ಛೇದ : ನಿಪಾತ್ಯ ರಕ್ಷೋಧಿಪತಿಂ ಸ ಮಾರುತಿಃ ಪ್ರಗೃಹ್ಯ ಸೌಮಿತ್ರಿಮ್ ಉರಂಗಶಾಯಿನಃ । ಜಗಾಮ ರಾಮಾಖ್ಯತನೋಃ ಸಮೀಪಂ ಸೌಮಿತ್ರಿಮ್ ಉದ್ಧರ್ತುಂ ಅಲಂ ಹಿ ಅಸೌ ಕಪಿಃ ॥

**ಅರ್ಥ : ಸಃ ಮಾರುತಿಃ** ಆ ಹನುಮಂತನು **ರಕ್ಷೋಧಿಪತಿಂ** ರಾವಣನನ್ನು **ನಿಪಾತ್ಯ** ಕೆಳಗೆ ಬೀಳಿಸಿ **ಸೌಮಿತ್ರಿಂ** ಸುಮಿತ್ರೆಯ ಪುತ್ರನಾದ ಲಕ್ಷ್ಮಣನನ್ನು **ಪ್ರಗೃಹ್ಯ** ಹಿಡಿದು **ಉರಂಗಶಾಯಿನಃ** ಶೇಷಶಾಯಿಯಾದ ನಾರಾಯಣನ **ರಾಮಾಖ್ಯತನೋಃ** ರಾಮನೆಂಬ ನಾಮದ ಸ್ವರೂಪದ **ಸಮೀಪಂ** ಹತ್ತಿರವನ್ನು **ಜಗಾಮ** ಹೊಂದಿದನು. **ಅಸೌ ಕಪಿಃ** ಈ ಹನುಮಂತನು **ಸೌಮಿತ್ರಿಂ** ಲಕ್ಷ್ಮಣನನ್ನು **ಉದ್ಧರ್ತುಂ** ಎತ್ತೊಯ್ಯಲು **ಅಲಂ ಹಿ** ಸಮರ್ಥನಷ್ಟೆ

**ತಾತ್ಪರ್ಯ :-** ಹೀಗೆ ರಾವಣನನ್ನು ಕೆಳಗೆ ಬೀಳಿಸಿದ ಹನುಮನು ಲಕ್ಷ್ಮಣನನ್ನು ಎತ್ತಿ ಶೇಷಶಾಯಿಯಾದ ಶ್ರೀಮನ್ನಾರಾಯಣನ ಅವತಾರವೇ ಆದ ಶ್ರೀರಾಮನ ಸಮೀಪ ಕೊಂಡೊಯ್ಯುವನು. ಎಷ್ಟಿದ್ದರೂ ಕೂರ್ಮರೂಪದ ವಾಯುವಿನ ಅನುಗ್ರಹದಿಂದಲೇ ತಾನೆ ಶೇಷನು ಬ್ರಹ್ಮಾಂಡವನ್ನು ಧರಿಸಿರುವುದು? ಹಾಗಾಗಿ ಮಾರುತಿಯು ಲಕ್ಷ್ಮಣನನ್ನು ಎತ್ತುವುದರಲ್ಲಿ ಆಶ್ಚರ್ಯವಿಲ್ಲ.

ರಾಮನ ಸ್ಪರ್ಶದಿಂದ ಲಕ್ಷ್ಮಣ ಎಚ್ಚರ

**ಸ ರಾಮಸಂಸ್ಪರ್ಶನಿವಾರಿತಕ್ಲಮಃ**
**ಸಮುತ್ಥಿತಸ್ತೇನ ಸಮುದ್ಧೃತೇ ಶರೇ ।**
**ಬಭೌ ಯಥಾ ರಾಹುಮುಖಾತ್ ಪ್ರಮುಕ್ತಃ**
**ಶಶೀ ಸುಪೂರ್ಣೋ ವಿಕಚತ್ಸ್ವರಶ್ಮಿಭಿಃ ॥ ೯೨ ॥**

ಪದಚ್ಛೇದ : ಸಃ ರಾಮಸಂಸ್ಪರ್ಶನಿವಾರಿತಕ್ಲಮಃ ಸಮುತ್ಥಿತಃ ತೇನ ಸಮುದ್ಧೃತೇ ಶರೇ । ಬಭೌ ಯಥಾ ರಾಹುಮುಖಾತ್ ಪ್ರಮುಕ್ತಃ ಶಶೀ ಸುಪೂರ್ಣಃ ವಿಕಚತ್ಸ್ವರಶ್ಮಿಭಿಃ ॥

**ಅರ್ಥ : ರಾಮಸ್ಪರ್ಶನಿವಾರಿತಕ್ಲಮಃ** ರಾಮನ ಸ್ಪರ್ಶದಿಂದ ನಿವಾರಿಸಲ್ಪಟ್ಟ ಶ್ರಮವುಳ್ಳ **ಸಃ** ಆ ಲಕ್ಷ್ಮಣನು **ತೇನ** ಆ ರಾಮನಿಂದ **ಶರೇ** ಬಾಣವು **ಸಮುದ್ಧೃತೇ (ಸತಿ)** ತೆಗೆಯಲ್ಪಡುತ್ತಿರಲು **ಸಮುತ್ಥಿತಃ ಸನ್** ಎಚ್ಚರಗೊಂಡವನಾಗಿ **ರಾಹುಮುಖಾತ್** ರಾಹುಮುಖದಿಂದ **ಪ್ರಮುಕ್ತಃ** ಬಿಡಲ್ಪಟ್ಟ **ವಿಕಚತ್ಸ್ವರಶ್ಮಿಭಿಃ** ಶೋಭಿಸುವ ತನ್ನ ಕಿರಣಗಳಿಂದ **ಸುಪೂರ್ಣಃ** ಷೋಡಶ ಕಲೆಗಳಿಂದ ಪೂರ್ಣನಾದ **ಶಶೀ** ಚಂದ್ರನು **ಯಥಾ** ಹೇಗೆ ಪ್ರಕಾಶಿಸುವನೋ **(ತಥಾ** ಹಾಗೆಯೇ**)** **ಬಭೌ** ಶೋಭಿಸಿದನು.

**ತಾತ್ಪರ್ಯ** :- ರಾಮನ ಹಸ್ತಸ್ಪರ್ಶದಿಂದ ಲಕ್ಷ್ಮಣನಿಗೆ ಆಯಾಸವು ಕಳೆಯಿತು. ರಾಮನು ಬಾಣವನ್ನು ತಗೆಯುವ ಮೊದಲೇ ಎದ್ದು ಕುಳಿತ ಲಕ್ಷ್ಮಣನು ರಾಹುವಿನಿಂದ ಬಿಡಲ್ಪಟ್ಟ ಚಂದ್ರನು ಹೇಗೆ ಸುಪೂರ್ಣವಾಗಿ ಬೆಳಗುವನೋ ಹಾಗೆಯೇ ಲಕ್ಷ್ಮಣನು ಶೋಭಿಸಿದನು.

ರಾಮರಾವಣರ ಯುದ್ಧ

**ಸ ಶೇಷಭೋಗಾಭಮಥೋ ಜನಾರ್ದನಃ**
**ಪ್ರಗೃಹ್ಯ ಚಾಪಂ ಸಶರಂ ಪುನಶ್ಚ ।**
**ಸುಲಬ್ಧಸಂಜ್ಞಂ ರಜನೀಚರೇಶಂ**
**ಜಗಾದ ಸಜ್ಜೀಭವ ರಾವಣೇತಿ ॥ ೯೩ ॥**

ಪದಚ್ಛೇದ : ಸಃ ಶೇಷಭೋಗಾಭಮ್ ಅಥೋ ಜನಾರ್ದನಃ ಪ್ರಗೃಹ್ಯ ಚಾಪಂ ಸಶರಂ ಪುನಃ ಚ । ಸುಲಬ್ಧಸಂಜ್ಞಂ ರಜನೀಚರೇಶಂ ಜಗಾದ ಸಜ್ಜೀಭವ ರಾವಣ ಇತಿ ॥

**ಅರ್ಥ** :- **ಅಥೋ** ಅನಂತರ **ಜನಾರ್ದನಃ** ಜನನರಹಿತನಾದ **ಸ ಚ** ಆ ರಾಮನಾದರೋ **ಸಶರಂ** ಬಾಣಗಳಿಂದ ಕೂಡಿದ **ಶೇಷಭೋಗಾಭಂ** ಶೇಷನ ಶರೀರಕ್ಕೆ ಸಮಾನವಾದ **ಚಾಪಂ ಚ** ಬಿಲ್ಲನ್ನೂ **ಪ್ರಗೃಹ್ಯ** ಹಿಡಿದು **ಪುನಃ** ಮತ್ತು **ಸುಲಬ್ಧಸಂಜ್ಞಂ** ಚೆನ್ನಾಗಿ ಲಬ್ಧವಾದ ಜ್ಞಾನವುಳ್ಳ **ರಜನೀಚರೇಶಂ** ರಾವಣನನ್ನು **ಹೇ ರಾವಣ** ಹೇ ರಾವಣನೇ **ಸಜ್ಜೀಭವ** ಯುದ್ಧಕ್ಕೆ ಸಿದ್ಧನಾಗು **ಇತಿ** ಎಂದು **ಜಗಾದ** ಹೇಳಿದನು.

**ತಾತ್ಪರ್ಯ** :- ಕೋಪಗೊಂಡ ರಾಮನು ಶೇಷನ ದೇಹದಂತೆ ಇರುವ ಬಿಲ್ಲಿಗೆ ಬಾಣವನ್ನು ಜೋಡಿಸಿ ಎಚ್ಚೆತ್ತುಗೊಂಡ ರಾವಣನಿಗೆ ಹೇಳಿದನು– 'ರಾವಣನೇ ನನ್ನೊಂದಿಗೆ ಯುದ್ಧಕ್ಕೆ ಸಿದ್ಧನಾಗು'

**ರಥಂ ಸಮಾರುಹ್ಯ ಪುನಃ ಸಕಾರ್ಮುಕಃ**
**ಸಮಾರ್ಗಣೋ ರಾವಣ ಆಶು ರಾಮಮ್ ।**
**ಅಭ್ಯೇತ್ಯ ಸರ್ವಾಶ್ಚ ದಿಶಶ್ಚಕಾರ**
**ಶರಾಂಧಕಾರಾಃ ಪರಮಾಸ್ತ್ರವೇತ್ತಾ ॥ ೯೪ ॥**

ಪದಚ್ಛೇದ : ರಥಂ ಸಮಾರುಹ್ಯ ಪುನಃ ಸಕಾರ್ಮುಕಃ ಸಮಾರ್ಗಣಃ ರಾವಣ ಆಶು ರಾಮಮ್ । ಅಭ್ಯೇತ್ಯ ಸರ್ವಾಃ ಚ ದಿಶಃ ಚಕಾರ ಶರಾಂಧಕಾರಾಃ ಪರಮಾಸ್ತ್ರವೇತ್ತಾ ॥

**ಅರ್ಥ** :- **ಸಕಾರ್ಮುಕಃ** ಧನುಸ್ಸಿನಿಂದ ಸಹಿತನಾದ **ಸಮಾರ್ಗಣಃ** ಬಾಣಗಳಿಂದ ಕೂಡಿದ **ಪರಮಾಸ್ತ್ರವೇತ್ತಾ** ಉತ್ತಮವಾದ ಅಸ್ತ್ರಗಳ ಜ್ಞಾನವನ್ನು ಹೊಂದಿದ **ಸಃ** ಅಂತಹ **ರಾವಣಃ** ರಾವಣನು **ಆಶು** ಕೂಡಲೇ **ಪುನಃ** ಮತ್ತೊಮ್ಮೆ **ರಥಂ** ರಥವನ್ನು **ಸಮಾರುಹ್ಯ** ಏರಿ **ರಾಮಂ** ರಾಮನನ್ನು **ಅಭ್ಯೇತ್ಯ** ಹೊಂದಿ **ಸರ್ವಾಃ** ಎಲ್ಲಾ **ದಿಶಶ್ಚ** ದಿಕ್ಕುಗಳನ್ನು **ಶರಾಂಧಕಾರಾಃ** ಬಾಣಗಳಿಂದ ಅಂಧಕಾರಮಯವನ್ನಾಗಿ **ಚಕಾರ** ಮಾಡಿದನು.

**ತಾತ್ಪರ್ಯ** : ರಾಮನಿಂದ ಯುದ್ಧಕ್ಕೆ ಆಹ್ವಾನಿತನಾದ ರಾವಣನು ಕೂಡಲೇ ರಥವನ್ನೇರಿ ರಾಮನನ್ನು ಸಮೀಪಿಸಿ ತಾನು ತಿಳಿದ ಉತ್ತಮ ಅಸ್ತ್ರಗಳನ್ನು ಪ್ರಯೋಗಿಸಿ ಸಮಸ್ತದಿಕ್ಕುಗಳನ್ನು ಅಂಧಕಾರದಿಂದಿರುವಂತೆ ಮಾಡುತ್ತಾನೆ.

### ರಾಮನನ್ನು ಹೆಗಲಮೇಲೇರಿಸಿಕೊಂಡ ಹನುಮ

**ರಥಸ್ಥಿತೇಽಸ್ಮಿನ್ ರಜನೀಚರೇಶೇ**
**ನ ಮೇ ಪತಿರ್ಭೂಮಿತಲೇ ಸ್ಥಿತಃ ಸ್ಯಾತ್ ।**
**ಇತಿ ಸ್ಮ ಪುತ್ರಃ ಪವನಸ್ಯ ರಾಮಂ**
**ಸ್ಕಂಧಂ ಸಮಾರೋಪ್ಯ ಯಯೌ ಚ ರಾಕ್ಷಸಮ್ ॥ ೯೫ ॥**

ಪದಚ್ಛೇದ : ರಥಸ್ಥಿತೇ ಅಸ್ಮಿನ್ ರಜನೀಚರೇಶೇ ನ ಮೇ ಪತಿಃ ಭೂಮಿತಲೇ ಸ್ಥಿತಃ ಸ್ಯಾತ್। ಇತಿ ಸ್ಮ ಪುತ್ರಃ ಪವನಸ್ಯ ರಾಮಂ ಸ್ಕಂಧಂ ಸಮಾರೋಪ್ಯ ಯಯೌ ಚ ರಾಕ್ಷಸಮ್ ॥

**ಅರ್ಥ** :- **ರಜನೀಚರೇಶೇ** ರಾವಣನಿಂದ **ಅಸ್ಮಿನ್** ಈ **ರಥೇ** ರಥದಲ್ಲಿ **ಸ್ಥಿತೇ (ಸತಿ)** ನಿಲ್ಲಲ್ಪಡುತ್ತಿರಲು **ಮೇ** ನನ್ನ **ಪತಿಃ** ರಾಮನು **ಭೂಮಿತಲೇ** ಭೂತಲದಲ್ಲಿ **ಸ್ಥಿತಃ** ಇರುವಂಶವನು **ನ ಸ್ಯಾತ್** ಆಗಬಾರದು **ಇತಿ ಸ್ಮ** ಹೀಗೆಂಬ ಅಭಿಪ್ರಾಯದಿಂದ **ಪವನಸ್ಯ** ವಾಯುದೇವರ **ಪುತ್ರಃ** ಪುತ್ರನಾದ ಹನುಮಂತನು **ರಾಮಂ** ರಾಮನನ್ನು **ಸ್ಕಂಧಂ** ತನ್ನ ಹೆಗಲನ್ನು **ಸಮಾರೋಪ್ಯ** ಹತ್ತಿಸಿ **ರಾಕ್ಷಸಂ** ರಾವಣಾಭಿಮುಖವಾಗಿ **ಯಯೌ** ಹೊರಟನು.

**ತಾತ್ಪರ್ಯ** : ರಾವಣನು ರಥವನ್ನೇರಿ ಯುದ್ಧಮಾಡುವಾಗ ನನ್ನ ಒಡೆಯ ಭೂತಲದಲ್ಲಿ ನಿಂತು ಯುದ್ಧ ಮಾಡಬಾರದೆಂದು ಹನುಮಂತನೇ ರಾಮನನ್ನು ತನ್ನ ಭುಜಗಳಲ್ಲಿ ಕೂಡಿಸಿಕೊಂಡು ರಾವಣನ ಹತ್ತಿರ ನಡೆದ.

ರಾಮನ ಅಪ್ರತಿಮ ಪರಾಕ್ರಮ

**ಪ್ರಹಸ್ಯ ರಾಮೋऽಸ್ಯ ಹಯಾನ್ ನಿಹತ್ಯ**
**ಸೂತಂ ಚ ಕೃತ್ವಾ ತಿಲಶೋ ಧ್ವಜಂ ರಥಮ್ ।**
**ಧನೂಂಷಿ ಖಡ್ಗಂ ಸಕಲಾಯುಧಾನಿ**
**ಛತ್ರಂ ಚ ಸಂಭಿದ್ಯ ಚಕರ್ತ ಮೌಲಿಮ್ ॥ ೯೬ ॥**

ಪದಚ್ಛೇದ : ಪ್ರಹಸ್ಯ ರಾಮಃ ಅಸ್ಯ ಹಯಾನ್ ನಿಹತ್ಯ ಸೂತಂ ಚ ಕೃತ್ವಾ ತಿಲಶಃ ಧ್ವಜಂ ರಥಮ್ । ಧನೂಂಷಿ ಖಡ್ಗಂ ಸಕಲಾಯುಧಾನಿ ಛತ್ರಂ ಚ ಸಂಭಿದ್ಯ ಚಕರ್ತ ಮೌಲಿಮ್ ॥

**ಅರ್ಥ** :- **ರಾಮಃ** ರಾಮನು **ಅಸ್ಯ** ಈ ರಾವಣನ **ಹಯಾನ್** ಕುದುರೆಗಳನ್ನು **ಸೂತಂ ಚ** ಸಾರಥಿಯನ್ನೂ ಕೂಡ **ನಿಹತ್ಯ** ಸಂಹರಿಸಿ **ಧ್ವಜಂ** ಧ್ವಜವನ್ನು **ರಥಂ** ರಥವನ್ನು **ತಿಲಶಃ** ಎಳ್ಳಿನ ಆಕಾರದಂತೆ ಪುಡಿಯನ್ನಾಗಿ **ಕೃತ್ವಾ** ಮಾಡಿ **ಧನೂಂಷಿ** ಬಿಲ್ಲುಗಳನ್ನು **ಖಡ್ಗಂ** ಖಡ್ಗವನ್ನು **ಛತ್ರಂ** ಛತ್ರವನ್ನು **ಸಕಲಾಯುಧಾನಿ** ಸಕಲ ಆಯುಧಗಳನ್ನು **ಸಂಛಿದ್ಯ** ತುಂಡರಿಸಿ **ಪ್ರಹಸ್ಯ** ನಗೆಬೀರಿ **ಮೌಲಿಂ ಚ** ಕಿರೀಟವನ್ನೂ **ಚಕರ್ಥ** ಕತ್ತರಿಸಿದನು.

**ತಾತ್ಪರ್ಯ** :- ರಾವಣನ ಕುದುರೆ ಮತ್ತು ಸಾರಥಿಯನ್ನು ಸಂಹರಿಸಿದ ರಾಮನು ಛತ್ರ ಧ್ವಜ ರಥಗಳನ್ನು ಚೂರ್ಣದಂತೆ ಪುಡಿಮಾಡಿ ಬಿಲ್ಲುಗಳು ಖಡ್ಗ ಒಟ್ಟಾರೆ ರಾವಣನ ಸಮಸ್ತ ಆಯುಧಗಳನ್ನು ನಾಶಪಡಿಸಿ ಮುಗುಳುನಗೆಯನ್ನು ಬೀರಿದ ರಾಮನು ಕೊನೆಗೆ ಅವನ ಕಿರೀಟವನ್ನು ಭೇದಿಸುತ್ತಾನೆ.

ರಾವಣನಿಗೆ ಜೀವವಿತ್ತ ರಾಮ

**ಕರ್ತವ್ಯಮೂಢಂ ತಮವೇಕ್ಷ್ಯ ರಾಮಃ**
**ಪುನರ್ಜಗಾದಾऽಶು ಗೃಹಂ ಪ್ರಯಾಹಿ ।**

**ಸಮಸ್ತಭೋಗಾನನುಭೂಯ ಶೀಘ್ರಂ**
**ಪ್ರತೋಷ್ಯ ಬಂಧೂನ್ ಪುನರೇಹಿ ಮರ್ತುಮ್ ॥ ೯೭ ॥**

ಪದಚ್ಛೇದ : ಕರ್ತವ್ಯಮೂಢಂ ತಮ್ ಅವೇಕ್ಷ್ಯ ರಾಮಃ ಪುನಃ ಜಗಾದ ಆಶು ಗೃಹಂ ಪ್ರಯಾಹಿ । ಸಮಸ್ತಭೋಗಾನ್ ಅನುಭೂಯ ಶೀಘ್ರಂ ಪ್ರತೋಷ್ಯ ಬಂಧೂನ್ ಪುನಃ ಏಹಿ ಮರ್ತುಮ್ ॥

**ಅರ್ಥ** :- **ರಾಮಃ** ಶ್ರೀರಾಮನು **ಕರ್ತವ್ಯಮೂಢಂ** ಮಾಡಬೇಕಾದ ಕಾರ್ಯದಲ್ಲಿ ವಿವೇಕಶೂನ್ಯನಾದ **ತಂ** ಆ ರಾವಣನನ್ನು **ಅವೇಕ್ಷ್ಯ** ನೋಡಿ **ಆಶು** ಈ ಕೂಡಲೇ **ಗೃಹಂ** ಮನೆಯನ್ನು **ಪ್ರಯಾಹಿ** ಹೋಗುವವನಾಗಿ **ಪುನಃ** ಮತ್ತೊಮ್ಮೆ **ಸಮಸ್ತಭೋಗಾನ್** ಸಮಗ್ರವಿಷಯಸುಖಗಳನ್ನು **ಅನಭೂಯ** ಅನುಭವಿಸಿ **ಬಂಧೂನ್** ಬಂಧುಗಳನ್ನು **ಪ್ರತೋಷ್ಯ** ಹರ್ಷವನ್ನುಂಟು ಮಾಡಿ **ಮರ್ತುಂ** ಸಾಯಲು **ಪುನಃ** ಇನ್ನೊಮ್ಮೆ **ಏಹಿ** ಬರುವವನಾಗು **ಇತಿ** ಎಂಬುದಾಗಿ **ಜಗಾದ** ಹೇಳಿದನು.

**ತಾತ್ಪರ್ಯ** :- ಏನು ಮಾಡಬೇಕೆಂಬುದನ್ನೇ ಅರಿಯದವನಾದ ರಾವಣನ ಸ್ಥಿತಿಯನ್ನು ನೋಡಿದ ರಾಮನು 'ರಾವಣನೇ ಬೇಗನೇ ಅರಮನೆಗೆ ಹಿಂತಿರುಗಿ ಅಲ್ಲಿರುವ ವೈಷಯಿಕಸುಖಭೋಗಗಳನ್ನು ಅನುಭವಿಸಿ ಬಾಂಧವರನ್ನು ಸಂತೋಷ ಪಡಿಸಿ ನನ್ನಿಂದ ಮರಣವನ್ನಪ್ಪಲು ಪುನಃ ಹಿಂತಿರುಗಿ ಬಾ' ಎನ್ನುವನು.

### ಕುಂಭಕರ್ಣನ ಮಹಾನಿದ್ರೆ

**ಇತೀರಿತೋಽವಾಗ್ವದನೋ ಯಯೌ ಗೃಹಂ**
**ವಿಚಾರ್ಯ ಕಾರ್ಯಂ ಸಹ ಮಂತ್ರಿಭಿಃ ಸ್ವಕೈಃ ।**
**ಹತಾವಶೇಷೈರಥ ಕುಂಭಕರ್ಣ-**
**ಪ್ರಬೋಧನಾಯಾಽಶು ಮತಿಂ ಚಕಾರ ॥ ೯೮ ॥**

ಪದಚ್ಛೇದ : ಇತಿ ಈರಿತಃ ಅವಾಗ್ವದನಃ ಯಯೌ ಗೃಹಂ ವಿಚಾರ್ಯ ಕಾರ್ಯಂ ಸಹ ಮಂತ್ರಿಭಿಃ ಸ್ವಕೈಃ । ಹತಾವಶೇಷೈಃ ಅಥ ಕುಂಭಕರ್ಣಪ್ರಬೋಧನಾಯ ಆಶು ಮತಿಂ ಚಕಾರ ॥

**ಅರ್ಥ** : **ಇತಿ** ಈ ಪ್ರಕಾರವಾಗಿ **ಈರಿತಃ** ಹೇಳಿಸಿಕೊಳ್ಳಲ್ಪಟ್ಟ **ಅವಾಗ್ವದನಃ** ತಲೆತಗ್ಗಿಸಿದ ಮುಖವುಳ್ಳ ರಾವಣನು **ಗೃಹಂ** ಸ್ವಗೃಹವನ್ನು ಕುರಿತು **ಯಯೌ** ಹೊರಟನು. **ಅಥ** ಅನಂತರ **ಸ್ವೈಃ** ತನ್ನವರಲ್ಲಿ **ಹತಾವಶೇಷೈಃ** ಮರಣಿಸಿರುವವರಲ್ಲಿ ಉಳಿದವರಿಂದ **ಕಾರ್ಯಂ** ಮುಂದಿನ ಕಾರ್ಯವನ್ನು **ಮಂತ್ರಿಭಿಃ** ಮಂತ್ರಿಗಳಿಂದ **ಸಹ** ಕೂಡಿ **ವಿಚಾರ್ಯ** ವಿಚಾರಿಸಿ **ಕುಂಭಕರ್ಣಪ್ರಬೋಧನಾಯ** ಕುಂಭಕರ್ಣನನ್ನು ಎಬ್ಬಿಸುವುದಕ್ಕಾಗಿ **ಆಶು** ಕೂಡಲೇ **ಮತಿಂ** ಬುದ್ಧಿಯನ್ನು **ಚಕಾರ** ಮಾಡಿದನು.

**ತಾತ್ಪರ್ಯ** :- ರಾಮನ ಮಾತಿಗೆ ಅವಮಾನದಿಂದ ತಲೆ ತಗ್ಗಿಸಿದ ರಾವಣನು ಅರಮನೆಗೆ ಹೋಗುತ್ತಾನೆ. ಅಲ್ಲಿ ಯುದ್ಧದಲ್ಲಿ ಅಳಿದುಳಿದಿರುವರಿಂದ ಆಗಬೇಕಾಗದ ಕೆಲಸವೇನೆಂದು ಮಂತ್ರಿಗಳಿಂದ ಸಮಾಲೋಚಿಸಿ ಕುಂಭಕರ್ಣನನ್ನು ಎಬ್ಬಿಸಿ ಯುದ್ಧಕ್ಕೆ ಕಳಿಹಿಸಲು ಇಚ್ಛಿಸುವನು.

**ಸಶೈಲಶೃಂಗಾಸಿಪರಶ್ವಧಾಯುಧೈ-**
**ರ್ನಿಶಾಚರಾಣಾಮಯುತೈರನೇಕೈಃ ।**
**ತಚ್ಛ್ವಾಸವೇಗಾಭಿಹತೈಃ ಕಥಂಚಿದ್**
**ಗತೈಃ ಸಮೀಪಂ ಕಥಮಪ್ಯಬೋಧಯತ್ ॥ ೯೯ ॥**

ಪದಚ್ಛೇದ : ಸಶೈಲಶೃಂಗಾಸಿಪರಶ್ವಧಾಯುಧೈಃ ನಿಶಾಚರಾಣಾಮ್ ಅಯುತೈಃ ಅನೇಕೈಃ । ತಚ್ಛ್ವಾಸವೇಗಾಭಿಹತೈಃ ಕಥಂಚಿತ್ ಗತೈಃ ಸಮೀಪಂ ಕಥಮ್ ಅಪಿ ಅಬೋಧಯತ್ ॥

**ಅರ್ಥ** :- ಸಃ ಆ ರಾವಣನು **ಸಶೈಲಶೃಂಗಾಸಿಪರಶ್ವಧಾಯುಧೈಃ** ಪರ್ವತಗಳ ಶಿಖರಗಳು ಖಡ್ಗ ಕೊಡಲಿ ಇವೇ ಮೊದಲಾದ ಆಯುಧಗಳಿಂದ **ತತ್ ಶ್ವಾಸವೇಗಾಭಿಹತೈಃ** ಆ ಕುಂಭಕರ್ಣನ ಶ್ವಾಸ ಉಚ್ಛ್ವಾಸಗಳ ವೇಗದಿಂದ ಹತರಾದವರಂತೆ **ಕಥಂಚಿತ್** ಹೇಗೋ **ಸಮೀಪಂ** ಸಾಮೀಪ್ಯವನ್ನು **ಗತೈಃ** ಹೊಂದಿರುವಂತಹ **ಅನೇಕೈಃ** ಅನೇಕ ವಿಧರಾದ **ನಿಶಾಚರಾಣಾಂ** ರಾಕ್ಷಸರ **ಅಯುತೈಃ** ಹತ್ತುಸಾವಿರ ಸೈನಿಕರಿಂದ **ಕಥಮಪಿ** ಬಹಳಕಷ್ಟದಿಂದ **ಅಬೋಧಯತ್** ಎಬ್ಬಿಸಿದನು.

**ತಾತ್ಪರ್ಯ** : ಕುಂಭಕರ್ಣನನ್ನು ಎಬ್ಬಿಸಲು ರಾವಣನು ತನ್ನ ಹತ್ತುಸಾವಿರ ಸೈನಿಕರನ್ನು ಕಳುಹಿಸುತ್ತಾನೆ. ಅವರೆಲ್ಲರೂ ಪರ್ವತಶಿಖರಗಳು ಖಡ್ಗಗಳು ಕೊಡಲಿಗಳೇ ಮೊದಲಾದ ಆಯುಧಗಳಿಂದ ಆಗಮಿಸುತ್ತಾರೆ. ಆದರೆ ಕುಂಭಕರ್ಣನ ಶ್ವಾಸ ಉಚ್ಛ್ವಾಸಗಳಿಗೆ ಅವರೆಲ್ಲರು ಗಾಯಗೊಂಡು ಹತ್ತಿರ ಹೋಗಲೇ ಸಾಧ್ಯವಾಗಲಿಲ್ಲ. ಕೊನೆಗೆ ಹೇಗೋ ಬಹುಕಷ್ಟದಿಂದ ರಾವಣನು ಕುಂಭಕರ್ಣನನ್ನು ಎಬ್ಬಿಸುತ್ತಾರೆ.

**ಎಚ್ಚೆತ್ತ ಕುಂಭಕರ್ಣನಿಗೆ ಭೂರಿಭೋಜನ**

**ಶೈಲೋಪಮಾನಸ್ಯ ಚ ಮಾಂಸರಾಶೀನ್**
**ವಿಧಾಯ ಭಕ್ಷಾನಪಿ ಶೋಣಿತಹ್ರದಾನ್ ।**
**ಸುತೃಪ್ತಮೇನಂ ಪರಮಾದರೇಣ**
**ಸಮಾಹ್ವಯಾಮಾಸ ಸಭಾತಲಾಯ ॥ ೧೦೦ ॥**

ಪದಚ್ಛೇದ : ಶೈಲೋಪಮಾನಸ್ಯ ಚ ಮಾಂಸರಾಶೀನ್ ವಿಧಾಯ ಭಕ್ಷಾನ್ ಅಪಿ ಶೋಣಿತಹ್ರದಾನ್ । ಸುತೃಪ್ತಮ್ ಏನಂ ಪರಮಾದರೇಣ ಸಮಾಹ್ವಯಾಮಾಸ ಸಭಾತಲಾಯ ॥

**ಅರ್ಥ** :- **ಅಸ್ಯ** ಈ ಕುಂಭಕರ್ಣನಿಗೆ **ಶೈಲೋಪಮಾನ್** ಪರ್ವತಗಳಿಗೆ ಸಮಾನವಾದ **ಮಾಂಸರಾಶೀನ್** ಮಾಂಸಗಳ ರಾಶಿಯನ್ನು **ಭಕ್ಷ್ಯಾನ್** ಭಕ್ಷ್ಯಗಳನ್ನು **ಶೋಣಿತಹ್ರದಾನ್ ಅಪಿ** ರಕ್ತದ ಸರೋವರಗಳನ್ನೂ ಕೂಡ **ವಿಧಾಯ** ಇಟ್ಟು **ಸುತೃಪ್ತಂ** ತೃಪ್ತನಾದ **ಏನಂ** ಈ ಕುಂಭಕರ್ಣನನ್ನು **ಪರಮಾದರೇಣ** ಬಹಳ ಆದರದಿಂದ **ಸಭಾತಲಾಯ** ಸಭೆಯ ಭವನಕ್ಕೆ **ಸಮಾಹ್ವಯಾಮಾಸ** ಆಹ್ವಾನಿಸಿದನು.

**ತಾತ್ಪರ್ಯ** : ನಿದ್ರೆಯಿಂದ ಎಚ್ಚೆತ್ತುಕೊಂಡ ಕುಂಭಕರ್ಣನನ್ನು ಸಂತೃಪ್ತಿಗೊಳಿಸಲು ರಾವಣನು ಪರ್ವತಗಳ ಗಾತ್ರದ ಮಾಂಸರಾಶಿಯನ್ನು ಅನೇಕ ವಿಧ ಭಕ್ಷ್ಯಗಳನ್ನು ರಕ್ತವು ತುಂಬಿದ ಸರೋವರಗಳನ್ನೇ ಕಳುಹಿಸುತ್ತಾನೆ. ಇವುಗಳನ್ನು ಭಕ್ಷಿಸಿ ತೃಪ್ತಿ ಹೊಂದಿದ ಕುಂಭಕರ್ಣನನ್ನು ರಾವಣನು ಸಭಾಲಯಕ್ಕೆ ಆಹ್ವಾನಿಸುತ್ತಾನೆ.

### ರಾವಣನ ಪ್ರಾರ್ಥನೆ

ಉವಾಚ ಚೈನಂ ರಜನೀಚರೇಂದ್ರಃ
ಪರಾಜಿತೋಽಸ್ಮ್ಯದ್ಯ ಹಿ ಜೀವತಿ ತ್ವಯಿ ।
ರಣೇ ನರೇಣೈವ ಚ ರಾಮನಾಮ್ನಾ
·ಕುರುಷ್ವ ಮೇ ಪ್ರೀತಿಮಮುಂ ನಿಹತ್ಯ ॥ ೧೦೧ ॥

ಪದಚ್ಛೇದ : ಉವಾಚ ಚ ಏನಂ ರಜನೀಚರೇಂದ್ರಃ ಪರಾಜಿತಃ ಅಸ್ಮಿ ಅದ್ಯ ಹಿ ಜೀವತಿ ತ್ವಯಿ । ರಣೇ ನರೇಣ ಏವ ಚ ರಾಮನಾಮ್ನಾ ಕುರುಷ್ವ ಮೇ ಪ್ರೀತಿಮ್ ಅಮುಂ ನಿಹತ್ಯ ॥

**ಅರ್ಥ** : **ರಜನೀಚರೇಂದ್ರಃ ಚ** ರಾಕ್ಷಸರ ಸ್ವಾಮಿಯಾದ ರಾವಣನಾದರೋ **ಏನಂ** ಈ ಕುಂಭಕರ್ಣನನ್ನು ಕುರಿತು **ಉವಾಚ** ಹೇಳಿದನು **ತ್ವಯಿ** ನೀನು **ಜೀವತಿ (ಸತಿ)** ಜೀವಿಸುತ್ತಿರುವಾಗಲೂ **ಅದ್ಯ** ಈಗ **ರಣೇ** ಯುದ್ಧದಲ್ಲಿ **ರಾಮ ನಾಮ್ನಾ** ರಾಮನೆಂದು ಹೆಸರುಳ್ಳ **ನರೇಣೈವ** ಮನುಷ್ಯನಿಂದಲೇ **ಪರಾಜಿತಃ ಅಸ್ಮಿ** ಪರಾಜಿತನಾಗಿರುವೆನಷ್ಟೆ **ಹಿ** ಆಶ್ಚರ್ಯ **ಅಮುಂ ಚ** ಈ ಶ್ರೀರಾಮನನ್ನಾದರೋ **ನಿಹತ್ಯ** ಸಂಹರಸಿ **ಮೇ** ನನಗೆ **ಪ್ರೀತಿಂ** ಸಂತೋಷವನ್ನು **ಕುರುಷ್ವ** ಮಾಡು.

**ತಾತ್ಪರ್ಯ** : 'ಕುಂಭಕರ್ಣನೇ! ನೀನು ಜೀವಿಸಿರುವಾಗಲೂ ನಾನು ಯಃ ಕಶ್ಚಿತ್ ಮಾನವನಾದ ರಾಮನಿಂದ ಸೋಲನ್ನು ಅನುಭವಿಸಿರುವೆನು. ನೀನು ಈ ರಾಮನನ್ನು ಸಂಹರಿಸಿ ನನಗೆ ಮುದವನ್ನುಂಟುಮಾಡುವವನಾಗು' ಎಂದು ರಾವಣನು ಹೇಳಿದನು.

### ಕುಂಭಕರ್ಣನಿಂದ ರಾವಣನ ಖಂಡನೆ

ಇತೀರಿತಃ ಕಾರಣಮಪ್ಯಶೇಷಂ
ಶ್ರುತ್ವಾ ಜಗರ್ಹಾಗ್ರಜಮೇವ ವೀರಃ ।
ಅಮೋಘವೀರ್ಯೇಣ ಹಿ ರಾಘವೇಣ
ತ್ವಯಾ ವಿರೋಧಶ್ಚರಿತೋ ಬತಾದ್ಯ ॥ ೧೦೨ ॥

ಪದಚ್ಛೇದ : ಇತಿ ಈರಿತಃ ಕಾರಣಮ್ ಅಪಿ ಅಶೇಷಂ ಶ್ರುತ್ವಾ ಜಗರ್ಹ ಅಗ್ರಜಂ ಏವ ವೀರಃ । ಅಮೋಘವೀರ್ಯೇಣ ಹಿ ರಾಘವೇಣ ತ್ವಯಾ ವಿರೋಧಃ ಚರಿತಃ ಬತ ಅದ್ಯ ॥

**ಅರ್ಥ** :- **ಇತಿ** ಈ ಪ್ರಕಾರವಾಗಿ **ಈರಿತಃ** ಹೇಳಿಸಿಕೊಳ್ಳಲ್ಪಟ್ಟ **ವೀರಃ** ವೀರನಾದ ಕುಂಭಕರ್ಣನು **ಅಶೇಷಂ** ಆ ಎಲ್ಲಾ **ಕಾರಣಮಪಿ** ಯುದ್ಧದ ಕಾರಣವನ್ನೂ ಕೂಡ **ಶ್ರುತ್ವಾ** ಕೇಳಿ **ಅಮೋಘವೀರ್ಯೇಣ** ವ್ಯರ್ಥವಲ್ಲದ ಸಾಮರ್ಥ್ಯವುಳ್ಳ **ರಾಘವೇಣ** ರಾಮನಿಂದ **ಅದ್ಯ** ಈ ಸಮಯದಲ್ಲಿ **ವಿರೋಧಂ** ವಿರೋಧವು **ತ್ವಯಾ** ನಿನ್ನಿಂದ **ಚರಿತಃ ಹಿ** ಮಾಡಲ್ಪಟ್ಟಿದೆಯಷ್ಟೆ **ಬತ ಸಂಕಷ್ಟ** (**ಇತಿ** ಎಂಬುದಾಗಿ) **ಅಗ್ರಜಮೇವ** ಅಣ್ಣನಾದ ರಾವಣನನ್ನೇ **ಜಗರ್ಹ** ತೆಗಳಿದನು.

**ತಾತ್ಪರ್ಯ** : ರಾವಣನಿಂದ ಯುದ್ಧಕ್ಕೆ ಕಾರಣವನ್ನು ತಿಳಿದ ಕುಂಭಕರ್ಣನು 'ರಾವಣನೇ! ಪರಾಕ್ರಮಶಾಲಿಯಾದ ರಾಮನಿಂದಲೇ ನಿನಗೆ ಈಗ ವಿರೋಧವು ಉಂಟಾಗಿದೆ. ಇದು ಕಷ್ಟಕರವೆ' ಎಂದು ರಾವಣನನ್ನೇ ನಿಂದಿಸಿದನು.

### ಪಟ್ಟು ಬಿಡದ ರಾವಣ

**ಪ್ರಶಸ್ಯತೇ ನೋ ಬಲಿಭಿರ್ವಿರೋಧಃ**
**ಕಥಂಚಿದೇಷೋಽತಿಬಲೋ ಮತೋ ಮಮ ।**
**ಇತೀರಿತೋ ರಾವಣ ಆಹ ದುರ್ನಯೋಽ-**
**ಪ್ಯಹಂ ತ್ವಯಾಽವ್ಯೋ ಹಿ ಕಿಮನ್ಯಥಾ ತ್ವಯಾ ॥ ೧೦೩ ॥**

ಪದಚ್ಛೇದ : **ಪ್ರಶಸ್ಯತೇ ನೋ ಬಲಿಭಿಃ ವಿರೋಧಃ ಕಥಂಚಿತ್ ಏಷಃ ಅತಿಬಲಃ ಮತಃ ಮಮ । ಇತಿ ಈರಿತಃ ರಾವಣಃ ಆಹ ದುರ್ನಯಃ ಅಪಿ ಅಹಂ ತ್ವಯಾ ಅವ್ಯಃ ಹಿ ಕಿಮ್ ಅನ್ಯಥಾ ತ್ವಯಾ ॥**

**ಅರ್ಥ** : **ಬಲಿಭಿಃ** ಬಲಶಾಲಿಗಳಿಂದ **ವಿರೋಧಃ** ವಿರೋಧವು **ಕಥಂಚಿತ್** ಯಾವಪ್ರಕಾರದಿಂದಲೂ **ನೋ ಪ್ರಶಸ್ಯತೇ** ಪ್ರಶಸ್ತವಾಗುವುದಿಲ್ಲ, **ಏಷಃ** ಈ ರಾಮನು **ಅತಿಬಲಃ** ಅತ್ಯಂತಬಲಶಾಲಿಯೆಂದು **ಮಮ** ನನ್ನ **ಮತಃ** ಮತವು **ಇತಿ** ಹೀಗೆಂದು **ಈರಿತಃ** ಹೇಳಿಸಿಕೊಳ್ಳಲ್ಪಟ್ಟ **ರಾವಣಃ** ರಾವಣನು **ಆಹ** ಹೇಳಿದನು. **ದುರ್ನಯೋಽಪಿ** ದುಷ್ಟವಾದ ನೀತಿಯುಳ್ಳವನಾದರೂ **ತ್ವಯಾ** ನಿನ್ನಿಂದ **ಅವ್ಯೋ ಹಿ** ರಕ್ಷಿಸಲು ಅರ್ಹನಷ್ಟೆ **ಅನ್ಯಥಾ** ನೀನು ರಕ್ಷಿಸದಿದ್ದರೆ **ತ್ವಯಾ** ನಿನ್ನಿಂದ **ಕಿಂ** ಯಾವ ಪ್ರಯೋಜನವು.

**ತಾತ್ಪರ್ಯ** :- 'ಬಲಿಷ್ಠರಿಂದ ವಿರೋಧವು ಯಾವತ್ತೂ ಸರಿಯಾದುದ್ದಲ್ಲ. ರಾಮನಾದರೋ ಅತಿಬಲಶಾಲಿಯೆಂದೇ ನಾನು ತಿಳಿದಿದ್ದೇನೆ' ಎಂದ ಕುಂಭಕರ್ಣನಿಗೆ ರಾವಣನು 'ನಾನು ದುರಾಚಾರಿಯೇ ಹೌದು ಆದರೂ ತಮ್ಮನಾದ ನಿನ್ನಿಂದ ಅಣ್ಣನಾದ ನಾನು ರಕ್ಷಿಸಲು ಅರ್ಹನಷ್ಟೆ? ಒಂದು ವೇಳೆ ನೀನು ರಕ್ಷಿಸದಿದ್ದರೆ ನಿನ್ನಿಂದ ನನಗೆ ಯಾವ ಪ್ರಯೋಜನ' ಎಂದನು.

**ಚರಂತಿ ರಾಜಾನ ಉತಾಕ್ರಮಂ ಕ್ವಚಿತ್**
**ತ್ವಯೋಪಮಾನ್ ಬಂಧುಜನಾನ್ ಬಲಾಧಿಕಾನ್ ।**
**ಸಮೀಕ್ಷ್ಯ ಹೀತ್ಥಂ ಗದಿತೋಽಗ್ರಜೇನ**
**ಸ ಕುಂಭಕರ್ಣಃ ಪ್ರಯಯೌ ರಣಾಯ ॥ ೧೦೪ ॥**

**ಪದಚ್ಛೇದ** : **ಚರಂತಿ ರಾಜಾನಃ ಉತ ಅಕ್ರಮಂ ಕ್ವಚಿತ್ ತ್ವಯಾ ಉಪಮಾನ್ ಬಂಧುಜನಾನ್ ಬಲಾಧಿಕಾನ್ । ಸಮೀಕ್ಷ್ಯ ಹಿ ಇತ್ಥಂ ಗದಿತಃ ಅಗ್ರಜೇನ ಸಃ ಕುಂಭಕರ್ಣಃ ಪ್ರಯಯೌ ರಣಾಯ ॥**

**ಅರ್ಥ** : **ರಾಜಾನಃ** ರಾಜರು **ತ್ವಯಾ** ನಿನ್ನಿಂದ **ಉಪಮಾನ್** ಸದೃಶರಾದ **ಬಲಾ ಧಿಕಾನ್** ಅತ್ಯಂತಬಲಶಾಲಿಗಳಾದ **ಬಂಧುಜನಾನ್** ಬಂಧುಜನರನ್ನು **ಸಮೀಕ್ಷ್ಯ** ನೋಡಿ **ಕ್ವಚಿತ್** ಕೆಲವೊಮ್ಮೆ **ಅಕ್ರಮಂ** ಸರಿಯಲ್ಲದ **ಉತ** ನ್ಯಾಯ ಬಾಹಿರವಾದ ಕರ್ಮಗಳನ್ನು **ಚರಂತಿ ಹಿ** ಮಾಡುವರಷ್ಟೆ **ಇತ್ಥಂ** ಈ ಪ್ರಕಾರವಾಗಿ **ಅಗ್ರಜೇನ** ಅಣ್ಣನಾದ ರಾವಣನಿಂದ **ಗದಿತಃ** ಹೇಳಿಸಿಕೊಳ್ಳಲ್ಪಟ್ಟ **ಸಃ** ಆ **ಕುಂಭಕರ್ಣಃ** ಕುಂಭಕರ್ಣನು **ರಣಾಯ** ಯುದ್ಧಕ್ಕಾಗಿ **ಯಯೌ** ಹೋದನು.

**ತಾತ್ಪರ್ಯ** :- ಕುಂಭಕರ್ಣನೇ! ನಿನ್ನಂತೆಯೇ ಬಲಶಾಲಿಗಳಾದ ಬಂಧುಜನರು ಜೊತೆಗಿರಲು ರಾಜರು ಆಗಾಗ್ಗೆ ಅನೀತಿ ಕೆಲಸಗಳನ್ನು ಮಾಡುವರಷ್ಟೇ ಹಾಗೆಯೇ ನಾನೂ ಮಾಡಿರುವೆ. ರಾವಣನ ಈ ಮಾತನ್ನು ಕೇಳಿದ ಕುಂಭಕರ್ಣನು ಯುದ್ಧಕ್ಕೆ ಹೊರಡುವನು.

### ಯುದ್ಧಕ್ಕೆ ಆಗಮಿಸಿದ ಕುಂಭಕರ್ಣ

**ಪ್ರಾಕಾರಮಾಲಂಘ್ಯ ಸ ಪಂಚಯೋಜನಂ**
**ಯದಾ ಯಯೌ ಶೂಲವರಾಯುಧೋ ರಣಮ್ ।**

ಕಪಿಪ್ರವೀರಾ ಅಖಿಲಾಃ ಪ್ರದುದ್ರುವು-
ರ್ಭಯಾದತೀತ್ಯೈವ ಚ ಸೇತುಮಾಶು ॥ ೧೦೫ ॥

ಪದಚ್ಛೇದ : ಪ್ರಾಕಾರಮ್ ಆಲಂಘ್ಯ ಸಃ ಪಂಚಯೋಜನಂ ಯದಾ ಯಯೌ ಶೂಲವರಾಯುಧಃ ರಣಮ್ । ಕಪಿಪ್ರವೀರಾಃ ಅಖಿಲಾಃ ಪ್ರದುದ್ರುವುಃ ಭಯಾತ್ ಅತೀತ್ಯ ಏವ ಚ ಸೇತುಮ್ ಆಶು ॥

ಅರ್ಥ :- ಶೂಲವರಾಯುಧಃ ಉತ್ತಮವಾದ ಶೂಲವೇ ಆಯುಧವಾಗಿ ವುಳ್ಳ ಸಃ ಆ ಕುಂಭಕರ್ಣನು ಪಂಚಯೋಜನಃ ಐದು ಯೋಜನ ವಿಸ್ತಾರವುಳ್ಳ ಪ್ರಾಕಾರಂ ಲಂಕೆಯ ಕೋಟೆಯನ್ನು ಉಲ್ಲಂಘ್ಯ ಅತಿಕ್ರಮಿಸಿ ಯದಾ ಯಾವಾಗ ರಣಂ ಯುದ್ಧವನ್ನು ಕುರಿತು ಯಯೌ ಹೊರಟನೋ (ತದಾ ಆ ಸಮಯ ದಲ್ಲಿ) ಅಖಿಲಾಃ ಸಮಸ್ತ ಕಪಿಪ್ರವೀರಾಃ ಕಪಿವೀರರು ಭಯಾತ್ ಬಯ ದಿಂದ ಆಶು ಕೂಡಲೇ ಸೇತುಂ ಸೇತುವೆಯನ್ನು ಅತೀತ್ಯ ಏವ ದಾಟಿಯೇ ಪ್ರದುದ್ರುವುಃ ಓಡಿದರು.

ತಾತ್ಪರ್ಯ : ಐದು ಯೋಜನ ವಿಸ್ತಾರವುಳ್ಳ ಎತ್ತರ ಕೋಟೆಯನ್ನೇ ದಾಟಿ ಯುದ್ಧಕ್ಕೆ ಬರುತ್ತಿರುವ ಕುಂಭಕರ್ಣನನ್ನು ನೋಡಿದ ಕಪಿವೀರರು ಭಯದಿಂದ ತಾವು ಕಟ್ಟಿದ ಸೇತುವೆಯನ್ನು ದಾಟಿಯೇ ಹಿಂದಕ್ಕೆ ಓಡುತ್ತಾರೆ.

### ಕಪಿಗಳನ್ನು ನುಂಗಿದ ಕುಂಭಕರ್ಣ

ಶತವಲಿಪನಸಾಖ್ಯೌ ತತ್ರ ವಸ್ವಂಶಭೂತೌ
ಪವನಗಣವರಾಂಶೌ ಶ್ವೇತಸಂಪಾತಿನೌ ಚ ।
ನಿರ್ಋತಿತನುಮಥೋಗ್ರಂ ದುರ್ಮುಖಂ ಕೇಸರೀತಿ
ಪ್ರವರಮಥ ಮರುತ್ಸು ಪ್ರಾಸ್ಯದೇತಾನ್ ಮುಖೇ ಸಃ ॥ ೧೦೬ ॥

ಪದಚ್ಛೇದ : ಶತವಲಿಪನಸಾಖ್ಯೌ ತತ್ರ ವಸ್ವಂಶಭೂತೌ ಪವನಗಣವರಾಂಶೌ ಶ್ವೇತಸಂಪಾತಿನೌ ಚ । ನಿರ್ಋತಿತನುಮ್ ಅಥ ಉಗ್ರಂ ದುರ್ಮುಖಂ ಕೇಸರೀ ಇತಿ ಪ್ರವರಮ್ ಅಥ ಮರುತ್ಸು ಪ್ರಾಸ್ಯತ್ ಏತಾನ್ ಮುಖೇ ಸಃ ॥

ಅರ್ಥ :- ತತ್ರ ಆ ಕಪಿಗಳ ಮಧ್ಯದಲ್ಲಿ ವಸ್ವಂಶಭೂತೌ ಅಷ್ಟವಸುಗಳಲ್ಲಿ ಇಬ್ಬರು ವಸುಗಳ ಅಂಶಜರಾದ ಶತಪಲಿಪನಸಾಖ್ಯೌ ಶತಬಲಿ ಪನಸರೆಂಬ

ಇಬ್ಬರನ್ನು **ಪವನಗಣವರಾಂಶೌ** ಮರುದ್ಗಣಗಳಲ್ಲಿ ಉತ್ತಮರಾದ ಎರಡು ಮರುತ್ತುಗಳ ಅಂಶಜರಾದ **ಶ್ವೇತಸಂಪಾತಿನೌ ಚ** ಶ್ವೇತ ಮತ್ತು ಸಂಪಾತಿಗಳನ್ನು **ಅಥ** ಅನಂತ **ನಿರ್‌ಋತಿತನುಂ** ನಿರ್‌ಋತಿಯ ಪುತ್ರನಾದ **ಉಗ್ರಂ** ಉಗ್ರನಾದ **ದುರ್ಮುಖಂ** ದುರ್ಮುಖನೆಂಬ ಕಪಿಯನ್ನು **ಅಥ** ಅನಂತರ **ಮರುತ್ಸು** ಮರುತ್ತುಗಳಲ್ಲಿ **ಪ್ರವರಂ** ಮುಖ್ಯನಾದ **ಕೇಸರೀತಿ** ಕೇಸರಿ ಎಂದು ಯಾರು ಪ್ರಸಿದ್ಧನೋ **ತಂ** ಆ ಕೇಸರಿಯನ್ನು **ಸಃ** ಆ ಕುಂಭಕರ್ಣನು **ಏತಾನ್** ಪೂರ್ವೋಕ್ತ ಶಬಲಾದಿ ಆರು ಮಂದಿ ಕಪಿಗಳನ್ನು **ಮುಖೇ** ಬಾಯಲ್ಲಿ **ಪ್ರಾಸ್ಯತ್** ಹಾಕಿದನು.

**ತಾತ್ಪರ್ಯ** : ಆ ಕುಂಭಕರ್ಣನು ಅಷ್ಟವಸುಗಳಲ್ಲಿ ಶ್ರೇಷ್ಠರಾದ ವಸ್ವಂಶಜರಾದ ಶತಬಲಿ ಹಾಗು ಪನಸರೆಂಬುವರನ್ನು, ಮರುತ್ ಗಣಗಳಲ್ಲಿ ಉತ್ತಮರಾದ ಎರಡು ಮರುತ್ ಗಳ ಅಂಶಜರಾದ ಶ್ವೇತ ಮತ್ತು ಸಂಪಾತಿಯರನ್ನು, ಕ್ರೂರಿಯಾದ ನಿರ್‌ಋತಿಯ ಮಗನಾದ ದುರ್ಮುಖನೆಂಬುವವನ್ನು ಮರುತ್ತುಗಳಲ್ಲಿ ಶ್ರೇಷ್ಠನಾದ ಕೇಸರಿಯನ್ನು ಹಾಗು ಈ ಹಿಂದೆ ಹೇಳಿರುವ ಶತಬಲಿ ಮೊದಲಾದ ಆರು ಕಪಿಗಳನ್ನು ಕೂಡ ನುಂಗಿಹಾಕಿದನು.

**ರಜನಿಚರವರೋಽಸೌ ಕುಂಭಕರ್ಣಃ ಪ್ರತಾಪೀ**
**ಕುಮುದಮಪಿ ಜಯಂತಂ ಪಾಣಿನಾ ಸಂಪಿಪೇಷ ।**
**ನಲಮಥ ಚ ಗಜಾದೀನ್ ಪಂಚ ನೀಲಂ ಸತಾರಂ**
**ರಿವರತರುಹಸ್ತಾನ್ ಮುಷ್ಟಿನಾಽಪಾತಯಚ್ಚ ॥ ೧೦೭ ॥**

ಪದಚ್ಛೇದ : ರಜನಿಚರವರಃ ಅಸೌ ಕುಂಭಕರ್ಣಃ ಪ್ರತಾಪೀ ಕುಮುದಮ್ ಅಪಿ ಜಯಂತಂ ಪಾಣಿನಾ ಸಂಪಿಪೇಷ। ನಲಮ್ ಅಥ ಚ ಗಜಾದೀನ್ ಪಂಚ ನೀಲಂ ಸತಾರಂ ಗಿರಿವರತರುಹಸ್ತಾನ್ ಮುಷ್ಟಿನಾ ಆಪಾತಯತ್ ಚ ॥

**ಅರ್ಥ** :- **ರಜನಿಚರವರಃ** ರಾಕ್ಷಸರ ಒಡೆಯನಾದ **ಪ್ರತಾಪೀ** ಪರಾಕ್ರಮಶಾಲಿಯಾದ **ಅಸೌ** ಈ **ಕುಂಭಕರ್ಣಃ** ಕುಂಭಕರ್ಣನು **ಕುಮುದಂ** ಕುಮುದನೆಂಬ ಕಪಿಯನ್ನು **ಜಯಂತಮಪಿ** ಜಯಂತ ಎಂಬ ಕಪಿಯನ್ನೂ ಕೂಡ **ಪಾಣಿನಾ** ಹಸ್ತದಿಂದ **ಸಂಪಿಪೇಷ** ಮರ್ದಿಸಿದನು. **ಅಥ** ಅನಂತ **ಗಿರಿವರತರುಹಸ್ತಾನ್** ಶ್ರೇಷ್ಠಪರ್ವತಗಳು ವೃಕ್ಷಗಳು ಹಸ್ತದಲ್ಲಿರುವ **ನಲಂ** ನಲನನ್ನು **ಪಂಚ** ಐದುಸಂಖ್ಯಾಕರಾದ **ಗಜಾದೀನ್ ಚ** ಗಜನೇ ಮೊದಲಾದವರನ್ನೂ **ಸತಾರಂ**

ತಾರನಿಂದ ಕೂಡಿದ **ನೀಲಂ ಚ** ನೀಲನೆಂಬುವವನ್ನೂ ಕೂಡ **ಮುಷ್ಟಿನಾ** ಮುಷ್ಟಿಯಿಂದ **ಅಪಾತಯತ್** ಗುದ್ದಿದನು.

**ತಾತ್ಪರ್ಯ :** ಪರಾಕ್ರಮಶಾಲಿಯಾದ ಕುಂಭಕರ್ಣನು ಜಯಂತ ಕುಮುದರೆಂಬ ಕಪಿಗಳನ್ನು ತನ್ನ ಹಸ್ತದಿಂದ ಮರ್ದಿಸುತ್ತಾನೆ. ಆಗ ಪರ್ವತವೃಕ್ಷಗಳನ್ನು ಹಿಡಿದು ತನ್ನ ಮೇಲೆರಗಲು ಬಂದ ನಲನನ್ನು ಹಾಗು ಗಜನೇ ಮೊದಲಾದ ಐವರನ್ನು ತಾರ ಹಾಗು ನೀಲ ಇವರನ್ನೆಲ್ಲರನ್ನೂ ಮುಷ್ಟಿಯಿಂದ ಗುದ್ದುವನು.

ಬಸವಳಿದ ಕಪಿಶ್ರೇಷ್ಠರು

**ಅಥಾಂಗದಶ್ಚ ಜಾಂಬವಾನಿನಾತ್ಮಜಶ್ಚ ವಾನರೈಃ ।**
**ನಿಜಘ್ನಿರೇ ನಿಶಾಚರಂ ಸವೃಕ್ಷಶೈಲಸಾನುಭಿಃ ॥ ೧೦೮ ॥**

**ಪದಚ್ಛೇದ :** ಅಥ ಅಂಗದಃ ಚ ಜಾಂಬವಾನ್ ಇನಾತ್ಮಜಃ ಚ ವಾನರೈಃ । ನಿಜಘ್ನಿರೇ ನಿಶಾಚರಂ ಸವೃಕ್ಷಶೈಲಸಾನುಭಿಃ ॥

**ಅರ್ಥ : ಅಥ** ಅನಂತರ **ಅಂಗದಃ** ಅಂಗದನು **ಜಾಂಬವಾನ್ ಚ** ಜಾಂಬವಂತನೂ **ಇನಾತ್ಮಜಶ್ಚ** ಸೂರ್ಯನ ಮಗನಾದ ಸುಗ್ರೀವನೂ ಕೂಡ **ವಾನರೈಃ** ಕಪಿಗಳಿಂದ (ಸಹ ಕೂಡಿಕೊಂಡು) **ಸವೃಕ್ಷಶೈಲಸಾನುಭಿಃ** ವೃಕ್ಷಗಳಿಂದ ಕೂಡಿದ ಪರ್ವತ ಶಿಖರಗಳಿಂದ **ನಿಶಾಚರಂ** ಕುಂಭಕರ್ಣನನ್ನು **ನಿಜಘ್ನಿರೇ** ಹಿಂಸಿಸಿದರು.

**ತಾತ್ಪರ್ಯ :-** ಆಗ ಅಂಗದ ಜಾಂಬವಂತ ಸುಗ್ರೀವ ಇವರೊಂದಿಗೆ ಕಪಿಗಳೂ ಸೇರಿ ವೃಕ್ಷ ಪರ್ವತ ಶಿಖರಗಳನ್ನು ಕಿತ್ತು ಕುಂಭಕರ್ಣನಿಗೆ ಹೊಡದರು.

**ವಿಚೂರ್ಣಿತಾಶ್ಚ ಪರ್ವತಾಸ್ತನೌ ನಿಶಾಚರಸ್ಯ ತೇ ।**
**ಬಭೂವ ಕಾಚನ ವ್ಯಥಾ ನಚಾಸ್ಯ ಬಾಹುಷಾಲಿನಃ ॥ ೧೦೯ ॥**

**ಪದಚ್ಛೇದ :** ವಿಚೂರ್ಣಿತಾಃ ಚ ಪರ್ವತಾಃ ತನೌ ನಿಶಾಚರಸ್ಯ ತೇ । ಬಭೂವ ಕಾಚನ ವ್ಯಥಾ ನ ಚ ಅಸ್ಯ ಬಾಹುಷಾಲಿನಃ ॥

**ಅರ್ಥ : ಬಾಹುಷಾಲಿನಃ** ಬಾಹುಗಳಿಂದ ಪ್ರಕಾಶಿಸುವಂತಹ **ನಿಶಾಚರಸ್ಯ** ಕುಂಭಕರ್ಣನ **ತನೌ** ದೇಹದಲ್ಲಿ **ತೇ** ಅಂತಹ **ಪರ್ವತಾಃ** ಪರ್ವತಗಳು **ವಿಚೂರ್ಣಿತಾಃ** ಪುಡಿಯಾದವು. **ಅಸ್ಯ** ಈ ಕುಂಭಕರ್ಣನಿಗೆ **ಕಾಚನ** ಸ್ವಲ್ಪವೂ **ವ್ಯಥಾ ಚ** ದುಃಖವೂ ಕೂಡ **ನ ಬಭೂವ** ಉಂಟಾಗಲಿಲ್ಲ

**ತಾತ್ಪರ್ಯ** :- ಉತ್ತಮ ಬಾಹುಗಳಿಂದ ಪ್ರಕಾಶಿಸುವ ಕುಂಭಕರ್ಣನಿಗೆ ಕಪಿಗಳು ಎಸೆದ ಪರ್ವತಶಿಖರ ವೃಕ್ಷಗಳು ಬಿದ್ದು ಪುಡಿಯಾದವಷ್ಟೇ ಹೊರತು ಇವನಿಗೆ ಸ್ವಲ್ಪವೂ ದುಃಖ ಉಂಟಾಗಲಿಲ್ಲ.

**ಅಥಾಪರಂ ಮಹಾಚಲಂ ಪ್ರಗೃಹ್ಯ ಭಾಸ್ಕರಾತ್ಮಜಃ ।**
**ಮುಮೋಚ ರಾಕ್ಷಸೇಽಥ ತಂ ಪ್ರಗೃಹ್ಯ ತಂ ಜಘಾನ ಸಃ ॥ ೧೧೦ ॥**

**ಪದಚ್ಛೇದ** : **ಅಥ ಅಪರಂ ಮಹಾಚಲಂ ಪ್ರಗೃಹ್ಯ ಭಾಸ್ಕರಾತ್ಮಜಃ । ಮುಮೋಚ ರಾಕ್ಷಸೇ ಅಥ ತಂ ಪ್ರಗೃಹ್ಯ ತಂ ಜಘಾನ ಸಃ ॥**

**ಅರ್ಥ** : **ಅಥ** ಅನಂತರ **ಭಾಸ್ಕರಾತ್ಮಜಃ** ರವಿಯ ಮಗನಾದ ಸುಗ್ರೀವನು **ಅಪರಂ** ಇನ್ನೊಂದು **ಮಹಾಚಲಂ** ದೊಡ್ಡ ಪರ್ವತವನ್ನು **ಪ್ರಗೃಹ್ಯ** ಹಿಡಿದು **ರಾಕ್ಷಸೇ** ಕುಂಭಕರ್ಣನಲ್ಲಿ **ಮುಮೋಚ** ಬಿಟ್ಟನು. **ಸಃ** ಆ ಕುಂಭಕರ್ಣನು **ತಂ** ಆ ಪರ್ವತವನ್ನು **ಪ್ರಗೃಹ್ಯ** ಹಿಡಿದು **ತಂ** ಆ ಸುಗ್ರೀವನನ್ನು **ಜಘಾನ** ಹೊಡೆದನು.

**ತಾತ್ಪರ್ಯ** : ಸುಗ್ರೀವನು ಇನ್ನೊಂದು ದೊಡ್ಡ ಪ್ರವತವನ್ನು ಕುಂಭಕರ್ಣನ ಮೇಲೆ ಎಸೆಯುವನು. ಅದನ್ನು ಹಿಡಿದು ಕುಂಭಕರ್ಣನೇ ಸುಗ್ರೀವನಿಗೆ ಹೊಡೆದ.

**ಅಂಗದಾದಿಗಳ ಪರಾಜಯ**

**ತದಾ ಪಪಾತ ಸೂರ್ಯಜಸ್ತತಾಡ ಚಾಂಗದಂ ರುಷಾ ।**
**ಸ ಜಾಂಬವಂತಮಾಶು ತೌ ನಿಪೇತತುಸ್ತಲಾಹತೌ ॥ ೧೧೧ ॥**

**ಪದಚ್ಛೇದ** : **ತದಾ ಪಪಾತ ಸೂರ್ಯಜಃ ತತಾಡ ಚ ಅಂಗದಂ ರುಷಾ । ಸ ಜಾಂಬವಂತಮ್ ಆಶು ತೌ ನಿಪೇತತುಃ ತಲಾಹತೌ ॥**

**ಅರ್ಥ** : **ತದಾ** ಆಗ **ಸೂರ್ಯಜಃ** ಸೂರ್ಯನಿಂದ ಜನಿಸಿದ ಸುಗ್ರೀವನು **ಪಪಾತ** ಬಿದ್ದನು. **ಸಃ** ಆ ಕುಂಭಕರ್ಣನು **ರುಷಾ** ಕ್ರೋಧದಿಂದ **ಅಂಗದಂ** ಅಂಗದನನ್ನು **ಜಾಂಬವಂತಂ ಚ** ಜಾಂಬವಂತನನ್ನು ಕೂಡ (**ತತಾಡ** ಹೊಡೆದನು) **ತಲಾಹತೌ** ಹಸ್ತತಲದ ಹೊಡೆತದಿಂದ **ತೌ** ಅಂಗದ ಜಾಂಬ ವಂತರು **ಆಶು** ಕೂಡಲೇ **ನಿಪೇತತುಃ** ಬಿದ್ದರು.

ತಾತ್ಪರ್ಯ :- ಕುಂಭಕರ್ಣನ ಹೊಡೆತಕ್ಕೆ ಸುಗ್ರೀವನು ಕೆಳಕ್ಕೆ ಬೀಳುವನು. ಅದೇ ಸಿಟ್ಟಿನಿಂದ ಕುಂಭಕರ್ಣನು ಹಸ್ತತಲದಿಂದ ಅಂಗದ ಜಾಂಬವಂತರನ್ನೂ ಹೊಡೆದಾಗ ಅವರಿಬ್ಬರು ಕೂಡಲೇ ನೆಲ ಕಚ್ಚುತ್ತಾರೆ.

### ಸುಗ್ರೀವನನ್ನು ಎತ್ತೊಯ್ದ ಕುಂಭಕರ್ಣ

**ಅಥ ಪ್ರಗೃಹ್ಯ ಭಾಸ್ಕರಿಂ ಯಯೌ ಸ ರಾಕ್ಷಸೋ ಬಲೀ ।**
**ಜಗಾಮ ಚಾನು ಮಾರುತಿಃ ಸುಸೂಕ್ಷ್ಮಮಕ್ಷಿಕೋಪಮಃ ॥ ೧೧೨ ॥**

ಪದಚ್ಛೇದ : ಅಥ ಪ್ರಗೃಹ್ಯ ಭಾಸ್ಕರಿಂ ಯಯೌ ಸ ರಾಕ್ಷಸಃ ಬಲೀ । ಜಗಾಮ ಚ ಅನು ಮಾರುತಿಃ ಸುಸೂಕ್ಷ್ಮಮಕ್ಷಿಕೋಪಮಃ ॥

ಅರ್ಥ :- **ಅಥ** ಅನಂತರ **ಬಲೀ** ಬಲಶಾಲಿಯಾದ **ರಾಕ್ಷಸಃ** ರಾಕ್ಷಸನಾದ **ಸಃ** ಆ ಕುಂಭಕರ್ಣನು **ಭಾಸ್ಕರಿಂ** ಸುಗ್ರೀವನ್ನು **ಪ್ರಗೃಹ್ಯ** ಹಿಡಿದು **ಯಯೌ** ಹೊರಟನು. **ಮಾರುತಿಶ್ಚ** ಹನುಮಂತನಾದರೋ **ಸುಸೂಕ್ಷ್ಮಮಕ್ಷಿಕೋಪಮಃ** ಅತಿಸೂಕ್ಷ್ಮವಾದ ನೊಣಕ್ಕೆ ಸದೃಶವಾದ ರೂಪವುಳ್ಳವನಾಗಿ **ಅನು** ಸುಗ್ರೀವನನ್ನು ಅನುಸರಿಸಿ **ಜಗಾಮ** ಹೋದನು.

ತಾತ್ಪರ್ಯ :- ಕೆಳಗೆ ಬಿದ್ದ ಸುಗ್ರೀವನನ್ನು ಕುಂಭಕರ್ಣನು ಎತ್ತೊಯ್ದನು. ಆಗ ಹನುಮಂತನು ನೊಣದ ಆಕಾರದಂತೆ ಸೂಕ್ಷ್ಮರೂಪದಿಂದ ಸುಗ್ರೀವನನ್ನು ಹಿಂಬಾಲಿಸಿದನು.

### ಸುಗ್ರೀವನ ರಕ್ಷಣೆಗೆ ಹನುಮ

**ಯದ್ಯೈನಮೇಷ ಬಾಧತೇ ತದಾ ವಿಮೋಚಯಾಮ್ಯಹಮ್ ।**
**ಯದಿ ಸ್ಮ ಶಕ್ಯತೇಽಸ್ಯ ತು ಸ್ವಮೋಚನಾಯ ತದ್ ವರಮ್ ॥ ೧೧೩ ॥**

ಪದಚ್ಛೇದ :ಯದಾ ಏನಂ ಏಷಃ ಬಾಧತೇ ತದಾ ವಿಮೋಚಯಾಮಿ ಅಹಮ್ । ಯದಿ ಸ್ಮ ಶಕ್ಯತೇ ಅಸ್ಯ ತು ಸ್ವಮೋಚನಾಯ ತತ್ ವರಮ್ ॥

ಅರ್ಥ :- **ಯದಾ** ಯಾವ ಸಮಯದಲ್ಲಿ **ಏನಂ** ಈ ಸುಗ್ರೀವನನ್ನು **ಏಷಃ** ಈ ಕುಂಭಕರ್ಣನು **ಬಾಧತೇ** ತೊಂದರೆ ಮಾಡುವನೋ **ತದಾ** ಆ ಸಮಯದಲ್ಲಿ **ಅಸ್ಯ ತು** ಈ ಸುಗ್ರೀವನಿಗಾದರೋ **ಸ್ವಮೋಚನಾಯ** ತನ್ನನ್ನು ಕುಂಭಕರ್ಣ

**ತಾತ್ಪರ್ಯ** :- ಉತ್ತಮ ಬಾಹುಗಳಿಂದ ಪ್ರಕಾಶಿಸುವ ಕುಂಭಕರ್ಣನಿಗೆ ಕಪಿಗಳು ಎಸೆದ ಪರ್ವತಶಿಖರ ವೃಕ್ಷಗಳು ಬಿದ್ದು ಪುಡಿಯಾದವಷ್ಟೇ ಹೊರತು ಇವನಿಗೆ ಸ್ವಲ್ಪವೂ ದುಃಖ ಉಂಟಾಗಲಿಲ್ಲ.

**ಅಥಾಪರಂ ಮಹಾಚಲಂ ಪ್ರಗೃಹ್ಯ ಭಾಸ್ಕರಾತ್ಮಜಃ ।**
**ಮುಮೋಚ ರಾಕ್ಷಸೇಽಥ ತಂ ಪ್ರಗೃಹ್ಯ ತಂ ಜಘಾನ ಸಃ ॥ ೧೧೦ ॥**

**ಪದಚ್ಛೇದ** : ಅಥ ಅಪರಂ ಮಹಾಚಲಂ ಪ್ರಗೃಹ್ಯ ಭಾಸ್ಕರಾತ್ಮಜಃ । ಮುಮೋಚ ರಾಕ್ಷಸೇ ಅಥ ತಂ ಪ್ರಗೃಹ್ಯ ತಂ ಜಘಾನ ಸಃ ॥

**ಅರ್ಥ** : **ಅಥ** ಅನಂತರ **ಭಾಸ್ಕರಾತ್ಮಜಃ** ರವಿಯ ಮಗನಾದ ಸುಗ್ರೀವನು **ಅಪರಂ** ಇನ್ನೊಂದು **ಮಹಾಚಲಂ** ದೊಡ್ಡ ಪರ್ವತವನ್ನು **ಪ್ರಗೃಹ್ಯ** ಹಿಡಿದು **ರಾಕ್ಷಸೇ** ಕುಂಭಕರ್ಣನಲ್ಲಿ **ಮುಮೋಚ** ಬಿಟ್ಟನು. **ಸಃ** ಆ ಕುಂಭಕರ್ಣನು **ತಂ** ಆ ಪರ್ವತವನ್ನು **ಪ್ರಗೃಹ್ಯ** ಹಿಡಿದು **ತಂ** ಆ ಸುಗ್ರೀವನನ್ನು **ಜಘಾನ** ಹೊಡೆದನು.

**ತಾತ್ಪರ್ಯ** : ಸುಗ್ರೀವನು ಇನ್ನೊಂದು ದೊಡ್ಡ ಪ್ರವತವನ್ನು ಕುಂಭಕರ್ಣನ ಮೇಲೆ ಎಸೆಯುವನು. ಅದನ್ನು ಹಿಡಿದು ಕುಂಭಕರ್ಣನೇ ಸುಗ್ರೀವನಿಗೆ ಹೊಡೆದ.

### ಅಂಗದಾದಿಗಳ ಪರಾಜಯ

**ತದಾ ಪಪಾತ ಸೂರ್ಯಜಸ್ತತಾಡ ಚಾಂಗದಂ ರುಷಾ ।**
**ಸ ಜಾಂಬವಂತಮಾಶು ತೌ ನಿಪೇತತುಸ್ತಲಾಹತೌ ॥ ೧೧೧ ॥**

**ಪದಚ್ಛೇದ** : ತದಾ ಪಪಾತ ಸೂರ್ಯಜಃ ತತಾಡ ಚ ಅಂಗದಂ ರುಷಾ । ಸ ಜಾಂಬವಂತಮ್ ಆಶು ತೌ ನಿಪೇತತುಃ ತಲಾಹತೌ ॥

**ಅರ್ಥ** : **ತದಾ** ಆಗ **ಸೂರ್ಯಜಃ** ಸೂರ್ಯನಿಂದ ಜನಿಸಿದ ಸುಗ್ರೀವನು **ಪಪಾತ** ಬಿದ್ದನು. **ಸಃ** ಆ ಕುಂಭಕರ್ಣನು **ರುಷಾ** ಕ್ರೋಧದಿಂದ **ಅಂಗದಂ** ಅಂಗದನನ್ನು **ಜಾಂಬವಂತಂ ಚ** ಜಾಂಬವಂತನನ್ನು ಕೂಡ (**ತತಾಡ** ಹೊಡೆದನು) **ತಲಾಹತೌ** ಹಸ್ತತಲದ ಹೊಡೆತದಿಂದ **ತೌ** ಅಂಗದ ಜಾಂಬವಂತರು **ಆಶು** ಕೂಡಲೇ **ನಿಪೇತತುಃ** ಬಿದ್ದರು.

**ತಾತ್ಪರ್ಯ** :- ಕುಂಭಕರ್ಣನ ಹೊಡೆತಕ್ಕೆ ಸುಗ್ರೀವನು ಕೆಳಕ್ಕೆ ಬೀಳುವನು. ಅದೇ ಸಿಟ್ಟಿನಿಂದ ಕುಂಭಕರ್ಣನು ಹಸ್ತತಲದಿಂದ ಅಂಗದ ಜಾಂಬವಂತರನ್ನೂ ಹೊಡೆದಾಗ ಅವರಿಬ್ಬರು ಕೂಡಲೇ ನೆಲ ಕಚ್ಚುತ್ತಾರೆ.

### ಸುಗ್ರೀವನನ್ನು ಎತ್ತೊಯ್ದ ಕುಂಭಕರ್ಣ

**ಅಥ ಪ್ರಗೃಹ್ಯ ಭಾಸ್ಕರಿಂ ಯಯೌ ಸ ರಾಕ್ಷಸೋ ಬಲೀ ।**
**ಜಗಾಮ ಚಾನು ಮಾರುತಿಃ ಸುಸೂಕ್ಷ್ಮಮಕ್ಷಿಕೋಪಮಃ ॥ ೧೧೨ ॥**

ಪದಚ್ಛೇದ : ಅಥ ಪ್ರಗೃಹ್ಯ ಭಾಸ್ಕರಿಂ ಯಯೌ ಸ ರಾಕ್ಷಸಃ ಬಲೀ । ಜಗಾಮ ಚ ಅನು ಮಾರುತಿಃ ಸುಸೂಕ್ಷ್ಮ ಮಮಕ್ಷಿಕೋಪಮಃ ॥

**ಅರ್ಥ** :- **ಅಥ** ಅನಂತರ **ಬಲೀ** ಬಲಶಾಲಿಯಾದ **ರಾಕ್ಷಸಃ** ರಾಕ್ಷಸನಾದ **ಸಃ** ಆ ಕುಂಭಕರ್ಣನು **ಭಾಸ್ಕರಿಂ** ಸುಗ್ರೀವನ್ನು **ಪ್ರಗೃಹ್ಯ** ಹಿಡಿದು **ಯಯೌ** ಹೊರಟನು. **ಮಾರುತಿಶ್ಚ** ಹನುಮಂತನಾದರೋ **ಸುಸೂಕ್ಷ್ಮಮಕ್ಷಿಕೋಪಮಃ** ಅತಿಸೂಕ್ಷ್ಮವಾದ ನೊಣಕ್ಕೆ ಸದೃಶವಾದ ರೂಪವುಳ್ಳವನಾಗಿ **ಅನು** ಸುಗ್ರೀವನನ್ನು ಅನುಸರಿಸಿ **ಜಗಾಮ** ಹೋದನು.

**ತಾತ್ಪರ್ಯ** :- ಕೆಳಗೆ ಬಿದ್ದ ಸುಗ್ರೀವನನ್ನು ಕುಂಭಕರ್ಣನು ಎತ್ತೊಯ್ದನು. ಆಗ ಹನುಮಂತನು ನೊಣದ ಆಕಾರದಂತೆ ಸೂಕ್ಷ್ಮರೂಪದಿಂದ ಸುಗ್ರೀವನನ್ನು ಹಿಂಬಾಲಿಸಿದನು.

### ಸುಗ್ರೀವನ ರಕ್ಷಣೆಗೆ ಹನುಮ

**ಯದ್ಯೈನಮೇಷ ಬಾಧತೇ ತದಾ ವಿಮೋಚಯಾಮ್ಯಹಮ್ ।**
**ಯದಿ ಸ್ಮ ಶಕ್ಯತೇಽಸ್ಯ ತು ಸ್ವಮೋಚನಾಯ ತದ್ ವರಮ್ ॥ ೧೧೩ ॥**

ಪದಚ್ಛೇದ :ಯದಾ ಏನಂ ಏಷಃ ಬಾಧತೇ ತದಾ ವಿಮೋಚಯಾಮಿ ಅಹಮ್ । ಯದಿ ಸ್ಮ ಶಕ್ಯತೇ ಅಸ್ಯ ತು ಸ್ವಮೋಚನಾಯ ತತ್ ವರಮ್ ॥

**ಅರ್ಥ** :- **ಯದಾ** ಯಾವ ಸಮಯದಲ್ಲಿ **ಏನಂ** ಈ ಸುಗ್ರೀವನನ್ನು **ಏಷಃ** ಈ ಕುಂಭಕರ್ಣನು **ಬಾಧತೇ** ತೊಂದರೆ ಮಾಡುವನೋ **ತದಾ** ಆ ಸಮಯದಲ್ಲಿ **ಅಸ್ಯ ತು** ಈ ಸುಗ್ರೀವನಿಗಾದರೋ **ಸ್ವಮೋಚನಾಯ** ತನ್ನನ್ನು ಕುಂಭಕರ್ಣ

ನಿಂದ ವಿಮೋಚನೆ ಮಾಡಿಕೊಳ್ಳುವುವುದಕ್ಕೋಸ್ಕರ **ಯದಿ** ಒಂದು ವೇಳೆ **ಶಕ್ಯತೇ ಸ್ಮ** ಒಂದು ವೇಳೆ ಶಕ್ಯನಾಗುವುದಾದರೆ **ತತ್** ಹಾಗಿದ್ದರೆ **ವರಂ** ಒಳ್ಳೆಯದು. (**ನೋ ಚೇತ್** ಇಲ್ಲವಾದಲ್ಲಿ **ಅಹಂ** ನಾನು **ಮೋಚಯಾಮಿ** ಬಿಡಿಸುವೆನು.

**ತಾತ್ಪರ್ಯ** :- ಹನುಮಂತನು ಸುಗ್ರೀವನನ್ನು ಹಿಂಬಾಲಿಸುತ್ತಾ ಹೀಗೆ ಯೋಚಿಸುತ್ತಾನೆ. 'ಕುಂಭಕರ್ಣನು ಸುಗ್ರೀವನನ್ನು ಪೀಡಿಸಿದಾಗ ಒಂದು ವೇಳೆ ಸುಗ್ರೀವನೇ ಅವನಿಂದ ತಪ್ಪಿಸಿಕೊಳ್ಳುವುದಾದರೆ ಒಳ್ಳೆಯದು. ಒಂದು ಪಕ್ಷ ಸುಗ್ರೀವನಿಂದಾಗದಿದ್ದರೆ ನಾನೇ ಅವನನ್ನು ಕುಂಭಕರ್ಣನಿಂದ ಬಿಡಿಸುತ್ತೇನೆ.'

**ಇತಿ ವ್ರಜತ್ಯನು ಸ್ಮ ತಂ ಮರುತ್ಸುತೇ ನಿಶಾಚರಃ ।**
**ಪುರಂ ವಿವೇಶ ಚಾರ್ಚಿತಃ ಸ್ವಬಂಧುಭಿಃ ಸಮಸ್ತಶಃ ॥ ೧೧೪ ॥**

**ಪದಚ್ಛೇದ** : ಇತಿ ವ್ರಜತಿ ಅನು ಸ್ಮ ತಂ ಮರುತ್ಸುತೇ ನಿಶಾಚರಃ । ಪುರಂ ವಿವೇಶ ಚ ಅರ್ಚಿತಃ ಸ್ವಬಂಧುಭಿಃ ಸಮಸ್ತಶಃ ॥

**ಅರ್ಥ** :- **ಇತಿ** ಹೀಗೆಂದು **ಮರುತ್ಸುತಃ** ಹನುಮಂತನು **ತಂ** ಆ ಸುಗ್ರೀವನನ್ನು **ಅನುವ್ರಜತಿ (ಸತಿ)** ಅನುಸರಿಸುತ್ತಿರಲು (**ತದಾ** ಆಗ) **ನಿಶಾಚರಃ** ಕುಂಭಕರ್ಣನು **ಪುರಂ** ಲಂಕಾಪುರವನ್ನು **ವಿವೇಶ** ಪ್ರವೇಶಿಸಿದನು. **ಸಮಸ್ತಶಃ** ಎಲ್ಲಾ **ಸ್ವಬಂಧುಭಿಃ ಚ** ತನ್ನ ಬಂಧುಗಳಿಂದಲೂ **ಅರ್ಚಿತಃ ಸ್ಮ** ಪೂಜಿಸಲ್ಪಟ್ಟವನೂ ಆದನು.

**ತಾತ್ಪರ್ಯ** :- ಹೀಗೆ ಹನುಮಂತನು ಯೋಚಿಸುತ್ತಿರಲು ಕುಂಭಕರ್ಣನು ಲಂಕಾಪಟ್ಟಣವನ್ನು ಪ್ರವೇಶಿಸಿದನು. ಅಲ್ಲಿ ಅವನ ಪರಾಕ್ರಮವನ್ನು ತಿಳಿದ ಅವನ ಬಂಧುಗಳೆಲ್ಲರೂ ಕುಂಭಕರ್ಣನನ್ನು ಹಾಡಿಹೊಗಳಿದರು.

### ಕುಂಭಕರ್ಣನನ್ನು ಕಚ್ಚಿ ಪರಚಿದ ಸುಗ್ರೀವ

**ತುಹಿನಸಲಿಲಮಾಲ್ಯೈಃ ಸರ್ವತೋಽಭಿಪ್ರವೃಷ್ಟೇ**
**ರಜನಿಚರವರೇಽಸ್ಮಿಂಸ್ತೇನ ಸಿಕ್ತಃ ಕಪೀಶಃ ।**
**ವಿಗತಸಕಲಯುದ್ಧಗ್ಲಾನಿರಾವಂಚಯಿತ್ವಾ**
**ರಜನಿಚರವರಂ ತಂ ತಸ್ಯ ನಾಸಾಂ ದದಂಶ ॥ ೧೧೫ ॥**

ಪದಚ್ಛೇದ : ತುಹಿನಸಲಿಲಮಾಲ್ಯೈ ಲ್ಯಃ ಸರ್ವತಃ ಅಭಿಪ್ರವೃಷ್ಟೇ ರಜನಿಚರವರೇ ಅಸ್ಮಿನ್ ತೇನ ಸಿಕ್ತಃ ಕಪೀಶಃ । ವಿಗತಸಕಲಯುದ್ಧಗ್ಲಾನಿಃ ಆವಂಚಯಿತ್ವಾ ರಜನಿಚರವರಂ ತಂ ತಸ್ಯ ನಾಸಾಂ ದದಂಶ ॥

ಅರ್ಥ :- ರಜನಿಚರವರೇ ರಾತ್ರಿಯಲ್ಲಿ ಸಂಚರಿಸುವ ರಾಕ್ಷಸರಲ್ಲಿ ಶ್ರೇಷ್ಠನಾದ ಅಸ್ಮಿನ್ ಈ ಕುಂಭಕರ್ಣನಲ್ಲಿ ತುಹಿನಸಲಿಲಮಾಲ್ಯೈಃ ಶೈತ್ಯವುಳ್ಳ ನೀರು ಪುಷ್ಪಗಳಿಂದ ಸರ್ವತಃ ಸಮಸ್ತ ಅಂಗಗಳಲ್ಲಿ ಅಭಿಪ್ರವೃಷ್ಟೇ (ಸತಿ) ಅಭಿಷಿಕ್ತವಾಗುತ್ತಿರಲು ತೇನ ಅದರಿಂದ ವಿಗತಸಕಲಯುದ್ಧಗ್ಲಾನಿಃ ಪರಿಹರಿಸಲ್ಪಟ್ಟ ಸಮಸ್ತ ಯುದ್ಧದ ಪರಿಶ್ರಮವುಳ್ಳ ಕಪೀಶಃ ಸುಗ್ರೀವನು ತಂ ಆ ಕುಂಭಕರ್ಣನನ್ನು ಆವಂಚಯಿತ್ವಾ ಚೆನ್ನಾಗಿ ವಂಚಿಸಿ ತಸ್ಯ ಅವನ ನಾಸಾಂ ಮೂಗನ್ನು ದದಂಶ ಕಚ್ಚಿದನು.

ತಾತ್ಪರ್ಯ :- ಆ ಲಂಕಾಪಟ್ಟಣದಲ್ಲಿ ಕುಂಭಕರ್ಣನಿಗೆ ಸೇವಕರೆಲ್ಲರು ತಂಪಾದ ನೀರು ಪುಷ್ಪಗಳಿಂದ ಅಭಿಷೇಕ ಮಾಡುವರು. ಇದು ಸುಗ್ರೀವನಿಗೂ ಸೋಕಿ ಕೂಡಲೇ ಎಚ್ಚರಗೊಂಡ ಅವನು ಕುಂಭಕರ್ಣನನ್ನೇ ವಂಚಿಸಿ ಅವನ ಮೂಗನ್ನು ಕಚ್ಚಿ ಬಿಡುತ್ತಾನೆ.

ಕರಾಭ್ಯಾಮಥ ಕರ್ಣೌ ಚ ನಾಸಿಕಾಂ ದಶನೈರಪಿ ।
ಸಂಭಿದ್ಯ ಕ್ಷಿಪ್ರಮೇವಾಸಾವುತ್ಪಪಾತ ಹರೀಶ್ವರಃ ॥ ೧೧೬ ॥

ಪದಚ್ಛೇದ : ಕರಾಭ್ಯಾಮ್ ಅಥ ಕರ್ಣೌ ಚ ನಾಸಿಕಾಂ ದಶನೈಃ ಅಪಿ । ಸಂಭಿದ್ಯ ಕ್ಷಿಪ್ರಂ ಏವಾಸೌ ಉತ್ಪಪಾತ ಹರೀಶ್ವರಃ ॥

ಅರ್ಥ :- ಅಸೌ ಹರೀಶ್ವರಃ ಈ ಸುಗ್ರೀವನು ಅಸ್ಯ ಈ ಕುಂಭಕರ್ಣನ ಕರ್ಣೌ ಕಿವಿಗಳನ್ನು ಕರಾಭ್ಯಾಂ ಚ ಕೈಗಳಿಂದಲೂ ನಾಸಿಕಾಂ ಮೂಗನ್ನು ದಶನೈರಪಿ ಹಲ್ಲುಗಳಿಂದಲೂ ಕೂಡ ಸಂಭಿದ್ಯ ಚೆನ್ನಾಗಿ ಕಚ್ಚಿ ಕ್ಷಿಪ್ರಮೇವ ಆ ಕೂಡಲೇ ಉತ್ಪಪಾತ ಹಾರಿದನು.

ತಾತ್ಪರ್ಯ :- ಕುಂಭಕರ್ಣನ ಕಿವಿಗಳನ್ನು ಕೈಗಳಿಂದ ಪರಚಿ ಹಲ್ಲುಗಳಿಂದ ಮೂಗನ್ನು ಕಚ್ಚಿದ ಸುಗ್ರೀವನು ಆ ಕ್ಷಣದಲ್ಲೇ ಆಕಾಶಕ್ಕೆ ಹಾರುತ್ತಾನೆ.

### ಸುಗ್ರೀವನನ್ನು ಬಿಡದ ಕುಂಭಕರ್ಣ

ತಲೇನ ಚೈನಂ ನಿಜಘಾನ ರಾಕ್ಷಸಃ
ಪಿಪೇಷ ಭೂಮೌ ಪತಿತಂ ತತೋಽಪಿ ।
ಸಮುದ್ಗತೋಽಸೌ ವಿವರೇಽಂಗುಲೀನಾಂ
ಜಘಾನ ಶೂಲೇನ ಪುನಃ ಸ ರಾಕ್ಷಸಃ ॥ ೧೧೭ ॥

ಪದಚ್ಛೇದ : ತಲೇನ ಚ ಏನಂ ನಿಜಘಾನ ರಾಕ್ಷಸಃ ಪಿಪೇಷ ಭೂಮೌ ಪತಿತಂ ತತಃ ಅಪಿ । ಸಮುದ್ಗತಃ ಅಸೌ ವಿವರೇ ಅಂಗುಲೀನಾಂ ಜಘಾನ ಶೂಲೇನ ಪುನಃ ಸ ರಾಕ್ಷಸಃ ॥

**ಅರ್ಥ** :- **ರಾಕ್ಷಸಃ** ರಾಕ್ಷಸನಾದ ಕುಂಭಕರ್ಣನು **ಏನಂ** ಈ ಸುಗ್ರೀವನನ್ನು **ತಲೇನ** ಅಂಗೈಯಿಂದ **ನಿಜಘಾನ** ಹೊಡೆದನು. **ತತೋಽಪಿ** ಮತ್ತೂ ಕೂಡ **ಭೂಮೌ** ಭೂಮಿಯಲ್ಲಿ **ಪತಿತಂ** ಬಿದ್ದಿರುವ ಸುಗ್ರೀವನನ್ನು **ಪಿಪೇಷ** ಕಾಲಿನಿಂದ ಮರ್ದಿಸಿದನು. **ಅಸೌ ಚ** ಈ ಸುಗ್ರೀವನಾದರೋ **ಅಂಗುಲೀನಾಂ** ಬೆರಳುಗಳ **ವಿವರೇ** ರಂಧ್ರದಿಂದ **ಸಮುದ್ಗತಃ** ಹೊರಬಂದನು. **ಸಃ ರಾಕ್ಷಸಃ** ಆ ಕುಂಭಕರ್ಣನು **ಪುನಃ** ಮತ್ತು **ಶೂಲೇನ** ಶೂಲದಿಂದ **ಜಘಾನ** ಹೊಡೆದನು.

**ತಾತ್ಪರ್ಯ** :- ತಪ್ಪಿಸಿಕೊಳ್ಳಲು ಯತ್ನಿಸಿದ ಸುಗ್ರೀವನನ್ನು ಕುಂಭಕರ್ಣನು ಅಂಗೈಯಿಂದ ಹೊಡೆದನು. ಕೆಳಗೆ ಬಿದ್ದರೂ ಬಿಡದೆ ಪುನಃ ಸುಗ್ರೀವನನ್ನು ಕಾಲಿನಿಂದ ತುಳಿದು ಹಾಕುತ್ತಾನೆ. ಆಗ ತನ್ನ ಬೆರಳುಗಳ ಸಂಧಿಯಿಂದ ತಪ್ಪಿಸಿಕೊಂಡು ಹೊರ ಬಂದ ಅವನನ್ನು ತನ್ನ ಶೂಲವೆಂಬ ಆಯುಧದಿಂದ ಹೊಡೆಯುವನು.

### ಸುಗ್ರೀವನನ್ನು ರಕ್ಷಿಸಿದ ಹನುಮ

ಅಮೋಘಶೂಲಂ ಪ್ರಪತತ್ ತದೀಕ್ಷ್ಯ
ರವೇಃ ಸುತಸ್ಯೋಪರಿ ಮಾರುತಾತ್ಮಜಃ ।
ಪ್ರಗೃಹ್ಯ ಜಾನೌ ಪ್ರಣಿಧಾಯ ಶೀಘ್ರಂ
ಬಭಂಜ ತಂ ಪ್ರೇಕ್ಷ್ಯ ನನಾದ ಚೋಚ್ಚೈಃ ॥ ೧೧೮ ॥

ಪದಚ್ಛೇದ : ಅಮೋಘಶೂಲಂ ಪ್ರಪತತ್ ತತ್ ಈಕ್ಷ್ಯ ರವೇಃ ಸುತಸ್ಯ ಉಪರಿ ಮಾರುತಾತ್ಮಜಃ । ಪ್ರಗೃಹ್ಯ ಜಾನೌ ಪ್ರಣಿಧಾಯ ಶೀಘ್ರಂ ಬಭಂಜ ತಂ ಪ್ರೇಕ್ಷ್ಯ ನನಾದ ಚ ಉಚ್ಚೈಃ ॥

**ಅರ್ಥ** :- **ರವೇಃ** ಸೂರ್ಯನ **ಸುತಸ್ಯ** ಪುತ್ರನಾದ ಸುಗ್ರೀವನ **ಉಪರಿ** ಮೇಲೆ **ಪ್ರಪತತ್** ಬೀಳುತ್ತಿರತಕ್ಕ **ಅಮೋಘಶೂಲಂ** ವ್ಯರ್ಥವಾಗದ ಶೂಲಾಯುಧವನ್ನು **ಮಾರುತಾತ್ಮಜಃ** ವಾಯುಪುತ್ರನಾದ ಹನುಮಂತನು **ಈಕ್ಷ್ಯ** ನೋಡಿ **ತತ್** ಅದನ್ನು **ಪ್ರಗೃಹ್ಯ** ಹಿಡಿದು **ಜಾನೌ** ಮೊಣಕಾಲಿನಲ್ಲಿ **ಪ್ರಣಿಧಾಯ** ಇಟ್ಟು **ಶೀಘ್ರಂ** ಕೂಡಲೇ **ಬಭಂಜ** ತುಂಡರಿಸಿದನು. **ತಂ** ಆ ಕುಂಭಕರ್ಣನನ್ನು **ಪ್ರೇಕ್ಷ್ಯ** ನೋಡಿ **ಉಚ್ಚೈಃ** ಜೋರಾಗಿ **ನನಾದ ಚ** ಸಿಂಹನಾದವನ್ನೂ ಮಾಡಿದನು.

**ತಾತ್ಪರ್ಯ** :- ಶೂಲಾಯುಧವು ಸುಗ್ರೀವನ ಮೇಲೆ ಬೀಳುತ್ತಿರುವುದನ್ನು ನೋಡಿದ ಹನುಮನು ಅದನ್ನು ಹಿಡಿದು ತನ್ನ ಮೊಣಕಾಲ ಮೇಲಿರಿಸಿ ತುಂಡರಿಸಿದ ಹನುಮನು ನಂತರ ಕುಂಭಕರ್ಣನನ್ನು ನೋಡಿ ಗಟ್ಟಿಯಾಗಿ ಗರ್ಜನೆಯನ್ನು ಮಾಡಿದ.

### ಹನುಮನ ಏಟು ತಿಂದ ಕುಂಭಕರ್ಣ

**ಅಥೈನಮಾವೃತ್ಯ ಜಘಾನ ಮುಷ್ಟಿನಾ**
**ಸ ರಾಕ್ಷಸೋ ವಾಯುಸುತಂ ಸ್ತನಾಂತರೇ ।**
**ಜಗರ್ಜ ತೇನಾಭಿಹತೋ ಹನೂಮಾ-**
**ನಚಿಂತಯಂಸ್ತತ್ ಪ್ರಜಹಾರ ಚೈನಮ್ ॥ ೧೧೯ ॥**

ಪದಚ್ಛೇದ : ಅಥ ಏನಮ್ ಆವೃತ್ಯ ಜಘಾನ ಮುಷ್ಟಿನಾ ಸ ರಾಕ್ಷಸಃ ವಾಯುಸುತಂ ಸ್ತನಾಂತರೇ । ಜಗರ್ಜ ತೇನ ಅಭಿಹತಃ ಹನೂಮಾನ್ ಅಚಿಂತಯನ್ ತತ್ ಪ್ರಜಹಾರ ಚ ಏನಮ್ ॥

**ಅರ್ಥ** :- **ಅಥ** ಅನಂತರ **ರಾಕ್ಷಸಃ** ರಾಕ್ಷಸನಾದ **ಸಃ** ಆ ಕುಂಭಕರ್ಣನು **ಆವೃತ್ಯ** ತಿರುಗಿಸಿ **ಮುಷ್ಟಿನಾ** ಮುಷ್ಟಿಯಿಂದ **ವಾಯುಸುತಂ** ವಾಯುಪುತ್ರನಾದ ಹನುಮಂತನನ್ನು **ಸ್ತನಾಂತರೇ** ಎದೆಯ ಮಧ್ಯಭಾಗಕ್ಕೆ **ಜಘಾನ** ಹೊಡೆದನು. **ಜಗರ್ಜ ಚ** ಗರ್ಜಿಸಿದನೂ ಕೂಡ. **ತೇನ** ಆ ಕುಂಭಕರ್ಣನಿಂದ **ಅಭಿಹತಃ**

ಹೊಡೆಯಲ್ಪಟ್ಟ **ಹನುಮಾನ್** ಹನುಮಮಂತನು **ತತ್** ಆ ಹೊಡೆತವನ್ನು **ಅಚಿಂತಯನ್** ಲೆಕ್ಕಿಸದೆ ಏನಂ ಈ ಕುಂಭಕರ್ಣನನ್ನು ಪ್ರಜಹಾರ ಹೊಡೆದನು.

**ತಾತ್ಪರ್ಯ** : ಆಗ ಕುಂಭಕರ್ಣನು ಮುಷ್ಟಿಯನ್ನು ಬಿಗಿಸಿ ಹನುಮಂತನ ಎದೆಯ ಮಧ್ಯಭಾಗಕ್ಕೆ ಹೊಡೆದು ಗರ್ಜನೆಯನ್ನು ಮಾಡುತ್ತಾನೆ. ಈ ಹೊಡೆತವನ್ನು ಪರಿಗಣಿಸದೆ ಹನುಮಂತನೂ ಕುಂಭಕರ್ಣನಿಗೆ ಹೊಡೆಯುತ್ತಾನೆ.

**ತಲೇನ ವಕ್ಷಸ್ಯಭಿತಾಡಿತೋ ರುಷಾ**
**ಹನೂಮತಾ ಮೋಹಮವಾಪ ರಾಕ್ಷಸಃ ।**
**ಪುನಶ್ಚ ಸಂಜ್ಞಾಂ ಸಮವಾಪ್ಯ ಶೀಘ್ರಂ**
**ಯಯೌ ಸ ಯತ್ರೈವ ರಘುಪ್ರವೀರಃ ॥ ೧೨೦ ॥**

**ಪದಚ್ಛೇದ : ತಲೇನ ವಕ್ಷಸಿ ಅಭಿತಾಡಿತಃ ರುಷಾ ಹನೂಮತಾ ಮೋಹಮ್ ಅವಾಪ ರಾಕ್ಷಸಃ । ಪುನಃ ಚ ಸಂಜ್ಞಾಂ ಸಮವಾಪ್ಯ ಶೀಘ್ರಂ ಯಯೌ ಸ ಯತ್ರ ಏವ ರಘುಪ್ರವೀರಃ ॥**

**ಅರ್ಥ :- ಹನುಮತಾ** ಹನುಮಂತನಿಂದ **ರುಷಾ** ಸಿಟ್ಟಿನಿಂದ **ತಲೇನ** ಅಂಗೈಯಿಂದ **ವಕ್ಷಸಿ** ಎದೆಯಲ್ಲಿ **ಅಭಿತಾಡಿತಃ** ಹೊಡೆಯಲ್ಪಟ್ಟ **ರಾಕ್ಷಸಃ** ಕುಂಭಕರ್ಣನು **ಮೋಹಂ** ಮೂರ್ಛಾವಸ್ಥೆಯನ್ನು **ಅವಾಪ** ಹೊಂದಿದನು. **ಪುನಃ** ಮತ್ತು **ಸ ಚ** ಆ ಕುಂಭಕರ್ಣನಾದರೋ **ಸಂಜ್ಞಾಂ** ಪ್ರಜ್ಞೆಯನ್ನು **ಸಮವಾಪ್ಯ** ಹೊಂದಿ **ರಘುಪ್ರವೀರಃ** ಶ್ರೀರಾಮನು **ಯತ್ರ** ಎಲ್ಲಿರುವನೋ **ತತ್ರೈವ** ಆ ಪ್ರದೇಶವನ್ನೇ ಕುರಿತು **ಯಯೌ** ಹೊರಟನು.

**ತಾತ್ಪರ್ಯ** : ಹನುಮಂತನ ಹೊಡೆತವನ್ನು ಸಹಿಸಲಾರದೆ ಕುಂಭಕರ್ಣನು ಮೂರ್ಛೆ ಹೋಗುವನು. ಮೂರ್ಛೆಯಿಂದ ಎಚ್ಚತ್ತ ಕುಂಭಕರ್ಣನು ಕೂಡಲೇ ರಾಮನಿರುವಲ್ಲಿಯೇ ಯುದ್ಧಕ್ಕೆ ತೆರಳುವನು.

**ಕುಂಭಕರ್ಣನನ್ನು ವಧಿಸದೆ ಬಿಟ್ಟ ಹನುಮ**

**ವಿಚಿಂತಯಾಮಾಸ ತತೋ ಹನೂಮಾನ್**
**ಮಯ್ಯೆವ ಹಂತುಂ ಸಮರೇ ಹಿ ಶಕ್ಯಃ ।**
**ಅಸೌ ತಥಾಽಪ್ಯೇನಮಹಂ ನ ಹನ್ಮಿ**
**ಯಶೋ ಹಿ ರಾಮಸ್ಯ ದೃಢಂ ಪ್ರಕಾಶಯನ್ ॥ ೧೨೧ ॥**

ಪದಚ್ಛೇದ : ವಿಚಿಂತಯಾಮಾಸ ತತಃ ಹನೂಮಾನ್ ಮಯಾ ಏವ ಹಂತುಂ ಸಮರೇ ಹಿ ಶಕ್ಯಃ । ಅಸೌ ತಥಾ ಅಪಿ ಏನಮ್ ಅಹಂ ನ ಹನ್ಮಿ ಯಶೋ ಹಿ ರಾಮಸ್ಯ ದೃಢಂ ಪ್ರಕಾಶಯನ್ ॥

**ಅರ್ಥ** : **ತತಃ** ಅನಂತರ **ಹಿ** ಯಾವ ಕಾರಣದಿಂದ **ರಾಮಸ್ಯ** ಶ್ರೀರಾಮನ **ಯಶಃ** ಕೀರ್ತಿಯನ್ನು **ದೃಢಂ** ದೃಢವಾದದ್ದು ಹೇಗೋ (**ತಥಾ** ಹಾಗೆಯೇ) **ಪ್ರಕಾಶಯನ್** (**ಸನ್**) ಪ್ರಕಾಶಪಡಿಸುವವನಾಗಿ **ಹನೂಮಾನ್** ಹನುಮಂತನು **ಅಸೌ** ಈ ಕುಂಭಕರ್ಣನು **ಸಮರೇ** ಯುದ್ಧದಲ್ಲಿ **ಮಯಾ ಏವ** ನನ್ನಿಂದಲೇ **ಹಂತುಂ** ಸಂಹರಿಸಲು **ಶಕ್ಯಃ** ಶಕ್ಯನು. **ತಥಾಪಿ** ಹಾಗಿರುವಾಗಲೂ **ಏನಂ** ಈ ಕುಂಭಕರ್ಣನನ್ನು **ನ ಹನ್ಮಿ** ಸಂಹರಿಸುವುದಿಲ್ಲ **ಇತಿ** ಎಂಬುದಾಗಿ **ವಿಚಿಂತಯಾ ಮಾಸ** ಚಿಂತಿಸಿದನು.

**ತಾತ್ಪರ್ಯ** : 'ಈ ಕುಂಭಕರ್ಣನನ್ನು ನನ್ನಿಂದಲೇ ಸಂಹರಿಸಲು ಸಾಧ್ಯವಿದೆ. ಆದರೂ ರಾಮನ ಕೀರ್ತಿಯು ಎಲ್ಲೆಡೆ ಪ್ರಕಟಪಡಿಸುವುದಕ್ಕಾಗಿ ಇವನನ್ನು ಸಂಹರಿಸಲಾರೆ.' ಎಂದು ಆಲೋಚಿಸಿದ ಹನುಮಂತನು ಮೂರ್ಛಾವಸ್ಥೆಯಿಂದ ಎದ್ದು ಓಡಿದ ಕುಂಭಕರ್ಣನನ್ನು ಹಾಗೆಯೇ ಹೋಗಲು ಬಿಡುವನು.

**ಅನನ್ಯವಧ್ಯಂ ತಮಿಮಂ ನಿಹತ್ಯ**
**ಸ್ವಯಂ ಸ ರಾಮೋ ಯಶ ಆಹರೇತ ।**
**ದತ್ತೋ ವರೋ ದ್ವಾರಪಯೋಃ ಸ್ವಯಂ ಚ**
**ಜನಾರ್ದನೇನೈವ ಪುರಾ ತತಶ್ಚ ॥ ೧೨೨ ॥**

ಪದಚ್ಛೇದ : ಅನನ್ಯವಧ್ಯಂ ತಮ್ ಇಮಂ ನಿಹತ್ಯ ಸ್ವಯಂ ಸ ರಾಮಃ ಯಶಃ ಆಹರೇತ । ದತ್ತಃ ವರಃ ದ್ವಾರಪಯೋಃ ಸ್ವಯಂ ಚ ಜನಾರ್ದನೇನ ಏವ ಪುರಾ ತತಃ ಚ ॥

**ಅರ್ಥ** : **ಅನನ್ಯವಧ್ಯಂ** ಬೇರೆಯವರಿಂದ ಸಂಹರಿಸಲು ಅಶಕ್ಯನಾದ **ತಮಿಮಂ** ಈ ಕುಂಭಕರ್ಣನನ್ನು **ಸಃ** ಆ **ರಾಮಃ** ರಾಮನು **ಸ್ವಯಂ** ತಾನೇ **ನಿಹತ್ಯ** ಸಂಹರಿಸಿ **ಯಶಃ** ಕೀರ್ತಿಯನ್ನು **ಆಹರೇತ** ಹೊಂದಲಿ **ಚ** ಮತ್ತು **ತತಶ್ಚ** ಆ ರಾಮನಿಂದಲಾದರೋ **ಪುರಾ** ಹಿಂದೆ **ದ್ವಾರಪಯೋಃ** ದ್ವಾರಪಾಲಕರಾದ ಜಯವಿಜಯರಿಗೆ **ಜನಾರ್ದನೇನೈವ** ಜನಾರ್ದನರೂಪದಿಂದಲೇ **ಸ್ವಯಂ** ತಾನಾಗಿಯೇ **ವರಃ** ವರವು **ದತ್ತಃ** ಕೊಡಲ್ಪಟ್ಟಿದೆ.

**ತಾತ್ಪರ್ಯ** :- ಹಿಂದೆ ರಾಮರೂಪನಾದ ಶ್ರೀಮನ್ನಾರಾಯಣನೇ ಜಯ ವಿಜಯರಿಗೆ ವರವನ್ನು ಕೊಟ್ಟಿದ್ದ ನನ್ನಿಂದಲೇ ನಿಮಗೆ ಮರಣವೆಂದು. ಈಗ ಜಯವಿಜಯರೇ ರಾವಣಕುಂಭಕರ್ಣರಾಗಿರುವರು. ಆದ ಕಾರಣ ಹನುಮಂತನು ಇದನ್ನು ಆಲೋಚಿಸಿ ಕುಂಭಕರ್ಣನನ್ನು ವಧಿಸಲು ಶಕ್ಯನಾದರೂ ವರವ್ಯಾಜ ದಿಂದ ಅವನನ್ನು ವಧಿಸಿದ ಕೀರ್ತಿಯು ರಾಮನಿಗೆ ಸೇರಬಾಕಾದದ್ದೆಂದು ಕುಂಭಕರ್ಣ ನನ್ನು ವಧಿಸದೆ ಬಿಡುವನು.

**ಮಯ್ಯೆವ ವಧ್ಯೌ ಭವತಂ ತ್ರಿಜನ್ಮಸು**
**ಪ್ರವೃದ್ಧವೀರ್ಯಾವಿತಿ ಕೇಶವೇನ ।**
**ಉಕ್ತಂ ಮಮೈವೈಷ ಯದಪ್ಯನುಗ್ರಹಂ**
**ವಧೇಽಸ್ಯ ಕುರ್ಯಾನ್ನ ತು ಮೇ ಸ ಧರ್ಮಃ ॥ ೧೨೩ ॥**

**ಪದಚ್ಛೇದ** : ಮಯಾ ಏವ ವಧ್ಯೌ ಭವತಂ ತ್ರಿಜನ್ಮಸು ಪ್ರವೃದ್ಧವೀರ್ಯೌ ಇತಿ ಕೇಶವೇನ । ಉಕ್ತಂ ಮಮ ಏವ ಏಷಃ ಯತ್ ಅಪಿ ಅನುಗ್ರಹಂ ವಧೇ ಅಸ್ಯ ಕುರ್ಯಾತ್ ನ ತು ಮೇ ಸ ಧರ್ಮಃ ॥

**ಅರ್ಥ** :- **ಪ್ರವೃದ್ಧವೀರ್ಯೌ** ಅಭಿವೃದ್ಧಿತಶೌರ್ಯವುಳ್ಳ ನೀವಿಬ್ಬರು **ತ್ರಿಜನ್ಮಸು** ಮೂರು ಜನ್ಮಗಳಲ್ಲಿಯೂ **ಮಯ್ಯೆವ** ನನ್ನಿಂದಲೇ **ವಧ್ಯೌ** ಮರಣ ವನ್ನು ಹೊಂದುವವರು. **ಭವತಂ** ಆಗಿರಿ **ಇತಿ** ಎಂದು **ಕೇಶವೇನ** ಶ್ರೀನಾರಾಯಣನಿಂದ **ಉಕ್ತಂ** ಹೇಳಲ್ಪಟ್ಟಿದೆ. **ಅಸ್ಯ** ಈ ಕುಂಭಕರ್ಣನ **ವಧೇ** ಸಂಹಾರವು **ಮಯಾ ಏವ** ನನ್ನಿಂದಲೇ **ಕೃತೇ (ಸತಿ)** ಮಾಡಲ್ಪಡುತ್ತಿರಲೂ ಕೂಡ **ಏಷಃ** ಶ್ರೀರಾಮನು **ಯದಪಿ** ಒಂದು ವೇಳೆ **ಅನುಗ್ರಹಂ** ಅನುಗ್ರಹವನ್ನು **ಕುರ್ಯಾತ್** ಮಾಡಿಯಾನು **(ತಥಾಪಿ** ಹಾಗದ್ದರೂ) **ಸ ತು** ಆ ಕುಂಭಕರ್ಣನ ವಧೆಯಾದರೋ **ಧರ್ಮೋ ನ** ಧರ್ಮವಾಗಲಾರದು.

**ತಾತ್ಪರ್ಯ** : ಜಯವಿಜಯರು ಹಿರಣ್ಯಾಕ್ಷ ಹಿರಣ್ಯಕಶಿಪು ರಾವಣ ಕುಂಭಕರ್ಣ ಶಿಶುಪಾಲ ದಂತವಕ್ರರೆಂಬ ಮೂರು ಜನ್ಮಗಳಲ್ಲಿಯೂ ಶ್ರೀಹರಿ ಯಿಂದಲೇ ಮರವಣವೆಂದು ಶ್ರೀಹರಿಯೇ ವರವಿತ್ತಿರುವನು. ಆದರೂ ಒಂದು ವೇಳೆ ನಾನು ಸಂಹರಿಸಿದರೆ ನನ್ನನ್ನು ರಾಮನು ಅನುಗ್ರಹಿಸಿಯಾನು ಆದರೂ ಇದು ಧರ್ಮದ ಉಲ್ಲಂಘನೆಯಾಗುವುದೇ ಹೊರತು ಧರ್ಮವಾಗಲಾರದು ಎಂದು ಯೋಚಿಸಿ ಹನುಮಂತನು ಕುಂಭಕರ್ಣನನ್ನು ವಧಿಸುವುದಿಲ್ಲ.

ಇತಿ ಸ್ಮ ಸಂಚಿಂತ್ಯ ಕಪೀಶಯುಕ್ತೋ
ಜಗಾಮ ಯತ್ರೈವ ಕಪಿಪ್ರವೀರಾಃ ।
ಸ ಕುಂಭಕರ್ಣೋऽಖಿಲವಾನರಾಂಸ್ತು
ಪ್ರಭಕ್ಷಯನ್ ರಾಮಮುಪಾಜಗಾಮ ॥ ೧೨೪ ॥

ಪದಚ್ಛೇದ : ಇತಿ ಸ್ಮ ಸಂಚಿಂತ್ಯ ಕಪೀಶಯುಕ್ತಃ ಜಗಾಮ ಯತ್ರ ಏವ ಕಪಿಪ್ರವೀರಾಃ । ಸ ಕುಂಭಕರ್ಣಃ ಅಖಿಲವಾನರಾನ್ ತು ಪ್ರಭಕ್ಷಯನ್ ರಾಮಮ್ ಉಪಾಜಗಾಮ ॥

**ಅರ್ಥ** : ಇತಿ ಸ್ಮ ಹೀಂದೆ ಹೇಳಿದಂತೆ ಸಂಚಿಂತ್ಯ ಆಲೋಚಿಸಿ **ಕಪೀಶಯುಕ್ತಃ** ಕಪಿಗಳ ಒಡೆಯನಾದ ಸುಗ್ರೀವನಿಂದ ಕೂಡಿದ ಸಃ ಆ ಹನುಮಂತನು **ಕಪಿಪ್ರವೀರಾಃ** ಕಪಿವೀರರು ಯತ್ರೈವ ಎಲ್ಲಿದ್ದಾರೋ (ತತ್ರೈವ ಅಲ್ಲಿಗೆಯೇ) **ಜಗಾಮ** ಹೋದನು. **ಕುಂಭಕರ್ಣಃ ತು** ಕುಂಭಕರ್ಣನಾದರೋ **ಅಖಿಲವಾನರಾನ್** ಎಲ್ಲಾ ಕಪಿಗಳನ್ನು **ಪ್ರಭಕ್ಷಯನ್ (ಸನ್)** ಭಕ್ಷಿಸುತ್ತಾ **ರಾಮಂ** ರಾಮನನ್ನು **ಉಪಾಜಗಾಮ** ಹೊಂದಿದನು.

**ತಾತ್ಪರ್ಯ** : ಹೀಗೆ ಆಲೋಚಿಸಿದ ಹನುಮಂತನು ಸುಗ್ರೀವನೊಂದಿಗೆ ಕಪಿಸೈನ್ಯವನ್ನು ಕೂಡಿಕೊಳ್ಳಲು ಹೋದನು. ಅಷ್ಟರಲ್ಲಿಯೇ ಕುಂಭಕರ್ಣನು ಸಿಕ್ಕ ಕಪಿಗಳನ್ನೆಲ್ಲಾ ಭಕ್ಷಿಸುತ್ತಾ ರಾಮನ ಹತ್ತಿರ ಬರುವನು.

ತೇ ಭಕ್ಷಿತಾಸ್ತೇನ ಕಪಿಪ್ರವೀರಾಃ
ಸರ್ವೇ ವಿನಿರ್ಜಗ್ಮುರಮುಷ್ಯ ದೇಹಾತ್ ।
ಸ್ರೋತೋಭಿರೇವಾಥ ಚ ರೋಮಕೂಪೈಃ
ಕೇಚಿತ್ ತಮೇವಾऽರುರುಹುರ್ಯಥಾ ಗಿರಿಮ್ ॥ ೧೨೫ ॥

ಪದಚ್ಛೇದ : ತೇ ಭಕ್ಷಿತಾಃ ತೇನ ಕಪಿಪ್ರವೀರಾಃ ಸರ್ವೇ ವಿನಿರ್ಜಗ್ಮುಃ ಅಮುಷ್ಯ ದೇಹಾತ್ । ಸ್ರೋತೋಭಿಃ ಏವ ಅಥ ಚ ರೋಮಕೂಪೈಃ ಕೇಚಿತ್ ತಮ್ ಏವ ಆರುರುಹುಃ ಯಥಾ ಗಿರಿಮ್ ॥

**ಅರ್ಥ** : ತೇನ ಆ ಕುಂಭಕರ್ಣನಿಂದ **ಭಕ್ಷಿತಾಃ** ಭಕ್ಷಿಸಲ್ಪಟ್ಟ ತೇ ಅಂತಹ **ಸರ್ವೇ** ಎಲ್ಲಾ ಕಪಿಪ್ರವೀರಾಃ ಅಪಿ ಕಪಿವೀರರೆಲ್ಲರೂ **ಅಮುಷ್ಯ** ಈ ಕುಂಭಕರ್ಣನ **ದೇಹಾತ್** ದೇಹದಿಂದ ವಿನಿರ್ಜಗ್ಮುಃ ಹೊರಬಂದರು. **ಕೇಚಿತ್** ಕೆಲಕಪಿಗಳು

**ಸ್ರೋತೋಭಿಃ** ನವದ್ವಾರಗಳಿಂದ **ಚ** ಮತ್ತು **ರೋಮಕೂಪೈಃ** ಕೂದಲುಗಳ ರಂಧ್ರದಿಂದ (**ವಿನಿರ್ಜಗ್ಮುಃ** ಹೊರಬಂದರು.) **ಅಥ** ಹೊರಬಂದ ನಂತರ ಕೆಲ ಕಪಿಗಳು **ಗಿರಿಂ** ಪರ್ವತವನ್ನು **ಯಥಾ** ಹೇಗೋ (**ತಥಾ** ಹಾಗೆಯೇ) **ತಮೇವ** ಕುಂಭಕರ್ಣನನ್ನೇ **ಆರುರುಹುಃ** ಏರಿದರು.

**ತಾತ್ಪರ್ಯ** : ಕುಂಭಕರ್ಣನಿಂದ ಭಕ್ಷಿಸಲ್ಪಟ್ಟ ಕಪಿಗಳಲ್ಲಿ ಕೆಲವು ಅವನ ನವದ್ವಾರಗಳಿಂದ ಹೊರ ಬಂದರೆ ಇನ್ನು ಕೆಲವು ರೋಮದ ರಂಧ್ರಗಳಿಂದ ಹೊರ ಬರುತ್ತವೆ. ಹೊರಬಂದವರಲ್ಲಿ ಕೆಲವು ಪರ್ವತವನ್ನು ಹತ್ತುವಂತೆ ಕುಂಭಕರ್ಣನನ್ನು ಹತ್ತುತ್ತವೆ.

**ತನ್ನವರನ್ನೂ ತಿಂದ ಕುಂಭಕರ್ಣ**

**ಸ ತಾನ್ ವಿಧೂಯಾಽಶು ಯಥಾ ಮಹಾಗಜೋ**
**ಜಗಾಮ ರಾಮಂ ಸಮರಾರ್ಥಮೇಕಃ ।**
**ಪ್ರಭಕ್ಷಯನ್ ಸ್ವಾನಪರಾಂಶ್ಚ ಸರ್ವಶೋ**
**ಮತ್ತಃ ಸಮಾಘ್ರಾಯ ಚ ಶೋಣಿತಂ ಪಿಬನ್ ॥ ೧೨೬ ॥**

ಪದಚ್ಛೇದ : ಸ ತಾನ್ ವಿಧೂಯ ಆಶು ಯಥಾ ಮಹಾಗಜಃ ಜಗಾಮ ರಾಮಂ ಸಮರಾರ್ಥಮ್ ಏಕಃ । ಪ್ರಭಕ್ಷಯನ್ ಸ್ವಾನ್ ಅಪರಾನ್ ಚ ಸರ್ವಶಃ ಮತ್ತಃ ಸಮಾಘ್ರಾಯ ಚ ಶೋಣಿತಂ ಪಿಬನ್ ॥

**ಅರ್ಥ** : **ಸಃ** ಆ ಕುಂಭಕರ್ಣನು **ಮಹಾಗಜಃ** ದೊಡ್ಡದಾದ ಆನೆಯು **ಯಥಾ** ಹೇಗೆ ಕಿವಿಯನ್ನ ಅಲುಗಾಡಿಸುವುದರಿಂದ ನೊಣಗಳನ್ನೋಡಿಸು ವುದೋ (**ತಥಾ** ಹಾಗೆಯೇ) **ಸರ್ವಶಃ** ಎಲ್ಲಾ **ತಾನ್** ತನ್ನನ್ನು ಹತ್ತಿದ ಆ ಕಪಿ ಗಳನ್ನು **ಆಶು** ಕೂಡಲೆ **ವಿಧೂಯ** ದೇಹಕಂಪನದಿಂದ ಚದುರಿಸಿ **ಶೋಣಿತಂ** ರಕ್ತವನ್ನು **ಸಮಾಘ್ರಾಯ** ಆಘ್ರಾಣಿಸಿ **ಪಿಬನ್ ಚ** ಕುಡಿಯುತ್ತಲೂ **ಮತ್ತಃ** (**ಸನ್**) ಮತ್ತನಾದವನಾಗಿ **ಸ್ವಾನ್** ತನ್ನವರಾದ ರಾಕ್ಷಸರನ್ನು **ಅಪರಾನ್ ಚ** ಕಪಿಗಳನ್ನೂ ಕೂಡ **ಪ್ರಭಕ್ಷಯನ್** ತಿನ್ನುತ್ತಾ **ಏಕಃ** ಒಬ್ಬನೇ **ಸಮರಾರ್ಥಂ** ಯುದ್ಧಕ್ಕಾಗಿ **ರಾಮಂ** ರಾಮನನ್ನು ಕುರಿತು **ಜಗಾಮ** ಹೊರಟನು.

**ತಾತ್ಪರ್ಯ** : ಆನೆಯು ಕಿವಿಯನ್ನು ಬೀಸಿ ನೊಣಗಳನ್ನು ಓಡಿಸುವಂತೆ ಕುಂಭಕರ್ಣನು ತನ್ನ ಹತ್ತಿರದ ಕಪಿಗಳನ್ನೆಲ್ಲಾ ದೇಹವನ್ನು ಅಲುಗಾಡಿಸಿ

ಓಡಿಸುತ್ತಾನೆ. ಕೆಳಗೆ ಬಿದ್ದು ರಕ್ತ ಕಾರಿದ ಕಪಿಗಳ ರಕ್ತವನ್ನು ಮೂಸಿ ನೋಡಿ ಪಾನಮಾಡುತ್ತಾ ಮತ್ತನಾಗಿ ಕಪಿಗಳೊಂದಿಗೆ ತನ್ನವರೇ ಆದ ರಾಕ್ಷಸರನ್ನೂ ತಿನ್ನುತ್ತಾ ಒಬ್ಬಂಟಿಗನಾಗಿ ರಾಮನೊಂದಿಗೆ ಯುದ್ಧಕ್ಕಾಗಿ ತೆರಳುತ್ತಾನೆ.

### ಲಕ್ಷ್ಮಣನನ್ನು ಧಿಕ್ಕರಿಸಿದ ಕುಂಭಕರ್ಣ

ನ್ಯವಾರಯತ್ ತಂ ಶರವರ್ಷಧಾರಯಾ
ಸ ಲಕ್ಷ್ಮಣೋ ನೈನಮಚಿಂತಯತ್ ಸಃ ।
ಜಗಾಮ ರಾಮಂ ಗಿರಿಶೃಂಗಧಾರೀ
ಸಮಾಹ್ವಯತ್ ತಂ ಸಮರಾಯ ಚಾऽಶು ॥ ೧೨೭ ॥

ಪದಚ್ಛೇದ : ನ್ಯವಾರಯತ್ ತಂ ಶರವರ್ಷಧಾರಯಾ ಸ ಲಕ್ಷ್ಮಣಃ ನ ಏನಂ ಅಚಿಂತಯತ್ ಸಃ । ಜಗಾಮ ರಾಮಂ ಗಿರಿಶೃಂಗಧಾರೀ ಸಮಾಹ್ವಯತ್ ತಂ ಸಮರಾಯ ಚ ಆಶು ॥

**ಅರ್ಥ :** ಸಃ ಲಕ್ಷ್ಮಣಃ ಆ ಲಕ್ಷ್ಮಣನು ತಂ ಆ ಕುಂಭಕರ್ಣನನ್ನು ಶರವರ್ಷ ಧಾರಯಾ ಬಾಣಗಳ ವೃಷ್ಟಿಧಾರೆಯಿಂದ ನ್ಯವಾರಯತ್ ತಡೆ ಒಡ್ಡಿದನು. ಸಃ ಆ ಕುಂಭಕರ್ಣನು ಏನಂ ಈ ಲಕ್ಷ್ಮಣನನ್ನು ನ ಅಚಿಂತಯತ್ ಪರಿಗಣಿಸಲಿಲ್ಲ. ಗಿರಿಶೃಂಗಧಾರೀ ಚ ಪರ್ವತ ಶಿಖರಗಳನ್ನು ಧರಿಸಿದ ಕುಂಭಕರ್ಣನಾದರೋ ಸಮರಾಯ ಯುದ್ಧಕ್ಕಾಗಿ ಸಮಾಹ್ವಯಂತಂ ಆಹ್ವಾನಿಸುತ್ತಿರುವ ರಾಮಂ ರಾಮನನ್ನು ಕುರಿತು ಆಶು ಕೂಡಲೇ ಜಗಾಮ ಹೋದನು.

**ತಾತ್ಪರ್ಯ :** ಆಗ ಲಕ್ಷ್ಮಣನು ಬಾಣಗಳ ಮಳೆಯನ್ನೇ ಸುರಿಸಿ ಕುಂಭಕರ್ಣ ನನ್ನು ಪ್ರತಿಬಂಧಿಸಲು ಪ್ರಯತ್ನಿಸುವನು. ಇವನನ್ನು ಲೆಕ್ಕಿಸದೆ ಕುಂಭಕರ್ಣನು ದೊಡ್ಡ ಶಿಖರವನ್ನು ಕಿತ್ತು ಯುದ್ಧಕ್ಕಾಗಿ ಅಷ್ಟರಲ್ಲೇ ಆಹ್ವಾನಿಸಿದ ರಾಮನನ್ನು ಕುರಿತು ಹೋಗುವನು.

### ರಾಮಕುಂಭಕರ್ಣರ ಯುದ್ಧ

ಅಥೋ ಸಮಾದಾಯ ಧನುಃ ಸುಘೋರಂ
ಶರಾಂಶ್ಚ ವಜ್ರಾಶನಿತುಲ್ಯವೇಗಾನ್ ।
ಪ್ರವೇಶಯಾಮಾಸ ನಿಶಾಚರೇ ಪ್ರಭುಃ
ಸ ರಾಘವಃ ಪೂರ್ವಹತೇಷು ಯದ್ವತ್ ॥ ೧೨೮ ॥

ಪದಚ್ಛೇದ : ಅಥೋ ಸಮಾದಾಯ ಧನುಃ ಸುಘೋರಂ ಶರಾನ್ ಚ ವಜ್ರಾಶನಿತುಲ್ಯವೇಗಾನ್ । ಪ್ರವೇಶಯಾಮಾಸ ನಿಶಾಚರೇ ಪ್ರಭುಃ ಸ ರಾಘವಃ ಪೂರ್ವಹತೇಷು ಯದ್ವತ್ ॥

**ಅರ್ಥ** :- **ಅಥೋ** ಅನಂತರ **ಪ್ರಭುಃ** ಸಮರ್ಥನಾದ **ಸಃ** ಅಂತಹ **ರಾಘವಃ** ಶ್ರೀರಾಮನು **ಸುಘೋರಂ** ಬೇರೆಯಾರಿಂದಲೂ ಧರಿಸಲು ಅಸಾಧ್ಯವಾದ **ಧನುಃ** ಧನುಸ್ಸನ್ನು **ಸಮಾದಾಯ** ಹಿಡಿದು **ಸುರೇಶಾಶನಿತುಲ್ಯವೇಗಾನ್** ಇಂದ್ರನ ವಜ್ರಾಯುಧದ ವೇಗಕ್ಕೆ ಸಮನಾದ **ಶರಾನ್** ಬಾಣಗಳನ್ನು **ಪೂರ್ವಹತೇಷು** ಈ ಹಿಂದೆ ಸಂಹರಿಸಲ್ಪಟ್ಟ ರಾಕ್ಷಸರಲ್ಲಿ **ಯದ್ವತ್** ಹೇಗೆ ಪ್ರಯೋಗಿಸಿದನೋ (**ತದ್ವತ್** ಹಾಗೆಯೇ) **ನಿಶಾಚರೇ** ಕುಂಭಕರ್ಣನಲ್ಲಿ **ಪ್ರವೇಶಯಾಮಾಸ** ಪ್ರವೇಶ ಮಾಡುವಂತೆ ಮಾಡಿದನು.

**ತಾತ್ಪರ್ಯ** :- ಶ್ರೀರಾಮನು ಭಯಂಕರವಾದ ಧನುಸ್ಸನ್ನು ಹಿಡಿದು ಇಂದ್ರನ ವಜ್ರಾಯುಧಕ್ಕೆ ಸದೃಶವಾದ ವೇಗವುಳ್ಳ ಬಾಣಗಳನ್ನು ಹಿಂದೆ ಹತರಾದ ರಾಕ್ಷಸರಲ್ಲಿ ಹೇಗೆ ಪ್ರಯೋಗಿಸಿದನೋ ಹಾಗೆಯೇ ಕುಂಭಕರ್ಣನಲ್ಲಿಯೂ ಪ್ರಯೋಗಿಸುತ್ತಾನೆ.

### ರಾಮಬಾಣದಿಂದ ಖಂಡತುಂಡಾದ ಕುಂಭಕರ್ಣ

**ಯಾವದ್ಬಲೇನ ನ್ಯಹನತ್ ಖರಾದಿಕಾನ್**
**ನ ತಾವತೈವ ನ್ಯಪತತ್ ಸ ರಾಕ್ಷಸಃ ।**
**ಅಥ ಪ್ರಹಸ್ಯಾऽತ್ಮಬಲೈಕದೇಶಂ**
**ಪ್ರದರ್ಶಯನ್ ಬಾಣವರಾನ್ ಮುಮೋಚ ॥ ೧೨೯ ॥**

ಪದಚ್ಛೇದ : ಯಾವತ್ ಬಲೇನ ನ್ಯಹನತ್ ಖರಾದಿಕಾನ್ ನ ತಾವತಾ ಏವ ನ್ಯಪತತ್ ಸ ರಾಕ್ಷಸಃ । ಅಥ ಪ್ರಹಸ್ಯ ಆತ್ಮಬಲೈಕದೇಶಂ ಪ್ರದರ್ಶಯನ್ ಬಾಣವರಾನ್ ಮುಮೋಚ ॥

**ಅರ್ಥ** :- **ಖರಾದೀನ್** ಖರರೇ ಮೊದಲಾದ ರಾಕ್ಷಸರನ್ನು **ಯಾವತ್ ಬಲೇನ** ಯಾವ ಪ್ರಮಾಣದ ಬಲದಿಂದ **ನ್ಯಹನತ್** ಸಂಹರಿಸಿದನೋ **ತಾವತೈವ** ಅಷ್ಟೇ ಸಮನಾದ ಬಲದಿಂದ **ಸಃ ರಾಕ್ಷಸಃ** ಆ ಕುಂಭಕರ್ಣನು ನ

**ನ್ಯಪತತ್** ಮರಣಿಸಲಿಲ್ಲ **ಅಥ** ಅನಂತಹ **ಪ್ರಹಸ್ಯ** ನಕ್ಕು **ಆತ್ಮಬಲೈಕದೇಶಂ** ತನ್ನ ಬಲದ ಒಂದಂಶವನ್ನು **ಪ್ರದರ್ಶಯನ್ ಸನ್** ಪ್ರದರ್ಶಿಸುವವನಾಗಿ **ಬಾಣ ವರಾನ್** ಶ್ರೇಷ್ಠಬಾಣಗಳನ್ನು **ಮುಮೋಚ** ಬಿಟ್ಟನು.

**ತಾತ್ಪರ್ಯ** :- ರಾಮನು ಬಿಟ್ಟ ಬಾಣಗಳು ಕುಂಭಕರ್ಣನನ್ನು ಘಾಸಿ ಗೊಳಿಸಲಿಲ್ಲ. ಏಕೆಂದರೆ ಖರಾದಿರಾಕ್ಷಸರ ಮೇಲೆ ಎಷ್ಟು ಬಲದಿಂದ ಪ್ರಯೋಗಿಸಿ ದನೋ ಹಾಗೆ ಪ್ರಯೋಗಿಸಲಿಲ್ಲ. ಆಗ ಅದರಿಂದ ಮಂದಹಾಸ ಬೀರಿದ ರಾಮನು ತನ್ನ ರೂಪವಿಶೇಷವಾದ ಒಂದಂಶ ಬಲದಿಂದ ಉತ್ತಮಬಾಣಗಳನ್ನು ಕುಂಭಕರ್ಣನ ಮೇಲೆ ಬಿಡುತ್ತಾನೆ.

**ದ್ವಾಭ್ಯಾಂ ಸ ಬಾಹೂ ನಿಚಕರ್ತ ತಸ್ಯ**
**ಪದದ್ವಯಂ ಚೈವ ತಥಾ ಶರಾಭ್ಯಾಮ್ ।**
**ಅಥಾಪರೇಣಾಸ್ಯ ಶಿರೋ ನಿಕೃತ್ಯ**
**ಸಂಪ್ರಾಕ್ಷಿಪತ್ ಸಾಗರತೋಯ ಆಶು ॥ ೧೩೦ ॥**

**ಪದಚ್ಛೇದ** : ದ್ವಾಭ್ಯಾಂ ಸ ಬಾಹೂ ನಿಚಕರ್ತ ತಸ್ಯ ಪದದ್ವಯಂ ಚ ಏವ ತಥಾ ಶರಾಭ್ಯಾಮ್ । ಅಥ ಅಪರೇಣ ಅಸ್ಯ ಶಿರೋ ನಿಕೃತ್ಯ ಸಂಪ್ರಾಕ್ಷಿಪತ್ ಸಾಗರತೋಯೇ ಆಶು ॥

**ಅರ್ಥ** :- **ಸಃ** ಆ ರಾಮನು **ತಸ್ಯ** ಆ ಕುಂಭಕರ್ಣನ **ಬಾಹೂ** ಎರಡು ಬಾಹುಗಳನ್ನು **ಪದದ್ವಯಂ ಚೈವ** ಎರಡು ಕಾಲುಗಳನ್ನೂ ಕೂಡ **ದ್ವಾಭ್ಯಾಂ** ಎರಡಾದ **ಶರಾಭ್ಯಾಂ** ಬಾಣಗಳಿಂದ **ನಿಚಕರ್ತ** ತುಂಡರಿಸಿದನು. **ಅಥ** ಅನಂತರ **ಅಪರೇಣ** ಇನ್ನೊಂದು ಬಾಣದಿಂದ **ಅಸ್ಯ** ಈ ಕುಂಭಕರ್ಣನ **ಶಿರಃ** ಶಿರವನ್ನು **ನಿಕೃತ್ಯ** ಕತ್ತರಿಸಿ **ಸಾಗರತೋಯೇ** ಸಮುದ್ರಜಲದಲ್ಲಿ **ಆಶು** ಕೂಡಲೇ **ಸಂಪ್ರಾಕ್ಷಿಪತ್** ಬೀಳಿಸಿದನು.

**ತಾತ್ಪರ್ಯ** : ಶ್ರೀರಾಮನು ಎರಡು ಬಾಣಗಳಿಂದ ಕುಂಭಕರ್ಣನ ಎರಡು ಕೈಗಳನ್ನು ಎರಡು ಕಾಲುಗಳನ್ನೂ ಕತ್ತರಿಸಿ ಇನ್ನೊಂದು ಬಾಣದಿಂದ ಅವನ ತಲೆಯನ್ನೇ ಛೇದಿಸಿ ಅದನ್ನು ಸಮುದ್ರಕ್ಕೆ ಬೀಳುವಂತೆ ಮಾಡುತ್ತಾನೆ.

### ಸಮುದ್ರವೇ ತುಂಬಿ ಹರಿಯಿತು

**ಅವರ್ಧತಾಬ್ಧಿಃ ಪತಿತೇಽಸ್ಯ ಕಾಯೇ**
**ಮಹಾಚಲಾಭೇ ಕ್ಷಣದಾಚರಸ್ಯ ।**
**ಸುರಾಶ್ಚ ಸರ್ವೇ ವವೃಷುಃ ಪ್ರಸೂನೈ-**
**ರ್ಮುದಾ ಸ್ತುವಂತೋ ರಘುವರ್ಯಮೂರ್ಧನಿ ॥ ೧೩೧ ॥**

ಪದಚ್ಛೇದ : ಅವರ್ಧತ ಅಬ್ಧಿಃ ಪತಿತೇ ಅಸ್ಯ ಕಾಯೇ ಮಹಾಚಲಾಭೇ ಕ್ಷಣದಾಚರಸ್ಯ । ಸುರಾಃ ಚ ಸರ್ವೇ ವವೃಷುಃ ಪ್ರಸೂನೈಃ ಮುದಾ ಸ್ತುವಂತಃ ರಘುವರ್ಯಮೂರ್ಧನಿ ॥

**ಅರ್ಥ** :- **ಕ್ಷಣದಾಚರಸ್ಯ** ರಾತ್ರಿಯಲ್ಲಿ ಸಂಚರಿಸುವಂತಹ **ಅಸ್ಯ** ಈ ಕುಂಭಕರ್ಣನ **ಮಹಾಚಲಾಭೇ** ದೊಡ್ಡಪರ್ವತಕ್ಕೆ ಸದೃಶವಾದ **ಕಾಯೇ** ದೇಹವು **ಪತಿತೇ (ಸತಿ)** ಬೀಳುತ್ತಿರಲು **ಅಬ್ಧಿಃ** ಸಮುದ್ರವು **ಅವರ್ಧತ** ಉಕ್ಕಿತು. **ಸರ್ವೇ** ಎಲ್ಲಾ **ಸುರಾಃ** ದೇವತೆಗಳು **ಮುದಾ** ಹರ್ಷದಿಂದ **ಸ್ತುವಂತಃ** ಸ್ತುತಿಸುವವರಾಗಿ **ರಘುವರ್ಯಮೂರ್ಧನಿ** ಶ್ರೀರಾಮನ ಶಿರಸ್ಸಿನಲ್ಲಿ **ಪ್ರಸೂನೈಃ ಚ** ಪುಷ್ಪಗಳಿಂದಲೂ **ವವೃಷುಃ** ಮಳೆಗರೆದರು.

**ತಾತ್ಪರ್ಯ** :- ಕುಂಭಕರ್ಣನ ದೊಡ್ಡ ಪರ್ವತದಂತಿರುವ ದೇಹವು ಸಮುದ್ರದಲ್ಲಿ ಬೀಳಲು ಸಮುದ್ರವೇ ಉಕ್ಕಿ ಹರಿಯುತ್ತದೆ. ಆಗ ಕುಂಭಕರ್ಣನ ವಧೆಯಿಂದ ಹರ್ಷಗೊಂಡ ದೇವತೆಗಳೆಲ್ಲರೂ ಶ್ರೀರಾಮನ ಮೇಲೆ ಪುಷ್ಪಗಳ ಮಳೆಯನ್ನೇ ಗೈಯುತ್ತಾರೆ.

### ಕುಂಭಕರ್ಣನ ಶರೀರದ ಪರಿಮಾಣ

**ಯೋಜನಾನಾಂ ತ್ರಿಲಕ್ಷಂ ಹಿ**
**ಕುಂಭಕರ್ಣೋ ವ್ಯವರ್ಧತ ।**
**ಪೂರ್ವಂ ಪಶ್ಚಾತ್ ಸಂಚುಕೋಚ**
**ಲಂಕಾಯಾಮುಷಿತುಂ ಸ್ವಯಮ್ ॥ ೧೩೨ ॥**

ಪದಚ್ಛೇದ : ಯೋಜನಾನಾಂ ತ್ರಿಲಕ್ಷಂ ಹಿ ಕುಂಭಕರ್ಣಃ ವ್ಯವರ್ಧತ । ಪೂರ್ವಂ ಪಶ್ಚಾತ್ ಸಂಚುಕೋಚ ಲಂಕಾಯಾಮ್ ಉಷಿತುಂ ಸ್ವಯಮ್ ॥

**ಅರ್ಥ** :- **ಕುಂಭಕರ್ಣಃ** ಹಿ ಕುಂಭಕರ್ಣನಾದರೂ **ಯೋಜನಾನಾಂ** ಯೋಜನೆಗಳ **ತ್ರಿಲಕ್ಷಂ** ಮೂರುಲಕ್ಷದಷ್ಟು **ವ್ಯವರ್ಧತ** ಬೆಳೆದನು. **ಪೂರ್ವಂ** ಬಾಲ್ಯಾವಸ್ಥೆಯಲ್ಲಿ **ಪಶ್ಚಾತ್** ಅನಂತಕಾಲದಲ್ಲಿಯೂ **ಲಂಕಾಯಾಂ** ಲಂಕೆಯಲ್ಲಿ **ಉಷಿತುಂ** ವಾಸಮಾಡಲು **ಸ್ವಯಂ** ತಾನೇ **ಸಂಚುಕೋಚ** ಸಂಕುಚಿತನಾಗಿದ್ದನು.

**ತಾತ್ಪರ್ಯ** :- ಕುಂಭಕರ್ಣನು ತನ್ನ ದೇಹವನ್ನು ಮೂರು ಲಕ್ಷಯೋಜನಾ ವಿಸ್ತಾರಗೊಳಿಸಿದ್ದ. ಆದರೆ ತನ್ನ ಬಾಲ್ಯಾವಸ್ಥೆ ಅಥವಾ ನಂತರ ಕಾಲದಲ್ಲಿ ಲಂಕೆಯಲ್ಲಿ ವಾಸಮಾಡಲೆಂದೇ ತನ್ನ ದೇಹವನ್ನು ಸಂಕೋಚಗೊಳಿಸಿದ್ದ. ಹಾಗಾಗಿ ರಾಮನು ಕುಂಭಕರ್ಣನ ದೇಹವು ಕಪಿಗಳಿಗೆ ಹಾನಿಮಾಡದ ಹಾಗೆ ಸಮುದ್ರದಲ್ಲಿಯೇ ಬೀಳಿಸಿದ.

**ಸ ತು ಸ್ವಭಾವಮಾಪನ್ನೋ ಮ್ರಿಯಮಾಣೋ ವ್ಯವರ್ಧತ ।**
**ತೇನಾಸ್ಮಿನ್ ಪತಿತೇ ತ್ವಬ್ಧಿರವರ್ಧದಧಿಕಂ ತದಾ ॥ ೧೩೩ ॥**

**ಪದಚ್ಛೇದ** : ಸಃ ತು ಸ್ವಭಾವಮ್ ಆಪನ್ನಃ ಮ್ರಿಯಮಾಣಃ ವ್ಯವರ್ಧತ । ತೇನ ಅಸ್ಮಿನ್ ಪತಿತೇ ತು ಅಬ್ಧಿಃ ಅವರ್ಧತ್ ಅಧಿಕಂ ತದಾ ॥

**ಅರ್ಥ** : **ಮ್ರಿಯಮಾಣಃ** ಮರಣವನ್ನ ಹೊಂದತಕ್ಕ **ಸ ತು** ಆ ಕುಂಭಕರ್ಣನಾದರೋ **ಸ್ವಭಾವಂ** ಸ್ವಾಭಾವಿಕವಾದ ಮೂರು ಲಕ್ಷಯೋಜನೆ ಯಷ್ಟು ಅಭಿವೃದ್ಧಿಯನ್ನು **ಆಪನ್ನಃ (ಸನ್)** ಹೊಂದಿದವನಾಗಿ **ವ್ಯವರ್ಧತ** ಬೆಳೆದನು. **ತೇನ** ಅಭಿವೃದ್ಧಿಹೊಂದಿದಕಾರಣದಿಂದ **ಅಸ್ಮಿನ್** ಇವನ ದೇಹವು **ಪತಿತೇ(ಸತಿ)** ಬೀಳುತ್ತಿರಲು **ತದಾ** ಆಗ **ಅಬ್ಧಿಸ್ತು** ಸಮುದ್ರವಾದರೋ **ಅಧಿಕಂ** ಅಧಿಕವಾಗಿ ಹೇಗೋ ಹಾಗೆಯೇ **ಅವರ್ಧತ್** ಹೆಚ್ಚಿತು.

**ತಾತ್ಪರ್ಯ** : ಸಮುದ್ರವು ವೃದ್ಧಿಯನ್ನು ಹೊಂದುವುದಕ್ಕೆ ಕಾರಣ ಹೀಗಿದೆ. ಕುಂಭಕರ್ಣನಿಗೆ ಸ್ವಾಭಾವಿಕವಾಗಿ ಇರುವ ದೇಹದ ವಿಸ್ತಾರ ಮೂರು ಲಕ್ಷಯೋಜನಗಳು. ಅದನ್ನು ತಾನು ಮರಣ ಹೊಂದುವ ಸಮಯದಲ್ಲಿ ತೋರ್ಪಡಿಸಿದ್ದ. ಆದ ಕಾರಣ ಸಮುದ್ರವು ತನ್ನ ಮೇಲೆ ಬಿದ್ದ ಕುಂಭಕರ್ಣನ ದೇಹದಿಂದ ಅಭಿವೃದ್ಧಿ ಹೊಂದಿತು.

## ಕುಂಭಕರ್ಣನ ವಧೆಯನ್ನು ಕೇಳಿದ ರಾವಣ

ಅಥಾಪರೇ ಯೇ ರಜನೀಚರಾಸ್ತದಾ
ಕಪಿಪ್ರವೀರೈರ್ನಿಹತಾಶ್ಚ ಸರ್ವಶಃ ।
ಹತಾವಶಿಷ್ಟಾಸ್ತ್ವರಿತಾಃ ಪ್ರದುದ್ರುವು-
ರ್ಭ್ರಾತುರ್ವಧಂ ಚೋಚುರುಪೇತ್ಯ ರಾವಣಮ್ ॥ ೧೩೪ ॥

ಪದಚ್ಛೇದ : ಅಥ ಅಪರೇ ಯೇ ರಜನೀಚರಾಃ ತದಾ ಕಪಿಪ್ರವೀರೈಃ ನಿಹತಾಃ ಚ ಸರ್ವಶಃ । ಹತಾವಶಿಷ್ಟಾಃ ತ್ವರಿತಾಃ ಪ್ರದುದ್ರುವುಃ ಭ್ರಾತುಃ ವಧಂ ಚ ಊಚುಃ ಉಪೇತ್ಯ ರಾವಣಮ್॥

**ಅರ್ಥ** :- **ಅಥ** ಕುಂಭಕರ್ಣವಧಾನಂತರ **ಅಪರೇ** ಇತರರಾದ **ಯೇ** ಈ ಯಾವ **ರಜನೀಚರಾಃ** ರಾಕ್ಷಸರಿರುವರೋ **ಸರ್ವಶಃ** ಅವರೆಲ್ಲಾ **ತದಾ** ಆಗ **ಕಪಿಪ್ರವೀರೈಃ** ಕಪಿವೀರರಿಂದ **ನಿಹತಾಃ** ಸಂಹರಿಸಲ್ಪಟ್ಟರು. **ಹತಾವಶಿಷ್ಟಾಃ** ಹತರಾದವರನ್ನು ಬಿಟ್ಟು ಉಳಿದವರು **ತ್ವರಿತಾಃ** ವೇಗವುಳ್ಳವರಾಗಿ **ಪ್ರದುದ್ರುವುಃ** ಓಡಿದರು **ರಾವಣಂ** ರಾವಣನನ್ನು **ಉಪೇತ್ಯ** ಹೊಂದಿ **ಭ್ರಾತುಃ** ಸಹೋದರನ **ವಧಂ ಚ** ನಾಶವನ್ನೂ ಕೂಡ **ಊಚುಃ** ಹೇಳಿದರು.

**ತಾತ್ಪರ್ಯ** :- ಕುಂಭಕರ್ಣನು ಮರಣಿಸಿದ್ದೇ ತಡ ಅವನ ಹಿಂದಿದ್ದ ಎಲ್ಲಾ ರಾಕ್ಷಸರನ್ನು ಕಪಿವೀರರು ಸಂಹರಿಸಿದರು. ಅವರಲ್ಲೂ ಉಳಿದ ಕೆಲವು ರಾಕ್ಷಸರು ಕೂಡಲೇ ಓಡಿ ಹೋಗಿ ರಾವಣನಿಗೆ ಕುಂಭಕರ್ಣನ ಮರಣವಾರ್ತೆಯನ್ನು ಅರಹುತ್ತಾರೆ.

## ಯುದ್ಧೋನ್ಮುಖನಾದ ಇಂದ್ರಜಿತ್

ಸ ದುಃಖತಪ್ತೋ ನಿಪಪಾತ ಮೂರ್ಛಿತೋ
ನಿರಾಶಕಶ್ಚಾಭವದಾತ್ಮಜೀವಿತೇ ।
ತಮಾಹ ಪುತ್ರಸ್ತ್ರಿದಶೇಶಶತ್ರು-
ರ್ನಿಯುಂಕ್ಷ್ವ ಮಾಂ ಶತ್ರುವಧಾಯ ಮಾ ಚಿರಮ್ ॥ ೧೩೫ ॥

ಪದಚ್ಛೇದ : ಸಃ ದುಃಖತಪ್ತಃ ನಿಪಪಾತ ಮೂರ್ಛಿತಃ ನಿರಾಶಕಃ ಅಭವತ್ ಆತ್ಮಜೀವಿತೇ । ತಮ್ ಆಹ ಪುತ್ರಃ ತ್ರಿದಶೇಶಶತ್ರುಃ ನಿಯುಂಕ್ಷ್ವ ಮಾಂ ಶತ್ರುವಧಾಯ ಮಾ ಚಿರಮ್ ॥

**ಅರ್ಥ** :- **ದುಃಖತಪ್ತಃ** ದುಃಖಿತನಾದ **ಸಃ** ಆ ರಾವಣನು **ಮೂರ್ಛಿತಃ (ಸನ್)** ಮೂರ್ಛಿತನಾದವನಾಗಿ **ನಿಪಪಾತ** ಬಿದ್ದನು. **ಆತ್ಮಜೀವಿತೇ** ತನ್ನ ಜೀವನದ ವಿಷಯದಲ್ಲಿ **ನಿರಾಶಕಃ** ಆಶಾರಹಿತನಾಗಿಯೂ ಕೂಡ **ಅಭವತ್** ಆದನು. **ತ್ರಿದಶೇಶಶತ್ರುಃ** ದೇವತೆಗಳಿಗೆ ಒಡೆಯನಾದ ಇಂದ್ರನ ಶತ್ರುವಾದ **ಪುತ್ರಃ** ರಾವಣನಪುತ್ರನಾದ **ಇಂದ್ರಜಿತ್** ಎಂಬುವನು **ಶತ್ರುವಧಾಯ** ಶತ್ರುಗಳಾದ ರಾಮಾದಿಗಳ ನಾಶಕ್ಕೆ **ಮಾಂ** ನನ್ನನ್ನು **ನಿಯುಂಕ್ಷ್ವ** ನಿಯೋಜಿಸು **ಚಿರಂ** ವಿಳಂಬವನ್ನು **ಮಾ** ಮಾಡಬೇಡ **ಇತಿ** ಎಂಬುದಾಗಿ **ತಂ** ಆ ರಾವಣನನ್ನು ಕುರಿತು **ಆಹ** ಹೇಳಿದನು.

**ತಾತ್ಪರ್ಯ** :- ಮರಣವಾರ್ತೆಯನ್ನು ಕೇಳಿದ ರಾವಣ ದುಃಖತಪ್ತನಾಗಿ ಮೂರ್ಛೆಗೊಂಡ ಹೋಗುತ್ತಾನೆ. ತನ್ನ ಜೀವನದಲ್ಲಿ ಆಶಾಭಾವನೆಯೇ ಕಾಣುವುದಿಲ್ಲ. ಆಗ ಇಂದ್ರಜಿತನೆಂಬ ಅವನ ಇನ್ನೊಬ್ಬ ಪುತ್ರನು-'ತಂದೆಯೇ ಶತ್ರುವಾದ ರಾಮನನ್ನು ಸಂಹರಿಸಲು ನನ್ನನ್ನು ಆಜ್ಞಾಪಿಸು. ಸಮಯವನ್ನು ಕಳೆಯಬೇಡ' ಎಂದು ಹೇಳುವನು.

**ಮಯಾ ಗೃಹೀತಸ್ತ್ರಿದಶೇಶ್ವರಃ ಪುರಾ**
**ವಿಷೀದಸೇ ಕಿಂ ನರರಾಜಪುತ್ರತಃ ।**
**ಸ ಏವಮುಕ್ತ್ವಾ ಪ್ರಜುಹಾವ ಪಾವಕಂ**
**ಶಿವಂ ಸಮಭ್ಯರ್ಚ್ಯ ಸಮಾರುಹದ್ ರಥಮ್ ॥ ೧೩೬ ॥**

ಪದಚ್ಛೇದ : ಮಯಾ ಗೃಹೀತಃ ತ್ರಿದಶೇಶ್ವರಃ ಪುರಾ ವಿಷೀದಸೇ ಕಿಂ ನರರಾಜಪುತ್ರತಃ । ಸ ಏವಮ್ ಉಕ್ತ್ವಾ ಪ್ರಜುಹಾವ ಪಾವಕಂ ಶಿವಂ ಸಮಭ್ಯರ್ಚ್ಯ ಸಮಾರುಹತ್ ರಥಮ್ ॥

**ಅರ್ಥ** : **ಪುರಾ** ಈ ಹಿಂದೆ **ಮಯಾ** ನನ್ನಿಂದ **ತ್ರಿದಶೇಶ್ವರಃ** ದೇವೇಂದ್ರನು **ಗೃಹೀತಃ** ಹಿಡಿಯಲ್ಪಟ್ಟಿರುವನು **ತ್ವಂ** ನೀನು **ನರರಾಜಪುತ್ರತಃ** ಮನುಷ್ಯರಿಗೆ ಒಡೆಯನಾದ ರಾಮನಿಂದ **ಕಿಂ ವಿಷೀದಸೇ** ಏಕೆ ದುಃಖಗೊಳ್ಳುವೆ? **ಸಃ** ಆ ಇಂದ್ರಜಿತುವು **ಏವಂ** ಈ ಪ್ರಕಾರವಾಗಿ **ಉಕ್ತ್ವಾ** ಹೇಳಿ **ಪಾವಕಂ** ಅಗ್ನಿಯನ್ನು **ಪ್ರಜುಹಾವ** ಹೋಮಿಸುವನು. **ಶಿವಂ** ರುದ್ರನನ್ನು **ಸಮಭ್ಯರ್ಚ್ಯ** ಚೆನ್ನಾಗಿ ಅರ್ಚಿಸಿ **ರಥಂ** ರಥವನ್ನು **ಸಮಾರುಹತ್** ಏರಿದನು.

ತಾತ್ಪರ್ಯ : 'ತಂದೆಯೇ ನಾನು ಇಂದ್ರನನ್ನು ಸೋಲಿಸಿದವನು. ಹಾಗಿರುವಾಗ ಮನುಷ್ಯಮಾತ್ರನಾದ ಈ ರಾಮನಿಂದ ನಿನಗೆ ಯಾವ ತರಹ ದುಃಖವು? ನಾನು ಅವನನ್ನು ಸಂಹರಿಸುವೆ' ಎಂದು ಹೇಳಿದ ಇಂದ್ರಜಿತುವು ಅಗ್ನಿ ಮುಖಾಂತರ ಹೋಮಿಸಿ, ರುದ್ರನನ್ನು ಆರಾಧಿಸಿ, ಯುದ್ಧಕ್ಕಾಗಿ ರಥವನ್ನು ಏರುವನು.

**ಕಪಿಗಳನ್ನು ನಾಗಪಾಶದಿಂದ ಕಟ್ಟಿದ ಇಂದ್ರಜಿತ್**

**ಸ ಆತ್ತಧನ್ವಾ ಸಶರೋ ರಥೇನ**
**ವಿಯತ್ ಸಮಾರುಹ್ಯ ಯಯಾವದರ್ಶನಮ್ ।**
**ಸ ನಾಗಪಾಶೈರ್ವರತಃ ಶಿವಸ್ಯ**
**ಬಬಂಧ ಸರ್ವಾನ್ ಕಪಿವೀರಸಂಘಾನ್ ॥ ೧೩೭ ॥**

ಪದಚ್ಛೇದ : ಸಃ ಆತ್ತಧನ್ವಾ ಸಶರಃ ರಥೇನ ವಿಯತ್ ಸಮಾರುಹ್ಯ ಯಯೌ ಅದರ್ಶನಮ್ । ಸ ನಾಗಪಾಶೈಃ ವರತಃ ಶಿವಸ್ಯ ಬಬಂಧ ಸರ್ವಾನ್ ಕಪಿವೀರಸಂಘಾನ್ ॥

**ಅರ್ಥ** :- **ಆತ್ತಧನ್ವಾ** ಸ್ವೀಕರಿಸಲ್ಪಟ್ಟ ಧನುಸ್ಸುಳ್ಳ **ಸಶರಃ** ಬಾಣದಿಂದ ಸಹಿತನಾದ ಸಃ ಆ ಇಂದ್ರಜಿತುವು **ರಥೇನ** ರಥದಿಂದ **ವಿಯತ್** ಆಕಾಶವನ್ನು **ಸಮಾರುಹ್ಯ** ಏರಿ **ಅದರ್ಶನಂ** ದೃಷ್ಟಿಗೆ ಕಾಣಿಸಿಗದಂತೆ **ಯಯೌ** ಹೋದನು. **ಶಿವಸ್ಯ** ರುದ್ರನ **ವರತಃ** ವರದ ದೆಸೆಯಿಂದ **ನಾಗಪಾಶೈಃ** ಸರ್ಪಗಳ ಪಾಶಗಳಿಂದ **ಸರ್ವಾನ್** ಆ ಎಲ್ಲಾ **ಕಪಿವೀರಸಂಘಾನ್** ಕಪಿವೀರಸಮೂಹವನ್ನು **ಬಬಂಧ** ಬಂಧಿಸಿದನು.

ತಾತ್ಪರ್ಯ : ಬಿಲ್ಲು ಬಾಣಗಳಿಂದ ಕೂಡಿದ ಇಂದ್ರಜಿತುವು ರಥದೊಂದಿಗೆ ಆಕಾಶಕ್ಕೆ ಹಾರಿ ಕಣ್ಣಿಗೆ ಕಾಣಸಿಗದಂತೆ ಅದೃಶ್ಯನಾಗುವನು. ಶಿವನ ವರ ಪ್ರಸಾದದಿಂದ ಇಂದ್ರಜಿತುವು ನಾಗಾಸ್ತ್ರವನ್ನು ಪ್ರಯೋಗಿಸಿ ಸಮಸ್ತಕಪಿಗಳನ್ನು ನಾಗಪಾಶದಿಂದ ಬಂಧಿಸುವನು.

**ಪುರಾಽವತಾರಾಯ ಯದಾ ಸ ವಿಷ್ಣು-**
**ರ್ದಿದೇಶ ಸರ್ವಾಂಸ್ತ್ರಿದಶಾಂಸ್ತದೈವ ।**
**ಮಮಾಪಿ ಸೇವಾ ಭವತೇ ಪ್ರಯೋಜ್ಯೇ-**
**ತ್ಯೇವಂ ಗರುತ್ಮಾನವದದ್ ವೃಷಾಕಪಿಮ್ ॥ ೧೩೮ ॥**

ಪದಚ್ಛೇದ : ಪುರಾ ಅವತಾರಾಯ ಯದಾ ಸ ವಿಷ್ಣುಃ ದಿದೇಶ ಸರ್ವಾನ್ ತ್ರಿದಶಾನ್ ತದಾ ಏವ । ಮಮ ಅಪಿ ಸೇವಾ ಭವತೇ ಪ್ರಯೋಜ್ಯಾ ಇತಿ ಏವಂ ಗರುತ್ಮಾನ್ ಅವದತ್ ವೃಷಾಕಪಿಮ್ ॥

**ಅರ್ಥ :- ಪುರಾ** ರಾಮಾವತಾರಕ್ಕಾಗಿ ಬ್ರಹ್ಮಾದಿದೇವತೆಗಳ ಪ್ರಾರ್ಥನಾ ಸಮಯದಲ್ಲಿ **ಸಃ ವಿಷ್ಣುಃ** ಆ ವಿಷ್ಣುವು **ಅವತಾರಾಯ** ತಾನು ಭೂಮಿಯಲ್ಲಿ ಅವತಾರವನ್ನು ಮಾಡುವುದಕ್ಕಾಗಿ **ಯದಾ** ಯಾವಾಗ **ತ್ರಿದಶಾನ್** ದೇವತೆಗಳನ್ನು **ದಿದೇಶ** ಆದೇಶಿಸಿದನೋ **ತದೈವ** ಆ ಸಮಯದಲ್ಲಿಯೇ **ಗರುತ್ಮಾನ್** ಗರುಡನು **ಮಮಾಪಿ** ನನಗೂ ಕೂಡ **ಭವತಾ** ನಿನ್ನಿಂದ **ಏವಂ** ಈ ದೇವತೆಗಳಂತೆ **ಸೇವಾ** ಸೇವೆಯು **ಪ್ರಯೋಜ್ಯಾ** ಆದೇಶಿಸಲು ಅರ್ಹವಾದದ್ದು **ಇತಿ** ಹೀಗೆಂದು **ವೃಷಾಕಪಿಂ** ಭಕ್ತರ ಅಭೀಷ್ಟವನ್ನು ಪೂರೈಸುವ ಷಡ್ಗುಣನಾದ ದುಃಖಪರಿಹರಿಸುವ ನಾರಾಯಣನನ್ನು **ಅವದತ್** ಹೇಳಿದನು.

**ತಾತ್ಪರ್ಯ :-** ದುಷ್ಟರ ಸಂಹಾರಕ್ಕೆಂದು ಪ್ರಾರ್ಥಿಸಿದ ಬ್ರಹ್ಮಾದಿದೇವತೆಗಳನ್ನು ಕುರಿತು ವಿಷ್ಣುವು ತಾನು ಅವತರಿಸುವುಸಮಯದಲ್ಲಿ ಇತರ ದೇವತೆಗಳಿಗೂ ಅವತಾರವನ್ನು ಮಾಡಲು ಆದೇಶಿಸಿದ. ಆಗ ಗರುಡನು ಈ ಸೇವೆಯ ಭಾಗ್ಯ ನನ್ನ ಮೇಲೂ ಉಂಟಾಗಲಿ ಎಂದು ವಿಷ್ಣುವನ್ನು ಪ್ರಾರ್ಥಿಸುತ್ತಾನೆ.

**ತಮಾಹ ವಿಷ್ಣುರ್ನ ಭುವಿ ಪ್ರಜಾತಿ-**
**ಮುಪೈಹಿ ಸೇವಾಂ ತವ ಚಾನ್ಯಥಾಽಹಮ್ ।**
**ಆದಾಸ್ಯ ಏವಾತ್ರ ಯಥಾ ಯಶಃ ಸ್ಯಾದ್**
**ಧರ್ಮಶ್ಚ ಕರ್ತವ್ಯಕೃದೇವ ಚ ಸ್ಯಾಃ ॥ ೧೩೯ ॥**

ಪದಚ್ಛೇದ : ತಮ್ ಆಹ ವಿಷ್ಣುಃ ನ ಭುವಿ ಪ್ರಜಾತಿಮ್ ಉಪೈಹಿ ಸೇವಾಂ ತವ ಚ ಅನ್ಯಥಾ ಅಹಮ್ । ಆದಾಸ್ಯೇ ಏವ ಅತ್ರ ಯಥಾ ಯಶಃ ಸ್ಯಾತ್ ಧರ್ಮಃ ಚ್ಚ ಕರ್ತವ್ಯಕೃತ್ ಏವ ಚ ಸ್ಯಾಃ ॥

**ಅರ್ಥ :- ವಿಷ್ಣುಃ** ಶ್ರೀಮನ್ನಾರಾಯಣನು **ತಂ** ಆ ಗರುಡನನ್ನು ಕುರಿತು **ಆಹ** ಹೇಳಿದನು. (**ತ್ವಂ** ನೀನು ) **ಭುವಿ** ಭೂಲೋಕದಲ್ಲಿ **ಪ್ರಜಾತಿಂ** ಹುಟ್ಟುವಿಕೆಯನ್ನು **ನೋಪೈಹಿ** ಹೊಂದಲಾರೆ **ಅನ್ಯಥಾ ಚ** ಭುವಿಯಲ್ಲಿ ಉತ್ಪತ್ತಿ ರಹಿತನಾದಾಗ್ಯೂ **ಅಹಂ** ನಾನು **ಅತ್ರ** ಈ ರಾಮವತಾರಪ್ರಸಂಗದಲ್ಲಿ **ಯಥಾ**

ಹೇಗೆ ತೇ ನಿನಗೆ **ಯಶಃ** ಕೀರ್ತಿಯು **ಧರ್ಮಶ್ಚ** ಪುಣ್ಯವೂ ಕೂಡ **ಸ್ಯಾತ್** ಆಗುವುದೋ **ಕರ್ತವ್ಯಕೃದೇವ ಚ** ನಿನಗೆ ವಿಹಿತವಾದ ಕರ್ತವ್ಯವನ್ನು ಕೂಡ ಅನುಷ್ಠಾನಮಾಡುವವನೇ **ಸ್ಯಾಃ** ಆಗುವಿಯೋ (**ತಥಾ** ಹಾಗೆಯೇ) **ಸೇವಾಂ** ಸೇವೆಯನ್ನು **ಆದಾಸ್ಯೇ ಏವ** ಕೊಟ್ಟೇ ಕೊಡುವೆನು.

**ತಾತ್ಪರ್ಯ** :- 'ಎಲೈ ಗರುಡನೇ ನೀನು ಭೂಮಿಯಲ್ಲಿ ಅವತರಿಸಲಾರೆ. ಆದರೂ ಕೂಡ ನಾನು ರಾಮಾವತಾರದಲ್ಲಿ ನಿನಗೆ ಕೀರ್ತಿಯನ್ನು ತಂದು ಕೊಡುವ, ಧರ್ಮವೂ ಹಾಗು ನಿನ್ನ ಕರ್ತವ್ಯವೂ ಆದ ಕೆಲಸವನ್ನು ಕೊಟ್ಟು ನಿನ್ನ ಸೇವೆಯನ್ನು ಖಂಡಿತವಾಗಿಯೂ ಪಡೆಯುವೆ'

**ವರೇಣ ಶರ್ವಸ್ಯ ಹಿ ರಾವಣಾತ್ಮಜೋ**
**ಯದಾ ನಿಬಧ್ನಾತಿ ಕಪೀನ್ ಸಲಕ್ಷ್ಮಣಾನ್ ।**
**ಉರಂಗಪಾಶೇನ ತದಾ ತ್ವಮೇವ**
**ಸಮೇತ್ಯ ಸರ್ವಾನಪಿ ಮೋಚಯಸ್ವ ॥ ೧೪೦ ॥**

ಪದಚ್ಛೇದ : ವರೇಣ ಶರ್ವಸ್ಯ ಹಿ ರಾವಣಾತ್ಮಜಃ ಯದಾ ನಿಬಧ್ನಾತಿ ಕಪೀನ್ ಸಲಕ್ಷ್ಮಣಾನ್ । ಉರಂಗಪಾಶೇನ ತದಾ ತ್ವಂ ಏವ ಸಮೇತ್ಯ ಸರ್ವಾನ್ ಅಪಿ ಮೋಚಯಸ್ವ ॥

**ಅರ್ಥ** :- **ರಾವಣಾತ್ಮಜಃ** ರಾವಣಪುತ್ರನಾದ ಇಂದ್ರಜಿತುವು **ಹಿ** ಯಾವ ಕಾರಣದಿಂದ **ಶರ್ವಸ್ಯ** ಶಿವನ **ವರೇಣ** ವರದಿಂದ **ಉರಂಗಪಾಶೇನ** ಸರ್ಪರೂಪಹಗ್ಗದಿಂದ **ಸಲಕ್ಷ್ಮಣಾನ್** ಲಕ್ಷ್ಮಣಸಹಿತನಾದ **ಕಪೀನ್** ಕಪಿಗಳನ್ನು **ಯದಾ** ಯಾವ ಸಮಯದಲ್ಲಿ **ನಿಬಧ್ನಾತಿ** ಕಟ್ಟಿಹಾಕುವನೋ **ತದಾ** ಆ ಸಮಯದಲ್ಲಿ **ತ್ವಮೇವ** ನೀನೆಯೇ **ಸಮೇತ್ಯ** ಆಗಮಿಸಿ **ಸರ್ವಾನಪಿ** ಎಲ್ಲರನ್ನೂ ಕೂಡ **ಮೋಚಯಸ್ವ** ಬಿಡಿಸುವಂತಹವನಾಗು.

**ತಾತ್ಪರ್ಯ** :- 'ಇಂದ್ರಜಿತುವು ರುದ್ರನ ವರಬಲದಿಂದ ಲಕ್ಷ್ಮಣನೊಂದಿಗೆ ಕಪಿಗಳನ್ನೆಲ್ಲಾ ಯಾವಾಗ ನಾಗಪಾಶದಿಂದ ಬಂಧಿಸುವನೋ ಆ ಸಮಯದಲ್ಲಿ ನೀನು ಬಂದು ಎಲ್ಲರನ್ನು ನಾಗಪಾಶದಿಂದ ಬಿಡುಗಡೆಗೊಳಿಸು'

**ಅಹಂ ಸಮರ್ಥೋಽಪಿ ಸ ಲಕ್ಷ್ಮಣಶ್ಚ**
**ತಥಾ ಹನೂಮಾನ್ ನ ವಿಮೋಚಯಾಮಃ ।**

**ತವ ಪ್ರಿಯಾರ್ಥಂ ಗರುಡೈಷ ಏವ**
**ಕೃತಸ್ತವಾಽದೇಶ ಇಮಂ ಕುರುಷ್ವ॥ ೧೪೧ ॥**

ಪದಚ್ಛೇದ : ಅಹಂ ಸಮರ್ಥಃ ಅಪಿ ಸ ಲಕ್ಷ್ಮಣಃ ಚ ತಥಾ ಹನೂಮಾನ್ ನ ವಿಮೋಚಯಾಮಃ । ತವ ಪ್ರಿಯಾರ್ಥಂ ಗರುಡ ಏಷಃ ಏವ ಕೃತಃ ತವ ಆದೇಶ ಇಮಂ ಕುರುಷ್ವ॥

**ಅರ್ಥ :- ಹೇ ಗರುಡ** ಎಲೈ ಗರುಡನೇ **ಅಹಂ** ನಾನು **ಸಮರ್ಥಃ** ನಾಗ ಪಾಶವನ್ನು ಬಿಡಿಸುವುದಕ್ಕೆ ಸಮರ್ಥನು **ತಥಾ** ಹಾಗೆಯೇ **ಸಃ** ನಾಗಪಾಶದಿಂದ ಬದ್ಧನಾಗುವ **ಲಕ್ಷ್ಮಣಃ** ಲಕ್ಷ್ಮಣನು **ಸಮರ್ಥಃ** ಸಮರ್ಥನು **ಚ** ಮತ್ತು **ಹನೂಮಾನ್ ಅಪಿ** ಹನುಮಂತನೂ **ಸಮರ್ಥಃ** ಸಮರ್ಥನು (**ತಥಾಪಿ** ಹಾಗಿದ್ದರೂ) **ತವ** ನಿನ್ನ **ಪ್ರಿಯಾರ್ಥಂ** ಪ್ರೀತಿಗಾಗಿಯೇ **ನ ವಿಮೋಚಯಾಮಃ** ನಾಗಪಾಶದಿಂದ ಬಿಡಿಸಲಾರೆವು **ಏಷ ಏವ** ಇದುವೇ **ತವ** ನಿನಗೆ **ಆದೇಶಃ** ಆದೇಶವು **ಕೃತಃ** ಮಾಡಲ್ಪಟ್ಟಿದೆ **ಇಮಂ** ಇಂತಹ ಆದೇಶವನ್ನು **ಕುರುಷ್ವ** ಮಾಡುವಂತವನಾಗು.

**ತಾತ್ಪರ್ಯ :-** 'ನಾಗಪಾಶವನ್ನು ಬಿಡಿಸಲು ನಾನು ಸಮರ್ಥನಾಗಿರುವೆ. ಲಕ್ಷ್ಮಣ ಹನುಮಂತರೂ ಕೂಡ ಸಮರ್ಥರು. ಹಾಗಿರುವಾಗಲೂ ನಾನು ನಿನ್ನ ಮೇಲಿನ ಪ್ರೀತಿಯಿಂದ ಈ ಕಾರ್ಯವನ್ನು ಮಾಡದೇ ನಿನಗೆ ವಹಿಸುವೆನು. ಇದೇ ನಿನಗೆ ನಾನು ಮಾಡುವ ಆಜ್ಞೆ. ಇದನ್ನು ಪರಿಪಾಲಿಸುವವನಾಗು'

**ತದೇತದುಕ್ತಂ ಹಿ ಪುರಾಽಽತ್ಮನಾ ಯತ್**
**ತತೋ ಹಿ ರಾಮೋ ನ ಮುಮೋಚ ಕಂಚನ ।**
**ನ ಲಕ್ಷ್ಮಣೋ ನೈವ ಚ ಮಾರುತಾತ್ಮಜಃ**
**ಸ ಚೈವ ಜಾನಾತಿ ಹಿ ದೇವಗುಹ್ಯಮ್ ॥ ೧೪೨ ॥**

ಪದಚ್ಛೇದ : ತತ್ ಏತತ್ ಉಕ್ತಂ ಹಿ ಪುರಾ ಆತ್ಮನಾ ಯತ್ ತತಃ ಹಿ ರಾಮಃ ನ ಮುಮೋಚ ಕಂಚನ । ನ ಲಕ್ಷ್ಮಣಃ ನ ಏವ ಚ ಮಾರುತಾತ್ಮಜಃ ಸ ಚ ಏವ ಜಾನಾತಿ ಹಿ ದೇವಗುಹ್ಯಮ್॥

**ಅರ್ಥ : ಪುರಾ** ಹಿಂದೆ **ಆತ್ಮನಾ** ರಾಮನಾದ ತನ್ನಿಂದಲೇ **ಯತ್** ಯಾವ ಕಾರಣದಿಂದ **ಏತತ್** ಇಂತಹ **ತತ್** ಆ ಮಾತು **ಉಕ್ತಂ ಹಿ** ಹೇಳಲ್ಪಟ್ಟಿದೆಯಷ್ಟೆ

**ತತಃ** ಆಕಾರಣದಿಂದ **ರಾಮಃ** ಶ್ರೀರಾಮನು **ಕಂಚನ** ಯಾರನ್ನೂ **ನ ಮುಮೋಚ** ಬಿಡಿಸಲಿಲ್ಲ. **ಲಕ್ಷ್ಮಣಃ** ಲಕ್ಷ್ಮಣನು **ನ (ಮುಮೋಚ** ಬಿಡಿಸಲಿಲ್ಲ.) **ಮಾರುತಾತ್ಮಜಃ** ಹನುಮಂತನೂ ಕೂಡ **ನೈವ** ಬಿಡಿಸಲಿಲ್ಲ. **ಸಃ ಏವ** ಆ ಹನುಮಂತನೇ **ಚ** ಲಕ್ಷ್ಮಣನು ಕೂಡ **ದೇವಗುಹ್ಯಂ** ದೇವರಹಸ್ಯವನ್ನು **ಜಾನಾತಿ ಹಿ** ತಿಳಿದಿರುವರಷ್ಟೇ

**ತಾತ್ಪರ್ಯ :** ರಾಮಾವತಾರಪೂರ್ವದಲ್ಲಿಯೇ ಹೀಗೆಂದು ಮಾತು ಕೊಟ್ಟಿದ್ದರಿಂದ ಶ್ರೀರಾಮನು ನಾಗಪಾಶವನ್ನು ಬಿಡಿಸಲಿಲ್ಲ. ಹನುಮಂತ ಮತ್ತು ಲಕ್ಷ್ಮಣರು ಸಮರ್ಥರಾದರೂ ದೇವರಹಸ್ಯವನ್ನು ಇದೇ ಎಂದು ತಿಳಿದ ಅವರೂ ಬಿಡಿಸುವುದಿಲ್ಲ.

### ರಾವಣನಿಂದ ಇಂದ್ರಜಿತನ ಪ್ರಶಂಸೆ

**ಅಥೋ ನಿಬಧ್ಯಾಽಶು ಹರೀನ್ ಸಲಕ್ಷ್ಮಣಾನ್**
**ಜಗಾಮ ರಕ್ಷಃ ಸ್ವಪಿತುಃ ಸಕಾಶಮ್ ।**
**ನನಂದ ಚಾಸೌ ಪಿಶಿತಾಶನೇಶ್ವರಃ**
**ಶಶಂಸ ಪುತ್ರಂ ಚ ಕೃತಾತ್ಮಕಾರ್ಯಮ್ ॥ ೧೪೩ ॥**

ಪದಚ್ಛೇದ : **ಅಥೋ ನಿಬಧ್ಯ ಆಶು ಹರೀನ್ ಸಲಕ್ಷ್ಮಣಾನ್ ಜಗಾಮ ರಕ್ಷಃ ಸ್ವಪಿತುಃ ಸಕಾಶಮ್ । ನನಂದ ಚ ಅಸೌ ಪಿಶಿತಾಶನೇಶ್ವರಃ ಶಶಂಸ ಪುತ್ರಂ ಚ ಕೃತಾತ್ಮಕಾರ್ಯಮ್ ॥**

**ಅರ್ಥ :-** **ರಕ್ಷಃ** ಇಂದ್ರಜಿತುವು **ಸಲಕ್ಷ್ಮಣಾನ್** ಲಕ್ಷ್ಮಣನೊಂದಿಗೆ **ಹರೀನ್** ಕಪಿಗಳನ್ನು **ನಿಬಧ್ಯ** ಬಂಧಿಸಿ **ಅಥೋ** ಅನಂತರ **ಆಶು** ಕೂಡಲೇ **ಸ್ವಪಿತುಃ** ತನ್ನ ತಂದೆಯಾದ ರಾವಣನ **ಸಕಾಶಂ** ಸನಿಹಕ್ಕೆ **ಜಗಾಮ** ಹೋದನು. **ಪಿಶಿತಾಶನೇಶ್ವರಃ** ಮಾಂಸವೇ ಭೋಜನವಾಗಿ ಉಳ್ಳ ರಕ್ಕಸರಿಗೆ ರಾಜನಾದ **ಅಸೌ** ಈ ರಾವಣನು **ನನಂದ** ಹರ್ಷಿತನಾದನು. **ಕೃತಾತ್ಮಕಾರ್ಯಂ** ಮಾಡಲ್ಪಟ್ಟ ತನ್ನ ಕಾರ್ಯವುಳ್ಳ **ಪುತ್ರಂ** ಮಗನಾದ ಇಂದ್ರಜಿತುವನ್ನು **ಶಶಂಸ ಚ** ಹೊಗಳಿದನೂ ಕೂಡ.

**ತಾತ್ಪರ್ಯ :** ಹೀಗೆ ನಾಗಪಾಶದಿಂದ ಲಕ್ಷ್ಮಣನನ್ನು ಕಪಿಗಳನ್ನೂ ಬಂಧಿಸಿದ ಇಂದ್ರಜಿತುವು ತನ್ನ ತಂದೆಯಾದ ರಾವಣನ ಸನಿಹಕ್ಕೆ ಹೊರಟನು. ತನ್ನ ಕೆಲಸವನ್ನು ಪೂರೈಸಿದ ಮಗನನ್ನು ರಾವಣನು ಪ್ರಶಂಸಿಸಿ ಸಂತೋಷಗೊಳ್ಳುತ್ತಾನೆ.

ಗರುಡನಿಂದ ನಾಗಪಾಶದಿಂದ ಬಿಡುಗಡೆ

ಸ ಪಕ್ಷಿರಾಜೋಽಥ ಹರೇರ್ನಿದೇಶಂ
ಸ್ಮರಂಸ್ತ್ವರಾವಾನಿಹ ಚಾಽಜಗಾಮ ।
ತತ್ಪಕ್ಷವಾತಸ್ಪರ್ಶೇನ ಕೇವಲಂ
ವಿನಷ್ಟ ಏಷಾಂ ಸ ಉರಂಗಬಂಧಃ ॥ ೧೪೪ ॥

ಪದಚ್ಛೇದ : ಸಃ ಪಕ್ಷಿರಾಜಃ ಅಥ ಹರೇಃ ನಿದೇಶಂ ಸ್ಮರನ್ ತ್ವರಾವಾನ್ ಇಹ ಚ ಆಜಗಾಮ । ತತ್ಪಕ್ಷವಾತಸ್ಪರ್ಶೇನ ಕೇವಲಂ ವಿನಷ್ಟಃ ಏಷಾಂ ಸಃ ಉರಂಗಬಂಧಃ ॥

**ಅರ್ಥ** :- **ಅಥ** ಅನಂತರ **ಪಕ್ಷಿರಾಜಃ** ಪಕ್ಷಿಗಳಿಗೆ ರಾಜನಾದ **ಸಃ** ಆ ಗರುಡನು **ಹರೇಃ** ಶ್ರೀಹರಿಯ **ನಿದೇಶಂ** ಆಜ್ಞೆಯನ್ನು **ಸ್ಮರನ್ (ಸನ್)** ಸ್ಮರಿಸುವವನಾಗಿ **ತ್ವರಾವಾನ್ (ಸನ್)** ವೇಗವುಳ್ಳವನಾಗಿ **ಇಹ** ಈ ಯುದ್ಧಸ್ಥಳಕ್ಕೆ **ಆಜಗಾಮ** ಬಂದನು. **ಚ** ಮತ್ತು **ಕೇವಲಂ** ಕೇವಲ **ತತ್** ಆ **ಪಕ್ಷವಾತ ಸ್ಪರ್ಶೇನ** ಗರುಡನ ರೆಕ್ಕೆಗಳ ಗಾಳಿಯ ಸ್ಪರ್ಶಮಾತ್ರದಿಂದ **ಏಷಾಂ** ಈ ಕಪಿಗಳ **ಸಃ** ಅಂತಹ **ಉರಂಗಬಂಧಃ** ನಾಗಪಾಶಬಂಧವು **ವಿನಷ್ಟಃ** ನಾಶಹೊಂದಿತು.

**ತಾತ್ಪರ್ಯ** : ಶ್ರೀಹರಿಯ ಆಜ್ಞೆಯನ್ನು ಸ್ಮರಿಸಿದ ಗರುಡನು ಕೂಡಲೇ ಯುದ್ಧಸ್ಥಳಕ್ಕೆ ಆಗಮಿಸುವನು. ಇವನ ರೆಕ್ಕೆಗಳ ತಾಡನದಿಂದ ಉಂಟಾದ ಗಾಳಿಯ ಸ್ಪರ್ಶಮಾತ್ರದಿಂದಲೇ ನಾಗಪಾಶಗಳೆಲ್ಲವೂ ನಾಶಹೊಂದಿದವು.

ಸ ರಾಮಮಾನಮ್ಯ ಪರಾತ್ಮದೈವತಂ
ಯಯೌ ಸುಮಾಲ್ಯಾಭರಣಾನುಲೇಪನಃ ।
ಕಪಿಪ್ರವೀರಾಶ್ಚ ತರೂನ್ ಶಿಲಾಶ್ಚ
ಪ್ರಗೃಹ್ಯ ನೇದುರ್ಬಲಿನಃ ಪ್ರಹೃಷ್ಟಾಃ ॥ ೧೪೫ ॥

ಪದಚ್ಛೇದ : ಸಃ ರಾಮಮ್ ಆನಮ್ಯ ಪರಾತ್ಮದೈವತಂ ಯಯೌ ಸುಮಾಲ್ಯಾಭರಣಾನುಲೇಪನಃ । ಕಪಿಪ್ರವೀರಾಃ ಚ ತರೂನ್ ಶಿಲಾಃ ಚ ಪ್ರಗೃಹ್ಯ ನೇದುಃ ಬಲಿನಃ ಪ್ರಹೃಷ್ಟಾಃ ॥

**ಅರ್ಥ** :- **ಸುಮಾಲ್ಯಾಭರಣಾನುಲೇಪನಃ** ಶೋಭನವಾದ ಹಾರ, ಆಭರಣಗಳು ಗಂಧದ ಲೇಪನವು ಇವುಗಳಿಂದ ಕೂಡಿದ **ಸಃ** ಆ ಗರುಡನು

**ಪರಾತ್ಮದೈವತಂ** ತನಗೆ ಒಡೆಯನಾದ **ರಾಮಂ** ರಾಮನನ್ನು **ಆನಮ್ಯ** ನಮಸ್ಕರಿಸಿ **ಯಯೌ** ಹೋದನು. **ಪ್ರಹೃಷ್ಟಾಃ** ಹರ್ಷಗೊಂಡವರಾದ **ಬಲಿನಃ** ಬಲಶಾಲಿಗಳಾದ **ಕಪಿಪ್ರವೀರಾಶ್ಚ** ಕಪಿಪ್ರವೀರರಾದರೋ **ತರೂನ್** ವೃಕ್ಷಗಳನ್ನು **ಶಿಲಾಃ ಚ** ಶಿಲೆಗಳನ್ನು ಕೂಡ **ಪ್ರಗೃಹ್ಯ** ಹಿಡಿದು **ನೇದುಃ** ವೀರಧ್ವನಿಯನ್ನು ಮಾಡಿದರು.

**ತಾತ್ಪರ್ಯ** : ಸುಂದರವಾದ ಮಾಲೆ ಆಭರಣಗಳು ಹಾಗು ಗಂಧಲೇಪನಗಳಿಂದ ಕೂಡಿದ ಗರುಡನು ತನ್ನ ಒಡೆಯನಾದ ಶ್ರೀರಾಮನಿಗೆ ನಮಸ್ಕರಿಸಿ ಅಲ್ಲಿಂದ ನಿರ್ಗಮಿಸುವನು. ನಾಗಪಾಶದಿಂದ ಬಿಡುಗಡೆ ಹೊಂದಿದ ಕಪಿವೀರರು ಸಂತೋಷದಿಂದ ವೃಕ್ಷಶಿಲೆಗಳನ್ನು ಕೈ ಹಿಡಿದು ವೀರಗರ್ಜನೆ ಮಾಡುತ್ತಾರೆ.

### ಆತಂಕಗೊಂಡ ರಾವಣ

**ಶ್ರುತ್ವಾ ನಿನಾದಂ ಪ್ಲವಗೇಶ್ವರಾಣಾಂ**
**ಪುನಃ ಸಪುತ್ರೋಽತ್ರಸದತ್ರ ರಾವಣಃ ।**
**ಬಂಧಾದಮುಷ್ಮಾತ್ ಪ್ರವಿನಿಸ್ಸೃತಾಸ್ತೇ**
**ಕಿಮತ್ರ ಕಾರ್ಯಂ ತ್ವಿತಿ ಚಿಂತಯಾನಃ ॥ ೧೪೬ ॥**

**ಪದಚ್ಛೇದ** : **ಶ್ರುತ್ವಾ ನಿನಾದಂ ಪ್ಲವಗೇಶ್ವರಾಣಾಂ ಪುನಃ ಸಪುತ್ರಃ ಅತ್ರಸತ್ ಅತ್ರ ರಾವಣಃ । ಬಂಧಾತ್ ಅಮುಷ್ಮಾತ್ ಪ್ರವಿನಿಸ್ಸೃತಾಃ ತೇ ಕಿಮ್ ಅತ್ರ ಕಾರ್ಯಂ ತು ಇತಿ ಚಿಂತಯಾನಃ ॥**

**ಅರ್ಥ** :- **ಸಪುತ್ರಃ** ಪುತ್ರನಿಂದ ಸಹಿತನಾದ **ರಾವಣಃ** ರಾವಣನು **ಪ್ಲವಗೇಶ್ವರಾಣಾಂ** ಕಪಿಶ್ರೇಷ್ಠರುಗಳ **ನಿನಾದಂ** ಧ್ವನಿಯನ್ನು **ಶ್ರುತ್ವಾ** ಕೇಳಿ **ಪುನಃ** ಮತ್ತು **ತೇ** ಆ ಕಪಿಗಳು **ಅಮುಷ್ಮಾತ್** ಈ ತರಹ **ಬಂಧಾತ್** ಬಂಧನದಿಂದ **ಪ್ರವಿನಿಃಸೃತಾಃ** ಬಿಡಲ್ಪಟ್ಟಿರು (**ಇತಿ** ಹೀಗೆಂದು) **ಶ್ರುತ್ವಾ** ಕೇಳಿ **ಅತ್ರ** ಈ ಸಮಯದಲ್ಲಿ **ಕಿಂ ಕಾರ್ಯಂ** ಏನನ್ನು ಮಾಡಲ್ಪಡಬೇಕು (**ಇತಿ** ಎಂಬುದಾಗಿ) **ಚಿಂತಯಾನಃ** (**ಸನ್**) ಯೋಚಿಸತಕ್ಕವನಾಗಿ **ಅತ್ರ ತು** ಈ ಕಪಿಗಳ ಬಿಡುಗಡೆವಿಷಯದಲ್ಲಿ ಯಾದರೂ **ಅತ್ರಸತ್** ಭಯಗೊಂಡನು.

**ತಾತ್ಪರ್ಯ** : ಕಪಿಗಳ ವೀರಧ್ವನಿಯನ್ನು ಹಾಗು ಅವರು ನಾಗಪಾಶದಿಂದ ಮುಕ್ತರಾದದ್ದನ್ನು ಕೇಳಿದ ರಾವಣನು ಆಸಮಯದಲ್ಲಿ ಮುಂದೇನು? ಎಂದು ಚಿಂತಿಸುತ್ತಾ ಭಯಗೊಳ್ಳುತ್ತಾನೆ.

ಮತ್ತೊಮ್ಮೆ ಅಗ್ನಿಗೆ ಆಹುತಿ ನೀಡಿದ ಇಂದ್ರಜಿತ್

ಪುನಶ್ಚ ಹುತ್ವಾ ಸ ಹುತಾಶಮೇವ
ರಥಂ ಸಮಾರುಹ್ಯ ಯಯಾವದರ್ಶನಮ್ ।
ವವರ್ಷ ಚಾಸ್ತ್ರಾಣಿ ಮಹಾಂತ್ಯಜಸ್ರಂ
ವರಾದುಮೇಶಸ್ಯ ತಥಾಽಬ್ಜಜಸ್ಯ ॥ ೧೪೭ ॥

ಪದಚ್ಛೇದ : ಪುನಃ ಚ ಹುತ್ವಾ ಸ ಹುತಾಶಮ್ ಏವ ರಥಂ ಸಮಾರುಹ್ಯ ಯಯೌ ಅದರ್ಶನಮ್ । ವವರ್ಷ ಚ ಅಸ್ತ್ರಾಣಿ ಮಹಾಂತಿ ಅಜಸ್ರಂ ವರಾತ್ ಉಮೇಶಸ್ಯ ತಥಾ ಅಬ್ಜಜಸ್ಯ ॥

**ಅರ್ಥ** :- ಸಃ ಇಂದ್ರಜಿತುವು ಪುನಃ ಏವ ಇನ್ನೊಮ್ಮೆಯೂ **ಹುತಾಶಂ** ಅಗ್ನಿಯನ್ನು **ಹುತ್ವಾ** ಹೋಮಿಸಿಯೇ **ರಥಂ** ರಥವನ್ನು **ಸಮಾರುಹ್ಯ** ಹತ್ತಿ **ಅದರ್ಶನಂ** ಅಂತರ್ಧಾನವನ್ನು **ಯಯೌ** ಹೊಂದಿದನು. **ಉಮೇಶಸ್ಯ** ರುದ್ರನ **ತಥಾ** ಹಾಗೆಯೇ **ಅಬ್ಜಜಸ್ಯ** ಬ್ರಹ್ಮದೇವನ **ವರಾತ್ ಚ** ವರದಿಂದಲೂ ಕೂಡ **ಮಹಾಂತಿ** ಉತ್ತಮಗಳಾದ **ಅಸ್ತ್ರಾಣಿ** ಅಸ್ತ್ರಗಳಿಂದ **ಅಜಸ್ರಂ** ಅವಿರತವಾಗಿ **ವವರ್ಷ** ಮಳೆಗರೆದನು.

**ತಾತ್ಪರ್ಯ** :- ಅಗ್ನಿಯಲ್ಲಿ ಪುನಃ ಹೋಮವನ್ನು ಮಾಡಿದ ಇಂದ್ರಜಿತುವು ರಥವನ್ನು ಏರಿ ಅದೃಶ್ಯನಾಗುವನು. ರುದ್ರ ಹಾಗು ಬ್ರಹ್ಮದೇವರ ವರಪ್ರಸಾದ ದಿಂದ ಶ್ರೇಷ್ಠಅಸ್ತ್ರಗಳನ್ನು ಪಡೆದಿರುವ ಇಂದ್ರಜಿತುವು ಅಸ್ತ್ರಗಳ ಮಳೆಯನ್ನೇ ನಿರಂತರವಾಗಿ ಕಪಿಸೈನ್ಯದ ಮೇಲೆ ಸುರಿಸುತ್ತಾನೆ.

ಪುನಃ ಮೂರ್ಛೆಗೊಂಡ ಕಪಿವೀರರು

ಪುನಶ್ಚ ತಸ್ಯಾಸ್ತ್ರನಿಪೀಡಿತಾಸ್ತೇ
ನಿಪೇತುರುರ್ವ್ಯಾಂ ಕಪಯಃ ಸಲಕ್ಷ್ಮಣಾಃ ।
ಸ್ಪೃಶಂತಿ ನಾಸ್ತ್ರಾಣಿ ದುರಂತಶಕ್ತಿಂ
ತನುಂ ಸಮೀರಸ್ಯ ಹಿ ಕಾನಿಚಿತ್ ಕ್ವಚಿತ್ ॥ ೧೪೮ ॥

ಪದಚ್ಛೇದ : ಪುನಃ ಚ ತಸ್ಯ ಅಸ್ತ್ರನಿಪೀಡಿತಾಃ ತೇ ನಿಪೇತುಃ ಉರ್ವ್ಯಾಂ ಕಪಯಃ ಸಲಕ್ಷ್ಮಣಾಃ । ಸ್ಪೃಶಂತಿ ನ ಅಸ್ತ್ರಾಣಿ ದುರಂತಶಕ್ತಿಂ ತನುಂ ಸಮೀರಸ್ಯ ಹಿ ಕಾನಿಚಿತ್ ಕ್ವಚಿತ್ ॥

**ಅರ್ಥ :** **ಪುನಶ್ಚ** ಮತ್ತೂ ಕೂಡ **ತಸ್ಯ** ಆ ಇಂದ್ರಜಿತುವಿನ **ಅಸ್ತ್ರನಿಪೀಡಿತಾಃ** ಅಸ್ತ್ರಗಳಿಂದ ಹಿಂಸಿತರಾದ **ಸಲಕ್ಷ್ಮಣಾಃ** ಲಕ್ಷ್ಮಣನಿಂದ ಕೂಡಿದ **ಕಪಯಃ** ಕಪಿಗಳು **ಉರ್ವ್ಯಾಂ** ಭೂಮಿಯಲ್ಲಿ **ನಿಪೇತುಃ** ಬಿದ್ದರು. **ದುರಂತಶಕ್ತಿಂ** ಅಪಾರಸಾಮರ್ಥ್ಯವುಳ್ಳ **ಸಮೀರಸ್ಯ** ಹನುಮಂತನ **ತನುಂ** ಶರೀರವನ್ನು **ತಸ್ಯ** ಆ ಇಂದ್ರಜಿತುವಿನ **ಕಾನಿಚಿತ್** ಆಯಾವ **ಅಸ್ತ್ರಾಣಿ** ಅಸ್ತ್ರಗಳು **ಕ್ವಚಿತ್** ಒಂದು ಸ್ಥಳದಲ್ಲಾದರೂ **ನ ಸ್ಪೃಶಂತಿ** ಮುಟ್ಟುವುದಿಲ್ಲ.

**ತಾತ್ಪರ್ಯ :-** ಇಂದ್ರಜಿತುವಿನ ಅಸ್ತ್ರಗಳು ಕಪಿಗಳು ಹಾಗು ಲಕ್ಷ್ಮಣನಿಗೆ ತಾಗಿ ಅವರು ಕೆಳಗೆ ಬಿದ್ದರು. ಆದರೆ ಅಗಾಧಸಾಮರ್ಥ್ಯವುಳ್ಳ ವಾಯು ಪುತ್ರನಾದ ಹನುಮಂತನ ದೇಹವನ್ನು ಈ ಯಾವ ಅಸ್ತ್ರಗಳಿಗೆ ಮುಟ್ಟಲು ಸಾಧ್ಯವಾಗುವುದಿಲ್ಲ.

**ವಿಭೀಷಣನಿಂದ ಜಾಂಬವಂತನ ಉಪಚಾರ**

**ವಿಜ್ಞಾತುಕಾಮಃ ಪುರಿ ಸಂಪ್ರವೃತ್ತಿಂ**
**ವಿಭೀಷಣಃ ಪೂರ್ವಗತಸ್ತದಾಽಽಗಾತ್ ।**
**ದದರ್ಶ ಸರ್ವಾನ್ ಪತಿತಾನ್ ಸ ವಾನರಾನ್**
**ಮರುತ್ಸುತಂ ತ್ವೇಕಮನಾಕುಲಂ ಚ ॥ ೧೪೯ ॥**

ಪದಚ್ಛೇದ : ವಿಜ್ಞಾತುಕಾಮಃ ಪುರಿ ಸಂಪ್ರವೃತ್ತಿಂ ವಿಭೀಷಣಃ ಪೂರ್ವಗತಃ ತದಾ ಅಗಾತ್ । ದದರ್ಶ ಸರ್ವಾನ್ ಪತಿತಾನ್ ಸ ವಾನರಾನ್ ಮರುತ್ಸುತಂ ತು ಏಕಮ್ ಅನಾಕುಲಂ ಚ ॥

**ಅರ್ಥ :-** **ಪುರಿ** ಲಂಕಾಪುರಿಯಲ್ಲಿ **ಸಂಪ್ರವೃತ್ತಿಂ** ರಕ್ಕಸರ ಚರ್ಯೆಗಳನ್ನು **ವಿಜ್ಞಾತುಕಾಮಃ** ತಿಳಿಯಲು ಇಚ್ಛೆಯುಳ್ಳ **ವಿಭೀಷಣಃ ತು** ವಿಭೀಷಣ ನಾದರೂ **ಪೂರ್ವಗತಃ** ಅಸ್ತ್ರದಿಂದ ಬಂಧಿಸುವ ಮೊದಲೇ ಹೋಗಿದ್ದನು. **ತದಾ** ಕಪಿಗಳ ಮೂರ್ಛಾವಸ್ಥೆಯ ಸಮಯದಲ್ಲಿ **ಆಗಾತ್** ಬಂದನು **ಪತಿತಾನ್** ಬೀಳಲ್ಪಟ್ಟಿರುವ **ಸರ್ವಾನ್** ಆ ಎಲ್ಲಾ **ವಾನರಾನ್** ಕಪಿಗಳನ್ನು **ಚ** ಮತ್ತು **ಅನಾಕುಲಂ** ಮೋಹರಹಿತನಾದ **ಮರುತ್ಸುತಮ್ ಏಕಂ** ವಾಯುಪುತ್ರನಾದ ಹನುಮಂತನನ್ನೊಬ್ಬನನ್ನೇ **ದದರ್ಶ** ನೋಡಿದ.

**ತಾತ್ಪರ್ಯ :-** ಇಂದ್ರಜಿತುವಿನ ಅಸ್ತ್ರಪ್ರಯೋಗದ ಮೊದಲು ರಾಕ್ಷಸರ ವಿಷಯವನ್ನು ತಿಳಿಯಲು ಲಂಕೆಗೆ ಹೋಗಿದ್ದ ವಿಭೀಷಣನು ಈಗ ಬಂದು

ಮೂರ್ಛೆ ಹೊಂದಿರುವ ಕಪಿಗಳನ್ನು ಹಾಗೆ ಎಚ್ಚರವಾಗಿರುವ, ಮೋಹರಹಿತ ನಾದ ಹನುಮಂತನನ್ನೂ ನೋಡಿದ.

ಸ ತಂ ಸಮಾದಾಯ ಯಯೌ ವಿಧಾತೃಜಂ
ವಿಮೂರ್ಚ್ಛಿತಂ ಚೋದಕಸೇಕತಸ್ತಮ್ ।
ಆಶ್ವಾಸ್ಯ ಕಿಂ ಜೀವಸಿ ಹೀತ್ಯುವಾಚ
ತಥೇತಿ ಸ ಪ್ರಾಹ ಚ ಮಂದವಾಕ್ಯಃ ॥ ೧೫೦ ॥

ಪದಚ್ಛೇದ : ಸಃ ತಂ ಸಮಾದಾಯ ಯಯೌ ವಿಧಾತೃಜಂ ವಿಮೂರ್ಚ್ಛಿತಂ ಚ ಉದಕಸೇಕತಃ ತಮ್ । ಆಶ್ವಾಸ್ಯ ಕಿಂ ಜೀವಸಿ ಹಿ ಇತಿ ಉವಾಚ ತಥಾ ಇತಿ ಸಃ ಪ್ರಾಹ ಚ ಮಂದವಾಕ್ಯಃ ॥

**ಅರ್ಥ** :- **ಸಃ** ಆ ವಿಭೀಷಣನು **ತಂ** ಆ ಹನುಮಂತನನ್ನು **ಸಮಾದಾಯ** ಕರೆದುಕೊಂಡು **ವಿಧಾತೃಜಂ** ಬ್ರಹ್ಮನ ಮಗ ಜಾಂಬವತನನ್ನು ಕುರಿತು **ಯಯೌ** ಹೋದನು. **ವಿಮೂರ್ಛಿತಃ** ಮೂರ್ಛೆಹೊಂದಿದ **ತಂ ಚ** ಆ ಜಾಂಬವಂತ ನನ್ನಾದರೋ **ಉದಕಸೇಕತಃ** ಜಲದ ಸಿಡಿಸುವಿಕೆಯಿಂದ **ಆಶ್ವಾಸ್ಯ** ಎಚ್ಚರಿಸಿ **ಜೀವಸಿ ಕಿಂ?** ಬದುಕಿರುವೆಯಷ್ಟೆ **ಇತಿ** ಎಂದು (**ಸಃ** ಆ ವಿಭೀಷಣನು **ಉವಾಚ** ಹೇಳಿದನು. **ಮಂದವಾಕ್ಯೈಃ** ಕ್ಷೀಣವಾಕ್ಯವುಳ್ಳ **ಸಃ ಹಿ** ಆ ಜಾಂಬವಂತ ನಾದರೋ **ತಥಾ (ಇತಿ)** ಹಾಗೆ ಇರುವೆನೆಂದು **ಪ್ರಾಹ** ಹೇಳಿದನು.

**ತಾತ್ಪರ್ಯ** :- ಹನುಮಂತನನ್ನು ಕರೆದುಕೊಂಡು ವಿಭೀಷಣನು ಜಾಂಬವಂತನ ಸಮೀಪ ಬರುವನು. ಮೂರ್ಛೆಗೊಂಡಿದ್ದ ಜಾಂಬವಂತನಿಗೆ ಜಲಪ್ರೋಕ್ಷಣೆ ಮಾಡುತ್ತಾನೆ. ಆಗ ಎಚ್ಚರಗೊಂಡ ಜಾಂಬವಂತನು 'ಬದುಕಿರುವೆಯಾ' ಎಂಬ ವಿಭೀಷಣನನ ಪ್ರಶ್ನೆಗೆ ಹೌದೆಂಬ ಉತ್ತರವನ್ನಿತ್ತನು.

### ಜಾಂಬವಂತನಿಂದ ವಾಯುಪುತ್ರನ ಪ್ರಶಂಸೆ

ಊಚೇ ಪುನರ್ಜೀವತಿ ಕಿಂ ಹನೂಮಾನ್
ಜೀವಾಃ ಸ್ಮ ಸರ್ವೇಽಪಿ ಹಿ ಜೀವಮಾನೇ ।
ತಸ್ಮಿನ್ ಹತೇ ನಿಹತಾಶ್ಚೈ ಶ್ಯವ ಸರ್ವ
ಇತೀರಿತೇಽಸ್ಮೀತ್ಯವದತ್ ಸ ಮಾರುತಿಃ ॥ ೧೫೧ ॥

ಪದಚ್ಛೇದ : ಊಚೇ ಪುನಃ ಜೀವತಿ ಕಿಂ ಹನೂಮಾನ್ ಜೀವಾಃ ಸ್ಮ ಸರ್ವೇ ಅಪಿ ಹಿ ಜೀವಮಾನೇ । ತಸ್ಮಿನ್ ಹತೇ ನಿಹತಾಃ ಚ ಏವ ಸರ್ವೇ ಇತಿ ಈರಿತೇ ಅಸ್ಮಿ ಇತಿ ಅವದತ್ ಸ ಮಾರುತಿಃ ॥

**ಅರ್ಥ** :- **ಪುನಃ** ಮತ್ತು (**ಜಾಂಬವಾನ್** ಜಾಂಬವಂತನು) **ಊಚೇ** ಹೇಳಿದನು **ಹನೂಮಾನ್** ಹನುಮಂತನು **ಜೀವತಿ ಕಿಂ?** ಜೀವಿಸಿರುವನೇನು? **ತಸ್ಮಿನ್** ಆ ಹನುಮನು **ಜೀವಮಾನೇ (ಸತಿ)** ಜೀವಿಸಿರಲು **ಸರ್ವೇಽಪಿ** ನಾವೆಲ್ಲರೂ ಕೂಡ **ಜೀವಾಮಃ** ಜೀವಿಸುತ್ತೇವೆ. **ಚ** ಮತ್ತು (**ತಸ್ಮಿನ್** ಆ ಹನುಮನು) **ಹತೇ ಸತಿ** ಹತನಾಗುತ್ತಿರಲು **ಸರ್ವೇ** ನಾವೆಲ್ಲರು **ನಿಹತಾಃ ಏವ** ಮರಣಿಸಿರುವಂತೆ **ಹಿ** ಪ್ರಸಿದ್ಧ **ಇತಿ** ಎಂದು (**ಊಚೇ** ಹೇಳಿದನು.) **ಇತಿ** ಈಪ್ರಕಾರವಾಗಿ **ಈರಿತೇ (ಸತಿ)** ಹೇಳಲ್ಪಡುತ್ತಿರಲು **ಸಃ ಮಾರುತಿಃ** ಆ ಮಾರುತಿಯು **ಅಸ್ಮೀತಿ** ಜೀವಿಸಿರುವೆನೆಂದು **ಅವದತ್** ಹೇಳಿದನು.

**ತಾತ್ಪರ್ಯ** : ನೋವಿನಿಂದ ಕಣ್ಣುಮುಚ್ಚಿಯೇ ಜಾಂಬವಂತನು ವಿಭೀಷಣ ನನ್ನು ಕೇಳಿದ. 'ಹನುಮಂತನು ಬದುಕಿರುವನಷ್ಟೆ? ಹನುಮಂತನು ಜೀವಿಸಿರುವ ನೆಂದಾದರೆ ಮಾತ್ರ ನಾವೂ ಕೂಡ ಬದುಕಿರುವೆವು. ಅವನು ಮರಣಿಸಿದರೆ ನಾವೂ ಕೂಡ ಹತರಾದಂತೆ' ಎನ್ನಲು 'ನಾನು ಇರುವೆನು' ಎಂದು ಮಾರುತಿಯು ಪ್ರತ್ಯುತ್ತರವನ್ನೀಡಿದ.

### ಜಾಂಬವಂತನಿಂದ ಗಂಧಮಾದನಪರ್ವತದ ಮಾಹಿತಿ

**ಇತ್ಯುಕ್ತೋ ಜಾಂಬವಾನಾಹ ಹನೂಮಂತಮನಂತರಮ್ ।**
**ಯೋಽಸೌ ಮೇರೋಃ ಸಮೀಪಸ್ಥೋ ಗಂಧಮಾದನಸಂಜ್ಞಿತಃ ।**
**ಗಿರಿಸ್ತಸ್ಮಾತ್ ಸಮಾಹಾರ್ಯಂ ತ್ವಯೌಷಧಚತುಷ್ಟಯಮ್ ॥೧೫೨॥**

ಪದಚ್ಛೇದ : ಇತಿ ಉಕ್ತಃ ಜಾಂಬವಾನ್ ಆಹ ಹನೂಮಂತಮ್ ಅನಂತರಮ್ । ಯಃ ಅಸೌ ಮೇರೋಃ ಸಮೀಪಸ್ಥಃ ಗಂಧಮಾದನಸಂಜ್ಞಿತಃ । ಗಿರಿಃ ತಸ್ಮಾತ್ ಸಮಾಹಾರ್ಯಂ ತ್ವಯಾ ಔಷಧಚತುಷ್ಟಯಮ್ ॥

**ಅರ್ಥ** :- **ಇತಿ** ಈ ಪ್ರಕಾರವಾಗಿ **ಉಕ್ತಃ** ಹೇಳಲ್ಪಟ್ಟ **ಜಾಂಬವಾನ್** ಜಾಂಬವಂತನು **ಅನಂತರಂ** ಅನಂತರ **ಹನೂಮಂತಂ** ಹನುಮಂತನನ್ನು ಕುರಿತು **ಆಹ** ಹೇಳಿದನು. **ಮೇರೋಃ** ಮೇರುಪರ್ವತದ **ಸಮೀಪಸ್ಥಃ** ಸನಿಹ ದಲ್ಲಿರುವ **ಗಂಧಮಾನಸಂಜ್ಞಕಃ** ಗಂಧಮಾದನವೆಂಬ ಹೆಸರುಳ್ಳ **ಯೋऽಸೌ** ಯಾವ ಪ್ರಸಿದ್ಧವಾದ **ಗಿರಿಃ** ಪರ್ವತವು (**ತಿಷ್ಠತಿ** ಇರುವುದೋ) **ತಸ್ಮಾತ್** ಆ ಪರ್ವತದಿಂದ **ತ್ವಯಾ** ನಿನ್ನಿಂದ **ಔಷಧಿಚತುಷ್ಟಯಂ** ನಾಲ್ಕುಔಷಧಿಗಳು **ಸಮಾಹಾರ್ಯಂ** ತರಲ್ಪಡಲು ಯೋಗ್ಯವು. (**ಇತಿ ಆಹ**) ಎಂದು ಹೇಳಿದನು.

**ತಾತ್ಪರ್ಯ** :- ಆಗ ಜಾಂಬವಂತನು 'ಹೇ ಮಾರುತಿಯೇ ಮೇರು ಪರ್ವತದ ಸನಿಹದಲ್ಲಿ ಗಂಧಮಾನವೆಂಬ ಒಂದು ಪರ್ವತವಿದೆ. ಅಲ್ಲಿಂದ ನಾಲ್ಕು ಔಷಧಿಗಳನ್ನು ನೀನು ತರಬೇಕು'

**ಮೃತಸಂಜೀವನೀ ಮುಖ್ಯಾ ಸಂಧಾನಕರಣೀ ಪರಾ ।**
**ಸವರ್ಣಕರಣೀ ಚೈವ ವಿಶಲ್ಯಕರಣೀತಿ ಚ ॥ ೧೫೩ ॥**

ಪದಚ್ಛೇದ : ಮೃತಸಂಜೀವನೀ ಮುಖ್ಯಾ ಸಂಧಾನಕರಣೀ ಪರಾ । ಸವರ್ಣಕರಣೀ ಚ ಏವ ವಿಶಲ್ಯಕರಣೀ ಇತಿ ಚ ॥

**ಅರ್ಥ** :- **ಮೃತಸಂಜೀವಿನೀ** ಸತ್ತವರನ್ನು ಜೀವಂತರಾಗಿಸುವ 'ಮೃತ ಸಂಜೀವಿನೀ' ಎಂದು **ಮುಖ್ಯಾ** ಪ್ರಮುಖವಾದದ್ದು **ಪರಾ** ಇನ್ನೊಂದು **ಸಂಧಾನಕಾರಿಣೀ** ಭಿನ್ನವಾದ ಅಂಗಗಳನ್ನು ಕೂಡಿಸುವ ಸಂಧಾನಕಾರಿಣೀ ಎಂದು **ಸವರ್ಣಕರಿಣೀ ಚೈವ** ಗಾಯದಿಂದ ವಿಕಾರ ಹೊಂದಿದ ಚರ್ಮದ ವರ್ಣವನ್ನು ಮೊದಲಿ ನಂತಾಗಿಸುವ 'ಸವರ್ಣಕರಿಣೀ' ಎಂದು **ಚ** ಮತ್ತು **ವಿಶಲ್ಯಕರಿಣೀ ಇತಿ** ದೇಹಕ್ಕೆ ಚುಚ್ಚಿದ ಆಯುಧಗಳನ್ನು ಹೊರತೆಗೆಯಲು ಉಪಯುಕ್ತವಾದ ವಿಶಲ್ಯಕರಿಣೀ ಎಂದು.

**ತಾತ್ಪರ್ಯ** : ಆ ನಾಲ್ಕು ಔಷಧಿಗಳು ಹೀಗಿವೆಮೃತರನ್ನು ಜೀವಿಸುವಂತೆ ಮಾಡುವ ಪ್ರಧಾನವಾದ 'ಮೃತಸಂಜೀವಿನೀ' ಎಂದು. ಭಿನ್ನವಾದ ಅಂಗಗಳ ಜೋಡಣೆಗೆ 'ಸಂಧಾನಕಾರಿಣೀ' ಎಂದು ಗಾಯದಿಂದ ಉಂಟಾದ ಚರ್ಮದ ವರ್ಣವಿರಾಕವನ್ನು ಸರಿದೂಗಿಸಲು 'ಸವರ್ಣಕರಿಣೀ' ಎಂದು ಹಾಗು ಒಳಗೆ ಸೇರಿದ ಆಯುಧವನ್ನು ಹೊರತೆಗೆಯಲು 'ವಿಶಲ್ಯಕರಣೀ' ಎಂಬ ಈ ನಾಲ್ಕು ಔಷಧಿಗಳು. ಇವುಗಳನ್ನು ನೀನು ತಾ.

### ಹನುಮಂತನ ಅತಿಶಯ ಸಾಮರ್ಥ್ಯ

**ಇತ್ಯುಕ್ತಃ ಸ ಕ್ಷಣೇನೈವ ಪ್ರಾಪತದ್ ಗಂಧಮಾದನಮ್ ।**
**ಅವಾಪ ಚಾಂಬರಚರೋ ರಾಮಮುಕ್ತಃ ಶರೋ ಯಥಾ ॥ ೧೫೪ ॥**

ಪದಚ್ಛೇದ : ಇತಿ ಉಕ್ತಃ ಸ ಕ್ಷಣೇನ ಏವ ಪ್ರಾಪತತ್ ಗಂಧಮಾದನಮ್ । ಅವಾಪ ಚ ಅಂಬರಚರಃ ರಾಮಮುಕ್ತಃ ಶರಃ ಯಥಾ ॥

**ಅರ್ಥ** :- **ಇತಿ** ಈ ಪ್ರಕಾರವಾಗಿ **ಉಕ್ತಃ** ಹೇಳಿಸಿಕೊಳ್ಳಲ್ಪಟ್ಟ **ಸಃ** ಆ ಹನುಮಂತನು **ರಾಮಮುಕ್ತಃ** ರಾಮನಿಂದ ಬಿಡಲ್ಪಟ್ಟ **ಅಂಬರಚರಃ** ಆಕಾಶದಲ್ಲಿ ಚಲಿಸತಕ್ಕ **ಶರಃ** ಬಾಣವು **ಯಥಾ ಚ** ಹೇಗೆಯೋ (**ತಥಾ** ಹಾಗೆಯೇ) **ಕ್ಷಣೇನೈವ** ಆ ಕ್ಷಣದಲ್ಲಿಯೇ **ತತ್** ಆ **ಗಂಧಮಾದನಂ** ಗಂಧಮಾದನಪರ್ವತ ವನ್ನು ಕುರಿತು **ಅವಾಪ** ಹೊಂದಿದನು.

**ತಾತ್ಪರ್ಯ** :- ಜಾಂಬವಂತನು ಈ ಮಾತುಗಳನ್ನು ಹೇಳುವುದೇ ತಡ ರಾಮನು ಬಿಟ್ಟ ಬಾಣವು ಆ ಕ್ಷಣದದಲ್ಲಿಯೇ ಆಕಾಶದಲ್ಲಿ ಚಲಿಸುವಂತೆ ಹನುಮಂತನು ಆ ಕ್ಷಣದಲ್ಲೇ ಆಕಾಶಕ್ಕೆ ಹಾರಿ ಆ ಕೂಡಲೆ ಗಂಧಮಾನ ಪರ್ವತದಲ್ಲಿದ್ದನು.

**ಅಂತರ್ಹಿತಾಶ್ಚೌಷಧೀಸ್ತು ತದಾ ವಿಜ್ಞಾಯ ಮಾರುತಿಃ ।**
**ಉದ್ಬಬರ್ಹ ಗಿರಿಂ ಕ್ರೋಧಾಚ್ಛತಯೋಜನಮಂಡಲಮ್ ॥ ೧೫೫ ॥**

ಪದಚ್ಛೇದ : ಅಂತರ್ಹಿತಾಃ ಚ ಔಷಧೀಃ ತು ತದಾ ವಿಜ್ಞಾಯ ಮಾರುತಿಃ । ಉದ್ಬಬರ್ಹ ಗಿರಿಂ ಕ್ರೋಧಾತ್ ಶತಯೋಜನಮಂಡಲಮ್ ॥

**ಅರ್ಥ** :- **ಮಾರುತಿಃ** ಹನುಮಂತನು **ತದಾ** ಆ ಪರ್ವತವನ್ನು ತಲಿಪಿದ ಸಮಯದಲ್ಲಿ **ಔಷಧೀಸ್ತು** ಔಷದಿಸಸ್ಯಗಳಾದರೋ **ಅಂತರ್ಹಿತಾಃ** ಅಡಗಿ ಕೊಂಡಿರುವುದನ್ನು **ವಿಜ್ಞಾಯ** ತಿಳಿದು **ಕ್ರೋಧಾತ್** ಸಿಟ್ಟಿನಿಂದ **ಶತಯೋಜನ ಮಂಡಲಗಿರಿಂ** ನೂರುಯೋಜನವಿಸ್ತೀರ್ಣವಾದ ಪರ್ವತಭಾಗವನ್ನು **ಉದ್ಬಬರ್ಹ ಚ** ಕಿತ್ತನಷ್ಟೇ.

**ತಾತ್ಪರ್ಯ** :- ಹನುಮಂತನನ್ನು ನೋಡಿದ ಔಷಧಿಸಸ್ಯಗಳು ತಮ್ಮನ್ನು ಕೊಂಡೊಯ್ಯುವನು ಎಂಬ ಭೀತಿಯಿಂದ ಅಡಗಿ ಕುಳಿತು ಕೊಳ್ಳುತ್ತವೆ.

ಇದರಿಂದ ಕ್ರುದ್ಧನಾದ ಹನುಮನು ಎರಡು ಸಹಸ್ರಯೋಜನಾವಿಸ್ತೀರ್ಣತೆಯುಳ್ಳ ಈ ಪರ್ವತದಲ್ಲಿನ ಒಂದು ಭಾಗವಾದ ಔಷಧಿ ಸಸ್ಯಗಳು ಇರುವ ನೂರುಯೋಜನವಿಸ್ತೀರ್ಣಪರ್ವತವನ್ನೇ ಕಿತ್ತುತ್ತಾನೆ.

**ಗಂಧಮಾದನವನ್ನು ಲೀಲಾಜಾಲವಾಗಿ ತಂದ ಹನುಮಂತ**

**ಸ ತಂ ಸಮುತ್ಪಾಟ್ಯ ಗಿರಿಂ ಕರೇಣ**
**ಪ್ರತೋಲಯಿತ್ವಾ ಬಲದೇವಸೂನುಃ ।**
**ಸಮುತ್ಪಪಾತಾಂಬರಮುಗ್ರವೇಗೋ**
**ಯಥಾ ಹರಿಶ್ಚಕ್ರಧರಸ್ತ್ರಿವಿಕ್ರಮೇ ॥ ೧೫೬ ॥**

ಪದಚ್ಛೇದ : ಸಃ ತಂ ಸಮುತ್ಪಾಟ್ಯ ಗಿರಿಂ ಕರೇಣ ಪ್ರತೋಲಯಿತ್ವಾ ಬಲದೇವಸೂನುಃ । ಸಮುತ್ಪಪಾತ ಅಂಬರಮ್ ಉಗ್ರವೇಗಃ ಯಥಾ ಹರಿಃ ಚಕ್ರಧರಃ ತ್ರಿವಿಕ್ರಮೇ ॥

**ಅರ್ಥ :** **ಬಲದೇವಸೂನುಃ** ಬಲಕ್ಕೆ ಅಭಿಮಾನಿ ವಾಯುವಿನ ಪುತ್ರನಾದ **ಸಃ** ಆ ಹನುಮಂತನು **ತಂ** ಅಂತಹ **ಗಿರಿಂ** ಪರ್ವತವನ್ನು **ಕರೇಣ** ಕೈಯಿಂದ **ಪ್ರತೋಲಯಿತ್ವಾ** ತೂಗಿಸಿ **ಉಗ್ರವೇಗಃ (ಸನ್)** ಭಯಂಕರವೇಗವುಳ್ಳವನಾಗಿ **ಚಕ್ರಧರಃ** ಚಕ್ರಧಾರಿಯಾದ **ಹರಿಃ** ಶ್ರೀಹರಿಯು **ತ್ರಿವಿಕ್ರಮೇ** ತ್ರಿವಿಕ್ರಮ ಅವತಾರದಲ್ಲಿ **ಯಥಾ** ಹೇಗೆ ಮೂರು ಲೋಕವನ್ನು ಪಾದದಿಂದ ಆವರಿಸಿದನೋ **(ತಥಾ ಹಾಗೆಯೇ)** **ಅಂಬರಂ** ಆಕಾಶವನ್ನು **ಸಮುತ್ಪಪಾತ** ಹಾರಿದನು.

**ತಾತ್ಪರ್ಯ :** ಕಿತ್ತ ಪರ್ವತವನನ್ನು ಕೈಯಲ್ಲಿ ಹಿಡಿದು ಎಷ್ಟು ಮಹಾಭಾರವಿರುವುದೆಂದು ತೂಗಿಸಿ ನೋಡಿದ ಹನುಮಂತನು ತ್ರಿವಿಕ್ರಮಾವತಾರಿ ಹರಿಯು ಮೂರು ಲೋಕಗಳನ್ನು ತನ್ನ ಪಾದದಿಂದ ಕ್ಷಣಮಾತ್ರದಿಂದ ಹೇಗೆ ಆವರಿಸಿದನೋ ಹಾಗೆಯೇ ಬಹಳ ವೇಗವುಳ್ಳ ಹನುಮಂತನು ೫೦ ಸಹಸ್ರ ಯೋಜನದೂರವುಳ್ಳ ಲಂಕೆಗೆ ಬಹಳ ವೇಗವುಳ್ಳವನಾಗಿ ಆಕಾಶಕ್ಕೆ ಹಾರಿದನು.

**ಮತ್ತೆ ಎದ್ದ ಕಪಿಗಳು**

**ಅವಾಪ ಚಾಕ್ಷ್ಣೋಃ ಸ ನಿಮೇಷಮಾತ್ರತೋ**
**ನಿಪಾತಿತಾ ಯತ್ರ ಕಪಿಪ್ರವೀರಾಃ ।**
**ತಚ್ಛೈಲವಾತಸ್ಪರ್ಶಾತ್ ಸಮುತ್ಥಿತಾಃ**
**ಸಮಸ್ತಶೋ ವಾನರಯೂಥಪಾಃ ಕ್ಷಣಾತ್ ॥ ೧೫೭ ॥**

**ಪದಚ್ಛೇದ** : ಅವಾಪ ಚಾಕ್ಷ್ಣೋಃ ಸಃ ನಿಮೇಷಮಾತ್ರತಃ ನಿಪಾತಿತಾಃ ಯತ್ರ ಕಪಿಪ್ರವೀರಾಃ । ತಚ್ಛೈ ಚ್ಛೈಲವಾತಸ್ಪರ್ಶಾತ್ ಸಮುತ್ಥಿತಾಃ ಸಮಸ್ತಶಃ ವಾನರ ಯೂಥಪಾಃ ಕ್ಷಣಾತ್ ॥

**ಅರ್ಥ** : ಸಃ ಆ ಹನುಮಂತನು **ಅಕ್ಷ್ಣೋಃ** ಕಣ್ಣುಗಳ **ನಿಮೇಷಮಾತ್ರತಃ** ರೆಪ್ಪೆಯಾಡಿಸುವ ಸಮಯಮಾತ್ರದಿಂದಲೇ **ಯತ್ರ ಚ** ಯಾವ ಸ್ಥಳದಲ್ಲಿ ಯಾದರೋ **ಕಪಿಪ್ರವೀರಾಃ** ಕಪಿವೀರರು **ನಿಪಾತಿತಾಃ** ಬಿದ್ದಿರುವರೋ **ತಂ** ಆ ಪ್ರದೇಶವನ್ನು **ಅವಾಪ** ಹೊಂದಿದನು. **ವಾನರಯೂಥಪಾಃ** ವಾನರ ಸಮೂಹ ವನ್ನು ಪಾಲಿಸುವ **ಸಮಸ್ತಶಃ** ಎಲ್ಲಾ ಕಪಿಗಳು **ತತ್** ಆ **ಶೈಲವಾತಸರ್ಶಾತ್** ಪರ್ವತದ ವಾಯುಸ್ಪರ್ಶದಿಂದ **ಕ್ಷಣಾತ್** ಶೀಘ್ರವೇ **ಸಮುತ್ಥಿತಾಃ** ಎದ್ದವರಾದರು.

**ತಾತ್ಪರ್ಯ** : ಗಂಧಮಾದನಪರ್ವತವನ್ನು ಹೊತ್ತ ಹನುಮನು ಕಣ್ಣು ರೆಪ್ಪೆ ಯಾಡಿಸುವ ಸಮಯದಷ್ಟರಲ್ಲಿಯೇ ಕಪಿವೀರರು ಮೂರ್ಛೆಗಂಡು ಬಿದ್ದಿರುವ ಸ್ಥಳಕ್ಕೆ ಆಗಮಿಸಿದನು. ಆ ಪರ್ವತದಿಂದ ಬೀಸಿ ಬಂದ ವಾಯುವಿನ ಸ್ಪರ್ಶ ಮಾತ್ರದಿಂದ ಆ ಕ್ಷಣದಲ್ಲಿಯೇ ಆ ಎಲ್ಲಾ ಕಪಿಪ್ರಮುಖರು ಎಚ್ಚರಗೊಳ್ಳುತ್ತಾರೆ.

**ಲಕ್ಷ್ಮಣಾದಿಗಳಿಂದ ಹನುಮತ್ಪ್ರಶಂಸೆ**

**ಅಪೂಜಯನ್ ಮಾರುತಿಮುಗ್ರಪೌರುಷಂ**
**ರಘೂತ್ತಮೋಽಸ್ಯಾನುಜನಿಸ್ತಥಾಽಪರೇ ।**
**ಪಪಾತ ಮೂರ್ಧ್ನ ರ್ಯಸ್ಯ ಚ ಪುಷ್ಪಸಂತತಿಃ**
**ಪ್ರಮೋದಿತ್ತೈರ್ದೇವವರ್ಯೈರ್ವಿಸರ್ಜಿತಾ ॥ ೧೫೮ ॥**

**ಪದಚ್ಛೇದ** : ಅಪೂಜಯನ್ ಮಾರುತಿಮ್ ಉಗ್ರಪೌರುಷಂ ರಘೂತಮಃ ಅಸ್ಯ ಅನುಜನಿಃ ತಥಾ ಅಪರೇ । ಪಪಾತ ಮೂರ್ಧ್ನಿ ಅಸ್ಯ ಚ ಪುಷ್ಪಸಂತತಿಃ ಪ್ರಮೋದಿತೈಃ ದೇವವರ್ಯೈಃ ವಿಸರ್ಜಿತಾ ॥

**ಅರ್ಥ** : **ರಘೂತ್ತಮಸ್ಯ** ಶ್ರೀರಾಮನ **ಅನುಜನಿಃ** ಅನುಜನಾದ ಲಕ್ಷ್ಮಣನು **ತಥಾ** ಹಾಗೆಯೇ **ಅಪರೇ** ಬೇರೆಯವರಾದ ಕಪಿಗಳೂ **ಉಗ್ರಪೌರುಷಂ** ಉಗ್ರವಾದ ಪೌರುಷವುಳ್ಳ **ಮಾರುತಿಂ** ಹನುಮಂತನನ್ನು **ಅಪೂಜಯನ್** ಪೂಜಿಸಿದರು. **ಚ** ಮತ್ತು **ಪ್ರಮೋದಿತೈಃ** ಹರ್ಷಗೊಂಡ **ದೇವವರ್ಯೈಃ** ದೇವೋತ್ತಮರಿಂದ **ವಿಸರ್ಜಿತಾ** ಬಿಡಲ್ಪಟ್ಟ **ಪುಷ್ಪಸಂತತಿಃ** ಪುಷ್ಪಗಳ ಸಮೂಹವು **ಅಸ್ಯ** ಈ ಹನುಮಂತನ **ಮೂರ್ಧ್ನಿ** ಶಿರದಲ್ಲಿ **ಪಪಾತ** ಬಿದ್ದಿತು.

**ತಾತ್ಪರ್ಯ** : ಆಗ ಆನಂದಿತರಾದ ಲಕ್ಷ್ಮಣನು ಹಾಗು ಕಪಿವೀರರೆಲ್ಲರೂ ಹನುಮಂತನನ್ನು ಪೂಜಿಸಿದರು. ದೇವಶ್ರೇಷ್ಠರೆಲ್ಲರೂ ಕೂಡ ಮುದಗೊಂಡು ಪುಷ್ಪಗಳಿಂದ ಹನುಮಂತನಿಗೆ ಅಭಿಷೇಕಮಾಡಿದರು.

ರಾಮನ ಆಲಿಂಗನ

**ಸ ದೇವಗಂಧರ್ವಮಹರ್ಷಿಸತ್ತಮೈ-**
**ರಭಿಷ್ಟುತೋ ರಾಮಕರೋಪಗೂಹಿತಃ ।**
**ಪುನರ್ಗಿರಿಂ ತಂ ಶತಯೋಜನೋಚ್ಛ್ರಿತಂ**
**ನ್ಯಪಾತಯತ್ ಸಂಸ್ಥಿತ ಏವ ತತ್ರ ಚ ॥ ೧೫೯ ॥**

ಪದಚ್ಛೇದ : ಸಃ ದೇವಗಂಧರ್ವಮಹರ್ಷಿಸತ್ತಮೈಃ ಅಭಿಷ್ಟುತಃ ರಾಮ ಕರೋಪಗೂಹಿತಃ । ಪುನಃ ಗಿರಿಂ ತಂ ಶತಯೋಜನೋಚ್ಛ್ರಿತಂ ನ್ಯಪಾತಯತ್ ಸಂಸ್ಥಿತಃ ಏವ ತತ್ರ ಚ ॥

**ಅರ್ಥ** : **ದೇವಗಂಧರ್ವಮಹರ್ಷಿಸತ್ತಮೈಃ** ದೇವತೆಗಳು ಗಂಧರ್ವರು ಹಾಗು ಉತ್ತಮಮರ್ಷಿಗಳಿಂದ **ಅಭಿಷ್ಟುತಃ** ಚೆನ್ನಾಗಿ ಸ್ತುತಿಸಲ್ಪಟ್ಟ **ಚ** ಮತ್ತು **ರಾಮಕರೇಣ** ರಾಮನಹಸ್ತಗಳಿಂದ **ಗೂಹಿತಃ** ಆಲಂಗಿತನಾದ **ಸಃ** ಆ ಹನುಮಂತನು **ಶತಯೋಜನೋಚ್ಛ್ರಿತಂ** ನೂರುಯೋಜನ ಎತ್ತರವಿರುವ **ತಂ** ಅಂತಹ **ಗಿರಿಂ** ಪರ್ವತವನ್ನು **ತತ್ರೈವ** ಅಲ್ಲಿಯೇ **ಸಂಸ್ಥಿತಃ (ಸನ್)** ನಿಂತವನಾಗಿ **ನ್ಯಪಾತಯತ್** ಎಸೆದನು.

**ತಾತ್ಪರ್ಯ** : ದೇವಗಂಧರ್ವಮಹರ್ಷಿಗಳಿಂದಲೂ ಸ್ತುತನಾದ ಹನುಮಂತನನ್ನು ಶ್ರೀರಾಮನು ಆಲಿಂಗಿಸಿಕೊಳ್ಳುತ್ತಾನೆ. ಅನಂತರ ಹನುಮಂತನು ನೂರು ಯೋಜನ ಎತ್ತರವಿರುವ ಗಂಧಮಾದನಪರ್ವತವನ್ನು ಲಂಕೆಯಲ್ಲಿದ್ದುಕೊಂಡೇ ಮೊದಲಿದ್ದ ಸ್ಥಳಕ್ಕೆ ಎಸೆಯುತ್ತಾನೆ.

ಸಂಜೀವಿನಿಯನ್ನು ಲಂಕೆಯಲ್ಲಿದ್ದೇ ಸ್ವಸ್ಥಾನಕ್ಕೆ ಸೇರಿಸಿದ

**ಸ ಪೂರ್ವವನ್ಮಾರುತಿವೇಗಚೋದಿತೋ**
**ನಿರಂತರಂ ಶ್ಲಿಷ್ಟತರೋऽತ್ರ ಚಾಭವತ್ ।**
**ಪುನಶ್ಚ ಸರ್ವೇ ತರುಶೈಲಹಸ್ತಾ**
**ರಣಾಯ ಚೋತ್ತಸ್ಥುರಲಂ ನದಂತಃ ॥ ೧೬೦ ॥**

**ಪದಚ್ಛೇದ : ಅವಾಪ ಚಾಕ್ಷ್ಣೋಃ ಸಃ ನಿಮೇಷಮಾತ್ರತಃ ನಿಪಾತಿತಾಃ ಯತ್ರ ಕಪಿಪ್ರವೀರಾಃ । ತಚ್ಛೈ ಚ್ಛೈಲವಾತಸ್ಪರ್ಶಾತ್ ಸಮುತ್ಥಿತಾಃ ಸಮಸ್ತಶಃ ವಾನರ ಯೂಥಪಾಃ ಕ್ಷಣಾತ್ ॥**

**ಅರ್ಥ :** **ಸಃ** ಆ ಹನುಮಂತನು **ಅಕ್ಷ್ಣೋಃ** ಕಣ್ಣುಗಳ **ನಿಮೇಷಮಾತ್ರತಃ** ರೆಪ್ಪೆಯಾಡಿಸುವ ಸಮಯಮಾತ್ರದಿಂದಲೇ **ಯತ್ರ ಚ** ಯಾವ ಸ್ಥಳದಲ್ಲಿ ಯಾದರೋ **ಕಪಿಪ್ರವೀರಾಃ** ಕಪಿವೀರರು **ನಿಪಾತಿತಾಃ** ಬಿದ್ದಿರುವರೋ **ತಂ** ಆ ಪ್ರದೇಶವನ್ನು **ಅವಾಪ** ಹೊಂದಿದನು. **ವಾನರಯೂಥಪಾಃ** ವಾನರ ಸಮೂಹ ವನ್ನು ಪಾಲಿಸುವ **ಸಮಸ್ತಶಃ** ಎಲ್ಲಾ ಕಪಿಗಳು **ತತ್** ಆ **ಶೈಲವಾತಸರ್ಶಾತ್** ಪರ್ವತದ ವಾಯುಸ್ಪರ್ಶದಿಂದ **ಕ್ಷಣಾತ್** ಶೀಘ್ರವೇ **ಸಮುತ್ಥಿತಾಃ** ಎದ್ದವರಾದರು.

**ತಾತ್ಪರ್ಯ :** ಗಂಧಮಾದನಪರ್ವತವನ್ನು ಹೊತ್ತ ಹನುಮನು ಕಣ್ಣು ರೆಪ್ಪೆ ಯಾಡಿಸುವ ಸಮಯದಷ್ಟರಲ್ಲಿಯೇ ಕಪಿವೀರರು ಮೂರ್ಛೆಗಂಡು ಬಿದ್ದಿರುವ ಸ್ಥಳಕ್ಕೆ ಆಗಮಿಸಿದನು. ಆ ಪರ್ವತದಿಂದ ಬೀಸಿ ಬಂದ ವಾಯುವಿನ ಸ್ಪರ್ಶ ಮಾತ್ರದಿಂದ ಆ ಕ್ಷಣದಲ್ಲಿಯೇ ಆ ಎಲ್ಲಾ ಕಪಿಪ್ರಮುಖರು ಎಚ್ಚರಗೊಳ್ಳುತ್ತಾರೆ.

### ಲಕ್ಷ್ಮಣಾದಿಗಳಿಂದ ಹನುಮತ್ಪ್ರಶಂಸೆ

**ಅಪೂಜಯನ್ ಮಾರುತಿಮುಗ್ರಪೌರುಷಂ**
**ರಘೂತ್ತಮೋಽಸ್ಯಾನುಜನಿಸ್ತಥಾಽಪರೇ ।**
**ಪಪಾತ ಮೂರ್ಧ್ನ್ಯಸ್ಯ ಚ ಪುಷ್ಪಸಂತತಿಃ**
**ಪ್ರಮೋದಿತೈರ್ದೇವವರ್ಯೈರ್ವಿಸರ್ಜಿತಾ ॥ ೧೫೮ ॥**

**ಪದಚ್ಛೇದ : ಅಪೂಜಯನ್ ಮಾರುತಿಮ್ ಉಗ್ರಪೌರುಷಂ ರಘೂತಮಃ ಅಸ್ಯ ಅನುಜನಿಃ ತಥಾ ಅಪರೇ । ಪಪಾತ ಮೂರ್ಧ್ನಿ ಅಸ್ಯ ಚ ಪುಷ್ಪಸಂತತಿಃ ಪ್ರಮೋದಿತೈಃ ದೇವವರ್ಯೈಃ ವಿಸರ್ಜಿತಾ ॥**

**ಅರ್ಥ :** **ರಘೂತ್ತಮಸ್ಯ** ಶ್ರೀರಾಮನ **ಅನುಜನಿಃ** ಅನುಜನಾದ ಲಕ್ಷ್ಮಣನು **ತಥಾ** ಹಾಗೆಯೇ **ಅಪರೇ** ಬೇರೆಯವರಾದ ಕಪಿಗಳೂ **ಉಗ್ರಪೌರುಷಂ** ಉಗ್ರವಾದ ಪೌರುಷವುಳ್ಳ **ಮಾರುತಿಂ** ಹನುಮಂತನನ್ನು **ಅಪೂಜಯನ್** ಪೂಜಿಸಿದರು. **ಚ** ಮತ್ತು **ಪ್ರಮೋದಿತೈಃ** ಹರ್ಷಗೊಂಡ **ದೇವವರ್ಯೈಃ** ದೇವೋತ್ತಮರಿಂದ **ವಿಸರ್ಜಿತಾ** ಬಿಡಲ್ಪಟ್ಟ **ಪುಷ್ಪಸಂತತಿಃ** ಪುಷ್ಪಗಳ ಸಮೂಹವು **ಅಸ್ಯ** ಈ ಹನುಮಂತನ **ಮೂರ್ಧ್ನಿ** ಶಿರದಲ್ಲಿ **ಪಪಾತ** ಬಿದ್ದಿತು.

**ತಾತ್ಪರ್ಯ** : ಆಗ ಆನಂದಿತರಾದ ಲಕ್ಷ್ಮಣನು ಹಾಗು ಕಪಿವೀರರೆಲ್ಲರೂ ಹನುಮಂತನನ್ನು ಪೂಜಿಸಿದರು. ದೇವಶ್ರೇಷ್ಠರೆಲ್ಲರೂ ಕೂಡ ಮುದಗೊಂಡು ಪುಷ್ಪಗಳಿಂದ ಹನುಮಂತನಿಗೆ ಅಭಿಷೇಕಮಾಡಿದರು.

ರಾಮನ ಆಲಿಂಗನ

**ಸ ದೇವಗಂಧರ್ವಮಹರ್ಷಿಸತ್ತಮೈ-**
**ರಭಿಷ್ಟುತೋ ರಾಮಕರೋಪಗೂಹಿತಃ ।**
**ಪುನರ್ಗಿರಿಂ ತಂ ಶತಯೋಜನೋಚ್ಛ್ರಿತಂ**
**ನ್ಯಪಾತಯತ್ ಸಂಸ್ಥಿತ ಏವ ತತ್ರ ಚ ॥ ೧೫೯ ॥**

**ಪದಚ್ಛೇದ** : ಸಃ ದೇವಗಂಧರ್ವಮಹರ್ಷಿಸತ್ತಮೈಃ ಅಭಿಷ್ಟುತಃ ರಾಮಕರೋಪಗೂಹಿತಃ । ಪುನಃ ಗಿರಿಂ ತಂ ಶತಯೋಜನೋಚ್ಛ್ರಿತಂ ನ್ಯಪಾತಯತ್ ಸಂಸ್ಥಿತಃ ಏವ ತತ್ರ ಚ ॥

**ಅರ್ಥ** : **ದೇವಗಂಧರ್ವಮಹರ್ಷಿಸತ್ತಮೈಃ** ದೇವತೆಗಳು ಗಂಧರ್ವರು ಹಾಗು ಉತ್ತಮಮರ್ಷಿಗಳಿಂದ **ಅಭಿಷ್ಟುತಃ** ಚೆನ್ನಾಗಿ ಸ್ತುತಿಸಲ್ಪಟ್ಟ **ಚ** ಮತ್ತು **ರಾಮಕರೇಣ** ರಾಮನಹಸ್ತಗಳಿಂದ **ಗೂಹಿತಃ** ಆಲಂಗಿತನಾದ **ಸಃ** ಆ ಹನುಮಂತನು **ಶತಯೋಜನೋಚ್ಛ್ರಿತಂ** ನೂರುಯೋಜನ ಎತ್ತರವಿರುವ **ತಂ** ಅಂತಹ **ಗಿರಿಂ** ಪರ್ವತವನ್ನು **ತತ್ರೈವ** ಅಲ್ಲಿಯೇ **ಸಂಸ್ಥಿತಃ (ಸನ್)** ನಿಂತವನಾಗಿ **ನ್ಯಪಾತಯತ್** ಎಸೆದನು.

**ತಾತ್ಪರ್ಯ** : ದೇವಗಂಧರ್ವಮಹರ್ಷಿಗಳಿಂದಲೂ ಸ್ತುತನಾದ ಹನುಮಂತನನ್ನು ಶ್ರೀರಾಮನು ಆಲಿಂಗಿಸಿಕೊಳ್ಳುತ್ತಾನೆ. ಅನಂತರ ಹನುಮಂತನು ನೂರು ಯೋಜನ ಎತ್ತರವಿರುವ ಗಂಧಮಾದನಪರ್ವತವನ್ನು ಲಂಕೆಯಲ್ಲಿದ್ದುಕೊಂಡೇ ಮೊದಲಿದ್ದ ಸ್ಥಳಕ್ಕೆ ಎಸೆಯುತ್ತಾನೆ.

ಸಂಜೀವಿನಿಯನ್ನು ಲಂಕೆಯಲ್ಲಿದ್ದೇ ಸ್ವಸ್ಥಾನಕ್ಕೆ ಸೇರಿಸಿದ

**ಸ ಪೂರ್ವವನ್ಮಾರುತಿವೇಗಚೋದಿತೋ**
**ನಿರಂತರಂ ಶ್ಲಿಷ್ಟತರೋಽತ್ರ ಚಾಭವತ್ ।**
**ಪುನಶ್ಚ ಸರ್ವೇ ತರುಶೈಲಹಸ್ತಾ**
**ರಣಾಯ ಚೋತ್ತಸ್ಥುರಲಂ ನದಂತಃ ॥ ೧೬೦ ॥**

ಪದಚ್ಛೇದ : ಸಃ ಪೂರ್ವವತ್ ಮಾರುತಿವೇಗಚೋದಿತಃ ನಿರಂತರಂ ಶ್ಲಿಷ್ಟತರಃ ಅತ್ರ ಚ ಅಭವತ್ । ಪುನಃ ಚ ಸರ್ವೇ ತರುಶೈಲಹಸ್ತಾಃ ರಣಾಯ ಚ ಉತ್ತಸ್ಥುಃ ಅಲಂ ನದಂತಃ ॥

**ಅರ್ಥ : ಮಾರುತಿವೇಗಚೋದಿತಃ** ಹನುಮಂತನ ವೇಗದಿಂದ ಪ್ರಚೋದಿಸಲ್ಪಟ್ಟ **ಸಃ** ಆ ಪರ್ವತದ ಒಂದು ಭಾಗವು **ಅತ್ರ** ಅಲ್ಲಿ **ಪೂರ್ವವತ್** ಮೊದಲಿನಂತೆ **ನಿರಂತರಂ** ಕಿತ್ತಿದಾಗ ಉಂಟಾಗುವ ಸೀಳು ಚಿಹ್ನೆಯೂ ಇರದಂತೆ **ಶ್ಲಿಷ್ಟತರಃ** ಅತಿಯಾಗಿ ಒಟ್ಟುಗೂಡಿದಂತೆ **ಅಭವತ್** ಉಂಟಾಯಿತು. **ತರುಶೈಲ ಹಸ್ತಾಃ** ವೃಕ್ಷಬೆಟ್ಟಗಳು ಕೈಯಲ್ಲಿ ಉಳ್ಳ **ಸರ್ವೇ** ಆ ಎಲ್ಲಾ ಕಪಿಗಳು **ಪುನಶ್ಚ** ಮತ್ತೂ ಕೂಡ **ರಣಾಯ** ಯುದ್ಧಕ್ಕಾಗಿ **ಅಲಂ** ಚೆನ್ನಾಗಿ **ನದಂತಃ** ಗರ್ಜನೆ ಮಾಡುವವರಾಗಿ **ಉತ್ತಸ್ಥುಃ ಚ** ಎದ್ದರಷ್ಟೇ.

**ತಾತ್ಪರ್ಯ** :- ಹನುಮಂತನಿಂದ ವೇಗವಾಗಿ ಎಸೆದ ಆ ಪರ್ವತವು ಮೊದಲಿದ್ದಂತೆಯೇ ಬಂದು ಸೇರಿತು. ಅಲ್ಲಿ ಒಂದು ಭಾಗವನ್ನು ಕಿತ್ತಿದ್ದರಿಂದ ಉಂಟಾಗುವ ಸೀಳುರೇಖೆಯೂ ಇರದಂತೆ ಒಟ್ಟಾಗಿ ಕೂಡಿಕೊಂಡಿತು. ಯುದ್ಧದ ಉತ್ಸಾಹದಿಂದ ಎಲ್ಲ ಕಪಿಗಳೂ ಪುನಃ ವೃಕ್ಷಶಿಲೆಗಳನ್ನು ಹಿಡಿದು ರಣಶಬ್ದವನ್ನು ಮಾಡುತ್ತಾರೆ.

### ಮಗದೊಮ್ಮೆ ಇಂದ್ರಜಿತನಿಂದ ಅಗ್ನಿಪೂಜೆ

**ಪುನಶ್ಚ ತಾನ್ ಪ್ರೇಕ್ಷ್ಯ ಸಮುತ್ಥಿತಾನ್ ಕಪೀನ್**
**ಭಯಂ ಮಹಚ್ಛಕ್ರಜಿತಂ ವಿವೇಶ ।**
**ಸ ಪೂರ್ವವದ್ಧವ್ಯವಹೇ ಸಮರ್ಚ್ಯ**
**ಶಿವಂ ತಥಾऽದರ್ಶನಮೇವ ಜಗ್ಮಿವಾನ್ ॥ ೧೬೧ ॥**

ಪದಚ್ಛೇದ : ಪುನಃ ಚ ತಾನ್ ಪ್ರೇಕ್ಷ್ಯ ಸಮುತ್ಥಿತಾನ್ ಕಪೀನ್ ಭಯಂ ಮಹತ್ ಶಕ್ರಜಿತಂ ವಿವೇಶ । ಸ ಪೂರ್ವವತ್ ಹವ್ಯವಹೇ ಸಮರ್ಚ್ಯ ಶಿವಂ ತಥಾ ಅದರ್ಶನಮ್ ಏವ ಜಗ್ಮಿವಾನ್ ॥

**ಅರ್ಥ** :- **ಪುನಶ್ಚ** ಮತ್ತೊಮ್ಮೆಯೂ **ಸಮುತ್ಥಿತಾನ್** ಏಳಲ್ಪಡುತ್ತಿರುವ **ತಾನ್** ಅಂತಹ **ಕಪೀನ್** ಕಪಿಗಳನ್ನು **ಪ್ರೇಕ್ಷ್ಯ** ನೋಡಿ **ಇಂದ್ರಜಿತಂ** ಇಂದ್ರಜಿತುವನ್ನು **ಮಹತ್** ದೊಡ್ಡದಾದ **ಭಯಂ** ಭಯವು **ವಿವೇಶ** ಪ್ರವೇಶಿಸಿತು. **ಸಃ** ಆ

ಇಂದ್ರಜಿತುವು **ಪೂರ್ವವತ್** ಹಿಂದೆ ಮಾಡಿದಂತೆಯೇ **ಹವ್ಯವಹೇ** ಅಗ್ನಿಯಲ್ಲಿ **ಹುತ್ವಾ** ಹೋಮಿಸಿ **ಶಿವಂ** ರುದ್ರನನ್ನು **ಸಮರ್ಚ್ಯ** ಚೆನ್ನಾಗಿ ಪೂಜಿಸಿ **ತಥಾ ಏವ** ಹಿಂದಿನಂತೆಯೇ **ಅದರ್ಶನಂ** ಅದೃಶ್ಯವಾಗುವಿಕೆಯನ್ನು **ಜಗ್ಮಿವಾನ್** ಹೊಂದಿದನು.

**ತಾತ್ಪರ್ಯ** : ನಾಗಪಾಶದಿಂದಲೂ ಮುಕ್ತರಾಗಿ ಯುದ್ಧಕ್ಕಾಗಿ ನಡೆದ ಕಪಿಗಳನ್ನು ನೋಡಿದ ಇಂದ್ರಜಿತುವು ಬಹಳವಾಗಿ ಹೆದರಿದನು. ಪುನಃ ಅವನು ಅಗ್ನಿಯಲ್ಲಿ ಹೋಮಿಸಿ ರುದ್ರನನ್ನು ಪೂಜಿಸಿ ಹಿಂದಿನಂತೆಯೇ ಅದೃಶ್ಯನಾಗಿ ಆಕಾಶಕ್ಕೆ ಹಾರುತ್ತಾನೆ.

**ಮತ್ತೊಮ್ಮೆ ಕಪಿಗಳನ್ನು ಬಂಧಿಸಿದ ಇಂದ್ರಜಿತ್**

**ವರಾಶ್ರಯೇಣಾಜಗಿರೀಶಯೋಸ್ತಥಾ**
**ಪುನರ್ಮಹಾಸ್ತ್ರೈಃ ಸ ಬಬಂಧ ತಾನ್ ಕಪೀನ್ ।**
**ಅಥಾಽಹ ರಾಮಸ್ಯ ಮನೋಽನುಸಾರತಃ**
**ಪುರಾಽಸ್ತ್ರಮೇವಾನುಸರನ್ ಸ ಲಕ್ಷ್ಮಣಃ ॥ ೧೬೨ ॥**

**ಪದಚ್ಛೇದ** : ವರಾಶ್ರಯೇಣ ಅಜಗಿರೀಶಯೋಃ ತಥಾ ಪುನಃ ಮಹಾಸ್ತ್ರೈಃ ಸಃ ಬಬಂಧ ತಾನ್ ಕಪೀನ್ । ಅಥ ಆಹ ರಾಮಸ್ಯ ಮನೋಽನುಸಾರತಃ ಪುರಾ ಅಸ್ತ್ರಮ್ ಏವ ಅನುಸರನ್ ಸಃ ಲಕ್ಷ್ಮಣಃ ॥

**ಅರ್ಥ** :- **ಸಃ** ಆ ಇಂದ್ರಜಿತುವು **ಅಜಗಿರೀಶಯೋಃ** ಬ್ರಹ್ಮ ಹಾಗು ರುದ್ರ ದೇವರ **ವರಾಶ್ರಯೇಣ** ವರಬಲದಿಂದ **ಪುನಃ** ಮತ್ತು **ಮಹಾಸ್ತ್ರೈಃ** ಉತ್ತಮ ಅಸ್ತ್ರಗಳಿಂದ **ತಥಾ** ಹಾಗೆಯೇ **ತಾನ್** ಅಂತಹ **ಕಪೀನ್** ಕಪಿಗಳನ್ನು **ಬಬಂಧ** ಬಂಧಿಸಿದನು. **ಅಥ** ಅನಂತರ **ರಾಮಸ್ಯ** ರಾಮನ **ಮನೋಽನುಸಾರತಃ** ಮನಸ್ಸಿನ ಅನುಸಾರವಾಗಿ **ಸಃ** ಆ **ಲಕ್ಷ್ಮಣಃ** ಲಕ್ಷ್ಮಣನು **ಪುರಾ** ಹಿಂದಿನ **ಅಸ್ತ್ರಮೇವ** ಅಸ್ತ್ರಗಳನ್ನು **ಅನುಸರನ್** (**ಸನ್**) ಅನುಸರಿಸುವವನಾಗಿ **ಆಹ** ಹೇಳಿದನು.

**ತಾತ್ಪರ್ಯ** :- ಆ ಇಂದ್ರಜಿತುವು ಬ್ರಹ್ಮ ಹಾಗು ರುದ್ರದೇವರ ವರಬಲದಿಂದ ಲಭ್ಯವಾದ ಉತ್ತಮವಾದ ಅಸ್ತ್ರಗಳಿಂದ ಪುನಃ ಕಪಿಗಳನ್ನು ಕಟ್ಟಿಹಾಕುತ್ತಾನೆ. ರಾಮನ ಮನೋ ಇಂಗಿತದಂತೆಯೇ ಲಕ್ಷ್ಮಣನೂ ಕೂಡ ಈ ಹಿಂದೆ ಅಸ್ತ್ರಗಳಿಂದ ಬಂಧಿತನಾದಂತೆ ಈಗಲೂ ಬಂಧನಕ್ಕೊಳಗಾಗಿ ರಾಮನಿಗೆ ಆ ಮಾತನ್ನು ಹೇಳಿದನು.

ಹೇಡಿಯ ಮೇಲೆ ಬ್ರಹ್ಮಾಸ್ತ್ರತರವಲ್ಲ

ಪಿತಾಮಹಾಸ್ತ್ರೇಣ ನಿಹನ್ಮಿ ದುರ್ಮತಿಂ
ತವಾಽಜ್ಞಯಾ ಶಕ್ರಜಿತಂ ಸಬಾಂಧವಮ್ ।
ಇತೀರಿತೇ ತೇನ ಸ ಚಾಽಹ ರಾಘವೋ
ಭಯಾದದೃಶ್ಯೇ ನ ವಿಮೋಕ್ತುಮರ್ಹಸಿ ॥ ೧೬೩ ॥

ಪದಚ್ಛೇದ : ಪಿತಾಮಹಾಸ್ತ್ರೇಣ ನಿಹನ್ಮಿ ದುರ್ಮತಿಂ ತವ ಆಜ್ಞಯಾ ಶಕ್ರಜಿತಂ ಸಬಾಂಧವಮ್ । ಇತಿ ಈರಿತೇ ತೇನ ಸ ಚ ಆಹ ರಾಘವಃ ಭಯಾತ್ ಅದೃಶ್ಯೇ ನ ವಿಮೋಕ್ತುಮ್ ಅರ್ಹಸಿ ॥

**ಅರ್ಥ** :- **ತವಾಜ್ಞಯಾ** ನಿನ್ನ ಆಜ್ಞಾನುಸಾರವಾಗಿ **ಸಬಾಂಧವಂ** ಬಂಧು ಜನರಿಂದ ಕೂಡಿದ **ದುರ್ಮತಿಂ** ದುಷ್ಟಬುದ್ಧಿಯವನಾದ **ಶಕ್ರಜಿತಂ** ಇಂದ್ರಜಿತು ವನ್ನು **ಪಿತಾಮಹಾಸ್ತ್ರೇಣ** ಬ್ರಹ್ಮಾಸ್ತ್ರದಿಂದ **ನಿಹನ್ಮಿ** ಸಂಹರಿಸುವೆ **ಇತಿ** ಹೀಗೆಂದು **ತೇನ** ಆ ಲಕ್ಷ್ಮಣನಿಂದ **ಈರಿತಃ** ಹೇಳಿಸಿಕೊಳ್ಳಲ್ಪಟ್ಟ **ಸಃ** ಆ **ರಾಘವಃ ಚ** ರಾಮ ನಾದರೋ **ಆಹ** ಹೇಳಿದನು. **ಭಯಾತ್** ಭಯದಿಂದ **ಅದೃಶ್ಯೇ** ಅದೃಶ್ಯ ನಾಗಿರುವ ಇಂದ್ರಜಿತುವಿನಲ್ಲಿ **ವಿಮೋಕ್ತುಂ** ಅಸ್ತ್ರಪ್ರಯೋಗವನ್ನು ಮಾಡಲು **ನ ಅರ್ಹಸಿ** ಯೋಗ್ಯನಾಗುವುದಿಲ್ಲ.

**ತಾತ್ಪರ್ಯ** :- 'ರಾಮನೇ! ನೀನು ಆಜ್ಞಾಪಿಸುವುದಾದರೆ ನಾನು ಬ್ರಹ್ಮಾಸ್ತ್ರದಿಂದ, ದುರ್ಮತಿಯಾದ ಇಂದ್ರಜಿತುವನ್ನು ಅವನ ಬಾಂಧವ ರೊಂದಿಗೆ ಸಂಹರಿಸುವೆ ಎನಲು ರಾಮನು 'ಎಲೈ ಲಕ್ಷ್ಮಣನೇ ಇಂದ್ರಜಿತುವು ಭಯಗೊಂಡು ಅದೃಶ್ಯನಾಗಿರುವನು. ಅದೃಶ್ಯರಿಗೆ ಬ್ರಹ್ಮಾಸ್ತ್ರಪ್ರಯೋಗವು ತಕ್ಕುದಲ್ಲ.'

ರಾಮ ಬಾಣದ ಮಹಿಮೆ

ನ ಸೋಢುಮೀಶೋಽಸಿ ಯದಿ ತ್ವಮೇತ-
ದಸ್ತ್ರಂ ತದಾಽಹಂ ಶರಮಾತ್ರಕೇಣ ।
ಅದೃಶ್ಯಮಪ್ಯಾಶು ನಿಹನ್ಮಿ ಸಂತಂ
ರಸಾತಲೇಽಥಾಪಿ ಹಿ ಸತ್ಯಲೋಕೇ ॥ ೧೬೪ ॥

ಪದಚ್ಛೇದ : ನ ಸೋಢುಮ್ ಈಶಃ ಅಸಿ ಯದಿ ತ್ವಮ್ ಏತತ್ ಅಸ್ತ್ರಂ ತದಾ ಅಹಂ ಶರಮಾತ್ರಕೇಣ । ಅದೃಶ್ಯಮ್ ಅಪಿ ಆಶು ನಿಹನ್ಮಿ ಸಂತಂ ರಸಾತಲೇ ಅಥ ಅಪಿ ಹಿ ಸತ್ಯಲೋಕೇ ॥

**ಅರ್ಥ** :- **ತ್ವಮಪಿ** ನೀನಾದರೂ **ಏತದಸ್ತ್ರಂ** ಇಂದ್ರಜಿತುವಿನಿಂದ ಪ್ರಯೋಗಿಸಲ್ಪಟ್ಟ ಅಸ್ತ್ರವನ್ನು **ಸೋಢುಂ** ಸಹಿಸಲು **ಯದಿ** ಒಂದು ವೇಳೆ **ನ ಈಶೋಽಸಿ** ಸಮರ್ಥನಾಗುವುದಿಲ್ಲವಾದರೆ **ತದಾ** ಆವಾಗ **ಅಹಂ** ನಾನು **ಶರಮಾತ್ರೇಣ** ಮಂತ್ರ ಪ್ರಯೋಗರಹಿತ ಕೇವಲ ಒಂದು ಬಾಣದಿಂದ **ಅದೃಶ್ಯಂ** ಅದೃಶ್ಯನಾದ **ರಸಾತಲೇ** ಭೂಮಿಯ ಅಧೋಭಾಗದಲ್ಲಿರುವ ರಸಾತಲಾದಿ ಸಪ್ತಲೋಕಗಳಲ್ಲಿ **ಅಥ** ಹಾಗೆಯೇ **ಸತ್ಯಲೋಕೇ** ಬ್ರಹ್ಮಲೋಕದಲ್ಲಿ **ಸಂತಮಪಿ** ಇರತಕ್ಕವನನ್ನೂ ಕೂಡ **ಆಶು** ಕೂಡಲೇ **ನಿಹನ್ಮಿ** ಸಂಹರಿಸುವೆ.

**ತಾತ್ಪರ್ಯ** :- 'ಲಕ್ಷ್ಮಣನೇ ಒಂದು ವೇಳೆ ನೀನು ಈ ಅಸ್ತ್ರವನ್ನು ಸಹಿಸಲಶಕ್ಯನಾದರೆ ನಾನು ಮಂತ್ರೋಚ್ಚಾರಣೆಯಿಲ್ಲದೆ ಕೇವಲ ಒಂದು ಬಾಣದಿಂದಲೇ ಇಂದ್ರಜಿತುವು ಪಾತಾಳಾದಿ ಸಪ್ತಲೋಕಗಳಲ್ಲಿ ಅಥವಾ ಬ್ರಹ್ಮಲೋಕದಲ್ಲಿರಲಿ ಕೂಡಲೇ ಸಂಹರಿಸುವೆ.'

**ಇತಿ ಸ್ಮ ವೀಂದ್ರಸ್ಯ ಹನೂಮತಶ್ಚ**
**ಬಲಪ್ರಕಾಶಾಯ ಪುರಾ ಪ್ರಭುಃ ಸ್ವಯಮ್ ।**
**ಸಮ್ಮಾನಯಿತ್ವಾಽಸ್ತ್ರಮಮುಷ್ಯ ರಾಮೋ**
**ದುರಂತಶಕ್ತಿಃ ಶರಮಾದದೇಽಥ ॥ ೧೬೫ ॥**

ಪದಚ್ಛೇದ : ಇತಿ ಸ್ಮ ವೀಂದ್ರಸ್ಯ ಹನೂಮತಃ ಚ ಬಲಪ್ರಕಾಶಾಯ ಪುರಾ ಪ್ರಭುಃ ಸ್ವಯಮ್ । ಸಮ್ಮಾನಯಿತ್ವಾ ಅಸ್ತ್ರಮ್ ಅಮುಷ್ಯ ರಾಮಃ ದುರಂತಶಕ್ತಿಃ ಶರಮ್ ಆದದೇ ಅಥ ॥

**ಅರ್ಥ** :- **ಇತಿ** ಹಿಂದೆ ಹೇಳಿದ ಪ್ರಕಾರದಿಂದ **ಪ್ರಭುಃ** ಸ್ವಾಮಿಯಾದ **ದುರಂತಶಕ್ತಿಃ** ತಡೆಯಲಸಾಧ್ಯವಾದ ಶಕ್ತಿಯುಳ್ಳ **ರಾಮಃ** ರಾಮನು **ವೀಂದ್ರಸ್ಯ** ಗರುಡನ **ಚ** ಮತ್ತು **ಹನೂಮತಃ** ಹನುಮಂತನ **ಬಲಪ್ರಕಾಶಾಯ** ಬಲ ಪ್ರಕಾಶನೆಗಾಗಿ **ಪುರಾ** ಹಿಂದೆ **ಅಮುಷ್ಯ** ಈ ಇಂದ್ರಜಿತುವಿನ **ಅಸ್ತ್ರಂ** ಅಸ್ತ್ರವನ್ನು **ಸಮ್ಮಾನಯಿತ್ವಾ** ಆದರಿಸಿ **ಅಥ** ಅನಂತರ **ಶರಂ** ಬಾಣವನ್ನು **ಆದದೇ ಸ್ಮ** ತೆಗೆದುಕೊಂಡನಷ್ಟೇ.

**ತಾತ್ಪರ್ಯ** : ರಾಮನು ಈ ಹಿಂದೆಯೇ ತಾನು ಇಂದ್ರಜಿತುವನ್ನು ಸಂಹರಿಸಬಹುದಿತ್ತು ಆದರೂ ಗರುಡನ ಹಾಗು ಹನುಮಂತನ ಶಕ್ತಿಸಾಮರ್ಥ್ಯವನ್ನು

ಬೆಳಕಿಗೆ ತರುವ ಉದ್ದೇಶದಿಂದ ಹಾಗೆ ಮಾಡದೇ ಈಗ ಮೂರನೇ ಬಾರಿ ಇಂದ್ರಜಿತುವು ಬಾಣಪ್ರಯೋಗಿಸಿ ಲಕ್ಷ್ಮಣಾದಿಗಳನ್ನು ಕಟ್ಟಿದಾಗ ಕೂಡಲೇ ರಾಮನು ತಾನೇ ಬಾಣವನ್ನು ಪ್ರಯೋಗಿಸಲು ಸಿದ್ಧನಾದನು.

**ಹೆದರಿ ಓಡಿದ ಇಂದ್ರಜಿತ್**

**ಅನೇನ ದೃಷ್ಟೋಽಹಮಿತಿ ಸ್ಮ ದುಷ್ಟೋ**
**ವಿಜ್ಞಾಯ ಬಾಹ್ವೋರ್ಬಲಮಸ್ಯ ಚೋಗ್ರಮ್ ।**
**ವಿನಿಶ್ಚಯಂ ದೇವತಮಸ್ಯ ಪಶ್ಯನ್**
**ಪ್ರದುದ್ರುವೇ ಪ್ರಾಣಪರೀಪ್ಸುರಾಶು ॥ ೧೬೬ ॥**

ಪದಚ್ಛೇದ : ಅನೇನ ದೃಷ್ಟಃ ಅಹಮ್ ಇತಿ ಸ್ಮ ದುಷ್ಟಃ ವಿಜ್ಞಾಯ ಬಾಹ್ವೋಃ ಬಲಮ್ ಅಸ್ಯ ಚ ಉಗ್ರಮ್ । ವಿನಿಶ್ಚಯಂ ದೇವತಮ್ ಅಸ್ಯ ಪಶ್ಯನ್ ಪ್ರದುದ್ರುವೇ ಪ್ರಾಣಪರೀಪ್ಸುಃ ಆಶು ॥

**ಅರ್ಥ** :- **ದುಷ್ಟಃ** ದುಷ್ಟನಾದ ಇಂದ್ರಜಿತುವು **ಅನೇನ** ಈ ರಾಮನಿಂದ **ಅಹಂ** ನಾನು **ದೃಷ್ಟಃ** ಕಾಣಲ್ಪಟ್ಟೆನು. **ಇತಿ ಸ್ಮ** ಈ ರೀತಿಯಾಗಿ **ವಿಜ್ಞಾಯ** ಅರಿತು **ಅಸ್ಯ** ಈ ರಾಮನ **ಬಾಹ್ವೋಃ** ಬಾಹುಗಳ **ಉಗ್ರಂ** ಭಯಂಕರವಾದ **ಬಲಂ** ಬಲವನ್ನೂ ಕೂಡ (**ವಿಜ್ಞಾಯ** ಅರಿತು) **ದೇವತಮಸ್ಯ** ದೇವೋತ್ತಮನಾದ ಶ್ರೀರಾಮನ **ವಿನಿಶ್ಚಯಂ** ತನ್ನ ವಧೆಯ ವಿಷಯದಲ್ಲಿ ಮಾಡಲ್ಪಟ್ಟ ನಿಶ್ಚಯವನ್ನು **ಪಶ್ಯನ್ (ಸನ್)** ಕಂಡತಕ್ಕವನಾಗಿ **ಪ್ರಾಣಪರೀಕ್ಸುಃ (ಸನ್)** ಪ್ರಾಣವನ್ನು ರಕ್ಷಿಸಲು ಇಚ್ಛೆಯುಳ್ಳವನಾಗಿ **ಆಶು** ಕೂಡಲೇ **ಪ್ರದುದ್ರುವೇ** ಓಡಿದನು.

**ತಾತ್ಪರ್ಯ** :- ರಾಮನ ಬಾಹುಬಲದ ಅಸದೃಶ ಸಾಮರ್ಥ್ಯವನ್ನು ಅರಿತಿರುವ ಇಂದ್ರಜಿತುವು, ತನ್ನ ಮೇಲೆಯೇ ರಾಮನ ಬಾಣವು ಗುರಿಯಾಗಿರುವುದನ್ನು ನೋಡಿ 'ರಾಮನಿಗೆ ನಾನು ಗೋಚರನಾಗಿರುವೆ ಹಾಗಾಗಿ ನನ್ನ ಸಾವು ರಾಮನಿಂದ ನಿಶ್ಚಿತವಾಗಿದೆ' ಎಂದರಿತು ಅಲ್ಲಿಂದ ಓಡಿದನು.

**ಹೂಡಿದ ಅಸ್ತ್ರವನ್ನು ಪರಿವರ್ತಿಸಿದ ರಾಮ**

**ಹಾಹಾಕೃತೇ ಪ್ರದ್ರುತ ಇಂದ್ರಶತ್ರೌ**
**ರಘೂತ್ತಮಃ ಶತ್ರುವಿಭೀಷಣತ್ವಾತ್ ।**
**ವಿಭೀಷಣೇತ್ಯೇವ ಸುರೈರಭಿಷ್ಟುತೋ**
**ವಿಜ್ಞಾನಮಸ್ತ್ರಂ ತ್ವಮುಚತ್ ಸ್ವಸೈನ್ಯೇ ॥ ೧೬೭ ॥**

ಪದಚ್ಛೇದ : ಹಾಹಾಕೃತೇ ಪ್ರದ್ರುತೇ ಇಂದ್ರಶತ್ರೌ ರಘೂತ್ತಮಃ ಶತ್ರುವಿಭೀಷಣತ್ವಾತ್ । ವಿಭೀಷಣ ಇತಿ ಏವ ಸುರೈಃ ಅಭಿಷ್ಟುತಃ ವಿಜ್ಞಾನಮ್ ಅಸ್ತ್ರಂ ತು ಆಮುಚತ್ ಸ್ವಸೈನ್ಯೇ ॥

**ಅರ್ಥ** :- **ಇಂದ್ರಶತ್ರೌ ತು** ಇಂದ್ರಜಿತುವಾದರೂ **ಹಾಹಾಕೃತೇ** ಹಾಹಾಕಾರ ಮಾಡುತ್ತಾ **ಪ್ರದೃತೇ ಸತಿ** ಓಡಿಹೋಗುತ್ತಿರಲು **ರಘೂತ್ತಮಃ** ಶ್ರೀರಾಮನು **ಶತ್ರುವಿಭೀಷಣತ್ವಾತ್** ಶತ್ರುಗಳಿಗೆ ಭೀತಿಯನ್ನುಂಟು ಮಾಡುವ ಪ್ರಯುಕ್ತ **ವಿಭೀಷಣ ಇತಿ ಏವ** ವಿಭೀಣನೆಂಬ ಹೆಸರಿಂದಲೇ **ಸುರೈಃ** ಸುರರಿಂದ **ಅಭಿಷ್ಟುತಃ (ಸನ್)** ಸ್ತುತಿಸಲ್ಪಟ್ಟವನಾಗಿ **ಸ್ವಸೈನ್ಯೇ** ತನ್ನ ಕಪಿಸೈನ್ಯದ ಮೇಲೆ **ವಿಜ್ಞಾನಮಸ್ತ್ರಂ** ವಿಜ್ಞಾನಾಸ್ತ್ರವನ್ನು **ಅಮುಚತ್** ಪ್ರಯೋಗಿಸಿದನು.

**ತಾತ್ಪರ್ಯ** :- ಓಡಿಹೋಗುತ್ತಿರುವವನ ಮೇಲೆ ಬಾಣಪ್ರಯೋಗವು ಅಸಾಧುವಾದದ್ದು. ಹಾಗಾಗಿ ಬಿಡಲು ಸಿದ್ಧವಾಗಿರಿಸಿಕೊಂಡಿರುವ ಬಾಣವನ್ನೇ ಶ್ರೀರಾಮನು ಮಂತ್ರೋಚ್ಚಾರಣೆಯಿಂದ ಅದನ್ನು ವಿಜ್ಞಾನಾಸ್ತ್ರವಾಗಿ ಪರಿವರ್ತಿಸಿ ತನ್ನ ಕಪಿಗಳ ಸೈನ್ಯದ ಮೇಲೆ ಬಿಡುತ್ತಾನೆ.

### ಎಚ್ಚೆತ್ತ ಕಪಿಸಮೂಹ

**ನಿಶಾಚರಾಸ್ತ್ರಂ ಹ್ಯಗಮತ್ ಕ್ಷಣೇನ**
**ರಾಮಾಸ್ತ್ರವೀರ್ಯಾದ್ಧರಯೋ ನದಂತಃ ।**
**ಉತ್ತಸ್ಥುರುಚ್ಚೋರುಗಿರೀನ್ ಪ್ರಗೃಹ್ಯ**
**ಪ್ರಶಂಸಮಾನಾ ರಘುವೀರಮುಚ್ಚೈಃ ॥ ೧೬೮ ॥**

ಪದಚ್ಛೇದ : ನಿಶಾಚರಾಸ್ತ್ರಂ ಹಿ ಅಗಮತ್ ಕ್ಷಣೇನ ರಾಮಾಸ್ತ್ರವೀರ್ಯಾತ್ ಹರಯಃ ನದಂತಃ । ಉತ್ತಸ್ಥುಃ ಉಚ್ಚೋರುಗಿರೀನ್ ಪ್ರಗೃಹ್ಯ ಪ್ರಶಂಸಮಾನಾಃ ರಘುವೀರಮ್ ಉಚ್ಚೈಃ ॥

**ಅರ್ಥ** :- **ಹಿ** ಈ ಯಾವ **ರಾಮಾಸ್ತ್ರವೀರ್ಯಾತ್** ರಾಮಬಾಣದ ಶಕ್ತಿಯಿಂದ **ನಿಶಾಚರಾಸ್ತ್ರಂ** ಇಂದ್ರಜಿತುವಿನಿಂದ ಪ್ರಯೋಗಿಸಲ್ಪಟ್ಟ ಅಸ್ತ್ರವು **ಕ್ಷಣೇನ** ಆ ಕೂಡಲೇ **ಅಗಮತ್** ನಾಶವಾಯಿತೋ **ಪರಮಃ** ಕಪಿಗಳು **ನದಂತಃ (ಸಂತಃ)** ವೀರಗರ್ಜನೆ ಮಾಡುವವರಾಗಿ **ರಘುವೀರಂ** ಶ್ರೀರಾಮನನ್ನು

**ಉಚ್ಚೈಃ** ಬಹುವಾಗಿ **ಪ್ರಶಂಸಮಾನಾಃ (ಸಂತಃ)** ಪ್ರಶಂಸಿಸುವವರಾಗಿ **ಉಚ್ಚೋರುಗಿರೀನ್** ಎತ್ತರವಾಗಿರುವ ಶ್ರೇಷ್ಠಪರ್ವತಗಳನ್ನು **ಪ್ರಗೃಹ್ಯ** ಹಿಡಿದು **ಉತ್ತಸ್ಥುಃ** ಎದ್ದರು.

**ತಾತ್ಪರ್ಯ** :- ಇಂದ್ರಜಿತುವಿನಿಂದ ಕಪಿಗಳ ಮೇಲೆ ಪ್ರಯೋಗಿಸಲ್ಪಟ್ಟ ಮೂರ್ಛೆಗೊಳಿಸುವ ಅಸ್ತ್ರವು ರಾಮನ ವಿಜ್ಞಾನಾಸ್ತ್ರದಿಂದ ನಷ್ಟಹೊಂದಿ ಎಚ್ಚೆತ್ತ ಕಪಿಗಳೆಲ್ಲಾ ರಾಮನಿಗೆ ಜೈಕಾರವನ್ನು ಹಾಕಿ ವೀರಗರ್ಜನೆಯೊಂದಿಗೆ ಎತ್ತರವಾದ ಬೆಟ್ಟಗಳನ್ನು ಹಿಡಿದು ಯುದ್ಧಕ್ಕೆ ಸಿದ್ಧರಾಗುವರು.

**ಸುರರಿಂದ ಪುಷ್ಪವೃಷ್ಟಿ**

**ಸುರೈಶ್ಚ ಪುಷ್ಪಂ ವರ್ಷದ್ಭಿರೀಡಿತ-**
**ಸ್ತಸ್ಥೌ ಧನುಷ್ಪಾಣಿರನಂತವೀರ್ಯಃ ।**
**ಸ ರಾವಣಸ್ಯಾಥ ಸುತೋ ನಿಕುಂಭಿಲಾಂ**
**ಪುನಃ ಸಮಾಸಾದ್ಯ ಜುಹಾವ ಪಾವಕಮ್ ॥ ೧೬೯ ॥**

**ಪದಚ್ಛೇದ** :- ಸುರೈಃ ಚ ಪುಷ್ಪಂ ವರ್ಷದ್ಭಿಃ ಈಡಿತಃ ತಸ್ಥೌ ಧನುಷ್ಪಾಣಿಃ ಅನಂತವೀರ್ಯಃ । ಸಃ ರಾವಣಸ್ಯ ಅಥ ಸುತಃ ನಿಕುಂಭಿಲಾಂ ಪುನಃ ಸಮಾಸಾದ್ಯ ಜುಹಾವ ಪಾವಕಮ್ ॥

**ಅರ್ಥ** :- **ಪುಷ್ಪಂ** ಹೂವುಗಳನ್ನು **ವರ್ಷದ್ಭಿಃ** ಮಳೆಗರೆಯತಕ್ಕ **ಸುರೈಶ್ಚ** ದೇವತೆಗಳಿಂದಾದರೋ **ಈಡಿತಃ** ಸ್ತುತಿಸಲ್ಪಟ್ಟ **ಅನಂತವೀರ್ಯಃ** ಅನಂತ ಪರಾಕ್ರಮವುಳ್ಳ **ಧನಷ್ಪಾಣಿಃ** ಕೋದಂಡಧನುಸ್ಸು ಹಸ್ತದಲ್ಲುಳ್ಳ ರಾಮನು **ತಸ್ಥೌ** ಇದ್ದನು. **ಅಥ** ಅನಂತರ **ರಾವಣಸ್ಯ** ರಾವಣನ **ಸುತಃ** ಮಗನಾದ **ಸಃ** ಆ ಇಂದ್ರಜಿತುವು **ನಿಕುಂಭಿಲಾಂ** ನಿಕುಂಭಿಲವೆಂಬ ಗುಹೆಯನ್ನು **ಸಮಾಸಾದ್ಯ** ಹೊಂದಿ **ಪುನಃ** ಮತ್ತೊಮ್ಮೆ **ಜುಹಾವ** ಹೋಮಿಸಿದನು.

**ತಾತ್ಪರ್ಯ** :- ರಾಮನ ಅಸಾಧಾರಣ ಪರಾಕ್ರಮವನ್ನು ನೋಡಿದ ದೇವತೆ ಗಳೆಲ್ಲರೂ ಪುಷ್ಪವೃಷ್ಟಿಯನ್ನು ಮಾಡಿ ಸ್ತುತಿಸಿದರು. ಇತ್ತ ಕಡೆ ಇಂದ್ರಜಿತುವು 'ನಿಕುಂಭಿಲ'ವೆಂಬ ತನ್ನ ಗುಹೆಯನ್ನು ಪ್ರವೇಶಿಸಿ ಹಿಂದಿ ನಂತೆಯೇ ಪುನಃ ಹೋಮಿಸಿದನು.

ವಿಭೀಷಣನ ಸಮಯಸ್ಫೂರ್ತಿ

ವಿಭೀಷಣೋಽಥಾಽಹ ರಘೂತ್ತಮಂ ಪ್ರಭುಂ
ನಿಯೋಜಯಾದ್ಯೈ ದ್ಯವ ವಧಾಯ ದುರ್ಮತೇಃ ।
ಕೃತಾಗ್ನಿಪೂಜೋ ನಹಿ ವಧ್ಯ ಏಷ
ವರೋ ವಿಧಾತುಃ ಪ್ರಥಿತೋಽಸ್ಯ ತಾದೃಶಃ ॥ ೧೭೦ ॥

ಪದಚ್ಛೇದ : ವಿಭೀಷಣಃ ಅಥ ಆಹ ರಘೂತ್ತಮಂ ಪ್ರಭುಂ ನಿಯೋಜಯ ಅದ್ಯ ಏವ ವಧಾಯ ದುರ್ಮತೇಃ । ಕೃತಾಗ್ನಿಪೂಜಃ ನ ಹಿ ವಧ್ಯಃ ಏಷಃ ವರಃ ವಿಧಾತುಃ ಪ್ರಥಿತಃ ಅಸ್ಯ ತಾದೃಶಃ ॥

**ಅರ್ಥ** : **ಅಥ** ಅನಂತರ **ವಿಭೀಷಣಃ** ವಿಭೀಷಣನು **ಪ್ರಭುಂ** ಸ್ವಾಮಿಯಾದ **ರಘೂತ್ತಮಂ** ಶ್ರೀರಾಮನನ್ನು ಕುರಿತು **ದುರ್ಮತೇಃ** ದುಷ್ಟಬುದ್ಧಿಯುಳ್ಳ ಇಂದ್ರಜಿತುವಿನ **ವಧಾಯ** ಸಂಹಾರಕ್ಕೋಸ್ಕರ **ಅದ್ಯೈವ** ಕೂಡಲೇ **ನಿಯೋಜಯ** ನಿಯಮಿಸು **ಕೃತಾಗ್ನಿಪೂಜಃ** ಮಾಡಲ್ಪಟ್ಟ ಅಗ್ನಿಪೂಜೆಯುಳ್ಳ **ಏಷಃ** ಈ ಇಂದ್ರಜಿತುವು **ವಧ್ಯಃ** ಕೊಲ್ಲಲು ಅರ್ಹನು **ನ ಹಿ** ಆಗಲಾರನಷ್ಟೇ **ಅಸ್ಯ** ಇವನಿಗೆ **ತಾದೃಶಃ** ಅಂತಹ **ವಿಧಾತುಃ** ಬ್ರಹ್ಮದೇವರ **ವರಃ** ವರವು **ಪ್ರಥಿತಃ** ಪ್ರಸಿದ್ಧವಾಗಿದೆ.

**ತಾತ್ಪರ್ಯ** : ಇಂದ್ರಜಿತುವಿಗೆ ಬ್ರಹ್ಮನ ವರವಿತ್ತು. 'ಹೀಗೆ ವಿಶೇಷವಾಗಿ ನಾಲ್ಕನೇ ಬಾರಿ ಅಗ್ನಿಪೂಜೆಯನ್ನು ಮಾಡಿದರೆ ಅವಧ್ಯನಾಗುವೆ' ಎಂದು. ಈ ವಿಷಯವನ್ನು ಶ್ರೀರಾಮನಿಗೆ ಅರುಹಿದ ವಿಭೀಷಣನು ಈ ಕೂಡಲೇ ಇಂದ್ರಜಿತುವಿನ ಸಂಹಾರಕ್ಕಾಗಿ ಆಜ್ಞಾಪಿಸು ಎನ್ನುತ್ತಾನೆ.

ಇಂದ್ರಜಿತುವಿನ ವಧೆಗಾಗಿ ರಾಮಾಜ್ಞೆ

ನ ವೈ ವಧಂ ರಾಮ ಇಯೇಷ ತಸ್ಯ
ಪಲಾಯಿತಸ್ಯಾಽತ್ಮಸಮೀಕ್ಷಣಾತ್ ಪುನಃ ।
ಸತ್ತ್ವೋಜ್ಝಿತೋಽಸಾವಪಿ ಕೂಟಯೋಧೀ
ನ ಮೇ ವಧಾರ್ಹೋಽಯಮಿತಿ ಸ್ಮ ಸ ಪ್ರಭುಃ ॥ ೧೭೧ ॥

ಪದಚ್ಛೇದ : ನ ವೈ ವಧಂ ರಾಮಃ ಇಯೇಷ ತಸ್ಯ ಪಲಾಯಿತಸ್ಯ ಆತ್ಮ ಸಮೀಕ್ಷಣಾತ್ ಪುನಃ । ಸತ್ತ್ವೋಜ್ಝಿತಃ ಅಸೌ ಅಪಿ ಕೂಟಯೋಧೀ ನ ಮೇ ವಧಾರ್ಹಃ ಅಯಮ್ ಇತಿ ಸ್ಮ ಸಃ ಪ್ರಭುಃ ॥

**ಅರ್ಥ** :- **ಆತ್ಮಸಮೀಕ್ಷಣಾತ್** ತನ್ನ ದರುಶನದಿಂದ **ಪಲಾಯಿತಸ್ಯ** ಪಲಾಯನ ಗೊಂಡಂತಹ **ತಸ್ಯ** ಆ ಇಂದ್ರಜಿತುವಿನ **ವಧಂ** ಹನನವನ್ನು **ರಾಮಃ** ಶ್ರೀರಾಮನು **ವೈ** ನಿಶ್ಚವಾಗಿಯೂ **ನ ಇಯೇಷ** ಅಪೇಕ್ಷಿಸಲಿಲ್ಲ. **ಪುನಃ** ಓಡಿಹೋದನಂತರ **ಅಸೌ** ಈ ಇಂದ್ರಜಿತುವು (**ಯತಃ** ಯಾವಕಾರಣದಿಂದ) **ಸತ್ತ್ವೋಜ್ಝಿತಃ** ಬಲಹೀನನು **ಕೂಟಯೋಧೀ ಅಪಿ** ವಂಚನೆಯಿಂದ ಯುದ್ಧ ಮಾಡುವವನೂ ಕೂಡ (**ಅತಃ** ಆದ್ದರಿಂದ) **ಅಯಂ** ಈ ಇಂದ್ರಜಿತುವು **ಮೇ** ನನಗೆ **ವಧಾರ್ಹಃ ನ** ವಧಿಸಲು ಅಯೋಗ್ಯನು. **ಇತಿ ಸ್ಮ** ಈ ಅಭಿಪ್ರಾಯದಿಂದಲೂ **ಪ್ರಭುಃ** ಸ್ವಾಮಿಯಾದ **ಸಃ ಅಪಿ** ಆ ರಾಮನಾದರೋ (**ತಸ್ಯ ವಧಂ ನ ಇಯೇಷ** ಅವನಸಂಹಾರವನ್ನು ಇಚ್ಛಿಸಲಿಲ್ಲ)

**ತಾತ್ಪರ್ಯ** :- ತನ್ನನ್ನು ನೋಡಿದ ಕೂಡಲೇ ಓಡಿಹೋದ ಇಂದ್ರಜಿತುವು ಬಲಹೀನನು. ಕಪಟತೆಯಿಂದ ಯುದ್ಧ ಮಾಡುವ ಇವನು ಖಂಡಿತವಾಗಿಯೂ ನನ್ನಿಂದ ವಧಾರ್ಹನಲ್ಲವೆಂದು ಶ್ರೀರಾಮನು ಇಂದ್ರಜಿತುವನ್ನು ತಾನು ಕೊಲ್ಲಲು ಅಪೇಕ್ಷಿಸಲಿಲ್ಲ.

**ಸ ಆದಿದೇಶಾವರಜಂ ಜನಾರ್ದನೋ**
**ಹನೂಮತಾ ಚೈವ ವಿಭೀಷಣೇನ ।**
**ಸಹೈವ ಸರ್ವೈರಪಿ ವಾನರೇಂದ್ರೈ-**
**ರ್ಯಯೌ ಮಹಾತ್ಮಾ ಸ ಚ ತದ್ವಧಾಯ ॥ ೧೭೨ ॥**

ಪದಚ್ಛೇದ : ಸಃ ಆದಿದೇಶ ಅವರಜಂ ಜನಾರ್ದನಃ ಹನೂಮತಾ ಚ ಏವ ವಿಭೀಷಣೇನ । ಸಹ ಏವ ಸರ್ವೈಃ ಅಪಿ ವಾನರೇಂದ್ರೈಃ ಯಯೌ ಮಹಾತ್ಮಾ ಸಃ ಚ ತದ್ವಧಾಯ ॥

**ಅರ್ಥ** :- **ಜನಾರ್ದನಃ** ಉತ್ಪತ್ತಿರಹಿತನೂ, ಸಂಸಾರನಾಶಕನೂ **ಆದ ಸಃ** ಆ ಶ್ರೀರಾಮನು **ಅವರಜಮೇವ** ಅನುಜನಾದ ಲಕ್ಷ್ಮಣನನ್ನೇ **ತದ್ವಧಾಯ** ಆ ಇಂದ್ರಜಿತುವಿನ ಸಂಹಾರಕ್ಕಾಗಿ **ಆದಿದೇಶ** ಆದೇಶಿಸಿದನು. **ಮಹಾತ್ಮಾ** ಅತ್ಯಂತ ಧೈರ್ಯಶಾಲಿಯಾದ **ಸಚ** ಆ ಲಕ್ಷ್ಮಣನಾದರೋ **ಹನುಮತಾ** ಹನುಮಂತನಿಂದ **ವಿಭೀಷಣೇನ** ವಿಭೀಷಣನಿಂದ **ಸರ್ವೈಃ** ಆ ಎಲ್ಲಾ **ವಾನರೇಂದ್ರೈಃ** ಕಪಿಪ್ರಮುಖರಿಂದಲೂ **ಸಹೈವ** ಕೂಡಿಕೊಂಡೇ **ಯಯೌ** ಹೋದನು.

**ತಾತ್ಪರ್ಯ** :- ಶ್ರೀರಾಮನು ಇಂದ್ರಜಿತುವಿನ ವಧೆಗಾಗಿ ತನ್ನ ತಮ್ಮನಾದ ಲಕ್ಷ್ಮಣನನ್ನು ಕಳುಹಿಸಿದ. ಹನುಮಂತ ವಿಭೀಷಣರೊಂದಿಗೆ ಕಪಿಗಳಿಂದಲೂ ಕೂಡಿದ ಲಕ್ಷ್ಮಣನು ಇಂದ್ರಜಿತುವಿನ ವಧೆಗಾಗಿ ಹೊರಟ.

**ಲಕ್ಷ್ಮಣ ಇಂದ್ರಜಿತರ ಕಾಳಗ**

**ಸ ಜುಹ್ವತಸ್ತಸ್ಯ ಚಕಾರ ವಿಘ್ನಂ**
**ಪ್ಲವಂಗಮೈಃ ಸೋऽಥ ಯುಯುತ್ಸಯಾ ರಥಮ್ ।**
**ಸಮಾಸ್ಥಿತಃ ಕಾರ್ಮುಕಬಾಣಪಾಣಿಃ**
**ಪ್ರತ್ಯುದ್ಯಯೌ ಲಕ್ಷ್ಮಣಮಾಶು ಗರ್ಜನ್ ॥ ೧೭೩ ॥**

ಪದಚ್ಛೇದ : ಸಃ ಜುಹ್ವತಃ ತಸ್ಯ ಚಕಾರ ವಿಘ್ನಂ ಪ್ಲವಂಗಮೈಃ ಸಃ ಅಥ ಯುಯುತ್ಸಯಾ ರಥಮ್ । ಸಮಾಸ್ಥಿತಃ ಕಾರ್ಮುಕಬಾಣಪಾಣಿಃ ಪ್ರತ್ಯುದ್ಯಯೌ ಲಕ್ಷ್ಮಣಮ್ ಆಶು ಗರ್ಜನ್ ॥

**ಅರ್ಥ** :- **ಸಃ** ಆ ಲಕ್ಷ್ಮಣನು **ಜುಹ್ವತಃ** ಹೋಮಿಸತಕ್ಕ **ತಸ್ಯ** ಆ ಇಂದ್ರಜಿತುವಿಗೆ **ಪ್ಲವಂಗಮೈಃ** ಕಪಿಗಳಿಂದ **ವಿಘ್ನಂ** ವಿಘ್ನವನ್ನು **ಚಕಾರ** ಮಾಡಿದನು. **ಅಥ** ಅನಂತರ **ಸಃ** ಆ ಇಂದ್ರಜಿತುವು **ಯುಯುತ್ಸಯಾ** ಯುದ್ಧಮಾಡುವ ಅಪೇಕ್ಷೆಯಿಂದ **ರಥಂ** ರಥವನ್ನು **ಸಮಾಸ್ಥಿತಃ (ಸನ್)** ಹತ್ತಲ್ಪಟ್ಟವನಾಗಿ **ಕಾರ್ಮುಕಬಾಣಪಾಣಿಃ (ಸನ್)** ಬಿಲ್ಲುಬಾಣಗಳುಳ್ಳ ಹಸ್ತವುಳ್ಳವನಾಗಿ **ಗರ್ಜನ್** ಗರ್ಜಿಸುತ್ತ **ಲಕ್ಷ್ಮಣಂ** ಲಕ್ಷ್ಮಣನನ್ನು ಕುರಿತು **ಆಶು** ಕೂಡಲೇ **ಪ್ರತ್ಯುದ್ಯಯೌ** ಯುದ್ಧಕ್ಕಾಗಿ ಹೋದನು.

**ತಾತ್ಪರ್ಯ** :- ತಾನು ಮಾಡುತ್ತಿರುವ ಹೋಮಕ್ಕೆ ಕಪಿಗಳಿಂದ ವಿಘ್ನವನ್ನುಂಟು ಮಾಡಿದ ಲಕ್ಷ್ಮಣನೊಂದಿಗೆ ಯುದ್ಧ ಮಾಡಲು ಅಪೇಕ್ಷಿಸಿದ ಇಂದ್ರಜಿತುವು ಧನುರ್ಬಾಣದೊಂದಿಗೆ ರಥವನ್ನೇರಿ ಸಿಂಹನಾದದೊಂದಿಗೆ ಯುದ್ಧಕ್ಕಾಗಿ ಹೊರಡುತ್ತಾನೆ.

**ಉಭೌ ಚ ತಾವಸ್ತ್ರವಿದಾಂ ವರಿಷ್ಠೌ**
**ಶರೈಃ ಶರೀರಾಂತಕರೈಸ್ತತಕ್ಷತುಃ ।**
**ದಿಶಶ್ಚ ಸರ್ವಾಃ ಪ್ರದಿಶಃ ಶರೋತ್ತಮೈ-**
**ರ್ವಿಧಾಯ ಶಿಕ್ಷಾಸ್ತ್ರಬಲೈರ್ನಿರಂತರಾಃ ॥ ೧೭೪ ॥**

ಪದಚ್ಛೇದ : ಉಭೌ ಚ ತೌ ಅಸ್ತ್ರವಿದಾಂ ವರಿಷ್ಠೌ ಶರ್ಯೆಃ ಶರೀರಾಂತಕರ್ಯೆಃ ತತಕ್ಷತುಃ ದಿಶಃ ಚ ಸರ್ವಾಃ ಪ್ರದಿಶಃ ಶರೋತ್ತಮ್ಯೆಃ ವಿಧಾಯ ಶಿಕ್ಷಾಸ್ತ್ರಬಲ್ಯೆಃ ನಿರಂತರಾಃ॥

**ಅರ್ಥ** :- **ಅಸ್ತ್ರವಿದಾಂ** ಅಸ್ತ್ರಜ್ಞಾನಿಗಳಲ್ಲಿ **ವರಿಷ್ಠೌ** ಶ್ರೇಷ್ಠರಾದ **ತೌ ಉಭೌ** ಲಕ್ಷ್ಮಣಇಂದ್ರಜಿತರಿಬ್ಬರೂ **ಶಿಕ್ಷಾಸ್ತ್ರಬಲ್ಯೆಃ** ಅಭ್ಯಾಸವುಳ್ಳ ಅಸ್ತ್ರಗಳ ಬಲದಿಂದ **ಸರ್ವಾಃ** ಎಲ್ಲಾ **ದಿಶಃ** ದಿಕ್ಕುಗಳನ್ನು **ಪ್ರದಿಶಶ್ಚ** ಉಪದಿಕ್ಕುಗಳನ್ನೂ ಕೂಡ **ಶರೋತ್ತಮ್ಯೆಃ** ಉತ್ತಮಬಾಣಗಳಿಂದ **ನಿರಂತರಾಃ** ಅವಕಾಶವಿಲ್ಲದಂತೆ **ವಿಧಾಯ** ಉಂಟುಮಾಡಿ **ಶರೀರಾಂತಕರ್ಯೆಃ** ದೇಹವನ್ನು ನಾಶಪಡಿಸುವಂತಹ **ಶರ್ಯೆಃ** ಬಾಣಗಳಿಂದ **ತತಕ್ಷತುಃ** ಹೊಡೆದುಕೊಂಡರು.

**ತಾತ್ಪರ್ಯ** :- ಅಸ್ತ್ರವನ್ನು ಬಲ್ಲವರಲ್ಲಿ ಉತ್ತಮರಾದ ಲಕ್ಷ್ಮಣ ಇಂದ್ರಜಿತರು ತಮಗೆ ಇರುವ ಅಸ್ತ್ರದ ನೈಪುಣ್ಯದಿಂದ ಪೂರ್ವಾದಿದಿಕ್ಕುಗಳೊಂದಿಗಿ ಆಗ್ನೇಯಾದಿ ಉಪದಿಕ್ಕುಗಳನ್ನೂ ಬಾಣಗಳಿಂದ ಸ್ವಲ್ಪವೂ ಜಾಗವಿಲ್ಲದಂತೆ ತುಂಬಿಸಿ, ದೇಹವನ್ನೇ ಘಾಸಿಗೊಳಿಸುವಂತಹ ಬಾಣಗಳಿಂದ ತಾವು ಪರಸ್ಪರವಾಗಿಯೂ ಹೊಡೆದಾಡುತ್ತಾರೆ.

ಇಂದ್ರಜಿತುವಿನ ಸಂಹಾರ

**ಅಸ್ತ್ರಾಣಿ ತಸ್ಯಾಸ್ತ್ರವರ್ಯೆಃ ಸ ಲಕ್ಷ್ಮಣೋ**
**ನಿವಾರ್ಯ ಶತ್ರೋಶ್ಚಲಕುಂಡಲೋಜ್ಜ್ವಲಮ್ ।**
**ಶಿರಃ ಶರೇಣಾಽಶು ಸಮುನ್ಮಮಾಥ**
**ಸುರ್ಯೆಃ ಪ್ರಸೂನ್ಯೆರಥ ಚಾಭಿವೃಷ್ಟಃ ॥ ೧೭೫ ॥**

ಪದಚ್ಛೇದ : ಅಸ್ತ್ರಾಣಿ ತಸ್ಯ ಅಸ್ತ್ರವರ್ಯೆಃ ಸಃ ಲಕ್ಷ್ಮಣಃ ನಿವಾರ್ಯ ಶತ್ರೋಃ ಚಲಕುಂಡಲೋಜ್ಜ್ವಲಮ್ । ಶಿರಃ ಶರೇಣ ಆಶು ಸಮುನ್ಮಮಾಥ ಸುರ್ಯೆಃ ಪ್ರಸೂನ್ಯೆಃ ಅಥ ಚ ಅಭಿವೃಷ್ಟಃ ॥

**ಅರ್ಥ** :- **ಲಕ್ಷ್ಮಣಃ** ಲಕ್ಷ್ಮಣನು **ತಸ್ಯ** ಆ ಇಂದ್ರಜಿತುವಿನ **ಅಸ್ತ್ರಾಣಿ** ಬಾಣಗಳನ್ನು **ಅಸ್ತ್ರವರ್ಯೆಃ** ಉತ್ತಮ ಅಸ್ತ್ರಗಳಿಂದ **ನಿವಾರ್ಯ** ಪ್ರತಿಬಂಧಿಸಿ **ಶತ್ರೋಃ** ಶತ್ರುವಾದ ಇಂದ್ರಜಿತುವಿನ **ಚಲಕುಂಡಲೋಜ್ಜ್ವಲಂ** ಚಂಚಲವಾದ ಕುಂಡಲಗಳಿಂದ ಪ್ರಕಾಶಿಸುವ **ಶಿರಃ** ತಲೆಯನ್ನು **ಶರೇಣ** ಬಾಣದಿಂದ **ಆಶು** ಕೂಡಲೇ **ಸಮುನ್ಮಮಾಥ** ತುಂಡರಿಸಿದ. **ಅಥ** ಅನಂತರ **ಸುರ್ಯೆಃ** ದೇವತೆಗಳಿಂದ **ಪ್ರಸೂನ್ಯೆಃ** ಪುಷ್ಪಗಳಿಂದ **ಸಃ** ಆ ಲಕ್ಷ್ಮಣನಾದರೋ **ಅಭಿವೃಷ್ಟಃ** ವೃಷ್ಟೀಕರಿಸಲ್ಪಟ್ಟನು.

**ತಾತ್ಪರ್ಯ** :- ಇಂದ್ರಜಿತುವಿನ ಬಾಣಗಳನ್ನು ಶ್ರೇಷ್ಠ ಅಸ್ತ್ರಗಳಿಂದ ನಿವಾರಿಸಿದ ಲಕ್ಷ್ಮಣನು ಕೂಡಲೇ ಒಂದು ಬಾಣದಿಂದ ಕುಂಡಲಗಳಿಂದ ಶೋಭಿಸುವ ಅವನ ತಲೆಯನ್ನು ತುಂಡರಿಸುವನು. ಆಗ ದೇವತೆಗಳೆಲ್ಲ ಲಕ್ಷ್ಮಣನ ಮೇಲೆ ಪುಷ್ಪವೃಷ್ಟಿಯನ್ನು ಮಾಡುತ್ತಾರೆ.

ರಾವಣನ ವಿಲಾಪ

**ನಿಪಾತಿತೇऽಸ್ಮಿನ್ ನಿತರಾಂ ನಿಶಾಚರಾನ್**
**ಪ್ಲವಂಗಮಾ ಜಘ್ನುರನೇಕಕೋಟಿಶಃ ।**
**ಹತಾವಶಿಷ್ಟಾಸ್ತು ದಶಾನನಾಯ**
**ಶಶಂಸುರತ್ಯಾಪ್ತಸುತಪ್ರಣಾಶಮ್ ॥ ೧೭೬ ॥**

**ಪದಚ್ಛೇದ** : ನಿಪಾತಿತೇ ಅಸ್ಮಿನ್ ನಿತರಾಂ ನಿಶಾಚರಾನ್ ಪ್ಲವಂಗಮಾಃ ಜಘ್ನುಃ ಅನೇಕಕೋಟಿಶಃ । ಹತಾವಶಿಷ್ಟಾಃ ತು ದಶಾನನಾಯ ಶಶಂಸುಃ ಅತ್ಯಾಪ್ತಸುತಪ್ರಣಾಶಮ್ ॥

**ಅರ್ಥ** :- **ಅಸ್ಮಿನ್** ಈ ಇಂದ್ರಜಿತುವು **ನಿಪಾತಿತೇ (ಸತಿ)** ಲಕ್ಷ್ಮಣನಿಂದ ಸಂಹರಿಸ ಲ್ಪಡುತ್ತಿರಲು **ಪ್ಲವಂಗಮಾಃ** ಕಪಿಗಳು **ಅನೇಕಕೋಟಿಶಃ** ಅನೇಕ ಕೋಟಿ ಸಂಖ್ಯಾಕರಾದ **ಇತರಾನ್** ಬೇರೆಯವರಾದ **ನಿಶಾಚರಾನ್** ರಾಕ್ಷಸರನ್ನು **ಜಘ್ನುಃ** ಕೊಂದರು **ಹತಾವಶಿಷ್ಟಾಃ** ಸಂಹೃತಾದವನ್ನು ಬಿಟ್ಟು ಉಳಿದವರಾದ ರಾಕ್ಷಸರಾದರೋ **ದಶಾನನಾಯ** ರಾವಣನಿಗೆ **ಅತ್ಯಾಪ್ತಸುತಪ್ರಣಾಶಂ** ಅತ್ಯಂತ ಆಪ್ತನಾದ ಮಗನ ಮರಣವನ್ನು **ಶಶಂಸುಃ** ಹೇಳಿದರು.

**ತಾತ್ಪರ್ಯ** :- ಇಂದ್ರಜಿತುವು ಹತನಾಗುತ್ತಿರಲು ಉಳಿದ ಕೋಟಿ ಸಂಖ್ಯಾಕ ರಾದ ರಾಕ್ಷಸರನ್ನು ಕಪಿಗಳು ಸಂಹರಿಸುತ್ತಾರೆ. ಅಲ್ಲಿ ಬದುಕಿ ಉಳಿದವರೆಲ್ಲರೂ ರಾವಣನಲ್ಲಿಗೆ ಹೋಗಿ ಇಂದ್ರಜಿತುವು ಸತ್ತ ವಾರ್ತೆಯನ್ನು ಅರುಹುತ್ತಾರೆ.

**ಸ ತನ್ನಿಶಮ್ಯಾಪ್ರಿಯಮುಗ್ರರೂಪಂ**
**ಭೃಶಂ ವಿನಿಶ್ವಸ್ಯ ವಿಲಪ್ಯ ದುಃಖಾತ್ ।**
**ಸಂಸ್ಥಾಪಯಾಮಾಸ ಮತಿಂ ಪುನಶ್ಚ**
**ಮರಿಷ್ಯ ಇತ್ಯೇವ ವಿನಿಶ್ಚಿತಾರ್ಥಃ ॥ ೧೭೭ ॥**

ಪದಚ್ಛೇದ : ಸಃ ತತ್ ನಿಶಮ್ಯ ಅಪ್ರಿಯಮ್ ಉಗ್ರರೂಪಂ ಭೃಶಂ ವಿನಿಶ್ವಸ್ಯ ವಿಲಪ್ಯ ದುಃಖಾತ್ । ಸಂಸ್ಥಾಪಯಾಮಾಸ ಮತಿಂ ಪುನಃ ಚ ಮರಿಷ್ಯೇ ಇತಿ ಏವ ವಿನಿಶ್ಚಿತಾರ್ಥಃ ॥

**ಅರ್ಥ** :- **ಸಃ** ಆ ರಾವಣನು **ಉಗ್ರರೂಪಂ** ಸಹಿಸಲು ಅಸಾಧ್ಯವಾದ ಸ್ವರೂಪವನ್ನು **ಅಪ್ರಿಯಂ** ಇಷ್ಟವಲ್ಲದ **ತತ್** ಆ ವಾರ್ತೆಯನ್ನು **ನಿಶಮ್ಯ** ಕೇಳಿ **ಭೃಶಂ** ಬಹಳವಾಗಿ **ವಿನಿಶ್ವಸ್ಯ** ಶ್ವಾಸವನ್ನು ಬಿಟ್ಟು **ದುಃಖಾತ್** ದುಃಖದಿಂದ **ವಿಲಪ್ಯ** ವಿಲಾಪವನ್ನು ಮಾಡಿ **ಪುನಃ ಚ** ಮತ್ತುಕೂಡ **ವಿನಿಶ್ಚಿತಾರ್ಥಃ** ನಿಶ್ಚಯ ಮಾಡಲ್ಪಟ್ಟ ಮರಣರೂಪ ಪ್ರಯೋಜನವುಳ್ಳ ರಾವಣನು **ಅಹಂ** ನಾನು **ಮರಿಷ್ಯೇ** ಹತನಾಗುವೆ **ಇತ್ಯೇವ** ಹೀಗೆಂದೇ **ಮತಿಂ** ಬುದ್ಧಿಯನ್ನು **ಸಂಸ್ಥಾಪಯಾಮಾಸ** ಮಾಡಿದನು.

**ತಾತ್ಪರ್ಯ** :- ಇಂದ್ರಜಿತುವಿನ ಮರಣವಾರ್ತೆಯನ್ನು ಕೇಳಿದ ರಾವಣನು ದುಃಖದಿಂದ ವಿಲಾಪಿಸುತ್ತಾನೆ. ಅದು ಅತ್ಯಂತ ಅಪ್ರಿಯವೂ ಸಹಿಸಲು ಅಸಾಧ್ಯವೂ ಆಗಿತ್ತು. ಇನ್ನೇನು ನನಗೂ ಕೂಡ ಸಾವು ನಿಶ್ಚಯವೆಂದೇ ಮನಗಾಣುತ್ತಾನೆ.

### ಯುದ್ಧಕ್ಕೆ ಸಿದ್ಧವಾದ ರಾವಣನ ಅಪಾರಸೇನೆ

**ಮರಣಾಭಿಮುಖಃ ಶೀಘ್ರಂ ರಾವಣೋ ರಣಕರ್ಮಣೇ ।**
**ಸಜ್ಜೀಭವನ್ನಂತರೈವ ದಿದೇಶ ಬಲಮೂರ್ಜಿತಮ್ ॥ ೧೭೮ ॥**

ಪದಚ್ಛೇದ : ಮರಣಾಭಿಮುಖಃ ಶೀಘ್ರಂ ರಾವಣಃ ರಣಕರ್ಮಣೇ । ಸಜ್ಜೀಭವನ್ ಅಂತರಾ ಏವ ದಿದೇಶ ಬಲಮ್ ಊರ್ಜಿತಮ್ ॥

**ಅರ್ಥ** :- **ಮರಣಾಭಿಮುಖಃ** ಮರಣಾಭಿಮುಖನಾದ **ರಾವಣಃ** ರಾವಣನು **ರಣಕರ್ಮಣೆ** ಯುದ್ಧಕಾರ್ಯದಲ್ಲಿ **ಶೀಘ್ರಂ** ಶೀಘ್ರವಾಗಿ **ಸಜ್ಜೀಭವನ್** (ಸನ್) ಸನ್ನದ್ಧನಾದವನಾಗಿ **ಅಂತರೈವ** ಮಧ್ಯದಲ್ಲಿಯೇ **ಊರ್ಜಿತಂ** ಸಂಖ್ಯೆಯಿಂದಲೂ ಶಸ್ತ್ರಾಸ್ತ್ರಗಳಿಂದಲೂ ಅಧಿಕವಾದ **ಬಲಂ** ಸೈನ್ಯವನ್ನು **ದಿದೇಶ** ಆದೇಶಿಸಿದನು.

**ತಾತ್ಪರ್ಯ** : ಮರಣವನ್ನು ಹೊಂದಲು ಸಿದ್ಧನಾದಂತೆ ಇರುವ ರಾವಣನು ಯುದ್ಧಕ್ಕಾಗಿ ಸಿದ್ಧತೆ ನಡೆಸುತ್ತಾನೆ. ತಾನು ಹೊರಡುವ ಮಧ್ಯದಲ್ಲಿಯೇ

ಸಂಖ್ಯೆಯಿಂದ ಹಾಗು ಶಸ್ತ್ರಾಸ್ತ್ರಗಳಿಂದ ಉತ್ಕೃಷ್ಟವಾದ ತನ್ನ ಸೈನ್ಯವನ್ನು ಕಳುಹಿಸುವನು.

> ತ್ರಿಂಶತ್ ಸಹಸ್ರಾಣಿ ಮಹೌಘಕಾನಾ-
> ಮಕ್ಷೋಹಿಣೀನಾಂ ಸಹಷಟ್ಸಹಸ್ರಮ್ ।
> ಕ್ರಮೇಣ ಸಂಯೋಜಯತಾऽಶು ರಾಮಂ
> ಸಜ್ಜೋ ಭವಾಮೀತಿ ದಿದೇಶ ರಾವಣಃ ॥ ೧೭೯ ॥

ಪದಚ್ಛೇದ : ತ್ರಿಂಶತ್ ಸಹಸ್ರಾಣಿ ಮಹೌಘಕಾನಾಮ್ ಅಕ್ಷೋಹಿಣೀನಾಂ ಸಹ ಷಟ್‌ಸಹಸ್ರಮ್ । ಕ್ರಮೇಣ ಸಂಯೋಜಯತ ಆಶು ರಾಮಂ ಸಜ್ಜೋ ಭವಾಮಿ ಇತಿ ದಿದೇಶ ರಾವಣಃ ॥

**ಅರ್ಥ** :- **ರಾವಣಃ** ರಾವಣನು **ಮಹೌಘಕಾನಾಂ** ಮಹೌಘದಷ್ಟು ಸಂಖ್ಯೆಗಳುಳ್ಳ **ತ್ರಿಂಶತ್ ಸಹಸ್ರಾಣಿ** ಮೂವತ್ತು ಸಾವಿರಗಳನ್ನು **ಅಕ್ಷೋಹಿಣೀನಾಂ** ಅಕ್ಷೋಹಿಣೀಸೇನಗಳ **ಷಟ್ ಸಹಸ್ರಂ** ಆರು ಸಾವಿರಗಳನ್ನು ಕುರಿತು **ರಾಮಂ** ಶ್ರೀರಾಮನನ್ನು **ಕ್ರಮೇಣ** ಕ್ರಮದಿಂದ **ಆಶು** ಬೇಗನೇ **ಸಂಯೋಜಯತ** ಸಂಯೋಜಿಸಿ (**ಅಹಂ** ನಾನು) **ಸಜ್ಜೀಭವಾಮಿ** ಸನ್ನದ್ಧ ನಾಗುವೆನು **ಇತಿ** ಎಂದು **ದಿದೇಶ** ಆದೇಶಿಸಿದನು.

**ತಾತ್ಪರ್ಯ** :- ರಾವಣನು ತನ್ನ ಅಪಾರ ಸೈನ್ಯವನ್ನು ಉದ್ದೇಶಿಸಿ 'ನೀವೆಲ್ಲರು ರಾಮನನ್ನು ಚೆನ್ನಾಗಿ ಆಯಾಸಗೊಳ್ಳುವಂತೆ ಮಾಡಿರಿ ನಾನು ಸದ್ಯದಲ್ಲೇ ಸನ್ನದ್ಧನಾಗಿ ಯುದ್ಧಕ್ಕೆ ಬರುವೆನು' ಎನ್ನುವನು. ರಾವಣನ ಸೈನ್ಯವು ಮೂವತ್ತು ಸಾವಿರ ಮಹೌಘಗಳು ಹಾಗು ಆರು ಸಾವಿರ ಅಕ್ಷೋಹಿಣೀ ಸೇನೆಯನ್ನು ಹೊಂದಿತ್ತು.

> ತದಪ್ರಧೃಷ್ಯಂ ವರತಃ ಸ್ವಯಂಭುವೋ
> ಯುಗಾಂತಕಾಲಾರ್ಣವಘೂರ್ಣಿತೋಪಮಮ್ ।
> ಪ್ರಗೃಹ್ಯ ನಾನಾವಿಧಮಸ್ತ್ರಶಸ್ತ್ರಂ
> ಬಲಂ ಕಪೀನ್ ಶೀಘ್ರತಮಂ ಜಗಾಮ ॥ ೧೮೦ ॥

ಪದಚ್ಛೇದ : ತತ್ ಅಪ್ರಧೃಷ್ಯಂ ವರತಃ ಸ್ವಯಂಭುವಃ ಯುಗಾಂತಕಾಲಾರ್ಣವ ಘೂರ್ಣಿತೋಪಮಮ್ । ಪ್ರಗೃಹ್ಯ ನಾನಾವಿಧಮ್ ಅಸ್ತ್ರಶಸ್ತ್ರಂ ಬಲಂ ಕಪೀನ್ ಶೀಘ್ರತಮಂ ಜಗಾಮ ॥

**ಅರ್ಥ** :- **ಸ್ವಯಂಭುವಃ** ಬ್ರಹ್ಮದೇವನ **ವರತಃ** ವರದ ದೆಸೆಯಿಂದ **ಅಪ್ರಧೃಷ್ಯಂ** ತಡೆಯಲು ಅಶಕ್ಯವಾದ **ಯುಗಾಂತಕಾಲಾರ್ಣವಘೂರ್ಣಿತೋಪಮಂ** ಪ್ರಳಯ ಕಾಲದಲ್ಲಿನ ಸಾಗರ ಶಬ್ದಕ್ಕೆ ಸಮಾನವಾದ **ತತ್** ಅಂತಹ **ಬಲಂ** ರಾವಣನ ಸೈನ್ಯವು **ನಾನಾವಿಧಂ** ಅನೇಕವಿಧವಾದ **ಅಸ್ತ್ರಶಸ್ತ್ರಂ** ಅಸ್ತ್ರಶಸ್ತ್ರಗಳನ್ನು **ಪ್ರಗೃಹ್ಯ** ಹಿಡಿದು **ಶೀಘ್ರತಮಂ** ಅತಿಶೀಘ್ರವಾಗಿ **ಕಪೀನ್** ಕಪಿಗಳನ್ನು **ಜಗಾಮ** ಹೊಂದಿತು.

**ತಾತ್ಪರ್ಯ** :- ಬ್ರಹ್ಮದೇವರ ವರಬಲವುಳ್ಳ, ಪ್ರಳಯಕಾಲದ ಸಾಗರದ ಶಬ್ದಕ್ಕೆ ಸಮಾನವಾದ ರಾವಣಸೈನ್ಯವು ಅನೇಕವಿಧವಾದ ಶಸ್ತ್ರಾಸ್ತ್ರಗಳಿಂದ ಬಹು ಬೇಗನೇ ಕಪಿಗಳ ಮೇಲೆ ಬಿದ್ದಿತು.

**ಆಗಚ್ಛಮಾನಂ ತದಪಾರಮೇಯಂ**
**ಬಲಂ ಸುಘೋರಂ ಪ್ರಲಯಾರ್ಣವೋಪಮಮ್ ।**
**ಭಯಾತ್ ಸಮುದ್ವಿಗ್ನವಿಷಣ್ಣಚೇತಸಃ**
**ಕಪಿಪ್ರವೀರಾ ನಿತರಾಂ ಪ್ರದುದ್ರುವುಃ ॥ ೧೮೧ ॥**

ಪದಚ್ಛೇದ : **ಆಗಚ್ಛಮಾನಂ ತತ್ ಅಪಾರಮೇಯಂ** ಬಲಂ **ಸುಘೋರಂ ಪ್ರಲಯಾರ್ಣವೋಪಮಮ್ । ಭಯಾತ್** ಸಮುದ್ವಿಗ್ನವಿಷಣ್ಣಚೇತಸಃ ಕಪಿಪ್ರವೀರಾಃ ನಿತರಾಂ ಪ್ರದುದ್ರುವುಃ ॥

**ಅರ್ಥ** :- **ಕಪಿಪ್ರವೀರಾಃ** ಕಪಿವೀರರು **ಆಗಚ್ಛಮಾನಂ** ಬರುತ್ತಿರುವಂತಹ **ಅಪಾರಮೇಯಂ** ತಿಳಿಯಲು ಅಶಕ್ಯವಾದ **ಸುಘೋರಂ** ಅಸ್ತ್ರಶಸ್ತ್ರಾದಿಗಳಿಂದ ಅತಿಕ್ರೂರವಾದ **ಪ್ರಳಯಾರ್ಣವೋಪಮಂ** ಪ್ರಳಯಕಾಲದ ಸಮುದ್ರಕ್ಕೆ ಸದೃಶವಾದ **ತತ್** ಅಂತಹ **ಬಲಂ** ಸೈನ್ಯವನ್ನು **ಸಮುದ್ವೀಕ್ಷ್ಯ** ವೀಕ್ಷಿಸಿ **ನಿತರಾಂ** ಬಹಳವಾಗಿ **ವಿಷಣ್ಣಚೇತಸಃ** ವ್ಯಾಕುಲಗೊಂಡ ಮನಸ್ಸುಳ್ಳವರಾಗಿ **ಭಯಾತ್** ಭಯದಿಂದ **ಪ್ರದುದ್ರುವುಃ** ಓಡಿದರು.

**ತಾತ್ಪರ್ಯ** :- ಎತ್ತ ನೋಡಿದರೂ ರಾವಣಸೈನ್ಯವೇ ಕೊನೆಯೇ ಕಾಣಿಸಿಗದಂತಹ ಪ್ರಳಯಕಾಲದ ಸಮುದ್ರದಂತೆ ಇರುವ ಅಪಾರಸಂಖ್ಯೆಯುಳ್ಳ ಅಸ್ತ್ರಶಸ್ತ್ರಾದಿಗಳಿಂದ ಕೂಡಿದ ಈ ಸೈನ್ಯವನ್ನು ನೋಡಿದ ಕಪಿಗಳು ಭಯದಿಂದ ವ್ಯಾಕುಲಗೊಂಡವರಾಗಿ ಪಲಾಯನ ಮಾಡುತ್ತಾರೆ.

ರಾವಣ ಸೈನ್ಯಕ್ಕೆ ಬ್ರಹ್ಮನ ವರ

ವರೋ ಹಿ ದತ್ತೋऽಸ್ಯ ಪುರಾ ಸ್ವಯಂಭುವಾ
ಧರಾತಲೇऽಲ್ಪೇऽಪಿ ನಿವಾಸಶಕ್ತಿಃ ।
ಅಜೇಯತಾ ಚೇತ್ಯತ ಏವ ಸಾರ್ಕಜಾಃ
ಪ್ಲವಂಗಮಾ ದ್ರಷ್ಟುಮಪಿ ಸ್ಮ ನಾಶಕನ್ ॥ ೧೮೨ ॥

ಪದಚ್ಛೇದ : ವರಃ ಹಿ ದತ್ತಃ ಅಸ್ಯ ಪುರಾ ಸ್ವಯಂಭುವಾ ಧರಾತಲೇ ಅಲ್ಪೇ ಅಪಿ ನಿವಾಸಶಕ್ತಿಃ । ಅಜೇಯತಾ ಚ ಇತ್ಯತ ಏವ ಸಾರ್ಕಜಾಃ ಪ್ಲವಂಗಮಾ ದ್ರಷ್ಟುಮ್ ಅಪಿ ಸ್ಮ ನ ಅಶಕನ್ ॥

**ಅರ್ಥ** :- **ಪುರಾ** ಹಿಂದೆ **ಸ್ವಯಂಭುವಾ** ಬ್ರಹ್ಮದೇವನಿಂದ **ಅಸ್ಯ** ಈ ರಾವಣನ ಸೈನ್ಯಕ್ಕೆ **ಅಲ್ಪೇ** ಅಲ್ಪವಾದ **ಧರಾತಲೇऽಪಿ** ಭೂಭಾಗದಲ್ಲಿಯೂ ಕೂಡ **ನಿವಾಸಶಕ್ತಿಃ** ವಾಸಿಸಲು ಸಾಮರ್ಥ್ಯವುಳ್ಳ **ವರಃ** ವರವು **ಚ** ಮತ್ತು **ಅಜೇಯತಾ** ಸೋಲಿಲ್ಲದಿರುವಿಕೆಯೂ **ಇತಿ** ಹೀಗೆಂದು (**ವರಃ** ವರವು) **ಹಿ** ಯಾವ ಕಾರಣದಿಂದ **ದತ್ತೋ ಹಿ** ಕೊಡಲ್ಪಟ್ಟಿತಷ್ಟೇ **ಅತ ಏವ** ಆ ಕಾರಣದಿಂದಲೇ **ಸಾರ್ಕಜಾಃ** ಸೂರ್ಯಪುತ್ರಸುಗ್ರೀವನಿಂದ ಕೂಡಿದ **ಪ್ಲವಂಗಮಾಃ** ಕಪಿಗಳು **ದ್ರಷ್ಟುಮಪಿ** ಸೈನ್ಯವನ್ನು ನೋಡಲೂ ಕೂಡ **ನಾಶಕನ್** ಶಕ್ಯರಾಗಲಿಲ್ಲ.

**ತಾತ್ಪರ್ಯ** :- ಇಷ್ಟು ಅಪಾರಸೈನ್ಯೆಗೆ ಪುಟ್ಟ ಲಂಕೆಯಲ್ಲಿ ವಾಸಿಸಲು ಸಾಧ್ಯವಾಗಿತ್ತು. ಏಕೆಂದರೆ ಈ ಸೈನ್ಯಕ್ಕೆ ಬ್ರಹ್ಮದೇವರ ವರವಿತ್ತು. ಅಲ್ಪ ಪ್ರದೇಶ ದಲ್ಲಿ ವಾಸಿಸುವ ಶಕ್ತಿ ಹಾಗು ಅಜೇಯತ್ವ. ಇದನ್ನು ತಿಳಿದ ಸುಗ್ರೀವನೊಂದಿಗೆ ಕಪಿಗಳೆಲ್ಲರೂ ರಾವಣನ ಸೈನ್ಯವು ಬಂದಿದ್ದೇ ತಡ ಓಡಿಹೋಗುವರು.

ಕ್ಷಣಮಾತ್ರದಲ್ಲಿ ಸೈನ್ಯಸಂಹರಿಸಿದ ರಾಮ

ಪ್ರಗೃಹ್ಯ ರಾಮೋऽಥ ಧನುಃ ಶರಾಂಶ್ಚ
ಸಮಂತತಸ್ತಾನವಧೀಚ್ಛರೌಘೈಃ ।
ಸ ಏವ ಸರ್ವತ್ರ ಚ ದೃಶ್ಯಮಾನೋ
ವಿದಿಕ್ಷು ದಿಕ್ಷು ಪ್ರಜಘಾನ ಸರ್ವಶಃ ॥ ೧೮೩ ॥

ಪದಚ್ಛೇದ : ಪ್ರಗೃಹ್ಯ ರಾಮಃ ಅಥ ಧನುಃ ಶರಾನ್ ಚ ಸಮಂತತಃ ತಾನ್ ಅವಧೀತ್ ಶರೌಘೈಃ । ಸಃ ಏವ ಸರ್ವತ್ರ ಚ ದೃಶ್ಯಮಾನಃ ವಿದಿಕ್ಷು ದಿಕ್ಷು ಪ್ರಜಘಾನ ಸರ್ವಶಃ ॥

**ಅರ್ಥ :- ಅಥ** ಅನಂತರ **ರಾಮಃ** ಶ್ರೀರಾಮನು **ಧನುಃ** ಧನುಸ್ಸು **ಚ** ಮತ್ತು **ಶರಾನ್** ಬಾಣಗಳನ್ನು **ಪ್ರಗೃಹ್ಯ** ಹಿಡಿದು **ಸಮಂತತಃ** ಎಲ್ಲೆಲ್ಲಿಯೂ ಇರತಕ್ಕಂತಹ **ತಾನ್** ಆ ರಾಕ್ಷಸರನ್ನು **ಶರೋಘೈಃ** ಬಾಣಗಳ ಸಮೂಹದಿಂದ **ಅವಧೀತ್** ಕೊಂದನು. **ಸ ಏವ** ಆ ರಾಮನೊಬ್ಬನೇ **ಸರ್ವತ್ರ** ಎಲ್ಲಾ ಕಡೆ **ದಿಕ್ಷು** ದಿಕ್ಕುಗಳಲ್ಲಿ **ವಿದಿಕ್ಷು ಚ** ಆಗ್ನೇಯಾದಿ ಉಪದಿಕ್ಕುಗಳಲ್ಲಿಯೂ ಕೂಡ **ದೃಶ್ಯಮಾನಃ (ಸನ್)** ಕಾಣುವವನಾಗಿ **ಸರ್ವಶಃ** ಎಲ್ಲಾ ರಕ್ಕಸರನ್ನೂ **ಪ್ರಜಘಾನ** ಸಂಹರಿಸಿದನು.

**ತಾತ್ಪರ್ಯ :-** ಬಿಲ್ಲು ಬಾಣಗಳನ್ನು ಕೈಗೆತ್ತುಕೊಂಡ ರಾಮ ಬಾಣಗಳ ರಾಶಿಯನ್ನೇ ಶತ್ರುಸೈನ್ಯದ ಮೇಲೆ ಹರಿಸಿ ಅವರನ್ನು ಸಂಹರಿಸಿದ. ಅಸಂಖ್ಯಾಕ ರಾಕ್ಷಸರಿದ್ದರೂ ಒಬ್ಬನೇ ರಾಮನು ದಿಕ್ಕು ಉಪದಿಕ್ಕುಗಳಲ್ಲಿ ಅನೇಕರೂಪಗಳಿಂದ ಕಾಣಿಸಿ ಎಲ್ಲರನ್ನೂ ಸಂಹರಿಸುತ್ತಾನೆ.

**ರಾಮನಿಗೆ ಪುಷ್ಪವೃಷ್ಟಿ**

**ಕ್ಷಣೇನ ಸರ್ವಾಂಶ್ಚ ನಿಹತ್ಯ ರಾಘವಃ**
**ಪ್ಲವಂಗಮಾನಾಮೃಷಭೈಃ ಸ ಪೂಜಿತಃ ।**
**ಅಭಿಷ್ಟುತಃ ಸರ್ವಸುರೋತ್ತಮೈರ್ಮುದಾ**
**ಭೃಶಂ ಪ್ರಸೂನೋತ್ಕರವರ್ಷಿಭಿಃ ಪ್ರಭುಃ ॥ ೧೮೪ ॥**

ಪದಚ್ಛೇದ : ಕ್ಷಣೇನ ಸರ್ವಾನ್ ಚ ನಿಹತ್ಯ ರಾಘವಃ ಪ್ಲವಂಗಮಾನಾಮ್ ಋಷಭೈಃ ಸಃ ಪೂಜಿತಃ । ಅಭಿಷ್ಟುತಃ ಸರ್ವಸುರೋತ್ತಮೈಃ ಮುದಾ ಭೃಶಂ ಪ್ರಸೂನೋತ್ಕರವರ್ಷಿಭಿಃ ಪ್ರಭುಃ ॥

**ಅರ್ಥ :- ಪ್ರಭುಃ** ಸ್ವಾಮಿಯಾದ **ರಾಘವಃ** ಶ್ರೀರಾಮನು **ಕ್ಷಣೇನ** ಅಲ್ಪ ಸಮಯದಲ್ಲಿ **ಸರ್ವಾಂಶ್ಚ** ಆ ಎಲ್ಲಾ ರಾಕ್ಷಸರನ್ನೂ ಕೂಡ **ನಿಹತ್ಯ** ಸಂಹರಿಸಿ **ಪ್ಲವಂಗಮಾನಾಂ** ಕಪಿಗಳ **ಋಷಭೈಃ** ಶ್ರೇಷ್ಠರಿಂದ **ಪೂಜಿತಃ (ಸನ್)** ಪೂಜಿಸಿ ಕೊಳ್ಳಲ್ಪಟ್ಟವನಾಗಿ **ಪ್ರಸೂನೋತ್ಕರವರ್ಷಿಭಿಃ** ಪುಷ್ಪಗಳ ಸಮೂಹಗಳನ್ನೇ ಮಳೆ ಸುರಿಸುವಂತಹ **ಸರ್ವಸುರೋತ್ತಮೈಃ** ಸಮಸ್ತದೇವೋತ್ತಮರಿಂದ **ಮುದಾ** ಸಂತೋಷದಿಂದ **ಭೃಶಂ** ಬಹಳವಾಗಿ **ಅಭಿಷ್ಟುತಃ** ಸ್ತುತಿಸಲ್ಪಟ್ಟನು.

**ತಾತ್ಪರ್ಯ :-** ಅಪಾರಸಂಖ್ಯೆಯ ಸೈನಿಕರನ್ನು ಅಲ್ಪ ಸಮಯದಲ್ಲಿಯೇ ಸಂಹರಿಸಿದ ರಾಮನನ್ನು ಕಪಿಗಳು ಪೂಜಿಸಿದರೆ, ದೇವೋತ್ತಮರೆಲ್ಲರೂ

ಪುಷ್ಪಗಳ ರಾಶಿಯನ್ನು ಮಳೆಯಂತೆ ಸುರಿಸಿ ಶ್ರೀರಾಮನನ್ನು ಮುದದಿಂದ ಸ್ತುತಿಸಿದರು.

ಪುಷ್ಪಕವಿಮಾನವನ್ನೇರಿದ ರಾವಣ

ಅಥಾಽಯಯೌ ಸರ್ವನಿಶಾಚರೇಶ್ವರೋ
ಹತಾವಶಿಷ್ಟೇನ ಬಲೇನ ಸಂವೃತಃ ।
ಮಾನಮಾರುಹ್ಯ ಚ ಪುಷ್ಪಕಂ ತ್ವರನ್
ಶರೀರನಾಶಾಯ ಮಹಾಯುಧೋದ್ಧತಃ ॥ ೧೮೫ ॥

ಪದಚ್ಛೇದ : ಅಥ ಆಯಯೌ ಸರ್ವನಿಶಾಚರೇಶ್ವರಃ ಹತಾವಶಿಷ್ಟೇನ ಬಲೇನ ಸಂವೃತಃ । ವಿಮಾನಮ್ ಆರುಹ್ಯ ಚ ಪುಷ್ಪಕಂ ತ್ವರನ್ ಶರೀರನಾಶಾಯ ಮಹಾಯುಧೋದ್ಧತಃ ॥

**ಅರ್ಥ** :- **ಅಥ** ಅನಂತರ **ಸರ್ವನಿಶಾಚರೇಶ್ವರಃ** ಸಮಸ್ತರಾಕ್ಷಸರಿಗೂ ಈಶ್ವರನಾದ **ಮಹಾಯುಧೋದ್ಧತಃ** ಉತ್ತಮ ಆಯುಧದಿಂದ ದರ್ಪಿತನಾದ ರಾವಣನು **ಹತಾವಶಿಷ್ಟೇನ** ಸತ್ತವರನ್ನು ಬಿಟ್ಟು ಉಳಿದಿರುವ **ಬಲೇನ** ಸೈನ್ಯದಿಂದ **ಸಂವೃತಃ (ಸನ್)** ಕೂಡಿದವನಾಗಿ **ಚ** ಮತ್ತು **ಪುಷ್ಪಕಂ ವಿಮಾನಂ** ಪುಷ್ಪಕವಿಮಾನವನ್ನು **ಆರುಹ್ಯ** ಏರಿ **ತ್ವರನ್** ವೇಗದಿಂದ **ಶರೀರನಾಶಾಯ** ತನ್ನ ಶರೀರದ ನಾಶಕ್ಕಾಗಿ **ಆಯಯೌ** ಆಗಮಿಸಿದನು.

**ತಾತ್ಪರ್ಯ** :- ಅಳಿದುಳಿದ ಸೈನ್ಯವನ್ನು ಒಗ್ಗೂಡಿಸಿ ಅವರಿಂದ ಕೂಡಿದ ರಾವಣನು ಪುಷ್ಪಕ ವಿಮಾನವನ್ನೇರಿ ತನ್ನ ವಧೆಗಾಗಿ ತಾನೇ ಯುದ್ಧಕ್ಕೆ ಆಗಮಿಸಿದನು. (ಪುಷ್ಪಕವಿಮಾನವೇರಿ ಯುದ್ಧಕ್ಕೆ ಹೊರಟರೆ ನಿನ್ನ ಮರವಣವೆಂದು ಕುಬೇರ ಶಾಪವಿತ್ತು.)

ಮರಣಿಸಲೆಂದೇ ಯುದ್ಧಕ್ಕೆ ಬಂದ ರಾವಣನ ಮಂತ್ರಿಗಳು

ವಿರೂಪನೇತ್ರೋಽಪ್ಯಥ ಯೂಪನೇತ್ರ-
ಸ್ತಥಾ ಮಹಾಪಾರ್ಶ್ವಮಹೋದರೌ ಚ ।
ಯಯುಸ್ತಮಾವೃತ್ಯ ಸಹೈವ ಮಂತ್ರಿಣೋ
ಮೃತಿಂ ಪುರೋಧಾಯ ರಣಾಯ ಯಾಂತಮ್ ॥ ೧೮೬ ॥

ಪದಚ್ಛೇದ : ವಿರೂಪನೇತ್ರಃ ಅಪಿ ಅಥ ಯೂಪನೇತ್ರಃ ತಥಾ ಮಹಾಪಾರ್ಶ್ವಮಹೋದರೌ ಚ । ಯಯುಃ ತಮ್ ಆವೃತ್ಯ ಸಹ ಏವ ಮಂತ್ರಿಣಃ ಮೃತಿಂ ಪುರೋಧಾಯ ರಣಾಯ ಯಾಂತಮ್ ॥

**ಅರ್ಥ** :- ಅಥ ಅನಂತರ ವಿರೂಪನೇತ್ರಃ ವಿರೂಪನೇತ್ರನು ಅಪಿ ಮತ್ತು ಯೂಪನೇತ್ರಃ ಯೂಪನೇತ್ರನು ತಥಾ ಹಾಗೆಯೇ ಮಹಾಪಾರ್ಶ್ವ ಮಹೋದರೌ ಮಹಾಪಾರ್ಶ್ವ ಹಾಗು ಮಹೋದರರೆಂಬ ಮಂತ್ರಿಣಃ ಚ ಮಂತ್ರಿಗಳೂ ಕೂಡ ಮೃತಿಂ ಅವಸಾನವನ್ನು ಪುರೋಧಾಯ ಮುಂದಿಟ್ಟುಕೊಂಡು ರಣಾಯ ಯುದ್ಧಕ್ಕಾಗಿ ಯಾಂತಂ ಹೋಗತಕ್ಕಂತಹ ತಂ ಚ ಆ ರಾವಣನನ್ನಾದರೋ ಆವೃತ್ಯ ಆವರಿಸಿ ಸಹೈವ ಕೂಡಿಕೊಂಡೇ ಯಯುಃ ಹೋದರು.

**ತಾತ್ಪರ್ಯ**:- ವಿರೂಪನೇತ್ರ, ಯೂಪನೇತ್ರನೆಂಬ ಹಾಗು ಮಹಾಪಾರ್ಶ್ವ ಮಹೋ ರರದೆಂಬ ರಾವಣನ ನಾಲ್ಕು ಮಂತ್ರಿಗಳೂ ಕೂಡ ಮರಣವನ್ನೇ ಮುಂದಿಟ್ಟುಕೊಂಡು ಯುದ್ಧಕ್ಕೆ ನಡೆದ ರಾವಣನನ್ನು ಅನುಸರಿಸಿ ಇವರೂ ಹೋಗುತ್ತಾರೆ.

**ಕಪಿಗಳ ಪಲಾಯನ**

**ಅಥಾಸ್ಯ ಸೈನ್ಯಾನಿ ನಿಜಘ್ನುರೋಜಸಾ**
**ಸಮಂತತಃ ಶೈಲಶಿಲಾಭಿವೃಷ್ಟಿಭಿಃ ।**
**ಪ್ಲವಂಗಮಾಸ್ತಾನಭಿವೀಕ್ಷ ವೀರ್ಯವಾನ್**
**ಸಸಾರ ವೇಗೇನ ಮಹೋದರೋ ರುಷಾ ॥ ೧೮೭ ॥**

ಪದಚ್ಛೇದ : ಅಥ ಅಸ್ಯ ಸೈನ್ಯಾನಿ ನಿಜಘ್ನುಃ ಓಜಸಾ ಸಮಂತತಃ ಶೈಲಶಿಲಾಭಿ ವೃಷ್ಟಿಭಿಃ । ಪ್ಲವಂಗಮಾಃ ತಾನ್ ಅಭಿವೀಕ್ಷ ವೀರ್ಯವಾನ್ ಸಸಾರ ವೇಗೇನ ಮಹೋದರಃ ರುಷಾ ॥

**ಅರ್ಥ** :- ಪ್ಲವಂಗಮಾಃ ಕಪಿಗಳು ಓಜಸಾ ಬಲದಿಂದ ಶೈಲಶಿಲಾಭಿ ವೃಷ್ಟಿಭಿಃ ವೃಕ್ಷ ಹಾಗು ಶಿಲೆಗಳ ಮಳೆಯನ್ನು ಸುರಿಸುವಿಕೆಯಿಂದ ಸಮಂತತಃ ಎಲ್ಲಾ ಅಸ್ಯ ಈ ರಾವಣನ ಸೈನ್ಯಾನಿ ಸೈನಿಕರನ್ನು ನಿಜಘ್ನುಃ ಕೊಂದರು. ಅಥ ಅನಂತರ ವೀರ್ಯವಾನ್ ಪರಾಕ್ರಮಶಾಲಿಯಾದ ಮಹೋದರಃ ಮಹೋದರನೆಂಬ ಮಂತ್ರಿಯು ತಾನ್ ಆ ಕಪಿಗಳನ್ನು ಅಭಿವೀಕ್ಷ್ಯ ಕಂಡು ರುಷಾ ಸಿಟ್ಟಿನಿಂದ ವೇಗೇನ ವೇಗದಿಂದ ಸಸಾರ ಹೋದನು.

**ತಾತ್ಪರ್ಯ** : ಬಲಶಾಲಿಗಳಾದ ಕಪಿಗಳೆಲ್ಲರೂ ವೃಕ್ಷ ಬಂಡೆಗಳನ್ನು ಹಿಡಿದು ರಾವಣನ ಸೈನಿಕರ ಮೇಲೆ ಎಸೆದು ಕೊಲ್ಲುತ್ತಾರೆ. ಇದರಿಂದ ಕೋಪಗೊಂಡ ಮಹೋದರನೆಂಬ ಮಂತ್ರಿಯೂ ಕೂಡಲೇ ಕಪಿಗಳನ್ನು ಸಮೀಪಿಸುತ್ತಾನೆ.

**ಮಹೋದರನನ್ನು ಸಂಹರಿಸಿದ ಅಂಗದ**

**ವೀಕ್ಷ್ಯಾ ಯತಿಕಾಯಂ ತಮಭಿದ್ರವಂತಂ**
**ಸ ಕುಂಭಕರ್ಣೋಽಯಮಿತಿ ಬ್ರುವಂತಃ ।**
**ಪ್ರದುದ್ರುವುರ್ವಾನರವೀರಸಂಘಾ-**
**ಸ್ತಮಾಸಸಾದಾಽಶು ಸುತೋಽಥ ವಾಲಿನಃ ॥ ೧೮೮ ॥**

**ಪದಚ್ಛೇದ** : **ವೀಕ್ಷ್ಯ ಯ ಅತಿಕಾಯಂ ತಮ್ ಅಭಿದ್ರವಂತಂ ಸಃ ಕುಂಭಕರ್ಣಃ ಅಯಂ ಇತಿ ಬ್ರುವಂತಃ । ಪ್ರದುದ್ರುವುಃ ವಾನರವೀರಸಂಘಾಃ ತಮ್ ಆಸಸಾದ ಆಶು ಸುತಃ ಅಥ ವಾಲಿನಃ ॥**

**ಅರ್ಥ** :- **ವಾನರವೀರಸಂಘಾಃ** ಕಪಿಶ್ರೇಷ್ಠರ ಸಮೂಹಗಳು **ಅತಿಕಾಯಂ** ದೊಡ್ಡ ದೇಹವುಳ್ಳ **ಅಭಿದ್ರುವಂತಂ** ಓಡಿ ಬರುತ್ತಿರುವಂತಹ **ತಂ** ಆ ಮಹೋದರನನ್ನು **ವೀಕ್ಷ್ಯ** ಕಂಡು **ಅಯಂ** ಇವನು **ಸಃ** ಈ ಹಿಂದೆ ಮರಣಿಸಿದಂತಹ **ಕುಂಭಕರ್ಣಃ** ಕುಂಭಕರ್ಣನು **ಇತಿ** ಹೀಗೆಂದು **ಬ್ರುವಂತಃ (ಸಂತಃ)** ಹೇಳುತ್ತಿರುವವರಾಗಿ **ಪ್ರದುದ್ರುವುಃ** ಓಡಿಹೋದರು. **ಅಥ** ಅನಂತರ **ವಾಲಿನಃ** ವಾಲಿಯ **ಸುತಃ** ಪುತ್ರನಾದ ಅಂಗದನು **ತಂ** ಆ ಮಹೋದರನನ್ನು **ಆಶು** ಕೂಡಲೇ **ಆಸಸಾದ** ಹೊಂದಿದನು.

**ತಾತ್ಪರ್ಯ** : ಕುಂಭಕರ್ಣನಂತೆ ದೊಡ್ಡ ದೇಹವುಳ್ಳ ಮಹೋದರನನ್ನು ಕಂಡ ಕಪಿಗಳು 'ಈ ಹಿಂದೆಯೇ ಹತನಾದ ಕುಂಭಕರ್ಣನೇ ಮತ್ತೊಮ್ಮೆ ಬಂದಿರುವನೆಂದು' ಕೂಗುತ್ತಾ ಓಡುತ್ತಾರೆ. ಆಗ ಅಂಗದನು ಕೂಡಲೇ ಇವನನ್ನು ಸಮೀಪಿಸಿದ.

**ವದನ್ ಸ ತಿಷ್ಠದ್ವಮಿತಿ ಸ್ಮ ವೀರೋ**
**ವಿಭೀಷಿಕಾಮಾತ್ರಮಿದಂ ನ ಯಾತ ।**
**ಇತೀರಯನ್ನಗ್ರತ ಏಷ ಪುಪ್ಲುವೇ**
**ಮಹೋದರಸ್ಯೇಂದ್ರಸುತಾತ್ಮಜೋ ಬಲೀ ॥ ೧೮೯ ॥**

ಪದಚ್ಛೇದ : ವದನ್ ಸಃ ತಿಷ್ಠಧ್ವಮ್ ಇತಿ ಸ್ಮ ವೀರಃ ವಿಭೀಷಿಕಾಮಾತ್ರಮ್ ಇದಂ ನ ಯಾತ । ಇತೀರಯನ್ ಅಗ್ರತ ಏಷಃ ಪುಪ್ಲುವೇ ಮಹೋದರಸ್ಯ ಇಂದ್ರಸುತಾತ್ಮಜಃ ಬಲೀ ॥

**ಅರ್ಥ** :- **ವೀರಃ** ಪರಾಕ್ರಮಿಯಾದ **ಬಲೀ** ಬಲಶಾಲಿಯಾದ **ಇಂದ್ರಸುತಾತ್ಮಜಃ** ಇಂದ್ರನ ಮಗನಾದ ವಾಲಿಪುತ್ರನಾದ **ಸಃ** ಆ ಅಂಗದನು **ಇದಂ** ಈ ದೊಡ್ಡದೇಹವು **ವಿಭೀಷಿಕಾಮಾತ್ರಂ** ಕೇವಲ ಭಯವನ್ನುಂಟು ಮಾಡುವಂತದ್ದು **ಇತಿ** ಹೀಗೆಂದು **ಈರಯನ್** (ಸನ್) ಹೇಳುತ್ತಿರುವವನಾಗಿ **ಅತಃ** ಹಾಗಾಗಿಯೇ **ತಿಷ್ಠಧ್ವಂ** ನಿಲ್ಲುವಂತವರಾಗಿ **ನ ಯಾತ** ಹೋಗಬೇಡಿ (**ಇತಿ** ಎಂದು) **ವದನ್** (ಸನ್) ಹೇಳುವವನಾಗಿ **ಮಹೋದರಸ್ಯ** ಮಹೋದರನ **ಅಗ್ರತ ಏವ** ಮುಂಭಾಗದಲ್ಲಿಯೇ **ಪುಪ್ಲುವೇ ಸ್ಮ** ಹಾರಿದನಷ್ಟೆ

**ತಾತ್ಪರ್ಯ** :- ಭಯಗೊಂಡು ಓಡುತ್ತಿರುವ ಕಪಿಗಳಿಗೆ ಅಂಗದನು 'ಎಲೈ ಕಪಿಗಳೇ ಈ ಮಹೋದರನ ದೇಹವು ಕೇವಲ ಭಯವನ್ನು ಹುಟ್ಟಿಸುವುದಷ್ಟೇ. ಆದ್ದರಿಂದ 'ಓಡ ಬೇಡಿ ನಿಲ್ಲಿ' ಎಂದು ಹೇಳುತ್ತಾ ತಾನು ಮಹೋದರನ ಮುಂದೆ ನಿಂತ.

**ಅಥೋ ಶರಾನಾಶು ವಿಮುಂಚಮಾನಂ**
**ಶಿರಃ ಪರಾಮೃಶ್ಯ ನಿಪಾತ್ಯ ಭೂತಲೇ ।**
**ಮಮರ್ದ ಪದ್ಭ್ಯಾಮಭವದ್ ಗತಾಸು-**
**ರ್ಮಹೋದರೋ ವಾಲಿಸುತೇನ ಚೂರ್ಣಿತಃ ॥ ೧೯೦ ॥**

ಪದಚ್ಛೇದ : ಅಥೋ ಶರಾನ್ ಆಶು ವಿಮುಂಚಮಾನಂ ಶಿರಃ ಪರಾಮೃಶ್ಯ ನಿಪಾತ್ಯ ಭೂತಲೇ । ಮಮರ್ದ ಪದ್ಭ್ಯಾ ಯಮ್ ಅಭವತ್ ಗತಾಸುಃ ಮಹೋದರಃ ವಾಲಿಸುತೇನ ಚೂರ್ಣಿತಃ ॥

**ಅರ್ಥ** :- **ಅಥೋ** ಅನಂತರ **ಶರಾನ್** ಬಾಣಗಳನ್ನು **ವಿಮುಂಚಮಾನಂ** ಬಿಡುತ್ತಿರುವ ಮಹೋದರನನ್ನು **ಆಶು** ಕೂಡಲೇ **ಶಿರಃ** ತಲೆಯನ್ನು **ಪರಾಮೃಶ್ಯ** ಹಿಡಿದು **ಭೂತಲೇ** ಭೂಮಿಯಲ್ಲಿ **ನಿಪಾತ್ಯ** ಬೀಳಿಸಿ **ಪದ್ಭ್ಯಾಂ** ಕಾಲುಗಳಿಂದ **ಮಮರ್ದ** ತುಳಿದನು. **ವಾಲಿಸುತೇನ** ವಾಲುಪುತ್ರ ಅಂಗದನಿಂದ **ಚೂರ್ಣಿತಃ** ಚೂರ್ಣಮಾಡಲ್ಪಟ್ಟ **ಮಹೋದರಃ** ಮಹೋದರನು **ಗತಾಸುಃ** ಹೋಗಲ್ಪಟ್ಟ ಪ್ರಾಣಉಳ್ಳವನು **ಅಭವತ್** ಆದನು.

**ತಾತ್ಪರ್ಯ** :- ತನ್ನ ಮೇಲೆ ಬಾಣಗಳನ್ನು ಬಿಡುತ್ತಿದ್ದ ಮಹೋದರನ ತಲೆಯನ್ನು ಹಿಡಿದು ಕೆಳಕ್ಕೆ ಬೀಳಿಸಿ ಕಾಲುಗಳಿಂದ ಚೆನ್ನಾಗಿ ಮರ್ದಿಸಿದ ಅಂಗದನು ಅವನನ್ನು ಪುಡಿಯನ್ನಾಗಿಸಿ ಪ್ರಾಣವನ್ನೇ ತೆಗೆಯುತ್ತಾನೆ.

ಅಂಗದನಿಂದ ಮಹಾಪಾರ್ಶ್ವನ ಮರಣ:

**ಅಥೋ ಮಹಾಪಾರ್ಶ್ವ ಉಪಾಜಗಾಮ**
**ಪ್ರವರ್ಷಮಾಣೋಽಸ್ಯ ಶರಾಂಬುಧಾರಾಃ ।**
**ಪ್ರಸಹ್ಯ ಚಾಽಚ್ಛಿದ್ಯ ಧನುಃ ಕರಸ್ಥಂ**
**ಸಮಾದದೇ ಖಡ್ಗಮಮುಷ್ಯ ಸೋಽಂಗದಃ ॥ ೧೯೦ ॥**

**ಪದಚ್ಛೇದ** : **ಅಥೋ ಮಹಾಪಾರ್ಶ್ವಃ ಉಪಾಜಗಾಮ ಪ್ರವರ್ಷಮಾಣಃ ಅಸ್ಯ ಶರಾಂಬುಧಾರಾಃ । ಪ್ರಸಹ್ಯ ಚ ಆಚ್ಛಿದ್ಯ ಧನುಃ ಕರಸ್ಥಂ ಸಮಾದದೇ ಖಡ್ಗಮ್ ಅಮುಷ್ಯ ಸಃ ಅಂಗದಃ ॥**

**ಅರ್ಥ : ಅಥೋ** ಅನಂತರ **ಮಹಾಪಾರ್ಶ್ವಃ** ಮಹಾಪಾರ್ಶ್ವನೆಂಬುವನು **ಅಸ್ಯ** ಈ ಅಂಗದನಿಗೆ **ಶರಾಂಬುಧಾರಾಃ** ಬಾಣಗಳೆಂಬ ಜಲಧಾರೆಗಳನ್ನು **ಪ್ರವರ್ಷಮಾಣಃ** (ಸನ್) ಸುರಿಸುವವನಾಗಿ **ಉಪಾಜಗಾಮ** ಧಾವಿಸಿದನು. **ಸಃ** ಆ **ಅಂಗದಃ** ಅಂಗದನು **ಅಮುಷ್ಯ** ಈ ಮಹಾಪಾರ್ಶ್ವನ **ಕರಸ್ಥಂ** ಹಸ್ತದಲ್ಲಿರುವ **ಧನುಃ** ಬಿಲ್ಲನ್ನು **ಪ್ರಸಹ್ಯ** ಬಲಾತ್ಕರಿಸಿ **ಆಚ್ಛಿದ್ಯ** ತುಂಡರಿಸಿ **ಚ** ಮತ್ತು **ಖಡ್ಗಂ** ಖಡ್ಗವನ್ನು **ಸಮಾದದೇ** ಹಿಡಿದನು.

**ತಾತ್ಪರ್ಯ** :- ಬಾಣಗಳ ಸುರಿಮಳೆಯನ್ನೇ ಸುರಿಸುತ್ತಾ ಮಹಾಪಾರ್ಶ್ವನು ಅಂಗದನತ್ತ ಧಾವಿಸಿದನು. ಆಗ ಬಲಪೂರ್ವಕವಾಗಿ ಅವನ ಧನುಸ್ಸನ್ನು ಕಿತ್ತು ತುಂಡರಿಸಿದ ಅಂಗದನು ಅವನ ಖಡ್ಗವನ್ನೂ ಹಿಡಿದೆಳೆಯುತ್ತಾನೆ.

**ನಿಗೃಹ್ಯ ಕೇಶೇಷು ನಿಪಾತ್ಯ ಭೂತಲೇ**
**ಚಕರ್ತ ವಾಮಾಂಸತ ಔದರಂ ಪರಮ್ ।**
**ಯಥೋಪವೀತಂ ಸ ತಥಾ ದ್ವಿಧಾಕೃತೋ**
**ಮಮಾರ ಮಂತ್ರೀ ರಜನೀಚರೇಶಿತುಃ ॥ ೧೯೨ ॥**

ಪದಚ್ಛೇದ : ನಿಗೃಹ್ಯ ಕೇಶೇಷು ನಿಪಾತ್ಯ ಭೂತಲೇ ಚಕರ್ತ ವಾಮಾಂಸತಃ ಔದರಂ ಪರಮ್ । ಯಥಾ ಉಪವೀತಂ ಸಃ ತಥಾ ದ್ವಿಧಾಕೃತಃ ಮಮಾರ ಮಂತ್ರೀ ರಜನೀಚರೇಶಿತುಃ ॥

**ಅರ್ಥ** :- **ಸಃ** ಅಂಗದನು **ಕೇಶೇಷು** ತಲೆಕೂದಲುಗಳಲ್ಲಿ **ನಿಗೃಹ್ಯ** ಹಿಡಿದು **ಭೂತಲೇ** ಭೂಮಿಯಲ್ಲಿ **ನಿಪಾತ್ಯ** ಕೆಡವಿ **ವಾಮಾಂಸತಃ** ಎಡ ಭುಜದಿಂದ ಆರಂಭಿಸಿ **ಔದರಂ ಪರಂ** ಬಲ ಉದರವರೆಗಿರುವ ಪ್ರದೇಶವನ್ನು **ಯಥೋಪ ವೀತಂ** ಉಪವೀತವು ಹೇಗೆ ಇರುವುದೋ **ತಥಾ** ಹಾಗೆಯೇ **ಚಕರ್ತ** ತುಂಡರಿಸಿದ. **ಧ್ವಿಧಾಕೃತಃ** ಎರಡಾಗಿ ಸೀಳಲ್ಪಟ್ಟ ಅಂಗದನಿಂದ **ರಜನೀಚರೇಶಿತುಃ** ರಾವಣನ **ಮಂತ್ರೀ** ಮುತ್ರಿಯಾದ ಮಹಾಪಾರ್ಶ್ವನು **ಮಮಾರ** ಸತ್ತನು.

**ತಾತ್ಪರ್ಯ** :- ಮಹಾಪರ್ಶ್ವನ ತಲೆಗೂದಲನ್ನು ಹಿಡಿದು ಬೀಳಿಸಿದ ಅಂಗದನು ಯಜ್ಞೋಪವೀತವು ಯಾವರೀತಿ ಎಡಭುಜದಿಂದ ಬಲ ಉದರವರೆಗೆ ಇರುವುದೋ ಹಾಗೆಯೇ ಅವನನ್ನು ಸೀಳಿ ಹಾಕುವನು. ಹೀಗೆ ರಾವಣನ ಇನ್ನೊಬ್ಬ ಮಂತ್ರಿಯಾದ ಮಹಾಪರ್ಶ್ವನೂ ಹತನಾಗುತ್ತಾನೆ.

### ಅಂಗದನ ಪರಾಜಯ

**ಅಥೈನಮಾಜಗ್ಮತುರುದ್ಯತಾಯುಧೌ**
**ವಿರೂಪನೇತ್ರೋSಪ್ಯಥ ಯೂಪನೇತ್ರಃ ।**
**ಯಥೈವ ಮೇಘೌ ದಿವಿ ತಿಗ್ಮರಶ್ಮಿಂ**
**ತಥಾ ಸಮಾಚ್ಛಾದಯತಾಂ ಶರೌಘೈಃ ॥ ೧೯೩ ॥**

ಪದಚ್ಛೇದ : ಅಥ ಏನಮ್ ಆಜಗ್ಮತುಃ ಉದ್ಯತಾಯುಧೌ ವಿರೂಪನೇತ್ರಃ ಅಪಿ ಅಥ ಯೂಪನೇತ್ರಃ । ಯಥಾ ಏವ ಮೇಘೌ ದಿವಿ ತಿಗ್ಮರಶ್ಮಿಂ ತಥಾ ಸಮಾಚ್ಛಾದಯತಾಂ ಶರೌಘೈಃ ॥

**ಅರ್ಥ** :- **ಅಥ** ಅನಂತರ **ಉದ್ಯತಾಯುಧೌ** ಹಿಡಿಯಲ್ಪಟ್ಟ ಆಯುಧವುಳ್ಳ **ವಿರೂಪನೇತ್ರಃ** ವಿರೂಪನೇತ್ರನೆಂಬುವನು **ಅಥ** ಅನಂತರ **ಯೂಪನೇತ್ರಂ ಅಪಿ** ಯೂಪನೇತ್ರನೆಂಬುವವನೂ ಕೂಡ **ಏನಂ** ಈ ಅಂಗದನನ್ನು **ಮೇಘೌ** ಮೋಡಗಳು **ದಿವಿ** ಆಕಾಶದಲ್ಲಿ **ತಿಗ್ಮರಶ್ಮಿಂ** ತೀಕ್ಷ್ಣಕಿರಣವುಳ್ಳ ಸೂರ್ಯನನ್ನು **ಯಥಾ** ಹೇಗೆ ಆಚ್ಛಾದಿಸುವವೋ **ತಥಾ** ಹಾಗೆಯೇ **ಶರೋಘೈಃ** ಬಾಣಗಳ ಸಮೂಹದಿಂದ **ಸಮಾಚ್ಛಾದಯತಾಂ** ಮುಚ್ಚಿಬಿಟ್ಟರು.

**ತಾತ್ಪರ್ಯ** :- ರಾವಣನ ವಿರೂಪನೇತ್ರ ಹಾಗು ಯೂಪನೇತ್ರರೆಂಬ ಮಂತ್ರಿದ್ವಯರು ಬಾಣಗಳ ಮಳೆಯನ್ನು ಅಂಗದನ ಮೇಲೆ ಸುರಿಸುತ್ತಾರೆ. ಮೋಡಗಳು ಹೇಗೆ ಸೂರ್ಯನ ತೀಕ್ಷ್ಣ ಕಿರಣಗಳನ್ನು ಮುಚ್ಚುವುವೋ ಹಾಗೆಯೇ ಇವರೂ ಬಾಣಗಳಿಂದ ಅಂಗದನನ್ನು ಮುಚ್ಚಿಬಿಡುತ್ತಾರೆ.

**ಸುಗ್ರೀವನಿಂದ ವಿರೂಪನೇತ್ರ ಯೂಪನೇತ್ರರ ಸಂಹಾರ**

**ತಾಭ್ಯಾಂ ಸ ಬದ್ಧಃ ಶರಪಂಜರೇಣ**
**ವಿಚೇಷ್ಟಿತುಂ ನಾಶಕದತ್ರ ವೀರಃ ।**
**ಹರೀಶ್ವರಃ ಶೈಲಮತಿಪ್ರಮಾಣ-**
**ಮುತ್ಪಾಟ್ಯ ಚಿಕ್ಷೇಪ ತಯೋಃ ಶರೀರೇ ॥ ೧೯೪ ॥**

ಪದಚ್ಛೇದ : ತಾಭ್ಯಾಂ ಸಃ ಬದ್ಧಃ ಶರಪಂಜರೇಣ ವಿಚೇಷ್ಟಿತುಂ ನ ಅಶಕತ್ ಅತ್ರ ವೀರಃ । ಹರೀಶ್ವರಃ ಶೈಲಮ್ ಅತಿಪ್ರಮಾಣಮ್ ಉತ್ಪಾಟ್ಯ ಚಿಕ್ಷೇಪ ತಯೋಃ ಶರೀರೇ ॥

**ಅರ್ಥ** :- **ಅತ್ರ** ಈ ರಣರಂಗದಲ್ಲಿ **ತಾಭ್ಯಾಂ** ಆ ಮಂತ್ರದ್ವಯರಿಂದ **ಬದ್ಧಃ** ಕಟ್ಟಲ್ಪಟ್ಟ **ವೀರಃ** ವೀರನಾದ **ಸಃ** ಆ ಅಂಗದನು **ವಿಚೇಷ್ಟಿತುಂ** ಕೈಕಾಲುಗಳ ಚಲನವ್ಯಾಪಾರವನ್ನು ಮಾಡಲು **ನಾಶಕತ್** ಶಕ್ಯನಾಗಲಿಲ್ಲ. **ಹರೀಶ್ವರಃ** ಸುಗ್ರೀವನು **ಅತಿಪ್ರಮಾಣಂ** ಅತ್ಯಂತ ದೊಡ್ಡದಾದ **ಶೈಲಂ** ಪರ್ವತವನ್ನು **ಉತ್ಪಾಟ್ಯ** ಕಿತ್ತಿ **ತಯೋಃ** ಅವರಿಬ್ಬರ **ಶರೀರೇ** ಶರೀರದಲ್ಲಿ **ಚಿಕ್ಷೇಪ** ಎಸೆದನು.

**ತಾತ್ಪರ್ಯ** :- ಹೀಗೆ ವಿರೂಪನೇತ್ರಯೂಪನೇತ್ರರು ಬಾಣಗಳ ಮಳೆ ಗರೆದು ಅಂಗದನನ್ನು ಕೈಕಾಲು ಆಡಿಸದಂತೆ ಬಂಧಿಸುತ್ತಾರೆ. ಆಗ ಸುಗ್ರೀವನು ದೊಡ್ಡ ಪರ್ವತವನ್ನೇ ಕಿತ್ತು ಅವರ ಮೇಲೆ ಎಸೆಯುತ್ತಾನೆ.

**ಉಭೌ ಚ ತೌ ತೇನ ವಿಚೂರ್ಣಿತೌ**
**ರಣೇ ರವೇಃ ಸುತಸ್ಯೋರುಬಲೇರಿತೇನ ।**
**ನಿಶಾಚರೇಶೋಽಥ ಶರೇಣ ಸೂರ್ಯಜಂ**
**ಬಿಭೇದ ವಕ್ಷಸ್ಯಪಿ ಸೋಽಪತದ್ ಭುವಿ ॥ ೧೯೫ ॥**

ಪದಚ್ಛೇದ : ಉಭೌ ಚ ತೌ ತೇನ ವಿಚೂರ್ಣಿತೌ ರಣೇ ರವೇಃ ಸುತಸ್ಯ ಉರುಬಲೇರಿತೇನ । ನಿಶಾಚರೇಶಃ ಅಥ ಶರೇಣ ಸೂರ್ಯಜಂ ಬಿಭೇದ ವಕ್ಷಸಿ ಅಪಿ ಸಃ ಅಪತತ್ ಭುವಿ ॥

**ಅರ್ಥ** :- **ರವೇಃ** ಸೂರ್ಯನ **ಸುತಸ್ಯ** ಸುತನಾದ ಸುಗ್ರೀವನ **ಉರುಬಲೇರಿತೇನ** ಉತ್ಕೃಷ್ಟ ಬಲದಿಂದ ಪ್ರೇರಿಸಲ್ಪಟ್ಟ **ತೇನ** ಆ ಪರ್ವತದಿಂದ **ತೌ** ಆ **ಉಭೌ ಚ** ವಿರೂಪನೇತ್ರ ಹಾಗು ಯೂಪನೇತ್ರರಾದರೋ **ರಣೇ** ಯುದ್ಧದಲ್ಲಿ **ವಿಚೂರ್ಣಿತೌ** ಚೂರ್ಣದಂತೆ ಮಾಡಲ್ಪಟ್ಟರು. **ಅಥ** ಅನಂತರ **ನಿಶಾಚರೇಶಃ** ರಾವಣನು **ಸೂರ್ಯಜಂ** ಸುಗ್ರೀವನನ್ನು **ಶರೇಣ** ಬಾಣದಿಂದ **ವಕ್ಷಸಿ** ಎದೆಯಲ್ಲಿ **ಬಿಭೇದ** ಹೊಡೆದನು. **ಸೋಽಪಿ** ಆ ಸುಗ್ರೀವನಾದರೋ **ಭುವಿ** ಭೂಮಿಯಲ್ಲಿ **ಅಪತತ್** ಬಿದ್ದನು.

**ತಾತ್ಪರ್ಯ** :- ಸುಗ್ರೀವನು ಬಲವಾಗಿ ಎಸೆದ ಪರ್ವತವು ವಿರೂಪನೇತ್ರ ಯೂಪನೇತ್ರರ ಮೇಲೆ ಬಿದ್ದು ಪುಡಿಪುಡಿಯಾಗುತ್ತಾರೆ. ಆ ಕೂಡಲೇ ರಾವಣನು ಸುಗ್ರೀವನ ಎದೆಗೆ ಬಾಣವನ್ನು ಬಿಡುತ್ತಾನೆ. ಆ ಬಾಣವು ತಾಗಿ ಸುಗ್ರೀವನು ನೆಲಕ್ಕೆ ಬೀಳುತ್ತಾನೆ.

**ಲಕ್ಷ್ಮಣರಾವಣರ ಯುದ್ಧ**

**ತತಃ ಸ ಸರ್ವಾಂಶ್ಚ ಹರಿಪ್ರವೀರಾನ್**
**ವಿಧೂಯ ಬಾಣೈರ್ಬಲವಾನ್ ದಶಾನನಃ ।**
**ಜಗಾಮ ರಾಮಾಭಿಮುಖಸ್ತದೈನಂ**
**ರುರೋಧ ರಾಮಾವರಜಃ ಶರೌಘೈಃ ॥ ೧೯೬ ॥**

ಪದಚ್ಛೇದ : ತತಃ ಸಃ ಸರ್ವಾನ್ ಚ ಹರಿಪ್ರವೀರಾನ್ ವಿಧೂಯ ಬಾಣೈಃ ಬಲವಾನ್ ದಶಾನನಃ । ಜಗಾಮ ರಾಮಾಭಿಮುಖಃ ತದಾ ಏನಂ ರುರೋಧ ರಾಮಾವರಜಃ ಶರೌಘೈಃ ॥

**ಅರ್ಥ** :- **ತತಃ** ಅನಂತರ **ಬಲವಾನ್** ಬಲಿಷ್ಠನಾದ **ದಶಾನನಃ ತು** ರಾವಣನಾದರೋ **ಸರ್ವಾನ್** ಎಲ್ಲಾ **ಹರಿಪ್ರವೀರಾನ್ ಚ** ಕಪಿಶ್ರೇಷ್ಠರನ್ನೂ ಕೂಡ **ಬಾಣೈಃ** ಬಾಣಗಳಿಂದ **ವಿಧೂಯ** ಓಡಿಸಿ **ಚ** ಮತ್ತು **ರಾಮಾಭಿಮುಖಃ (ಸನ್)** ರಾಮನಿಗೆ ಅಭಿಮುಖನಾದವನಾಗಿ **ಜಗಾಮ** ಹೋದನು. **ತದಾ** ಆಗ **ರಾಮಾವರಜಃ** ರಾಮನ ಅನುಜನಾದ ಲಕ್ಷ್ಮಣನು **ಏನಂ** ಈ ರಾವಣನನ್ನು **ಶರೌಘೈಃ** ಬಾಣಗಳಿಂದ **ರುರೋಧ** ಪ್ರತಿರೋಧಿಸಿದನು.

**ತಾತ್ಪರ್ಯ** :- ಬಲಶಾಲಿಯಾದ ರಾವಣನು ಅನೇಕಬಾಣಗಳಿಂದ ಕಪಿ ವೀರನ್ನೆಲ್ಲಾ ಪಲಾಯನಮಾಡಿಸಿ ರಾಮನನ್ನೇ ಎದುರಿಸಲು ಬಂದಾಗ ಲಕ್ಷ್ಮಣನು ಬಾಣಗಳ ಸಮೂಹದಿಂದ ರಾವಣನಿಗೆ ಪ್ರತಿರೋಧ ಒಡ್ಡುತ್ತಾನೆ.

**ಶಕ್ತ್ಯಾಯುಧದಿಂದ ಮೂರ್ಛೆಗೊಂಡ ಲಕ್ಷ್ಮಣ**

**ತದಾ ದಶಾಸ್ಯೋಽಂತಕದಂಡಕಲ್ಪಾಂ**
**ಮಯಾಯ ದತ್ತಾಂ ಕಮಲೋದ್ಭವೇನ ।**
**ಮಯಾದ್ಗೃಹೀತಾಂ ಚ ವಿವಾಹಕಾಲೇ**
**ಪ್ರಗೃಹ್ಯ ಶಕ್ತಿಂ ವಿಸಸರ್ಜ ಲಕ್ಷ್ಮಣೇ ॥ ೧೯೭ ॥**

ಪದಚ್ಛೇದ : ತದಾ ದಶಾಸ್ಯಃ ಅಂತಕದಂಡಕಲ್ಪಾಂ ಮಯಾಯ ದತ್ತಾಂ ಕಮಲೋದ್ಭವೇನ । ಮಯಾತ್ ಗೃಹೀತಾಂ ಚ ವಿವಾಹಕಾಲೇ ಪ್ರಗೃಹ್ಯ ಶಕ್ತಿಂ ವಿಸಸರ್ಜ ಲಕ್ಷ್ಮಣೇ ॥

**ಅರ್ಥ** :- **ತದಾ** ಆಗ **ದಶಾಸ್ಯಃ** ರಾವಣನು **ಅಂತಕದಂಡಕಲ್ಪಾಂ** ಯಮನ ದಂಡಕ್ಕೆ ಸದೃಶವಾದ **ಕಮಲೋದ್ಭವೇನ** ಬ್ರಹ್ಮದೇವನಿಂದ **ಮಯಾಯ** ಮಯಾಸುರನಿಗಾಗಿ **ದತ್ತಾಂ** ಕೊಡಲ್ಪಟ್ಟ **ವಿವಾಹಕಾಲೇ** ವಿವಾಹ ಕಾಲದಲ್ಲಿ **ಮಯಾತ್** ಮಯನಿಂದ **ಗೃಹೀತಾಂ ಚ** ಸ್ವೀಕರಿಸಲ್ಪಟ್ಟಿರುವುದೂ ಆದ **ಶಕ್ತಿಂ** ಶಕ್ತಿ ಎಂಬ ಆಯುಧವಿಶೇಷವನ್ನು **ಪ್ರಗೃಹ್ಯ** ಹಿಡಿದು **ಲಕ್ಷ್ಮಣೇ** ಲಕ್ಷ್ಮಣನಲ್ಲಿ **ವಿಸಸರ್ಜ** ಪ್ರಯೋಗಿಸಿದನು.

**ತಾತ್ಪರ್ಯ** :- ಆಗ ರಾವಣನು ಯಮದಂಡದಂತಿದ್ದ 'ಶಕ್ತಿ' ಎಂಬ ಆಯುಧವನ್ನು ಲಕ್ಷ್ಮಣನ ಮೇಲೆ ಪ್ರಯೋಗಿಸುತ್ತಾನೆ. ಶಕ್ತಿ ಎಂಬ ಆಯುಧವು 'ಮಯಾಸುರ'ನೆಂಬ ಶಿಲ್ಪಿಗೆ ಬ್ರಹ್ಮದೇವರಿಂದ ದೊರೆತಿತ್ತು. ಅದನ್ನು ತನ್ನ ಮಗಳಾದ ಮಂಡೋದರಿಯನ್ನು ರಾವಣನಿಗೆ ವಿವಾಹ ಮಾಡಿಕೊಡುವಾಗ ಉಡುಗೊರೆ ರೂಪದಲ್ಲಿ ಕೊಟ್ಟಿದ್ದನು.

**ತಯಾ ಸ ವೀರಃ ಸುವಿದಾರಿತೋರಾಃ**
**ಪಪಾತ ಭೂಮೌ ಸುಭೃಶಂ ವಿಮೂರ್ಛಿತಃ ।**
**ಮರುತ್ಸುತಃ ಶೈಲಮತಿಪ್ರಮಾಣಂ**
**ಚಿಕ್ಷೇಪ ರಕ್ಷಃಪತಿವಕ್ಷಸಿ ದ್ರುತಮ್ ॥ ೧೯೮ ॥**

**ಪದಚ್ಛೇದ : ತಯಾ ಸಃ ವೀರಃ ಸುವಿದಾರಿತೋರಾಃ ಪಪಾತ ಭೂಮೌ ಸುಭೃಶಂ ವಿಮೂರ್ಛಿತಃ । ಮರುತ್ಸುತಃ ಶೈಲಮ್ ಅತಿಪ್ರಮಾಣಂ ಚಿಕ್ಷೇಪ ರಕ್ಷಃಪತಿವಕ್ಷಸಿ ದ್ರುತಮ್ ॥**

**ಅರ್ಥ :-** **ತಯಾ** ಆ ಶಕ್ತ್ಯಾಯುಧದಿಂದ **ಸುದಾರಿತೋರಾಃ** ಚೆನ್ನಾಗಿ ಸೀಳಲ್ಪಟ್ಟ ಎದೆಯುಳ್ಳ **ಸುಭೃಶಂ** ಚೆನ್ನಾಗಿ **ವಿಮೂರ್ಛಿತಃ** ಮೂರ್ಛೆಯನ್ನು ಹೊಂದಿದ **ವೀರಃ** ವೀರನಾದ **ಸಃ** ಆ ಲಕ್ಷ್ಮಣನು **ಭೂಮೌ** ಭೂಮಿಯಲ್ಲಿ **ಪಪಾತ** ಬಿದ್ದನು. **ಮರುತ್ಸುತಃ** ಹನುಮಂತನು **ಅತಿಪ್ರಮಾಣಂ** ಬೃಹತ್ಗಾತ್ರದ **ಶೈಲಂ** ಪರ್ವತವನ್ನು **ರಕ್ಷಃಪತಿವಕ್ಷಸಿ** ರಾವಣನ ಎದೆಯಲ್ಲಿ **ದ್ರುತಂ** ಕೂಡಲೇ **ಚಿಕ್ಷೇಪ** ಎಸೆದನು.

**ತಾತ್ಪರ್ಯ :-** ರಾವಣನು ಎಸೆದ ಶಕ್ತ್ಯಾಯುಧದ ಪೆಟ್ಟಿಗೆ ಲಕ್ಷ್ಮಣನ ಎದೆಯು ಸೀಳಿ ಇದರಿಂದ ಮೂರ್ಛೆ ಹೊಂದಿ ಕೆಳಗೆ ಬೀಳುತ್ತಾನೆ. ಆಗ ಹನುಮಂತನು ದೊಡ್ಡ ಪರ್ವತವನ್ನೇ ರಾವಣನ ಮೇಲೆ ಎಸೆಯುತ್ತಾನೆ.

### ಲಕ್ಷ್ಮಣನನ್ನು ರಕ್ಷಿಸಿದ ಹನುಮ

**ತೇನಾತಿಗಾಢಂ ವ್ಯಥಿತೋ ದಶಾನನೋ**
**ಮುಖೈರ್ವಮನ್ ಶೋಣಿತಪೂರಮಾಶು ।**
**ತದಂತರೇಣ ಪ್ರತಿಗೃಹ್ಯ ಲಕ್ಷ್ಮಣಂ**
**ಜಗಾಮ ಶಕ್ತ್ಯಾ ಯ ಸಹ ರಾಮಸನ್ನಿಧಿಮ್ ॥ ೧೯೯ ॥**

ಪದಚ್ಛೇದ : ತೇನ ಅತಿಗಾಢಂ ವ್ಯಥಿತಃ ದಶಾನನಃ ಮುಖೈಃ ವಮನ್ ಶೋಣಿತಪೂರಂ ಆಶು । ತದಂತರೇಣ ಪ್ರತಿಗೃಹ್ಯ ಲಕ್ಷ್ಮಣಂ ಜಗಾಮ ಶಕ್ತ್ಯಾ ಯ ಸಹ ರಾಮಸನ್ನಿಧಿಮ್॥

**ಅರ್ಥ :-** **ತೇನ** ಆ ಪರ್ವತವು ತನ್ನ ಮೇಲೆ ಬೀಳುವಿಕೆಯಿಂದ **ಅತಿಗಾಢಂ** ಬಹುವಾಗಿ **ವ್ಯಥಿತಃ** ದುಃಖಪಟ್ಟ **ದಶಾನನಃ** ರಾವಣನು **ಮುಖೈಃ** ಮುಖಗಳಿಂದ **ಶೋಣಿತಪೂರಂ** ರಕ್ತದ ಪ್ರವಾಹವನ್ನು **ಆಶು** ಕೂಡಲೇ **ವಮನ್** ವಾಂತಿಮಾಡುವವನು (**ಅಭೂತ್** ಆದನು) **ತದಂತರೇ** ಈ ಮಧ್ಯದಲ್ಲಿ **ಸಃ** ಆ ಹನುಮಂತನು **ಲಕ್ಷ್ಮಣಂ** ಲಕ್ಷ್ಮಣನನ್ನು **ಶಕ್ತ್ಯಾ ಸಹ** ಶಕ್ತಿ ಎಂಬ ಆಯುಧದೊಂದಿಗೆ **ಪ್ರಗೃಹ್ಯ** ಹಿಡಿದುಕೊಂಡು **ರಾಮಸನ್ನಿಧಿಂ** ರಾಮನಸನಿಹವನ್ನು **ಜಗಾಮ** ಹೋದನು.

**ತಾತ್ಪರ್ಯ** : ಹನುಮಂತನು ಎಸೆದ ಪರ್ವತ ರಾವಣನ ಮೇಲೆ ಬಿದ್ದಾಗ ನೋವುಂಡ ರಾವಣನು ತನ್ನ ಹತ್ತು ಮುಖಗಳಿಂದಲೂ ರಕ್ತದ ಪ್ರವಾಹವನ್ನೇ ವಾಂತಿಮಾಡುತ್ತಾನೆ. ಅಷ್ಟರಲ್ಲಿಯೇ ಶಕ್ತ್ಯಾಯುಧದೊಂದಿಗೆ ಲಕ್ಷ್ಮಣನನ್ನೂ ಎತ್ತಿ ಹಿಡಿದ ಹನುಮಂತನು ರಾಮನ ಹತ್ತಿರ ಬರುತ್ತಾನೆ.

**ರಾಮಾಜ್ಞೆಯಂತೆ ಪುನಃ ಸಂಜೀವಿನೀ ತಂದ ಹನುಮಂತ**

**ಸಮುದ್ಬಬರ್ಹಾಥ ಚ ತಾಂ ಸ ರಾಘವೋ**
**ದಿದೇಶ ಚ ಪ್ರಾಣವರಾತ್ಮಜಂ ಪುನಃ ।**
**ಪ್ರಭುಃ ಸಮಾನೇತುಮಥೋ ವರೌಷಧೀಃ**
**ಸ ಚಾಽನಿನಾಯಾಽಽಶು ಗಿರಿಂ ಪುನಸ್ತಮ್ ॥ ೨೦೦ ॥**

ಪದಚ್ಛೇದ : ಸಮುದ್ಬಬರ್ಹ ಅಥ ಚ ತಾಂ ಸಃ ರಾಘವಃ ದಿದೇಶ ಚ ಪ್ರಾಣವರಾತ್ಮಜಂ ಪುನಃ । ಪ್ರಭುಃ ಸಮಾನೇತುಮ್ ಅಥೋ ವರೌಷಧೀಃ ಸಃ ಚಾಽನಿನಾಯ ಆಶು ಗಿರಿಂ ಪುನಃ ತಮ್ ॥

**ಅರ್ಥ** :- **ಪ್ರಭುಃ** ಸ್ವಾಮಿಯಾದ **ಸಃ** ಆ **ರಾಘವಃ** ರಾಮನು **ತಾಂ** ಆ ಶಕ್ತ್ಯಾಯುಧವನ್ನು **ಸಮುದ್ಬಬರ್ಹ** ಕಿತ್ತು ಹಾಕಿದನು. **ಅಥ** ಅನಂತರ **ಪುನಶ್ಚ** ಮತ್ತೂ ಕೂಡ **ವರೌಷಧಿಂ** ಶ್ರೇಷ್ಠ ಔಷಧಿಗಳನ್ನು **ಸಮಾನೇತುಂ** ತರುವುದಕ್ಕಾಗಿ **ಪ್ರಾಣವರಾತ್ಮಜಂ** ಮುಖ್ಯಪ್ರಾಣನ ಪುತ್ರನಾದ ಹನುಮಂತನನ್ನು **ದಿದೇಶ** ಆದೇಶಿಸಿದನು. **ಅಥೋ** ಅನಂತರ **ಸಚ** ಆ ಹನುಮನಾದರೋ **ತಂ** ಅಂತಹ **ಗಿರಿಂ** ಗಂಧಮಾದನಪರ್ವತವನ್ನು **ಪುನಃ** ಮತ್ತೊಮ್ಮೆ **ಆಶು** ಕೂಡಲೇ **ಆನಿನಾಯ** ತಂದನು.

**ತಾತ್ಪರ್ಯ** :- ಲಕ್ಷ್ಮಣನಿಗೆ ನಾಟಿದ ಶಕ್ತ್ಯಾಯುಧವನ್ನು ಎದೆಯಿಂದ ಕಿತ್ತಿದ ರಾಮನು ಇನ್ನೊಮ್ಮೆ ಶ್ರೇಷ್ಠಔಷಧಿಗಳನ್ನು ತರುವುದಕ್ಕೆ ಹನುಮಂತನಿಗೆ ಆಜ್ಞಾಪಿಸಿದ. ಆ ಕೂಡಲೇ ಹೊರಟ ಹನುಮಂತನು ಆಗ ಗಂಧಮಾದನ ಪರ್ವತವನ್ನು ಆ ಕ್ಷಣದಲ್ಲಿಯೇ ತರುತ್ತಾನೆ.

ಎದ್ದ ಲಕ್ಷ್ಮಣ, ರಾಮನಿಂದ ಹನುಮಪ್ರಶಂಸೆ

**ತದ್ಗಂಧಮಾತ್ರೇಣ ಸಮುತ್ಥಿತೋಽಸೌ**
**ಸೌಮಿತ್ರಿರಾತ್ತೋರುಬಲಶ್ಚ ಪೂರ್ವವತ್ ।**
**ಶಶಂಸ ಚಾಽಶ್ಲಿಷ್ಯ ಮರುತ್ಸುತಂ ಪ್ರಭುಃ**
**ಸ ರಾಘವೋಽಗಣ್ಯಗುಣಾರ್ಣವಃ ಸ್ಮಯನ್ ॥ ೨೦೧ ॥**

ಪದಚ್ಛೇದ : ತದ್ಗಂಧಮಾತ್ರೇಣ ಸಮುತ್ಥಿತಃ ಅಸೌ ಸೌಮಿತ್ರಿಃ ಆತ್ತೋರುಬಲಃ ಚ ಪೂರ್ವವತ್ । ಶಶಂಸ ಚ ಆಶ್ಲಿಷ್ಯ ಮರುತ್ಸುತಂ ಪ್ರಭುಃ ಸಃ ರಾಘವಃ ಅಗಣ್ಯಗುಣಾರ್ಣವಃ ಸ್ಮಯನ್ ॥

**ಅರ್ಥ** :- **ಸೌಮಿತ್ರಿಃ** ಸುಮಿತ್ರೆಯ ಮಗನಾದ **ಅಸೌ** ಈ ಲಕ್ಷ್ಮಣನು **ತತ್** ಆ ಔಷಧಿಸಸ್ಯಗಳ **ಗಂಧಮಾತ್ರೇಣ** ಸುವಾಸನೆಯ ಮಾತ್ರದಿಂದಲೇ **ಪೂರ್ವವತ್** ಮೊದಲಿದ್ದಂತೆಯೇ **ಆತ್ತೋರುಬಲಃ (ಸನ್)** ಹೊಂದಲ್ಪಟ್ಟ ಉತ್ಕೃಷ್ಟವಾದ ಬಲವುಳ್ಳವನಾಗಿ **ಸಮುತ್ಥಿತಃ** ಎದ್ದನು. **ಅಗಣ್ಯಗುಣಾರ್ಣವಃ** ಎಣಿಸಲು ಅಸಾಧ್ಯವಾದ ಗುಣಗಳಿಂದ ಸಮುದ್ರದಂತಿರುವ **ಪ್ರಭುಃ** ಸ್ವಾಮಿಯಾದ **ಸಃ** ಆ **ರಾಘವಃ** ಶ್ರೀರಾಮನು **ಸ್ಮಯನ್(ಸನ್)** ಮಂದಹಾಸ ಬೀರುವವನಾಗಿ **ಮರುತ್ಸುತಂ** ಹನುಮಂತನನ್ನು **ಆಶ್ಲಿಷ್ಯ** ಆಲಿಂಗಿಸಿ **ಚ** ಮತ್ತು **ಶಶಂಸ ಚ** ಹೊಗಳಿದನೂ ಕೂಡ.

**ತಾತ್ಪರ್ಯ** :- ಗಂಧಮಾದನ ಪರ್ವತದಲ್ಲಿರುವ ಔಷಧಿಸಸ್ಯಗಳ ಪರಿಮಳ ಮಾತ್ರದಿಂದಲೇ ಲಕ್ಷ್ಮಣನು ಮೊದಲಿನಂತೆಯೇ ಅತಿಬಲಶಾಲಿಯಾಗಿ ಎಳುತ್ತಾನೆ. ಆಗ ಮಂದಹಾಸದಿಂದ ಹನುಮಂತನನ್ನು ಆಲಿಂಗಿಸಿದ ಶ್ರೀರಾಮನು ಅವನ ಕಾರ್ಯವನ್ನು ಪ್ರಶಂಸಿಸುತ್ತಾನೆ.

ಪುನಃ ಸ್ವಸ್ಥಾನವನ್ನು ಸೇರಿದ ಪರ್ವತ

**ಪ್ರಾಕ್ಷಿಪತ್ ತಂ ಗಿರಿವರಂ ಲಂಕಾಸ್ಥಃ ಸನ್ ಸ ಮಾರುತಿಃ ।**
**ಅರ್ಧಲಕ್ಷೇ ಯೋಜನಾನಾಂ ಯತ್ರಾಸೌ ಪೂರ್ವಸಂಸ್ಥಿತಃ ॥೨೦೨॥**

ಪದಚ್ಛೇದ : ಪ್ರಾಕ್ಷಿಪತ್ ತಂ ಗಿರಿವರಂ ಲಂಕಾಸ್ಥಃ ಸನ್ ಸಃ ಮಾರುತಿಃ । ಅರ್ಧಲಕ್ಷೇ ಯೋಜನಾನಾಂ ಯತ್ರ ಅಸೌ ಪೂರ್ವಸಂಸ್ಥಿತಃ ॥

**ಅರ್ಥ** :- **ಸಃ** ಆ **ಮಾರುತಿಃ** ಹನುಮಂತನು **ಲಂಕಾಸ್ಥಃ (ಸನ್)** ಲಂಕೆಯಲ್ಲಿರತಕ್ಕವನಾಗಿಯೇ **ಯೋಜನಾನಾಂ** ಯೋಜನೆಗಳ **ಅರ್ಧಲಕ್ಷೇ** ಅರ್ಧಲಕ್ಷದಷ್ಟು ದೂರವಿರುವ ಪ್ರದೇಶದಲ್ಲಿ **ಅಸೌ** ಈ ಪರ್ವತದ ಒಂದು ಭಾಗವು **ಯತ್ರ** ಯಾವ ಭಾಗದಲ್ಲಿ **ಪೂರ್ವಸಂಸ್ಥಿತಃ** ಮೊದಲು ಇದ್ದಿತ್ತೋ **ತತ್ರೈವ** ಆ ಭಾಗದಲ್ಲಿಯೇ **ಗಿರಿವರಂ** ಶ್ರೇಷ್ಠಪರ್ವತವಾದ **ತಂ** ಆ ಪರ್ವತದ ಒಂದು ಖಂಡವನ್ನು **ಪ್ರಾಕ್ಷಿಪತ್** ಎಸೆದನು.

**ತಾತ್ಪರ್ಯ** :- ಶ್ರೇಷ್ಠಪರ್ವತವಾದ ಗಂಧಮಾದನ ಒಂದು ಭಾಗವನ್ನು ಲಂಕೆಯಲ್ಲಿ ಇದ್ದುಕೊಂಡೇ ಹನುಮಂತನು ಅಲ್ಲಿಂದ ಅರ್ಧಲಕ್ಷಯೋಜನ ದೂರವುಳ್ಳ ಮೇರುಪರ್ವತದ ಸನಿಹದ ಮೊದಲಿನ ಪ್ರದೇಶಕ್ಕೆ ಎಸೆದ.

**ತದ್ಬಾಹುವೇಗಾತ್ ಸಂಶ್ಲೇಷಂ ಪ್ರಾಪ ಪೂರ್ವವದೇವ ಸಃ ।**
**ಮೃತಾಶ್ಚ ಯೇ ಪ್ಲವಂಗಾಸ್ತು ತದ್ಗಂಧಾತ್ ತೇಽಪಿ ಜೀವಿತಾಃ ॥ ೨೦೩ ॥**

ಪದಚ್ಛೇದ : ತದ್ಬಾಹುವೇಗಾತ್ ಸಂಶ್ಲೇಷಂ ಪ್ರಾಪ ಪೂರ್ವವತ್ ಏವ ಸಃ । ಮೃತಾಃ ಚ ಯೇ ಪ್ಲವಂಗಾಃ ತು ತದ್ಗಂಧಾತ್ ತೇ ಅಪಿ ಜೀವಿತಾಃ ॥

**ಅರ್ಥ** :- **ಸಃ** ಪರ್ವತದ ಆ ಭಾಗವು **ತದ್ಬಾಹುವೇಗಾತ್** ಆ ಹನುಮಂತನ ಬಾಹುಗಳ ವೇಗದ ದೆಸೆಯಿಂದ **ಪೂರ್ವವದೇವ** ಮೊದಲಿದ್ದಂತೆಯೇ **ಸಂಶ್ಲೇಷಂ** ಚೆನ್ನಾಗಿ ಸಂಬಂಧವನ್ನು **ಪ್ರಾಪ** ಹೊಂದಿತು. **ಯೇ ಚ** ಈ ಯಾವ **ಮೃತಾಃ** ಸತ್ತವರಾದ **ಪ್ಲವಂಗಾಃ** ಕಪಿಗಳಾದರೋ **ತದ್ಗಂಧಾತ್** ಔಷಧಿಸಸ್ಯಗಳ ಸುವಾಸನೆಯಿಂದ **ತೇಽಪಿ** ಅವೂ ಕೂಡ **ಜೀವಿತಾಃ** ಜೀವಿಸಿದವು.

**ತಾತ್ಪರ್ಯ** :- ಹನುಮಂತನು ಎಸೆದ ಪರ್ವತಖಂಡವು ಮೊದಲಿದ್ದಂತೆಯೇ ತನ್ನ ಇನ್ನೊಂದು ಭಾಗದೊಂದಿಗೆ ಚೆನ್ನಾಗಿ ಕೂಡಿಕೊಳ್ಳುತ್ತದೆ. ಇತ್ತ ಯುದ್ಧದಲ್ಲಿ ಸತ್ತ ಕಪಿಗಳೆಲ್ಲವೂ ಆ ಔಷಧಿಸಸ್ಯಗಳ ಪರಿಮಳಮಾತ್ರದಿಂದಲೇ ಪುನಃ ಜೀವವನ್ನು ಪಡೆಯುತ್ತಾರೆ.

### ಎದ್ದ ಕಪಿಗಳು, ಏಳದ ರಾಕ್ಷಸರು

**ರಾಮಾಜ್ಞಯೈವ ರಕ್ಷಾಂಸಿ ಹರಯೋಽಬ್ಧಾವವಾಕ್ಷಿಪನ್ ।**
**ನೋಜ್ಜೀವಿತಾಸ್ತತಸ್ತೇ ತು ವಾನರಾ ನಿರುಜೋಽಭವನ್ ॥ ೨೦೪ ॥**

ಪದಚ್ಛೇದ : ರಾಮಾಜ್ಞಯಾ ಏವ ರಕ್ಷಾಂಸಿ ಹರಯಃ ಅಬ್ಧೌ ಅವಾಕ್ಷಿಪನ್ । ನ ಉಜ್ಜೀವಿತಾಃ ತತಃ ತೇ ತು ವಾನರಾಃ ನಿರುಜಃ ಅಭವನ್ ॥

**ಅರ್ಥ** :- **ರಾಮಾಜ್ಞಯೈವ** ರಾಮನ ಆದೇಶದಂತೆಯೇ **ಹರಯಃ** ಕಪಿಗಳು **ರಕ್ಷಾಂಸಿ** ಮೃತರಾಕ್ಷಸರನ್ನು **ಅಬ್ಧೌ** ಸಮುದ್ರದಲ್ಲಿ **ಅವಾಕ್ಷಿಪನ್**

ಹಾಕಿದರು. **ತತಃ** ಆ ಕಾರಣದಿಂದ **ತೇ ತು** ಆ ರಾಕ್ಷಸರಾದರೋ **ನೋಜ್ಜೀವಿತಾಃ** ಜೀವಿಸಲಿಲ್ಲ. **ವಾನರಾಃ** ಕಪಿಗಳು **ನೀರುಜಃ** ನಿರೋಗಿಗಳು **ಅಭವನ್** ಆದರು.

**ತಾತ್ಪರ್ಯ :** ಔಷಧಿಸಸ್ಯಗಳ ಪರಿಮಳದಿಂದ ರಾಕ್ಷಸರೇಕೆ ಜೀವಿಸಲಿಲ್ಲ? ರಾಮನ ಆಜ್ಞೆಯಂತೆಯೇ ಕಪಿಗಳೆಲ್ಲರು ಸತ್ತ ರಾಕ್ಷಸರರನ್ನು ಸಮುದ್ರಕ್ಕೆ ಎಸೆಯುತ್ತಾರೆ. ಎರಡು ಬಾರಿ ಗಂಧಮಾದನ ಪರ್ವತವನ್ನು ತರುವುದಕ್ಕೆ ಮೊದಲೇ ಹೀಗೆ ಮಾಡಿದ್ದರು. ಆದ್ದರಿಂದ ರಾಕ್ಷಸರಿಗೆ ಔಷಧಿಸಸ್ಯಗಳ ಪರಿಮಳವು ಸೋಕದೇ ಹಾಗೆಯೇ ಸತ್ತರು. ಆದರೆ ಅಲ್ಲಿಯೇ ಇದ್ದ ಮೃತಕಪಿಗಳಿಗೆ ಪರಿಮಳವು ಸೋಕಿ ನಿರೋಗಿಗಳಾಗಿ ಎದ್ದರು.

### ಸಂಜೀವಿನೀ ಪ್ರಭಾವ

**ಭಿನ್ನಪ್ರರೋಹಿಣಶ್ಚೈವ ವಿಶಲ್ಯಾಃ ಪೂರ್ವವರ್ಣಿನಃ ।**
**ಔಷಧೀನಾಂ ಪ್ರಭಾವೇನ ಸರ್ವೇಽಪಿ ಹರಯೋಽಭವನ್ ॥ ೨೦೫ ॥**

ಪದಚ್ಛೇದ : ಭಿನ್ನಪ್ರರೋಹಿಣಃ ಚ ಏವ ವಿಶಲ್ಯಾಃ ಪೂರ್ವವರ್ಣಿನಃ । ಔಷಧಿ ೀನಾಂ ಪ್ರಭಾವೇನ ಸರ್ವೇ ಅಪಿ ಹರಯಃ ಅಭವನ್ ॥

**ಅರ್ಥ :-** **ಔಷಧೀನಾಂ** ಔಷಧಿಗಳ **ಪ್ರಭಾವಾದೇವ** ಪ್ರಭಾವದಿಂದಲೇ **ಸರ್ವೇಽಪಿ** ಆ ಎಲ್ಲಾ **ಹರಯಃ** ಕಪಿಗಳು **ಭಿನ್ನಪ್ರರೋಹಿಣಃ** ತುಂಡಾದ ಹಸ್ತಪಾದ ಮೊದಲಾದ ಅವಯವಗಳ ಉತ್ಪತ್ತಿಉಳ್ಳವರು **ವಿಶಲ್ಯಾಃ** ಹೋಗಲ್ಪಟ್ಟ ಬಾಣಾದಿ ಗಳುಳ್ಳವರೂ **ಚ** ಮತ್ತು **ಪೂರ್ವವರ್ಣಿನಃ** ಮೊದಲಿನ ವರ್ಣವುಳ್ಳವರೂ **ಅಭವನ್** ಆದರು.

**ತಾತ್ಪರ್ಯ :-** ಆ ಔಷಧಿಸಸ್ಯಗಳ ಪ್ರಭಾವದಿಂದ ಕೈಕಾಲುಗಳನ್ನು ಕಳೆದು ಕೊಂಡ ಕಪಿಗಳಿಗೆ ಪುನಃ ಕೈಕಾಲುಗಳ ಮುಂತಾದ ಅವಯವಗಳು ಉತ್ಪನ್ನ ವಾದರೆ ಬಾಣಾದಿಗಳು ಚುಚ್ಚಲ್ಪಟ್ಟಿದ್ದಾಗ ಅದೂ ಕೂಡ ಹೊರಬರುತ್ತವೆ. ಗಾಯದಿಂದ ದೇಹದ ವರ್ಣವು ವ್ಯತ್ಯಸ್ತವಾಗಿದ್ದಾಗ ಅದೂ ಕೂಡ ಮೊದಲಿನಂತಾಗುತ್ತದೆ.

### ರಾಮ ರಾವಣರ ಯುದ್ಧ

**ಅಥಾಽಸಸಾದೋತ್ತಮಪೂರುಷಂ ಪ್ರಭುಂ**
**ವಿಮಾನಗೋ ರಾವಣ ಆಯುಧೌಘಾನ್ ।**

ಪ್ರವರ್ಷಮಾಣೋ ರಘುವಂಶನಾಥಂ
ತಮಾತ್ತಧನ್ವಾऽಭಿಯಯೌ ಚ ರಾಮಃ ॥ ೨೦೬ ॥

ಪದಚ್ಛೇದ : ಅಥ ಆಸಸಾದ ಉತ್ತಮಪೂರುಷಂ ಪ್ರಭುಂ ವಿಮಾನಗಃ ರಾವಣಃ ಆಯುಧೌಘಾನ್ । ಪ್ರವರ್ಷಮಾಣಃ ರಘುವಂಶನಾಥಂ ತಮ್ ಆತ್ತಧನ್ವಾ ಅಭಿಯಯೌ ಚ ರಾಮಃ ॥

**ಅರ್ಥ : ಅಥ** ಅನಂತರ **ವಿಮಾನಗಃ** ಪುಷ್ಪಕವಿಮಾನದಲ್ಲಿರುವ **ರಾವಣಃ** ರಾವಣನು **ಆಯುದೌಘಾನ್** ಆಯುಧಗಳ ಸಮೂಹಗಳನ್ನು **ಪ್ರವರ್ಷ ಮಾಣಃ (ಸನ್)** ಮಳೆಗೆರೆಯುವವನಾಗಿ **ಪ್ರಭುಂ** ಪ್ರಭುವಾದ **ಉತ್ತಮ ಪೂರುಷಂ** ಉತ್ತಮ ಪುರುಷನಾದ **ರಘುವಂಶನಾಥಂ** ರಘುಕುಲೋತ್ತಮ ನಾದ ರಾಮನನ್ನು **ಆಸಸಾದ** ಹೊಂದಿದನು. **ಆತ್ತಧನ್ವಾ** ಸ್ವೀಕರಿಸಲ್ಪಟ್ಟ ಧನುಸ್ಸುಳ್ಳ ಸಃ ಆ **ರಾಮಃ** ರಾಮನು **ತಂ** ಆ ರಾವಣನನ್ನು **ಅಭಿಯಯೌ** ಅಭಿಮುಖವಾಗಿ ಹೋದನು.

**ತಾತ್ಪರ್ಯ :-** ಪುಷ್ಪಕವಿಮಾನವೇರಿದ ರಾವಣನು ಆಯುಧಗಳ ವರ್ಷವನ್ನೇ ಸುರಿಸುತ್ತಾ ರಾಮನ ಸನಿಹ ಬರುತ್ತಾನೆ. ಆಗ ರಘುಕುಲ ತಿಲಕನಾದ ರಾಮನು ತಾನು ಧನುಸ್ಸನ್ನು ಸ್ವೀಕರಿಸಿ ಅವನನ್ನು ಎದುರಿಸಲು ಆಗಮಿಸುತ್ತಾನೆ.

ಇಂದ್ರನಿಂದ ರಾಮನಿಗೆ ಗೌರವ

ಸಮ್ಮಾನಯನ್ ರಾಘವಮಾದಿಪೂರುಷಂ
ನಿರ್ಯಾತಯಾಮಾಸ ರಥಂ ಪುರಂದರಃ ।
ಸಹಾಯುಧಂ ಮಾತಲಿಸಂಗೃಹೀತಂ
ಸಮಾರುರೋಹಾऽಶು ಸ ಲಕ್ಷ್ಮಣಾಗ್ರಜಃ ॥ ೨೦೭ ॥

ಪದಚ್ಛೇದ : ಸಮ್ಮಾನಯನ್ ರಾಘವಮ್ ಆದಿಪೂರುಷಂ ನಿರ್ಯಾತಯಾಮಾಸ ರಥಂ ಪುರಂದರಃ । ಸಹ ಆಯುಧಂ ಮಾತಲಿಸಂಗೃಹೀತಂ ಸಮಾರುರೋಹ ಆಶು ಸಃ ಲಕ್ಷ್ಮಣಾಗ್ರಜಃ ॥

**ಅರ್ಥ :- ಪುರಂದರಃ** ಇಂದ್ರನು **ಆದಿಪೂರುಷಂ** ಆದಿಪುರುಷನಾದ **ರಾಘವಂ** ರಾಮನನ್ನು **ಸಮ್ಮಾನಯನ್ (ಸನ್)** ಗೌರವವನ್ನು ಮಾಡುವವನಾಗಿ

**ಸಹಾಯುಧಂ** ಆಯುಧಗಳಿಂದ ಕೂಡಿದ **ಮಾತಲಸಂಗೃಹೀತಂ** ಇಂದ್ರಸಾರಥಿ ಯಾದ ಮಾತಲಿ ಎಂಬುವನಿಂದ ಸಂಗೃಹೀತವಾದ **ರಥಂ** ರಥವನ್ನು **ನಿರ್ಯಾತಯಾಮಾಸ** ಕಳುಹಿಸಿದನು. **ಲಕ್ಷ್ಮಣಾಗ್ರಜಃ** ಲಕ್ಷ್ಮಣನ ಅಣ್ಣನಾದ **ಸಃ** ಆ ರಾಮನು **ಆಶು** ಕೂಡಲೇ (**ರಥಂ** ರಥವನ್ನು) **ಸಮಾರುರೋಹ** ಹತ್ತಿದನು.

**ತಾತ್ಪರ್ಯ :-** ರಾಮನಿಗೆ ತನ್ನ ಗೌರವವನ್ನು ತೋಲಿಸಲೆಂದೇ ಇಂದ್ರನು ಆಯುಧಗಳಿಂದ ತುಂಬಿದ 'ಮಾತಲಿ' ಎಂಬ ಸಾರಥಿಯಿಂದ ಕೂಡಿದ ರಥವನ್ನು ರಾಮನಿಗಾಗಿ ಕಳುಹಿಸಿದ ಕೂಡಲೇ ಶ್ರೀರಾಮನು ಅದನ್ನೇರಿದನು.

**ಆರುಹ್ಯ ತಂ ರಥವರಂ ಜಗದೇಕನಾಥೋ**
**ಲೋಕಾಭಯಾಯ ರಜನೀಚರನಾಥಮಾಶು ।**
**ಅಭ್ಯುದ್ಯಯೌ ದಶಶತಾಂಶುರಿವಾಂಧಕಾರಂ**
**ಲೋಕಾನಶೇಷತ ಇಮಾನ್ ನಿಗಿರಂತಮುದ್ಯನ್ ॥ ೨೦೮ ॥**

ಪದಚ್ಛೇದ : **ಆರುಹ್ಯ ತಮ್ ರಥವರಂ ಜಗದೇಕನಾಥಃ ಲೋಕಾಭಯಾಯ ರಜನೀಚರನಾಥಮ್ ಆಶು । ಅಭ್ಯುದ್ಯಯೌ ದಶಶತಾಂಶುಃ ಇವ ಅಂಧಕಾರಂ ಲೋಕಾನ್ ಅಶೇಷತ ಇಮಾನ್ ನಿಗಿರಂತಮ್ ಉದ್ಯನ್** ॥

**ಅರ್ಥ : ಜಗದೇಕನಾಥಃ** ಜಗತ್ತಿಗೆ ಒಬ್ಬನೇ ಸ್ವಾಮಿಯಾದ ಶ್ರೀರಾಮನು **ತಂ ರಥವರಂ** ಆ ಶ್ರೇಷ್ಠರಥವನ್ನು **ಆರುಹ್ಯ** ಹತ್ತಿ **ಲೋಕಾಭಯಾಯ** ಜನರಿಗೆ ಅಭಯವನ್ನೀಯುವುದಕ್ಕಾಗಿ **ಅಶೇಷತಃ** ಎಲ್ಲಾ **ಇಮಾನ್** ಈ **ಲೋಕಾನ್** ಲೋಕಗಳನ್ನು **ನಿಗಿರಂತಂ** ಆಕ್ರಮಿಸುವಂತಹ **ರಜನೀಚರನಾಥಂ** ರಾಕ್ಷಸರ ನಾಯಯಕನಾದ ರಾವಣನನ್ನು **ಉದ್ಯನ್** ಉದಯಿಸುವ **ದಶಶತಾಂಶುಃ** ಸಹಸ್ರರಶ್ಮಿಗಳುಳ್ಳ ಸೂರ್ಯನು ಅಂಧಕಾರಮಿವ ಅಂಧಕಾರವನ್ನೆಂಬಂತೆ **ಅಭ್ಯುದ್ಯಯೌ** ಅಭಿಮುಖವಾಗಿ ಹೋದನು.

**ತಾತ್ಪರ್ಯ :** ಸೂರ್ಯನು ಸಮಸ್ತಲೋಕದ ಅಂಧಕಾರವನ್ನು ತನ್ನ ರಶ್ಮಿಗಳಿಂದ ಹೇಗೆ ಹೋಗಲಾಡಿಸುವನೋ ಹಾಗೆಯೇ ಜಗತ್ತಿಗೆ ಒಡೆಯನಾದ ಶ್ರೀರಾಮನು ರಥವನ್ನೇರಿ ಲೋಕದ ಜನರಿಗೆ ಅಭಯವನ್ನೀಯಲು ಅಂಧಕಾರನಂತೆ ಲೋಕಗಳನ್ನು ಆಕ್ರಮಿಸಿದ ರಾವಣನನ್ನು ಎದುರಿಸಿದ.

ರಾಮನಿಂದ ರಾವಣನ ಸಂಹಾರ

ಆಯಾಂತಮೀಕ್ಷ್ಯ ರಜನೀಚರಲೋಕನಾಥಃ
ಶಸ್ತ್ರಾಣ್ಯಥಾಸ್ತ್ರಸಹಿತಾನಿ ಮುಮೋಚ ರಾಮೇ ।
ರಾಮಸ್ತು ತಾನಿ ವಿನಿಹತ್ಯ ನಿಜೈರ್ಮಹಾಸ್ತ್ರೈ-
ಸ್ತಸ್ಯೋತ್ತಮಾಂಗದಶಕಂ ಯುಗಪನ್ನ ಯಕೃಂತತ್ ॥ ೨೦೯ ॥

ಪದಚ್ಛೇದ : ಆಯಾಂತಮ್ ಈಕ್ಷ್ಯ ರಜನೀಚರಲೋಕನಾಥಃ ಶಸ್ತ್ರಾಣಿ ಅಥ ಅಸ್ತ್ರಸಹಿತಾನಿ ಮುಮೋಚ ರಾಮೇ । ರಾಮಃ ತು ತಾನಿ ವಿನಿಹತ್ಯ ನಿಜೈಃ ಮಹಾಸ್ತ್ರೈಃ ತಸ್ಯ ಉತ್ತಮಾಂಗದಶಕಂ ಯುಗಪತ್ ನ್ಯಕೃಂತತ್॥

**ಅರ್ಥ** :- **ಅಥ** ಅನಂತರ **ರಜನೀಚರಲೋಕನಾಥಃ** ರಾವಣನು **ಆಯಾಂತಂ** ಬರುತ್ತಿರುವಂತಹ ರಾಮನನ್ನು **ಈಕ್ಷ್ಯ** ನೋಡಿ **ಅಸ್ತ್ರಸಹಿತಾನಿ** ಅಸ್ತ್ರಗಳಿಂದ ಸಹಿತವಾದ **ಶಸ್ತ್ರಾಣಿ** ಆಯುಧಗಳನ್ನು **ರಾಮೇ** ರಾಮನಲ್ಲಿ **ಮುಮೋಚ** ಬಿಟ್ಟನು. **ರಾಮಸ್ತು** ರಾಮನಾದರೋ **ತಾನಿ** ಅವುಗಳನ್ನು ವಿನಿಕೃತ್ಯ ತುಂಡರಿಸಿ **ನಿಜೈಃ** ತನ್ನದಾದ **ಮಹಾಸ್ತ್ರೈಃ** ಉತ್ತಮಾಸ್ತ್ರಗಳಿಂದ **ತಸ್ಯ** ಆ ರಾವಣನ **ಉತ್ತಮಾಂಗದಶಕಂ** ಹತ್ತುತಲೆಗಳನ್ನು **ಯುಗಪತ್** ಒಮ್ಮೆಗೆ **ನ್ಯಕೃಂತತ್** ಛೇದಿಸಿದನು.

**ತಾತ್ಪರ್ಯ** :- ಆಗ ರಾವಣನು ರಾಮನ ಮೇಲೆ ಅಸ್ತ್ರಗಳನ್ನು ಹಾಗು ಇತರ ಆಯುಧಗಳನ್ನು ಬಿಡುತ್ತಾನೆ. ಇವನ್ನೆಲ್ಲಾ ತುಂಡರಿಸಿದ ರಾಮನು ಶ್ರೇಷ್ಠ ಅಸ್ತ್ರಗಳಿಂದ ರಾವಣನ ಹತ್ತು ತಲೆಗಳನ್ನು ಏಕಕಾಲಕ್ಕೆ ತುಂಡರಿಸುತ್ತಾನೆ.

ಕೃತ್ತಾನಿ ತಾನಿ ಪುನರೇವ ಸಮುತ್ಥಿತಾನಿ ದೃಷ್ಟ್ವಾ
ವರಾಚ್ಛತಧೃತೇರ್ಹೃದಯಂ ಬಿಭೇದ ।
ಬಾಣೇನ ವಜ್ರಸದೃಶೇನ ಸ ಭಿನ್ನಹೃತ್ಕೋ
ರಕ್ತಂ ವಮನ್ ನ್ಯಪತದಾಶು ಮಹಾವಿಮಾನಾತ್ ॥ ೨೧೦ ॥

ಪದಚ್ಛೇದ : ಕೃತ್ತಾನಿ ತಾನಿ ಪುನಃ ಏವ ಸಮುತ್ಥಿತಾನಿ ದೃಷ್ಟ್ವಾ ವರಾತ್ ಶತಧೃತೇಃ ಹೃದಯಂ ಬಿಭೇದ । ಬಾಣೇನ ವಜ್ರಸದೃಶೇನ ಸಃ ಭಿನ್ನಹೃತ್ಕಃ ರಕ್ತಂ ವಮನ್ ನ್ಯಪತತ್ ಆಶು ಮಹಾವಿಮಾನಾತ್ ॥

**ಅರ್ಥ** :- **ಶತಧೃತೇಃ** ಬ್ರಹ್ಮದೇವನ **ವರಾತ್** ವರದ ದೆಸೆಯಿಂದ **ಕೃತ್ತಾನಿ** ಕತ್ತರಿಸಲ್ಪಟ್ಟ **ಪುನರೇವ** ಮತ್ತೂ ಕೂಡ **ಸಮುತ್ಥಿತಾನಿ** ಮೇಲಕ್ಕೆ ಏಳಲ್ಪಟ್ಟ **ತಾನಿ** ಆ ತಲೆಗಳನ್ನು **ದೃಷ್ಟ್ವಾ** ನೋಡಿ (**ರಾಮಃ** ಶ್ರೀರಾಮನು) **ವಜ್ರಸದೃಶೇನ** ವಜ್ರಸದೃಶವಾದ **ಬಾಣೇನ** ಬಾಣದಿಂದ **ಹೃದಯಂ** ಹೃದಯವನ್ನು **ಬಿಭೇದ** ಭೇದಿಸಿದನು. **ಭಿನ್ನಹೃತ್ಕಃ** ಸೀಳಲ್ಪಟ್ಟ ಹೃದಯವುಳ್ಳ **ಸಃ** ಆ ರಾವಣನು **ರಕ್ತಂ** ರಕ್ತವನ್ನು **ವಮನ್** (**ಸನ್**) ವಾಂತಿಮಾಡುವವನಾಗಿ **ಆಶು** ಕೂಡಲೇ **ಮಹಾವಿಮಾನಾತ್** ಆ ಶ್ರೇಷ್ಠವಿಮಾನದಿಂದ **ನ್ಯಪತತ್** ಬಿದ್ದನು.

**ತಾತ್ಪರ್ಯ** :- ಬ್ರಹ್ಮದೇವನ ವರವಿದ್ದ ಪ್ರಯುಕ್ತ ರಾವಣನಿಗೆ ತಲೆಗಳನ್ನು ಕತ್ತರಿಸಿದರು ಪುನಃ ಬಂದು ಸೇರುತ್ತಿದ್ದವು. ಆಗ ರಾಮನು ವಜ್ರಸಮಾನವಾದ ಬಾಣವನ್ನು ರಾವಣನ ಹೃದಯಕ್ಕೇ ಪ್ರಯೋಗಿಸಿದ. ಇದರಿಂದ ಹೃದಯವು ಸೀಳಿ ರಕ್ತವನ್ನು ವಾಂತಿಮಾಡುತ್ತಾ ರಾವಣನು ಆ ಪುಷ್ಪಕವಿಮಾನದಿಂದ ಕೆಳಗೆ ಬೀಳುತ್ತಾನೆ.

### ಬ್ರಹ್ಮಾದಿಗಳಿಂದ ರಾಮಸ್ತುತಿ

**ತಸ್ಮಿನ್ ಹತೇ ತ್ರಿಜಗತಾಂ ಪರಮಪ್ರತೀಪೇ**
**ಬ್ರಹ್ಮಾ ಶಿವೇನ ಸಹಿತಃ ಸಹ ಲೋಕಪಾಲೈಃ ।**
**ಅಭ್ಯೇತ್ಯ ಪಾದಯುಗಲಂ ಜಗದೇಕಭರ್ತುಃ**
**ರಾಮಸ್ಯ ಭಕ್ತಿಭರಿತಃ ಶಿರಸಾ ನನಾಮ ॥ ೨೧೧ ॥**

ಪದಚ್ಛೇದ : ತಸ್ಮಿನ್ ಹತೇ ತ್ರಿಜಗತಾಂ ಪರಮಪ್ರತೀಪೇ ಬ್ರಹ್ಮಾ ಶಿವೇನ ಸಹಿತಃ ಸಹ ಲೋಕಪಾಲೈಃ । ಅಭ್ಯೇತ್ಯ ಪಾದಯುಗಲಂ ಜಗದೇಕಭರ್ತುಃ ರಾಮಸ್ಯ ಭಕ್ತಿಭರಿತಃ ಶಿರಸಾ ನನಾಮ ॥

**ಅರ್ಥ** :- **ತ್ರಿಜಗತಾಂ** ಮೂರುಲೋಕಗಳಿಗೆ **ಪರಮಪ್ರತೀಪೇ** ಮುಖ್ಯ ದ್ವೇಷಿಯಾದ **ತಸ್ಮಿನ್** ಆ ರಾವಣನು **ಹತೇ** (**ಸತಿ**) ಹತನಾಗುತ್ತಿರಲು **ಬ್ರಹ್ಮಾ** ಚತುರ್ಮುಖ ಬ್ರಹ್ಮದೇವನು **ಶಿವೇನ** ರುದ್ರನಿಂದ **ಸಹಿತಃ** ಕೂಡಿದವನಾಗಿ **ಲೋಕಪಾಲೈಃ** ಅಷ್ಟದಿಕ್ಪಾಲಕರಿಂದ **ಸಹ** ಕೂಡಿಕೊಂಡು **ಜಗದೇಕಭರ್ತುಃ** ಜಗತ್ತಿಗೇ ಒಬ್ಬನೇ ಸ್ವಾಮಿಯಾದ **ರಾಮಸ್ಯ** ಶ್ರೀರಾಮನ **ಪಾದಯುಗಲಂ** ಕಾಲುಗಳನ್ನು **ಅಭ್ಯೇತ್ಯ** ಹೊಂದಿ **ಭಕ್ತಿಭರಿತಃ** (**ಸನ್**) ಭಕ್ತಿಸಹಿತನಾಗಿ **ನನಾಮ** ನಮಸ್ಕರಿಸಿದನು.

**ತಾತ್ಪರ್ಯ** :- ರಾವಣನು ಹೀಗೆ ಹತನಾಗುತ್ತಿರಲು ರುದ್ರ ಹಾಗು ಅಷ್ಟದಿಕ್ಪಾಲಕರಿಂದ ಕೂಡಿದ ಬ್ರಹ್ಮದೇವನು ಜಗತ್ತಿಗೆ ಸ್ವಾಮಿಯಾದ ರಾಮನ ಪಾದಗಳಿಗೆ ಭಕ್ತಿಯಿಂದ ಎರಗುತ್ತಾನೆ.

**ಅಥೈನಮಸ್ತೌತ್ ಪಿತರಂ ಕೃತಾಂಜಲಿ-**
**ರ್ಗುಣಾಭಿರಾಮಂ ಜಗತಃ ಪಿತಾಮಹಃ ।**
**ಜಿತಂ ಜಿತಂ ತೇಽಜಿತ ಲೋಕಭಾವನ**
**ಪ್ರಪನ್ನಪಾಲಾಯ ನತಾಃ ಸ್ಮ ತೇ ವಯಮ್ ॥ ೨೧೨ ॥**

**ಪದಚ್ಛೇದ : ಅಥ ಏನಮ್ ಅಸ್ತೌತ್ ಪಿತರಂ ಕೃತಾಂಜಲಿಃ ಗುಣಾಭಿರಾಮಂ ಜಗತಃ ಪಿತಾಮಹಃ । ಜಿತಂ ಜಿತಂ ತೇ ಅಜಿತ ಲೋಕಭಾವನ ಪ್ರಪನ್ನಪಾಲಾಯ ನತಾಃ ಸ್ಮ ತೇ ವಯಮ್॥**

**ಅರ್ಥ** :- **ಅಥ** ನಮಸ್ಕರಿಸಿದ ನಂತರ **ಪಿತಾಮಹಃ** ಜಗತ್ತಿಗೆ ಅಜ್ಜನಾದ ಬ್ರಹ್ಮನು **ಕೃತಾಂಜಲಿಃ (ಸನ್)** ಕೈ ಮುಗಿದವನಾಗಿ **ಗುಣಾಭಿರಾಮಃ** ಸ್ವರೂಪಭೂತವಾದ ಜ್ಞಾನಾನಂದಾದಿ ಗುಣಗಳಿಂದ ರಮಿಸುವ **ಪಿತರಂ** ತಂದೆಯಾದ ಏನಂ ಈ ಶ್ರೀರಾಮನನ್ನು **ಅಸ್ತೌತ್** ಸ್ತುತಿಸಿದನು. **ಹೇ ಅಜಿತ** ಹೇ ಸೋಲಿಲ್ಲದವನೇ **ಹೇ ಲೋಕಭಾವನ** ಜಗತ್ತನ್ನು ಸೃಜಿಸುವವನೇ **ತೇ** ನಿನ್ನಿಂದ **ಜಿತಂ ಜಿತಂ** ಜಯಿಸಲ್ಪಟ್ಟಿತು **ಪ್ರಪನ್ನಪಾಲಾಯ** ನಿನ್ನನ್ನು ಹೊಂದಿದವರನ್ನು ರಕ್ಷಿಸುವ **ತೇ** ನಿನಗೆ **ವಯಂ** ನಾವು **ನತಾಃ** ನಮಸ್ಕರಿತಕ್ಕವರಾಗಿದ್ದೇವೆ.

**ತಾತ್ಪರ್ಯ** :- ಜಗತ್ತಿಗೆ ಪಿತಾಮಹನೆನಿಸಿದ ಬ್ರಹ್ಮದೇವರು ತನ್ನ ತಂದೆಯಾದ ಸ್ವರೂಪ ಭೂತವಾದ ಆನಂದಾದಿಗುಣಗಳುಳ್ಳ ಶ್ರೀರಾಮನನ್ನು ಹೀಗೆ ಸ್ತುತಿಸುವರು'ಹೇ ಅಪರಾಜಿತನೇ, ಜಗತ್ತಿನ ಸೃಷ್ಟಿಕರ್ತನೇ ನಿನ್ನಿಂದಲೇ ಈ ಜಯವು ಲಭ್ಯವಾಯಿತು. ಹೇ ಶರಣಾಗತವತ್ಸಲ ನಾವು ನಿನ್ನನ್ನು ನಮಸ್ಕರಿಸುವೆವು.

**ತ್ವಮೇಕ ಈಶೋಽಸ್ಯ ನ ಚಾಽದಿರಂತ-**
**ಸ್ತವೇಡ್ಯ ಕಾಲೇನ ತಥೈವ ದೇಶತಃ ।**
**ಗುಣಾ ಹ್ಯಗಣ್ಯಾಸ್ತವ ತೇಽಪ್ಯನಂತಾಃ**
**ಪ್ರತ್ಯೇಕಶಶ್ಚಾಽದಿವಿನಾಶವರ್ಜಿತಾಃ ॥ ೨೧೩ ॥**

ಪದಚ್ಛೇದ : ತ್ವಮ್ ಏಕ ಈಶಃ ಅಸ್ಯ ನ ಚ ಆದಿಃ ಅಂತಃ ತವ ಈಡ್ಯ ಕಾಲೇನ ತಥಾ ಏವ ದೇಶತಃ । ಗುಣಾಃ ಹಿ ಅಗಣ್ಯಾಃ ತವ ತೇ ಅಪಿ ಅನಂತಾಃ ಪ್ರತ್ಯೇಕಶಃ ಚ ಆದಿವಿನಾಶವರ್ಜಿತಾಃ ॥

**ಅರ್ಥ** :- **ಅಸ್ಯ** ಈ ಜಗತ್ತಿಗೆ **ತ್ವಂ** ನೀನು **ಏಕಃ** ಮುಖ್ಯವಾದ **ಈಶಃ** ಒಡೆಯನಾಗಿರುವಿ **ಹೇ ಈಡ್ಯ** ಹೇ ಸ್ತುತ್ಯನೇ **ತವ** ನಿನಗೆ **ಕಾಲೇನ** ಕಾಲದಿಂದ **ತಥಾ** ಹಾಗೆಯೇ **ದೇಶತಃ** ದೇಶದಿಂದಲೂ **ಆದಿಃ** ಉತ್ಪತ್ತಿಯು **ಅಂತಃ** ವಿನಾಶವು **ನಚ** ಇಲ್ಲವಷ್ಟೇ **ತವ** ನಿನ್ನ **ಗುಣಾಃ** ಗುಣಗಳು **ಅಗಣ್ಯಾಃ** ಎಣಿಸಲು ಅಸಾಧ್ಯವು. **ತೇಽಪಿ** ಆ ಎಲ್ಲಾ ಗುಣಗಳೂ ಕೂಡ **ಪ್ರತ್ಯೇಕಶಃ** ಪ್ರತ್ಯೇಕವಾಗಿ **ಅನಂತಾಃ** ಅನಂತಗಳೂ **ಆದಿವಿನಾಶವರ್ಜಿತಾಶ್ಚ** ಉತ್ಪತ್ತಿವಿನಾಶರಹಿತವುಗಳೂ ಕೂಡ. **ಹಿ** ಪ್ರಸಿದ್ಧ

**ತಾತ್ಪರ್ಯ** :- 'ಜಗತ್ತಿಗೇ ಮುಖ್ಯ ಸ್ವಾಮಿಯಾದ ರಾಮನೇ ನಿನಗೆ ದೇಶಕಾಲಗಳಲ್ಲೂ ಜನನ ಮರಣಗಳಿಲ್ಲ. ನಿನ್ನ ಗುಣಗಳೂ ಅಸಂಖ್ಯ. ಆ ಎಲ್ಲಾ ಗುಣಗಳೂ ಪ್ರತ್ಯೇಕವಾಗಿಯೂ ಅನಂತಗಳಾಗಿವೆ, ಹಾಗು ಅವುಗಳು ಉತ್ಪತ್ತಿ ವಿನಾಶರಹಿತಗಳಾಗಿವೆ.

**ನ ಚೋದ್ಭವೋ ನೈವ ತಿರಸ್ಕೃತಿಸ್ತೇ**
**ಕ್ವಚಿದ್ ಗುಣಾನಾಂ ಪರತಃ ಸ್ವತೋ ವಾ ।**
**ತ್ವಮೇಕ ಆದ್ಯಃ ಪರಮಃ ಸ್ವತಂತ್ರೋ**
**ಭೃತ್ಯಾಸ್ತವಾಹಂ ಶಿವಪೂರ್ವಕಾಶ್ಚ ಯೇ ॥ ೨೧೪ ॥**

ಪದಚ್ಛೇದ : ನ ಚ ಉದ್ಭವಃ ನ ಏವ ತಿರಸ್ಕೃತಿಃ ತೇ ಕ್ವಚಿತ್ ಗುಣಾನಾಂ ಪರತಃ ಸ್ವತಃ ವಾ । ತ್ವಮ್ ಏಕಃ ಆದ್ಯಃ ಪರಮಃ ಸ್ವತಂತ್ರಃ ಭೃತ್ಯಾಃ ತವ ಅಹಂ ಶಿವಪೂರ್ವಕಾಃ ಚ ಯೇ ॥

**ಅರ್ಥ** :- **ತೇ** ನಿನ್ನ **ಗುಣಾನಾಂ** ಗುಣಗಳಿಗೆ **ಕ್ವಚಿತ್** ಯಾವ ಸಮಯದಲ್ಲಿಯೂ **ಪರತಃ** ಬೇರೆಯವರಿಂದ **ತಿರಸ್ಕೃತಿಃ** ತಿರಸ್ಕಾರವು **ನೈವ** ಇಲ್ಲವೇ ಇಲ್ಲ. **ಉದ್ಭವಃ** ಆವಿರ್ಭಾವವೂ **ನಚ** ಇಲ್ಲವಷ್ಟೇ. **ವಾ** ಅಥವಾ **ಸ್ವತಃ** ಸ್ವಾಭಾವಿಕವಾಗಿಯೇ (**ತಿರಸ್ಕೃತಿಃ** ತಿರೋಧಾನವು) **ನ** ಇಲ್ಲ. **ತ್ವಂ** ನೀನು **ಏಕಃ** ಒಬ್ಬನೇ **ಆದ್ಯಃ** ಪುರಾಣಪುರುಷನು **ಪರಮಃ** ಉತ್ತಮನು **ಸ್ವತಂತ್ರಃ** ಸ್ವತಂತ್ರನು (**ಅತ ಏವ** ಆದ್ದರಿಂದಲೇ) **ಅಹಂ** ನಾನು **ಶಿವಪೂರ್ವಕಾಃ ಚ** ರುದ್ರನೇ ಮೊದಲಾದ **ಯೇ** ಈ ಯಾವ ದೇವತೆಗಳಿರುವರೋ (**ತೇ ಸರ್ವೇಽಪಿ**) ಆ ಎಲ್ಲರು **ತವ** ನಿನ್ನ **ಭೃತ್ಯಾಃ** ಸೇವಕರು.

**ತಾತ್ಪರ್ಯ :-** 'ನಿನ್ನ ಗುಣಗಳಿಗೆ ಸ್ವಾಭಾವಿಕವಾಗಲಿ ಅಥವಾ ಬೇರೆಯವರಿಂದ ಉತ್ಪತ್ತಿ ನಾಶಗಳಿಲ್ಲ. ನೀನೇ ಆದಿಪುರುಷ, ನೀನೇ ಉತ್ತಮಪುರುಷನು. ನಾನು ಹಾಗು ರುದ್ರನೇ ಮೊದಲಾದ ಸರ್ವದೇವತೆಗಳು ನಿನ್ನ ಸೇವಕರು.'

**ಯಥಾಽರ್ಚಿಷೋಽಗ್ನೇಃ ಪವನಸ್ಯ ವೇಗಾ**
**ಮರೀಚಯೋಽರ್ಕಸ್ಯ ನದೀಷು ಚಾಽಪಃ ।**
**ಗಚ್ಛಂತಿ ಚಾಽಯಾಂತಿ ಚ ಸಂತತಾಶ್ಚ**
**ತದ್ವನ್ಮದಾದ್ಯಾಃ ಶಿವಪೂರ್ವಕಾಶ್ಚ ಯೇ ॥ ೨೧೫ ॥**

ಪದಚ್ಛೇದ : ಯಥಾ ಅರ್ಚಿಷಃ ಅಗ್ನೇಃ ಪವನಸ್ಯ ವೇಗಾಃ ಮರೀಚಯಃ ಅರ್ಕಸ್ಯ ನದೀಷು ಚ ಆಪಃ । ಗಚ್ಛಂತಿ ಚ ಆಯಾಂತಿ ಚ ಸಂತತಾಃ ಚ ತದ್ವತ್ ಮದಾದ್ಯಾಃ ಶಿವಪೂರ್ವಕಾಃ ಚ ಯೇ ॥

**ಅರ್ಥ :-** **ಅಗ್ನೇಃ** ಅಗ್ನಿಯ **ಅರ್ಚಿಷಃ** ಜ್ವಾಲೆಗಳು **ಪವನಸ್ಯ** ವಾಯುವಿನ **ವೇಗಾಃ** ವೇಗಗಳು **ಅರ್ಕಸ್ಯ** ಸೂರ್ಯನ **ಮರೀಚಯಃ** ರಶ್ಮಿಗಳು **ನದೀಷು** ನದಿಗಳಲ್ಲಿ **ಆಪಃ** ಜಲವು **ಗಚ್ಛಂತಿ** ಹೋಗುತ್ತವೋ **ಚ** ಮತ್ತು **ಆಯಾಂತಿ ಚ** ಬರುತ್ತವೆಯೂ ಕೂಡ. **ತದ್ವತ್** ಹಾಗೆಯೇ **ಮದಾದ್ಯಾಃ** ನಾವೇ ಮೊದಲಾದವರುಳ್ಳ **ಸಂತತಾಃ** ಅನಾದಿಕಾಲಸ್ಥರಾದ **ಯೇ ಚ** ಯಾವ ದೇವತೆಗಳಿರುವರೂ **ತೇ** ಅವರೆಲ್ಲರೂ **ಗಚ್ಛಂತಿ** ನಾಶ ಹೊಂದುತ್ತಾರೆ. **ಆಯಾಂತಿ ಚ** ಸೃಷ್ಟಿಕಾಲದಲ್ಲಿ ಬರುತ್ತಾರೆಯೂ ಕೂಡ.

**ತಾತ್ಪರ್ಯ :-** 'ಅಗ್ನಿಯಲ್ಲಿ ಜ್ವಾಲೆಗಳು, ಗಾಳಿಯಲ್ಲಿ ವೇಗವಾಗಿ ಬೀಸುವಿಕೆಯ ಗುಣಗಳು, ಸೂರ್ಯನ ಕಿರಣಗಳು, ನದಿಗಳಲ್ಲಿ ಜಲವು ಹೇಗೆ ಬಂದು ಹೋಗುತ್ತಿರುವುದೋ (ಸ್ಥಿರವಾಗಿರದೆ ಏರುಪೇರಾಗಿ) ಹಾಗೆಯೇ ಅನಾದಿ ಕಾಲದಲ್ಲಿರುವ ನಾವೆಲ್ಲರೂ ಪ್ರಳಯಕಾಲದಲ್ಲಿ ನಾಶವನ್ನು ಸೃಷ್ಟಿಕಾಲದಲ್ಲಿ ಉತ್ಪತ್ತಿಯನ್ನು ಹೊಂದುತ್ತೇವೆ.'

**ಯೇಯೇ ಚ ಮುಕ್ತಾಸ್ತ್ವಥ ಯೇ ಚ**
**ಬದ್ಧಾಃ ಸರ್ವೇ ತವೇಶೇಶ ವಶೇ ಸದೈವ ।**
**ವಯಂ ಸದಾ ತ್ವದ್ಗುಣಪೂಗಮುಚ್ಚೈಃ**
**ಸರ್ವೇ ವದಂತೋಽಪಿ ನ ಪಾರಗಾಮಿನಃ ॥ ೨೧೬ ॥**

ಪದಚ್ಛೇದ : ಯೇಯೇ ಚ ಮುಕ್ತಾಃ ತು ಅಥ ಯೇ ಚ ಬದ್ಧಾಃ ಸರ್ವೇ ತವ ಈಶೇಶ ವಶೇ ಸದಾ ಏವ । ವಯಂ ಸದಾ ತ್ವದ್ಗುಣಪೂಗಮ್ ಉಚ್ಚೈಃ ಸರ್ವೇ ವದಂತಃ ಅಪಿ ನ ಪಾರಗಾಮಿನಃ ॥

**ಅರ್ಥ :- ಹೇ ಈಶೇಶ** ಈಶನಿಗೆ ಒಡೆಯನಾದ ಶ್ರೀರಾಮನೇ **ಯೇಯೇ** ಯಾರು ಯಾರು **ಮುಕ್ತಾಃ** ಮುಕ್ತರೋ **ಅಥ** ಹಾಗೆಯೇ **ಯೇ ತು** ಯಾರಾದರೋ **ಬದ್ಧಾಶ್ಚ** ನಿತ್ಯಸಂಸಾರಿಗಳೋ **ಸರ್ವೇ** ಆ ಎಲ್ಲರೂ **ಸದೈವ** ಯಾವಾಗಲೂ ಕೂಡ **ತವ** ನಿನ್ನ **ವಶೀ** ಅಧೀನದಲ್ಲಿ (**ತಿಷ್ಠಂತಿ** ಇರುತ್ತಾರೆ) **ಸರ್ವೇ ವಯಂ** ನಾವೆಲ್ಲಲೂ ಕೂಡ **ಸದಾ** ನಿರಂತರವಾಗಿಯೂ **ತ್ವದ್ಗುಣ ಪೂಗಂ** ನಿನ್ನ ಗುಣಸಮೂಹವನ್ನು **ಉಚ್ಚೈಃ** ಬಹುವಾಗಿ **ವದಂತೋಽಪಿ** ಗಾನ ಮಾಡುತ್ತಿರತಕ್ಕವರಾದರೂ ಕೂಡ **ಪಾರಗಾಮಿನಃ** ಗುಣಗಳ ದಡವನ್ನು ಹೊಂದುವವರು **ನ** ಶಕ್ತರಾಗಲಿಲ್ಲ.

**ತಾತ್ಪರ್ಯ :-** 'ಹೇ ಒಡೆಯನಾದ ರಾಮನೇ! ಯಾರು ಮುಕ್ತರು ಅಥವಾ ಯಾರು ಯಾರು ನಿತ್ಯಸಂಸಾರದಲ್ಲಿಯೇ ಇರುವರೋ ಅವರೆಲ್ಲರೂ ಕೂಡ ಎಲ್ಲಾ ಕಾಲದಲ್ಲೂ ನಿನ್ನ ಅಧೀನರೇ ಆಗಿರುವರು. ನಾವೆಲ್ಲರೂ ನಿನ್ನ ಗುಣಗಳನ್ನು ನಿರಂತರವಾಗಿಯೂ ಸ್ತುತಿಸುತ್ತಿದ್ದರೂ ನಿನ್ನ ಗುಣಗಳ ಕೊನೆಯನ್ನು ತಲುಪಲು ನಮಗೆ ಸಾಧ್ಯವಾಗಿಲ್ಲ.

**ಕಿಮೇಷ ಈದೃಗ್ಗುಣಕಸ್ಯ ತೇ ಪ್ರಭೋ**
**ರಕ್ಷೋವಧೋಽಶೇಷಸುರಪ್ರಪಾಲನಮ್ ।**
**ಅನನ್ಯಸಾಧ್ಯಂ ಹಿ ತಥಾಽಪಿ ತದ್ ದ್ವಯಂ**
**ಕೃತಂ ತ್ವಯಾ ತಸ್ಯ ನಮೋ ನಮಸ್ತೇ ॥ ೨೧೭ ॥**

ಪದಚ್ಛೇದ : ಕಿಮ್ ಏಷಃ ಈದೃಗ್ಗುಣಕಸ್ಯ ತೇ ಪ್ರಭೋ ರಕ್ಷೋವಧಃ ಅಶೇಷ ಸುರಪ್ರಪಾಲನಮ್ । ಅನನ್ಯಸಾಧ್ಯಂ ಹಿ ತಥಾ ಅಪಿ ತತ್ ದ್ವಯಂ ಕೃತಂ ತ್ವಯಾ ತಸ್ಯ ನಮಃ ನಮಃ ತೇ ॥

**ಅರ್ಥ :- ಹೇ ಪ್ರಭೋ** ಹೇ ಸ್ವಾಮಿಯೇ **ಈದೃಗ್ಗುಣಕಸ್ಯ** ಇಂತಹ ಗುಣವಿಶಿಷ್ಟನಾದ **ತಸ್ಯ** ಅಂತಹ **ತೇ** ನಿನಗೆ **ರಕ್ಷೋವಧಃ** ರಾಕ್ಷಸಸಂಹಾರವು **ಅಶೇಷಸುರಪ್ರಪಾಲನಂ** ಸಮಸ್ತದೇವತೆಗಳ **ರಕ್ಷಣೆಯು ಕಿಂ** ಏನು ಆಶ್ಚರ್ಯವು ! (**ಯದ್ಯಪಿ** ಇವರೆಡು ಕೂಡ ನಿನಗೆ ಆಶ್ಚರ್ಯವಲ್ಲ) **ತಥಾಽಪಿ** ಹಾಗಿದ್ದರೂ ಕೂಡ **ತ್ವಯಾ** ನಿನ್ನಿಂದ **ಕೃತಂ** ಮಾಡಲ್ಪಟ್ಟ **ತತ್ ದ್ವಯಂ** ಆ ಎರಡೂ ಕಾರ್ಯಗಳು **ಅನನ್ಯಸಾಧ್ಯಂ** ಬೇರೆಯವರಿಂದ ಮಾಡಲಸಾಧ್ಯವು. **ಹಿ** ಪ್ರಸಿದ್ಧ. **ತಸ್ಯ** ಆ ಕಾರ್ಯಗಳನ್ನು ಮಾಡಲ್ಪಟ್ಟ **ಏಷಃ** ಇಂತಹ ರಾಮನೇ **ತೇ** ನಿನಗೆ **ನಮೋನಮಃ** ನಮಸ್ಕಾರ ನಮಸ್ಕಾರ.

**ತಾತ್ಪರ್ಯ** : 'ಹೇ ರಾಮನೇ! ಇಂತಹ ಗುಣವಿಶಿಷ್ಟನಾದ ನಿನಗೆ ರಾಕ್ಷಸರ ಸಂಹಾರವಾಗಲಿ, ಸರ್ವದೇವತೆಗಳ ರಕ್ಷಣೆಯಾಗಲಿ ಆಶ್ಚರ್ಯಕರವಲ್ಲ. ಆದರೂ ಬೇರೆ ಯಾರಿಂದಲೂ ಮಾಡಲಾಗದ ಈ ಎರಡು ಕಾರ್ಯಗಳು ನಿನ್ನಿಂದಲೇ ಆಗಿವೆ. ಇಂತಹ ರಾಮನೇ ನಿನಗೆ ಪುನಃಪುನಃ ನಮಸ್ಕರಿಸುವೆವು.

### ರಾಮನನ್ನು ಯುದ್ಧಕ್ಕೆ ಕರೆದ ಶಿವ

**ಇತೀರಿತೇ ತ್ವಬ್ಜಭವೇನ ಶೂಲೀ**
**ಸಮಾಹ್ವಯದ್ ರಾಘವಮಾಹವಾಯ ।**
**ವರಂ ಮದೀಯಂ ತ್ವಗಣಯ್ಯ ರಕ್ಷೋ**
**ಹತಂ ತ್ವಯಾ ತೇನ ರಣಾಯ ಮೇಹಿ ॥ ೨೧೮ ॥**

ಪದಚ್ಛೇದ : ಇತಿ ಈರಿತೇ ತು ಅಬ್ಜಭವೇನ ಶೂಲೀ ಸಮಾಹ್ವಯತ್ ರಾಘವಂ ಆಹವಾಯ । ವರಂ ಮದೀಯಂ ತು ಅಗಣಯ್ಯ ರಕ್ಷಃ ಹತಂ ತ್ವಯಾ ತೇನ ರಣಾಯ ಮಾ ಏಹಿ ॥

**ಅರ್ಥ** :- **ಅಬ್ಜಭವೇನ** ಬ್ರಹ್ಮದೇವನಿಂದ **ಇತಿ** ಈ ಪ್ರಕಾರವಾಗಿ **ಈರಿತೇ (ಸತಿ)** ಹೇಳಲ್ಪಡುತ್ತಿರಲು. **ಶೂಲೀ ತು** ಶೂಲಧಾರಿಯಾದ ರುದ್ರನಾದರೋ **ಮದೀಯಂ** ತನ್ನದಾದ **ವರಂ** ವರವನ್ನು **ಅಗಣಯ್ಯ** ಯೋಚಿಸದೆ **ತ್ವಯಾ** ನಿನ್ನಿಂದ **ರಕ್ಷಃ ತು** ರಾವಣನಾದರೋ **ಹತಃ** ಸಂಹರಿಸಲ್ಪಟ್ಟನು. **ತೇನ** ಆದ್ದರಿಂದ **ರಣಾಯ** ಯುದ್ಧಕ್ಕಾಗಿ **ಮಾ** ನನ್ನನ್ನು **ಏಹಿ** ಹೊಂದುವವನಾಗು **ಇತಿ** ಎಂದು **ರಾಘವಂ** ರಾಮನನ್ನು **ಆಹವಾಯ** ಯುದ್ಧಕ್ಕಾಗಿ **ಸಮಾಹ್ವಯತ್** ಕರೆದನು.

**ತಾತ್ಪರ್ಯ** : ಬ್ರಹ್ಮದೇವನು ಹೀಗೆ ಸ್ತುತಿಸುತ್ತಿರಲು ಆಗ ರುದ್ರನು 'ಎಲೈ ರಾಮನೇ ನಾನು ರಾವಣನಿಗೆ ಕೊಟ್ಟ ವರವನ್ನು ಲೆಕ್ಕಿಸದೆ ನೀನು ಅವನನ್ನು ಸಂಹರಿಸಿರುವೆ. ಆದ ಕಾರಣ ನೀನು ನನ್ನೊಂದಿಗೆ ಯುದ್ಧಕ್ಕೆ ಬರುವವನಾಗು'

### ರುದ್ರನ ಪರಾಜಯ

**ಇತೀರಿತೇಽಸ್ತ್ವಿತ್ಯಭಿಧಾಯ ರಾಘವೋ**
**ಧನುಃ ಪ್ರಗೃಹ್ಯಾಽಶು ಶರಂ ಚ ಸಂದಧೇ ।**
**ವಿಕೃಷ್ಯಮಾಣೇ ಚಲಿತಾ ವಸುಂಧರಾ**
**ಪಪಾತ ರುದ್ರೋಽಪಿ ಧರಾಪ್ರಕಂಪತಃ ॥ ೨೧೯ ॥**

ಪದಚ್ಛೇದ : ಇತಿ ಈರಿತೇ ಅಸ್ತು ಇತಿ ಅಭಿಧಾಯ ರಾಘವಃ ಧನುಃ ಪ್ರಗೃಹ್ಯ ಆಶು ಶರಂ ಚ ಸಂದಧೇ । ವಿಕೃಷ್ಯಮಾಣೇ ಚಲಿತಾ ವಸುಂಧರಾ ಪಪಾತ ರುದ್ರಃ ಅಪಿ ಧರಾಪ್ರಕಂಪತಃ ॥

**ಅರ್ಥ** :- **ಇತಿ** ಈ ಪ್ರಕಾರವಾಗಿ **ಈರಿತೇ (ಸತಿ)** ರುದ್ರನಿಂದ ಹೇಳಲ್ಪಡುತ್ತಿರಲು **ರಾಘವಃ** ರಾಮನು **ಧನುಃ** ಧನುಸ್ಸನ್ನು **ಪ್ರಗೃಹ್ಯ** ಹಿಡಿದು **ಆಶು** ಕೂಡಲೇ **ಶರಂ ಚ** ಬಾಣವನ್ನೂ ಕೂಡ **ಸಂದಧೇ** ಯೋಜಿಸಿದನು. **ವಿಕೃಷ್ಯಮಾಣೇ (ಸತಿ)** ಬಿಲ್ಲನ್ನು ಎಳೆಯಲ್ಪಡುತ್ತಿರಲು **ವಸುಂಧರಾ** ಭೂಮಿಯು **ಚಲಿತಾ** ಚಲಿಸಿತು. **ಧರಾಪ್ರಕಂಪತಃ** ಭೂಮಿಯ ಕಂಪನೆಯಿಂದ **ರುದ್ರೋऽಪಿ** ರುದ್ರನೂ ಕೂಡ **ಪಪಾತ** ಬಿದ್ದನು.

**ತಾತ್ಪರ್ಯ** :- ರುದ್ರನ ಯುದ್ಧಾಹ್ವಾನವನ್ನು ಒಪ್ಪಿದ ರಾಮನು ಬಿಲ್ಲನ್ನು ಕೈಗೆತ್ತಿಕೊಂಡು ಬಾಣವನ್ನು ಸಂಧಾನಮಾಡುತ್ತಾನೆ. ಬಿಲ್ಲನ್ನು ಎಳೆಯುವಾಗ ಭೂಮಿಯೇ ಚಲಿಸುತ್ತದೆ. ಈ ಭೂಮಿಚಲನೆಯಿಂದ ರುದ್ರನೂ ಕೆಳಗೆ ಬೀಳುತ್ತಾನೆ.

**ರಾಮನನ್ನು ಸ್ತುತಿಸಿದ ಶಿವ**

**ಅಥೋತ್ಥಿತಶ್ಚಾऽಸುರಭಾವವರ್ಜಿತಃ**
**ಕ್ಷಮಸ್ವ ದೇವೇತಿ ನನಾಮ ಪಾದಯೋಃ ।**
**ಉವಾಚ ಚ ತ್ವದ್ವಶಗೋऽಸ್ಮಿ ಸರ್ವದಾ**
**ಪ್ರಸೀದ ಮೇ ತ್ವದ್ವಿಷಯಂ ಮನಃ ಕುರು ॥ ೨೨೦ ॥**

**ಪದಚ್ಛೇದ** : **ಅಥ ಉತ್ಥಿತಃ ಚ ಅಸುರಭಾವವರ್ಜಿತಃ ಕ್ಷಮಸ್ವ ದೇವ ಇತಿ ನನಾಮ ಪಾದಯೋಃ । ಉವಾಚ ಚ ತ್ವದ್ವಶಗಃ ಅಸ್ಮಿ ಸರ್ವದಾ ಪ್ರಸೀದ ಮೇ ತ್ವದ್ವಿಷಯಂ ಮನಃ ಕುರು ॥**

**ಅರ್ಥ** :- **ಅಥ** ಅನಂತರ **ಉತ್ಥಿತಃ** ಏಳಲ್ಪಟ್ಟ **ಅಸುರಭಾವವರ್ಜಿತಶ್ಚ** ಅಸುರ ವ್ಯಾಮೋಹದಿಂದ ಬಿಡಲ್ಪಟ್ಟವನಾದ ರುದ್ರನಾದರೋ **ಹೇ ದೇವ** ಹೇ ರಾಮನೇ **ಕ್ಷಮಸ್ವ** ಕ್ಷಮಿಸುವವನಾಗು **ಇತಿ** ಎಂದು **ಪಾದಯೋಃ** ಪಾದಗಳಿಗೆ **ನನಾಮ** ನಮಸ್ಕರಿಸಿದನು. **ಚ** ಮತ್ತು **ಸರ್ವದಾ** ಯಾವಾಗಲೂ **ತ್ವದ್ವಶಗಃ** ನಿನ್ನ ಅಧೀನನಾಗಿರುವನೆನು **ಮೇ** ನನ್ನಲ್ಲಿ **ಪ್ರಸೀದ** ಪ್ರಸನ್ನನಾಗು **ಮನಃ** ಮನಸ್ಸು **ತ್ವದ್ವಿಷಯಂ** ನಿನ್ನಲ್ಲಿ ಆಸಕ್ತವಾಗಿರುವಂತೆ **ಕುರು** ಮಾಡು (**ಇತಿ** ಎಂದು) **ಉವಾಚ** ಹೇಳಿದನು.

**ತಾತ್ಪರ್ಯ** :- ಕೆಳಗೆ ಬಿದ್ದ ಶಿವನಿಗೆ ಆಸುರಾವೇಶವು ದೂರವಾಯಿತು. ಕೂಡಲೇ 'ಕ್ಷಮಿಸು' ಎಂದು ರಾಮನ ಪಾದಗಳಿಗೆ ನಮಸ್ಕರಿಸಿ 'ಎಲೈ ರಾಮನೇ! ನಾನು ಸದಾ ನಿನ್ನ ವಶದಲ್ಲಿರುವವನೇ, ನನ್ನಲ್ಲಿ ಪ್ರಸನ್ನನಾಗು ನನ್ನ ಮನವು ಯಾವಾಗಲೂ ನಿನ್ನನ್ನು ಚಿಂತಿಸುವಂತೆ ಅನುಗ್ರಹಿಸು' ಎನ್ನುವನು.

ಇಂದ್ರಾದಿಗಳಿಂದ ರಾಮಸ್ತುತಿ

ಅಥೇಂದ್ರಮುಖ್ಯಾಶ್ಚ ತಮೂಚಿರೇ ಸುರಾಸ್ತ್ವ
ವಯಾऽವಿತಾಃ ಸ್ಮೋऽದ್ಯ ನಿಶಾಚರಾದ್ ವಯಮ್ ।
ತಥೈವ ಸರ್ವಾಪದ ಏವ ನಸ್ತ್ವಂ
ಪ್ರಪಾಹಿ ಸರ್ವೇ ಭವದೀಯಕಾಃ ಸ್ಮ ॥ ೨೨೧ ॥

ಪದಚ್ಛೇದ : ಅಥ ಇಂದ್ರಮುಖ್ಯಾಃ ಚ ತಮ್ ಊಚಿರೇ ಸುರಾಃ ತ್ವಯಾ ಆವಿತಾಃ ಸ್ಮಃ ಅದ್ಯ ನಿಶಾಚರಾತ್ ವಯಮ್ । ತಥಾ ಏವ ಸರ್ವಾಪದಃ ಏವ ನಃ ತ್ವಂ ಪ್ರಪಾಹಿ ಸರ್ವೇ ಭವದೀಯಕಾಃ ಸ್ಮಃ ॥

**ಅರ್ಥ** :- **ಅಥ** ಅನಂತರ **ಇಂದ್ರಮುಖ್ಯಾಃ** ಇಂದ್ರನೇ ಪ್ರಧಾನವಾಗಿಯುಳ್ಳ **ಸುರಾಃ** ದೇವತೆಗಳು **ತಂ** ಆ ರಾಮನನ್ನು ಕುರಿತು **ಊಚಿರೇ** ಹೇಳಿದರು. **ವಯಂ** ನಾವು **ಅದ್ಯ** ಈಗ **ತ್ವಯಾ** ನಿನ್ನಿಂದ **ನಿಶಾಚರಾತ್** ರಾವಣನಿಂದ **ಆವಿತಾಃ ಸ್ಮ** ರಕ್ಷಿಸಲ್ಪಟ್ಟಿದೇವೆಯಷ್ಟೇ **ತಥೈವ** ಹಾಗೆಯೇ **ನಃ** ನಮ್ಮನ್ನು **ತ್ವಂ** ನೀನು **ಸರ್ವಾಪದಃ** ಎಲ್ಲಾ ವಿಪತ್ತುಗಳಿಂದ **ಪ್ರಪಾಹಿ** ರಕ್ಷಿಸು **ಸರ್ವೇ** ನಾವೆಲ್ಲರೂ **ಭವದೀಯಕಾಃ** ನಿನ್ನವರು **ಸ್ಮಃ** ಆಗಿರುವೆವು.

**ತಾತ್ಪರ್ಯ** : ಅನಂತರ ಇಂದ್ರನೇ ಮೊದಲಾದ ದೇವತೆಗಳು ರಾಮನನ್ನು ಕುರಿತು ಹೀಗೆ ಹೇಳುತ್ತಾರೆ. 'ರಾಮನೇ ನಿನ್ನಿಂದಲೇ ಈಗ ನಾವು ರಾವಣನಿಂದ ರಕ್ಷಿತರಾಗಿರುವೆವು. ಮುಂದೆಯೂ ಕೂಡ ನೀನು ಹೀಗೆಯೇ ಸರ್ವ ಆಪತ್ತುಗಳಿಂದಲೂ ನಮ್ಮನ್ನು ರಕ್ಷಿಸು. ನಾವೆಲ್ಲರೂ ನಿನ್ನ ಭಕ್ತರಾಗಿರುವೆವು.

ಸೀತಾಗಮನ

ಸೀತಾಕೃತಿಂ ತಾಮಥ ತತ್ರ ಚಾऽಗತಾಂ
ದಿವ್ಯಚ್ಛಲೇನ ಪ್ರಣಿಧಾಯ ಪಾವಕೇ ।
ಕೈಲಾಸತಸ್ತಾಂ ಪುನರೇವ ಚಾऽಗತಾಂ
ಸೀತಾಮಗೃಹ್ಣಾದ್ಧುತಭುಕ್ಸಮರ್ಪಿತಾಮ್ ॥ ೨೨೨ ॥

ಪದಚ್ಛೇದ : ಸೀತಾಕೃತಿಂ ತಾಮ್ ಅಥ ತತ್ರ ಚ ಆಗತಾಂ ದಿವ್ಯಚ್ಛಲೇನ ಪ್ರಣಿಧಾಯ ಪಾವಕೇ । ಕೈಲಾಸತಃ ತಾಂ ಪುನಃ ಏವ ಚ ಆಗತಾಂ ಸೀತಾಮ್ ಅಗೃಹ್ಣಾತ್ ಹುತಭುಕ್ಸಮರ್ಪಿತಾಮ್ ॥

**ಅರ್ಥ** :- **ಅಥ** ಅನಂತರ **ತತ್ರ** ತನ್ನ ಸನಿಹಕ್ಕೆ **ಆಗತಾಂ** ಬಂದಿರುವ **ತಾಂ** ಆ ರಾವಣನಿಂದ ಅಪಹೃತವಾದ **ಸೀತಾಕೃತಿಂ** ಸೀತೆಯ ಪ್ರತಿಕೃತಿಯನ್ನು **ದಿವ್ಯಚ್ಛಲೇನ** ಶಪಥವ್ಯಾಜದಿಂದ **ಪಾವಕೇ** ಅಗ್ನಿಯಲ್ಲಿ **ಪ್ರಣಿಧಾಯ** ಪ್ರವೇಶಿಸಿ **ಕೈಲಾಸತಃ** ಕೈಲಾಸದಿಂದ **ಆಗತಾಂ** ಬಂದಿರುವ **ಹುತಭುಕ್‌ಸಮರ್ಪಿತಾಂ ಚ** ಅಗ್ನಿಯಿಂದ ಕೊಡಲ್ಪಟ್ಟ **ತಾಂ** ಆ **ಸೀತಾಂ ಚ** ಸೀತೆಯನ್ನಾದರೂ **ಪುನರೇವ ಚ** ಮತ್ತೂ ಕೂಡ **ಅಗೃಹ್ಣಾತ್** ಸ್ವೀಕರಿಸಿದರು.

**ತಾತ್ಪರ್ಯ** :- ತನ್ನಲ್ಲಿಗೆ ಬಂದ ಸೀತೆಯ ಪ್ರತಿಕೃತಿಯನ್ನು ಪರಿಕ್ಷಿಸಬೇಕೆಂಬ ನೆಪದಿಂದ ಅಗ್ನಿಗೆ ಸಮರ್ಪಿಸಿದ ರಾಮನು ಕೈಲಾಸದಿಂದ ಅಲ್ಲಿಗೆ ಬಂದಿರುವ ಅಗ್ನಿಯು ಸಮರ್ಪಿಸಿದ ಸೀತೆಯನ್ನು ಸ್ವೀಕರಿಸುತ್ತಾನೆ.

### ರಾಮಸೀತೆಯರ ಮಿಲನ

**ಜಾನನ್ ಗಿರೀಶಾಲಯಗಾಂ ಸ ಸೀತಾಂ**
**ಸಮಗ್ರಹೀತ್ ಪಾವಕಸಂಪ್ರದತ್ತಾಮ್ ।**
**ಮುಮೋದ ಸಂಪ್ರಾಪ್ಯ ಚ ತಾಂ ಸ ರಾಮಃ**
**ಸಾ ಚೈವ ದೇವೀ ಭಗವಂತಮಾಪ್ಯ ॥ ೨೨೩ ॥**

**ಪದಚ್ಛೇದ** : ಜಾನನ್ ಗಿರೀಶಾಲಯಗಾಂ ಸಃ ಸೀತಾಂ ಸಮಗ್ರಹೀತ್ ಪಾವಕಸಂಪ್ರದತ್ತಾಮ್ । ಮುಮೋದ ಸಂಪ್ರಾಪ್ಯ ಚ ತಾಂ ಸಃ ರಾಮಃ ಸಾ ಚ ಏವ ದೇವೀ ಭಗವಂತಮ್ ಆಪ್ಯ ॥

**ಅರ್ಥ** :- **ಸಃ** ಆ **ರಾಮಃ** ರಾಮನು **ಗಿರೀಶಾಲಯಗಾಂ** ಶಿವನ ಆಲಯವಾದ ಕೈಲಾಸದಲ್ಲಿರುವಂತಹ **ಸೀತಾಂ** ಸೀತೆಯನ್ನು **ಜಾನನ್ (ಸನ್)** ತಿಳಿದವನಾಗಿ **ಪಾವಕಸಂಪ್ರದತ್ತಾಂ** ಅಗ್ನಿಯಿಂದ ಕೊಡಲ್ಪಟ್ಟ **ಸೀತಾಂ** ಸೀತೆಯನ್ನು **ಸಮಗ್ರಹೀತ್** ಸ್ವೀಕರಿಸಿದನು. **ಸಃ** ಆ ರಾಮನು **ತಾಂ** ಆ ಸೀತೆಯನ್ನು **ಸಂಪ್ರಾಪ್ಯ** ಹೊಂದಿ **ಮುಮೋದ** ಸಂತೋಷಿಸಿದನು. **ಸಾ ಚ ದೇವೀ** ಆ ಸೀತಾದೇವಿಯೂ ಕೂಡ **ಭಗವಂತಂ** ಷಡ್ಗುಣೈಶ್ವರ್ಯಸಂಪನ್ನನಾದ ರಾಮನನ್ನು **ಆಪ್ಯ** ಹೊಂದಿ (**ಮುಮೋದ** ಹರ್ಷಿಸಿದಳು.)

**ತಾತ್ಪರ್ಯ** :- ಇಷ್ಟು ದಿನ ಪರ್ಯಂತ ಸೀತೆಯು ಕೈಲಾಸದಲ್ಲಿರುವವಳೆಂದು ತಿಳಿದಿದ್ದ ರಾಮನು ಅಗ್ನಿಯು ಸಮರ್ಪಿಸಿದ ಅವಳನ್ನು ಸ್ವೀಕರಿಸಿದ. ಇದರಿಂದ ರಾಮನು ಹಾಗು ಸೀತೆಯು ಪರಸ್ಪರ ಇಬ್ಬರೂ ಮತ್ತೊಬ್ಬರನ್ನು ಹೊಂದಿ ಮುದಗೊಂಡರು.

ಸುಷೇಣನಿಂದ ಚಿಕಿತ್ಸೆ

ಅಥೋ ಗಿರೇರಾನಯನಾತ್ ಪರಸ್ತಾದ್
ಯೇ ವಾನರಾ ರಾವಣಬಾಣಪೀಡಿತಾಃ ।
ತಾರಾಪಿತಾ ತಾನ್ ನಿರುಜಶ್ಚಕಾರ
ಸುಷೇಣನಾಮಾ ಭಿಷಜಾಂ ವರಿಷ್ಠಃ ॥ ೨೨೪ ॥

ಪದಚ್ಛೇದ : ಅಥೋ ಗಿರೇಃ ಆನಯನಾತ್ ಪರಸ್ತಾತ್ ಯೇ ವಾನರಾಃ ರಾವಣಬಾಣಪೀಡಿತಾಃ । ತಾರಾಪಿತಾ ತಾನ್ ನಿರುಜಃ ಚಕಾರ ಸುಷೇಣನಾಮಾ ಭಿಷಜಾಂ ವರಿಷ್ಠಃ ॥

**ಅರ್ಥ** :- **ಅಥೋ** ಅನಂತರ **ಗೀರೇಃ** ಗಂಧಮಾದನಪರ್ವತದ **ಆನಯಾತ್** ತರುವದೆಸೆಯಿಂದ **ಪರಸ್ತಾತ್** ಅನಂತರ **ಯೇ** ಈ ಯಾವ **ವಾನರಾಃ** ಕಪಿಗಳು **ರಾವಣಬಾಣಪೀಡಿತಾಃ** ರಾವಣನ ಬಾಣದಿಂದ ಹಿಂಸಿಸಲ್ಪಟ್ಟಿರುವರೋ **ತಾನ್** ಆ ಕಪಿಗಳನ್ನು **ತಾರಾಪಿತಾ** ತಾರೆಯ ಪಿತನಾದ **ಭಿಷಜಾಂ** ವೈದ್ಯರಲ್ಲಿ **ವರಿಷ್ಠಃ** ಶ್ರೇಷ್ಠನಾದ **ಸುಷೇಣನಾಮಾ** ಸುಷೇಣನೆಂಬ ಹೆಸರಿನ ಕಪಿಯು **ನಿರುಜಃ** ನಿರೋಗಿಗಳನ್ನಾಗಿ **ಚಕಾರ** ಮಾಡಿದನು.

**ತಾತ್ಪರ್ಯ** :- ಗಂಧಮಾದನ ಪರ್ವತವನ್ನು ತಂದಾದ ಮೇಲೆ ರಾವಣಬಾಣದಿಂದ ಪುನಃ ಪೀಡಿತರಾಗಿ ಗಾಯಗೊಂಡ ಕಪಿಗಳಿಗೆ ಉತ್ತಮ ವೈದ್ಯನಾದ ತಾರೆಯ ಪಿತನಾದ ಸುಷೇಣನೆಂಬ ಕಪಿಯು ಚಿಕಿತ್ಸೆ ಮಾಡಿ ಅವರನ್ನೆಲ್ಲಾ ರೋಗಮುಕ್ತರನ್ನಾಗಿಸುತ್ತಾನೆ.

ಸತ್ತ ಕಪಿಗಳಿಗೆ ಪುನರ್ಜೀವನ

ತದಾ ಮೃತಾನ್ ರಾಘವ ಆನಿನಾಯ
ಯಮಕ್ಷಯಾದ್ ದೇವಗಣಾಂಶ್ಚ ಸರ್ವಶಃ ।
ಸಮನ್ವಜಾನಾತ್ ಪಿತರಂ ಚ ತತ್ರ
ಸಮಾಗತಂ ಗಂತುಮಿಯೇಷ ಚಾಥ ॥ ೨೨೫ ॥

ಪದಚ್ಛೇದ : ತದಾ ಮೃತಾನ್ ರಾಘವಃ ಆನಿನಾಯ ಯಮಕ್ಷಯಾತ್ ದೇವಗಣಾನ್ ಚ ಸರ್ವಶಃ । ಸಮನ್ವಜಾನಾತ್ ಪಿತರಂ ಚ ತತ್ರ ಸಮಾಗತಂ ಗಂತುಮ್ ಇಯೇಷ ಚ ಅಥ ॥

**ಅರ್ಥ** :- **ರಾಘವಃ** ಶ್ರೀರಾಮನು **ತದಾ** ಪರ್ವತವನ್ನು ತಂದ ಉತ್ತರ ಕಾಲದಲ್ಲಿ **ಮೃತಾನ್** ಮೃತರಾದ ಕಪಿಗಳನ್ನು **ಯಮಕ್ಷಯಾತ್** ಯಮನ

ನಿವಾಸದಿಂದ **ಆನಿನಾಯ** ತರಿಸಿದನು. **ಸರ್ವಶಃ** ಎಲ್ಲಾ **ದೇವಗಣಾನ್** ಸ್ತುತಿಸಲು ಬಂದಿರುವ ಬ್ರಹ್ಮಾದಿದೇವತೆಗಳನ್ನು **ತತ್ರ** ತನ್ನ ಸಮೀಪಕ್ಕೆ **ಸಮಾಗತಂ** ದೇವತೆಗಳಿಂದ ಮತ್ತು ಮೃತಕಪಿಗಳಿಂದ ಕೂಡಿ ಬಂದಿರುವ **ಪಿತರಂ ಚ** ತಂದೆಯಾದ ದಶರಥನನ್ನೂ ಕೂಡ **ಸಮನ್ವಜಾನಾತ್** ತನ್ನ ಸ್ಥಾನಕ್ಕೆ ಹೋಗಲು ಆಜ್ಞಾಪಿಸಿದನು. **ಅಥ** ಬ್ರಹ್ಮಾದಿಗಳು ತೆರಳಿದ ನಂತರ **ಗಂತುಂ** ತಾನೂ ಅಯೋಧ್ಯೆಗೆ ತೆರಳಲು **ಇಯೇಷ** ಇಚ್ಛಿಸಿದನು.

**ತಾತ್ಪರ್ಯ** :- ಮೃತರಾದ ಕಪಿಗಳನ್ನು ಯಮಲೋಕದಿಂದ ಕರೆಸಿದ ರಾಮನು, ತನ್ನನ್ನು ಸ್ತುತಿಸಲು ಆಗಮಿಸಿದ ಬ್ರಹ್ಮಾದಿದೇವತೆಗಳಿಗೂ ಅಲ್ಲಿ ಬಂದಿದ್ದ ತನ್ನ ತಂದೆಯಾದ ದಶರಥನಿಗೂ ತನ್ನ ಲೋಕಕ್ಕೆ ಹಿಂತಿರುಗಲು ಹೇಳಿ ತಾನು ಅಯೋಧ್ಯೆಗೆ ಹಿಂತಿರುಗಲು ಇಚ್ಛಿಸುತ್ತಾನೆ.

### ಲಂಕೆಯಿಂದ ರಾಮಾದಿಗಳ ನಿರ್ಗಮನ

**ವಿಭೀಷಣೇನಾರ್ಪಿತಮಾರುರೋಹ**
**ಸ ಪುಷ್ಪಕಂ ತತ್ಸಹಿತಃ ಸವಾನರಃ ।**
**ಪುರೀಂ ಜಗಾಮಾऽಶು ನಿಜಾಮಯೋಧ್ಯಾಂ**
**ಪುರೋ ಹನೂಮಂತಮಥೋ ನ್ಯಯೋಜಯತ್ ॥ ೨೨೬ ॥**

**ಪದಚ್ಛೇದ : ವಿಭೀಷಣೇನ ಅರ್ಪಿತಮ್ ಆರುರೋಹ ಸಃ ಪುಷ್ಪಕಂ ತತ್ಸಹಿತಃ ಸವಾನರಃ । ಪುರೀಂ ಜಗಾಮ ಆಶು ನಿಜಾಮ್ ಅಯೋಧ್ಯಾಂ ಪುರಃ ಹನೂಮಂತಮ್ ಅಥೋ ನ್ಯಯೋಜಯತ್ ॥**

**ಅರ್ಥ** :- **ಸಃ** ಆ ರಾಮನು **ವಿಭೀಷಣೇನ** ವಿಭೀಷಣನಿಂದ **ಅರ್ಪಿತಂ** ಅರ್ಪಿಸಲ್ಪಟ್ಟ **ಪುಷ್ಪಕಂ** ಪುಷ್ಪಕವಿಮಾನವನ್ನು **ತತ್ಸಹಿತಃ** ಆ ವಿಭೀಷಣನಿಂದ ಕೂಡಿದವನಾಗಿ **ಸವಾನರಃ (ಸನ್)** ಕಪಿಗಳಿಂದ ಸಹಿತನಾಗಿ **ಆಶು** ಕೂಡಲೇ **ಆರುರೋಹ** ಏರಿದನು. **ನಿಜಾಂ** ತನ್ನದಾದ **ಅಯೋಧ್ಯಾಂ** ಅಯೋಧ್ಯೆಯನ್ನು **ಜಗಾಮ** ಹೋದನು. **ಅಥೋ** ಅನಂತರ **ಪುರಃ** ಮೊದಲು **ಹನುಮಂತಂ** ಹನುಮಂತನನ್ನು **ನ್ಯಯೋಜಯತ್** ತಾನು ಬರುತ್ತಿರುವುದನ್ನು ಭರತನಿಗೆ ತಿಳಿಸಲು ಕಳುಹಿಸಿದನು.

**ತಾತ್ಪರ್ಯ** :- ವಿಭೀಷಣನು ಸಮರ್ಪಿಸಿದ ಪುಷ್ಪಕವಿಮಾನವನ್ನ ಏರಿದ ರಾಮನು ತನ್ನೊಂದಿಗೆ ವಿಭೀಷಣನನ್ನು ಹಾಗೂ ವಾನರರನ್ನೂ ಕರೆದು ಕೊಂಡು

ಅಯೋಧ್ಯೆಗೆ ತೆರಳುತ್ತಾನೆ. ತನ್ನ ಆಗಮನವಾರ್ತೆಯನ್ನು ತಿಳಿಸಲು ಮುಂದಾಗಿಯೇ ಹನುಮಂತನನ್ನು ಕಳುಹಿಸುತ್ತಾನೆ.

ಭರತನಿಗೆ ರಾಮಾಗಮನವನ್ನು ತಿಳಿಸಿದ ಹನುಮ

**ದದರ್ಶ ಚಾಸೌ ಭರತಂ ಹುತಾಶನಂ**
**ಪ್ರವೇಷ್ಟುಕಾಮಂ ಜಗದೀಶ್ವರಸ್ಯ ।**
**ಅದರ್ಶನಾತ್ ತಂ ವಿನಿವಾರ್ಯ ರಾಮಂ**
**ಸಮಾಗತಂ ಚಾಸ್ಯ ಶಶಂಸ ಮಾರುತಿಃ ॥ ೨೨೭ ॥**

ಪದಚ್ಛೇದ : ದದರ್ಶ ಚ ಅಸೌ ಭರತಂ ಹುತಾಶನಂ ಪ್ರವೇಷ್ಟುಕಾಮಂ ಜಗದೀಶ್ವರಸ್ಯ । ಅದರ್ಶನಾತ್ ತಂ ವಿನಿವಾರ್ಯ ರಾಮಂ ಸಮಾಗತಂ ಚ ಅಸ್ಯ ಶಶಂಸ ಮಾರುತಿಃ ॥

**ಅರ್ಥ** :- **ಅಸೌ** ಈ ಹನುಮಂತನು **ಜಗದೀಶ್ವರಸ್ಯ** ಶ್ರೀರಾಮನ **ಅದರ್ಶನಾತ್** ನೋಡದ ಪ್ರಯುಕ್ತ **ಹುತಾಶಂ** ಅಗ್ನಿಯನ್ನು **ಪ್ರವೇಷ್ಟುಕಾಮಂ** ಪ್ರವೇಶಿಸಲು ಅಪೇಕ್ಷಿಸಿದ **ಭರತಂ** ಭರತನನ್ನು **ದದರ್ಶ** ನೋಡಿದನು. **ಮಾರುತಿಃ** ಮಾರುತಿಯು **ತಂ ಚ** ಆ ಭರತನನ್ನಾದರೂ **ವಿನಿವಾರ್ಯ** ತಡೆದು **ಅಸ್ಯ** ಈ ಭರತನಿಗೆ **ಸಮಾಗತಂ** ಬಂದಿರುವ **ರಾಮಂ** ರಾಮನ ವಿಷಯವನ್ನು **ಶಶಂಸ** ಹೇಳಿದನು.

**ತಾತ್ಪರ್ಯ** :- ಭರತನು ರಾಮನನ್ನು ಕಾಣಲಾಗದ ನಿಮಿತ್ತದಿಂದ ಅಗ್ನಿ ಪ್ರವೇಶವನ್ನು ಮಾಡಲು ಉದ್ಯುಕ್ತನಾದ. ಅಷ್ಟರಲ್ಲಿ ಆಗಮಿಸಿದ ಹನುಮಂತನು ಇವನನ್ನು ತಡೆದು ರಾಮನು ಬಂದಿರುವ ವಿಷಯವನ್ನು ತಿಳಿಸುತ್ತಾನೆ.

ರಾಮನಿಗೆ ಭರತನಿಂದ ಸ್ವಾಗತ

**ಶ್ರುತ್ವಾ ಪ್ರಮೋದೋರುಭರಃ ಸ ತೇನ**
**ಸಹೈವ ಪೌರೈಃ ಸಹಿತಃ ಸಮಾತೃಕಃ ।**
**ಶತ್ರುಘ್ನಯುಕ್ತೋಽಭಿಸಮೇತ್ಯ ರಾಘವಂ**
**ನನಾಮ ಬಾಷ್ಪಾಕುಲಲೋಚನಾನನಃ ॥ ೨೨೮ ॥**

ಪದಚ್ಛೇದ : ಶ್ರುತ್ವಾ ಪ್ರಮೋದೋರುಭರಃ ಸಃ ತೇನ ಸಹ ಏವ ಪೌರೈಃ ಸಹಿತಃ ಸಮಾತೃಕಃ । ಶತ್ರುಘ್ನಯುಕ್ತಃ ಅಭಿಸಮೇತ್ಯ ರಾಘವಂ ನನಾಮ ಬಾಷ್ಪಾಕುಲಲೋಚನಾನನಃ ॥

**ಅರ್ಥ** :- **ಸಃ** ಆ ಭರತನು **ಶ್ರುತ್ವಾ** ಹನುಮನಿಂದ ರಾಮನ ಆಗಮನ ವಾರ್ತೆಯನ್ನು ಕೇಳಿ **ಪ್ರಮೋದೋರುಬಲಃ (ಸನ್)** ಉತ್ಕೃಷ್ಟವಾದ ಆನಂದ ದಿಂದ ಬಹಳವಾದ ಅತಿಶಯವುಳ್ಳವನಾಗಿ **ತೇನ** ಆ ಹನುಮಂತನಿಂದ **ಸಹೈವ** ಕೊಡಿಕೊಂಡವನಾಗಿಯೇ **ಪೌರೈಃ** ಪುರಜನರಿಂದ **ಸಹಿತಃ (ಸನ್)** ಕೂಡಿದವ ನಾಗಿ **ಸಮಾತೃಕಃ** ತಾಯಂದರಿಂದ ಸಹಿತನಾಗಿ **ಶತ್ರುಘ್ನಯುಕ್ತಃ (ಸನ್)** ಶತ್ರುಘ್ನನಿಂದ ಕೂಡಿದವನಾಗಿ **ರಾಘವಂ** ರಾಮನನ್ನು **ಅಭಿಸಮೇತ್ಯ** ಹೊಂದಿ **ಬಾಷ್ಪಾಕುಲ ಲೋಚನಾನನಃ** ಆನಂದಬಾಷ್ಪದಿಂದ ಕೂಡಿದ ಕಣ್ಣುಗಳುಳ್ಳ ಮುಖವುಳ್ಳವನಾಗಿ **ನನಾಮ** ನಮಸ್ಕರಿಸಿದನು.

**ತಾತ್ಪರ್ಯ** : ಹನುಮಂತನಿಂದ ರಾಮನ ಆಗಮನ ವಾರ್ತೆಯನ್ನು ಕೇಳಿ ಆನಂದತುಂದಿಲನಾದ ಭರತನು ಹನುಮಂತನಿಂದ ಕೂಡಿ ಅಯೋಧ್ಯಜನರು, ತಾಯಂದಿರು ಹಾಗು ಶತ್ರುಘ್ನನಿಂದ ಕೂಡಿ ಕೊಂಡು ರಾಮನನ್ನು ಸಮೀಪಿಸುತ್ತಾನೆ. ರಾಮನನ್ನು ನೋಡಿ ಭರತನು ಆನಂದಬಾಷ್ಪವನ್ನು ಸುರಿಸುತ್ತಾ ನಮಸ್ಕರಿದ.

**ಉತ್ಥಾಪ್ಯ ತಂ ರಘುಪತಿಃ ಸಸ್ವಜೇ ಪ್ರಣಯಾನ್ವಿತಃ ।**
**ಶತ್ರುಘ್ನಂ ಚ ತದನ್ಯೇಷು ಪ್ರತಿಪೇದೇ ಯಥಾವಯಃ ॥ ೨೨೯ ॥**

ಪದಚ್ಛೇದ : ಉತ್ಥಾಪ್ಯ ತಂ ರಘುಪತಿಃ ಸಸ್ವಜೇ ಪ್ರಣಯಾನ್ವಿತಃ । ಶತ್ರುಘ್ನಂ ಚ ತದನ್ಯೇಷು ಪ್ರತಿಪೇದೇ ಯಥಾವಯಃ ॥

**ಅರ್ಥ** :- **ರಘುಪತಿಃ** ಶ್ರೀರಾಮನು **ತಂ** ಆ ಭರತನನ್ನು **ಉತ್ಥಾಪ್ಯ** ಏಳಿಸಿ **ಪ್ರಣಯಾನ್ವಿತಃ (ಸನ್)** ಪ್ರೀತಿಯಿಂದ ಕೂಡಿದವನಾಗಿ **ಸಸ್ವಜೇ** ಆಲಿಂಗಿಸಿದನು. **ಶತ್ರುಘ್ನಂ ಚ** ಶತ್ರುಘ್ನನನ್ನೂ ಕೂಡ (**ಸಸ್ವಜೇ** ಆಲಿಂಗಿಸಿದನು.) **ತದನ್ಯೇಽಪಿ** ಭರತಶತ್ರುಘ್ನರಿಂದ ಅನ್ಯರಾದ ತಾಯುಂದಿರು ಮೊದಲಾದವರಲ್ಲಿ **ಯಥಾವಯಃ** ವಯಸ್ಸಿನ ಅನುಗುಣವಾಗಿ **ಪ್ರತಿಪೇದೇ** ನಮಸ್ಕರಿಸಿದನು.

**ತಾತ್ಪರ್ಯ** : ನಮಸ್ಕರಿಸಿದ ಭರತನನ್ನು ಪ್ರೀತಿಯಿಂದ ಎಬ್ಬಿಸಿ ಆಲಿಂಗಿಸಿದ ರಾಮನು ಶತ್ರುಘ್ನನನ್ನು ಆಲಿಂಗಿಸಿ, ತನ್ನ ತಾಯಂದಿರೇ ಮೊದಲಾದವರನ್ನು ಅವರ ವಯಸ್ಸಿನ ಅನುಸಾರವಾಗಿ ಗೌರವಿಸುತ್ತಾನೆ.

### ಅಯೋಧ್ಯೆಯನ್ನು ಪ್ರವೇಶಿಸಿದ ರಾಮ

**ಪುರೀಂ ಪ್ರವಿಶ್ಯ ಮುನಿಭಿಃ ಸಾಮ್ರಾಜ್ಯೇ ಚಾಭಿಷೇಚಿತಃ ।**
**ಯಥೋಚಿತಂ ಚ ಸಮ್ಮಾನ್ಯ ಸರ್ವಾನಾಹೇದಮೀಶ್ವರಃ ॥ ೨೩೦ ॥**

ಪದಚ್ಛೇದ : ಪುರೀಂ ಪ್ರವಿಶ್ಯ ಮುನಿಭಿಃ ಸಾಮ್ರಾಜ್ಯೇ ಚ ಅಭಿಷೇಚಿತಃ ।
ಯಥೋಚಿತಂ ಚ ಸಮ್ಮಾನ್ಯ ಸರ್ವಾನ್ ಆಹ ಇದಮ್ ಈಶ್ವರಃ ॥

**ಅರ್ಥ** : **ಪುರೀಂ** ಅಯೋಧ್ಯೆಯನ್ನು **ಪ್ರವಿಶ್ಯ** ಪ್ರವೇಶಿಸಿ **ಮುನಿಭಿಃ** ಮುನಿಗಳಿಂದ **ಸಾಮ್ರಾಜ್ಯೇ** ಸಾಮ್ರಾಜ್ಯದಲ್ಲಿ **ಅಭಿಷೇಚಿತಃ** ಅಭಿಷೇಕಿಸಲ್ಪಟ್ಟ **ಈಶ್ವರಃ** ಶ್ರೀರಾಮನು **ಯಥೋಚಿತಂ** ಅವರವರ ಯೋಗ್ಯತಾನುಸಾರವಾಗಿ **ಸಮ್ಮಾನ್ಯ** ಸತ್ಕರಿಸಿ **ಚ** ಮತ್ತು **ಸರ್ವಾನ್** ಎಲ್ಲರನ್ನು ಕುರಿತು **ಇದಂ** ಮುಂದೆ ಹೇಳುವ ಮಾತನ್ನು **ಆಹ** ಹೇಳಿದನು.

**ತಾತ್ಪರ್ಯ** :- ಅಯೋಧ್ಯೆಯನ್ನು ಪ್ರವೇಶಿಸಿದ ರಾಮನಿಗೆ ಮುನಿಗಳು ಪಟ್ಟಾಭಿ ಷೇಕವನ್ನು ಮಾಡುತ್ತಾರೆ. ಯಥಾಯೋಗ್ಯವಾಗಿ ಎಲ್ಲರನ್ನು ಸತ್ಕರಿಸಿದ ರಾಮನು ಈ ಮಾತನ್ನು ಹೇಳುತ್ತಾನೆ.

**ಸರ್ವೈರ್ಭವದ್ಭಿಃ ಸುಕೃತಂ ವಿಧಾಯ**
**ದೇಹಂ ಮನೋವಾಕ್ಸಹಿತಂ ಮದೀಯಮ್ ।**
**ಏತಾವದೇವಾಖಿಲಸದ್ವಿಧೇಯಂ ಯತ್**
**ಕಾಯವಾಕ್ಚಿತ್ತಭವಂ ಮದರ್ಚನಮ್ ॥ ೨೩೧ ॥**

ಪದಚ್ಛೇದ : ಸರ್ವೈಃ ಭವದ್ಭಿಃ ಸುಕೃತಂ ವಿಧಾಯ ದೇಹಂ ಮನೋವಾಕ್ಸಹಿತಂ ಮದೀಯಮ್ । ಏತಾವತ್ ಏವ ಅಖಿಲಸದ್ವಿಧೇಯಂ ಯತ್ ಕಾಯವಾಕ್ಚಿತ್ತಭವಂ ಮದರ್ಚನಮ್ ॥

**ಅರ್ಥ** :- **ಸರ್ವೈಃ ಭವದ್ಭಿಃ** ನಿಮ್ಮೆಲ್ಲರಿಂದ **ಮನೋವಾಕ್‌ಸಹಿತಂ** ಮನಸ್ಸು ಮಾತುಗಳಿಂದ ಕೂಡಿದ **ದೇಹಂ** ಶರೀರವನ್ನು **ಮದೀಯಂ** ನನ್ನ ಸಂಬಂಧಿಯನ್ನಾಗಿ **ವಿಧಾಯ** ಮಾಡಿ **ಕಾಯವಾಕ್ಚಿತ್ತಭವಂ** ಕಾಯ ವಾಕ್ ಮನಸ್ಸು ಇವುಗಳಿಂದ ಸಂಪಾದಿಸಿಕೊಳ್ಳಲ್ಪಟ್ಟ **ಯತ್** ಈ ಯಾವ **ಮದರ್ಚನಂ** ನನ್ನ ಪೂಜೆಯು **ಭವದ್ಭಿಃ** ನಿಮ್ಮಿಂದ **ಸುಕೃತಂ** ಚೆನ್ನಾಗಿ ಮಾಡಲ್ಪಟ್ಟಿತು. **ಏತಾವದೇವ** ಇಷ್ಟು ಮಾತ್ರದಿಂದಲೇ **ಅಖಿಲಸದ್ವಿಧೇಯಂ** ಸಕಲಸಜ್ಜನರಿಂದ ಮಾಡಲು ಯೋಗ್ಯವಾದದ್ದು.'

**ತಾತ್ಪರ್ಯ** :- 'ನೀವೆಲ್ಲರೂ ಮನಸ್ಸು ಮಾತು, ಶರೀರಗಳಿಂದ ನನ್ನನ್ನು ಸೇವಿಸಿರುವಿರಿ. ಈ ರೀತಿಯಾಗಿ ದೇಹ, ಮಾತು ಮನಸ್ಸು ಇವುಗಳಿಂದ ನನ್ನನ್ನ ಸೇವಿಸುವುದೇ ಸಜ್ಜನರಿಂದ ಮಾಡಬಹುದಾದ ಭಗವತ್ಪೂಪಾವಿಧಾನವಾಗಿದೆ.'

### ಎಲ್ಲರಿಗೂ ಮುಕ್ತಿ ಕರುಣಿಸಿದ ರಾಮ

ಮುಕ್ತಿಪ್ರದಾನಾತ್ ಪ್ರತಿಕರ್ತೃತಾ ಮೇ
ಸರ್ವಸ್ಯ ಚಾಥೋ ಭವತಾಂ ಭವೇತ ।
ಹನೂಮತೋ ನ ಪ್ರತಿಕರ್ತೃತಾ ಸ್ಯಾತ್
ಸ್ವಭಾವಭಕ್ತಸ್ಯ ನಿರೌಪಧಂ ಮೇ ॥ ೨೩೨ ॥

ಪದಚ್ಛೇದ : ಮುಕ್ತಿಪ್ರದಾನಾತ್ ಪ್ರತಿಕರ್ತೃತಾ ಮೇ ಸರ್ವಸ್ಯ ಚ ಅಥೋ ಭವತಾಂ ಭವೇತ । ಹನೂಮತಃ ನ ಪ್ರತಿಕರ್ತೃತಾ ಸ್ಯಾತ್ ಸ್ವಭಾವಭಕ್ತಸ್ಯ ನಿರೌಪಧಂ ಮೇ ॥

**ಅರ್ಥ :-** **ಅಥೋ** ನಿಮ್ಮಿಂದ ಮಾಡಲ್ಪಟ್ಟ ಸೇವೆಯ ನಂತರ **ಭವತಾಂ** ನಿಮ್ಮ **ಸರ್ವಸ್ಯ** ಈ ಎಲ್ಲಾ ಭಗವದರ್ಚನಕ್ಕೆ **ಮುಕ್ತಿಪ್ರದಾನಾತ್** ಮೋಕ್ಷವನ್ನು ಪ್ರದಾನಮಾಡುವುದರಿಂದ **ಮೇ ಚ** ನನಗಾದರೋ **ಪ್ರತಿಕರ್ತೃತಾ** ಪ್ರತ್ಯುಪಕಾರ ಮಾಡುವಿಕೆಯು **ಭವೇತ** ಆದೀತು. **ನಿರೌಪಧಂ** ಯಾವ ಪ್ರಯೋಜವಿಲ್ಲದ್ದು ಹೇಗೋ ಹಾಗೆ **ಮೇ** ನನ್ನ **ಸ್ವಭಾವಭಕ್ತಸ್ಯ** ಸ್ವಾಭಾವಿಕಭಕ್ತಿವುಳ್ಳ **ಹನೂಮತಃ** ಹನುಮಂತನಿಗೆ **ಪ್ರತಿಕರ್ತೃತಾ** ಮೋಕ್ಷವನ್ನು ಕೊಡುವುದರ ಮೂಲಕ ಪ್ರತ್ಯುಪಾಕಾರವು **ನ ಸ್ಯಾತ್** ಆಗಲಾರದು.

**ತಾತ್ಪರ್ಯ :-** ನೀವೆಲ್ಲರೂ ಮಾಡಿದ ಭಗವದರ್ಚನೆ ರೂಪ ನನ್ನ ಸೇವೆಗೆ ಪ್ರತ್ಯುಪಕಾರವಾಗಿ ನಾನು ಮೋಕ್ಷವನ್ನು ಅನುಗ್ರಹಿಸಿದರೇ ಸರಿದೂಗುವುದು. ಆದರೆ ಯಾವ ಫಲಾಪೇಕ್ಷಯೂ ಇಲ್ಲಿದೆಯೇ ಸ್ವಾಭಾವಿಕ ಭಕ್ತಿಯಿಂದ ಸೇವೆಯನ್ನು ಮಾಡಿದ ಹನುಮಂತನಿಗೆ ಮೋಕ್ಷವನ್ನು ಕೊಟ್ಟರೂ ಅದು ಪ್ರತ್ಯುಪಕಾರವಾಗಲಾರದು. (ಹನುಮಂತನಿಗೆ ಮೋಕ್ಷವೂ ಅಪೇಕ್ಷಿತವಲ್ಲ)

### ಹನುಮಂತನ ಗುಣಪ್ರಶಂಸೆ

ಮದ್ ಭಕ್ತೌ ಜ್ಞಾನಪೂರ್ತಾವನುಪಧಿಕಬಲಪ್ರೋನ್ನತಿ ಸ್ಥೈರ್ಯ ಧೈರ್ಯ
ಸ್ವಾಭಾವ್ಯಾಧಿಕ್ಯತೇಜಃಸುಮತಿದಮಶಮೇಷ್ವಸ್ಯ ತುಲ್ಯೋ ನ ಕಶ್ಚಿತ್ ।
ಶೇಷೋ ರುದ್ರಃ ಸುಪರ್ಣೋऽಪ್ಯರುಗುಣಸಮಿತೌ ನೋಸಹಸ್ರಾಂಶ-
ತುಲ್ಯಾ ಅಸ್ಯೇತ್ಯಸ್ಮಾನ್ಮದೀಶಂ ಪದಮಹಮಮುನಾರ್ಥಮೇವೋಪಭೋಕ್ಷ್ಯೇ ।೨೩೩।

ಪದಚ್ಛೇದ : ಮದ್‌ಭಕ್ತೌ ಜ್ಞಾನಪೂರ್ತೌ ಅನುಪಧಿಕಬಲಪ್ರೋನ್ನತಿ ಸ್ಥೈರ್ಯಧೈರ್ಯಸ್ವಾಭಾವ್ಯಾಧಿಕ್ಯತೇಜಃಸುಮತಿದಮಶಮೇಷು ಅಸ್ಯ ತುಲ್ಯಃ ನ ಕಶ್ಚಿತ್ । ಶೇಷಃ ರುದ್ರಃ ಸುಪರ್ಣಃ ಅಪಿ ಉರುಗುಣಸಮಿತೌ ನೋ ಸಹಸ್ರಾಂಶತುಲ್ಯಾಃ ಅಸ್ಯ ಇತಿ ಅಸ್ಮಾತ್ ಮದೀಶಂ ಪದಮ್ ಅಹಮ್ ಅಮುನಾ ಸಾರ್ಥಮ್ ಏವ ಉಪಭೋಕ್ಷ್ಯೇ ॥

**ಅರ್ಥ** :- **ಮದ್ಭಕ್ತೌ** ನನ್ನ ಭಕ್ತಿಯವಿಷಯದಲ್ಲಿ **ಜ್ಞಾನಪೂರ್ತೌ** ಸರ್ವ ವಿಷಯಕಜ್ಞಾನಪೂರ್ಣತ್ವವಿಷಯದಲ್ಲಿ **ಅನುಪಧಿಕಬಲಪ್ರೋನ್ನತೌ** ವರ ಅಸ್ತ್ರ ಇವುಗಳ ಉಪಾಧಿರಹಿತವಾದ ಬರೆದ ಪೂರ್ಣತ್ವ ವಿಷಯದಲ್ಲಿ, ಸ್ಥೈರ್ಯ ದಲ್ಲಿ, **ಸ್ವಾಭಾವ್ಯಾಧಿಕ್ಯತೇಜಃದಮಶಮೇಷು** – ಸ್ಥೈರ್ಯ, ಧೈರ್ಯದಲ್ಲಿ ಅನ್ಯಾವೇಶನಿಮಿತ್ತ ರಹಿತವಾದ ಆಧಿಕ್ಯದಲ್ಲಿ **(ತೇಜಃ)** ತೇಜಸ್ಸಿನಲ್ಲಿ ಒಳ್ಳೆಯ ಜ್ಞಾನದಲ್ಲಿ **(ದಮ)** ಇಂದ್ರಿಯನಿಗ್ರಹದಲ್ಲಿ **(ಶಮೇಷು)** ಹರಿನಿಷ್ಠೆಯಾದ ಬುದ್ಧಿ ಯಲ್ಲಿ **ಅಸ್ಯ** ಈ ಹನುಮಂತನಿಗೆ **ತುಲ್ಯಃ** ಸದೃಶನಾದ **ಕಶ್ಚಿತ್** ಯಾವೊಬ್ಬನು **ನ** ಇಲ್ಲ, **ಅಸ್ಯ** ಈ ಹನುಮಂತನಿಗೆ **ಉರುಗುಣಸಮಿತೌ** ಉತ್ತಮವಾದ ಗುಣ ಸಮೂಹದಲ್ಲಿ **ಶೇಷಃ** ಶೇಷನು **ರುದ್ರಃ** ರುದ್ರನು **ಸುಪರ್ಣಃ ಅಪಿ** ಗರುಡನೂ ಕೂಡ **ಸಹಸ್ರಾಂಶತುಲ್ಯಾಃ** ಸಹಸ್ರಭಾಗದಿಂದಲೂ ಸದೃಶರು **ನೋ** ಅಲ್ಲವೇ ಅಲ್ಲ, **ಇತ್ಯಸ್ಮಾತ್** ನನ್ನ ಭಕ್ತರಲ್ಲಿ ಉತ್ತಮನಾದ ಪ್ರಯುಕ್ತ **ಅಹಂ** ನಾನು **ಅಮುನಾ** ಈ ಹನುಮಂತನಿಂದ **ಸಾರ್ಧಮೇವ** ಕೂಡಿಕೊಂಡೇ **ಮದೀಶಂ** ನಾನು ಒಡೆಯನಾಗಿಉಳ್ಳ **ಪದಂ** ಸತ್ಯಲೋಕವನ್ನು **ಉಪಭೋಕ್ಷ್ಯೇ** ಅನುಭವಿಸುವೆನು.

**ತಾತ್ಪರ್ಯ** :- 'ನನ್ನಲ್ಲಿರುವ ಭಕ್ತಿ, ಸರ್ವವಿಷಯಕಪರಿಪೂರ್ಣಜ್ಞಾನ, ವರಾದಿಗಳಿಂದ ಉಂಟಾಗದೆ ಸ್ವಾಭಾವಿಕಬಲ, ಸ್ಥಿರತೆ, ಧೈರ್ಯ, ಸ್ವಭಾವಸಿದ್ಧ ಆಧಿಕ್ಯ, ತೇಜಸ್ಸು ಉತ್ತಮಜ್ಞಾನ, ಇಂದ್ರಿಯನಿಗ್ರಹ, ನನ್ನಲ್ಲಿ ಆಸಕ್ತಿಯುಳ್ಳ ಬುದ್ಧಿ ಇಂತಹ ಗುಣಗಳಲ್ಲಿ ಹನುಮಂತನಿಗೆ ಸದೃಶನಾದ ಯಾವನೊಬ್ಬ ಪುರುಷನೂ ಇಲ್ಲ, ಶೇಷ, ರುದ್ರ ಗರುಡ ಇವರೂ ಕೂಡ ಹನುಮಂತನ ಅಪಾರಗುಣಸಮೂಹದ ಸಹಸ್ರ ಭಾಗದಲ್ಲಿ ಒಂದಂಶಕ್ಕೂ ಸಮಾನರಲ್ಲ, ಈ ಕಾರಣದಿಂದ ನಾನೇ ಸ್ವಾಮಿ ಯಾಗಿಉಳ್ಳ ಸತ್ಯಲೋಕವನ್ನು ಇವನೊಂದಿಗೆ ನಾನೂ ಭೋಗಿಸುವೆ. (ಹನುಮಂತನಿಗೆ ಬ್ರಹ್ಮಪದವಿಯನ್ನೇ ಕೊಡುವೆ)

**ವಾಲಿ, ಕಾರ್ತವೀರ್ಯಾರ್ಜುನರಿಂದ ರಾವಣನ ಪರಾಭವ**

**ಪೂರ್ವಂ ಜಿಗಾಯ ಭುವನಂ ದಶಕಂಧರೋಽಸಾ-**
**ವಬ್ಜೋದ್ಭವಸ್ಯ ವರತೋ ನ ತು ತಂ ಕದಾಚಿತ್ ।**
**ಕಶ್ಚಿಜ್ಜಿಗಾಯ ಪುರುಹೂತಸುತಃ ಕಪಿತ್ವಾದ್**
**ವಿಷ್ಣೋರ್ವರಾದಜಯದರ್ಜುನ ಏವ ಚೈನಮ್ ॥ ೨೩೪ ॥**

ಪದಚ್ಛೇದ : ಪೂರ್ವಂ ಜಿಗಾಯ ಭುವನಂ ದಶಕಂಧರಃ ಅಸೌ ಅಬ್ಜೋದ್ಭವಸ್ಯ ವರತಃ ನ ತು ತಂ ಕದಾಚಿತ್ । ಕಶ್ಚಿತ್ ಜಿಗಾಯ ಪುರುಹೂತಸುತಃ ಕಪಿತ್ವಾತ್ ವಿಷ್ಣೋಃ ವರಾತ್ ಅಜಯದ್ ಅರ್ಜುನ ಏವ ಚ ಏನಮ್ ॥

**ಅರ್ಥ** :- **ದಶಕಂಧರಃ** ಹತ್ತುಶಿರಗಳುಳ್ಳ **ಅಸೌ** ಈ ರಾವಣನು **ಪೂರ್ವಂ** ಹಿಂದೆ **ಅಬ್ಜೋದ್ಭವಸ್ಯ** ಬ್ರಹ್ಮದೇವನ **ವರತಃ** ವರದಿಂದ **ಭುವನಂ** ಲೋಕಗಳನ್ನು **ಜಿಗಾಯ** ಜಯಿಸಿದನು. **ಕಶ್ಚಿತ್** ಯಾವೊಬ್ಬಪುರುಷನೂ **ಕದಾಚಿತ್** ಯಾವಾಗಲಾದರೂ **ತಂ** ಆ ರಾವಣನನ್ನು **ನತು** ಗೆಲ್ಲಲೇ ಇಲ್ಲ. **ಪುರುಹೂತಸುತಃ** ಇಂದ್ರನ ಮಗನಾದ ವಾಲಿಯು **ಕಪಿತ್ವಾತ್** ಕಪಿಯಾದಪ್ರಯುಕ್ತ **ಏನಂ** ಈ ರಾವಣನನ್ನು **ಜಿಗಾಯ** ಗೆದ್ದನು. **ಚ** ಮತ್ತು **ಅರ್ಜುನಃ** ಕಾರ್ತವೀರ್ಯಾರ್ಜುನನು **ವಿಷ್ಣೋಃ** ವಿಷ್ಣುವಿನ **ವರಾತ್** **ಏವ** ವರದದೆಸೆಯಿಂದಲೇ **ಏನಂ** ಈ ರಾವಣನನ್ನು **ಅಜಯತ್** ಜಯಿಸಿದನು.

**ತಾತ್ಪರ್ಯ** :- 'ಹತ್ತು ತಲೆಯ ರಾವಣನು ಹಿಂದೆ ಬ್ರಹ್ಮದೇವರ ವರಬಲದಿಂದ ಸಮಸ್ತಲೋಕಗಳನ್ನು ಜಯಿಸಿದ್ದ. ಯಾರಿಂದಲೂ ಇವನನ್ನು ಸೋಲಿಸಲಾಗಲಿಲ್ಲ. ಆದರೆ ಇಂದ್ರನಮಗನಾದ ವಾಲಿಯು ಕಪಿಯಾದ ಪ್ರಯುಕ್ತ ಇವನನ್ನು ಗೆದಿದ್ದ. ಹಾಗೆಯೇ ನರನಾದ ಕಾರ್ತವೀರ್ಯಾರ್ಜುನನೂ ಕೂಡ ವಿಷ್ಣುವಿನ ಅವತಾರವಾದ ದತ್ತಾತ್ರೇಯನ ವರಬಲದಿಂದ ರಾವಣನನ್ನು ಜಯಿಸಿದ್ದನು. (ರಾವಣನು ನರವಾನರರಿಂದ ಹೊರತು ಬೇರೆಯವರಿಂದ ಸೋಲು ಉಂಟಾಗದಿರಲಿ ಎಂದು ಬ್ರಹ್ಮನಿಂದ ವರ ಪಡೆದಿದ್ದ.)

**ಬಲಿಯ ದಾನಕ್ಕೆ ಮೆಚ್ಚಿ ದ್ವಾರಪಾಲಕನಾದ ಭಗವಂತ**

**ದತ್ತೋ ವರೋ ನ ಮನುಜಾನ್ ಪ್ರತಿ ವಾನರಾಂಶ್ಚ**
**ಧಾತ್ರಾಽಸ್ಯ ತೇನ ವಿಜಿತೋ ಯುಧಿ ವಾಲಿನೈಷಃ ।**
**ಅಬ್ಜೋದ್ಭವಸ್ಯ ವರಮಾಶ್ವಭಿಭೂಯ ರಕ್ಷೋ**
**ಜಿಗ್ಯೇ ತ್ವಹಂ ರಣಮುಖೇ ಬಲಿಮಾಹ್ವಯಂತಮ್ ॥ ೨೩೫ ॥**

ಪದಚ್ಛೇದ : ದತ್ತಃ ವರಃ ನ ಮನುಜಾನ್ ಪ್ರತಿ ವಾನರಾನ್ ಚ ಧಾತ್ರಾ ಅಸ್ಯ ತೇನ ವಿಜಿತಃ ಯುಧಿ ವಾಲಿನಾ ಏಷಃ । ಅಬ್ಜೋದ್ಭವಸ್ಯ ವರಂ ಆಶು ಅಭಿಭೂಯ ರಕ್ಷಃ ಜಿಗ್ಯೇ ತು ಅಹಂ ರಣಮುಖೇ ಬಲಿಮ್ ಆಹ್ವಯಂತಮ್ ॥

**ಅರ್ಥ** :- **ಧಾತ್ರಾ** ಬ್ರಹ್ಮದೇವನಿಂದ **ಅಸ್ಯ** ಈ ರಾವಣನಿಗೆ **ಮನುಜಾನ್ ಪ್ರತಿ** ಮನುಷ್ಯರನ್ನು ಕುರಿತು **ವಾನರಾನ್ ಚ** ವಾನರನ್ನು ಕುರಿತೂ ಕೂಡ **ವರಃ** ಅಜೇಯತ್ವರೂಪವರವು **ನ ದತ್ತಃ** ಕೊಡಲ್ಪಡಲಿಲ್ಲ. **ತೇನ** ಆ ಕಾರಣದಿಂದ **ವಾಲಿನಾ** ವಾಲಿಯಿಂದ **ಏಷಃ** ಈ ರಾವಣನು **ಯುಧಿ** ಯುದ್ಧದಲ್ಲಿ **ವಿಜಿತಃ** ಸೋಲುಂಡನು. **ಅಹಂ ತು** ನಾನಾದಲೋ **ರಕ್ಷಃ** ರಾವಣನನ್ನು ಉದ್ದೇಶಿಸಿ ಕೊಡಲ್ಪಟ್ಟ **ಅಬ್ಜೋದ್ಭವಸ್ಯ** ಬ್ರಹ್ಮನ **ವರಂ** ವರವನ್ನು **ಆಶು** ಕೂಡಲೇ

**ಅಭಿಭೂಯ** ತಿರಸ್ಕರಿಸಿ **ರಣಮುಖೇ** ಯುದ್ಧದಲ್ಲಿ **ಬಲಿಂ** ಬಲಿಚಕ್ರವರ್ತಿಯನ್ನು **ಆಹ್ವಯಂತಂ** ಆಹ್ವಾನಿಸುವಂತಹ ರಾವಣನನ್ನು **ಜಿಗ್ಯೇ** ಜಯಿಸಿದೆನು.

**ತಾತ್ಪರ್ಯ** :- 'ಬ್ರಹ್ಮದೇವರು ರಾವಣನಿಗೆ ನರ, ವಾನರರಿಂದ ಗೆಲ್ಲುವ ವರವನ್ನು ಕೊಟ್ಟಿರಲಿಲ್ಲ. ಹಾಗಾಗಿ ಕಪಿಯಾದ ವಾಲಿಯಿಂದ ಸೋಲುಂಡನು. ಬ್ರಹ್ಮದೇವರ ವರವನ್ನು ಅತಿಕ್ರಮಿಸಿ ಬಲಿಯನ್ನು ಯುದ್ಧಕ್ಕೆ ಆಹ್ವಾನಿಸಿದ ರಾವಣನನ್ನು ನಾನು ಸೋಲಿಸಿದೆ.'

**ಪುನಃ ವಿಷ್ಣುವಿನಿಂದ ರಾವಣಪರಾಜಯ**

**ಬಲೇರ್ದ್ವಾರಸ್ಥೋಽಹಂ ವರಮಸ್ಮೈ**
**ಸಂಪ್ರದಾಯ ಪೂರ್ವಂ ತು ।**
**ತೇನ ಮಯಾ ರಕ್ಷೋಽಸ್ತಂ**
**ಯೋಜನಮಯುತಂ ಪದಾಂಗುಲ್ಯಾ ॥ ೨೩೬ ॥**

**ಪದಚ್ಛೇದ** : **ಬಲೇಃ ದ್ವಾರಸ್ಥಃ ಅಹಂ ವರಮ್ ಅಸ್ಮೈ ಸಂಪ್ರದಾಯ ಪೂರ್ವಂ ತು । ತೇನ ಮಯಾ ರಕ್ಷಃ ಅಸ್ತಂ ಯೋಜನಮ್ ಅಯುತಂ ಪದಾಂಗುಲ್ಯಾ ॥**

**ಅರ್ಥ** :- **ಪೂರ್ವಂ** ಹಿಂದೆ **ಅಹಂ** ನಾನು **ಅಸ್ಮೈ** ಈ ಬಲಿಗೋಸ್ಕರ **ವರಂ** 'ನಾನು ನಿನ್ನ ದ್ವಾರರಕ್ಷಕನು' ಎಂಬ ವರವನ್ನು **ಸಂಪ್ರದಾಯ** ಕೊಟ್ಟು **ಬಲೇಃ** ಬಲಿಚಕ್ರವರ್ತಿಯ **ದ್ವಾರಸ್ಥಃ** ದ್ವಾರದಲ್ಲಿ ನಿಲ್ಲುವನು **ತೇನ** ಆ ಕಾರಣದಿಂದ **ರಕ್ಷಃ** ರಾವಣನು **ಮಯಾ** ನನ್ನಿಂದ **ಪದಾಂಗುಲ್ಯಾ** ಪಾದದ ಕನಿಷ್ಠಾಂಗುಲಿಯಿಂದ **ಯೋಜನಮಯುತಂ** ಹತ್ತುಸಾವಿರಯೋಜನಗಳನ್ನು ಅತಿಕ್ರಮಿಸಿ **ಅಸ್ತಂ** ಹಾಕಲ್ಪಟ್ಟನು.

**ತಾತ್ಪರ್ಯ** : 'ನಾನು ಬಲಿಚಕ್ರವರ್ತಿಯ ದಾನಕ್ಕೆ ಮೆಚ್ಚಿ ಅವನ ಅಪೇಕ್ಷೆಯಂತೆ ಅವನಿಗೆ 'ನಾನು ನಿನ್ನ ದ್ವಾರರಕ್ಷಕನಾಗಿರುವೆ'ನೆಂಬ ವರವಿತ್ತಿದ್ದೆ. ಬಲಿಯನ್ನು ರಾವಣನು ಯುದ್ಧಕ್ಕೆ ಕರೆದಾಗ ನಾನು ದ್ವಾರಪಾಲಕನಾದ್ದರಿಂದ ರಾವಣನನ್ನು ನನ್ನ ಕಿರುಪಾದದ ಬೆರಳಿನಿಂದ ಒದ್ದು ಹತ್ತು ಸಾವಿರಯೋಜನಗಳಷ್ಟು ದೂರ ಎಸೆದೆ.'

**ವಿಷ್ಣು ವಾಯುವಿನಿಂದ ರಾವಣನ ಪರಾಜಯ**

**ಪುನಶ್ಚ ಯುದ್ಧಾಯ ಸಮಾಹ್ವಯಂತಂ**
**ನ್ಯಪಾತಯಂ ರಾವಣಮೇಕಮುಷ್ಟಿನಾ ।**

ಮಹಾಬಲೋಽಹಂ ಕಪಿಲಾಖ್ಯರೂಪ-
ಸ್ತ್ರಿಕೋಟಿರೂಪಃ ಪವನಶ್ಚ ಮೇ ಸುತಃ ॥ ೨೩೭ ॥

ಪದಚ್ಛೇದ : ಪುನಃ ಚ ಯುದ್ಧಾಯ ಸಮಾಹ್ವಯಂತಂ ನ್ಯಪಾತಯಂ ರಾವಣಮ್ ಏಕಮುಷ್ಟಿನಾ । ಮಹಾಬಲಃ ಅಹಂ ಕಪಿಲಾಖ್ಯರೂಪಃ ತ್ರಿಕೋಟಿರೂಪಃ ಪವನಃ ಚ ಮೇ ಸುತಃ ॥

**ಅರ್ಥ** :- **ಮಹಾಬಲಃ** ಉತ್ತಮಬಲವುಳ್ಳ **ಕಪಿಲಾಖ್ಯರೂಪಃ** ಕಪಿಲನೆಂಬ ಹೆಸರಿನ ರೂಪವುಳ್ಳ **ಅಹಂ** ನಾನು **ಪುನಃ** ಮತ್ತು **ಯುದ್ಧಾಯ** ಯುದ್ಧಕ್ಕಾಗಿ **ಸಮಾಹ್ವಯಂತಂ** ಚೆನ್ನಾಗಿ ಆಹ್ವಾನಿಸತಕ್ಕ **ರಾವಣಂ** ರಾವಣನನ್ನು **ಏಕಮುಷ್ಟಿನಾ** ಒಂದೇ ಮುಷ್ಟಿಯಿಂದ **ನ್ಯಪಾತಯಂ** ಬೀಳಿಸಿದೆ. **ಮಹಾಬಲಂ** ಮಹಾಬಲಶಾಲಿಯಾದ **ತ್ರಿಕೋಟಿರೂಪಃ** ಮೂರುಕೋಟಿರೂಪಗಳುಳ್ಳ **ಮೇ** ನನ್ನ **ಸುತಃ** ಪುತ್ರನಾದ **ಪವನಶ್ಚ** ವಾಯುವೂ ಕೂಡ **ಏಕಮುಷ್ಟಿನಾ** ಒಂದೇ ಮುಷ್ಟಿಯಿಂದ (**ರಾವಣಂ** ರಾವಣನನ್ನು **ನ್ಯಪಾತಯತ್** ಬೀಳಿಸಿದನು.)

**ತಾತ್ಪರ್ಯ** :- ಇನ್ನೊಮ್ಮೆ ಯುದ್ಧಕ್ಕೆ ಆಹ್ವಾನಿಸಿದ ರಾವಣನನ್ನು ಕಪಿಲ ರೂಪಿಯಾದ ನಾನು ಕೇವಲ ಒಂದೇ ಮುಷ್ಟಿಯಿಂದ ನೆಲಕ್ಕುರುಳಿಸಿದ್ದೆ. ಅತ್ಯಂತ ಬಲಿಷ್ಠನಾದ ನನ್ನ ಸುತನಾದ ವಾಯುವೂ ಕೂಡ ಒಂದೇ ಮುಷ್ಟಿಯಿಂದ ಪ್ರಹರಿಸಿ ರಾವಣನನ್ನು ಕೆಳಕ್ಕೆ ಬೀಳಿಸಿದ್ದ.

ಆವಾಂ ಸ್ವಶಕ್ತ್ಯಾ ಯ ಜಯಿನಾವಿತಿ ಸ್ಮ
ಶಿವೋ ವರಾನ್ಮೇಽಜಯದೇನಮೇವಮ್ ।
ಜ್ಞಾತ್ವಾ ಸುರಾಜೇಯಮಿಮಂ ಹಿ ವವ್ರೇ
ಹರೋ ಜಯೇಯಾಹಮಮುಂ ದಶಾನನಮ್ ॥ ೨೩೮ ॥

ಪದಚ್ಛೇದ : ಆವಾಂ ಸ್ವಶಕ್ತ್ಯಾ ಯ ಜಯಿನೌ ಇತಿ ಸ್ಮ ಶಿವಃ ವರಾತ್ ಮೇ ಅಜಯತ್ ಏನಮ್ ಏವಮ್ । ಜ್ಞಾತ್ವಾ ಸುರಾಜೇಯಂ ಇಮಂ ಹಿ ವವ್ರೇ ಹರಃ ಜಯೇಯ ಅಹಮ್ ಅಮುಂ ದಶಾನನಮ್ ॥

**ಅರ್ಥ** :- **ಇತಿ ಸ್ಮ** ಈ ಕಾರಣಗಳಿಂದಲೂ **ಆವಾಂ** ನಾವಿಬ್ಬರು **ಸ್ವಶಕ್ತ್ಯಾ** ಸ್ವರೂಪಬಲದಿಂದ **ಜಯಿನೌ** ಜಯವುಳ್ಳವರು **ಶಿವಃ** ರುದ್ರನು **ಮೇ** ನನ್ನ **ವರಾತ್** ವರದಿಂದ ಏವಂ ಬಲಿಕಾರ್ತವೀರ್ಯಾರ್ಜುನರಂತೆ **ಏನಂ ಅಜಯತ್** ರಾವಣನನ್ನು ಜಯಿಸಿದನು. **ಹರಃ** ಶಿವನು **ಸುರಾಜೇಯಂ** ದೇವತೆಗಳಿಂದ

ಜಯಿಸಲಶಕ್ಯನಾದ **ಇಮಂ** ಈ ರಾವಣನನ್ನು **ಜ್ಞಾತ್ವಾ** ತಿಳಿದು **ಅಹಂ** ನಾನು **ಅಮುಂ** ಈ ದಶಾನನಂ ರಾವಣನನ್ನು **ಜಯೇಯ** ಜಯಿಸುವೆ. (**ಏವಂ** ಈ ರೀತಿಯಾಗಿಯೂ) ವವ್ರೇ ವರವನ್ನು ಬೇಡಿದನು.

**ತಾತ್ಪರ್ಯ** :- 'ಹೀಗೆ ನಾನು ಮತ್ತು ವಾಯುವು ನಮ್ಮಲ್ಲಿರುವ ಸ್ವಾಭಾವಿಕ ಶಕ್ತಿಯಿಂದಲೇ ರಾವಣನನ್ನು ಗೆದ್ದೆವು. ಹಿಂದೆ ಕೈಲಾಸಗಿರಿಯನ್ನೇ ಎತ್ತಲು ಬಂದ ರಾವಣನು ಅದನ್ನು ಎತ್ತಲಾಗದೇ ಶಿವನಿಂದ ಸೋತನು. ಆದರೂ ಕೂಡ ಶಿವನು 'ನಾನು ರಾವಣನನ್ನು ಗೆಲ್ಲಬೇಕು' ಎಂಬ ವರವನ್ನು ನನ್ನಿಂದ ಬೇಡಿದ್ದ. ಆದ್ದರಿಂದ ಬಲಿಚಕ್ರವರ್ತಿಕಾರ್ಯವೀರ್ಯಾರ್ಜುನರಂತೆ ವರಬಲ ದಿಂದ ಗೆದ್ದನಷ್ಟೇ ಹೊರತು ನಮ್ಮಂತೆ ಸಹಜಶಕ್ತಿಯಿಂದಲ್ಲ.'

### ನಮ್ಮದು ಸ್ವಭಾವಿಕ ಗೆಲವು

**ಅತಃ ಸ್ವಭಾವಾಜ್ಜಯಿನಾವಹಂ ಚ ವಾಯುಶ್ಚ**
**ವಾಯುರ್ಹನುಮಾನ್ ಸ ಏಷಃ ।**
**ಅಮುಷ್ಯ ಹೇತೋಸ್ತು ಪುರಾ ಹಿ ವಾಯುನಾ**
**ಶಿವೇಂದ್ರಪೂರ್ವಾ ಅಪಿ ಕಾಷ್ಠವತ್ ಕೃತಾಃ ॥ ೨೪ ॥**

ಪದಚ್ಛೇದ : ಅತಃ ಸ್ವಭಾವಾತ್ ಜಯಿನೌ ಅಹಂ ಚ ವಾಯುಃ ಚ ವಾಯುಃ ಹನುಮಾನ್ ಸಃ ಏಷಃ । ಅಮುಷ್ಯ ಹೇತೋಃ ತು ಪುರಾ ಹಿ ವಾಯುನಾ ಶಿವೇಂದ್ರಪೂರ್ವಾಃ ಅಪಿ ಕಾಷ್ಠವತ್ ಕೃತಾಃ ॥

**ಅರ್ಥ** : **ಅತಃ** ಆದ್ದರಿಂದ **ಸ್ವಭಾವಾತ್** ಸ್ವಾಭಾವಿಕವಾಗಿಯೇ **ಅಹಂ** ನಾನು **ಚ** ಮತ್ತು **ವಾಯುಶ್ಚ** ವಾಯುವೂ ಕೂಡ **ಜಯಿನೌ** ಜಯವುಳ್ಳವರು. **ಸಃ ಏಷಃ** ಆ ವಾಯುವೇ **ಹನುಮಾನ್** ಹನುಮನು. **ಪುರಾ** ಹಿಂದೆ **ಅಮುಷ್ಯ ಹೇತೋಃ** ಈ ಹನುಮನ ಕಾರಣದಿಂದ **ವಾಯುನಾ** ವಾಯುವಿನಿಂದಾದರೂ **ಶಿವೇಂದ್ರಪೂರ್ವಕಾಃ ಅಪಿ** ಶಿವ ಇಂದ್ರನೇ ಮೊದಲಾದವರೂ ಕೂಡ **ಕಾಷ್ಠವತ್** ಕಾಷ್ಠದಂತೆ **ಕೃತಾಃ** ಮಾಡಲ್ಪಟ್ಟವರು **ಹಿ** ಪುರಾಣಪ್ರಸಿದ್ಧ.

**ತಾತ್ಪರ್ಯ** :- "ಆದ್ದರಿಂದ ವಾಯು ಮತ್ತು ನಾನು ಸ್ವಾಭಾವಿಕ ಸಾಮರ್ಥ್ಯದಿಂದ ಗೆಲ್ಲಲ್ಪಟ್ಟವರು. ಈ ವಾಯುವೇ ಹನುಮಂತನಾಗಿರುವನು. ಹಿಂದೆ ಬಾಲ್ಯದಲ್ಲಿ ಹನುಮಂತನು ಸೂರ್ಯನನ್ನು ಹಿಡಿಯಲು ಹಾರಿದಾಗ ಇಂದ್ರನು ವಜ್ರಾಯುಧವನ್ನು ಇವನ ಮೇಲೆ ಎಸೆದ. ಆದರಿಂದ ಹನುಮನಿಗೆ ಏನೂ ಆಗದಿರಲು, ಈ ಕೃತ್ಯದಿಂದ ಇಂದ್ರಾಗಳ ಮೇಲೆ ಕೋಪಗೊಂಡ

ವಾಯುವು ಇವರಿಗೆ ಶ್ವಾಸವನ್ನು ಬಂಧಿಸುತ್ತಾನೆ. ಆಗ ಕಟ್ಟಿಗೆಯಂತೆ ಇವರೆಲ್ಲರೂ ಜಡರಾಗುತ್ತಾರೆ. ಇದು ಹನುಮನ ಕಾರಣದಿಂದಲೇ.''

### ಹನುಮಂತನಿಗೆ ರಾಮನ ಸಹಭೋಗ

**ಅತೋ ಹನೂಮಾನ್ ಪದಮೇತು ಧಾತು-**
**ರ್ಮದಾಜ್ಞಯಾ ಸೃಷ್ಟ್ಯವನಾದಿ ಕರ್ಮ ।**
**ಮೋಕ್ಷಂ ಚ ಲೋಕಸ್ಯ ಸದೈವ ಕುರ್ವನ್**
**ಮುಕ್ತಶ್ಚ ಮುಕ್ತಾನ್ ಸುಖಯನ್ ಪ್ರವರ್ತತಾಮ್ ॥ ೨೪೦ ॥**

**ಪದಚ್ಛೇದ : ಅತಃ ಹನೂಮಾನ್ ಪದಮ್ ಏತು ಧಾತುಃ ಮದಾಜ್ಞಯಾ ಸೃಷ್ಟ ಯವನಾದಿ ಕರ್ಮ । ಮೋಕ್ಷಂ ಚ ಲೋಕಸ್ಯ ಸದಾ ಏವ ಕುರ್ವನ್ ಮುಕ್ತಃ ಚ ಮುಕ್ತಾನ್ ಸುಖಯನ್ ಪ್ರವರ್ತತಾಮ್ ॥**

**ಅರ್ಥ :- ಅತಃ** ಎಲ್ಲರಿಂದಲೂ ಉತ್ತಮನಾದ ಪ್ರಯುಕ್ತ **ಹನೂಮಾನ್** ಹನುಮಂತನು **ಧಾತುಃ** ಬ್ರಹ್ಮದೇವನ **ಪದಂ** ಸ್ಥಾನವನ್ನು **ಏತು** ಹೊಂದಲಿ. **ತತ್ರ** ಅಲ್ಲಿದ್ದವನಾಗಿ **ಮದಾಜ್ಞಯಾ** ನನ್ನ ಆದೇಶದಂತೆ **ಲೋಕಸ್ಯ** ಜಗತ್ತಿನ **ಸೃಷ್ಟ್ಯವ** ನಾದಿ ಸೃಷ್ಟಿ ಪಾಲನ ಸಂಹಾರಾದಿ ಕರ್ಮಗಳನ್ನು **ಮೋಕ್ಷಂ ಚ** ಮೋಕ್ಷವನ್ನೂ ಕೂಡ ಸದೈವ ಮೋಕ್ಷಪರ್ಯಂತವಾಗಿ **ಕುರ್ವನ್(ಸನ್)** ಮಾಡುವವನಾಗಿ **ಚ** ಮತ್ತು **ಮುಕ್ತಃ(ಸನ್)** ತನ್ನ ನಿಯತಕಾಲದಲ್ಲಿ ಮುಕ್ತನಾದವನಾಗಿ **ಮುಕ್ತಾನ್** ಮೋಕ್ಷಪಡೆದವರನ್ನು **ಸುಖಯನ್** ಸುಖಪಡಿಸುತ್ತಾ **ಪ್ರವರ್ತತಾಂ** ಇರಲ್ಪಡಲಿ.

**ತಾತ್ಪರ್ಯ :-** 'ಹೀಗೆ ಎಲ್ಲರಿಗಿಂತಲೂ ಉತ್ತಮನಾದ ಹನುಮಂತನಿಗೆ ಬ್ರಹ್ಮಲೋಕವನ್ನು ಕರುಣಿಸುವೆ. ಅಲ್ಲಿದ್ದುಕೊಂಡು. ಲೋಕದ ಸೃಷ್ಟಿಸ್ಥಿತಿ ಲಯಾದಿಕರ್ಮಗಳನ್ನು ಮೋಕ್ಷವನ್ನೂ ಕೂಡ ನಾನು ಹೇಳಿದಂತೆ ಜಗತ್ತಿಗೆ ಮಾಡಿ ಕೊನೆಗೆ ನಿಯತಕಾಲವು ಒದಗಿದಾಗ ಹನುಮನೂ ಮುಕ್ತಿಯನ್ನು ಹೊಂದಲಿ. ಅಲ್ಲಿಯೂ ಕೂಡ ಮುಕ್ತರಾದ ದೇವತೆಗಳಿಗೂ ಆನಂದ ವನ್ನುಂಟುಮಾಡುತ್ತಾ ಇರಲಿ.'

### ಬ್ರಹ್ಮಪದವಿ....

**ಭೋಗಾಶ್ಚ ಯೇ ಯಾನಿ ಚ ಕರ್ಮಜಾತಾ-**
**ನ್ಯನಾದ್ಯನಂತಾನಿ ಮಮೇಹ ಸಂತಿ ।**
**ಮದಾಜ್ಞಯಾ ತಾನ್ಯಖಿಲಾನಿ ಸಂತಿ**
**ಧಾತುಃ ಪದೇ ತತ್ ಸಹಭೋಗನಾಮ ॥ ೨೪೧ ॥**

ಪದಚ್ಛೇದ : ಭೋಗಾಃ ಚ ಯೇ ಯಾನಿ ಚ ಕರ್ಮಜಾತಾನಿ ಅನಾದ್ಯನಂತಾನಿ ಮಮ ಇಹ ಸಂತಿ । ಮದಾಜ್ಞಯಾ ತಾನಿ ಅಖಿಲಾನಿ ಸಂತಿ ಧಾತುಃ ಪದೇ ತತ್ ಸಹಭೋಗನಾಮ ॥

**ಅರ್ಥ** :- **ಇಹ ಚ** ಈ ಜಗತ್ತಿನಲ್ಲಿಯೂದರೂ **ಅನಾದ್ಯನಂತಾನಿ** ಉತ್ಪತ್ತಿ ಧ್ವಂಸರಹಿತಗಳಾದ **ಯಾನಿ** ಯಾವ **ಕರ್ಮಜಾತಾನಿ** ಕರ್ಮಗಳ ಸಮೂಹ ಗಳಿರುವವೋ **ತಾನಿ ಚ** ಆ ಕರ್ಮಸಮೂಹಗಳೆಲ್ಲವೂ **ಮಮ** ನನ್ನ ವಶೇ ವಶದಲ್ಲಿ ಸಂತಿ ಇರುತ್ತವೆ. **ತಾನಿ ಅಖಿಲಾನಿ** ಆ ಎಲ್ಲಾ ಕರ್ಮಸಮೂಹಗಳು **ಮದಾಜ್ಞಯಾ** ನನ್ನಾದೇಶದ ಅನುಸಾರವಾಗಿ **ಧಾತುಃ** ಬ್ರಹ್ಮದೇವನ **ಪದೇ** ಸ್ಥಾನದಲ್ಲಿ ಸಂತಿ ಇರುತ್ತವೆ. (**ತಸ್ಮಾತ್** ಆ ಕಾರಣದಿಂದ) **ಯೇ ಭೋಗಾಃ** ಈ ಯಾವ ಕರ್ಮಫಲಭೋಗಗಳಿವೆಯೋ ಅವೆಲ್ಲವೂ ನನ್ನ ಭೋಗವಲ್ಲಿದೆ. (**ಅತಃ** ಆದ್ದರಿಂದ) **ತತ್** ಆ ಬ್ರಹ್ಮಪದವಿಯು **ಸಹಭೋಗನಾಮ** ಸಹಭೋಗ ವೆಂದು ಹೆಸರುಳ್ಳದ್ದು.

**ತಾತ್ಪರ್ಯ** :- 'ಜೀವಿಗಳು ಮಾಡುವ ಅನಾದಿ ಹಾಗು ಅನಂತವಾದ ಪುಣ್ಯಕರ್ಮಗಳಿಗೆ ಫಲವಾಗಿ ಭೋಗವಿರುವುದು. ಇದು ನನ್ನ ವಶದಲ್ಲಿದೆ. ಅದರಂತೆಯೇ ನನ್ನ ಆದೇಶದಂತೆ ಬ್ರಹ್ಮಪದವಿಯನ್ನು ಹೊಂದಿದವರಿಗೂ ಅಧೀನವಾಗಿರುತ್ತದೆ. ಹಾಗಾಗಿ ಬ್ರಹ್ಮಪದವಿಗೆ ಸಹಭೋಗವೆಂದು ಹೆಸರು.'

**ಹನುಮಂತನ ಪ್ರಾರ್ಥನೆ**

**ಏತಾದೃಶಂ ಮೇ ಸಹಭೋಜನಂ ತೇ**
**ಮಯಾ ಪ್ರದತ್ತಂ ಹನುಮನ್ ಸದೈವ ।**
**ಇತೀರಿತಸ್ತಂ ಹನುಮಾನ್ ಪ್ರಣಮ್ಯ**
**ಜಗಾದ ವಾಕ್ಯಂ ಸ್ಥಿರಭಕ್ತಿನಮ್ರಃ ॥ ೨೪೨ ॥**

ಪದಚ್ಛೇದ : ಏತಾದೃಶಂ ಮೇ ಸಹಭೋಜನಂ ತೇ ಮಯಾ ಪ್ರದತ್ತಂ ಹನುಮನ್ ಸದಾ ಏವ । ಇತಿ ಈರಿತಃ ತಂ ಹನುಮಾನ್ ಪ್ರಣಮ್ಯ ಜಗಾದ ವಾಕ್ಯಂ ಸ್ಥಿರಭಕ್ತಿನಮ್ರಃ ॥

**ಅರ್ಥ** :- ಹೇ **ಹನೂಮಾನ್** ಹೇ ಹನುಮನೇ **ಏತಾದೃಶಂ** ಇಂತಹ ಬ್ರಹ್ಮಪದವಿರೂಪವಾದ **ಮೇ** ನನ್ನ **ಸಹಭೋಜನಂ** ಸಹಭೋಗವು **ಮಯಾ** ನನ್ನಿಂದ **ತೇ** ನಿನಗಾಗಿ **ಸದೈವ** ನಿರಂತರವಾಗಿಯೂ **ಪ್ರದತ್ತಂ** ಕೊಟಲ್ಪಟ್ಟಿತು. **ಇತಿ** ಹೀಗೆಂದು **ಈರಿತಃ** ಉಕ್ತನಾದತಂಹ **ಸ್ಥಿರಭಕ್ತಿನಮ್ರಃ** ಸ್ಥಿರಭಕ್ತಿಯಿಂದ ನಮ್ರನಾದ **ಹನುಮಾನ್** ಹನುಮಂತನು **ತಂ** ಆ ರಾಮನನ್ನು **ಪ್ರಣಮ್ಯ** ನಮಸ್ಕರಿಸಿ **ವಾಕ್ಯಂ** ವಾಕ್ಯವನ್ನು **ಜಗಾದ** ಹೇಳಿದನು.

**ತಾತ್ಪರ್ಯ** :- 'ಎಲೈ ಹನುಮನೇ ಇಂತಹ ಬ್ರಹ್ಮಪದವಿರೂಪವಾದ ನನ್ನ ಸಹಭೋಗವನ್ನು ನಿರಂತರವಾಗಿ ನಿನಗೆ ಅನುಗ್ರಹಿಸಿರುವೆನು' ಎಂದ ರಾಮನಿಗೆ ದೃಢಭಕ್ತಿಯಿಂದ ನಮ್ರನಾದ ಹನುಮಂತನು ನಮಸ್ಕರಿಸಿ ಈ ಮಾತನ್ನು ಹೇಳಿದನು.

**ಕೋ ನ್ವೀಶ ತೇ ಪಾದಸರೋಜಭಾಜಾಂ**
**ಸುದುರ್ಲಭೋऽರ್ಥೇಷು ಚತುರ್ಷ್ವಪೀಹ ।**
**ತಥಾऽಪಿ ನಾಹಂ ಪ್ರವೃಣೋಮಿ ಭೂಮನ್**
**ಭವತ್ಪದಾಂಭೋಜನಿಷೇವಣಾದೃತೇ ॥ ೨೪೩ ॥**

**ಪದಚ್ಛೇದ** : **ಕಃ ನು ಈಶ ತೇ ಪಾದಸರೋಜಭಾಜಾಂ ಸುದುರ್ಲಭಃ ಅರ್ಥೇಷು ಚತುರ್ಷು ಅಪಿ ಇಹ । ತಥಾ ಅಪಿ ನ ಅಹಂ ಪ್ರವೃಣೋಮಿ ಭೂಮನ್ ಭವತ್ಪದಾಂಭೋಜನಿಷೇವಣಾತ್ ಋತೇ ॥**

**ಅರ್ಥ** :- **ಹೇ ಈಶ** ಒಡೆಯನಾದ ರಾಮನೇ **ತೇ** ನಿನ್ನ **ಪಾದರ ರೋಜಭಾಜಾಂ** ಪಾದಕಮಲಗಳನ್ನ ಭಜಿಸುವವರಿಗೆ **ಇಹ** ಈ ಲೋಕದಲ್ಲಿ **ಚತುರ್ಷ್ವಪಿ ಅರ್ಥೇಷು** ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳಲ್ಲಿಯೂ **ಸುದುರ್ಲಭಃ** ಕಷ್ಟಕರವಾದದ್ದು **ಕೋನು** ? ಯಾವುದು ಇದೆ? **ಹೇ ಭೂಮನ್** ಪರಿಪೂರ್ಣನೇ! **ತಥಾಪಿ** ಹಾಗಿದ್ದರೂ ಕೂಡ **ಅಹಂ ಚ** ನಾನಾದರೋ **ಭವತ್ಪದಾಂಭೋಜನಿಷೇವಣಾತ್** ನಿನ್ನ ಪಾದ ಸರೋಜಗಳ ಉಪಾಸನೆಯಿಂದ **ಋತೇ** ಬಿಟ್ಟು **ಅನ್ಯಂ** ಬೇರೆಪುರುಷಾರ್ಥವನ್ನು **ನ ಪ್ರವೃಣೋಮಿ** ಸ್ವೀಕರಿಸುವುದಿಲ್ಲ.

**ತಾತ್ಪರ್ಯ** :- 'ಹೇ ಪರಿಪೂರ್ಣನಾದ ರಾಮನೇ! ಯಾರು ನಿನ್ನ ಪಾದಕಮಲಾಸಕ್ತರೋ ಅವರಿಗೆ ಈ ಸಂಸಾರದಲ್ಲಿ ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳಲ್ಲಿ ಯಾವುದು ತಾನೇ ಕಷ್ಟಕರವಾದ್ದು? ಹಾಗಿದ್ದರೂ ನಿನ್ನ ಪಾದಾರವಿಂದಗಳ ಸೇವೆಯನ್ನು ಬಿಟ್ಟು ಬೇರೆ ಪುರುಷಾರ್ಥಗಳನ್ನು ನಾನು ಅಪೇಕ್ಷಿಸುವುದಿಲ್ಲ.'

**ತ್ವಮೇವ ಸಾಕ್ಷಾತ್ ಪರಮಸ್ವತಂತ್ರ-**
**ಸ್ತ್ವಮೇವ ಸಾಕ್ಷಾದಖಿಲೋರುಶಕ್ತಿಃ ।**
**ತ್ವಮೇವ ಚಾಗಣ್ಯಗುಣಾರ್ಣವಃ**
**ಸದಾ ರಮಾವಿರಿಂಚಾದಿಭಿರಪ್ಯಶೇಷೈಃ ॥ ೨೪೪ ॥**

ಪದಚ್ಛೇದ : ತ್ವಮ್ ಏವ ಸಾಕ್ಷಾತ್ ಪರಮಸ್ವತಂತ್ರಃ ತ್ವಮ್ ಏವ ಸಾಕ್ಷಾತ್ ಅಖಿಲೋರುಶಕ್ತಿಃ । ತ್ವಮ್ ಏವ ಚ ಅಗಣ್ಯಗುಣಾರ್ಣವಃ ಸದಾ ರಮಾವಿರಿಂಚಾದಿಭಿಃ ಅಪಿ ಅಶೇಷೈಃ ॥

**ಅರ್ಥ :-** **ತ್ವಮೇವ** ನೀನೇ **ಸಾಕ್ಷಾತ್** ಸಾಕ್ಷಾತ್ತಾಗಿ **ಪರಮಃ** ಶ್ರೇಷ್ಠನು **ಸ್ವತಂತ್ರಃ** ಸ್ವತಂತ್ರನು **ತ್ವಮೇವ** ನೀನೇ **ಸಾಕ್ಷಾತ್** ಮುಖ್ಯವಾಗಿ **ಅಖಿಲೋರುಶಕ್ತಿಃ** ಸಮಗ್ರವಿಷಯದಲ್ಲಿ ಉತ್ಕೃಷ್ಟಬಲವುಳ್ಳವನು. **ಚ** ಮತ್ತು **ತ್ವಮೇವ** ನೀನೇ **ಸದಾ** ನಿರಂತರವಾಗಿ **ರಮಾವಿರಿಂಚಾದಿಭಿಃ** ಲಕ್ಷ್ಮೀ ಬ್ರಹ್ಮರೇ ಮೊದಲಾಗಿವುಳ್ಳ **ಅಶೇಷೈರಪಿ** ಸಮಸ್ತರಿಂದಲೂ **ಅಗಣ್ಯಗುಣಾರ್ಣವಃ** ಪರಿಗಣಿಸಲು ಅಸಾಧ್ಯವಾದ ಗುಣಗಳ ಸಮುದ್ರದಂತಿರುವನು.

**ತಾತ್ಪರ್ಯ :-** 'ಹೇ ರಾಮನೇ ನೀನೇ ಸಾಕ್ಷಾತ್ ಸರ್ವೋತ್ತಮ, ಸ್ವತಂತ್ರ, ಸಮಗ್ರ ವಿಷಯದಲ್ಲಿಯೂ ಅಧಿಕಬಲಸಂಪನ್ನ ನೀನು ರಮೆಬ್ರಹ್ಮಾದಿ ಸಕಲರಿಂದಲೂ ಎಣಿಸಲಸಾಧ್ಯವಾದ ಗುಣಗಳ ಸಮುದ್ರದಂತಿರುವೆ.

**ರಾಮನ ಅಗಣಿತಗುಣ ಮಹಿಮೆ**

**ಸಮೇತ್ಯ ಸರ್ವೇಽಪಿ ಸದಾ ವದಂತೋಽ-**
**ಪ್ಯನಂತಕಾಲಾಚ್ಚ ನ ವೈ ಸಮಾಪ್ನುಯುಃ ।**
**ಗುಣಾಂಸ್ತ್ವದೀಯಾನ್ ಪರಿಪೂರ್ಣಸೌಖ್ಯ-**
**ಜ್ಞಾನಾತ್ಮಕಸ್ತ್ವಂ ಹಿ ಸದಾಽತಿಶುದ್ಧಃ ॥ ೨೪೫ ॥**

ಪದಚ್ಛೇದ : ಸಮೇತ್ಯ ಸರ್ವೇ ಅಪಿ ಸದಾ ವದಂತಃ ಅಪಿ ಅನಂತಕಾಲಾತ್ ಚ ನ ವೈ ಸಮಾಪ್ನುಯುಃ । ಗುಣಾನ್ ತ್ವದೀಯಾನ್ ಪರಿಪೂರ್ಣಸೌಖ್ಯಜ್ಞಾನಾತ್ಮಕಃ ತ್ವಂ ಹಿ ಸದಾ ಅತಿಶುದ್ಧಃ ॥

**ಅರ್ಥ :-** **ಸರ್ವೇಽಪಿ** ಮುಕ್ತಾಮುಕ್ತರು ಬ್ರಹ್ಮಾದಿಗಳೂ ಹಾಗು ಲಕ್ಷ್ಮೀದೇವಿಯೂ ಕೂಡ **ಸಮೇತ್ಯ** ಕೂಡಿಕೊಂಡು **ತ್ವದೀಯಾನ್** ನಿನ್ನದಾತಂಹ **ಗುಣಾನ್** ಗುಣಗಳನ್ನು **ಅನಂತಕಾಲಾಚ್ಚ** ಅನಂತಕಾಲದಿಂದಲೂ ಕೂಡ **ಸದಾ** ನಿರಂತರ **ವದಂತೋಽಪಿ** ವರ್ಣಿಸುತ್ತಿದ್ದರೂ ಕೂಡ. **ವೈ** ನಿಶ್ಚಯವಾಗಿ **ಹಿ** ಯಾವಕಾರಣದಿಂದ **ನ ಸಮಾಪ್ನುಯುಃ** ಸಮಾಪ್ತಿಯನ್ನು ಹೊಂದಲಾರರೋ (ತಸ್ಮಾತ್ ಆ ಕಾರಣದಿಂದ) **ತ್ವಂ** ನೀನು (ಸದಾ ಯಾವಾಗಲೂ) **ಪರಿಪೂರ್ಣ ಜ್ಞಾನಾತ್ಮಕಃ** ಪರಿಪೂರ್ಣಆನಂದಾದಿ ಜ್ಞಾನಸ್ವರೂಪ **ಅತಿಶುದ್ಧಃ** ಕಳಂಕರಹಿತನು.

**ತಾತ್ಪರ್ಯ :-** 'ಮುಕ್ತಾಮುಕ್ತರು ಲಕ್ಷ್ಮೀದೇವಿ ಹಾಗು ಬ್ರಹ್ಮಾದಿ ಸಕಲರೂ ನಿನ್ನ ಗುಣಗಳನ್ನು ಅನಂತಕಾಲದಿಂದಲೂ ನಿರಂತರವಾಗಿ ವರ್ಣಿಸುತ್ತಿರುವರು. ಆದರೂ ಅವರಿಗೆ ನಿನ್ನ ಗುಣಗಳ ಗಡಿಯನ್ನು ತಲುಪಲಾಗಲಿಲ್ಲ, ಆದ್ದರಿಂದ ನೀನೇ ಪರಿಪೂರ್ಣವಾದ ಜ್ಞಾನಾನಂದಾದಿಗಳುಳ್ಳವನು, ದೋಷರಹಿತನು.'

**ನಿತ್ಯವೂ ಭಕ್ತಿಯು ವೃದ್ಧಿ ಹೊಂದಲಿ**

**ಯಸ್ತೇ ಕಥಾಸೇವಕ ಏವ**
**ಸರ್ವದಾ ಸದಾ ರತಿಸ್ತ್ವಯ್ಯಚಲೈಕಭಕ್ತಿಃ ।**
**ಸ ಜೀವಮಾನೋ ನ ಪರಃ ಕಥಂಚಿತ್**
**ತಜ್ಜೀವನಂ ಮೇಽಸ್ತ್ವಧಿಕಂ ಸಮಸ್ತಾತ್ ॥ ೨೪೬ ॥**

**ಪದಚ್ಛೇದ :** ಯಃ ತೇ ಕಥಾಸೇವಕಃ ಏವ ಸರ್ವದಾ ಸದಾ ರತಿಃ ತ್ವಯಿ ಅಚಲೈಕಭಕ್ತಿಃ । ಸ ಜೀವಮಾನಃ ನ ಪರಃ ಕಥಂಚಿತ್ ತಜ್ಜೀವನಂ ಮೇ ಅಸ್ತು ಅಧಿಕಂ ಸಮಸ್ತಾತ್॥

**ಅರ್ಥ :- ಯಃ** ಯಾರು **ಸರ್ವದಾ** ನಿರಂತರ **ತೇ** ನಿನ್ನ **ಕಥಾಸೇವಕಃ** ಕಥಾಶ್ರವಣಾದಿಗಳನ್ನು ಮಾಡುವವನೋ **ತ್ವಯಿ** ನಿನ್ನಲ್ಲಿ **ಸದಾ** ಯಾವಾಗಲೂ **ರತಿಃ** ಪ್ರೀತಿಯುಳ್ಳವನೊ **ಅಚಲೈಕಭಕ್ತಿಃ** ಅಚಲವಾಗಿ ನಿನ್ನಲ್ಲಿ ಮುಖ್ಯವಾಗಿ ಭಕ್ತಿಯುಳ್ಳವನೋ **ಸಃ ಏವ** ಆ ಪುರುಷನೇ **ಜೀವಮಾನಃ** ಜೀವನದ ಫಲಭಾಗಿಯು **ಪರಃ** ಇಂತಹ ಶ್ರವಣಾದಿಗಳಿಂದ ಬೇರೆಯಾದ ಪುರುಷನು **ಕಥಂಚಿತ್** ಯಾವ ಪ್ರಕಾರದಿಂದಲೂ **ನ** ಫಲವಿಲ್ಲದವನು. **ತಜ್ಜೀವನಂ** ಅಂತಹ ಜೀವನು **ಮೇ** ನನಗೆ **ಸಮಸ್ತಾತ್** ಸಮಸ್ತಜೀವಸಮೂಹದಿಂದ **ಅಧಿಕಂ** ಆಧಿಕ್ಯವುಳ್ಳದ್ದು **ಅಸ್ತು** ಆಗಲಿ.

**ತಾತ್ಪರ್ಯ :-** 'ಯಾರು ನಿರಂತರ ನಿನ್ನ ಗುಣಕಥಾಶ್ರವಣನಿಷ್ಠರೋ ಸದಾ ನಿನ್ನಲ್ಲಿ ಪ್ರಿತಿಯುಳ್ಳವರೋ, ದೃಢವಾದ ನಿನ್ನಲ್ಲಿಯೇ ಪರಮಭಕ್ತಿಯುಳ್ಳವರೋ ಅಂತಹ ವರ ಜೀವನ ಫಲಭರಿತವಾದದ್ದು, ಇದರಿಂದ ಬೇರೆಯಾದವನು ಮೃತಜೀವಿ ಯಂತೆ. ಇಂತಹ ಉತ್ತಮಜೀವನವು ನನಗೆ ಇತರರಿಗಿಂತಾ ಅಧಿಕವಾಗಿ ಸಿಗಲಿ.'

**ಪ್ರವರ್ಧತಾಂ ಭಕ್ತಿರಲಂ ಕ್ಷಣೇಕ್ಷಣೇ**
**ತ್ವಯೀಶ ಮೇ ಹ್ರಾಸವಿವರ್ಜಿತಾ ಸದಾ ।**

ಅನುಗ್ರಹಸ್ತೇ ಮಯಿ ಚೈವಮೇವ
ನಿರೌಪಧೌ ತೌ ಮಮ ಸರ್ವಕಾಮಃ ॥ ೨೪೭ ॥

ಪದಚ್ಛೇದ : ಪ್ರವರ್ಧತಾಂ ಭಕ್ತಿಃ ಅಲಂ ಕ್ಷಣೇಕ್ಷಣೇ ತ್ವಯಿ ಈಶ ಮೇ ಹ್ರಾಸವಿವರ್ಜಿತಾ ಸದಾ । ಅನುಗ್ರಹಃ ತೇ ಮಯಿ ಚ ಏವಮ್ ಏವ ನಿರೌಪಧೌ ತೌ ಮಮ ಸರ್ವಕಾಮಃ ॥

**ಅರ್ಥ :-** **ಹೇ ಈಶ** ಹೇ ಒಡೆಯನೇ **ಹ್ರಾಸವಿವರ್ಜಿತಾಃ** ಕ್ಷಯಕಾರಕ ಕ್ರೋಧಾದಿ ದೋಷಗಳಿಂದ ರಹಿತವಾದ **ತ್ವಯಿ** ನಿನ್ನಲ್ಲಿರುವ **ಭಕ್ತಿಃ** ಭಕ್ತಿಯು **ಸದಾ** ಸದಾಕಾಲವು **ಕ್ಷಣೇಕ್ಷಣೇ** ಪ್ರತಿಕ್ಷಣದಲ್ಲಿಯೂ **ಅಲಂ** ನನ್ನ ಯೋಗ್ಯತಾನುಸಾರ **ಪ್ರವರ್ಧತಾಂ** ವೃದ್ಧಿಯನ್ನು ಹೊಂದಲಿ. **ಏವಮೇವ** ಹೀಗೆಯೇ **ತೇ** ನಿನ್ನ **ಅನುಗ್ರಹಶ್ಚ** ಅನಗ್ರಹವೂ ಕೂಡ **ಮಯಿ** ನನ್ನಲ್ಲಿ (**ಪ್ರವರ್ಧತಾಂ** ಬೆಳೆಯಲಿ) **ನಿರೂಪಧೌ** ನಿರುಪಾಧಿಕಗಳಾದ **ತೌ** ಆ ಭಕ್ತಿ ಮತ್ತು ಅನುಗ್ರಹಗಳು **ಮಮ** ನನಗೆ **ಸರ್ವಕಾಮಃ** ಎಲ್ಲಾ ಪುರುಷಾರ್ಥಗಳು.

**ತಾತ್ಪರ್ಯ :-** 'ಹೇ ಈಶನೇ! ಕ್ಷಯವನ್ನುಂಟುಮಾಡತಕ್ಕ ಕಾಮಾದಿ ದೋಷಗಳಿಂದ ರಹಿತವಾದ ನಿನ್ನಲ್ಲಿರುವ ನನ್ನ ಭಕ್ತಿಯು ಪ್ರತಿಕ್ಷಣವೂ ನನ್ನ ಯೋಗ್ಯತಾ ನುಸಾರಿಯಾಗಿ ಅಭಿವೃದ್ಧಿಯನ್ನು ಹೊಂದುತ್ತಿರಲಿ. ಹಾಗೆಯೇ ನಿನ್ನ ಅನುಗ್ರಹವೂ ಕೂಡ ವೃದ್ಧಿಯನ್ನು ಹೊಂದಲಿ. ಈ ಭಕ್ತಿ ಮತ್ತು ಅನಗ್ರಹಗಳೇ ನನಗೆ ಸಮಸ್ತಪುರುಷಾರ್ಥಗಳು.'

ಇತೀರಿತಸ್ತಸ್ಯ ದದೌ ಸ ತದ್ದ್ವಯಂ
ಪದಂ ವಿಧಾತುಃ ಸಕಲೈಶ್ಚ ಶೋಭನಮ್ ।
ಸಮಾಶ್ಲಿಷಚ್ಚೈನಮಥಾऽದ್ರ್ಯಯಾ ಧಿಯಾ
ಯಥೋಚಿತಂ ಸರ್ವಜನಾನಪೂಜಯತ್ ॥ ೨೪೮ ॥

ಪದಚ್ಛೇದ : ಇತಿ ಈರಿತಃ ತಸ್ಯ ದದೌ ಸ ತತ್ ದ್ವಯಂ ಪದಂ ವಿಧಾತುಃ ಸಕಲೈಃ ಚ ಶೋಭನಮ್ । ಸಮಾಶ್ಲಿಷತ್ ಚ ಏನಮ್ ಅಥ ಆರ್ದ್ರಯಾ ಧಿಯಾ ಯಥೋಚಿತಂ ಸರ್ವಜನಾನ್ ಅಪೂಜಯತ್ ॥

॥ ಇತಿ ಶ್ರೀಮದಾನಂದತೀರ್ಥಭಗವತ್ಪಾದವಿರಚಿತೇ
ಶ್ರೀಮಹಾಭಾರತತಾತ್ಪರ್ಯ ನಿರ್ಣಯೇ ಶ್ರೀರಾಮಚರಿತೇ
ಹನೂಮತಿ ಶ್ರೀರಾಮದಯಾದಾನಂ ನಾಮ ಅಷ್ಟಮೋऽಧ್ಯಾಯಃ ॥

**ಅರ್ಥ** :- **ಇತಿ** ಈ ಪ್ರಕಾರವಾಗಿ **ಈರಿತಃ** ಹೇಳಿಸಿಕೊಳ್ಳಲ್ಪಟ್ಟ **ಸಃ** ಆ ಶ್ರೀರಾಮನು **ತಸ್ಯ** ಆ ಹನುಮಂತನಿಗೆ **ತದ್ವಯಂ** ಆ ಎರಡು ವರವನ್ನು **ದದೌ** ಕೊಟ್ಟನು. **ಚ** ಮತ್ತು **ವಿಧಾತುಃ** ಬ್ರಹ್ಮದೇವನ **ಪದಂ** ಸ್ಥಾನವನ್ನು **ಸಕಲೈಃ** ಎಲ್ಲರಿಂದ ಆಚರಿಸಲ್ಪಡುವ **ಶೋಭನಂ ಚ** ಪುಣ್ಯಫಲವನ್ನೂ ಕೂಡ (**ದದೌ** ಕೊಟ್ಟನು) **ಅಥ** ಅನಂತರ **ಆರ್ದ್ರಯಾ** ಸ್ನೇಹದಿಂದ ಆರ್ದ್ರವಾದ **ಧಿಯಾ** ಅಂತಃಕರಣದಿಂದ **ಏನಂ** ಈ ಹನುಮನನ್ನು **ಸಮಾಶ್ಲಿಷತ್** ಚೆನ್ನಾಗಿ ಆಲಿಂಗಿಸಿದನು. **ಸರ್ವಜನಾನ್** ಸಕಲವಾನರರನ್ನು **ಯಥೋಚಿತಂ** ಅವರ ಯೋಗ್ಯತಾನುಸಾರವಾಗಿ **ಅಪೂಜಯತ್** ಸಂತೋಷ ಪಡಿಸಿದನು.

**ತಾತ್ಪರ್ಯ** :- ಹನುಮಂತನ ಪ್ರಾರ್ಥನೆಯಂತೆ ರಾಮನು ನಿರಂತರ ಅಭಿವೃದ್ಧಿಹೊಂದುವ ಭಕ್ತಿ ಹಾಗು ತನ್ನ ಅನುಗ್ರಹಗಳೆರಡನ್ನೂ ಕರುಣಿಸಿದ. ಜೊತೆಗೆ ಬ್ರಹ್ಮಪದವಿ ಹಾಗು ಸಕಲಜನರ ಪುಣ್ಯಫಲವನ್ನೂ ನೀಡಿದ. ತುಂಬ ಸ್ನೇಹದಿಂದ ಆರ್ದ್ರವಾದ ಅಂತಃಕರಣದಿಂದ ರಾಮನು ಹನುಮಂತನನ್ನು ಬಹುವಾಗಿ ಆಲಿಂಗಿಸಿದನು. ಹಾಗೆಯೇ ಸಕಲವಾರರಿಗೂ ಯಥೋಚಿತವಾಗಿ ವಸ್ತ್ರಾಭರಣಾದಿಗಳನ್ನು ಕೊಟ್ಟು ಅವರನ್ನೂ ಸಂತೋಷಪಡಿಸಿದನು.

**ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯ ವಿರಚಿತವಾದ**
**ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯದಲ್ಲಿ ಸರ್ವಶಾಸ್ತ್ರತಾತ್ಪರ್ಯ**
**ನಿರ್ಣಯವೆಂಬ ಅಷ್ಟಮಾಧ್ಯಾಯವು ಸಮಾಪ್ತವಾಯಿತು.**

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತಃ

# ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯಃ

(ಮೊದಲನೆಯ ಅಧ್ಯಾಯದಿಂದ ಎಂಟನೆಯ ಅಧ್ಯಾಯದ ವರೆಗೆ)



ಪ್ರಕಾಶಕರು

**ಶ್ರೀಗುರುರಾಜ ಅಸೋಸಿಯೇಷನ್ (ರಿ.)**

# 53, ಮಾಡಲ್ ಹೌಸ್ ಬೀದಿ, ಬಸವನಗುಡಿ,
ಬೆಂಗಳೂರು 560 004. ದೂರವಾಣಿ: 26625658/59
Website: www.sriguruirajaassociation.org

Design: JAHNAVI
suprajavinyasa@gmail.com